# ಇತಿಹಾಸ ದರ್ಶನ

ಸಂಪುಟ ೧೬/೨೦೦೧




ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

# ಇತಿಹಾಸ ದರ್ಶನ

## ಸಂಪುಟ ೧೬/೨೦೦೧

*೨೦೦೦ರಲ್ಲಿ ಹಂಪಿಯಲ್ಲಿ ಸಮಾವೇಶಗೊಂಡಿದ್ದ*
*ಕರ್ನಾಟಕ ಇತಿಹಾಸ ಅಕಾದೆಮಿಯ ಹದಿನಾಲ್ಕನೆಯ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು*
*ಮಂಡಿಸಿದ ಪ್ರಬಂಧಗಳ ಸಂಕಲನ*




ಸಂಪಾದಕರು

**ಎಂ. ಜಿ. ನಾಗರಾಜ್**

**ಡಾ|| ಪಿ. ವಿ. ಕೃಷ್ಣಮೂರ್ತಿ**





**ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು**

**ITIHĀSA DARŚANA**

Proceedings of the Fourteenth Annual Conference of
**The Karnataka Itihasa Academy** (Regd.,)
held at Kannada University, Hampi on 8th, 9th & 10th July 2000

Volume 16, October 2001

Edited by : *M. G. Nagaraj*
*Dr. P.V. Krishnamurthy*

Published by : *Karanataka Itihasa Academy (Regd.,)*
Gokhale Institute of Public Affairs Premises
Basavanagudi Road, Narasimharaja Colony
Bangalore - 560 019



ಬೆಲೆ : ರೂ. ೨೦೦.೦೦

**ಪ್ರಬಂಧಕಾರರ ಗಮನಕ್ಕೆ**

ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ. ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ. ***ಕರ್ನಾಟಕ ಇತಿಹಾಸದ*** ಮೇಲೆ ಹೊಸಬೆಳಕು ಚೆಲ್ಲುವ ಬರಹಗಳಿಗೆ ***ಇತಿಹಾಸ ದರ್ಶನ*** ಮೀಸಲಾಗಿದೆ. ಲೇಖನಗಳು ಹಸ್ತಲಿಖಿತ ೧೦ ಪುಟಗಳ ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ **ಸ್ಫುಟವಾದ ಅಕ್ಷರಗಳಲ್ಲಿ** ಬರೆದಿರಬೇಕು. **ಬೆರಳಚ್ಚು** ಮಾಡಿಸಿದ್ದರೆ **ಅಗತ್ಯವಿರುವಡೆ ತಿದ್ದುಪಡಿ** ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥಲೇಖನಾಧಾರ ವಿವರಗಳನ್ನು ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ. ಈಗಿನ ೧೪ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಅಲ್ಲಿಯೇ ಕೊಡಲಾಗದಿರುವ ಅಕಾದೆಮಿಯ ಸದಸ್ಯ ಲೇಖಕರು, ದಯಮಾಡಿ ತಮ್ಮ ಪೂರ್ಣ ವಿಳಾಸದೊಡನೆ ಸಮ್ಮೇಳನ ಮುಗಿದ ಎರಡು ತಿಂಗಳ ಒಳಗಾಗಿ, ***ಸಂಪಾದಕರು, ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾದೆಮಿ, ಗೋಖಲೆ ಸಾರ್ವಜನಿಕ ಸಂಸ್ಥೆ ಆವರಣ, ಬಸವನಗುಡಿ ರಸ್ತೆ, ನರಸಿಂಹರಾಜಾ ಕಾಲೋನಿ, ಬೆಂಗಳೂರು - ೫೬೦ ೦೦೧೯,*** ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ. ಹಾಗೆಯೇ **ಲೇಖನಗಳಲ್ಲಿ** ಲೇಖಕರು ತಮ್ಮ **ಈಚಿನ ಸರಿಯಾದ ವಿಳಾಸವನ್ನು ದಾಖಲಿಸಲು** ದಯವಿಟ್ಟು ಮರೆಯಬಾರದೆಂದು ಪ್ರಾರ್ಥಿಸಿದೆ. ಸಮ್ಮೇಳನದಲ್ಲಿ ಮಂಡಿಸಿದ ಲೇಖನಗಳನ್ನು ಬೇರೆಡೆ ಪ್ರಕಟ ಮಾಡಿದ್ದರೆ ಅಥವಾ ಬೇರೆಡೆ ಪ್ರಕಟನೆಗೆ ಕಳುಹಿಸಿದ್ದರೆ ದಯವಿಟ್ಟು ತಿಳಿಸಬೇಕೆಂದು ವಿನಂತಿ.

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ : ೬೬೧೩೧೨೩, ೬೬೧೮೭೫೨

# ಅಕಾದೆಮಿಯ ಅಧ್ಯಕ್ಷರ ಮಾತು

ಕರ್ನಾಟಕ ಇತಿಹಾಸ ಅಕಾದೆಮಿಗೆ ಈಗ ೧೫ ವರ್ಷ ದಾಟಿತು. ಈಗ ೧೫ನೆಯ ಸಮ್ಮೇಳನ ಕರ್ನಾಟಕದ ನೈಋತ್ಯದ ಉಡುಪಿಯಲ್ಲಿ ಶ್ರೀಕೃಷ್ಣ ಮಠದ ಆಶ್ರಮದಲ್ಲಿ ಶ್ರೀ ಪೇಜಾವರ ಶ್ರೀಪಾದಂಗಳ ಆಶೀರ್ವಾದದಂತೆ ನಡೆಯುತ್ತಿದೆ.

ಅಕಾದೆಮಿಯನ್ನು ಆರಂಭಿಸಿದಾಗ ಮುಖ್ಯ ಮೂರು ಗುರಿಗಳನ್ನು ಹೊಂದಲಾಗಿತ್ತು :

೧) ಕರ್ನಾಟಕದ ಇತಿಹಾಸವನ್ನು ಜನಪ್ರಿಯಗೊಳಿಸಿ ಸಾಮಾನ್ಯ ಜನರಿಗೆ ಮುಟ್ಟಿಸುವುದು. ಇದಕ್ಕಾಗಿ ತನ್ನ ಎಲ್ಲ ಕಾರ್ಯಕ್ರಮಗಳನ್ನು ಅಕಾದೆಮಿ ಕನ್ನಡದಲ್ಲೇ ನಡೆಸುವುದು. ಇತಿಹಾಸದ ಬಗ್ಗೆ ಹೊಸ ವಿಷಯವನ್ನು ಸಂಶೋಧಿಸಿ ಹೇಳಬಲ್ಲ ಯಾವುದೇ ಸದಸ್ಯ ವ್ಯಕ್ತಿಗೂ ಸಮ್ಮೇಳನದಲ್ಲಿ ಪಾಲುಗೊಂಡು ಸಂಶೋಧನಾ ಪ್ರಬಂಧ ಮಂಡಿಸಲು ಅವಕಾಶ ನೀಡುವುದು. ಇದಕ್ಕಾಗಿ ಸದಸ್ಯರನ್ನು ಆಯ್ಕೆ ಮಾಡುವಾಗ ಕಾಲೇಜು, ವಿಶ್ವವಿದ್ಯಾಲಯದ ಅಧ್ಯಾಪಕರು ಅಥವಾ ಇಂಥ ವರ್ಗದವರೇ ಅಲ್ಲದೆ ಇತಿಹಾಸದಲ್ಲಿ ಆಸ್ಥೆ ಉಳ್ಳ ಯಾರಾದರೂ ಅಕಾದೆಮಿಗೆ ಸದಸ್ಯರಾಗಬಹುದು. ಹೀಗಾಗಿ ಇಂಜಿನಿಯರ್, ವಿಜ್ಞಾನಿ, ಕಾರ್ಮಿಕ, ರೈತರೂ ನಮ್ಮ ಸಂಶೋಧಕರ ತಂಡದಲ್ಲಿ ಇದ್ದಾರೆ. ಪಿ.ಯು.ಸಿ. ಕರ್ನಾಟಕ ಇತಿಹಾಸ ವಿದ್ಯಾರ್ಥಿಗಳಿಗಾಗಿ ಸ್ಪರ್ಧಾತ್ಮಕ ಪರೀಕ್ಷೆ ನಡೆಸುತ್ತಿರುವುದೂ ಈ ಸಂದರ್ಭದಲ್ಲಿ ಉಲ್ಲೇಖನೀಯ.

೨) ಕರ್ನಾಟಕದಲ್ಲಿ ಇತಿಹಾಸ ಸಂಶೋಧನೆಯನ್ನು ಪ್ರೋತ್ಸಾಹಿಸುವುದು. ಇದಕ್ಕಾಗಿ ಸಮ್ಮೇಳನ, ಕಾರ್ಯಾಗಾರ, ವಿಚಾರ ಸಂಕಿರಣ, ಪ್ರವಾಸ ಏರ್ಪಡಿಸುವುದು. ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಹೊಸ ವಿಷಯಗಳನ್ನು ಒಳಗೊಂಡ ಪ್ರಬಂಧಗಳನ್ನು ಮುಂದಿನ ಸಮ್ಮೇಳನ ಕಾಲಕ್ಕೆ *'ಇತಿಹಾಸ ದರ್ಶನ*ದಲ್ಲಿ ತಪ್ಪದೇ ಪ್ರಕಟಿಸುವುದು. ಈವರೆಗೆ ಬಂದ ೧೬ ಸಂಪುಟಗಳಲ್ಲಿ ಸುಮಾರು ೧೩೦೦ ಲೇಖನಗಳು ಪ್ರಕಟವಾಗಿ ಅದರಲ್ಲಿ ೧೫೦ ಅಪ್ರಕಟಿತ ಶಾಸನಗಳೂ ಕೂಡಿವೆ. ಇದೇನು ಸಣ್ಣ ಸಾಧನೆಯಲ್ಲ.

೩) ನಮ್ಮ ನಾಡಿನ ಕೋಟೆ, ಕೊತ್ತಲ, ದೇವಾಲಯ, ಮಸೀದಿ, ಚರ್ಚ್, ಶಾಸನ, ತಾಮ್ರಪಟ, ವೀರಗಲ್ಲು, ಪುರಾತನ ಮೂರ್ತಿ ಇಲ್ಲವೆ ಇತರ ವಸ್ತುಗಳು, ನಾಣ್ಯ, ಕಾಗದ ಪತ್ರ, ಓಲೆಗರಿ ಮುಂತಾದ ಸಂಗತಿಗಳ ರಕ್ಷಣೆಗಾಗಿ *'ಐತಿಹಾಸಿಕ ಪರಂಪರೆ ಉಳಿಸಿ'* ಚಳವಳಿ ನಡೆಸುವುದು. ಈ ಬಗ್ಗೆ ವಿವರಣೆ ಬೇಕಿಲ್ಲವೆನಿಸುತ್ತದೆ. ಸುಮಾರು ೧೫೦ಕ್ಕೂ ಇತಿಹಾಸ ಸಂಶೋಧಕರು (ಇದರಲ್ಲಿ ೩೦ ಜನ ಶಾಸನ ತಜ್ಞರು) ಸೇರಿ ೧೦೦೦ಕ್ಕೂ ಮೀರಿದ ಕಾರ್ಯಕರ್ತರು ನಾಡಿನ ಇತಿಹಾಸದ ಬಗ್ಗೆ ನಿಸ್ವಾರ್ಥಭಾವದಿಂದ ಸತತ ಚಿಂತಿಸುವ ವಾತಾವರಣ ಅಕಾದೆಮಿಯಿಂದ ಸೃಷ್ಟಿಯಾಗಿದೆ. ಇದು ಭಾರೀ ಸಾಧನೆ ಏನಲ್ಲ. ನಾಡು, ನುಡಿಗೆ ದುಡಿಯುವ ನಿಸ್ವಾರ್ಥ ಸೇವಕರ ತಂಡ ಇನ್ನೂ ಬೆಳೆಯಲೆಂದು ಅಕಾದೆಮಿಯ ಹಾರೈಕೆ. ಆದರೆ ಇಂಥ ಸಂಸ್ಥೆ ದೇಶದ ಇನ್ನಾವ ರಾಜ್ಯದಲ್ಲೂ ಇಲ್ಲವೆಂಬುದು ನಮ್ಮ ಹೆಮ್ಮೆ.

ನಮ್ಮ ಕಾರ್ಯಕರ್ತರಲ್ಲಿ ಒಮ್ಮತ, ಸ್ವಯಂಸ್ಫೂರ್ತಿಯ ದುಡಿಮೆ ಈ ಅಕಾದೆಮಿಯ ಬಲ. ಇದರಿಂದಲೇ ಬೇಕಾದ ಕನಿಷ್ಠ ಸವಲತ್ತುಗಳೂ ಅವಶ್ಯ ಆರ್ಥಿಕ ಬಲವೂ ದೊರೆತಿದೆ. ಇದಕ್ಕೆ ನಮ್ಮ ಕಾರ್ಯಕರ್ತರ ಉತ್ಸಾಹವೇ ಮುಖ್ಯ ಬಲ.

**ಸೂರ್ಯನಾಥ ಕಾಮತ್**
ಅಧ್ಯಕ್ಷ

# ಸಂಪಾದಕೀಯ

ಉಡುಪಿ ತನ್ನ ಹೆಸರಿನ ಮಡಿಲಲ್ಲಿ ಚಂದ್ರಶೇಖರ ಕ್ಷೇತ್ರವೆನಿಸಿದೆ. ಹಾಗೆಯೇ ಅದು ಕನಕ, ಕಿಂಡಿಯಲ್ಲಿಯೇ ಸಾಕ್ಷಾತ್ಕರಿಸಿಕೊಂಡ ಶ್ರೀಕೃಷ್ಣ ಕ್ಷೇತ್ರ; ಶ್ರೀಮನ್ಮಧ್ವಾಚಾರ್ಯರ ಕ್ಷೇತ್ರ. ಅಷ್ಟಮಠಗಳ ಶ್ರೀ ಕೃಷ್ಣ ಆರಾಧನಾ ಸಾನ್ನಿಧ್ಯವಿರುವಂತೆಯೇ ಜಾನಪದ ಸೊಗಡು ತುಂಬಿ ತುಳುಕುವ ಜಾಯಮಾನ ಇಲ್ಲಿದೆ. ಕಡಲ ತಡಿಯ ಪರಿಸರವನ್ನು ತುಂಬಿಕೊಂಡ ಪ್ರದೇಶ ಕರಾವಳಿ ಜಿಲ್ಲೆಯ ಸಾಂಸ್ಕೃತಿಕ ಹಾಗು ವಿದ್ವತ್ ಕೇಂದ್ರವೂ ಆಗಿರುವ ಉಡುಪಿಯಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ೧೫ನೇ ವಾರ್ಷಿಕ ಸಮ್ಮೇಳನವು, ಶ್ರೀಕೃಷ್ಣ ಮಠದ ಕೃಪಾಶ್ರಯದಲ್ಲಿ ೨೦೦೧ನೇ ಅಕ್ಟೋಬರ್ ೧೩ ರಿಂದ ೧೫ರ ವರೆಗೆ ನಡೆಯುತ್ತಿದೆ. ಪವಿತ್ರ ಶ್ರೀಕೃಷ್ಣ ಮಠದ ಆವರಣ. ಅಲ್ಲಿ ನಾಡಿನ ವಿದ್ವತ್ ವಲಯದ ವೈದುಷ್ಯ ಮಂಡನೆಯಾಗುತ್ತಿದೆ; ಹಾಗೆಯೇ ಇತಿಹಾಸದ ಅಂಕಣದಲ್ಲಿ ಆಸಕ್ತಿಯುಳ್ಳ ಹಿರಿಯರು, ಕಿರಿಯರಾದಿಯಾಗಿ ತಮ್ಮ ಶೋಧಗಳನ್ನು ಮಂಡಿಸುತ್ತಿದ್ದಾರೆ. ಇದು ಕರ್ನಾಟಕ ಇತಿಹಾಸ ಅಕಾದೆಮಿ ಕಳೆದ ೧೫ ವರ್ಷಗಳಿಂದಲೂ ನಡೆದು ಬಂದು ಪ್ರೇರಿಸಿರುವ ಹಾದಿ. ಅಕಾದೆಮಿಯ ವಾರ್ಷಿಕ ಸಮ್ಮೇಳನದಲ್ಲಿ ಪ್ರಬಂಧ ಮಂಡಿಸುವ ಹಾಗು 'ಇತಿಹಾಸ ದರ್ಶನ'ದಲ್ಲಿ ತಮ್ಮ ಪ್ರಬಂಧ ಪ್ರಕಟವಾಗಲಿ ಎಂಬ ಆಶಯ ವರ್ಷೇ ವರ್ಷೇ ಬೆಳೆಯುತ್ತಿರುವ ಕುರುಹಾಗಿ ಈ ಬಾರಿಯ ಸಂಪುಟದಲ್ಲಿ ತೊಂಬತ್ತು ಪ್ರಬಂಧಗಳು ಪ್ರಕಟವಾಗುತ್ತಿರುವುದೇ ಸಾಕ್ಷಿ. ಇದಕ್ಕೆ ನಮ್ಮ ಅಕಾದೆಮಿಯ ಸದಸ್ಯರೇ ಮುಖ್ಯ ಕಾರಣಕರ್ತರಾಗಿದ್ದಾರೆ.

ಈ ಬಾರಿಯ ಸಮ್ಮೇಳನಾಧ್ಯಕ್ಷಿಣಿಯಾಗಿ ಪ್ರಸಿದ್ಧ ಇತಿಹಾಸ ತಜ್ಞೆ, ಸಂಶೋಧನ ವಿಶಾರದೆ, ಸಾಹಿತ್ಯ ಶೀಲೆ ಡಾ॥ ಶ್ರೀಮತಿ ಜ್ಯೋತ್ಸ್ನಾ ಕಾಮತ್ ಅವರು ಆಯ್ಕೆಗೊಂಡಿರುವುದು ಸ್ತ್ರೀ ಸಬಲತಾ ವರ್ಷ ಪರಂಪರೆಗೆ ಅಕಾದೆಮಿಯ ಕಾರ್ಯಕಾರಿ ಸಮಿತಿ ಹಾಗು ಸರ್ವ ಸದಸ್ಯರು ಸಲ್ಲಿಸಿರುವ ಆತ್ಮೀಯ ವಿದ್ವತ್ ಗೌರವದ ಸಂಕೇತವೆನಿಸುತ್ತದೆ.

ಈ ಸಂದರ್ಭದಲ್ಲಿ ಅಂತರ್‌ರಾಷ್ಟ್ರೀಯ ಶಾಸನ ತಜ್ಞರೂ, ಭಾರತ ಸರ್ಕಾರದ ಶಾಸನ ಇಲಾಖೆಯ ಮಾಜಿ ಸಹನಿರ್ದೇಶಕರೂ, ಇಂದಿಗೂ ಶಾಸನ ಕ್ಷೇತ್ರದಲ್ಲಿ ಅವಿರತವಾಗಿ ತೊಡಗಿಕೊಂಡಿರುವ ಅಪೂರ್ವ ವಿದ್ವಾಂಸ ಡಾ॥ ಕೆ. ವಿ. ರಮೇಶ ಅವರಿಗೆ, ನಾಡು ಕಂಡ ಹಿರಿಮೆಯ ಶಾಸನ ತಜ್ಞ ದಿವಂಗತ ಡಾ॥ ಬಾ. ರಾ. ಗೋಪಾಲ್ ಅವರ ಹೆಸರಿನಲ್ಲಿ ನಿಗದಿಗೊಂಡಿರುವ ಪ್ರಶಸ್ತಿಯು ದತ್ತವಾಗಿರುವುದಕ್ಕೆ ಅಭಿನಂದನೆಗಳು.

ಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀ ಪಾದಂಗಳವರ ಸಾನ್ನಿಧ್ಯದಲ್ಲಿ ಈ ೧೫ನೇ ವಾರ್ಷಿಕ ಸಮ್ಮೇಳನವನ್ನು ಕರ್ನಾಟಕ ಸರ್ಕಾರದ ಮಾನ್ಯ ಸಮಾಜ ಕಲ್ಯಾಣ ಹಾಗು ತೋಟಗಾರಿಕಾ ಸಚಿವರಾದ ಶ್ರೀ ಕಾಗೋಡು ತಿಮ್ಮಪ್ಪ ಅವರು ಉದ್ಘಾಟನೆ ಮಾಡುವ ಸಂದರ್ಭದಲ್ಲಿ, ಖ್ಯಾತ ಶಿಕ್ಷಣತಜ್ಞ ಶ್ರೀ ಕೆ. ಕೆ. ಪೈ ಅವರು ***ಇತಿಹಾಸದರ್ಶನದ ೧೬ನೇ ಸಂಪುಟ***ವನ್ನು (ಸಂ. ೧೬/೨೦೦೧) ಬಿಡುಗಡೆ ಮಾಡುತ್ತಿರುವುದಕ್ಕೆ **ಇತಿಹಾಸದರ್ಶನ**ದ ಆದರಾಭಿಮಾನವಿದೆ; ಹಾಗು ಈ ಸಮ್ಮೇಳನದಲ್ಲಿ ಪಾಲ್ಗೊಂಡಿರುವ ವಿದ್ವಾಂಸರು, ಪ್ರತಿನಿಧಿಗಳಾದಿಯಾಗಿ ಸರ್ವ ಸದಸ್ಯರಿಗೂ ಸ್ವಾಗತ ಕೋರುತ್ತದೆ. ನಮ್ಮ ಈ ಕಾರ್ಯದಲ್ಲಿ ನೆರವಾಗುತ್ತಿರುವ ಅಕಾದೆಮಿಯ ಸರ್ವ ಸದಸ್ಯರಿಗೆ, ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮಿ ಮುದ್ರಣಾಲಯದ ಮಾಲೀಕ ಶ್ರೀ ಅಶೋಕ್ ಕುಮಾರ್ ಹಾಗು ಸಿಬ್ಬಂದಿ ವರ್ಗದ ಶ್ರೀಮತಿ ಜಿ. ಸತ್ಯಕುಮಾರಿ ಹಾಗು ಇತರರಿಗೆ ನಾವು ಕೃತಜ್ಞರು.

ಬೆಂಗಳೂರು
೧೦.೧೦.೨೦೦೧
ವೃಷ ಸಂವತ್ಸರ ಅಧಿಕ ಆಶ್ವೀಜ
ಶುದ್ಧ ಅಷ್ಟಮಿ, ಪುನರ್ವಸು, ಬುಧವಾರ

★ ಎಂ.ಜಿ. ನಾಗರಾಜ್
★ ಡಾ॥ ಪಿ.ವಿ. ಕೃಷ್ಣಮೂರ್ತಿ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.,)

ಬೆಂಗಳೂರು

## ಕಾರ್ಯಕಾರಿ ಸಮಿತಿ

(ದಿನಾಂಕ ೯.೭.೨೦೦೦ದಲ್ಲಿ ಆಯ್ಕೆಗೊಂಡಂತೆ)

❋ ಆಜೀವ ಗೌರವ ಅಧ್ಯಕ್ಷರು

ಪ್ರೊ॥ ಜಿ. ಎಸ್. ದೀಕ್ಷಿತ್, ಧಾರವಾಡ

❋ ಅಧ್ಯಕ್ಷರು

ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು

❋ ಉಪಾಧ್ಯಕ್ಷರು

ಶ್ರೀ ಎಂ. ಜಿ. ನಾಗರಾಜ್, ಬೆಂಗಳೂರು
ಡಾ॥ ಸಿ. ಎಸ್. ಪಾಟೀಲ್, ಬೆಂಗಳೂರು

❋ ಪ್ರಧಾನ ಕಾರ್ಯದರ್ಶಿ

ಡಾ॥ ಎಚ್. ಎಸ್. ಗೋಪಾಲರಾವ್, ಬೆಂಗಳೂರು

❋ ಕಾರ್ಯದರ್ಶಿ

ಡಾ॥ ಕೆ. ವಸಂತಲಕ್ಷ್ಮಿ, ಬೆಂಗಳೂರು
ಡಾ॥ ಚೆನ್ನಕ್ಕ ಪಾವಟೆ, ಧಾರವಾಡ

❋ ಕೋಶಾಧ್ಯಕ್ಷರು

ಶ್ರೀ ಎಂ. ಬಿ. ಪಾಟೀಲ್, ಬೆಂಗಳೂರು

❋ ಸದಸ್ಯರು

ಡಾ॥ ಎಂ. ಎಸ್. ಕೃಷ್ಣಮೂರ್ತಿ, ಮೈಸೂರು
ಡಾ॥ ಕೆ. ಜಿ. ವಸಂತಮಾಧವ, ಪಾವಂಜೆ, ದಕ್ಷಿಣ ಕನ್ನಡ ಜಿಲ್ಲೆ
ಪ್ರೊ॥ ಬಿ. ರಾಜಶೇಖರಪ್ಪ, ಚಿತ್ರದುರ್ಗ
ಪ್ರೊ॥ ವಸಂತ ಕುಷ್ಟಗಿ, ಗುಲಬರ್ಗಾ
ಡಾ॥ ದೇವರಕೊಂಡಾರೆಡ್ಡಿ, ಹಂಪಿ
ಶ್ರೀ ಕುಂ. ಬಾ. ಸದಾಶಿವಪ್ಪ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ
ಡಾ॥ ಚೆನ್ನಬಸವ ಹಿರೇಮಠ, ರಾಯಚೂರು
ಡಾ॥ ಸ್ಮಿತಾ ಸುರೇಬಾನಕರ, ಬೆಳಗಾವಿ
ಶ್ರೀ ಗುರುಮೂರ್ತಿ ಪೆಂಡಕೂರು, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ
ಶ್ರೀ ಸಿದ್ಧಯ್ಯ ಹಿರೇಮಠ, ಶಿವಮೊಗ್ಗ
ಡಾ॥ ಎ. ಕೆ. ಶಾಸ್ತ್ರಿ, ಶಿರಸಿ, ಉತ್ತರ ಕನ್ನಡ ಜಿಲ್ಲೆ
ಡಾ॥ ಶೀಲಾಕಾಂತ ಪತ್ತಾರ, ಬಾದಾಮಿ, ಬಾಗಲಕೋಟೆ ಜಿಲ್ಲೆ
ಡಾ॥ ಎಚ್. ಆರ್. ರಘುನಾಥ ಭಟ್, ಧಾರವಾಡ
ಪ್ರೊ॥ ಲಕ್ಷ್ಮಣ್ ತೆಲಗಾವಿ, ಹಂಪಿ
ಶ್ರೀ ತ. ರಂ. ಕೃಷ್ಣಗೌಡ, ಬೆಂಗಳೂರು
ಡಾ॥ ಎಚ್. ಚಂದ್ರಶೇಖರ್, ಬೆಂಗಳೂರು

## ಹಂಪಿ ಕನ್ನಡ ವಿಶ್ವವಿದ್ಯಾಲಯ ಆಶ್ರಯದಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ಹದಿನಾಲ್ಕನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು



ಶ್ರೀ ಸಿ. ಟಿ. ಎಂ. ಕೊಟ್ರಯ್ಯ



ಕೈ॥ ಕೆ. ಅಭಿಶಂಕರ್ ಅವರ ಸ್ಮರಣಾರ್ಥ ಸಮ್ಮೇಳನಾಧ್ಯಕ್ಷರಿಗೆ ನೀಡುವ ನೆನಪಿನ ಶಿಲ್ಪ ಕಾಣಿಕೆ
ಪ್ರತಿವರ್ಷ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನಾಧ್ಯಕ್ಷರಿಗೆ ಈ ಕಾಣಿಕೆ ನೀಡಲು
ಶ್ರೀಮತಿ ವಿಶಾಲಾಕ್ಷಿ ಅಭಿಶಂಕರ್ ಅವರು ಪುದುವಟ್ಟು ಇಟ್ಟಿದ್ದಾರೆ.
(ಶಿಲ್ಪಕಲಾವಿದೆ : ಶ್ರೀಮತಿ ಕನಕಮೂರ್ತಿ)



ಮಾನ್ಯ ಕೇಂದ್ರ ಸಚಿವ
ಶ್ರೀ ಅನಂತಕುಮಾರ್ ಅವರಿಂದ
ಹದಿನಾಲ್ಕನೆಯ ವಾರ್ಷಿಕ
ಸಮ್ಮೇಳನದ ಉದ್ಘಾಟನೆ



ಅಕಾದೆಮಿ ಅಧ್ಯಕ್ಷ
ಡಾ|| ಸೂರ್ಯನಾಥ ಕಾಮತ್ ಅವರಿಂದ
ಸಮ್ಮೇಳನಾಧ್ಯಕ್ಷ
ಶ್ರೀ ಸಿ.ಟಿ.ಎಂ. ಕೊಟ್ರಯ್ಯ ಅವರಿಗೆ ಸನ್ಮಾನ



ಸಮಾರೋಪ
ಹಂಪಿ, ಕನ್ನಡ ವಿಶ್ವವಿದ್ಯಾಲಯದ ಕುಲಪತಿ
ಡಾ|| ಎಂ. ಎಂ. ಕಲಬುರ್ಗಿ ಅವರಿಂದ
ರಾಜ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ
ಶ್ರೀಮತಿ ರಾಣಿ ಸತೀಶ್ ಅವರಿಗೆ ಗೌರವಾರ್ಪಣೆ

(ಚಿತ್ರಗಳು - ಕೃಪೆ : ಗಣೇಶ್‌ಯಾಜಿ)



ಡಾಕ್ಟೊರೆಟ್ ಪದವಿ ಪಡೆದ ಅಕಾದೆಮಿಯ ಸದಸ್ಯರಿಗೆ ಸನ್ಮಾನ



ಹಂಪಿ ಸಮ್ಮೇಳನದಲ್ಲಿ ಪಾಲ್ಗೊಂಡ ವಿದ್ವಾಂಸರು ಮತ್ತು ಸದಸ್ಯ ಬಳಗ



ಮಾನ್ಯ ಶ್ರೀಮತಿ ರಾಣಿ ಸತೀಶ್ ಅವರಿಂದ
'ಇತಿಹಾಸ ಪರಂಪರೆ ಉಳಿಸಿ' ಕಾರ್ಯಕ್ರಮ
ಉದ್ಘಾಟನೆ ಆಗಸ್ಟ್ 2000, ಬೆಂಗಳೂರು

ಶತಾಯುಷಿ
ಶ್ರೀ ನಿಟ್ಟೂರು ಶ್ರೀನಿವಾಸರಾಯರು
ಚಿತ್ರದಲ್ಲಿದ್ದಾರೆ



ಶಿವಮೊಗ್ಗ ತಾ।। ಅಬ್ಬಲಗೆರೆ
'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮ
(ದಿನಾಂಕ 26.9.2000)

# ಪರಿವಿಡಿ

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೧. | ೧೫-೧೭ ಮೇ ೧೯೮೭ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ॥ ಎಂ. ಚಿದಾನಂದಮೂರ್ತಿ |
| ೨. | ೨೩ - ೨೪ ಅಕ್ಟೋಬರ್ ೧೯೮೮ | ತುಮಕೂರು | ಸಿದ್ಧಗಂಗಾಕ್ಷೇತ್ರ : ಡಾ। ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು | ಡಾ॥ ಜಿ. ಎಸ್. ಗಾಯಿ |
| ೩. | ೧೦-೧೧ ಜೂನ್ ೧೯೮೯ | ಗದಗ | ಶ್ರೀ ಮ. ನಿ. ಪ್ರ. ಜ॥ ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ | ಡಾ॥ ಶ್ರೀನಿವಾಸ ರಿತ್ತಿ |
| ೪. | ೨೧-೨೨ ಜುಲೈ ೧೯೯೦ | ದಾವಣಗೆರೆ | ಡಾ॥ ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ | ಡಾ॥ ಎಸ್. ಆರ್. ರಾವ್ |
| ೫. | ೧೨-೧೪ ಜುಲೈ ೧೯೯೧ | ಚಿತ್ರದುರ್ಗ | ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ | ಡಾ॥ ಬಾ. ರಾ. ಗೋಪಾಲ್ |
| ೬. | ೧೧-೧೩ ಜುಲೈ ೧೯೯೨ | ರಾಯಚೂರು | ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ, ರಾಯಚೂರು | ಡಾ॥ ಕೆ. ವಿ. ರಮೇಶ್ |
| ೭. | ೨೩-೨೫ ಜುಲೈ ೧೯೯೩ | ಮೈಸೂರು | ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು | ಡಾ॥ ಅ. ಸುಂದರ |
| ೮. | ೯-೧೦ ಜುಲೈ ೧೯೯೪ | ಸೊಂಡೂರು | ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ ಸೊಂಡೂರು | ಡಾ॥ ಎಂ. ಎಂ. ಕಲಬುರ್ಗಿ |
| ೯. | ೯-೧೧ ಸೆಪ್ಟೆಂಬರ್ ೧೯೯೫ | ಬೆಳಗಾವಿ | ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ, ಬೆಳಗಾವಿ | ಡಾ॥ ಎ. ವಿ. ನರಸಿಂಹಮೂರ್ತಿ |
| ೧೦. | ೭-೯ ಜೂನ್ ೧೯೯೬ | ಧಾರವಾಡ | ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ, ಧಾರವಾಡ | ಡಾ॥ ಜಿ. ಎಸ್. ದೀಕ್ಷಿತ್ |
| ೧೧. | ೨೫-೨೭ ಅಕ್ಟೋಬರ್ ೧೯೯೭ | ಸಿರಸಿ | ಶ್ರೀ ಸೋಂದಾಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ಸಿರಸಿ | ಪ್ರೊ॥ ಕೆ. ಅಭಿಶಂಕರ್ |
| ೧೨. | ೧೪-೧೬ ನವೆಂಬರ್ ೧೯೯೮ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ॥ ಎಸ್. ನಾಗರಾಜ |
| ೧೩. | ೧೧-೧೩ ಜೂನ್ ೧೯೯೯ | ಹರಪನಹಳ್ಳಿ | ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ. ಬಾ. ಸದಾಶಿವಪ್ಪ ಸ್ವಾಗತ ಸಮಿತಿ, ಹರಪನಹಳ್ಳಿ | ಡಾ॥ ಶ್ರೀನಿವಾಸ ಹಾವನೂರ |
| ೧೪. | ೮-೧೦ ಜುಲೈ ೨೦೦೦ | ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | ಶ್ರೀ. ಪಿ. ಟಿ. ಎಂ. ಕೊಟ್ರಯ್ಯ |

# ಕರ್ನಾಟಕ ಇತಿಹಾಸ ಅಕಾದೆಮಿಯ ಹದಿನಾಲ್ಕನೆಯ ವಾರ್ಷಿಕ ಸಮ್ಮೇಳನ
# ಕನ್ನಡ ವಿಶ್ವವಿದ್ಯಾಲಯ, ಹಂಪಿ
# ೮-೧೦ ಜುಲೈ ೨೦೦೦

## ಸಮ್ಮೇಳನಾಧ್ಯಕ್ಷರು : ಶ್ರೀ ಸಿ. ಟಿ. ಎಂ. ಕೊಟ್ರಯ್ಯ*

## ಅಧ್ಯಕ್ಷ ಭಾಷಣ

ಕರ್ನಾಟಕ ಇತಿಹಾಸ ಅಕಾದೆಮಿಯ ಅಜೀವ ಗೌರವಾಧ್ಯಕ್ಷರಾದ ಪ್ರೊ। ಜಿ. ಎಸ್. ದೀಕ್ಷಿತರಿಗೆ, ಅಧ್ಯಕ್ಷರಾದ ಡಾ। ಸೂರ್ಯನಾಥ ಕಾಮತ್ ಅವರಿಗೆ, ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ। ಎಂ. ಎಂ. ಕಲಬುರ್ಗಿಯವರಿಗೆ, ಅಕಾದೆಮಿಯ ಉಪಾಧ್ಯಕ್ಷರಾದ (ನಿ.) ಪ್ರಾಂಶುಪಾಲ ಶ್ರೀ ಎಂ. ಜಿ. ನಾಗರಾಜ ಮತ್ತು ಪ್ರೊ। ಲಕ್ಷ್ಮಣ್ ತೆಲಗಾವಿ, ಪ್ರಧಾನ ಕಾರ್ಯದರ್ಶಿಗಳಾದ ಡಾ। ಎಚ್. ಎಸ್. ಗೋಪಾಲ ರಾವ್, ಕಾರ್ಯದಶಿಗಳಾದ ಡಾ। ಎಚ್. ಆರ್. ರಘುನಾಥ ಭಟ್ಟ, ಡಾ। ಕೆ. ವಸಂತಲಕ್ಷ್ಮಿ, ಕೋಶಾಧ್ಯಕ್ಷರಾದ ಶ್ರೀ ಎಂ. ಬಿ. ಪಾಟೀಲ ಮತ್ತು ಅಕಾದೆಮಿಯ ಕಾರ್ಯಕಾರಿ ಸಮಿತಿಯ ಎಲ್ಲ ಸದಸ್ಯರುಗಳಿಗೆ ಹಾಗೂ ನೆರೆದಿರುವ ಇತಿಹಾಸ ಪ್ರಾಜ್ಞರಿಗೆ, ಪ್ರೇಮಿಗಳಿಗೆ ನನ್ನ ವಿನಮ್ರ ವಂದನೆಗಳು.

ನಾನು ಮಾಡಿರುವ ಕೆಲಸವು ಅತ್ಯಲ್ಪವಾದರೂ, ನಿಮ್ಮೆದುರಿನಲ್ಲಿ ಈ ದಿನ ನಿಲ್ಲುವಂತೆ ಮಾಡುವಲ್ಲಿ ಪ್ರಧಾನ ಕಾರಣರು, ಬಹು ವಾತ್ಸಲ್ಯಮಯಿಗಳೂ, ಅಭಿಮಾನಿಗಳೂ, ಗುರು ಸಮಾನರೂ ಆಗಿರುವ ಪ್ರೊ। ಜಿ. ಎಸ್. ದೀಕ್ಷಿತರು. ಈ ದಿನದ ಸಮ್ಮೇಳನದಲ್ಲಿ ಭಾಗವಹಿಸುವಂತೆ ಅವರಿಂದ ಕರೆ ಬಂದಾಗ ನಿರಾಕರಿಸಲು ಧೈರ್ಯಸಾಲದೆ, ಗೌರವಿಸಲೇ ಬೇಕಾಯಿತು. ಹಾಗಾಗಿ ಈ ದಿನ ನನ್ನ ಹಲವು ವಿಚಾರಗಳನ್ನು ತಮ್ಮೊಡನೆ ವಿನಿಮಯ ಮಾಡಿಕೊಳ್ಳುವ ಸದಾವಕಾಶ ಲಭಿಸಿದೆ. ಈ ಕಾರಣಕ್ಕಾಗಿ ನಾನು ಪ್ರೊ। ದೀಕ್ಷಿತರಿಗೆ ಅತ್ಯಂತ ಕೃತಜ್ಞನು. ಹಾಗೆಯೇ, ಅಭಿಮಾನಿಗಳೂ, ಆತ್ಮೀಯರೂ ಆದ ಅಕಾದೆಮಿಯ ಅಧ್ಯಕ್ಷರಾದ ಡಾ। ಕಾಮತ್‌ರಿಗೆ ಮತ್ತು ತಮ್ಮೆಲ್ಲರಿಗೂ ಅನಂತ ಕೃತಜ್ಞತೆಗಳು.

ಅಕಾದೆಮಿಯ ಹದಿನಾಲ್ಕನೆಯ ಸಮ್ಮೇಳನವು ಹಂಪೆಯಲ್ಲಿ ಜರುಗುತ್ತಿರುವುದು ಒಂದು ಮಹತ್ವದ ವಿಷಯ ಮತ್ತು ಬಹು ಸಂತೋಷದ ವಿಚಾರ. ಏಕೆಂದರೆ ಹಂಪೆ-ವಿಜಯನಗರ ಎಂದೊಡನೆ ಚರಿತ್ರಾಭ್ಯಾಸಿಗಳಾದ ನಮ್ಮ ಸ್ಮೃತಿಪಟಲದ ಮೇಲೆ ಮೂಡಿ ಬರುವುದು, ಅದು ನಿರ್ಮಿಸಿ, ಪೋಷಿಸಿ, ಅಭಿವೃದ್ಧಿ ಪಡಿಸಿದ ಅಸದೃಶ್ಯವಾದ ವೈಭವಯುತ ಚರಿತ್ರೆ, ಸಂಸ್ಕೃತಿ, ಮತ್ತಿತರ ಸಾಧನೆಗಳ ಸಮೂಹ. ಅದು ಕನ್ನಡಿಗರೆಲ್ಲರ ಬಹು ಹೆಮ್ಮೆಯ ಸಂಕೇತ. ಆ ವೈಭವಯುಕ್ತ ಸಾಧನೆಗಳೋ ವೈವಿಧ್ಯಮಯ; ಅವುಗಳನ್ನು ಸಂಶೋಧನೆಗೊಳಪಡಿಸಿದಷ್ಟೂ ಇನ್ನೂ ಇದ್ದೇ ಇವೆ. ಹಾಗಾಗಿ ಜಿಜ್ಞಾಸುಗಳಿಗೆ, ಸಂಶೋಧಕರಿಗೆ ಬಹು ಮುಖ್ಯವಾದ, ಕೊನೆಯಿಲ್ಲದ ಅವಕಾಶಗಳನ್ನೊದಗಿಸುವ ಕ್ಷೇತ್ರವಾಗಿದೆ. ಈ ಸಮ್ಮೇಳವನ್ನು ಹಂಪೆಯಲ್ಲಿ ಜರುಗಿಸುತ್ತಿರುವುದರಿಂದ, ನೆರೆದಿರುವ ವಿದ್ವಾಂಸರಿಗೆ, ಸಂಶೋಧಕರಿಗೆ ಇನ್ನೂ ಹೆಚ್ಚಿನ ಸಂಶೋಧನ ಮತ್ತು ಅಭ್ಯಾಸಕ್ಕೆ ಪ್ರೇರಣೆಯನ್ನುಂಟುಮಾಡುವುದರಲ್ಲಿ ಸಂಶಯವಿಲ್ಲ. ಹಾಗೂ ಅವರ ಪ್ರಯತ್ನಗಳು ಫಲಕಾರಿಯಾಗುವುದರಲ್ಲಿಯೂ ಸಂದೇಹವಿಲ್ಲ. ಆದುದರಿಂದ ಹಂಪೆಯಲ್ಲಿ ಈಗ ಜರುಗುತ್ತಿರುವ ಸಮ್ಮೇಳನವು ಬಹು ಸಮಂಜಸವೂ, ಅರ್ಥ ಗರ್ಭಿತವೂ ಆಗಿದೆ.

ಇಷ್ಟೇ ಅಲ್ಲದೆ, ಈ ವರ್ಷದ ಸಮ್ಮೇಳನವು ಕನ್ನಡ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಕುಲಪತಿಗಳಾದ ಡಾ। ಕಲಬುರ್ಗಿಯವರ ನೇತೃತ್ವದಲ್ಲಿ ಜರುಗುತ್ತಿರುವುದು ಮತ್ತೊಂದು ವಿಶೇಷತೆ. ಈ ವಿಶ್ವವಿದ್ಯಾಲಯವು ಹಂಪೆ - ವಿಜಯನಗರ ನಿವೇಶನದ ಪುರಾತತ್ವ ಅವಶೇಷಗಳ ಅಧ್ಯಯನಕ್ಕೆ ಅತ್ಯನುಕೂಲವಾದ ಸಾಮೀಪ್ಯವನ್ನು ಹೊಂದಿರುವುದರಿಂದ ಅವುಗಳನ್ನು ಕುರಿತು ಹೆಚ್ಚಿನ ಸಂಶೋಧನಾ ಚಟುವಟಿಕೆಗಳಿಗೆ, ತೀವ್ರವಾದ ಚಾಲನೆಯನ್ನೊದಗಿಸುವ ಪ್ರೇರಣಾಶಕ್ತಿಯೂ ಆಗಬಲ್ಲದು.

ಹಂಪೆ - ವಿದ್ಯಾರಣ್ಯದಲ್ಲಿ ಈ ಸಮ್ಮೇಳನವು ನಡೆಯುತ್ತಿರುವುದು, ನನಗೆ ವೈಯಕ್ತಿಕವಾಗಿಯೂ ಹೆಚ್ಚಿನ ಅಭಿಮಾನದ ಮತ್ತು ಸಂತೃಪ್ತಿಯ ವಿಷಯವಾಗಿದೆ. ಏಕೆಂದರೆ ನನ್ನ ಪುರಾತತ್ವ ಸೇವಾಕಾರ್ಯವು, ಈ ಹಂಪೆಯಿಂದಲೇ,

*೨೪೦, ಎಂ. ಬ್ಲಾಕ್, ಕುವೆಂಪುನಗರ, ಮೈಸೂರು - ೫೭೦೦೨೩.

೧೯೫೫-೫೬ರಲ್ಲಿ, ಭಾರತ ಸರಕಾರದ ಪುರಾತತ್ವ ಸರ್ವೇಕ್ಷಣಾ ವಿಭಾಗದಲ್ಲಿ ಆರಂಭವಾಗುವುದರೊಂದಿಗೆ ಮೊದಲಾಯಿತೆಂದು ಹೇಳಬಹುದು. ಹಂಪೆಯ ಆ ಕ್ಷೇತ್ರಾಭ್ಯಾಸವು ಮುಂದುವರಿದು, ಮುಂದೆ ಹಲವಾರು ಸಂಶೋಧನಾತ್ಮಕ ಲೇಖನಗಳನ್ನು ಕನ್ನಡ ಮತ್ತು ಇಂಗ್ಲೀಷು ಭಾಷೆಗಳಲ್ಲಿ ಬರೆದು ಪ್ರಕಟಿಸುವಂತಾಯಿತು. ಅವುಗಳಿಗೆಲ್ಲಾ ಪೂರಕವಾಗಿ, ಈ ದಿನ ತಮ್ಮ ಮುಂದೆ ನನ್ನ ಕೆಲವು ವಿಚಾರಗಳನ್ನು ಹಂಚಿಕೊಳ್ಳುವ ಅವಕಾಶವೂ ಒದಗಿ ಬಂದಿರುವುದು ಇನ್ನೂ ಹೆಚ್ಚಿನ ಸಂತೋಷಕ್ಕೆ ಕಾರಣವಾಗಿದೆ.

ಹಿಂದಿನ ಅಧ್ಯಕ್ಷರು ತಮ್ಮ ಪಾಂಡಿತ್ಯಪೂರ್ಣ ಭಾಷಣಗಳಲ್ಲಿ, ಕರ್ನಾಟಕ, ಅದರ ಇತಿಹಾಸ, ಸಂಸ್ಕೃತಿ, ಪುರಾತತ್ವ, ಮತ್ತಿತರ ಶಾಖೋಪಶಾಖೆಗಳನ್ನು ಕುರಿತು ಕೂಲಂಕಷವಾಗಿ ಮತ್ತು ಸಮಗ್ರವಾಗಿ ತಮಗೆಲ್ಲಾ ಶ್ರುತಪಡಿಸಿರುತ್ತಾರೆ. ಆದುದರಿಂದ ಆ ದಿನ ಹಂಪೆ-ವಿಜಯನಗರ ಕ್ಷೇತ್ರದ ಪುರಾತತ್ವ ಅಧ್ಯಯನಕ್ಕೆ (Field Study) ಮಾತ್ರ ನನ್ನ ವಿಚಾರಗಳನ್ನು ಸೀಮಿತಗೊಳಿಸಿ, ಆ ಪ್ರಯತ್ನದಲ್ಲಿ ಸಮಕಾಲೀನ ಕನ್ನಡ ಸಾಹಿತ್ಯಾಭ್ಯಾಸವೂ ಉಪಯುಕ್ತ ಮತ್ತು ಅವಶ್ಯಕ ಎಂಬುದನ್ನು ವಿವರಿಸುತ್ತೇನೆ.

* * * * *

ವಿಜಯನಗರದ ವೈಭವಯುಕ್ತ ಚರಿತ್ರೆ, ಸಾಧನೆಗಳಂತೆಯೇ, ಹಂಪೆ-ವಿಜಯನಗರಕ್ಕೆ ಸಮನಾಗಬಲ್ಲ ವಿಶಾಲವಾದ ಹಾಗೂ ಪುರಾತತ್ವ ಕುರುಹುಗಳಿಂದ ಸಮೃದ್ಧವಾಗಿರುವ ಮಧ್ಯಕಾಲೀನ ನಿವೇಶನವು ಬಹುಶಃ ದಕ್ಷಿಣ ಭಾರತದಲ್ಲಿ ಮತ್ತೆಲ್ಲಿಯೂ ಕಾಣಸಿಗದು. ಮತ್ತು ವಿಜಯನಗರದ ಕಾಲಕ್ಕೆ, ೧೪ನೇ ಶತಮಾನದ ಆರಂಭದಲ್ಲಿ, ಬದಲಾದ ಧಾರ್ಮಿಕ, ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿ, ಒತ್ತಡಗಳ ಕಾರಣಗಳಿಂದಾಗಿ ಆ ಭವ್ಯ ಸ್ಮಾರಕಗಳ ನಿರ್ಮಾಪಕರು, ಧಾರ್ಮಿಕ ಜಾಗೃತಿಯನ್ನು ಮತ್ತು ಹಿಂದೂಧರ್ಮರಕ್ಷಣಾಕ್ರಮಗಳನ್ನು ಬಲಪಡಿಸುವ ಉತ್ಕಟ ಹಾಗೂ ಪ್ರಧಾನ ಗುರಿಯನ್ನು ಮತ್ತು ಆಗ್ರಹವನ್ನು ಹೊಂದಿದವರಾಗಿದ್ದರಷ್ಟೇ. ಆ ಕಾರಣಗಳಿಂದಾಗಿ ಹಂಪೆಯಲ್ಲಿ ತಮಗೆಲ್ಲಾ ತಿಳಿದಿರುವಂತೆ, ಎಲ್ಲಿ ನೋಡಿದರೂ, ಎತ್ತ ನೋಡಿದರೂ ದೊಡ್ಡ, ಚಿಕ್ಕ, ವಿವಿಧ ಪ್ರಮಾಣದ ದೇವಮಂದಿರಗಳು, ಮಂಟಪಗಳು, ಗೋಪುರದ್ವಾರಗಳು ಮುಂತಾದವುಗಳು ಕಾಣಬರುತ್ತವೆ. ಅವುಗಳಲ್ಲದೆ ಕಂಬಗಳ ಮೇಲೆ, ಬಂಡೆಗಳ ಮೇಲೆ, ಕಲ್ಲುಗಳ ಮೇಲೆ, ಕಲ್ಲುಗೋಡೆಗಳ ಮೇಲೆ ದೇವತಾ ಶಿಲ್ಪಗಳು, ಉಪದೇವತಾ ಶಿಲ್ಪಗಳು ವಿವಿಧ ಪ್ರಾಣಿಗಳ ಚಿತ್ರಗಳು, ಇನ್ನೂ ಗುರುತಿಸಲು ಸಾಧ್ಯವಾಗಿಲ್ಲದಿರುವ ಹಲವಾರು ಶಿಲ್ಪ ಕಲಾಕೃತಿಗಳು ಮುಂತಾದವುಗಳು ಕಾಣಬರುತ್ತವೆ. ಈ ಗುಂಪಿನ ಹಲವಕ್ಕೆ ಒಂದು ನಿಶ್ಚಿತ ಯೋಜನೆಯಾಗಲೀ, ಪೂರ್ಣ ವ್ಯವಸ್ಥೆಯಾಗಲೀ ಇದ್ದಂತೆ ಕಾಣಬರುವುದಿಲ್ಲ. ಎಲ್ಲಾದರೊಂದು ಸರಿ ಪ್ರಮಾಣದ ಕಲ್ಲು, ಬಂಡೆ, ಹುಟ್ಟು ಕಲ್ಲು, ಗೋಡೆ ಅಥವಾ ಕಂಭ ಕಂಡುದೇ ಆದರೆ, ಶಿಲ್ಪಿಯು ಅಲ್ಲಿಯೇ ತನ್ನ ಭಾವನೆಗಳಿಗೆ, ವಿಚಾರಗಳಿಗೆ ರೂಪುಗಳನ್ನು ಒದಗಿಸಿ, ತನ್ನ ಕಲಾ ನೈಪುಣ್ಯತೆಯನ್ನು, ಅಭಿರುಚಿಯನ್ನು, ಮೇಲಾಗಿ ಧರ್ಮ ಜಾಗೃತಿಯನ್ನು ಪ್ರದರ್ಶಿಸಲು ಮುಂದಾಗುತ್ತಿದ್ದನು. ಕಡಲೇಕಾಳು ಗಣೇಶ, ಉಗ್ರ ನರಸಿಂಹ, ಬಡವೀಲಿಂಗ, ಹುಟ್ಟುಕಲ್ಲಿನ ಮೇಲೆ ಕಾಣುವ ದುರ್ಗಾ, ಬಹುಬಾಹು ವೀರಭದ್ರ, ರಂಗನಾಥ, ಯಂತ್ರೋದ್ಧಾರಕ ಹನುಮಂತ, ಕೋದಂಡರಾಮ ಮಂದಿರದ ಮೂರ್ತಿಗಳು, ಚತುರ್ಭುಜ ಹನುಮಂತ, ಲಿಂಗಗಳು, ಕೋಟಿ ಲಿಂಗಗಳು, ನಂದಿಗಳು, ಗುರುಪಾದಗಳು ಹೀಗೆ ಇನ್ನೂ ಅನೇಕ ಉದಾಹರಣೆಗಳು ಈ ಗುಂಪಿಗೆ ಸೇರಿದವುಗಳೆಂದು ಹೇಳಬಹುದು. ಅವುಗಳಲ್ಲಿ ಹಲವು ಸಾಮಾನ್ಯವಾಗಿ ಜನಜನಿತವಾಗಿದ್ದ ವದಂತಿ ಅಥವಾ ಸಮಕಾಲೀನ ಸಾಹಿತ್ಯದಲ್ಲಿ ಕಂಡು ಬಂದ ವಿವರಣೆಗಳಿಂದ ಪ್ರೇರಿತವಾಗಿ ನಿರ್ಮಾಣವಾದವುಗಳು.

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಸಮಯಕ್ಕಿಂತ ಮೊದಲೇ, ದಕ್ಷಿಣ ಭಾರತದಲ್ಲಿ ಹಿಂದೂಧರ್ಮದ ಚರಿತ್ರೆಯ ಕ್ಷೇತ್ರದಲ್ಲಿ, ದಾರ್ಶನಿಕರೂ, ತತ್ವಜ್ಞಾನಿಗಳೂ, ವಿವೇಚನಾಶೀಲರೂ, ಸುಧಾರಕರೂ ಎಂದು ಹೆಸರಾಗಿದ್ದ ಆದಿ ಶಂಕರಾಚಾರ್ಯರು, ನಾಯನ್ಮಾರರು, ಆಳ್ವಾರರು ರಾಮಾನುಜಾಚಾರ್ಯರು, ಬಸವೇಶ್ವರರು, ಮಧ್ವಾಚಾರ್ಯರು, ಮುಂತಾದವರು ಮತ್ತು ಅವರ ಅನುಯಾಯಿಗಳು ತಮ್ಮ ತಮ್ಮ ಪಾಂಡಿತ್ಯ, ವಿದ್ವತ್ತು, ಧಾರ್ಮಿಕ ಶ್ರದ್ಧೆ, ಸಾಧನೆ ಮತ್ತು ವಿಚಾರಗಳಿಂದ ಆಗಲೇ ಪ್ರಾರಂಭವಾಗಿದ್ದ ಭಕ್ತಿ ಪಂಥಕ್ಕೆ ಮತ್ತಷ್ಟು ಪರಿಣಾಮಕಾರಿ ಚಾಲನೆಯನ್ನು ನೀಡುವಲ್ಲಿ ಸಮರ್ಥರಾದರು. ಹಿಂದಿನವರು ಆರಂಭಿಸಿದ ಜನಜಾಗೃತಿಯನ್ನು, ವೀರಶೈವ ಶರಣರು, ದಾಸರು, ನಾಥಪಂಥದವರು, ಕಾಳಾಮುಖರು ಮುಂತಾದವರು ತಮ್ಮದೇ ಆದ ಚಿಂತನೆ, ವಿಚಾರಗಳೊಂದಿಗೆ, ಮಾನವೀಯತೆಗಳಿಗೆ ಹೆಚ್ಚಿನ ಒತ್ತು ಕೊಡುತ್ತಾ ತೀಕ್ಷ್ಣಗೊಳಿಸಿದರು. ಅವುಗಳೆಲ್ಲದರ ಪರಿಣಾಮವಾಗಿ, ಜನಮನಗಳಲ್ಲಿ ಒಂದು ಪರಿಮಿತಿಗೊಳಪಟ್ಟ, ಸ್ವತಂತ್ರವಾದ, ಆದರೆ ಉದಾರ ಮತ್ತು ಜನಾನುರಾಗೀ ಅಭಿಪ್ರಾಯಗಳಿಗೆ ಮನ್ನಣೆ ಕೊಡುವಂತಹ ಮತ್ತು ಸಮಾಜದ ಕ್ಷೇಮಾಭಿವೃದ್ಧಿಗಳಿಗೆ ಒತ್ತು ಕೊಡುವಂತಹ ವಿಚಾರಗಳಿಗೆ ಪ್ರಾಧಾನ್ಯತೆ ದೊರೆಯತೊಡಗಿತು. ಮತ್ತು ಅವುಗಳನ್ನು ವಿವಿಧ ರೀತಿಯಲ್ಲಿ ವ್ಯಕ್ತಪಡಿಸುವಲ್ಲಿಯೂ ಮುಂದಾದರು. ಹಾಗೆ ಮಾಡುವಾಗ ಪರಂಪರಾಗತವಾಗಿ ಬಂದ ಪ್ರಾಚೀನ ಸಾಹಿತ್ಯ, ವೇದ, ಆಗಮ, ಪುರಾಣ, ವಾಸ್ತು ಶಿಲ್ಪ ಶಾಸ್ತ್ರಗಳು ಮುಂತಾದವುಗಳನ್ನು ಸಂಪೂರ್ಣವಾಗಿ ಕಡೆಗಣಿಸಲಾಯಿತೆಂದು ಅಭಿಪ್ರಾಯವಲ್ಲ. ಅವುಗಳ ಜೊತೆಯಲ್ಲಿಯೇ ಈ ಹೊಸ ಅಲೆಗಳ ಪ್ರಭಾವಗಳೂ ಅಸ್ತಿತ್ವಕ್ಕೆ ಬಂದುವು. ಅದಕ್ಕಾಗಿ ವಿವಿಧ ಮಾಧ್ಯಮಗಳನ್ನುಪಯೋಗಿಸಿಕೊಂಡರು. ಉದಾಹರಣೆಗೆ ಸಾಹಿತ್ಯ, ಸಂಗೀತ,

ವಾಸ್ತು, ಶಿಲ್ಪ, ವರ್ಣಚಿತ್ರಗಳು, ದೇಶೀಭಾಷೆಯ ಹೆಚ್ಚಿನ ಬಳಕೆ ಮುಂತಾದವುಗಳು. ಆ ಚಟುವಟಿಕೆಗಳಿಗೆಲ್ಲ ಆಳರಸರ, ಅಧಿಕಾರಿಗಳ, ಮತ್ತಿತರ ಗಣ್ಯರ ಸಹಾಯ, ಪ್ರೋತ್ಸಾಹಗಳೂ ಉದಾರವಾಗಿ ದೊರೆಯುತ್ತಿದ್ದುವೆಂಬುದು ಹಲವಾರು ಸಾಹಿತ್ಯ ಗ್ರಂಥಗಳು, ಶಾಸನಗಳು ಮುಂತಾದವುಗಳಿಂದ ವೇದ್ಯವಾಗುತ್ತದೆ.

ಮೇಲೆ ಉದಾಹರಿಸಿರುವ ಹಲವಾರು ಪುರಾತತ್ವ ಕುರುಹುಗಳಲ್ಲಿಯೂ ಈ ಹೊಸ ವಿಚಾರಗಳು, ತತ್ವಗಳು, ಧ್ಯೇಯಗಳು ಗಣನೀಯ ಪ್ರಮಾಣದಲ್ಲಿ ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಒಂದು ರೀತಿಯಲ್ಲಿ ಜಾನಪದರ ಸೊಗಡನ್ನು ಅಲ್ಲಿ ಕಾಣುತ್ತೇವೆ. ಹಾಗಾಗಿ ವಿಜಯನಗರದ ಪುರಾತತ್ವ ಅಧ್ಯಯನದ ಹಲವಾರು ಆಯಾಮಗಳು ಇನ್ನೂ ಸಮಗ್ರವಾಗಿ, ಸಂಪೂರ್ಣ ಅರ್ಥವತ್ತಾಗಿ, ಸರ್ವಸಮ್ಮತವಾಗುವಂತೆ ಜರುಗಬೇಕಾಗಿದೆ. ಅದಕ್ಕೆ ಪೂರಕವಾಗಿ ಸಮಕಾಲೀನ ಸಾಹಿತ್ಯ ಕೃತಿಗಳ, ಅದರಲ್ಲೂ ಕನ್ನಡ ಸಾಹಿತ್ಯದಲ್ಲಿ, ಮುಖ್ಯವಾಗಿ ವರ್ಣಕ, ಜೀವನ ಚರಿತ್ರೆ ನಿರೂಪಕ ಅಥವಾ ಪುರಾಣ ಕಥಾರೂಪದ ವಿಷಯಗಳನ್ನೊಳಗೊಂಡ ಸಾಹಿತ್ಯ ಕೃತಿಗಳ, ಅಧ್ಯಯನವು ಬಹು ಮುಖ್ಯ. ಆ ಸಾಹಿತ್ಯವೋ ಆ ಕಾಲದಲ್ಲಿ ಪ್ರಚಲಿತದಲ್ಲಿದ್ದ ಆಚರಣೆ, ಸಂಪ್ರದಾಯಗಳಿಗನುಗುಣವಾಗಿ ರಚಿತವಾದ ಕಾವ್ಯ ಸಾಹಿತ್ಯವಾಗಿದೆ. ಆ ಕಾರಣದಿಂದಾಗಿ ಕವಿಸಮಯದ ಸಂದರ್ಭಕ್ಕುಚಿತವಾದ ಮತ್ತು ಪ್ರಾಸ, ಛಂದಸ್ಸುಗಳ ನಿಬಂಧನೆಗಳಿಗನುಗುಣವಾಗಿ ರಚಿತವಾದ ಕವಿತಾ ಉತ್ಪ್ರೇಕ್ಷೆಯು, ಆಕೃತಿಗಳಲ್ಲಿ ಸ್ವಾಭಾವಿಕ ಹಾಗೂ ಸರ್ವೇಸಾಮಾನ್ಯ. ಆದರೂ ಅನೇಕ ಬಾರಿ ಅವುಗಳ ಮಧ್ಯದಲ್ಲಿಯೇ ಪುರಾತತ್ವ ಸಂಶೋಧಕರಿಗೆ ಉಪಯುಕ್ತವಾದ ಚಾರಿತ್ರಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ವಿಷಯಗಳೂ ಅಡಕವಾಗಿರುತ್ತವೆ. ಮತ್ತು ಸಮಕಾಲೀನ ಸಮಾಜದ ಜನಜೀವನದಲ್ಲಿ ಪ್ರಚಲಿತದಲ್ಲಿದ್ದ ವಿಚಾರಗಳು, ನಂಬಿಕೆಗಳು, ಆಚಾರಗಳು, ಸಂಪ್ರದಾಯಗಳೂ ಅವುಗಳಲ್ಲಿ ಹಾಸು ಹೊಕ್ಕಾಗಿರುವುದು ಕಾಣಬರುತ್ತವೆ. ಆದುದರಿಂದ ಅಂತಹ ಸಾಹಿತ್ಯ ಕೃತಿಗಳನ್ನು ಸಂಶೋಧನೆಗೆ ಬೇಕಾದ ಸಾಮಗ್ರಿಯನ್ನು ಒದಗಿಸುವ ಮೂಲ ಆಕರ ಗ್ರಂಥಗಳೆಂದು ಪರಿಗಣಿಸಿ, ಅವುಗಳನ್ನು ಪುರಾತತ್ವವಿದನ ದೃಷ್ಟಿಯಿಂದ ಅಭ್ಯಸಿಸಿ, ಕವಿತಾ ಉತ್ಪ್ರೇಕ್ಷೆಗಳನ್ನು ವರ್ಜಿಸಿ, ಅವಶ್ಯವಿರುವ ವಸ್ತು ವಿಷಯಗಳನ್ನು ಮಾತ್ರ ಗುರುತಿಸಿ, ಗ್ರಹಿಸಿ, ಸಂಶೋಧನೆಯಲ್ಲಿ ಉಪಯೋಗಿಸಿಕೊಳ್ಳಬೇಕಾಗುತ್ತದೆ. ಹಾಗೆ ವಿಂಗಡಿಸಿ ಶೇಖರಿಸಿದ ವಿಷಯಾಂಶಗಳ ಸಹಾಯದಿಂದ, ಜಟಿಲವಾದ, ಅಪರೂಪದ ಪುರಾತತ್ವ ಕುರುಹುಗಳನ್ನು ಗುರುತಿಸಿ ಅರ್ಥೈಸುವುದು ಸಾಧ್ಯವೆಂಬುದು ಹಲವು ಉದಾಹರಣೆಗಳಿಂದ ತಿಳಿದುಬಂದಿದೆ.

ಅದಕ್ಕೂ ಮೊದಲು, ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅಪಾರವಾಗಿ ರಚಿತವಾದ ಕನ್ನಡ ಸಾಹಿತ್ಯ ಕೃತಿಗಳ ಬಗ್ಗೆ ಸಂಕ್ಷಿಪ್ತವಾಗಿ ಎರಡು ಮಾತುಗಳು. ತಮಗೆಲ್ಲಾ ವೇದ್ಯವಿರುವಂತೆ, ಮತ್ತಾವ ಕಾಲದಲ್ಲಿಯೂ ಕಾಣಬರದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಅವು ರಚಿತವಾದುವು ಮತ್ತು ಅಷ್ಟೇ ವಿವಿಧ ವಿಷಯಗಳನ್ನು ಕುರಿತು ಬರೆಯಲ್ಪಟ್ಟವು. ಅವು ಬಹುತೇಕ ಕವಿತಾ ಗ್ರಂಥಗಳು. ಅವುಗಳನ್ನು ರಚಿಸಿದವರು ಶೈವ, ವೈಷ್ಣವ, ವೀರಶೈವ, ಜೈನ, ಮತ್ತಿತರ ಧರ್ಮಾನುಯಾಯಿಗಳನಾಗಿದ್ದರು. ಆ ಕವಿಗಳ ಮೂಲೋದ್ದೇಶವು ಸಾಹಿತ್ಯವನ್ನು ಮಾಧ್ಯಮವನ್ನಾಗಿರಿಸಿಕೊಂಡು, ಅವರವರ ಧರ್ಮದ ಉತ್ಕೃಷ್ಟತೆಯನ್ನು ಸಾರಿ ಹೇಳುವುದು ಮತ್ತು ಪ್ರಚಾರ ಮಾಡುವುದೇ ಆಗಿತ್ತು. ಅವುಗಳಲ್ಲಿ ಹಲವು, ಧರ್ಮ, ತತ್ವಜ್ಞಾನ, ಸಿದ್ಧಾಂತ ಮುಂತಾದ ಆಧ್ಯಾತ್ಮಿಕ ವಿಷಯಗಳನ್ನು ವಿವರಿಸಿ, ವ್ಯಾಖ್ಯಾನಿಸಿ, ಪ್ರತಿಪಾದಿಸುವ ಗ್ರಂಥಗಳಾದರೆ ಇತರೆ ಗ್ರಂಥಗಳು ಪುರಾಣ, ಕಥಾನಿರೂಪಣೆ, ವರ್ಣನೆ, ಜೀವನ ಚರಿತ್ರೆ, ಪುರಾಣಾಂತರ್ಗತ ಕಥೆಗಳ ಪುನರ್ ನಿರೂಪಣೆ ಮುಂತಾದ ವಿಷಯಗಳನ್ನು ಪ್ರಸ್ತುತಪಡಿಸುವ ಸೃಜನಾತ್ಮಕ ಗ್ರಂಥಗಳು. ಇವುಗಳಲ್ಲದೆ ಶಾಸ್ತ್ರೀಯ ವಿಷಯಗಳನ್ನು ಎಂದರೆ, ಆಯುರ್ವೇದ, ಸೂಪಶಾಸ್ತ್ರ, ಖಗೋಳ ವಿಜ್ಞಾನ, ಜ್ಯೋತಿಷ್ಯ, ಸಂಗೀತ, ನರ್ತನ, ನಿಘಂಟು, ವ್ಯಾಕರಣ, ಅಶ್ವಶಾಸ್ತ್ರ ಮುಂತಾದ ವಿಷಯಗಳನ್ನು ಕುರಿತೂ ಗ್ರಂಥಗಳು ರಚನೆಯಾದುವು. ಒಂದು ಸಮೀಕ್ಷೆಯ ಪ್ರಕಾರ ಆ ಕಾಲದಲ್ಲಿ ೧೮೦ ಕ್ಕೂ ಹೆಚ್ಚಾಗಿದ್ದ ಕನ್ನಡ ಕವಿಗಳು, ನಾಮಾಂಕಿತಗಳು ತಿಳಿಯದ ವಚನಕಾರರನ್ನು ಬಿಟ್ಟು, ೩೦೦ ಕ್ಕೂ ಹೆಚ್ಚಾಗಿ ಗ್ರಂಥಗಳನ್ನು ರಚಿಸಿರುತ್ತಾರೆ. ಆಗಲೇ ತಿಳಿಸಿದ ಪ್ರಕಾರ ಪ್ರಸ್ತುತದಲ್ಲಿ, ಎರಡನೆಯ ಗುಂಪಿನ ಸಾಹಿತ್ಯ ಕೃತಿಗಳು ಪುರಾತತ್ವ ಸಂಶೋಧಕನ ಸಹಾಯಕ್ಕೆ ಬರುತ್ತವೆ.

* * * * *

ಮೊದಲಿಗೆ, ಹಂಪೆಯ ಧಾರ್ಮಿಕ ಪವಿತ್ರತೆಯನ್ನು ವರ್ಧಿಸಿ, ಪೌರಾಣಿಕ ನೆಲೆಯನ್ನು ಸ್ಥಿರಪಡಿಸಿ ಹೇಳುವ ಸ್ಥಳಪುರಾಣದ ಮೂಲವನ್ನು ಕುರಿತು ತಿಳಿಯೋಣ. ಅದನ್ನು ವಿವರವಾಗಿ ತಿಳಿಯಬೇಕಾದರೆ 'ಗಿರಿಜಾ ಕಲ್ಯಾಣ' ವೆಂಬ ಕನ್ನಡ ಸಾಹಿತ್ಯ ಗ್ರಂಥವನ್ನೇ ಅವಲಂಬಿಸಬೇಕಾಗುತ್ತದೆ. ಹಂಪೆಯ ಸ್ಥಳ ಮಹಾತ್ಮೆ ಅಥವಾ ಪುರಾಣಕ್ಕೆ ಮೊಟ್ಟಮೊದಲ ಬಾರಿಗೆ ಒಂದು ನಿರ್ದಿಷ್ಟ ಹಾಗೂ ಶಾಶ್ವತವಾದ ರೂಪವನ್ನು ಕೊಟ್ಟವನು, ಹಂಪೆಯಲ್ಲಿಯೇ ಕ್ರಿ. ಶ. ೧೨-೧೩ನೇ ಶತಮಾನದಲ್ಲಿ ವಾಸವಾಗಿದ್ದ ಕವಿ ಹರಿಹರದೇವನು. ಹಂಪೆಯ ಹೆಸರು (ಪಂಪಾತಟ) ಕ್ರಿ. ಶ. ೬೮೯ ರಿಂದಲೇ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತದೆಯಾದರೂ, ಹಂಪೆಯ ಅಧಿದೈವವಾದ ವಿರೂಪಾಕ್ಷ ಹಾಗೂ ಪಂಪಾದೇವಿ ಮತ್ತಿತರ ದೇವತಾ ಮೂರ್ತಿಗಳ ಹೆಸರುಗಳು ತಿಳಿದು ಬರುವುದು ಕ್ರಿ. ಶ. ೧೦೮೯ರ ಬಾಗಳಿ ಶಾಸನ ಮತ್ತು ಕ್ರಿ. ಶ. ೧೧೯೯ರ ಹಂಪೆಯ ದುರ್ಗಾಗುಡಿಯಲ್ಲಿರುವ ಶಾಸನಗಳ ತರುವಾಯ. ಕ್ರಿ. ಶ. ೧೨ನೇ ಶತಮಾನದ ಉತ್ತರಾರ್ಧದಲ್ಲಿಯೇ ಕವಿ

ಹರಿಹರದೇವನು ಹಂಪೆಯಲ್ಲಿ ಆಗಲೇ ಅಸ್ತಿತ್ವದಲ್ಲಿದ್ದ ಗುರುಕುಲದಲ್ಲಿದ್ದುಕೊಂಡು, ಅದನ್ನೇ ತನ್ನ ಕಾರ್ಯಕ್ಷೇತ್ರವಾಗಿ ಆರಿಸಿಕೊಂಡು ತನ್ನ ಆರಾಧ್ಯದೈವವಾದ ಹಂಪೆಯ ವಿರೂಪಾಕ್ಷನಲ್ಲಿ ಉತ್ಕಟವಾದ ಭಕ್ತಿಯುಳ್ಳವನಾಗಿ ಕನ್ನಡದಲ್ಲಿ ಸಾಹಿತ್ಯ ಕೃತಿಗಳ ರಚನೆಯಲ್ಲಿ ತೊಡಗಿದ್ದನಷ್ಟೇ. ಆತನಿಗೆ ಪಂಪಾವಿರೂಪಾಕ್ಷನಲ್ಲಿದ್ದ ಭಾವೋನ್ಮತ್ತ, ನಿಸ್ಸೀಮ ಭಕ್ತಿಯೇ "ಗಿರಿಜಾ ಕಲ್ಯಾಣ"ವೆಂಬ ಮಹಾಗ್ರಂಥದ ರಚನೆಗೆ ಪ್ರೇರಣೆಯಾಯಿತು. ಈ ಕಥಾವಸ್ತು ಮೂಲದಲ್ಲಿ ಶಿವಮಹಾಪುರಾಣ, ಸ್ಕಾಂದಪುರಾಣ ಮೊದಲಾದ ಹಲವಾರು ಪುರಾಣಗಳಲ್ಲಿ, ಶಿವನ ಪಂಚವಿಂಶತಿ ಲೀಲೆಗಳಲ್ಲಿ, ಒಂದಾದ ವಿಷಯವನ್ನು ಆಧರಿಸಿ ರಚಿಸಲಾದ ಗ್ರಂಥರೂಪದಲ್ಲಿ ಬಂದಿದೆ. ಹಾಗೆ ರಚಿಸುವಾಗ ಹಂಪೆಯ ಪರಿಸರದಲ್ಲಿ ಆಗಲೇ ಪ್ರಚಲಿತದಲ್ಲಿದ್ದಿರಬಹುದಾದ ಹೆಸರುಗಳಾದ ಹಂಪೆ, ಹೇಮಕೂಟ, ಪಂಪಾಸರೋವರ ಹಾಗೂ ಮತಂಗ, ಮಾಲ್ಯವಂತ, ಋಷ್ಯಮೂಕ ಬೆಟ್ಟಗಳನ್ನು, ಕಿಷ್ಕಿಂಧೆಯೆಂಬ ಕಾನನ ಕೊಳ್ಳಗಳ ಪ್ರದೇಶವನ್ನೂ, ನಿರಂತರವಾಗಿ ಹರಿಯುವ ತುಂಗಭದ್ರಾ ನದಿಯನ್ನು, ಶ್ರೀ ವಿರೂಪಾಕ್ಷದೇವನ ಸಾನಿಧ್ಯವನ್ನು ಸೂಕ್ತ ರೀತಿಯಲ್ಲಿ, ಮತ್ತು ಕಥಾ ನಿರೂಪಣಾ ಸಂದರ್ಭಗಳಿಗನುಗುಣವಾಗಿ ಚತುರತೆಯಿಂದ ಉಪಯೋಗಿಸಿಕೊಂಡವನು ಕವಿ ಹರಿಹರದೇವ. ಈ ಸಾಹಿತ್ಯ ಕೃತಿಯು, ವಿಜಯನಗರ ಸ್ಥಾಪನೆಗಿಂತಲೂ ಪೂರ್ವದಲ್ಲಿ, ಆದರೆ ಹಂಪೆಯಲ್ಲಿಯೇ ನೆಲೆಸಿದ್ದ ಕವಿಯಿಂದ ರಚಿತವಾಗಿರುವುದರಿಂದ ಪ್ರಸ್ತುತದಲ್ಲಿ ಅದು ಪ್ರಸಂಗೋಚಿತ ಹಾಗೂ ಉಪಯುಕ್ತ. ದಕ್ಷಬ್ರಹ್ಮನು ಜರುಗಿಸಿದ ಯಾಗದ ಸಮಯದಲ್ಲಿ ದಾಕ್ಷಾಯಣಿಯು ಪ್ರಾಣತ್ಯಾಗ ಮಾಡಿದ ನಂತರ ವಿರಾಗಿಯಾದ ಶಿವನು, ಇಲ್ಲಿಯೇ ಹೇಮಕೂಟದ ಮೇಲೆ ಸಮಾಧಿಸ್ಥನಾಗಿ ಕುಳಿತಿದ್ದನೆಂದೂ, ನಂತರದ ಘಟನೆಗಳಾದ ಮನ್ಮಥ ದಹನ, ಗಿರಿಜೆಯ ತಪಸ್ಸು, ಗಿರಿಜಾ ಕಲ್ಯಾಣ ಮುಂತಾದುವುಗಳು ಇಲ್ಲಿಯೇ ಜರುಗಿದಂತೆ ತನ್ನ ಕಾವ್ಯ ಗ್ರಂಥವಾದ "ಗಿರಿಜಾ ಕಲ್ಯಾಣ" ದಲ್ಲಿ ಗುರುತಿಸಿಕೊಂಡು, ಮನೋಜ್ಞವಾಗಿ ವಿವರಿಸುವುದರೊಂದಿಗೆ, ಪ್ರಾಚೀನ ಕಾಲದಿಂದಲೂ ಪವಿತ್ರವೂ, ಪ್ರಸಿದ್ಧವೂ ಆಗಿರುವ ಈ ಪಂಪಾಕ್ಷೇತ್ರಕ್ಕೆ ಚಿರಕಾಲವೂ ಊರ್ಜಿತದಲ್ಲಿರುವಂತಹ ಒಂದು ಸ್ಥಳಮಹಾತ್ಮೆ / ಪುರಾಣವನ್ನು ಒದಗಿಸಿದನು. ಅಲ್ಲದೆ, ಆ ಸ್ಥಳಪುರಾಣದೊಳಗಿನ ಮುಖ್ಯ ವಿಷಯವನ್ನಾಧರಿಸಿ ಹಲವು ಪ್ರಕಾರದ ಧಾರ್ಮಿಕ ಸಂಪ್ರದಾಯಗಳು, ಎಂದರೆ ವಿರೂಪಾಕ್ಷ ಪಂಪಾಂಬಿಕೆಯರ ನಡುವೆ ವಧು ಪರೀಕ್ಷೆ, ನಿಶ್ಚಿತಾರ್ಥದ ನಂತರ ಉಡಿ ತುಂಬುವಿಕೆ, ವೈದಿಕ ಪದ್ಧತಿಯಂತೆ ವಿವಾಹ ಕಾರ್ಯ, ಹೋಮ, ಆರೋಗಣೆ, ವಿವಾಹ ನಂತರ ವಧು-ವರರ ಮೆರವಣಿಗೆ, ಆ ತರುವಾಯದ ನಾಗವಲ್ಲಿ ಕಾರ್ಯಗಳು ಮುಂತಾದ ಆಚರಣೆಗಳನ್ನು ಆ ದೇವಾಲಯಗಳಲ್ಲಿ ಪ್ರತಿ ವರ್ಷವೂ, 'ನಿಗದಿ ಪಡಿಸಿದ ದಿನಗಳಲ್ಲಿ' ಅರ್ಚಕರು ಮತ್ತು ಭಕ್ತರುಗಳಿಂದ ಆಚರಿಸಲ್ಪಡುವುದನ್ನು ಈಗಲೂ ಅವಲೋಕಿಸಬಹುದು.

ಮುಂದೆ ಆ ಕಾವ್ಯಾಂತರ್ಗತ ಸ್ಥಳ ಮಹಾತ್ಮೆಯೇ ಹಲವು ಶಿಲ್ಪಾಕೃತಿಗಳ, ವರ್ಣಚಿತ್ರಗಳ ರಚನೆಗೆ ವಿಷಯವನ್ನೊದಗಿಸಿತೆಂಬುದು, ಹಂಪೆ-ವಿಜಯನಗರದಲ್ಲಿ ಈಗಲೂ ಅಲ್ಲಲ್ಲಿ ಕಾಣಬರುವ ಹಲವು ಉದಾಹರಣೆಗಳಿಂದ ವೇದ್ಯವಾಗುತ್ತದೆ. ಹಂಪೆಯ ವಿರೂಪಾಕ್ಷ ಸ್ವಾಮಿಯ ದೇವಾಲಯದ ಮುಂದಿರುವ ಮಹಾ ಮುಖಮಂಟಪದ ಒಳ ಮಾಳಿಗೆಯ ಮೇಲೆ ಗಿರಿಜಾ ಕಲ್ಯಾಣ ಅಥವಾ ವಿರೂಪಾಕ್ಷ - ಪಂಪಾಂಬಿಕೆಯರ ವಿವಾಹ ಮಹೋತ್ಸವವನ್ನು ವಿವರಿಸುವ ವರ್ಣಚಿತ್ರವೂ ಈಗಲೂ ಕಾಣಬರುತ್ತಿದ್ದು ಅದು ಕವಿ ಹರಿಹರದೇವನ ವರ್ಣನೆಗಳನ್ನನುಸರಿಸಿ ಚಿತ್ರಿತವಾಗಿದೆ ಎಂದು ಹೇಳಬಹುದು. ಹಾಗೆಯೇ ಮನ್ಮಥ ದಹನದ ಚಿತ್ರವೂ ಇದೆ. ಅಲ್ಲದೆ ಹಂಪೆಯ ಹಿರಿಯಮಠದಲ್ಲಿ ಧರ್ಮಾಧಿಕಾರಿಯಾಗಿದ್ದ ಕವಿ ವಿರೂಪಾಕ್ಷ ಪಂಡಿತನು ತನ್ನ "ಚನ್ನಬಸವ ಪುರಾಣ" ಎಂಬ ಗ್ರಂಥದಲ್ಲಿ, ಇದೇ ಸ್ಥಳ ಪುರಾಣವನ್ನು ನಾಲ್ಕು ಸಂಧಿಗಳಲ್ಲಿ ಪುನಃ ವರ್ಣನಾತ್ಮಕವಾಗಿ, ಕ್ರಿ. ಶ. ೧೫೮೪ರಲ್ಲಿ ವಿವರಿಸಿರುತ್ತಾನೆ. ಇದೇ ವಿಷಯಗಳು ಆನೆಗೊಂದಿಯಲ್ಲಿ ದೊರೆತ ಒಂದು ತಾಮ್ರಪಟ ಶಾಸನದಲ್ಲಿಯೂ ವರ್ಣಿತವಾಗಿವೆ.

* * * * *

ಯಾವುದೇ ಒಂದು ಪುರಾತನ ದೇವಮಂದಿರ, ಅದರ ಸಮುಚ್ಚಯದ ಭಾಗ ಅಥವಾ ಇನ್ನಾವುದೇ ಕಟ್ಟಡಗಳ ಕಾಲವನ್ನು ನಿರ್ಣಯಿಸುವಲ್ಲಿ, ಅವುಗಳಲ್ಲಿ ಅನುಸರಿಸಲಾಗಿರುವ ವಾಸ್ತು ಶೈಲಿ ಹಾಗೂ ಲಭ್ಯವಿದ್ದಲ್ಲಿ ಶಾಸನಾಧಾರಗಳು, ಲಿಪಿ ಮತ್ತು ಅದರ ಶೈಲಿಗಳು ಸ್ಥಳೀಯ ಸಾಹಿತ್ಯ ಮತ್ತು ಕಲಾಶೈಲಿ, ಈ ದಿಕ್ಕಿನಲ್ಲಿ ಸಹಾಯಕ್ಕೆ ಬರುತ್ತವೆ. ನಮಗೆಲ್ಲಾ ತಿಳಿದಿರುವಂತೆ ಯಾವುದೇ ಒಂದು ಶಿಲ್ಪವು ರೂಪು ತಳೆಯಬೇಕಾದರೆ, ಶಿಲ್ಪಿಯು ಲಿಖಿತ ಸಾಹಿತ್ಯವನ್ನು ಆಧಾರವಾಗಿಟ್ಟುಕೊಂಡು ಕಾರ್ಯಪ್ರವೃತ್ತನಾಗುತ್ತಿದ್ದನು. ಆ ಸಾಹಿತ್ಯವು ಪುರಾತನ ಕಾಲದಿಂದ ಪರಂಪರಾಗತವಾಗಿ ಲಭ್ಯವಿರುವ ವಾಸ್ತು, ಶಿಲ್ಪಶಾಸ್ತ್ರ ಗ್ರಂಥಗಳೇ ಆಗಿರಬಹುದು ಮತ್ತು ಸ್ಥಳೀಯ ಭಾಷೆಗಳಲ್ಲಾಗಲೀ, ಸಂಸ್ಕೃತದಲ್ಲಾಗಲೀ ರಚಿತವಾದವುಗಳಾಗಿರಬಹುದು.

ಪ್ರಸ್ತುತದಲ್ಲಿ ಕನ್ನಡ ಸಾಹಿತ್ಯವು ಅಂತಹ ಹಲವು ಪ್ರಸಂಗಗಳಲ್ಲಿ ಹೇಗೆ ಸಹಾಯವಾಗುತ್ತದೆಂಬುದನ್ನು ತಿಳಿಯೋಣ. ಕುಮಾರವ್ಯಾಸನು ರಚಿಸಿರುವ "ಭಾರತ ಕಥಾಮಂಜರಿ" ಅಥವಾ 'ಗದುಗಿನ ಭಾರತ'ವು ಸಂಸ್ಕೃತ ಮಹಾಭಾರತವನ್ನು ಆಧಾರವಾಗಿಟ್ಟುಕೊಂಡು ಬರೆಯಲಾಗಿದ್ದರೂ ಅದರ ಪಡಿಯಚ್ಚಲ್ಲ ಅಥವಾ ಸರಳಾನುವಾದವೂ ಅಲ್ಲ. ಏಕೆಂದರೆ, ಕೆಲವೆಡೆ ಸ್ವತಂತ್ರ ಕಲ್ಪನಾ ಸಾಮರ್ಥ್ಯದಿಂದ ಮೂಲದಲ್ಲಿಲ್ಲದ ಪ್ರಸಂಗಗಳನ್ನು ಕವಿಯು ಸೃಷ್ಟಿಸಿ, ಕಥೆಯನ್ನು ವಿಸ್ತರಿಸಿ ನಿರೂಪಿಸಿರುತ್ತಾನೆ. ಉದಾಹರಣೆಗೆ,

ಸಭಾಪರ್ವದ ಏಳನೆಯ ಸಂಧಿ (ಹೆಚ್ಚುವರಿ ಸಂಧಿ)ಯಲ್ಲಿ ರಾಜಸೂಯಯಾಗದ ಸಂದರ್ಭದಲ್ಲಿ ಪುರುಷಾಮೃಗದ ವಿಷಯವು ವರ್ಣಿತವಾಗಿದೆ. ಅದರ ಪ್ರಕಾರ ಪುರುಷಾಮೃಗವು ಹೇಮಾಚಲದ ದಕ್ಷಿಣದಿಗುತಟದ ಮಾನಸ ಸರೋವರದ ತೀರದಲ್ಲಿ ಹರನನ್ನು ನಿತ್ಯವೂ ಅರ್ಚಿಸುವುದರಲ್ಲಿ ನಿರತವಾಗಿ, ಸದಾ ಶಿವಧ್ಯಾನಾಸಕ್ತವಾಗಿರುತ್ತಿತ್ತು. ಕುಮಾರವ್ಯಾಸನ ಆ ವರ್ಣನೆಯಿಂದ ಪ್ರೇರಿತನಾದ ವಿಜಯನಗರದ ಶಿಲ್ಪಿಯು ತನ್ನ ಕಲಾಕೃತಿಗಳಲ್ಲಿ ಅದರ ಪ್ರತಿರೂಪವನ್ನು ಪರಿಚಯಿಸಿರುತ್ತಾನೆ. ಸಾಮಾನ್ಯವಾಗಿ, ಆ ಶಿಲ್ಪಗಳು ಹೆಸರಿಗೆ ಅನ್ವರ್ಥವಾಗುವಂತೆ, ಕೆಳಗಿನ ಅರ್ಧ ಭಾಗವು ಮೃಗ (ಇಲ್ಲಿ ಸಿಂಹ ಅಥವಾ ಹುಲಿ)ವನ್ನು ಹೋಲುವಂತಿದ್ದರೆ, ಮೇಲಿನ ಭಾಗವು ಗಡ್ಡ ಮೀಸೆಗಳನ್ನು ಹೊಂದಿರುವ ಮತ್ತು ಕಿರೀಟಧಾರಿ ಮಾನವನದಾಗಿರುತ್ತದೆ. ಆ ಕಾರಣಕ್ಕಾಗಿ ಅದರ ಎಡದ ಕೈಯಲ್ಲಿ ಒಂದು ಘಂಟೆಯನ್ನು, ಬಲದ ಕೈಯಲ್ಲಿ ಧೂಪಾರತಿಯ ಸಾಧನವನ್ನು ತೋರಿಸಲಾಗಿದೆ. ಹಂಪೆಯಲ್ಲಿ ಈ ಶಿಲ್ಪಾಕೃತಿಗಳು ವಿರೂಪಾಕ್ಷಸ್ವಾಮಿಯ ದೇವಸ್ಥಾನ, ಕಡಲೇಕಾಳು ಗಣೇಶನ ಗುಡಿ ಮುಂತಾದ ಹಲವೆಡೆ, ಕಂಭಗಳ ಮೇಲೆ ಉಬ್ಬುಶಿಲ್ಪಗಳಾಗಿ ಕಾಣಬರುತ್ತವೆ.

*ಈ ಪುರುಷಾಮೃಗದ ಪ್ರಸಂಗವಾಗಲೀ, ವರ್ಣನೆಯಾಗಲೀ ಮೂಲದ ಮಹಾಭಾರತದಲ್ಲಿ ಇಲ್ಲವೇ ಇಲ್ಲ. ಅದು ಕುಮಾರವ್ಯಾಸನಿಂದಾಗಿ ಪ್ರಚಲಿತದಲ್ಲಿ ಬಂದಿತು. ಆ ಕಾರಣದಿಂದಾಗಿ ಪುರುಷಾಮೃಗದ ಶಿಲ್ಪಾಕೃತಿಯು ಎಲ್ಲೆಲ್ಲಿ ಕಾಣಬರುತ್ತದೆಯೋ, ಆ ವಾಸ್ತು ನಿರ್ಮಾಣವು ಕವಿ ಕುಮಾರವ್ಯಾಸನ ಕಾಲದಿಂದೀಚೆಗೆ ನಿರ್ಮಿತವಾದುದೆಂದು ಖಚಿತವಾಗಿ ಹೇಳಬಹುದಲ್ಲವೇ?*

ಅದೇ ರೀತಿ ***'ಸೋಮವಲ್ಲಿ – ಯೋಗಾನಂದ'*** ವೆಂಬ ಪ್ರಹಸನದಲ್ಲಿ ಬರುವ ದೃಶ್ಯಗಳನ್ನು ಕುರಿತೂ ಹೇಳಬಹುದು. ಆ ಪ್ರಹಸನವು ವಿಜಯನಗರದ ಅರಸ ಪ್ರೌಢದೇವರಾಯನ ಆಸ್ಥಾನ ಕವಿಗಳಲ್ಲೊಬ್ಬನಾದ ತಮಿಳು ದೇಶದ ಅರುಣಗಿರಿನಾಥನಿಂದ ಸಂಸ್ಕೃತ ಭಾಷೆಯಲ್ಲಿ ರಚಿತವಾದ ಕೃತಿ. ಅದು ಯೋಗಾನಂದನೆಂಬ ಒಬ್ಬ ಸನ್ಯಾಸಿಗೂ ಮತ್ತು ಸೋಮವಲ್ಲಿ ಎಂಬ ಒಬ್ಬ ವಿವಾಹಿತ ಸ್ತ್ರೀಗೂ ಇದ್ದ ಅನೈತಿಕ ಸಂಬಂಧದ ಸುತ್ತ ಹೆಣೆದ ಪ್ರಹಸನವಾಗಿದೆ. ಆ ಕಥೆಗೆ ಸಂಬಂಧಿಸಿದಂತೆ ಕಲ್ಲಿನಲ್ಲಿ ಕಡೆಯಲಾಗಿರುವ ಎರಡು ಕ್ರಮಾನುಗತ ದೃಶ್ಯಗಳನ್ನು ಹಂಪೆಯ ವಿರೂಪಾಕ್ಷ ದೇವಾಲಯದ ಹೊರಗೋಡೆಯ ಮೇಲೆ ಮತ್ತು ವಿಠಲಸ್ವಾಮಿ ದೇವಾಲಯದ ಆವರಣದಲ್ಲಿರುವ ವಸಂತ ಮಂಟಪದ ಅಧಿಷ್ಠಾನದ ಮೇಲೆ ಗುರುತಿಸಲಾಗಿದೆ. ಆ ಕಾರಣದಿಂದಾಗಿ, *ಆ ಎರಡೂ ಕಟ್ಟಡಗಳ ನಿರ್ಮಾಣ ಕಾಲವು ಪ್ರೌಢದೇವರಾಯನ ಕಾಲದಲ್ಲಾಗಲೀ ಅಥವಾ ಆನಂತರದವುಗಳೆಂದು ತರ್ಕಬದ್ಧವಾಗಿ ಹೇಳಬಹುದಲ್ಲವೇ?* ಆ ಶಿಲ್ಪ ದೃಶ್ಯಗಳಿರುವ ಕಟ್ಟಡದಲ್ಲಿ ಕಾಣಬರುತ್ತಿರುವ ಇತರ ವಾಸ್ತು ವೈಶಿಷ್ಟ್ಯಗಳೂ ಆ ಕಾಲಗಣನೆಗೆ ಅನುಗುಣವಾಗಿದ್ದು ಮೇಲಿನ ತರ್ಕವನ್ನು ಸಮರ್ಥಿಸುತ್ತವೆ.

ಅದೇ ರೀತಿಯಲ್ಲಿ ನಮಗೆಲ್ಲಾ ವೇದ್ಯವಿರುವಂತೆ, ವಿಜಯನಗರದಿಂದ ತಮ್ಮ ಸಾಮ್ರಾಜ್ಯವನ್ನಾಳಿದ ಸಾಳುವ ಮತ್ತು ತುಳುವ ವಂಶದ ಅರಸರು ಶ್ರೀವೈಷ್ಣವ ಧರ್ಮಕ್ಕೆ ವಿಶೇಷವಾದ ರಾಜಮನ್ನಣೆ, ಪ್ರೋತ್ಸಾಹಗಳನ್ನು ಉದಾರವಾಗಿ ಕೊಡಲಾರಂಭಿಸಿದರು. ಆ ಕಾರಣಗಳಿಂದಾಗಿ, ಶ್ರೀವೈಷ್ಣವ ಧರ್ಮವು ಹಂಪೆಯ ಪ್ರದೇಶಕ್ಕೆ ಹೊರಗಿನಿಂದ ಮತ್ತು ಹೊಸತಾಗಿ ಬಂದ ಧರ್ಮವಾಗಿದ್ದರೂ ಅದು ಬಹು ಶೀಘ್ರದಲ್ಲಿಯೇ ಜನಾದರಣೀಯವಾಯಿತು. ಹಾಗೂ ಹೆಚ್ಚಿನ ಪ್ರಚಾರವನ್ನು ಪಡೆಯುವಲ್ಲಿ ಸಫಲವಾಯಿತು. ಅದರ ಪರಿಣಾಮವಾಗಿ ಶ್ರೀವೈಷ್ಣವ ಧರ್ಮಾನುಯಾಯಿಗಳಾದ ಆಳ್ವಾರರುಗಳ ಶಿಲಾ ಮೂರ್ತಿಗಳೂ ಅಲ್ಲಲ್ಲಿ ಸ್ಥಾಪನೆಗೊಂಡವು; ಮತ್ತು ಮಂದಿರಗಳೂ ಅಸ್ತಿತ್ವಕ್ಕೆ ಬಂದುವು. ಅಲ್ಲದೆ, ಅವರ ಧಾರ್ಮಿಕ ಸಂಕೇತಗಳಾದ 'ವಡಗಲೈ' ಮತ್ತು 'ತೆಂಗಲೈ' ತ್ರಿಪುಂಡ್ರಗಳು (ನಾಮಗಳು), ದೇವಾಲಯಗಳ ಮತ್ತು ಮಂಟಪಗಳ ಕಂಭಗಳ ಮೇಲೆ ಕೆತ್ತಲ್ಪಟ್ಟು ಈಗಲೂ ಅಲ್ಲಲ್ಲಿ ಕಾಣಬರುತ್ತವೆ. ಆದುದರಿಂದ, ಆ ಶ್ರೇಣಿಯ ಶಿಲ್ಪ ಕಲಾಕೃತಿಗಳು, ಹಂಪೆಯ ಯಾವ ಮಂದಿರ ಅಥವಾ ಮಂಟಪಗಳಲ್ಲಿ ಕಾಣಬರುತ್ತವೆಯೋ, ಅವುಗಳ ನಿರ್ಮಾಣ ಕಾಲವನ್ನು ಈ ಪ್ರಮಾಣಾಧಾರದಿಂದ ೧೬ನೇ ಶತಮಾನವೆಂದು ನಿರ್ಧರಿಸಬಹುದು.

* * * * *

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗಿಂತ ಕೆಲವೇ ವರ್ಷಗಳ ಹಿಂದೆ ಇದ್ದ ಕುಮ್ಮಟ-ಕಂಪಿಲ ರಾಜ್ಯದ ನಿವೇಶನಗಳು, ಚರಿತ್ರೆ ಮುಂತಾದ ವಿವರಣೆಗಳನ್ನು ತಿಳಿಯಲು ಮುಖ್ಯ ಆಕರಗಳೆಂದರೆ ವಿಜಯನಗರ ಕಾಲದಲ್ಲಿ ರಚಿತವಾದ *ರಾಮನಾಥಚರಿತೆ, ಚನ್ನಬಸವಪುರಾಣ* ಮತ್ತು *ಕುಮಾರರಾಮನ ಸಾಂಗತ್ಯ* ಎಂಬ ಕನ್ನಡ ಸಾಹಿತ್ಯ ಕೃತಿಗಳು.

* * * * *

ಹಾಗೆಯೇ, ಮಧುರ ಕವಿಯು ಕ್ರಿ. ಶ. ೧೪೧೦ ರಲ್ಲಿ ರಚಿಸಿದ ಒಂದು ಶಿಲಾಶಾಸನೋಕ್ತ ಸಾಹಿತ್ಯವು ವಿಜಯನಗರದ ಅರಸರು ನೀರಾವರಿ ಆಧಾರಿತ ಕೃಷಿಯಲ್ಲಿ ಹೆಚ್ಚಿನ ಆಸಕ್ತಿ ಮತ್ತು ಪ್ರೋತ್ಸಾಹಗಳನ್ನು ತೋರಿಸಿ, ರಾಜ್ಯದ ಸರ್ವತೋಮುಖ ಸಂಪದಭಿವೃದ್ಧಿಗೆ ಕಾರಣರಾದರೆಂದು ಸೂಚಿಸುತ್ತದೆ.

* * * * *

ಈಗ ಕನ್ನಡ ಸಾಹಿತ್ಯ ಗ್ರಂಥಗಳಲ್ಲಿ ಕಾಣಬರುವ ಹಲವಾರು ವಿವರಣೆಗಳು, ಹಂಪೆ-ವಿಜಯನಗರದ ಬಹು ವಿಧ ಪುರಾತತ್ವ ಅಂಶಗಳ ಅಧ್ಯಯನಕ್ಕೆ, ಅದರ ಸಮ್ಮಿಶ್ರ ಸಮಾಜದ ರಚನೆ ಮತ್ತು ರೂಪು ತಿಳಿಯಲು ಹಾಗೂ ಬಹು ಪ್ರಕಾರದ

ಸಂಸ್ಕೃತಿ ಸಾಧನೆಗಳನ್ನು ಗ್ರಹಿಸಲು, ಹೇಗೆ ಸಹಾಯವಾಗುತ್ತದೆಂಬುದನ್ನು ಕೆಲವು ಉದಾಹರಣೆಗಳಿಂದ ತಿಳಿಯೋಣ. (ಇಲ್ಲಿ ವಿವರಿಸಲಾಗುತ್ತಿರುವ ಹಲವು ವಿಷಯಗಳು ಈಗಾಗಲೇ ಬೇರೆಡೆ ಪ್ರಕಟವಾಗಿವೆ.)

ಹಂಪೆಯ ಉದ್ದಾನ ವೀರಭದ್ರಸ್ವಾಮಿಯ ದೇವಮಂದಿರದಲ್ಲಿ ವಿಶಿಷ್ಟ ರೇಖಾಚಿತ್ರಗಳಿರುವ ಕಪ್ಪು ಶಿಲಾಲಿಂಗವೊಂದಿದೆ. ಅದು ವೃತ್ತಾಕಾರದಲ್ಲಿರದೆ ತ್ರಿಕೋಣಾಕಾರದಲ್ಲಿದ್ದು ಚಪ್ಪಟೆಯಾಕಾರದ ಮೂರು ಪಟ್ಟಿಗಳನ್ನು ಹೊಂದಿರುತ್ತದೆ. ಮತ್ತು ಪ್ರತಿಯೊಂದು ಪಟ್ಟಿಯ ಮೇಲೆ ಮೂರು ಚಕ್ರಗಳಂತೆ, ಒಟ್ಟಿನಲ್ಲಿ ಒಂಬತ್ತು ಚಕ್ರಗಳ/ಯಂತ್ರಗಳ ನಕ್ಷೆಗಳನ್ನು ರೇಖಾಚಿತ್ರಗಳೋಪಾದಿಯಲ್ಲಿ ಒಂದು ವಿಶಿಷ್ಟ ಕ್ರಮಕ್ಕನುಗುಣವಾಗಿ ಬಿಡಿಸಲಾಗಿದೆ. ಆ ಚಕ್ರಗಳು ಮತ್ತು ಶಿರೋಭಾಗಗಳಲ್ಲಿ ಕಾಣಬರುವ ೩೬ ಬದ್ಬುದಾಕಾರಗಳು, ವೀರಶೈವಧರ್ಮವು ಪ್ರತಿಪಾದಿಸಿರುವ ಷಟ್‌ಚಕ್ರ - ಷಟ್‌ಸ್ಥಲ ಸಿದ್ಧಾಂತವನ್ನು ವಿವರಿಸುತ್ತವೆಂದು ಸಂಕ್ಷಿಪ್ತವಾಗಿ ಹೇಳಬಹುದು. ಅಲ್ಲಿ ಪ್ರತಿಪಾದಿತವಾಗಿರುವ ಸಿದ್ಧಾಂತದ ಸವಿಸ್ತಾರವಾದ ವಿವರಣೆಗಳನ್ನು ಶಿವಯೋಗಿ ಶಿವಾಚಾರ್ಯರ 'ಸಿದ್ಧಾಂತ ಶಿಖಾಮಣಿ'ಯಲ್ಲಿ, ಹಂಪೆಯಲ್ಲಿಯೇ ವಾಸವಾಗಿದ್ದ ಕವಿ ವಿರೂಪಾಕ್ಷಪಂಡಿತನು ೧೫೮೫ರಲ್ಲಿ ರಚಿಸಿರುವ 'ಚನ್ನಬಸವ ಪುರಾಣ'ದ 'ಷಟ್‌ಸ್ಥಲ ನಿರ್ಣಯ' ಎಂಬ ೬೧ನೇ ಸಂಧಿಯಲ್ಲಿ, ಲಕ್ಕಣದಂಡೇಶನ 'ಶಿವತತ್ವ ಚಿಂತಾಮಣಿ' ಮತ್ತು ವೀರಶೈವ ಧರ್ಮದ ಅನೇಕ ಗ್ರಂಥಗಳಲ್ಲಿ ಕಾಣಬಹುದು. ಈ ಅಪೂರ್ವವಾದ ಲಿಂಗದ ಉದಾಹರಣೆಯಿಂದಾಗಿ, ವಿಜಯನಗರ ಕಾಲದ ಸಮಾಜದಲ್ಲಿ ವೀರಶೈವರು ಒಂದು ಗಣನೀಯ ಪ್ರಮಾಣದ ಅಂಗವಾಗಿದ್ದರಲ್ಲದೆ, ತಮ್ಮ ಧರ್ಮವನ್ನು ಪ್ರಚಾರ ಮಾಡಿ ಊರ್ಜಿತದಲ್ಲಿರಿಸಿಕೊಳ್ಳುವಲ್ಲಿ ಕಾರ್ಯತತ್ಪರರಾಗಿದ್ದರೆಂದು ತಿಳಿಯುತ್ತದೆ.

ಈಗ ಕವಿ ಹರಿಹರದೇವನ ಸಮಕಾಲೀನನೂ, ಹಂಪೆಯ ಕ್ಷೇತ್ರದಲ್ಲಿಯೇ ವಾಸವಾಗಿದ್ದವನೂ ಆದ ರಾಘವಾಂಕನು ರಚಿಸಿರುವ 'ಸಿದ್ಧರಾಮ ಚರಿತೆ' ಎಂಬ ಕವಿತಾ ಗ್ರಂಥದ ಸಾಹಿತ್ಯವು, ನಂತರದ ವಿಜಯನಗರದ ಶಿಲ್ಪಿಗೆ ಹೇಗೆ ವಾಸ್ತು ವಿಷಯವನ್ನೊದಗಿಸಿತು ಮತ್ತು ಅದನ್ನಾಧರಿಸಿ ಒಂದು ಅಪೂರ್ವ ಶಿಲ್ಪದ ನಿರ್ಮಾಣಕ್ಕೆ ಹೇಗೆ ಪ್ರೇರಣೆಯಾಯಿತೆಂದು ಸಂಧಿ ೩, ಪದ್ಯ ೨೦, ೨೧ರಿಂದ ತಿಳಿದುಬರುತ್ತದೆ.

ಹಂಪೆಯ ಉದ್ದಾನ ವೀರಭದ್ರಸ್ವಾಮಿ ದೇವಸ್ಥಾನದ ಪ್ರಾಕಾರದಲ್ಲಿ ನಿಲ್ಲಿಸಿರುವ ದೀಪ ಸ್ತಂಭದ ಮೇಲೆ, ಒಂದು ಪೀಠಸ್ಥ ಲಿಂಗಕ್ಕೆ ಇನ್ನೊಂದು ಪೀಠಸ್ಥ ಲಿಂಗವು ಆಧಾರವಾಗಿರುವಂತೆ, ಒಂದು ಉಬ್ಬುಶಿಲ್ಪವು ಕಾಣಬರುತ್ತದೆ. ಈ ವಿನೂತನ ಶಿಲ್ಪವು ಅಸ್ತಿತ್ವಕ್ಕೆ ಬರಲು ಸೊನ್ನಲಾಪುರದ ಶರಣ ಸಿದ್ಧರಾಮನ ಜೀವಿತದ ಘಟನೆಯೊಂದು ಕಾರಣವಾಯಿತೆಂಬ ವಿಷಯವನ್ನು ಮೇಲಿನ ಗ್ರಂಥದಲ್ಲಿ ವಿವರಿಸಲಾಗಿದೆ ಎಂದರೆ ಸಿದ್ಧರಾಮನ ಆರಾಧ್ಯ ದೈವವಾಗಿದ್ದ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯು ಸಿದ್ಧರಾಮನನ್ನು ಕುರಿತು ಸೊನ್ನಲಾಪುರಕ್ಕೆ ಹೋಗಿ, ನಿರ್ದಿಷ್ಟವಾದ ಮಂದಾರ ವೃಕ್ಷವೊಂದರ ಕೆಳಗೆ ಒಂದು ಪೀಠಸ್ಥ ಲಿಂಗವನ್ನು ಪ್ರತಿಷ್ಠಾಪಿಸಬೇಕು ಮತ್ತು ಸ್ವಲ್ಪ ಸಮಯದ ನಂತರ ಆ ಲಿಂಗದ ಮೇಲೆಯೇ ತನ್ನನ್ನೇ, ಮಲ್ಲಿಕಾರ್ಜುನಸ್ವಾಮಿಯನ್ನೇ ಇನ್ನೊಂದು ಲಿಂಗರೂಪದಲ್ಲಿ ಪ್ರತಿಷ್ಠಾಪನೆಗೊಳ್ಳಲು ಕಾರಣನಾಗಬೇಕೆಂದು ಮುಂತಾಗಿ ಆದೇಶಿಸಿರುತ್ತಾನೆ. ಆ ಪ್ರಸಂಗವೇ ಈ ಅಪೂರ್ವ ಶಿಲ್ಪ ಸಂಯೋಜನೆಗೆ ಪ್ರೇರಣೆಯಾಗಿದೆ.

ಹಂಪೆಯ ಕವಿ ಹರಿಹರದೇವನು ರಚಿಸಿದ 'ಗಿರಿಜಾ ಕಲ್ಯಾಣ' ವೆಂಬ ಸಾಹಿತ್ಯ ಗ್ರಂಥದಲ್ಲಿ ಕಾಣಬರುವ ವಿವರಣೆಗಳಿಗನುಗುಣವಾಗಿ ರೂಪುಗೊಂಡ ಇನ್ನೊಂದು ಅಪರೂಪದ ಶಿಲ್ಪಾಕೃತಿಯು ಅಸ್ತಿತ್ವಕ್ಕೆ ಬರುವಂತಾಯಿತು. ಹಿಂದೂ ಶಿಲ್ಪ ಶಾಸ್ತ್ರಾಭ್ಯಾಸಿಗಳಿಗೆ ವೇದ್ಯವಿರುವಂತೆ *ಅಷ್ಟತನುಮೂರ್ತಿ ಶಿವನ ಸಾಕಾರ ರೂಪದ ಶಿಲ್ಪಗಳು ವಿರಳ.* ಹೆಸರೇ ಸೂಚಿಸುವಂತೆ, ಆ ಶಿಲ್ಪವು ಎಂಟು ತನುಗಳನ್ನು ಅಥವಾ ಸೂಕ್ಷ್ಮ ದರ್ಶನಾಕಾರಗಳನ್ನು ಹೊಂದಿರುವಂತೆ ರೂಪಿತವಾಗಿರುತ್ತದೆ. ಅಂದರೆ ***ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ಯಜಮಾನ (ಆಚಾರ್ಯ) ಅವೇ ಆ ಎಂಟು ತನುಗಳು.*** ಪೂರ್ವದ ಕಾರಣಾಗಮ, ಲಿಂಗಪುರಾಣ ಮುಂತಾದ ಗ್ರಂಥಗಳಲ್ಲಿ ನಿರ್ದೇಶಿಸಲಾಗಿರುವಂತೆ, ಮೇಲಿನ ಎಂಟು ತನುಗಳನ್ನು ಪ್ರತಿಪಾದಿಸುವಂತೆ, ಪ್ರತ್ಯೇಕವಾಗಿ ಎಂಟು ಬೇರೆ ಬೇರೆ ಶಿವನ ಮೂರ್ತಿಗಳನ್ನು ನಿರ್ಮಿಸಿ, ಅವುಗಳನ್ನು ಉಪದೇವತೆಗಳಾಗಿ ಶಿವ ದೇವಸ್ಥಾನಗಳಲ್ಲಿ ಸ್ಥಾಪಿಸಿರಬೇಕು. ಆದರೆ ವೀರಶೈವ ತತ್ವಜ್ಞಾನಿಗಳು ಆ ಎಂಟು ತತ್ವಗಳನ್ನಾಧರಿಸಿ ಶಿವನ ಸಂಯುಕ್ತ ಸಾಕಾರ ರೂಪಕ್ಕೆ ತಮ್ಮದೇ ಆದ ಸ್ವರೂಪವನ್ನು ಕಲ್ಪಿಸಿ ವರ್ಣಿಸಿರುತ್ತಾರೆ. ಅದಕ್ಕನುಗುಣವಾಗಿ, ಹಂಪೆಯ ಕವಿ ಹರಿಹರದೇವನು ತನ್ನ ಆರಾಧ್ಯ ದೈವವಾಗಿದ್ದ ಪಂಪಾಪುರದರಸ ವಿರೂಪಾಕ್ಷ ಸ್ವಾಮಿಯನ್ನೇ ಅಷ್ಟತನುಮೂರ್ತಿ ಸ್ವರೂಪನೆಂದು, ಅತಿಶಯವಾದ ಭಾವುಕತೆ ಮತ್ತು ಭಕ್ತಿಯಿಂದ ಗುರುತಿಸಿ ತನ್ನ 'ಗಿರಿಜಾ ಕಲ್ಯಾಣ' ಎಂಬ ಗ್ರಂಥದ ಮೊದಲನೆಯ ಪದ್ಯದಲ್ಲಿಯೇ ಕೊಂಡಾಡಿರುತ್ತಾನೆ. ಆ ವಿವರಣೆಗಳನ್ನು ಒಂದೇ ಶಿಲ್ಪದಲ್ಲಿ ಅಳವಡಿಸಿ ಅತಿ ಚತುರತೆಯಿಂದ ನಿರೂಪಿತವಾಗಿರುವ ***ಅಷ್ಟತನುಮೂರ್ತಿ ಪಂಪಾವಿರೂಪಾಕ್ಷನ*** ಶಿಲ್ಪವೊಂದು ಈಗ ಹಂಪೆಯ ಪುರಾತತ್ವ ಸಂಗ್ರಹಾಲಯದಲ್ಲಿ ಪ್ರದರ್ಶಿತವಾಗಿದೆ. ಈ ಶಿಲ್ಪವು, ಶರಣ ಕವಿ ಹರಿಹರದೇವನು ಕಲ್ಪಿಸಿಕೊಂಡು ವರ್ಣಿಸಿರುವಂತೆ ಪಂಪಾವಿರೂಪಾಕ್ಷನ ಸಾಕಾರರೂಪದ ದೇವಮಾನವ ಶಿಲ್ಪವಾಗಿರುವುದಲ್ಲದೆ, ಮೇಲೆ ಹೇಳಿದ ತಾತ್ವಿಕಾರ್ಥಗಳನ್ನು ನಿರೂಪಿಸುವಂತಹ ಅಪೂರ್ವ ಶಿಲ್ಪಕಲಾಕೃತಿಯಾಗಿದೆ.

ಹಂಪೆಯ ಪರಿಸರದಲ್ಲಿರುವ ಅಂಜನಾದ್ರಿಯೇ

ಹನುಮಂತನ ಜನ್ಮ ಸ್ಥಳ ಮತ್ತು ಆತನು ವಾಸವಾಗಿದ್ದ ಕಿಷ್ಕಿಂಧೆಯು ಇದೇ ಪ್ರದೇಶವೆಂದು, ಜನ ಜನಿತವಾಗಿರುವ ಪೌರಾಣಿಕ ವದಂತಿ, ನಂಬುಗೆಗಳಿಂದಾಗಿ, ಇಲ್ಲಿ ವಿಜಯನಗರದ ಸ್ಥಾಪನೆಯಿಂದೀಚೆಗೆ ಹನುಮಂತನ ವಿಗ್ರಹಾರಾಧನೆ ಮತ್ತು ಉಪಾಸನೆ ಬಹು ಜನಾದರಣೀಯವಾದ ಕಾರಣದಿಂದಾಗಿ ಹನುಮಂತನ ಶಿಲಾಮೂರ್ತಿಗಳು ಅತ್ಯಂತ ಹೆಚ್ಚು, ನೂರಾರು ಸಂಖೆಯಲ್ಲಿ, ಈ ಹಂಪೆ ನಿವೇಶನದಲ್ಲಿ ರೂಪು ತಳೆದಿವೆ. ಅವುಗಳ ಆಕಾರ, ಸ್ವರೂಪ, ಪ್ರಮಾಣಗಳು ಮತ್ತಿತರ ವಿವರಗಳು ಅಷ್ಟೇ ವೈವಿಧ್ಯ ಮಯವಾಗಿವೆ. ಈಗ ಸಾಮಾನ್ಯ ಮೂರ್ತಿಗಳಿಂದ ಭಿನ್ನವಾದ ಹಲವನ್ನು ಕುರಿತು ಪರಿಶೀಲಿಸೋಣ.

ಚತುರ್ಭುಜನಾಗಿರುವ ಒಂದು ಹನುಮಂತ (ರಘುನಂದನ ತೀರ್ಥರ ವೃಂದಾವನದ ಒಂದು ಕಲ್ಲಿನ ಮೇಲಿದೆ) ಮೂರ್ತಿಯ ಹಿಂದಿನ ಕೈಗಳಲ್ಲಿ ಶಂಖ, ಚಕ್ರಗಳಿದ್ದರೆ, ಮುಂದಿನ ಕೈಗಳಲ್ಲಿ ಪುಸ್ತಕ ಮತ್ತು ಗದೆಗಳಿವೆ. ಹಾಗಾಗಿ ಇದು ರಾಮಾಯಣದ ಆಂಜನೇಯ, ಮಹಾಭಾರತದ ಭೀಮ ಮತ್ತು ಆಚಾರ್ಯತ್ರಯರ ಲ್ಲೊಬ್ಬರಾದ ಮಧ್ವಾಚಾರ್ಯರು, ಈ ಮೂವರನ್ನು ಪ್ರತಿನಿಧಿ ಸುತ್ತದೆಂದು ಸೋಮನಾಥ ಕವಿ ರಚಿತ ವ್ಯಾಸಯೋಗಿಚರಿತದಲ್ಲಿ ವ್ಯಾಖ್ಯಾನ ಮಾಡಲಾಗಿದೆ.

ಹನುಮಂತನು ಅಸಾಮಾನ್ಯ ಮತ್ತು ಅದ್ಭುತವಾದ ಶಕ್ತಿಯನ್ನು ಹೊಂದಿದ್ದನೆಂಬ ಜನಜನಿತವಾದ ಪುರಾಣಾಂತರ್ಗತ ಮತ್ತು ಜಾನಪದ ಅಭಿಪ್ರಾಯವನ್ನು ಪ್ರದರ್ಶಿಸಲೋಸುಗ, ವಿಜಯ ನಗರದ ಶಿಲ್ಪಿಯು ಹನುಮಂತನು ಸಂಜೀವಿನಿ ಪರ್ವತವೊಂದಕ್ಕೆ ಬದಲಾಗಿ ನಾಲ್ಕು ದೊಡ್ಡ ಪರ್ವತಗಳನ್ನು ತನ್ನ ಎರಡು ಕೈಗಳಲ್ಲಿ ಮತ್ತು ಎರಡು ಪಾದಗಳ ಮೇಲೆ ಒಂದೊಂದರಂತೆ ಹೊತ್ತು ಕೊಂಡು ಹಾರಿ ಹೋಗುತ್ತಿರುವಂತೆ ತೋರಿಸಿರುತ್ತಾನೆ. ಎಂದರೆ ವಿಜಯನಗರದ ಶಿಲ್ಪಿಗಳು ಪರಂಪರಾಗತವಾಗಿ ಬಂದ ಕ್ರಮಗಳಿಂದ ಸ್ವಲ್ಪ ಬದಲಾವಣೆಗಳೊಂದಿಗೆ, ತಮ್ಮದೇ ಆದ ವ್ಯಾಖ್ಯಾನ, ಅಭಿಪ್ರಾಯಗಳಿಗೆ ರೂಪು ಕೊಡುವುದಕ್ಕೆ ಮುಂದಾಗುತ್ತಿದ್ದರು.

ಇನ್ನೊಂದು ಸ್ವಾರಸ್ಯಕರವಾದ ಉದಾಹರಣೆಯಲ್ಲಿ, ಹನುಮಂತನ ಮೂರ್ತಿಯು ತನ್ನ ಎರಡೂ ಕೈಗಳಲ್ಲಿ, ಒಂದೊಂದರಂತೆ, ಎರಡು ಪೀಠಸ್ಥ ಲಿಂಗಗಳನ್ನು ಹಿಡಿದುಕೊಂಡು ಸಾಗುತ್ತಿರುವಂತೆ ಕಾಣಬರುತ್ತದೆ. ಇದನ್ನು ನಾಗೇನಹಳ್ಳಿಯ ರಂಗನಾಥ ದೇವಾಲಯ, ವಿಠಲ ದೇವಸ್ಥಾನ, ಪ್ರಸನ್ನ ವಿರೂಪಾಕ್ಷ ದೇವಾಲಯಗಳ ಕಂಬಗಳ ಮೇಲೆ ನೋಡಬಹುದು. ಇಲ್ಲಿಯ ಅಂತರ್ಗತ ವಿಷಯವನ್ನು ತಿಳಿಯಬೇಕಾದರೆ, ಬತ್ತಲೇಶ್ವರ ಕವಿ ವಿರಚಿತ ಕನ್ನಡ ಗ್ರಂಥ '*ಕೌಶಿಕ ರಾಮಾಯಣ*'ದ ಆಳನೇ ಸಂಧಿಯಲ್ಲಿ ಪ್ರಸ್ತಾಪವಾಗಿರುವ ಪ್ರಸಂಗವನ್ನು ಗಮನಿಸ ಬೇಕಾಗುತ್ತದೆ. ಆ ಸಂದರ್ಭ ಹೀಗಿದೆ. ರಾವಣನ ವಧೆಯಾದ ಸ್ಥಳದಲ್ಲಿ ಲಿಂಗವನ್ನು ಸ್ಥಾಪಿಸಿದರೆ ದುರಿತಕ್ಕೆ ಪರಿಹಾರವೆಂದು ಲಿಂಗವನ್ನು ತರುವ ಹೊಣೆಯನ್ನು ಮಾರುತಿಗೆ, ರಾಮನು ವಹಿಸುತ್ತಾನೆ. ರಾಮನ ಆಜ್ಞೆಯ ಪ್ರಕಾರ, ಹನುಮಂತನು ಉರಗಾಭರಣ ಲಿಂಗವನ್ನು ತರುತ್ತಾನೆ. ಮತ್ತೊಮ್ಮೆ ಶಿಲ್ಪಿಯು ಈ ಸಂದರ್ಭದಲ್ಲಿ ತನ್ನ ಸ್ವಂತ ವಿಚಾರಗಳಿಗನುಗುಣವಾಗಿ ಎರಡು ಲಿಂಗಗಳನ್ನು ಹನುಮಂತನು ಹೊತ್ತು ತರುವಂತೆ ತೋರಿಸಿರುತ್ತಾನೆ.

ಮೇಲೆ ಉಲ್ಲೇಖಿಸಿರುವ ಸಾಹಿತ್ಯಾಧಾರದಿಂದಲೇ, ಹಂಪೆಯಲ್ಲಿ ಚಕ್ರತೀರ್ಥದ ಸಮೀಪದಲ್ಲಿ ಬೃಹದಾಕಾರದ ಗುಂಡು ಬಂಡೆಯ ಮೇಲೆ, ಬಯಲಲ್ಲಿ ಕಾಣಬರುವ 'ಕೋಟಿಲಿಂಗ'ವೆಂದು ಕರೆಯಲಾಗಿರುವ ಲಿಂಗಗಳ ಸಮೂಹಗಳನ್ನು ಅರ್ಥ ಮಾಡಿಕೊಳ್ಳ ಬಹುದು. ಅದನ್ನು ತಿಳಿಸುವ ಪಠ್ಯ ಭಾಗವು:

*'....ಧರಣೀಧರ (ರಾಮನು) ತಾನೊಂದು ಭೂರುಹ ಲಿಂಗವನುಸವೆಯೆ। ವರಕಪೀಶ್ವರರೆಲ್ಲ ರಚಿಸಿದರಂದೆ ಕೋಟಿಯ ಲ್ಲೊಂದು ಕುಂದದೆ। (ಆಗ) ಶರಧಿ ತೀರವು ಲಿಂಗಮಯವಾಗಿ ರಂಜಿಸಿತು॥....'*

ಅದೇ ಕಥಾಭಾಗವು ಮತ್ತೂ ಮುಂದುವರಿದು ಹನುಮಂತನು ಲಿಂಗವನ್ನು ತರುವುದು ತಡವಾಯಿತಷ್ಟೆ. ಆಗಲೇ ಸ್ಥಾಪಿತವಾಗಿದ್ದ ಆ ಮಳಲಲಿಂಗ, ಕೋಟಿಲಿಂಗಗಳನ್ನು ನೋಡಿ ಕುಪಿತಗೊಂಡು, ಆ ಮಳಲಲಿಂಗವನ್ನು ಕಿತ್ತು ಬಿಸಾಡುವುದಾಗಿ ಹನುಮಂತನು ನಿರ್ಧರಿಸುತ್ತಾನೆ. ಆ ಉದ್ದೇಶದಿಂದ, ತನ್ನ ಬಾಲವನ್ನೆಲ್ಲಾ ಆ ಮಳಲಲಿಂಗಕ್ಕೆ ಸುತ್ತಿ ಎಳೆಯಲು ಪ್ರಯತ್ನಿಸು ತ್ತಾನೆ. ಆದರೆ ಸಾಧ್ಯವಾಗದೆ ಬಳಲಿ ಬೀಳುತ್ತಾನೆ. ಆಗ ಶಿವನು ಕರುಣೆಯಿಂದ ಹನುಮಂತನನ್ನು ಹಿಡಿದೆತ್ತಿ ಸಂತೈಸುತ್ತಾನೆ. ಇದನ್ನು ಬಿಂಬಿಸುವ ಶಿಲ್ಪವು ಹಂಪೆಯ ವಿರೂಪಾಕ್ಷ ದೇವಾಲಯದ ಕಂಬವೊಂದರ ಮೇಲೆ ಕಡೆಯಲಾಗಿದೆ.

ಮೇಲಿನವುಗಳಲ್ಲದೆ, ಧ್ಯಾನನಿರತ, ವ್ಯಾಖ್ಯಾನ ಮುದ್ರೆಯಲ್ಲಿ ಕುಳಿತಿರುವ ಮತ್ತು ರಾಮಾಯಣದ ಘಟನೆಗಳಿಗೆ ಸಂಬಂಧಿಸಿದ, ವಿವಿಧ ಭಂಗಿಗಳಲ್ಲಿರುವ ಹನುಮಂತನ ಮೂರ್ತಿಗಳೂ ಕಾಣ ಬರುತ್ತವೆ.

ಹಜಾರ ರಾಮಚಂದ್ರಸ್ವಾಮಿಯ ದೇವಾಲಯದ ಸ್ತಂಭವೊಂದರ ಮೇಲೆ ಶಂಖ, ಚಕ್ರಧಾರಿಯಾದ ಚತುರ್ಭುಜ ನಾರಾಯಣನಮೂರ್ತಿಯನ್ನು ಅನೇಕ ರೆಂಬೆಗಳು ಮತ್ತು ಎಲೆಗಳಿಂದ ಕೂಡಿದ ವೃಕ್ಷದ ಭಾಗವನ್ನೇ ಶಯನವನ್ನಾಗಿ ಮಾಡಿಕೊಂಡು ಪವಡಿಸಿರುವಂತೆ ಸ್ವತಂತ್ರ ವಿಚಾರದೊಂದಿಗೆ ತೋರಿಸಲಾಗಿದೆ. ಇಲ್ಲಿ ಶಿಲ್ಪಿಯ ಉದ್ದೇಶವೇನೋ ಭಾಗವತದಲ್ಲಿ ವರ್ಣಿತವಾಗಿರುವಂತೆ ಸೃಷ್ಟಿಯ ಆದಿಯ ಸನ್ನಿವೇಶದ ವಟಪತ್ರ ಶಯನ ನಾರಾಯಣನನ್ನು ತೋರಿಸುವುದಾಗಿತ್ತು.

ಹಂಪೆಯ ಏಕಶಿಲಾ ಕಂಡರಿತ 'ಉಗ್ರನರಸಿಂಹ'ನ ಶಿಲ್ಪದಲ್ಲಿಯೂ ಜಾನಪದರ ಸೊಗಡನ್ನು ಕಾಣುತ್ತೇವೆ. ಅದು 'ಯೋಗಾನರಸಿಂಹ'ನೂ ಹೌದು; 'ಲಕ್ಷ್ಮೀನರಸಿಂಹ'ನೂ ಹೌದು ಮತ್ತು ಆದಿಶೇಷನ ಕೊಡೆಯಿರುವುದರಿಂದ 'ಛತ್ರಾನರಸಿಂಹ'ನೂ

ಹೌದು. ಆದುದರಿಂದ ಅದನ್ನು 'ಛತ್ರಾಯೋಗಾಲಕ್ಷ್ಮೀನರಸಿಂಹ' ನೆಂದು ಕರೆಯಬೇಕಾಗುತ್ತದೆ. ಅದು ವಿಜಯನಗರ ಶಿಲ್ಪಿಯ ಸ್ವತಂತ್ರ ಜನಪದರ ಕಲ್ಪನೆ ಆಧಾರಿತವೆಂದು ಹೇಳಬೇಕಾಗುತ್ತದೆ.

ಹಂಪೆಯ ವಿರೂಪಾಕ್ಷಸ್ವಾಮಿಯ ದೇವಾಲಯದಲ್ಲಿ ೧೪ ಕಡೆಗಳಲ್ಲಿ ಕಂಬಗಳ ಮೇಲೆ, ಶಿವಲಿಂಗಕ್ಕೆ ಹಸುವೊಂದು ಹಾಲನೆರೆದು ಅಭಿಷೇಕ ಮಾಡುವ ದೃಶ್ಯಗಳನ್ನು ನೋಡುತ್ತೇವೆ. ಅದು ತ್ರಿಷಷ್ಠಿ ಪುರಾತನರಲೊಬ್ಬನಾದ, ತಿರುಮಲದೇವನೆಂಬ ಶಿವಭಕ್ತನ ಜೀವನದ ಘಟನೆಯನ್ನು ನಿರೂಪಿಸುತ್ತದೆಂದು ಗುರುತಿಸಬಹುದು. ಇದಕ್ಕೆ ಸಂಬಂಧಿಸಿದ ಕಥಾಭಾಗವು, ಹಂಪೆಯ ಕವಿ ಹರಿಹರದೇವನ 'ಪುರಾತನರ ರಗಳೆಗಳು', ಸುರಂಗ ಕವಿಯ 'ತ್ರಿಷಷ್ಠಿ ಪುರಾತರನ ಚಾರಿತ್ರ್ಯಂ' ಮುಂತಾದ ಗ್ರಂಥಗಳಲ್ಲಿ ವರ್ಣಿತವಾಗಿದೆ. ಆ ಪ್ರಕಾರ ಗಿರಿಜೆಯು ಶಿವನ ಆಜ್ಞೆಗನುಸಾರ ಸುರಧೇನು ರೂಪದಲ್ಲಿ ಭೂಮಿಗೆ ಬಂದು ತಿರುಮಲದೇವನು ಆರಾಧಿಸುತ್ತಿದ್ದ ಲಿಂಗದ ತಲೆಯ ಮೇಲೆ ಹಾಲನ್ನು ಅಖಂಡವಾಗಿ ಕರೆಯುತ್ತದೆ ಎಂದು ಮುಂತಾಗಿ.

ಹಂಪೆಯ ವಿರೂಪಾಕ್ಷಸ್ವಾಮಿಯ ಮಂದಿರದಲ್ಲಿ ಕಾಣಸಿಗುವ ಮತ್ತೊಂದು ವಿನೂತನ, ಏಕೈಕ ಶಿಲ್ಪವೆಂದರೆ, ಮೂರು ತಲೆಗಳು, ಆದರೆ ಒಂದೇ ದೇಹದ ನಂದಿ ಅಥವಾ ಬಸವನ ವಿಗ್ರಹ. ಅದೃಶ್ಯ ಕವಿಯಿಂದ ಕ್ರಿ. ಶ. ೧೪೩೩ರ ಸುಮಾರಿನಲ್ಲಿ ರಚಿತವಾದ 'ಪ್ರೌಢರಾಯನ ಕಾವ್ಯ'ದಲ್ಲಿ ಒಂದೆಡೆ ಬರುವ ವಿವರಣೆಗಳನ್ನಾಧರಿಸಿ ಆ ನಂದಿ ವಿಗ್ರಹದ ಮೂರು ಶಿರಗಳು ಬ-ಸ-ವ ಎಂಬ ಮೂರಕ್ಷರಗಳನ್ನು ಪ್ರತಿನಿಧಿಸುತ್ತಿದ್ದು ಬಸವೇಶನ ಘನ ಮಹಿಮೆಯನ್ನು ಸಾರುತ್ತವೆ. ಮತ್ತು ಆ ಮೂರ್ತಿಯ ಆರಾಧಕರಿಗೆ ಭವಭಯಗಳು ನಾಶವಾಗಿ, ಸರ್ವಸಂಪತ್ತು ಹಾಗೂ ಕೀರ್ತಿಗಳು ಲಭಿಸುತ್ತವೆಂಬ ಅಂತರ್ಗತ ತತ್ವಗಳನ್ನು ನಿರೂಪಿಸುತ್ತವೆಂದು ತಿಳಿಯಬಹುದು.

ಬುಕ್ಕಸಾಗರದಲ್ಲಿರುವ ವೀರಭದ್ರಸ್ವಾಮಿಯ ದೇವಾಲಯದ ಕಂಬಗಳ ಮೇಲೆ ಕಾಣಬರುವ ಶೈವ ಮತ್ತು ವೀರಶೈವ ಶಿವಶರಣರ ಉಬ್ಬುಶಿಲ್ಪಗಳು ಪ್ರಸ್ತುತಪಡಿಸುತ್ತಿರುವ ಅವರ ಜೀವನದ ಘಟನೆಗಳನ್ನೂ, ಪವಾಡಗಳನ್ನೂ ತಿಳಿದುಕೊಳ್ಳಬೇಕಾದರೆ, ಕನ್ನಡ ಸಾಹಿತ್ಯ ಗ್ರಂಥಗಳೇ ಆಧಾರ. ಆ ವಿವರಗಳು ಶಾಂತಲಿಂಗದೇಶಿಕ ವಿರಚಿತ 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ', ಶೆಕ್ಕಿಳಾರನ 'ಪೆರಿಯ ಪುರಾಣ' (ಭಾಷಾಂತರ), ಉತ್ತರದೇಶದ ಬಸವಲಿಂಗ ದೇಶಿಕ ವಿರಚಿತ 'ಬಸವೇಶ್ವರ ಪುರಾಣ ಕಥಾಸಾಗರ' ಮುಂತಾದ ಕೃತಿಗಳಲ್ಲಿ ಕಾಣಬರುತ್ತವೆ.

ಕಮಲಾಪುರದ ಪುರಾತತ್ವ ಸಂಗ್ರಹಾಲಯದಲ್ಲಿ ಪ್ರದರ್ಶಿತವಾಗಿರುವ ಶ್ರೀ ವೈಷ್ಣವ ಪಂಥಾನುಯಾಯಿಗಳಾದ ಆಳ್ವಾರರ ಶಿಲಾ ಪ್ರತಿಮೆಗಳು, ಪುರಂದರದಾಸರ ವಿಗ್ರಹ, ಮತ್ಸ್ಯೇಂದ್ರನಾಥ ಮತ್ತಿತರ ಸಂತರ ಶಿಲ್ಪಗಳು, ಹಿಂದೆ ಹಂಪೆಯಲ್ಲಿ ಅಸ್ತಿತ್ವದಲ್ಲಿದ್ದ ವಿವಿಧ ಧರ್ಮಗಳವರ ಮಠಗಳು ಮುಂತಾದ ಪುರಾತತ್ವ ಕುರುಹುಗಳನ್ನು ಸಮರ್ಪಕವಾಗಿ ಗುರುತಿಸಿ ವಿವರಿಸಬೇಕಾದರೆ ಸಮಕಾಲೀನ ಕನ್ನಡ ಸಾಹಿತ್ಯ ಕೃತಿಗಳೇ ಸಹಾಯಕ ಆಕರ.

* * * * *

ಈಗ ಲಕ್ಷೀಶ ಕವಿಯ 'ಜೈಮಿನಿ ಭಾರತ'ದ ಸಂಧಿ ೧೭ರಲ್ಲಿ ವರ್ಣಿತವಾಗಿರುವ ಅರಸನ ಓಲಗ ಶಾಲೆಯ ವ್ಯವಸ್ಥೆಗಳನ್ನು ಗಮನದಲ್ಲಿರಿಸಿಕೊಂಡು ವಿಜಯನಗರದ ಅರಮನೆ ಪ್ರದೇಶಗಳಲ್ಲಿ ಈಗಲೂ ಕಾಣಬರುತ್ತಿರುವ ರಾಜನ ಒಡ್ಡೋಲಗದ ಮಂಟಪವು (Audience Hall), ರಾಜ ಪ್ರೋತ್ಸಾಹ, ರಾಜನ ಅಭಿರುಚಿಗಳಿಗನುಗುಣವಾಗಿ, ಒಂದು ಕಲಾ ಸಂಗ್ರಹಾಲಯದೋಪಾದಿಯಲ್ಲಿ (Museum of Arts) ಮತ್ತು ಬಹು ಮುಖ್ಯವಾಗಿ ಪ್ರದರ್ಶನಾತತ್ವ (Principles of Display) ಗಳಿಗನುಗುಣವಾಗಿ ವ್ಯವಸ್ಥೆಗೊಳಿಸಲಾಗಿತ್ತೆಂದು ಹೇಳಬಹುದು. ಎಂದರೆ ರಾಜನ ಆ ಓಲಗ ಅಥವಾ ಸಭಾಮಂಟಪದಲ್ಲಿ ಶಿಲೆ, ಲೋಹಗಳಿಂದ ತಯಾರಿಸಲಾದ ವಿವಿಧ ಭಂಗಿ, ಭಾವನೆಗಳನ್ನು ಬಿಂಬಿಸುವ, ತರತರದ ಕಾರ್ಯಗಳಲ್ಲಿ ಮಗ್ನರಾಗಿರುವ ಸುಂದರ ತರುಣಿಯರನ್ನು ಹೋಲುವ ಪುತ್ಥಳಿಗಳು ಮತ್ತು ಸಜೀವವಾಗಿರುವಂತೆ ಕಾಣಬರುತ್ತಿದ್ದ ವಿವಿಧ ಪಕ್ಷಿಗಳು, ಮೃಗಗಳು ಹಾಗೂ ಪ್ರಪಂಚದ ಬೇರೆ ಬೇರೆ ದೇಶಗಳ (ಜನರ) ಚಿತ್ರಪಟಗಳು ಮುಂತಾಗಿ ನಾನಾ ಪ್ರಕಾರದ ಕಲಾತ್ಮಕ ವಸ್ತುಗಳು ಪ್ರದರ್ಶಿತಗೊಂಡಿದ್ದವು. (ಸಂಧಿ ೧೭. ಪದ್ಯ ೨೩, ೨೪, ೨೫)

ಇಲ್ಲಿ ಮತ್ತೊಂದು ಬಹು ಮುಖ್ಯ ಅಂಶವೆಂದರೆ, ಪ್ರದರ್ಶನಾ ತತ್ವಗಳಲ್ಲೊಂದಾದ (Display Methods) ಬೆಳಕಿನ ವ್ಯವಸ್ಥೆಯನ್ನು (Arrangement of Lighting) ಆ ಓಲಗ ಶಾಲೆಯಲ್ಲಿ ಬಹು ಜಾಣ್ಮೆಯಿಂದ, ವೈಚಾರಿಕತೆಯಿಂದ, ಪ್ರಯೋಜನಕಾರಿಯಾಗಿ ಮತ್ತು ಅಚ್ಚರಿಯನ್ನುಂಟುಮಾಡುವ ರೀತಿಯಲ್ಲಿ ಏರ್ಪಡಿಸಲಾಗಿತ್ತು. ಆ ಬೆಳಕಿನ ವ್ಯವಸ್ಥೆಗಳಿಂದಾಗಿ ಓಲಗ ಶಾಲೆಯಲ್ಲಿ ಹಗಲಾಗುವುದು, ರಾತ್ರಿಯಾಗುವುದೆಂಬ ಭೇದವೇ, ತಿಳಿಯದಷ್ಟು ಪರಿಣಾಮಕಾರಿಯಾಗಿತ್ತಲ್ಲದೆ, ಅಲ್ಲಿ, ಪ್ರದರ್ಶಿತ ಕಲಾತ್ಮಕ ವಸ್ತುಗಳನ್ನು ಮನಸಾರೆ ನೋಡಿ ಆನಂದಿಸಲು ಬಹುವಾಗಿ ಸಹಕಾರಿಯಾಗಿತ್ತು. (ಪದ್ಯ ೨೬. ೨೭).

ಅಷ್ಟಲ್ಲದೆ, ಆ ಸಭಾಭವನದಲ್ಲಿ ನೋಡುಗನಿಗೆ ಆಹ್ಲಾದವನ್ನುಂಟುಮಾಡುವ, ಆಸಕ್ತಿ ಕೆರಳಿಸುವ, ಅಭಿರುಚಿಯನ್ನು ದ್ವಿಗುಣಗೊಳಿಸುವ ಹಾಗು ಆಯಾಸವನ್ನು ನಿವಾರಿಸುವ ಉದ್ದೇಶಗಳಿಂದ, ಬಗೆಬಗೆಯ ಸುಗಂಧ ದ್ರವ್ಯಗಳನ್ನೂ ಹಿತಮಿತ ಪ್ರಮಾಣದಲ್ಲಿ ಉಪಯೋಗಿಸುವುದರೊಂದಿಗೆ, ಉತ್ತೇಜನಕಾರಿ ಪರಿಸರವನ್ನು ನಿರ್ಮಿಸಲಾಗಿತ್ತು. (ಪದ್ಯ - ೨೭).

ಹೀಗೆ ೧೪/೧೫ನೇ ಶತಮಾನದಲ್ಲಿಯೇ ಪ್ರದರ್ಶನಾ ಶಾಸ್ತ್ರ, ತತ್ವಗಳಿಗನುಗುಣವಾಗಿ, ಒಂದು ಕಲಾ ಸಂಗ್ರಹಾಲಯದೋಪಾದಿಯಲ್ಲಿದ್ದ ಏರ್ಪಾಟುಗಳನ್ನು ಕುರಿತ ವಿವರಣೆಗಳು

ಸಮಕಾಲೀನ ಕನ್ನಡ ಸಾಹಿತ್ಯ ಕೃತಿಯಿಂದಲೇ ವೇದ್ಯವಾಗುತ್ತದೆಂಬುದು ಕುತೂಹಲಕಾರಿಯಾದ ವಿಷಯವಾಗಿದೆ.

* * * * *

ವಿಜಯನಗರ ಅರಸರ ಮತ್ತು ಅವರ ಪರಿವಾರದವರ ಮನರಂಜನಾ ಚಟುವಟಿಕೆಗಳಾದ ಸಂಗೀತ, ನೃತ್ಯ, ಹಬ್ಬಗಳ ಆಚರಣೆ, ವಸಂತೋತ್ಸವ, ಜಲಕ್ರೀಡೆ, ಮೃಗಯಾ ವಿಹಾರ ಮುಂತಾದವುಗಳನ್ನು ಕುರಿತು ಸ್ವಾರಸ್ಯಕರವಾದ ವಿವರಣೆಗಳು ಸಮಕಾಲೀನ ಸಾಹಿತ್ಯ ಗ್ರಂಥಗಳಲ್ಲಿ ವಿಪುಲವಾಗಿ ಕಾಣಬರುತ್ತವೆ; ಉದಾಹರಣೆಗೆ, ಕನಕದಾಸರ ಮೋಹನತರಂಗಿಣಿ, ದೇಪರಾಜನ ಸೊಬಗಿನ ಸೋನೆ, ವಿರುಪಾಕ್ಷ ಪಂಡಿತನ ಚನ್ನಬಸವಪುರಾಣ, ಬಾಹುಬಲಿ ಪಂಡಿತನ ಧರ್ಮನಾಥ ಪುರಾಣ ಮುಂತಾಗಿ ಆ ಚಟುವಟಿಕೆಗಳನ್ನು ವಿವರವಾಗಿ ಪ್ರತಿಬಿಂಬಿಸುವ ವಾಸ್ತು ನಿರ್ಮಾಣಗಳು, ಶಿಲ್ಪಗಳೂ, ವಿಶೇಷವಾಗಿ ಈಗಲೂ ಆ ನಿವೇಶನದಲ್ಲಿ ಕಾಣಬರುತ್ತಿದ್ದು ಆಸಕ್ತರನ್ನೂ, ಸಂಶೋಧಕರನ್ನೂ ಆಕರ್ಷಿಸುತ್ತಿವೆ.

* * * * *

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಹಲವು ಭಕ್ತರು ಹಂಪೆಯ ವಿರೂಪಾಕ್ಷ ದೇವಮಂದಿರದ ಎದುರಿನ ಉನ್ನತವಾದ ಮತಂಗ ಪರ್ವತವನ್ನೇರಿ, ಅಲ್ಲಿಂದ ವಿರೂಪಾಕ್ಷಸ್ವಾಮಿಗೆ ನಮಸ್ಕಾರಗಳನ್ನರ್ಪಿಸಿ 'ಕೃತಾರ್ಥ'ರಾಗುತ್ತಿದ್ದರೆಂದು ೫-೬ ಶಿಲಾಶಾಸನಗಳಲ್ಲಿ ಉಲ್ಲೇಖವಾಗಿದೆ. ಬಹುಶಃ ಅವರು ಸಂನ್ಯಸನ ವಿಧಿಯಿಂದ ಆತ್ಮ ಅಥವಾ ಪ್ರಾಣ ಸಮರ್ಪಣೆಯನ್ನು ಮಾಡಿಕೊಂಡು ಮೋಕ್ಷವನ್ನು ಸಾಧಿಸಿದವರಾಗಿರಬೇಕು. ಈ ಸಂದರ್ಭದಲ್ಲಿ, ಜೈನ ಭಕ್ತರಲ್ಲಿ ಅಥವಾ ಸಂನ್ಯಾಸಿಗಳಲ್ಲಿ ಪ್ರಚಲಿತದಲ್ಲಿದ್ದ ಸಲ್ಲೇಖನವ್ರತ ಎಂದರೆ ಉಪವಾಸ ಮಾಡಿ ಪ್ರಾಣತ್ಯಾಗ ಮಾಡುವ ವ್ರತವನ್ನು ಸ್ಮರಿಸಿಕೊಳ್ಳಬಹುದು.

ಇದೇ ಅರ್ಥವನ್ನು ಸೂಚಿಸುವ ಸಮಕಾಲೀನ ಸಾಹಿತ್ಯ ವಿವರಣೆಯನ್ನು ಲಕ್ಕಣ ದಂಡೇಶನು ರಚಿಸಿರುವ 'ಶಿವತತ್ವ ಚಿಂತಾಮಣಿ' ಎಂಬ ಕಾವ್ಯಗ್ರಂಥದಲ್ಲಿಯೂ ನೋಡುತ್ತೇವೆ. ಅದಕ್ಕೆ ಸಂಬಂಧಿಸಿದ ಪದ್ಯ ಭಾಗವು:

*'......... ಮಾತಂಗಗಿರಿಯಿಪ್ಪುದದರಗ್ರದಿ*
*ಹರನಲ್ಲಿ ಕಾಮಿತವ ಬಯಸುವರ್ ಬನ್ನಿಪುರ*
*ಹರನ ನೇಮದೊಳು ನಿಮ್ಮಭಿಮತವ ನೀವೆನಂ*
*ದುರು ಮುದದಿ ಕರೆವಂತೆ ನಿಂದ ವೀರೇಶ್ವರನ*
*ಚರಣಾಂಬುಜಕ್ಕೆ ಶರಣು'॥*

ಮೇಲಿನ ಹಲವು ಉದಾಹರಣೆಗಳಿಂದ ಪುರಾತತ್ತ್ವ ಸಂಶೋಧಕರಿಗೆ ಸಮಕಾಲೀನ ಕನ್ನಡ ಸಾಹಿತ್ಯ ಕೃತಿಗಳ ಅಧ್ಯಯನವು ವಿವಿಧ ರೀತಿಯಲ್ಲಿ ಉಪಯುಕ್ತ ಮತ್ತು ಪೂರಕವೆಂದಾಯಿತು. ಎಂದರೆ, ಸಾಹಿತ್ಯದ ಅಧ್ಯಯನ ಮತ್ತು ವಿಶ್ಲೇಷಣೆಯೊಂದಿಗೆ ಪುರಾತತ್ತ್ವದ ಸಂಯೋಜನೆಯ ಪ್ರಯತ್ನವೂ ಬಹು ಫಲಕಾರಿ ಎಂಬುದನ್ನು ವಿವರಿಸಲಾಯಿತು.

* * * * *

ವಿಜಯನಗರ ಸಾಮ್ರಾಜ್ಯದ ಚರಿತ್ರೆ, ಸಾಧನೆಗಳ ಕುರಿತು ಮುಂದುವರಿದ ಅಧ್ಯಯನ, ಸಂಶೋಧನೆ ಮತ್ತು ಅದರ ಪುರಾತತ್ತ್ವ ಸ್ಮಾರಕಗಳು, ಇತರ ವಿವಿಧ ಅವಶೇಷಗಳ ಸಮರ್ಪಕ ಹಾಗೂ ಪರಿಣಾಮಕಾರಿ ಸಂರಕ್ಷಣಾ ಚಟುವಟಿಕೆಗಳಲ್ಲಿ ಹೆಚ್ಚಾದ ಆಸಕ್ತಿ ಇರುವವರಲ್ಲಿ ನಾನೂ ಒಬ್ಬನಾಗಿರುವುದರಿಂದ ಈಗ ಕೆಲವು ಅನಿಸಿಕೆಗಳನ್ನು ತಮ್ಮ ಗಮನಕ್ಕೆ ತರಲು ಬಯಸುತ್ತೇನೆ.

ಈಗಾಗಲೇ ಕಾರ್ಯನಿರತವಾಗಿರುವ ವಿವಿಧ ಅಧ್ಯಯನ, ಸಂಶೋಧನಾ ವಿಭಾಗಗಳ ಜೊತೆಗೆ, ವಿಜಯನಗರ ಅಧ್ಯಯನ ಮತ್ತು ಸಂಶೋಧನೆಗಳಿಗಾಗಿಯೇ ಒಂದು ಪ್ರತ್ಯೇಕವಾದ ವಿಭಾಗ ಪೀಠವನ್ನು ಆರಂಭಿಸಿದಲ್ಲಿ ಆ ದಿಶೆಯಲ್ಲಿ ಹೆಚ್ಚಾದ ಪ್ರೋತ್ಸಾಹ, ಉತ್ತೇಜನ ದೊರೆತು ಹೆಚ್ಚಿನ ಸಾಧನೆಗಳಿಗೆ ಚಾಲನೆ ಸಿಗುತ್ತದೆ.

ವಿಜಯನಗರ ಸಾಮ್ರಾಜ್ಯದ ಕಾಲಕ್ಕೆ ಸಂಬಂಧಿಸಿದ ತಮಿಳು, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿರುವ ಶಿಲಾಶಾಸನಗಳು ಹಾಗೂ ತಾಮ್ರಪಟ ಶಾಸನಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸುವುದು.

ವಿಜಯನಗರ ಸಾಮ್ರಾಜ್ಯವನ್ನು ಕುರಿತು ವಿವಿಧ ಭಾಷೆಗಳಲ್ಲಿ ಪ್ರಕಟವಾಗಿರುವ ಎಲ್ಲಾ ಸಂಶೋಧನಾ ಸಾಹಿತ್ಯವನ್ನು ವಿವರಿಸುವ ಒಂದು ಸೂಚಿ ಅಥವಾ ದಾಖಲೆ ಗ್ರಂಥವನ್ನು ಸಂಕ್ಷಿಪ್ತ ವಿವರಗಳೊಂದಿಗೆ ಪ್ರಕಟಿಸುವುದು.

ಕನ್ನಡೇತರ ಭಾಷೆಗಳಲ್ಲಿ ವಿಜಯನಗರ ಸಾಮ್ರಾಜ್ಯ ಕುರಿತು ಈಗಾಗಲೇ ಪ್ರಕಟವಾಗಿರುವ ಸಾಹಿತ್ಯದಲ್ಲಿ, ಬಹು ಮುಖ್ಯವಾದವುಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸುವುದು. ಉದಾಹರಣೆಗೆ, ಕೃಷ್ಣಸ್ವಾಮಿ ಐಯ್ಯಂಗಾರ್ ಅವರ Sources of Vijayanagar History ನೀಲಕಂಠ ಶಾಸ್ತ್ರಿ ಮತ್ತು ವೆಂಕಟರಮಣಯ್ಯ ಅವರ Further Sources of Vijayanagar History ಮುಂತಾಗಿ. ಈಗಾಗಲೇ ರಾಬರ್ಟ್ ಸ್ಯುಯೆಲ್ ಎಂಬುವರ Forgotton Empire ಎಂಬ ಗ್ರಂಥವು ಕನ್ನಡಕ್ಕೆ ಭಾಷಾಂತರಿಸಲ್ಪಟ್ಟು ಈ ವಿಶ್ವವಿದ್ಯಾಲಯದಿಂದಲೇ ಪ್ರಕಟವಾಗಿರುವುದು ಸೂಕ್ತ ಕಾರ್ಯವಾಗಿದೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಕನ್ನಡದಲ್ಲಿ ರಚಿತವಾದ ಕಥಾ ನಿರೂಪಣಾ ಗ್ರಂಥಗಳಿಂದ ಚಾರಿತ್ರಿಕ, ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಮುಂತಾದ ಅಂಶಗಳನ್ನು Sources of Vijayanagar History ಮಾದರಿಯಲ್ಲಿ ಸಂಗ್ರಹಿಸಿ, ಕನ್ನಡದಲ್ಲಿಯೆ ಪ್ರಕಟಿಸುವುದರೊಂದಿಗೆ, ಸಂಶೋಧನಾಸಕ್ತರಿಗೆ ಲಭ್ಯವಾಗುವಂತೆ ಮಾಡುವುದು.

ದಕ್ಷಿಣ ಭಾರತದ ವಿವಿಧ ರಾಜ್ಯಗಳಲ್ಲಿ ಚದುರಿಹೋಗಿರುವ,

ಆದರೆ ವಿಜಯನಗರ ಸಾಮ್ರಾಜ್ಯದ ವಾಸ್ತು, ಶಿಲ್ಪ ಶೈಲಿಗಳನ್ನು ಸಾರಿಹೇಳುವ, ದೇವ ಮಂದಿರಗಳು, ಶಿಲ್ಪಗಳು, ಕಂಚಿನ ಮೂರ್ತಿಗಳು, ಮಂಟಪಗಳು, ಮಹಲುಗಳು, ಕೋಟೆಗಳು ಮತ್ತಿತರ ಪುರಾತತ್ವ ಅವಶೇಷಗಳ ದಾಖಲಾತಿ (Documentation) ಕಾರ್ಯವನ್ನು Film ರೂಪದಲ್ಲಿ ಹಾಗೂ ಸೂಚಿಗ್ರಂಥ ರೂಪದಲ್ಲಿ ತಯಾರಿಸುವುದು.

ಅದೇ ರೀತಿ ವಿಜಯನಗರ ಸಾಮ್ರಾಜ್ಯದ ನಾಣ್ಯಗಳನ್ನು ಕುರಿತು ಸಮಗ್ರ ಕೃತಿಯೊಂದನ್ನು ಕನ್ನಡದಲ್ಲಿ ಪ್ರಕಟಿಸುವುದು.

ವಿವಿಧ ಎಡೆಗಳಲ್ಲಿ ಕಾಣಬರುವ ವಿಜಯನಗರ ಸಾಮ್ರಾಜ್ಯದ ಕಾಲದ ವರ್ಣಚಿತ್ರಗಳನ್ನು (Paintings) Video ಮತ್ತು Photo Documentation ತಯಾರಿಸಿ ಅಧ್ಯಯನಾಸಕ್ತರಿಗೆ ಲಭ್ಯವಾಗುವಂತೆ ಏರ್ಪಡಿಸುವುದು.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ, ವಿವಿಧ ವಿಷಯ ಗಳನ್ನು ಕುರಿತು ಕನ್ನಡ, ತೆಲುಗು, ತಮಿಳು, ಸಂಸ್ಕೃತ ಭಾಷೆಗಳಲ್ಲಿ ರಚಿತವಾದ ಸಾಹಿತ್ಯ ಗ್ರಂಥಗಳ ಪ್ರತ್ಯೇಕ ಸೂಚಿಗಳನ್ನು ಸಾರಾಂಶಗಳೊಂದಿಗೆ ಪ್ರಕಟಿಸುವುದು.

ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಪ್ರಕಟವಾಗದೇ ಇರುವ ಸಂಶೋಧನಾ ಪ್ರಬಂಧಗಳಲ್ಲಿ (Ph.D. thesis) ಸೂಕ್ತವಾದವು ಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸುವುದು.

ಮೇಲಿನ ಸೂಚನೆಗಳನ್ನು ಕಾರ್ಯಗತಗೊಳಿಸಲು ಕನ್ನಡ ನಾಡು, ನುಡಿ, ಸಂಸ್ಕೃತಿಗಳ, ಅಧ್ಯಯನ ಮತ್ತು ಅಭಿವೃದ್ಧಿಗಳನ್ನೇ ಮುಖ್ಯ ಧ್ಯೇಯವನ್ನಾಗಿರಿಸಿಕೊಂಡು ಮೈವೆತ್ತಿರುವ ಮತ್ತು ಎಲ್ಲಾ ಸೌಲಭ್ಯ, ಪರಿಕರಗಳಿಂದ ಸುಸಜ್ಜಿತವಾಗಿರುವ ಈ ಕನ್ನಡ ವಿಶ್ವ ವಿದ್ಯಾಲಯವೇ ಸೂಕ್ತ ಸಂಸ್ಥೆಯಾಗಿದೆ. ಮಿಗಿಲಾಗಿ ಸರ್ವವಿಧ ದಲ್ಲಿಯೂ ಸಮರ್ಥರಾಗಿರುವ ಮಾನ್ಯ ಕುಲಪತಿಗಳ, ನಿರ್ದೇಶನ ಮತ್ತು ಮಾರ್ಗದರ್ಶನಗಳು ಲಭ್ಯವಿರುವುದು ವಿಶೇಷತೆ. ಒಂದು ಯೋಜನೆಯಂತೆ ಕಾರ್ಯಾರಂಭಿಸಿದಲ್ಲಿ, ಸಾಧನೆಯಲ್ಲಿ ಹೆಚ್ಚಿನ ವಿಳಂಬವಾಗದು.

* * * * *

ಸಮಯಾಭಾವದಿಂದ ಕೆಲವೇ ವಿಷಯಗಳನ್ನು ಮಾತ್ರ ವಿವರಿಸಲಾಯಿತು. ಅಲ್ಲದೆ ಆ ಒಂದೊಂದು ಅಂಶವನ್ನೇ ತೆಗೆದುಕೊಂಡು ಸುದೀರ್ಘ ಲೇಖನ ಬರೆಯಲೂ ಅವಕಾಶವಿದೆ.

ಮುಗಿಸುವುದಕ್ಕೆ ಮೊದಲು ಅಕಾದೆಮಿಯ ಆಜೀವ ಗೌರವಾಧ್ಯಕ್ಷರಾದ ಪ್ರೊ। ದೀಕ್ಷಿತರಿಗೆ, ಅಧ್ಯಕ್ಷರಾದ ಡಾ। ಕಾಮತರಿಗೆ, ಆತಿಥೇಯರಾದ ಕುಲಪತಿ ಡಾ। ಕಲಬುರ್ಗಿ ಯವರಿಗೆ, ಅಕಾದೆಮಿಯ ಇತರ ಪದಾಧಿಕಾರಿಗಳಾದ (ನಿ.) ಪ್ರಾಂಶುಪಾಲ ಶ್ರೀ ಎಂ. ಜಿ. ನಾಗರಾಜ, ಪ್ರೊ। ಲಕ್ಷ್ಮಣ ತೆಲಗಾವಿ, ಡಾ। ಎಚ್. ಎಸ್. ಗೋಪಾಲರಾವ್, ಪ್ರೊ। ರಘುನಾಥ ಭಟ್, ಡಾ। ವಸಂತಲಕ್ಷ್ಮಿ, ಶ್ರೀ ಎಂ. ಬಿ. ಪಾಟೀಲ್ ಮತ್ತು ಕಾರ್ಯಕಾರಿ ಸಮಿತಿಯ ಎಲ್ಲಾ ಸದಸ್ಯರಿಗೆ ಹಾಗೂ ತಮ್ಮೆಲ್ಲರಿಗೂ ಮತ್ತೊಮ್ಮೆ ಹೃತ್ಪೂರ್ವಕ ವಂದನೆಗಳು.

# ಶ್ರೀ ಸಿ. ಟಿ. ಎಂ. ಕೊಟ್ರಯ್ಯ

## *ಜೀವನ ಪರಿಚಯ-ಪಕ್ಷಿನೋಟ*

| | | |
|---|---|---|
| ೧೯೨೭ | : | ಜನನ : ಚಿಲುಗೋಡು ಗ್ರಾಮ, ಹಗರಿಬೊಮ್ಮನಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆ<br>ತಂದೆ : ಚೆನ್ನಬಸವಯ್ಯ<br>ತಾಯಿ : ಗುರುಬಸವಮ್ಮ |

**ವಿದ್ಯಾರ್ಹತೆ**

| | | |
|---|---|---|
| ೧೯೪೭ | : | ಎಸ್.ಎಸ್.ಎಲ್.ಸಿ., ಜಿಲ್ಲಾ ಬೋರ್ಡ್ ಹೈಸ್ಕೂಲು, ಕೊಟ್ಟೂರು. ಐಚ್ಛಿಕ ವಿಷಯವಾದ ಚರಿತ್ರೆಯಲ್ಲಿ ಪ್ರಥಮ ಸ್ಥಾನದೊಂದಿಗೆ ಶಾಲೆಯ ದಾಖಲೆ |
| ೧೯೫೦ | : | ಇಂಟರ್ ಮೀಡಿಯಟ್ (ಚರಿತ್ರೆ), ಡಾ. ಆನ್ನಿಬೆಸೆಂಟ ಥಿಯೋಸಾಫಿಕಲ್ ಕಾಲೇಜು, ಮದನಪಲ್ಲಿ, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ |
| ೧೯೫೩ | : | ಬಿ.ಎ. (ಆನರ್ಸ), ಚರಿತ್ರೆ; ಮದ್ರಾಸು ವಿಶ್ವವಿದ್ಯಾಲಯ, ಮದ್ರಾಸು. ಪ್ರಥಮ ಸ್ಥಾನಕ್ಕಾಗಿ ಸರ್ ಜಾರ್ಜ್ ಫ್ರೆಡರಿಕ್ ಸ್ಟ್ಯಾನ್‌ಲೀ ಚಿನ್ನದ ಪದಕ ಪುರಸ್ಕೃತ. |
| ೧೯೫೪ | : | ಎಂ.ಎ. (ಚರಿತ್ರೆ), ಮದ್ರಾಸು ವಿಶ್ವವಿದ್ಯಾಲಯ |
| ೧೯೫೪ | : | ಸರ್ಟಿಫಿಕೇಟ್ ಕೋರ್ಸ್ ಇನ್ ಫೀಲ್ಡ್ ಆರ್ಕಿಯಾಲಜಿ; ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯಾದ ನಿರ್ವಹಣೆ, ಪಂಜಾಬ್ ರಾಜ್ಯದ ರೂಪಾರ್ ಎಂಬ ಸ್ಥಳದಲ್ಲಿ. |

**ವೃತ್ತಿಬಾಹುಳ್ಯ**

| | | |
|---|---|---|
| ೧೯೫೪-೬೮ | : | ಕ್ಯೂರೇಟರ್ ಆಫ್ ಆರ್ಕಿಯಾಲಾಜಿಕಲ್ ಸೈಟ್ ಮ್ಯೂಸಿಯಮ್ಸ್, ಮ್ಯೂಸಿಯಮ್ಸ್ ಬ್ರಾಂಚ್, ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯಾ, ಭಾರತ ಸರ್ಕಾರ, ಬೇರೆ ಬೇರೆ ಸ್ಥಳಗಳಲ್ಲಿ: ಕೊಂಡಾಪುರ (ಆಂಧ್ರಪ್ರದೇಶ), ಹಂಪೆ, ಶ್ರೀರಂಗಪಟ್ಟಣ, ಹಳೇಬೀಡು, ಬಿಜಾಪುರ, ಗೋವಾ. |
| ೧೯೬೮-೭೭ | : | ಅಸಿಸ್ಟೆಂಟ್ ಸೂಪರಿಂಟೆಂಡಿಂಗ್ ಆರ್ಕಿಯಾಲಜಿಸ್ಟ್ ಫಾರ್ ಮ್ಯೂಸಿಯಮ್ಸ್, ಝೋನಲ್ ಆಫೀಸರ್: ನಾಗಾರ್ಜುನಕೊಂಡ ಝೋನ್ (ಆಂಧ್ರ) ಮತ್ತು ಸದರ್ನ್ ಝೋನ್ (ಮದ್ರಾಸು) |
| ೧೯೭೭-೮೫ | : | ಡೆಪ್ಯೂಟಿ ಸೂಪರಿಂಟೆಂಡಿಂಗ್ ಆರ್ಕಿಯಾಲಜಿಸ್ಟ್ ಫಾರ್ ಮ್ಯೂಸಿಯಮ್ಸ್ : ರೀಜನಲ್ ಆಫೀಸರ್: ಸದರ್ನ್ ರೀಜನ್ (ಮದ್ರಾಸು) |
| ೧೯೮೫ | : | ನಿವೃತ್ತಿ - ಮೈಸೂರಿನಲ್ಲಿ ವಾಸ. |

### ಕೃತಿ ಸಂಪದ

***ಪ್ರಕಟಿತ ಕೃತಿಗಳು***

೧. *Irrigation Systems Under Vijayanagara Empire*; Directorate of Archaeology & Museums in Karnataka, Mysore, 1955.

೨. *Sources of Vijayanagara Studies* (From Contemporary Kannada Literary Works); forthcoming-American Institute of Indian Studies, New Delhi.

೩. **ಹಂಪಿ-ಮೂರು ಲೇಖನಗಳು**, ಶ್ರೀ ಸುವಾಸಿನಿ ಬಳಗ, ಹೊಸಪೇಟೆ, ೧೯೯೭.

೪. **ಹಂಪಿ-ನಾಲ್ಕು ಪ್ರಬಂಧಗಳು**, ಶ್ರೀ ಸುವಾಸಿನಿ ಬಳಗ, ಹೊಸಪೇಟೆ, ೧೯೯೭.

೫. **ಸರ್ವಾಂಗ ಲಿಂಗ ಮತ್ತು ಯೋಗಾಂಗ ಶಿಲ್ಪ**, ಶ್ರೀ ಸುವಾಸಿನಿ ಬಳಗ, ಹೊಸಪೇಟೆ, ೧೯೯೯.

೬. ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆಗಳು-ಕನ್ನಡಕ್ಕೆ ಭಾಷಾಂತರ : ಪ್ರೊ. ಧ್ರುವನಾರಾಯಣ್ ಅವರಿಂದ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೨೦೦೧.

### ಪ್ರಕಟಿತ ಪ್ರಬಂಧಗಳು

ಇಂಗ್ಲೀಷು


1. Hampi-Before Founding of Vijayanagara in Sreenidhi; *K. R. Srinivasan Felicitation Vol.,* New Era Publication, Madras, 1983.
2. A Cave Linga of Hampi, in the *Journal of Andhra Historical Research Society*, Hyderabad, Vol. XXXII No: 1-4, 1971-72.
3. Irrigation in Ancient India, in *S. R. Rao Felicitation Vol.,* Aditya Prakashan, New Delhi, 1992.
4. Pampa Sarassu and Hampi, in *Rupanjali;* O. C. Gangoli Memorial Society, Calcutta, 1986.
5. Chilkur Pillar Inscription of Chalukya-Vikramaditya, in *Epigraphia Andhrica.,* Vol. II, Department of Archaeology & Museums, A.P., Hyderabad, 1974.
6. Inscriptions of Vitthala Temple, Hampi, in *G. S. Gai Felicitation Vol.,* Agam Kala Prakashan, New Delhi, 1990.
7. Boundary Stones, in the *Journal of A.P. Historical Research Society,* Hyderabad.
8. Pre-Medieval Finds from Hampi, in *K. V. Soundararajan Felicitation Vol.,* Agam Kala Prakashan, New Delhi, 1991.
9. Vijayanagara Paintings at the Virupaksha Temple, Hampi, in the *Quarterly Journal of the Mythic Society,* Bangalore, XLIX, No. 4, 1959.
10. Ideological Underpinnings and Development of Irrigation in Vijayanagara, in *Sri Nagabhinandana,* M.S. Nagaraja Rao Felicitation Vol., MSN Rao Felicitation Committee, Bangalore, 1995.
11. Indo-European Architecture in Madras, in Itihas, *Journal of Andhra Pradesh State Archives,* Hyderabad, Vol. II, No. 2, 1979.
12. Pampa Sarassu, Kishkindha and Hampi, *National Seminar Papers,* 1985, Directorate of Archaeology & Museums, Mysore, 1995.
13. Irrigation Systems Under Vijayanagara Empire, in *Gauravam*, Gururaja Rao Felicitation Vol., Harman Publishing House, New Delhi, 1996.
14. Hampi-Vijayanagara Names Through History, in *Journal of the Place Names Society of India,* Mysore, Vol. IX, 1987.
15. Tirumaladevi Pattana, Present Hospet near Hampi, *in journal of the place Names Society of India,* Mysore, Vol, III, 1982.
16. Connotation of the Term, Kari - A Note, in *Journal of the Place Names Society of India,* Mysore, Vol. XVII, 1997.
17. Note On Renaming of Cheluvindla Village, in *Journal of the Place Names Society of India,* Mysore, Vol. V, 1984.
18. Note On the Place Name-Barakuru, in *Journal of The Place Names Society of India,* Mysore Vol. XIII, 1992.
19. Irrigation Systems Under Vijayanagara Empire With Special Reference to Anecuts across the River Tungabhadra, in the *The Vijayanagara Heritage,* V.V.H.H. Trust, Anegondi, Hospet, 1996.
20. The First Inscription of the Chalukya Vikrama Era, in *Journal of the Epigraphical Society of India,* Mysore, Vol. X, 1983.
21. Boundary Stone-A Study, in *Journal of the Epigraphical Society of India,* Mysore, Vol. IV, 1977.
22. A Note on the Term 'Udiyucchi' of the Kannada Inscriptions, in the *Journal of the Epigraphical Society of India,* Mysore, Vol. III, 1976.
23. Linga Superimposed by Another Linga from Hampi, in *Vijayanagara-Progress of Research*, 1988-91. Directorate of Archaeology and Museums, Mysore, 1996.

24. Ancient Anecuts on the River Tungabhadra, in *Journal of Power and River Valley Development,* Calcutta-1959.

25. Sivasarana Sculptures from Bukkasagara (forthcoming) in *Vijayanagara,* Progress of Research, 1991. Directorate of Archaeology & Museums, Mysore

26. Ajati Virasaiva of Telugu Inscriptions, in *K.G. Krishnan Felicitation Volume.* (forthcoming)

27. The Metropolis of the Vijayanagara Empire, in the *Vijayanagara Urbanity*, National Society of Urban Development, Hospet, 1978.

28. A Brahmi Inscription from Hampi, in *Journal of Epigraphical Society of India,* Mysore, Vol. VII, 1980.

29. A Note on the Term Kritartha of Kannada Inscriptions in *Journal of Epigraphical Society of India,* Vol. XXVI, Mysore, 2000.

30. Aghoreswara as Gleaned from Sivatatva Ratnakara in *Seminar Paers,* O.R.I., Mysore, 2000.

31. Virasaiva Mathas of Vijayanagara-Hampi in *Q.J.M.S.*, Bangalore (forthcoming), 2000.

32. Contribution of Virasaivism to the Sculptural Art of Lingas at Hampi in *Dr. K.V. Ramesh Felicitation Volume* Mysore (forthcoming), 2001.

### ಕನ್ನಡ

೧. ಹಂಪೆಯಲ್ಲೊಂದು ಸಿದ್ಧರಾಮೇಶ್ವರ ಪ್ರಣೀತ ಲಿಂಗಕ್ಕೆ ಲಿಂಗವೇ ಪೀಠವಾಗಿರ್ಪ ಯೋಗಾಂಗ ಶಿಲ್ಪ; **ವಿಜಯನಗರ ಅಧ್ಯಯನ ಸಂಪುಟ** ೧, ಕರ್ನಾಟಕ ಪುರಾತತ್ವ ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೬.

೨. ಚಾಲುಕ್ಯ ಅರಸರ ಶಾಸನಗಳು ಮತ್ತು ಹಂಪೆ; **ವಿಜಯನಗರ ಅಧ್ಯಯನ ಸಂಪುಟ** ೨, ಕರ್ನಾಟಕ ಪುರಾತತ್ವ ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೭.

೩ ಬುಕ್ಕ ಸಾಗರದ ಶಿಲ್ಪಗಳಲ್ಲಿ ಶೈವ/ವೀರಶೈವ ಶರಣರು; **ವಿಜಯನಗರ ಅಧ್ಯಯನ, ಸಂಪುಟ** ೩, ಕರ್ನಾಟಕ ಪುರಾತತ್ವ ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೮.

೪. ವಿಜಯನಗರ ಕಾಲದ ಅರಮನೆಗಳು; **ವಿಜಯನಗರ ಅಧ್ಯಯನ ಸಂಪುಟ** ೪, ಕರ್ನಾಟಕ ಪುರಾತತ್ವ ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೧೯೯೯.

೫. ವೀರಶೈವಾಂಧ್ರ ಕವಿಗಳ ಬಸವ ಸಾಹಿತ್ಯ ಸಮೀಕ್ಷೆ; **ಪ್ರಸಾದ**, ಸಂಪುಟ-೨೮ ಸಂಚಿಕೆ-೩, ಮೇ-ಜೂನ್, ೧೯೮೯, ಶ್ರೀ ಶಿವರಾತ್ರೀಶ್ವರ ಮಹಾ ವಿದ್ಯಾಪೀಠ, ಮೈಸೂರು.

೬. ಶರಣಕವಿ ಹರಿಹರನ ಪಂಪ ವಿರೂಪಾಕ್ಷ-ಅಷ್ಟತನುಮೂರ್ತಿ; **ಅನುಭವ ಪಥ** ಶ್ರೀ ಕುಮಾರೇಶ್ವರ ವಿದ್ಯಾಪ್ರಸಾರ ಸಮಿತಿ, ಸ್ವಾದಿಮಠ, ಸವದತ್ತಿ, ಸಂಪುಟ-೧ ಸಂಚಿಕೆ ೨, ೧೯೮೮.

೭. ಹಂಪೆಯ ಶಿಲ್ಪಗಳಲ್ಲಿ ಪ್ರೌಢರಾಯನ ಆಸ್ಥಾನದ ಅರುಣಗಿರಿನಾಥ ಕವಿಯ ಯೋಗಾನಂದ ಪ್ರಹಸನ, **ಮುರುಘಶ್ರೀ**, ಶ್ರೀ ಮುರುಘರಾಜೇಂದ್ರ ಸ್ವಾಮಿ ಮಠ, ಚಿತ್ರದುರ್ಗ (ಮುಂಬರುವ)

೮. ಪಿಡುಪರ್ತಿಯ ವೀರಶೈವಾಂಧ್ರ ಕವಿಗಳು; **ಹೇಮಕೂಟ**, ಸಂಪುಟ ೮ ಸಂಚಿಕೆ ೩ ಮತ್ತು ೪, ಹೊಸಪೇಟೆ ೧೯೮೨.

೯. **ಹೊಸಪೇಟೆ ನಗರ-ಚಾರಿತ್ರಿಕ ವಿವೇಚನೆ**, ಶರಣರ ಸುವಾಸಿನಿ ಬಳಗ ಹೊಸಪೇಟೆ ೧೯೯೭

೧೦. ಆಂಧ್ರದ ಪಿಡುಪರ್ತಿಯ ವೀರಶೈವ ಕವಿಗಳು; **ಸಿದ್ಧಗಂಗಾ**, ಸಿದ್ಧಗಂಗಾ ಕ್ಷೇತ್ರದ ನಿಯತಕಾಲಿಕ ಪತ್ರಿಕೆ, ತುಮಕೂರು, ಮೇ ೧೯೮೩ ಮತ್ತು ಜೂನ್ ೧೯೮೩.

೧೧. ವಿಜಯನಗರ ಸಾಮ್ರಾಜ್ಯೇತಿಹಾಸದ ರೂಪುರೇಖೆ; ವಿಜಯನಗರ, ಹೊಸಪೇಟೆ ಜುಲೈ-ಆಗಸ್ಟ್ ೧೯೫೭.

೧೨. ಹಂಪೆಯ ಶಾಸನಗಳು ಮತ್ತು ವಿಜಯನಗರ ಪಟ್ಟಣ; **ಹೇಮಕೂಟ**, ಹೊಸಪೇಟೆ

೧೩. ಹಂಪೆಯ ವಿರೂಪಾಕ್ಷ ದೇವಾಲಯದ ವರ್ಣ ಚಿತ್ರಗಳು; **ಹೇಮಕೂಟ**, ಹೊಸಪೇಟೆ, ಸಂಪುಟ ೩, ಸಂಚಿಕೆ ೯, ಮಾರ್ಚ್ ೧೯೭೮

೧೪. ವಿಜಯನಗರ ಕಾಲದ ತುಂಗಭದ್ರಾ ನದಿಯ ಅಣೆಕಟ್ಟುಗಳು, **ಹೇಮಕೂಟ**, ಹೊಸಪೇಟೆ, ಸಂಪುಟ ೩, ಸಂಚಿಕೆ ೫ ನವೆಂಬರ್ ೧೯೭೭.

೧೫. ಕ್ಷೇತ್ರಸೀಮಾ ನಿರ್ಣಯ (ಲಿಂಗ ಮುದ್ರೆಯ ಮತ್ತು ಇತರ ಮೇರೆ ಕಲ್ಲುಗಳು); **ಹೇಮಕೂಟ**, ಹೊಸಪೇಟೆ, ಸಂಪುಟ ೨, ಸಂಚಿಕೆ ೮ ಫೆಬ್ರವರಿ ೧೯೭೭

೧೬. ಹಂಪೆ-ಕ್ರಿಸ್ತ ಶಕಾಬ್ದಿಯ ಆರಂಭದಲ್ಲಿ; **ಹೇಮಕೂಟ**, ಹೊಸಪೇಟೆ, ಸಂಪುಟ ೭, ಸಂಚಿಕೆ ೭ ಜನವರಿ ೧೯೮೨.

೧೭. ಹಂಪೆಯ ವೀರಶೈವ ಮಠಗಳು ಮತ್ತು ಸಾಹಿತ್ಯ ಪರಂಪರೆ, **ಹೇಮಕೂಟ**, ಸಂಪುಟ ೭, ಸಂಚಿಕೆ ೫ ೧೯೮೧.

೧೮. ಒಂದು ಅಪ್ರಕಟಿತ ತಾಮ್ರ ಶಾಸನ, **ಹೇಮಕೂಟ**, ಹೊಸಪೇಟೆ.

೧೯. ಹೇಮಕೂಟಮೆ ಸರ್ವಾಂಗಲಿಂಗಂ; **ಹೇಮಕೂಟ**, ಹೊಸಪೇಟೆ

೨೦. ಹೊಸಪೇಟೆ ನಗರ-ಒಂದು ಚಾರಿತ್ರಿಕ ವಿವೇಚನೆ, **ಹೇಮಕೂಟ**, ಹೊಸಪೇಟೆ, ಸಂಪುಟ-೪ ಸಂಚಿಕೆ ೧೨, ೧೯೭೯.

೨೧. ಹಂಪೆಯಲ್ಲಿ ಶಿಲಾಯುಗದ ಸಂಸ್ಕೃತಿ; **ಹೇಮಕೂಟ**, ಹೊಸಪೇಟೆ, ಸಂಪುಟ ೯, ಸಂಚಿಕೆ ೩-೪ ಸೆಪ್ಟೆಂಬರ್-ಅಕ್ಟೋಬರ್-೧೯೮೩.

೨೨. ಹಂಪೆಯಲ್ಲಿ ಪ್ರಾಚೀನ ಕುರುಹುಗಳು; ಎನಗಿಂತ **ಕಿರಿಯರಿಲ್ಲ** ಎಂಬ ಸನ್ಮಾನ ಗ್ರಂಥದಲ್ಲಿ, ಎ.ಎಸ್. ಅಭಿನಂದನ ಸಮಿತಿ ಕೊಪ್ಪಳ ೧೯೯೯

೨೩. ಅಘೋರೇಶ್ವರ ಮೂರ್ತಿ, ಇಕ್ಕೇರಿ, **ವಿಜಯನಗರ ಅಧ್ಯಯನ ಸಂಪುಟ ೫**, ಕರ್ನಾಟಕ ಪುರಾತತ್ವ ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು ೨೦೦೦.

೨೪. ಕರಿ ಪದಕ್ಕೆ ವಿಶೇಷಾರ್ಥಗಳ ವಿಶ್ಲೇಷಣೆ; **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, (ಸಂ. ೨೮, ೨೦೦೦ ಸಹಸ್ರಮಾನ ವಿಶೇಷ ಸಂಪುಟ) ಬೆಂಗಳೂರು

೨೫. ವೀರಶೈವ ಪ್ರತಿಪಾದಿತ ಜಾತ್ಯಾತೀತೆಯನ್ನು ದೃಢೀಕರಿಸುವ ಶಾಸನಾಧಾರಗಳು, **ಗುರುವಂದನ** ಸಂಪುಟ, ಬೆಂಗಳೂರು (ಮುಂಬರುವ)

೨೬. ಕವಿ ಲಕ್ಷ್ಮೀಶನು ವರ್ಣಿಸಿರುವ ಕಲಾಸಂಗ್ರಹಾಲಯದೋಪಾದಿಯ ಓಲಗಶಾಲೆ, **ವಿಜಯನಗರ ಅಧ್ಯಯನ ಸಂಪುಟ ೬**, ೨೦೦೧ ಕರ್ನಾಟಕ ಪುರಾತತ್ವ ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು (ಮುಂಬರುವ)

*ಸಂಗ್ರಹಾಲಯಗಳ ಅಧ್ಯಯನ*

1. Exhibition with special Reference to Archaeological Site Museums in *Reflections on Indian Art & Culture*, Museum Bulletin, Museum & Picture Gallery, Vadodara, Vol. XXVIII (1978-79), 1983.

2. Security Arrangements in the Site Museums of ht Archaeological Survery of India, in *Proceedings of the All India Museums Conference*, 1977; Museums Association of India, New Delhi, 1977.

3. Some Contemporary Challenges to Site Museums of the Archaeological Survery of India, in *Journal of the Museums Association of India,* New Delhi, Vol. XXXVI, 1980.

4. Exhibition as a Means of Cummunication with Sepcial "Reference to Archaeological Site Museums, in *Journal of the Museums Association of India,* New Delhi, Vol. XXIV, 1978.

5. Archaeological Collection for Tomorrow, in *Journal of the Museums Association of India,* New Delhi, Vol. XXXIX, 1983.

೬. ವಸ್ತು ಸಂಗ್ರಹಾಲಯ ಕಟ್ಟಡದ ರೂಪರೇಷೆ ಮತ್ತು ಆಡಳಿತ ವ್ಯವಸ್ಥೆ; ಸಂಗ್ರಹಾಲಯಗಳಲ್ಲಿ ಪ್ರದರ್ಶನ ಶಾಸ್ತ್ರ-ಸೆಮಿನಾರ್ ಪ್ರಬಂಧಗಳು. ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ (ಡಿಸೆಂಬರ್ ೧೯೬೮) (ಮುಂಬರುವ)

*ಇತರೆ*

೧. ಬಳ್ಳಾರಿ ಮತ್ತು ಪ್ರಥಮ ಸ್ವಾತಂತ್ರ್ಯ ಸಂಗ್ರಾಮ: **ನಗರ ನಗಾರಿ**, ಹೊಸಪೇಟೆ, ಆಗಸ್ಟ್, ೧೯೫೭.

೨. ಸ್ವಾತಂತ್ರ್ಯ ಸಂಗ್ರಾಮೇತಿಹಾಸದ ರೂಪರೇಖೆ: **ಸ್ವತಂತ್ರ**, ಹೊಸಪೇಟೆ, ಆಗಸ್ಟ್, ೧೯೫೭

೩. ನಾಡಹಬ್ಬ: **ಸ್ವತಂತ್ರ**, ಹೊಸಪೇಟೆ, ಆಗಸ್ಟ್, ೧೯೫೯.

೪. ಮರೆಯಲಾಗದ ಮಾನನೀಯ ಸಹಪಾಠಿ; ಸಹೃದಯಿ, **ಎಸ್.ಎಂ.ಆರ್. ಸ್ವಾಮಿ ಸನ್ಮಾನ ಗ್ರಂಥ**, ವಿಜಯ ವಿದ್ಯಾಪ್ರಸಾರಕ ಸಮಿತಿ, ಧಾರವಾಡ, ೧೯೯೭.

ಹೆಚ್. ತಿಪ್ಪೇಸ್ವಾಮಿ*

# ಕೂಡ್ಲಿಗಿ ತಾಲೂಕಿನಲ್ಲಿ ಪ್ರಾಗೈತಿಹಾಸಿಕ ನೆಲೆಗಳು

ಮಾನವನ ಪ್ರಾಚೀನತೆಯು ಇಂದಿಗೆ ಸು. ೪ ಮಿಲಿಯನ್ ವರ್ಷಗಳಷ್ಟು ಹಿಂದೆ ಹೋಗುತ್ತದೆ.*[೧] ಅಂದಿನಿಂದಲೂ ಮನುಷ್ಯ ಶಿಲೆಯೊಡನೆ ನಿಕಟ ಸಂಬಂಧವನ್ನು ಹೊಂದಿದ್ದಾನೆ. ಪ್ರಕೃತಿ ಮಾನವನಿಗೆ ಮೊದಲು ನೀಡಿದ ಕೊಡುಗೆಗಳಲ್ಲಿ ಶಿಲೆಯೂ ಒಂದು. ಆರಂಭದಲ್ಲಿ ಅಲೆಮಾರಿಯಾಗಿದ್ದ ಮಾನವನಿಗೆ ಗೆಡ್ಡೆ ಗೆಣಸುಗಳನ್ನು, ಕಂಟಿಗಳನ್ನು ಅಗೆದು ತೆಗೆಯಲು, ಗಿಡಗಳನ್ನು ಕಡಿಯಲು, ಬೇಟೆಯಾಡಲು, ಬೇಟೆಯಾಡಿದ ಪ್ರಾಣಿ ಮಾಂಸವನ್ನು ತುಂಡುಮಾಡಲು, ಮೃತ ಪ್ರಾಣಿಗಳ ಚರ್ಮವನ್ನು ಬೇರ್ಪಡಿಸಲು, ಆಯುಧಗಳನ್ನು ತಯಾರಿಸಲು ಶಿಲೆ ಮಾನವನಿಗೆ ನೆರವಾಗಿದೆ. ಒಟ್ಟಿನಲ್ಲಿ ಅಂದು ಮಾನವನ ಜೀವನದ ಒಂದು ಭಾಗವಾಗಿ ಶಿಲೆ ಬಳಕೆಯಾಗುತ್ತಿತ್ತು. ಅಂದರೆ ಲೋಹದ ಬಳಕೆ ಆರಂಭವಾಗುವ ವರಿಗೆ ಮಾನವ ಶಿಲೆಯನ್ನೆ ಅವಲಂಬಿಸಿದ್ದ. ಈ ಕಾಲಾವಧಿಯನ್ನು ಶಿಲಾಯುಗ (stone age) ಎಂದು ಕರೆಯುತ್ತಾರೆ.

ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು, ನಿಟ್ಟೂರು, ಸಂಗನಕಲ್ಲು, ತೆಕ್ಕಲಕೋಟೆ, ಬೇಡರ ಬೆಳಗಲ್ಲು, ಗಾದಿಗನೂರು, ಜೋಗ, ದರೋಜಿ, ಅಂಗೂರಿನ ಬದಾನ ಬೆಟ್ಟ, ಬಳ್ಳಾರಿ ಬೆಟ್ಟ, ಹಿರೇಕುರವತ್ತಿ, ಕುಡತಿನಿ, ಕುಮತಿ, ಹುಲಕುಂಟೆಗಳಲ್ಲಿ ಈ ಸಂಸ್ಕೃತಿಯ ಕುರುಹುಗಳು ದೊರೆತಿವೆ. ಕೂಡ್ಲಿಗಿ ತಾಲೂಕು ಪ್ರಾಗೇತಿಹಾಸದ ದೃಷ್ಟಿಯಿಂದ ಇಡೀ ಜಿಲ್ಲೆಯಲ್ಲೇ ತನ್ನದೇ ಆದ ವಿಶೇಷ ಸ್ಥಾನವನ್ನು ಪಡೆದಿದೆ. ಇದೇ ತಾಲೂಕಿನ ಅಪ್ಪೇನಹಳ್ಳಿಯಲ್ಲಿ ನವಶಿಲಾಯುಗ ಕಾಲಕ್ಕೆ ಸೇರಿದ ರೇಖಾ ಚಿತ್ರಗಳಿವೆ. ಹಾಗೇ ಕುಮತಿ, ಹುಲಿಕುಂಟೆಗಳಲ್ಲಿ ಬೃಹತ್ ಶಿಲಾಯುಗ ಕಾಲದ ಮಾನವಾಕೃತಿಗಳಿವೆ.*[೨] ಈಚಿನ ನನ್ನ ಅನ್ವೇಷಣಾ ಸಮಯದಲ್ಲಿ ಮೂರು ಪ್ರಮುಖ ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ ಜುಮ್ಮೋಬನಹಳ್ಳಿ, ಸಿಡೇಗಲ್ಲು, ಜರ್ಮಲಿ.

***ಆದಿ ಹಳೆ ಶಿಲಾಯುಗದ ನೆಲೆ-ಜುಮ್ಮೋಬನಹಳ್ಳಿ***

ಕೂಡ್ಲಿಗಿಯಿಂದ ಸು. ೨೨ ಕಿ.ಮೀ. ದೂರದಲ್ಲಿರುವ ಈ ಗ್ರಾಮದ ಬಳಿ ದೊಡ್ಡ ಮರಡಿ, ಸಣ್ಣ ಮರಡಿ ಎಂಬ ಗುಡ್ಡಗಳಿವೆ. ಇಲ್ಲಿನ ಕೆರೆಯ ಸಮೀಪ ದೊಡ್ಡ ಮರಡಿಯಿದ್ದು, ಇದು ಈ ಗ್ರಾಮದ ಎತ್ತರ ಪ್ರದೇಶವಾಗಿದೆ. ಊರಿನ ನಾಲ್ಕು ದಿಕ್ಕಿನಲ್ಲೂ ಅರಣ್ಯವಿದೆ. ಹಿಂದಿನ ಕಾಲದ ಗಿಡ್ಡನಹಟ್ಟಿ, ಓಬಯ್ಯನಗುಡ್ಡ, ಕಾರೇಕೊಳ್ಳ, ಬೆತ್ತಯ್ಯನ ಹಟ್ಟಿ, ದೊಂಬರಹಳ್ಳಿಗಳು ನಾಶವಾದಾಗ ಅಲ್ಲಿನ ಜನರೇ ಜುಮ್ಮೋಬನಹಳ್ಳಿಗೆ ಬಂದು ನೆಲೆಸಿದ್ದಾರೆಂದು ಊರಿನ ಹಿರಿಯರು ಹೇಳುತ್ತಾರೆ. ಕಾಶೀಕೊಳ್ಳ ಹಳ್ಳದ ಬಳಿ ಆದಿ ಇತಿಹಾಸ ಕಾಲದ ಕುರುಹುಗಳಿವೆ. ಗ್ರಾಮದ ಹಿತಕ್ಕಾಗಿ ಹೋರಾಡಿ ಮರಣ ಹೊಂದಿದ ಜವರಯ್ಯ ಮತ್ತು ಓಬಯ್ಯನವರ ನೆನಪಿಗಾಗಿ ನೆಟ್ಟ ವಿಜಯನಗರ ಕಾಲದ ವೀರಗಲ್ಲು ಮತ್ತು ಅದೇ ಕಾಲದ ಶಾಸನವೊಂದು ಸಹಾ ಇದೇ ಗ್ರಾಮದಲ್ಲಿದೆ. ಈ ಗ್ರಾಮದ ಸಮೀಪವೇ ಕುಮತಿ ಹುಲಿಕುಂಟೆಗಳಲ್ಲಿವೆ. ಇಷ್ಟೆಲ್ಲಾ ಚಾರಿತ್ರಿಕ ಮಹತ್ವವನ್ನು ಪಡೆದ ಈ ಗ್ರಾಮದ ವಾಯುವ್ಯ ಭಾಗದಲ್ಲಿನ ಪಿಕಪ್‌ಹಳ್ಳದ ಬಳಿಯ ದಂಡೆಯ ಮೇಲಿನ ಜಮೀನೊಂದರಲ್ಲಿ ಆದಿ ಹಳೆಶಿಲಾಯುಗ ಕಾಲಕ್ಕೆ ಸೇರಿದ ಶಿಲಾ ಕೊಡಲಿ (Stone Axe) ಯೊಂದು ದೊರೆತಿದ್ದು ಮಹತ್ವದೆನಿಸಿದೆ. ಇದನ್ನು ನೀಸ್ ಜಾತಿಯ ಶಿಲೆಯಿಂದ ಆಶ್ಯೂಲ್ ಮಾದರಿಯಲ್ಲಿ ತಯಾರಿಸಲಾಗಿದೆ.*[೩] ಈ ಕೊಡಲಿಯ ಹಿಂಭಾಗ ಮತ್ತು ಮುಂಭಾಗದಲ್ಲೂ ಚಕ್ಕೆಗಳನ್ನು ಎಬ್ಬಿಸಲಾಗಿದ್ದು, ಆಯುಧದ ಎರಡು ಬದಿ ಹಾಗು ಬಾಯಭಾಗ ಹರಿತವಾಗಿರುವಂತೆ ಹಾಗು ಆಯುಧದ ಮತ್ತೊಂದು ಭಾಗ ಚೂಪಿರುವಂತೆ ತಯಾರಿಸಲಾಗಿದೆ. ಇದರ ಉದ್ದ ೧೨ ಸೆಂ.ಮೀ. ಅಗಲ ೨ ಸೆಂ.ಮೀ. ಇದ್ದು ಬಾಯಿಯ ಭಾಗ ೫ ಸೆಂ.ಮೀ. ಇದೆ.

ಇದೇ ಹಳ್ಳದ ಮತ್ತೊಂದು ದಂಡೆಯ ಬದಿಯಲ್ಲಿ ಸೂಕ್ಷ್ಮ ಶಿಲಾಯುಗ ಕಾಲಕ್ಕೆ ಸೇರಿದ ಕೋರ್‌ನ್ನ, ಕೆಲ ಚೂರುಗಳು ದೊರೆತಿವೆ. ಇಲ್ಲಿ ದೊರೆತ ಕೊಡಲಿಯನ್ನು ಆದಿ ಹಳೇ ಶಿಲಾಯುಗ ಕಾಲದ ಮಾನವ ತನ್ನ ದಿನನಿತ್ಯದ ಕೆಲಸಗಳಿಗಾಗಿ ಉಪಯೋಗಿಸಿ ಕೊಂಡಿದ್ದಾನೆಂದು ಆಯುಧದ ಮೇಲಿನ ಕೆಲ ಗುರುತುಗಳ ಸಹಾಯದಿಂದ ನಿರ್ಧರಿಸಬಹುದಾಗಿದೆ. ಈ ಆಯುಧವನ್ನು ಕರ್ನಾಟಕದ ಪುರಾತತ್ವ ಶಾಸ್ತ್ರಜ್ಞರಾದ ಪ್ರೊ.ಅ. ಸುಂದರರವರು ಪರಿಶೀಲಿಸಿ ಕರ್ನಾಟಕದಲ್ಲಿ ನೀಸ್ ಶಿಲೆಯ ಪ್ರಥಮ ಶೋಧನೆ ಎಂದು ಹೇಳಿದ್ದಾರೆ. ಈ ಗ್ರಾಮದಲ್ಲಿ ಪ್ರತಿವರ್ಷ 'ಮಲಿಯಮ್ಮ-ಮಾತಂಗಿ' ಜಾತ್ರೆ ನಡೆಯುತ್ತಿದೆ. ಈ ಜಾತ್ರೆಯಲ್ಲಿ ಪ್ರಾಗೈತಿಹಾಸಿಕ ಮಾನವನನ್ನು ನೆನಪಿಸಿಕೊಡುವ 'ಗಾವು' ಎನ್ನುವ ಜನಪದೀಯ ಆಚರಣೆ ಹಿಂದಿನಿಂದಲೂ ರೂಢಿಯಲ್ಲಿದೆ. 'ಪೋತರಾಜ'ನೊಬ್ಬ ಜೀವಂತವಿರುವ 'ಹೋತ'ವನ್ನು ತನ್ನ ಹಲ್ಲಿನಿಂದ ಕಚ್ಚಿ... ಕಚ್ಚಿ ಜೀವ ತೆಗೆಯುತ್ತಾನೆ. ನಂತರ ನಿಂತಲ್ಲೇ ರಕ್ತವನ್ನು ಹೀರಿ ಹಸಿಮಾಂಸವನ್ನು ತಿನ್ನುತ್ತಾನೆ. ಮೂಲತಃ ಮನುಷ್ಯ ಹಸಿಮಾಂಸವನ್ನು ಪ್ರಾಗೈತಿಹಾಸಿಕ ಕಾಲದಲ್ಲಿ ತಿಂದು ಜೀವಿಸುತ್ತಿದ್ದ ಎನ್ನುವುದನ್ನು ಈ ಜನಾಂಗಿಕ ಆಚರಣೆಯಿಂದ ಗ್ರಹಿಸಬಹುದಾಗಿದೆ. ಈ

*ಪುರಾತತ್ವ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.



ಹಿನ್ನಲೆಯಲ್ಲಿ ಈ ಗ್ರಾಮದ ಸುತ್ತ ಮುತ್ತಲಿನ ಪ್ರದೇಶದಲ್ಲಿ ಖಂಡಿತಾ ಆದಿಮಾನವ ನೆಲೆಸಿರಬೇಕು.

*ಸೂಕ್ಷ್ಮಶಿಲಾಯುಗದ ನೆಲೆ ಸಿಡೇಗಲ್ಲು*

ಸುತ್ತಲೂ ಬೆಟ್ಟಗಳಿಂದ ಆವೃತವಾದ ಈ ಗ್ರಾಮವು ಕೂಡ್ಲಿಗಿಯಿಂದ ಸು. ೨೯ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಬೆಟ್ಟಸಾಲು ಗುಡೇಕೋಟೆ ಬೆಟ್ಟ ಸಾಲಿನೊಡನೆ ಸೇರ್ಪಡೆಯಾಗುತ್ತದೆ. ಈ ಗ್ರಾಮದ ಬಳಿ ಹರಿಯುವ ಚಿಕ್ಕ ಮತ್ತು ಹಿರೇ ಹಳ್ಳಗಳು ಹರಿದು ಮುಂದೆ ಚಿಕ್ಕಹಗರಿ ನದಿಯನ್ನು ಸೇರಿಸಿಕೊಳ್ಳುತ್ತವೆ. ಇಲ್ಲಿನ ನೈಸರ್ಗಿಕ ಗುಹೆಗಳು ಪ್ರಾಗಿತಿಹಾಸ ಕಾಲದ ಮಾನವನ ವಾಸಕ್ಕೆ ಅನುಕೂಲವನ್ನು ಒದಗಿಸಿವೆ. ಇಲ್ಲಿನ ಬಸವಣ್ಣ ದೇವಾಲಯದ ಬಳಿ ಇರುವ ಕೆಲವು ಮೂರ್ತಿಗಳು ಕಲ್ಯಾಣಿ ಚಾಲುಕ್ಯರ ಕಾಲದವುಗಳಾಗಿವೆ.*[೪] ಇಲ್ಲಿನ ಗುಹೆಯೊಂದರಲ್ಲಿ ಬೂದುಬಣ್ಣದ, ಕೆಂಪು, ಕಪ್ಪು ಬಣ್ಣದ ಮಡಿಕೆ ಚೂರುಗಳು ದೊರೆತಿವೆ. ಇಲ್ಲಿನ ಹಿರೇಹಳ್ಳಧ (ಪೆದ್ದವಂಕ) ದಂಡೆಯಲ್ಲಿ ಸೂಕ್ಷ್ಮ ಶಿಲಾಯುಗ ಕಾಲಕ್ಕೆ ಸೇರಿದ ಚಾರ್ಟ್ ಕಲ್ಲಿನಿಂದ ತಯಾರಿಸಲ್ಪಟ್ಟ ಬ್ಲೇಡ್, ಬರೀನ್, ಲುನೇಟ್, ರೀತಿಯ ಚಿಕ್ಕಚಿಕ್ಕ ಆಯುಧೋಪಕರಣಗಳು ದೊರೆತಿವೆ. ಇವುಗಳಲ್ಲಿ ಕೆಲವು ಉಪಕರಣಗಳ ಒಂದು ಭಾಗವು ಚೂಪಾಗಿದ್ದು, ಅವುಗಳ ಎರಡೂ ಬದಿಯಲ್ಲೂ ಹರಿತವಾಗಿವೆ. ಈ ಉಪಕರಣಗಳನ್ನು ಕೊರೆಯುವ ಇಲ್ಲವೇ ಕೊಯ್ಯಲು ಉಪಯೋಗಿಸಿರುವ ಸಾಧ್ಯತೆ ಇದೆ.

*ನೂತನ ಶಿಲಾಯುಗದ ನೆಲೆ ಜರ್ಮಲಿ*

ಕೂಡ್ಲಿಗಿಯಿಂದ ಸು. ೧೪ ಕಿ.ಮೀ. ದೂರದಲ್ಲಿರುವ ಜರಿಮಲೆ (ಜರ್ಮಲಿ) ಗಿರಿದುರ್ಗವಾಗಿದ್ದು, ಸುತ್ತಲೂ ಬೆಟ್ಟಗಳಿಂದ, ನೈಸರ್ಗಿಕ ಗುಹೆಗಳಿಂದ ಆವೃತವಾಗಿದೆ. ಜರ್ಮಲಿ ಬೆಟ್ಟವು ಸಮುದ್ರ ಮಟ್ಟದಿಂದ ಸು. ೨,೭೫೦ ಅಡಿ ಎತ್ತರವಿದೆ. ಹಾಗು ೮೦೦ ಅಡಿ ಸುತ್ತಲಿನ ಪ್ರದೇಶದಿಂದ ಎತ್ತರವಿದೆ. ಈ ಗ್ರಾಮ ಪಾಳೇಗಾರರ ಆಡಳಿತ ಕೇಂದ್ರಬಿಂದುವಾಗಿದ್ದರಿಂದ ಇಲ್ಲಿ ಅವರ ಕಾಲದ ಕೋಟೆ ಹಾಗು ದೇವಾಲಯಗಳಿವೆ. ಕೋಟೆಯಲ್ಲಿನ ಬಾಗೇಶ್ವರ ದೇವಾಲಯದ ಬಳಿ ನವ ಶಿಲಾಯುಗ ಕಾಲಕ್ಕೆ ಸೇರಿದ ಡೈಕ್ ಶಿಲೆಯಿಂದ ತಯಾರಿಸಲಾದ ಕೊಡಲಿ ಹಾಗು ತ್ರುಟಿತ ಕೊಡಲಿಗಳು ಹಾಗು ಬೂದು, ಕಪ್ಪು, ಕೆಂಪುಬಣ್ಣದ ಮಡಿಕೆ ಚೂರುಗಳು ದೊರೆತಿವೆ. ಇವುಗಳಲ್ಲಿ ಸಣ್ಣ ಬಟ್ಟಲಾಕಾರದ, ಕಂಟದ ಭಾಗಗಳು ಪ್ರಮುಖವಾಗಿವೆ. ಇಲ್ಲಿ ದೊರೆತಿರುವ ಕೊಡಲಿ (ಶಿಲಾಯುಧ)ಯ ಬಾಯಿಭಾಗವನ್ನು ಹರಿತಗೊಳಿಸಿಲ್ಲ ಮತ್ತು ಸುತ್ತಲೂ ಅದನ್ನು ಹೆಚ್ಚಿನ ಮಟ್ಟದಲ್ಲಿ ಉಜ್ಜಿ ನುಣಪುಗೊಳಿಸಿಲ್ಲ. ಆದರೆ ಇದರ ಮೇಲೆ ಕೈ ಬೆರಳುಗಳ ಗುರ್ತುಗಳು ಮೂಡಿವೆ. ಇದರ ಉದ್ದ ೧೫ ಸೆಂ.ಮೀ. ಅಗಲ ೬ ಸೆಂ.ಮೀ. ಇದ್ದು, ಬಾಯಿಭಾಗ ೪ ಸೆಂ.ಮೀ. ಇದೆ. ಈ ಶಿಲಾಯುಧವನ್ನು ಸುತ್ತಿಗೆ ರೀತಿಯಲ್ಲಿ ಹೊಡೆಯಲು ಉಪಯೋಗಿಸಿರುವ ಸಾಧ್ಯತೆಗಳು ಹೆಚ್ಚಾಗಿವೆ. ಇಲ್ಲಿಯೇ ದೊರೆತ ಮತ್ತೊಂದು ಶಿಲಾಯುಧವನ್ನು ಸಹಾ ಡೈಕ್ ಶಿಲೆಯಿಂದ ತಯಾರಿಸಲಾಗಿದೆ. ಇದನ್ನು ಸುತ್ತಲೂ ಉಜ್ಜಿ ನಯಗೊಳಿಸಲಾಗಿದೆ. ತ್ರುಟಿತವಾಗಿರುವ ಈ ಶಿಲಾ ಕೊಡಲಿಯ ಕೊನೆಯ ಭಾಗ (ಚೂಪಾಗಿರುವ ಭಾಗ) ಮಾತ್ರ ಉಳಿದುಕೊಂಡಿದ್ದು ಇದರ ಉದ್ದ ೬ ಸೆಂ.ಮೀ. ಅಗಲ ೫ ಸೆಂ.ಮೀ. ಇದೆ. ಇದನ್ನು ಆಕಾಲದ ಮನುಷ್ಯ ತನ್ನ ನಿತ್ಯದ ಕೆಲಸಗಳಿಗೆ ಬಳಸಿಕೊಂಡಿದ್ದಾನೆಂದು ಹೇಳಬಹುದು.

ಇವೆಲ್ಲ ಕೂಡ್ಲಿಗಿ ತಾಲೂಕಿನ ಪ್ರಾಗಿತಿಹಾಸದ ಮೇಲೆ ಹೊಸ ಬೆಳಕನ್ನು ಬೀರುತ್ತವೆ. ಇಡೀ ಜಿಲ್ಲೆಯಲ್ಲೇ ಮೊದಲಬಾರಿಗೆ ಜುಮ್ಮೋಬನ ಹಳ್ಳಿಯಲ್ಲಿ ಆದಿ ಹಳೇಶಿಲಾಯುಗ ಕಾಲದ ಶಿಲಾಯುಧ ದೊರೆತಿರುವುದು ವಿಶೇಷ ಹಾಗು ಮಹತ್ವವೆನಿಸಿದೆ. ಆದರೆ ಈ ನೆಲೆಯ ಸಮೀಪದಲ್ಲಿ ಎಲ್ಲಿಯೂ ಈ ಮಾದರಿಯ ಶಿಲಾಯುಧ ತಯಾರಿಕಾ ಘಟಕ ಈವರೆಗೆ ಕಂಡುಬಂದಿಲ್ಲ, ಹಾಗಾಗಿ ಈ ಶಿಲಾಯುಧದ ಮೂಲ, ತಯಾರಿಕಾ ಸ್ಥಳ, ಇತ್ಯಾದಿಗಳ ಬಗ್ಗೆ ಹಾಗು ಉಳಿದ ನೆಲೆಗಳ ಕುರಿತು ಹೆಚ್ಚಿನ ಸಂಶೋಧನೆಯ ಅವಶ್ಯಕತೆ ಇ**ದೆ.**



(ವಿಭಾಗದ ಮುಖ್ಯಸ್ಥರು ಹಾಗು ನನ್ನ ಮಾರ್ಗದರ್ಶಕರು ಆದ ಶ್ರೀ ಬಾಲಸುಬ್ರಹ್ಮಣ್ಯ ಹಾಗು ಡಿಸ್ಕವರಿ ಟ್ರೂಫ್ ಸದಸ್ಯರಾದ ವೆಂಕಟೇಶ್, ರಂಗನಾಥ, ಶ್ರೀಮತಿ ಕಮಲ, ಶಿಕ್ಷಕ ಮಂಜುನಾಥ, ಶೇಖರಪ್ಪ ಇವರುಗಳು ಲೇಖನ ತಯಾರಿಸಲು ಹಾಗು ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ್ದಾರೆ. ಇವರೆಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ಪ್ರೊ. ಷೇಕ್ ಆಲಿ. ಬಿ. ಮತ್ತು ಪ್ರೊ. ಸುಂದರ ಅ., (೧೯೯೭) **ಕರ್ನಾಟಕ ಚರಿತ್ರೆ ಸಂಪುಟ-೧**, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.

*೨. ಎಚ್. ಜಿ. ತಿಪ್ಪೇಸ್ವಾಮಿ : *'ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು'* **ಇತಿಹಾಸ ದರ್ಶನ**, (ಸಂ) ಎಂ. ಜಿ. ನಾಗರಾಜ್, ಡಾ. ಪಿ. ವಿ. ಕೃಷ್ಣಮೂರ್ತಿ, ಕರ್ನಾಟಕ ಇತಿಹಾಸ ಅಕಾದಮಿ, ಬೆಂಗಳೂರು, ಸಂ. ೧೨/೧೯೯೮, ಪು. ೧೯.

*೩. ಫ್ರಾನ್ಸ್ ದೇಶದಲ್ಲಿ ಮೊದಲ ಬಾರಿಗೆ ಆಶ್ಯೂಲ್ ಎಂಬಲ್ಲಿ ಈ ಮಾದರಿಯ ಉಪಕರಣಗಳು ಕಂಡುಬಂದಿವೆ. ಆಗಾಗಿ ಅದೇ ಹೆಸರಿನಿಂದ ಗುರುತಿಸಲಾಗುತ್ತಿದೆ.

*೪. ಕುಂ.ಬಾ.ಸ. **ಬಳ್ಳಾರಿ ಜಿಲ್ಲಾ ಸಂಸ್ಕೃತಿ ದರ್ಶನ.**

*೫. **ಬಳ್ಳಾರಿ ಜಿಲ್ಲಾ ಗೆಜೆಟಿಯರ್.**

*೬. Nagaraja Rao. M.S. (Ed) *Progress of Archaeology in Karnataka* (1956-1972-1978. Directorate of Arachaeology and Museum, Mysore.

ಡಾ|| ಕೆ. ಬಿ. ಶಿವತಾರಕ್*

# ತುಮಕೂರು ಜಿಲ್ಲಾ ಪ್ರದೇಶದ ನೂತನ ಶಿಲಾಯುಗ ಸಂಸ್ಕೃತಿ

ಕರ್ನಾಟಕದಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಪ್ರಪ್ರಥಮವಾಗಿ ಕ್ಯಾಪ್ಟನ್ ನ್ಯೂ ಜೋಲ್ಡ್ ಎಂಬ ಇಂಗ್ಲಿಷ್ ಅಧಿಕಾರಿ ೧೮೩೬ರಲ್ಲಿ ಕಂಡುಹಿಡಿದರು. ಕುಡತಿನಿ ಮತ್ತು ಕುಪ್ಪಗಲ್‌ಗಳಲ್ಲಿ ಬೂದಿದಿಬ್ಬದ ನೆಲೆಗಳನ್ನೂ ಅವರು ಶೋಧಿಸಿರುವರು. ೧೮೪೨ರಲ್ಲಿ ಕ್ಯಾಪ್ಟನ್ ಮೆಡಾಸ್‌ಟೈಲರ್‌ರವರಿಗೆ ಉಜ್ಜ ನಯಗೊಳಿಸಿದ ಕೊಡಲಿ ಉಪಕರಣಗಳು ಲಿಂಗಸುಗೂರಿನಲ್ಲಿ ದೊರೆತವು. ೧೮೭೨ರಲ್ಲಿ ವಿಲಿಯಂ ಫ್ರೇಸರ್‌ರವರಿಗೆ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಪ್ರದೇಶದಲ್ಲಿ ಈ ಸಂಸ್ಕೃತಿಯ ವಾಸ್ತವ್ಯದ ನೆಲೆಯು ದೊರೆಯಿತು. ೧೮೮೧-೮೬ರಲ್ಲಿ ರಾಬರ್ಟ್ ಬ್ರೂಸ್‌ಫೂಟ್‌ರವರು ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಮತ್ತು ಬೀರ್‌ಮಂಗಲಗಳಲ್ಲಿಯೂ, ಮೈಸೂರು ಜಿಲ್ಲೆಯ ಲಕ್ಷ್ಮಾಪುರ, ತಿ. ನರಸೀಪುರ ಮತ್ತು ಮಂಡ್ಯ ಜಿಲ್ಲೆಯ ಫ್ರೆಂಚ್‌ಹಿಲ್ಸ್‌ಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಬೆಳಕಿಗೆ ತಂದರು (ಫೂಟ್. ಆರ್. ಬಿ. ೧೯೧೬). ಆನಂತರ ಕೃಷ್ಣಾ ಮೇಲ್ದಂಡೆಯ ಭೀಮಾ ಹಾಗೂ ಮಲಪ್ರಭಾ ನದಿ ಕಣಿವೆಗಳಲ್ಲಿ, ಸುರಪುರ ಸಂಗಮ ಕೇಂದ್ರದಲ್ಲಿ ಹಾಗೂ ತುಂಗಭದ್ರಾ ಕೆಳದಂಡೆಯಲ್ಲಿ ಮಹತ್ವದ ಅನೇಕ ನೂತನ ಶಿಲಾಯುಗ ಸಂಸ್ಕೃತಿಯ ನೆಲೆಗಳು ಬೆಳಕಿಗೆ ಬಂದಿವೆ.

ಕರ್ನಾಟಕದಲ್ಲಿ ಹಲವು ನೂತನ ಶಿಲಾಯುಗದ ಸಂಸ್ಕೃತಿಯ ನೆಲೆಗಳ ಉತ್ಖನನ ಕೈಗೊಳ್ಳಲಾಗಿದೆ. ಅವುಗಳೆಂದರೆ **ಬ್ರಹ್ಮಗಿರಿ** (ವೀಲರ್, ಆರ್.ಇ.ಎಂ. ೧೯೪೮ : ೧೮೦-೨೭೦), **ಮಸ್ಕಿ** (ಥಾಪರ್ ಬಿ. ಕೆ. ೧೯೭೫ : ೪-೧೨೦), **ಪಿಕ್ಲಿಹಾಳ** (ಅಲ್ಚಿನ್, ೧೯೬೦), **ತೆಕ್ಕಲಕೋಟ** (ನಾಗರಾಜರಾವ್ ಮತ್ತು ಮಲ್ಹೋತ್ರಾ, ೧೯೬೫), **ಕುಪ್ಪಗಲ್** (ಮಜುಂದಾರ್ ಮತ್ತು ರಾಜಗುರು, ೧೯೬೬), **ಹಳ್ಳೂರು** (ನಾಗರಾಜರಾವ್ ಎಂ. ಎಸ್. ೧೯೭೧). **ತಿ. ನರಸೀಪುರ** (ಶೇಷಾದ್ರಿ ಎಂ. ೧೯೭೧), **ಕೊಡೆಕಲ್** (ಪದ್ದಯ್ಯ ಕೆ. ೧೯೭೩) **ಹೆಮ್ಮಿಗೆ** (ಹನುಮಂತರಾವ್ ಮತ್ತು ನಾಗರಾಜು ಎಸ್. ೧೯೭೪) ಹಾಗೂ ಇತ್ತೀಚೆಗೆ ನಡೆದ ಕೋಲಾರ ಜಿಲ್ಲೆಯ **ಬನಹಳ್ಳಿ** (ಇಂ.ಆ.ರಿ. ೧೯೮೩-೮೪ : ೪೨-೪೬, ೧೯೮೫-೮೬ : ೪೩-೪೪ ಹಾಗೂ ೧೯೮೬-೮೭ : ೪೨-೪೫).

ಇತ್ತೀಚೆಗೆ ಮಾಂಜ್ರಾ-ಕಾರಂಜಾ ನದಿ ಕಣಿವೆಗಳ ಕ್ಷೇತ್ರಕಾರ್ಯ (ಷಡಕ್ಷರಯ್ಯ ಆರ್. ಎಂ. ೧೯೯೫ : ೧೦೭-೧೨೮), ಮಲೆನಾಡು ಮತ್ತು ಅರೆಮಲೆನಾಡು ಪ್ರದೇಶಗಳಲ್ಲಿಯೂ ನೂತನ ಶಿಲಾಯುಗ ಸಂಸ್ಕೃತಿಯ ನೆಲೆಗಳು ಕಂಡುಬಂದಿವೆ (ಪೂಣಚ್ಚ ಕೆ. ಪಿ. ೧೯೯೦ : ೪೪೭-೫೯೩).

ಈ ಎಲ್ಲಾ ಅಧ್ಯಯನಗಳೂ ಈ ಸಂಸ್ಕೃತಿಯ ಕಾಲಾನುಕ್ರಮ, ಮಣ್ಣಿನ ಪಾತ್ರೆಗಳ ವೈವಿಧ್ಯ, ನಿವಾಸಗಳು, ಶಿಲೋಪಕರಣಗಳ ವೈವಿಧ್ಯತೆ, ಮೃತರನ್ನು ಸಂಸ್ಕಾರ ಮಾಡುವ ವಿಷಯ ಹೀಗೆ ಹಲವಾರು ವಿಷಯಗಳನ್ನು ತಿಳಿಯಲು ಸಹಾಯಕವಾಗಿದೆ. ಹೀಗೆ ದೊರೆತ ಅವಶೇಷಗಳ ವೈಜ್ಞಾನಿಕ ಅಧ್ಯಯನವಾದ ಇಂಗಾಲ-೧೪ರ ಕಾಲಮಾನದಂತೆ ಕೊಡೆಕಲ್‌ನ ಅವಶೇಷದ ಕಾಲಮಾನ ಕ್ರಿ. ಪೂ. ೨೪೬೦, ತಿ. ನರಸೀಪುರದ್ದು ಕ್ರಿ. ಪೂ. ೧೪೯೫-೧೦೮೫, ಬೂದಿಹಾಳದ್ದು ಕ್ರಿ. ಪೂ. ೧೮೦೦-೧೭೦೦, ವಟಗಲ್‌ನದ್ದು ಸು. ಕ್ರಿ. ಪೂ. ೧೭೦೦ ರಿಂದ ೧೫೦೦ ಎಂದು ತಿಳಿದುಬಂದಿದೆ. ಈ ಎಲ್ಲಾ ಮಾಹಿತಿಗಳೊಂದಿಗೆ ಈ ಸಂಸ್ಕೃತಿಯ ವಿಕಸನ ಪದ್ಧತಿಯ ಮೇಲೆ ಬೆಳಕು ಚಲ್ಲುವಂತಹವುಗಳಲ್ಲಿ ಮುಖ್ಯವಾದವುಗಳೆಂದರೆ, ಈ ನಿವೇಶನಗಳಲ್ಲಿ ಸರ್ವೇಸಾಧಾರಣವಾಗಿ ಕಂಡುಬರುವ ಕೆಲವು ಅಂಶಗಳಿದ್ದರೂ, ಪ್ರತಿಯೊಂದರಲ್ಲೂ ಕೆಲವು ವಿಶಿಷ್ಟತೆಗಳಿರುವುದು. ಅವುಗಳೆಂದರೆ:

೧. ಈ ನಿವೇಶನಗಳಲ್ಲಿಯ ಪರಸ್ಪರ ಸಾಂಸ್ಕೃತಿಕ ಸಂಬಂಧ ನಿಕಟವಾಗಿದ್ದುದು.

೨. ದೂರದ ಇತರ ಸಮಕಾಲೀನ ಸಂಸ್ಕೃತಿಗಳೊಡನೆ ಇಲ್ಲಿಯವರ ಸಂಪರ್ಕ ಮತ್ತು ಸಾಂಸ್ಕೃತಿಕವಾಗಿ ಪರಸ್ಪರ ಕೊಡುಕೊಳ್ಳುವಿಕೆಗಳು.

೩. ಪ್ರಾದೇಶಿಕ ಪರಿಸರದ ಪ್ರಭಾವ ನೂತನ ಶಿಲಾಯುಗ ಸಂಸ್ಕೃತಿಯಲ್ಲಿ ಕಂಡುಬರುತ್ತವೆ.

ಇಷ್ಟೊಂದು ವಿಶಾಲವಾದ ಭೂಪ್ರದೇಶದ ವಿವಿಧ ಭೂಭಾಗಗಳಲ್ಲಿ ಬೆಳೆದುಬಂದ ಸಂಸ್ಕೃತಿಗಳು ಪರಸ್ಪರ ಅವಲಂಬನೆ ಮತ್ತು ಸಂಪರ್ಕಗಳಿಲ್ಲದೆ ಸ್ವತಂತ್ರವಾಗಿ ಬೆಳೆದುವೆಂದರೆ ಅಸಹಜವೆನಿಸುತ್ತದೆ. ಹೀಗೆ ನೂತನಶಿಲಾಯುಗ ಸಂಸ್ಕೃತಿಯ ಜನರು ಸಾಂಸ್ಕೃತಿಕವಾಗಿ ವೈವಿಧ್ಯಮಯ ಬದುಕನ್ನು ರೂಢಿಸಿಕೊಂಡಿದ್ದರು.

***ತುಮಕೂರು ಜಿಲ್ಲಾಪ್ರದೇಶದ ನೂತನ ಶಿಲಾಯುಗ ಸಂಸ್ಕೃತಿಯ ನೆಲೆಗಳು***

ತುಮಕೂರುಜಿಲ್ಲಾ ಪ್ರದೇಶದಲ್ಲಿ ಈ ಸಂಸ್ಕೃತಿಯ ನೆಲೆಗಳಿರುವುದು ಸರ್ವೇಸಾಮಾನ್ಯ. ಇದಕ್ಕೆ ಮುಖ್ಯ ಕಾರಣ, ಇಲ್ಲಿನ ಪರಿಸರ. ಇಲ್ಲಿ ಕೈಗೊಂಡ ಕ್ಷೇತ್ರಕಾರ್ಯದ ಫಲವಾಗಿ

* ಪ್ರಾಧ್ಯಾಪಕ, ಎಸ್.ಎಂ.ಎಸ್. ಕಾಲೇಜು, ಬ್ರಹ್ಮಾವರ - ೫೭೬ ೨೧೩.

ನೂತನ ಶಿಲಾಯುಗ ಸಂಸ್ಕೃತಿಯ ೩೧ ನೆಲೆಗಳು ಬೆಳಕಿಗೆ ಬಂದಿವೆ. ಈ ನೆಲೆಗಳು ವಿಶೇಷವಾಗಿ ಜಿಲ್ಲೆಯ ಉತ್ತರದ ಬೆಟ್ಟಸಾಲಿನ ಪ್ರದೇಶಗಳಿಂದೊಳಗೊಂಡ ಪೆನ್ನಾರ್ ನದಿ ಪಾತ್ರಕ್ಕೆ ಸೇರುವ ಪಾವಗಡ, ಮಧುಗಿರಿ, ಕೊರಟಗೆರೆ ಮತ್ತು ತುಮಕೂರು ತಾಲೂಕುಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿವೆ. ಜಿಲ್ಲೆಯ ದಕ್ಷಿಣ ಭಾಗದ ಶಿಂಷಾ ನದಿ ಪಾತ್ರದ ಉಳಿದ ಭಾಗಗಳಲ್ಲಿಯೂ ಅಲ್ಲೊಂದು ಇಲ್ಲೊಂದು ಎನ್ನುವಂತೆ ಬಿಡಿ ಉಪಕರಣಗಳು ದೊರೆತು, ಈ ಸಂಸ್ಕೃತಿಯು ಉತ್ತರದಿಂದ ದಕ್ಷಿಣಕ್ಕೆ ಅಲ್ಪ ಪ್ರಮಾಣದಲ್ಲಿ ಪ್ರಸರಣವಾಗಿರುವ ಸೂಚನೆಯನ್ನು ನೀಡುತ್ತದೆ. ಈ ಪ್ರದೇಶದ ನೆಲೆಗಳಿರುವ ಬಹಳಷ್ಟು ಸ್ಥಳಗಳನ್ನು ಕೃಷಿಗೆ ಬಳಸಿರುವುದರಿಂದ ಹೆಚ್ಚಿನ ಅವಶೇಷಗಳು ಕಣ್ಮರೆಯಾಗುತ್ತಿವೆ. ಹೀಗಿದ್ದರೂ ೩೧ ಸ್ಥಳಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಕುರುಹುಗಳಾದ ವಿಶಿಷ್ಟ ಶಿಲೋಪಕರಣಗಳು, ಮಣ್ಣಿನ ಪಾತ್ರೆಯ ಭಾಗಗಳು, ಬೂದಿ ದಿಬ್ಬಗಳ ಅವಶೇಷಗಳು ಪರಿಶೋಧಿತವಾಗಿವೆ.

### *ನೂತನ ಶಿಲಾಯುಗದ ನೆಲೆಗಳು*

ಪ್ರಸ್ತುತ ಅಧ್ಯಯನ ಪ್ರದೇಶದ ೩೧ ನೆಲೆಗಳಲ್ಲಿ ನೂತನ ಶಿಲಾಯುಗದ ಅವಶೇಷಗಳು ಕಂಡುಬಂದಿವೆ. ಇವುಗಳಲ್ಲಿ ೨೨ ನೆಲೆಗಳಲ್ಲಿ ಕೇವಲ ಉಪಕರಣಗಳು ಮಾತ್ರ ದೊರೆತಿವೆ. ೪ ನೆಲೆಗಳಲ್ಲಿ ಕೇವಲ ಮಣ್ಣಿನ ಪಾತ್ರೆಯ ಭಾಗಗಳು ದೊರೆತಿವೆ. ಹಾಗೂ ೫ ನೆಲೆಗಳಲ್ಲಿ ಉಪಕರಣ ಮತ್ತು ಮೃತ್‌ಪಾತ್ರೆಗಳೆರಡೂ ಕಂಡುಬಂದಿದ್ದು, ಸಮೃದ್ಧ ನೆಲೆಗಳಾಗಿವೆ. ಉಪಕರಣ ಮತ್ತು ಮೃತ್‌ಪಾತ್ರೆಯ ಜೊತೆಯಲ್ಲಿ ೨ ನೆಲೆಗಳಲ್ಲಿ ಬೂದಿದಿಬ್ಬದ ಅವಶೇಷಗಳು ಕಂಡುಬಂದಿವೆ. ೧೭ ನೆಲೆಗಳಲ್ಲಿ ನೂತನ ಶಿಲಾಯುಗೀನ ಸೂಕ್ಷ್ಮ ಶಿಲೋಪಕರಣಗಳೂ ದೊರೆತಿವೆ. ಒಟ್ಟು ೩೧ ನೆಲೆಗಳ ಪರಿಸರದ ಹಿನ್ನೆಲೆಯಲ್ಲಿ ಅವುಗಳನ್ನು ಈ ರೀತಿಯಾಗಿ ವರ್ಗೀಕರಿಸಬಹುದಾಗಿದೆ :

*೨೪ ಬೆಟ್ಟದ ತಪ್ಪಲಿನಲ್ಲಿರುವ ನೆಲೆಗಳು ೩ ಸ್ವಾಭಾವಿಕ ನೀರಿನಾಸರೆಯ ನೆಲೆಗಳು ೨ ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆಯ ನೆಲೆಗಳು ೨ ಬಯಲು ಪ್ರದೇಶದ ನೆಲೆಗಳು.*

### *ಶಿಲಾಮಾದರಿ*

ಸ್ಥಳೀಯವಾಗಿಯೇ ದೊರಕುವ ವಿವಿಧ ಮಾದರಿಯ ಶಿಲಾಪ್ರಭೇದಗಳನ್ನು ಬಳಸಿ ಶಿಲೋಪಕರಣಗಳನ್ನು ರೂಪಿಸಲಾಗಿದೆ. ಒಟ್ಟು ೧೨೦ ಉಪಕರಣಗಳು ದೊರಕಿದ್ದು, ವಿವಿಧ ಶಿಲಾಪ್ರಭೇದದಂತೆ ಈ ಕೆಳಕಂಡಂತೆ ವರ್ಗೀಕರಿಸಬಹುದು ವರ್ಗೀಕರಿಸಬಹುದಾಗಿದೆ :

| ಕ್ರಮ ಸಂಖ್ಯೆ | ನೆಲೆ | ಉಪಕರಣ ಮಾತ್ರ ದೊರೆತ ಸ್ಥಳ | ಮಡಕೆ ಭಾಗ ಮಾತ್ರ ದೊರೆತ ಸ್ಥಳ | ಉಪಕರಣ ಮತ್ತು ಮಣ್ಣಿನ ಪಾತ್ರೆ ದೊರೆತ ಸ್ಥಳ | ಉಪಕರಣ, ಮಣ್ಣಿನ ಪಾತ್ರೆ ಜೊತೆಗೆ ಬೂದಿ ದಿಬ್ಬ ದೊರೆತ ಸ್ಥಳ | ನೆಲೆಯ ಪರಿಸರ |
|---|---|---|---|---|---|---|
| ೧. | ಅವರ್ಗಲ್ಲು | ✓ | | | | ಬೆಟ್ಟದ ತಪ್ಪಲು |
| ೨. | ಅಂಕನಬಾವಿ | ✓ | | | | ಸ್ವಾಭಾವಿಕ ನೀರಿನಾಸರೆ |
| ೩. | ಕತ್ತಿರಾಜನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೪. | ಕಲ್ಲೇನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೫. | ಕಲ್ಲೇನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೬. | ಕೈದಾಳ | ✓ | | | | ಸ್ವಾಭಾವಿಕ ನೀರಿನಾಸರೆ |
| ೭. | ಕೈಮರ | ✓ | | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ |
| ೮. | ಗುರಮ್ಮನಕಟ್ಟೆ | ✓ | | | | ಬೆಟ್ಟದ ತಪ್ಪಲು |
| ೯. | ಗೊಲ್ಲರಹಟ್ಟಿ | | ✓ | | | ಬೆಟ್ಟದ ತಪ್ಪಲು |
| ೧೦. | ನಾಗಲಾಪುರ | | | ✓ | | ಬೆಟ್ಟದ ತಪ್ಪಲು |
| ೧೧. | ನಿಡುಗಲ್ಲು | | | ✓ | | ಬೆಟ್ಟದ ತಪ್ಪಲು |
| ೧೨. | ಪಾವಗಡ | ✓ | | | | ಬೆಟ್ಟದ ತಪ್ಪಲು |
| ೧೩. | ಬುಕ್ಕಾಪಟ್ಣ | ✓ | | | | ಬಯಲು ಪ್ರದೇಶ |
| ೧೪. | ಬೂದಿಗುಡ್ಡ | ✓ | | | | ಬೆಟ್ಟದ ತಪ್ಪಲು |
| ೧೫. | ಬೂದಿಬೆಟ್ಟ | ✓ | | | | ಬೆಟ್ಟದ ತಪ್ಪಲು |
| ೧೬. | ಬೆಳ್ಳಿಬಟ್ಟಲಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೧೭. | ಮಧುಗಿರಿ | ✓ | | | | ಬೆಟ್ಟದ ತಪ್ಪಲು |
| ೧೮. | ಮರಿದಾಸನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೧೯. | ಮಾರನಾಯಕನಪಾಳ್ಯ | | ✓ | | | ಬೆಟ್ಟದ ತಪ್ಪಲು |
| ೨೦. | ಮಿಡಿಗೇಶಿ | | | ✓ | | ಬೆಟ್ಟದ ತಪ್ಪಲು |
| ೨೧. | ರಜತಾದ್ರಿಪುರ | ✓ | | | | ಬೆಟ್ಟದ ತಪ್ಪಲು |
| ೨೨. | ರಾಚಮಾರನಹಳ್ಳಿ | ✓ | | | | ಬೆಟ್ಟದ ತಪ್ಪಲು |

| | | | | | | |
|---|---|---|---|---|---|---|
| ೨೩. | ಯಲಪ್ಪನಾಯಕನಹಳ್ಳಿ | | | ✓ | ✓ | ಬೆಟ್ಟದ ತಪ್ಪಲು |
| ೨೪. | ಯಲಪ್ಪನಾಯಕನ ಹೊಸಕೋಟೆ | | | ✓ | ✓ | ಬೆಟ್ಟದ ತಪ್ಪಲು |
| ೨೫. | ಸಿದ್ದಗಂಗಾಬೆಟ್ಟ | | ✓ | | | ಬೆಟ್ಟದ ತಪ್ಪಲು |
| ೨೬. | ಸಿದ್ದರಬೆಟ್ಟ | | ✓ | | | ಬೆಟ್ಟದ ತಪ್ಪಲು |
| ೨೭. | ಸಿದ್ಧಾಪುರ | ✓ | | | | ಬೆಟ್ಟದ ತಪ್ಪಲು |
| ೨೮. | ಸೀಗೆಪಾಳ್ಯ | ✓ | | | | ಬೆಟ್ಟದ ತಪ್ಪಲು |
| ೨೯. | ಸಂಪಿಗೆ | ✓ | | | | ಸ್ವಾಭಾವಿಕ ನೀರಿನಾಸರೆ |
| ೩೦. | ಹೂವಿನಕಟ್ಟೆ | ✓ | | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ |
| ೩೧. | ಹೊಸಹಳ್ಳಿ | ✓ | | | | ಬಯಲು ಪ್ರದೇಶ |

*ಡೈಕ್ ಶಿಲೆಯ ಉಪಕರಣ ೩೨ (೨೬.೬೭%); ಡಾಲರೈಟ್ ಶಿಲೆಯ ಉಪಕರಣ ೭೬ (೬೨.೩೩%); ಬಳಪದ ಕಲ್ಲಿನ ಉಪಕರಣ ೧೨ (೧೦%).*



ಕಣಶಿಲೆಯ ಉಪಯೋಗವು ಹೆಚ್ಚಿನ ಪ್ರಮಾಣದಲ್ಲಿ ಆಗಿರುವುದು ತಿಳಿಯುತ್ತದೆ. ನೂತನ ಶಿಲಾಯುಧಗಳ ಜೊತೆಗೆ ಸೂಕ್ಷ್ಮ ಶಿಲೋಪಕರಣಗಳನ್ನು ಬಳಸಲಾಗಿದ್ದು ಅವುಗಳ ಶಿಲಾ ಪ್ರಭೇದವು ಈ ಕೆಳಕಂಡಂತಿವೆ : ಒಟ್ಟು ೩೨೦ ಉಪಕರಣಗಳು ದೊರೆತಿವೆ.

*ಕ್ವಾರ್ಟ್ಸ್ ಶಿಲೆಯ ಉಪಕರಣ ೧೬೬ (೫೧.೮೭%); ಆದಿರುಯುಕ್ತ ಕ್ವಾರ್ಟ್ಸ್ ಶಿಲೆಯ ಉಪಕರಣ ೬೩ (೧೯.೭೦%); ಜಾಸ್ಪರ್ ಶಿಲೆಯ ಉಪಕರಣ ೫೫ (೧೭.೧೮%); ಆದಿರುಯುಕ್ತ ಜಾಸ್ಪರ್ ಶಿಲೆಯ ಉಪಕರಣ ೩೬ (೧೧.೨೫%).*

*ಉಪಕರಣ ವೈವಿಧ್ಯ*

ನೂತನಶಿಲಾ ಉಪಕರಣಗಳನ್ನು ರೂಪಿಸಲು ಅಗತ್ಯವಾದ ಮೂಲ ಸಾಮಗ್ರಿಯು ಹಲವು ನೆಲೆಗಳಲ್ಲಿ ದೊರಕುತ್ತದೆ. ಇಂತಹ ನೆಲೆಗಳಲ್ಲಿ ಸಿದ್ಧ ಉಪಕರಣ, ಅಪೂರ್ಣ ಉಪಕರಣ, ನಿರುಪಯುಕ್ತ ಚಕ್ಕೆಗಳು ದೊರೆಯುವುದರಿಂದ ಇಂತಹ ನೆಲೆಗಳು ಶಿಲೋಪಕರಣಗಳ ಉತ್ಪಾದನಾ ಕೇಂದ್ರವೆಂದು ತಿಳಿಯುತ್ತದೆ. ಪಾವಗಡ ತಾಲೂಕಿನ ನಾಗಲಾಪುರ, ಯಲ್ಲಪ್ಪನಾಯಕನ ಹೊಸಕೋಟೆ, ಯಲ್ಲಪ್ಪನಾಯಕನಹಳ್ಳಿ; ಮಧುಗಿರಿ ತಾಲೂಕಿನ ಮಿಡಿಗೇಶಿ ಮತ್ತು ತುಮಕೂರು ತಾಲೂಕಿನ ಬೆಳ್ಳಿಬಟ್ಟಲಹಳ್ಳಿಯ ನೆಲೆಗಳಲ್ಲಿ ಇಂತಹ ಲಕ್ಷಣ ಕಂಡುಬಂದಿದೆ. ಈ ನೆಲೆಗಳಲ್ಲಿ ನವಶಿಲಾಯುಗದ ಬಹುತೇಕ ಎಲ್ಲಾ ಉಪಕರಣಗಳೂ ದೊರೆತಿದ್ದರೆ, ಉಳಿದ ಪರಿಧಿ ಪ್ರದೇಶಗಳಲ್ಲಿ ಉಪಕರಣಗಳ ಸಂಖ್ಯೆ ಮತ್ತು ವೈವಿಧ್ಯ ಕಡಿಮೆಯಾಗಿರುವುದು ಗಮನಾರ್ಹ.



ನವಶಿಲಾಯುಗದ ನೆಲೆಗಳಲ್ಲಿ ಹೆಚ್ಚಿನ ಎಲ್ಲಾ ರೀತಿಯ ಉಪಕರಣಗಳೂ ಬೆಳಕಿಗೆ ಬಂದಿವೆ. ಅವುಗಳ ಮಾದರಿಗಳನ್ವಯ ದಂತೆ ಕೊಡಲಿ (ಒಟ್ಟು - ೨೮), ಬಾಚಿ (೩), ಉಳಿ (೩), ಸುತ್ತಿಗೆ (೬), ಕೊಡಲಿ-ಸುತ್ತಿಗೆ (೩), ಕೆತ್ತುಳಿ (೩), ಉಜ್ಜುಗ ಅಥವಾ ಅರೆಯುವ ಕಲ್ಲು (೧೨), ಕವಣೆಕಲ್ಲು (೩), ಉಂಗುರಕಲ್ಲು (೬) ಹಾಗೂ ಭಗ್ನಭಾಗಗಳು (೫೩) ಹೀಗೆ ಒಟ್ಟು ೧೨೦ ಉಪಕರಣಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ ಹಾಗೂ ಅವುಗಳ ವೈವಿಧ್ಯತೆಯನ್ನು ತಿಳಿಯಲಾಗಿದೆ.

### *ತಾಂತ್ರಿಕತೆ*

ಈಗಾಗಲೇ ಬಹು ಚರ್ಚಿತವಾಗಿ ಪ್ರಸಿದ್ಧವಾಗಿರುವ ವಿವಿಧ ತಾಂತ್ರಿಕ ವಿಧಾನಗಳನ್ನು ಬಳಸಿ ಈ ಉಪಕರಣಗಳನ್ನು ರೂಪುಗೊಳಿಸಲಾಗಿದೆ. ಪ್ರಮುಖ ಉಪಕರಣಗಳ ಎರಡೂ ಮುಖಗಳಲ್ಲಿ ಕಂಡುಬರುವ ತೆಳುವಾದ ಚಕ್ಕೆಗಳನ್ನೆಬ್ಬಿಸಿರುವುದರಿಂದ ಉಂಟಾದ ನೀಳ ಹಾಗೂ ಅಷ್ಟೇನೂ ಆಳವಲ್ಲದ ತಗ್ಗುಗಳು ಹೆಚ್ಚಾಗಿ ಕಲ್ಲುಸುತ್ತಿಗೆ ಮತ್ತು ಮರದ ಇಲ್ಲವೇ ಮೂಳೆಯ ಸುತ್ತಿಗೆಗಳನ್ನು ಉಪಯೋಗಿಸಿ ನಿಯಮಿತ ಹಾಗೂ ಕೇಂದ್ರೀಕೃತ ಬಲಪ್ರಯೋಗ ವಿಧಾನವನ್ನು ಉಪಯೋಗಿಸಿದಂತೆ ಕಂಡು ಬರುತ್ತದೆ. ದೊರೆತಿರುವ ಉಪಕರಣ ಸಮೂಹದಲ್ಲಿರುವ ತಯಾರಿಕೆಯ ವಿವಿಧ ಹಂತದಲ್ಲಿರುವ ಉಪಕರಣಗಳು ಮತ್ತು ಭಗ್ನವಾದ ಭಾಗಗಳು ಮೂಲಶಿಲಾಖಂಡದಿಂದ ಉದ್ದೇಶಿತ ಆಕಾರ ಮತ್ತು ಉಪಯೋಗದ ವಿಶಿಷ್ಟ ಉಪಕರಣವನ್ನು ನಿರ್ಮಿಸುವ ವಿವಿಧ ಸೂಕ್ಷ್ಮ ಹಂತಗಳನ್ನು ವ್ಯವಸ್ಥಿತವಾಗಿ ನಿರೂಪಿಸುತ್ತವೆ.

### *ನೂತನ ಶಿಲಾಯುಗೀನ ಸೂಕ್ಷ್ಮ ಶಿಲೋಪಕರಣಗಳು*

ವಿವಿಧ ತಂತ್ರಜ್ಞಾನಗಳನ್ನು ಉಪಯೋಗಿಸಿ ರೂಪಿಸಿದ ಕಿರುಗಾತ್ರದ ಉಪಕರಣಗಳ ವಿಶಿಷ್ಟ ಲಕ್ಷಣಗಳನ್ನು ಅಳವಡಿಸಿ ಮತ್ತಷ್ಟು ಸೂಕ್ಷ್ಮ ರೀತಿಯ ಉಪಕರಣಗಳು ನೂತನ ಶಿಲಾಯುಗ ಸಂಸ್ಕೃತಿಯ ಸಮಯದಲ್ಲಿಯೂ ಕಂಡುಬಂದಿವೆ. ಪ್ರಸ್ತುತ ಅಧ್ಯಯನ ಪ್ರದೇಶದ ೩೧ ನೆಲೆಗಳ ಪೈಕಿ ೧೭ ನೆಲೆಗಳಲ್ಲಿ ಸೂಕ್ಷ್ಮ ಶಿಲೋಪಕರಣಗಳು ದೊರೆತಿವೆ. ಇಂತಹ ಸೂಕ್ಷ್ಮ ಶಿಲೋಪಕರಣಗಳನ್ನು ತಯಾರಿಸಲು ಅತ್ಯಂತ ಅವಶ್ಯವಾದ ಕೆಲವು ವಿಶಿಷ್ಟ ಜಾತಿಯ ಶಿಲೆಗಳು ಪ್ರತಿಯೊಂದು ನೆಲೆಯ ಪರಿಸರದಲ್ಲಿಯೂ ದೊರಕುವುದಿಲ್ಲ. ಹಾಗಾಗಿ ಹಲವಾರು ಪರಿಧಿ ನೆಲೆಗಳ ಕೇಂದ್ರ ಪ್ರದೇಶದಲ್ಲಿ ಇರಬಹುದಾದ ಮತ್ತು ಅವಶ್ಯಕ ಶಿಲಾ ಮಾದರಿಗಳು ದೊರೆಯುವ ನೆಲೆಗಳಲ್ಲಿ ಮಾತ್ರ ಇಂತಹ ಉಪಕರಣಗಳನ್ನು ಉತ್ಪಾದಿಸಿ ಸಿದ್ಧ ಉಪಕರಣಗಳನ್ನು ಮಾತ್ರ ಪರಿಧಿ ನೆಲೆಗಳಿಗೆ ಕೊಂಡೊಯ್ದು ಉಪಯೋಗಿಸಿರುವ ಸಾಧ್ಯತೆಯೂ ಇದೆ.

ಸೂಕ್ಷ್ಮ ಶಿಲೋಪಕರಣಗಳ ಉತ್ಪಾದನೆ ವಿಶೇಷವಾಗಿ ಸೂಕ್ತವೆನಿಸಿದ ಚರ್ಟ್, ಜಾಸ್ಪರ್, ಬೆಣಚುಕಲ್ಲು, ಪಾರದರ್ಶಕ ಕಲ್ಲು, ಸ್ಫಟಿಕಶಿಲೆ, ಪ್ರಶಸ್ತ ಶಿಲೆ, ಹರಳುಯುಕ್ತ ಸ್ಫಟಿಕಶಿಲೆ, ಹಾಲುಗಲ್ಲು ಮುಂತಾದ ಅರೆಪ್ರಶಸ್ತ ಶಿಲೆಗಳಲ್ಲಿ ರೂಪಿಸಿರುವ ಉಪಕರಣಗಳು ಶೇ. ೬೦ ರಿಂದ ೯೫ರ ವರೆಗೆ ಇದ್ದರೆ, ಇನ್ನಿತರ ಸಾಂದ್ರವಲ್ಲದ ಒರಟುಕಣಗಳಿಂದ ಕೂಡಿದ ಶಿಲಾ ಮಾಧ್ಯಮಗಳಲ್ಲಿ ರೂಪಿಸಿದ ಉಪಕರಣಗಳು ಶೇ. ೫ ರಿಂದ ೧೦ರ ವರೆಗೆ ಇವೆ.

ಕೆಲವು ಸಂದರ್ಭಗಳಲ್ಲಿ ಸೂಕ್ತಶಿಲಾ ಮಾಧ್ಯಮದ ಅಭಾವದಿಂದಾಗಿ ಅತಿ ಸೂಕ್ಷ್ಮ ರೀತಿಯ ಚಕ್ಕೆ ಎಬ್ಬಿಸಿರುವ ಗುರುತುಗಳನ್ನೂ ಕಾಣಬಹುದು. ಪರಿಧಿ ನೆಲೆಗಳಲ್ಲಿಯೇ ಉತ್ಪಾದಿಸಿಕೊಂಡ ಕಡಿಮೆ ದರ್ಜೆಯ ಉಪಕರಣಗಳಲ್ಲಿ ಇಂತಹ ಸೂಕ್ಷ್ಮ ತಂತ್ರವು ಕಂಡುಬರದು. ಸಹಜವಾಗಿ ಈ ಪ್ರದೇಶದ ಹೆಚ್ಚಿನ ನೆಲೆಗಳಲ್ಲಿ ಒರಟಾಗಿ ರೂಪಿಸಿದ ಉಪಕರಣಗಳೇ ಕಂಡುಬರುತ್ತವೆ.

### *ಉಪಕರಣ ವೈವಿಧ್ಯ*

ಒಟ್ಟು ೧೭ ನೆಲೆಗಳಲ್ಲಿ ದೊರೆತಿರುವ ಉಪಕರಣಗಳಲ್ಲಿ ಸಿದ್ಧಪಡಿಸಿದ ಉಪಕರಣಗಳು, ತ್ಯಾಜ್ಯ ಚಕ್ಕೆಗಳು ಮತ್ತು ಮೂಲ ಶಿಲಾಗಟ್ಟಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಸಂಗ್ರಹಿಸಲಾಗಿದೆ. ಸಿದ್ಧಪಡಿಸಿದ ಉಪಕರಣ ಸಮೂಹದಲ್ಲಿ ನೀಳಚಕ್ಕೆಯ ಗುಂಪು, ಹೆರೆಚಕ್ಕೆ ಗುಂಪು, ಮೊನೆಗಳು, ಕೊರೆಯುಳಿ ಮತ್ತು ಅರ್ಧ ಚಂದ್ರಾಕೃತಿ ಉಪಕರಣಗಳು ದೊರೆತಿವೆ. ನೀಳಚಕ್ಕೆ ಮಾದರಿಗಳಲ್ಲಿ *ಕಿರುನೀಳಚಕ್ಕೆ (ಒಟ್ಟು ಉಪಕರಣ - ೩೧), ಇಬ್ಬದಿ ನೀಳಚಕ್ಕೆ (೪೩), ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ (೧೯) ಹಾಗೂ ಒರಟು ನೀಳಚಕ್ಕೆ (೩೩) ಉಪಕರಣಗಳೂ, ಮೊನೆ ಮಾದರಿಯ ತ್ರಿಭುಜಾಕಾರದ ಮೊನೆ (೩೦), ಕೊಕ್ಕುಳ್ಳ ಮೊನೆ (೨೮) ಎಲೆಯಾಕಾರದ ಮೊನೆ (೫) ಹೆರೆಚಕ್ಕೆ ಮಾದರಿಯ ಒಬ್ಬದಿ ಹೆರೆಚಕ್ಕೆ (೧೮), ತುದಿ ಹೆರೆಚಕ್ಕೆ (೪), ಒಳಬಾಗಿದ ಅಂಚಿನ ಹೆರೆಚಕ್ಕೆ (೪), ಮೂಲಗಟ್ಟಿ ಹೆರೆಚಕ್ಕೆ (೪೪) ಕೊರೆಗ (೧೬), ಅರ್ಧ ಚಂದ್ರಾಕೃತಿ (೨೨) ಹಾಗೂ ಮೂಲ ಶಿಲಾ ಗಟ್ಟಿ (೨೩)ಗಳು.* ಇಂತಹ ಉಪಕರಣಗಳನ್ನು ಸೂಕ್ಷ್ಮ ಕಾರ್ಯಗಳಿಗೆ ಬಳಸಲಾಗುತ್ತಿತ್ತೆಂದು ತಿಳಿದುಬರುತ್ತದೆ.

### *ಮೃತ್‌ಪಾತ್ರೆಗಳು*

ಅಧ್ಯಯನ ಪ್ರದೇಶದಲ್ಲಿ ಮೃತ್‌ಪಾತ್ರೆ ಭಾಗಗಳು ಹೆಚ್ಚಿನ ಸಂಖ್ಯೆಯಲ್ಲಿ ಬೆಳಕಿಗೆ ಬಂದಿವೆ. ಕೆಂಪು ಮತ್ತು ಬೂದುವರ್ಣದ ಪಾತ್ರೆಗಳು ಗಣನೀಯ ಪ್ರಮಾಣದಲ್ಲಿಯೂ, ಪೂರ್ಣ ಕಪ್ಪು, ಕಂದು, ಕಂದುಗೆಂಪು ಮತ್ತು ಊದಾ ಬಣ್ಣದ ಮೃತ್‌ಪಾತ್ರೆಗಳು ಅಲ್ಪ ಪ್ರಮಾಣದಲ್ಲಿ ಈ ನಿವೇಶನಗಳಲ್ಲಿ ಕಂಡುಬಂದಿವೆ.

ಆರಂಭಿಕ ಹಂತದಲ್ಲಿ ಕೈಯಲ್ಲಿ ರೂಪಿಸಿದ ಮೃತ್‌ಪಾತ್ರೆ, ನಂತರದ ಹಂತದಲ್ಲಿ ನಿಧಾನವಾಗಿ ತಿರುಗಿಸಲ್ಪಡುವ ಮೇಜು, ಮಂದಗತಿಯಲ್ಲಿ ತಿರುಗಿಸಿರುವ ಚಕ್ರ ಮತ್ತು ಪರಿಷ್ಕೃತ ಚಕ್ರಗಳಲ್ಲಿ ತಯಾರಿಸಲಾದ ಹೆಚ್ಚು ತೆಳ್ಳನೆಯ ಮೃತ್‌ಪಾತ್ರೆಗಳೂ ಕೂಡ ಬರುತ್ತವೆ. ಮುಖ್ಯವಾಗಿ ಕಂಡುಬರುವ ಮೃತ್‌ಪಾತ್ರೆಗಳನ್ನು ಮೂರು ಪ್ರಮುಖ ಗುಂಪುಗಳಾಗಿ ವಿಭಾಗಿಸಬಹುದಾಗಿದೆ.

*೧) ಬೂದುವರ್ಣದ ಮೃತ್‌ಪಾತ್ರೆ*

೨) ಕೆಂಪು ವರ್ಣದ ಮೃತ್‌ಪಾತ್ರೆ ಹಾಗೂ

೩) ಇತರೆ ವರ್ಣದ ಮೃತ್‌ಪಾತ್ರೆ.

ಆಕೃತಿಗಳ ದೃಷ್ಟಿಯಲ್ಲಿಯೂ ಇವು ವೈವಿಧ್ಯವಾಗಿವೆ, ದೊಡ್ಡ ಗಾತ್ರದ ಸಂಗ್ರಹಣಾ ಪಾತ್ರೆಗಳು ಮತ್ತು ಮಧ್ಯಮ ಗಾತ್ರದ ದೈನಂದಿನ ಗೃಹೋಪಯೋಗಿ ಪಾತ್ರೆಗಳು ಮುಖ್ಯವಾದವುಗಳಾಗಿವೆ.

*ಪರಿಶೀಲನೆ*

ನೂತನ ಶಿಲಾಯುಗದ ನೆಲೆಗಳು ಹೆಚ್ಚಾಗಿ ಜಿಲ್ಲೆಯ ಉತ್ತರ-ದಕ್ಷಿಣ ಭಾಗದಲ್ಲಿ ಹರಡಿದೆ. ಅನುಪೂರ್ವಿ ನೆಲೆಗಳಿದ್ದ ಪ್ರದೇಶದಲ್ಲಿ ನೂತನ ಶಿಲಾಯುಗದ ನೆಲೆಗಳು ಕಂಡುಬಂದಿಲ್ಲ. ಪಾವಗಡ, ಮಧುಗಿರಿ, ಕೊರಟಗೆರೆ ಹಾಗೂ ತುಮಕೂರು ತಾಲೂಕು ಪ್ರದೇಶಗಳಲ್ಲಿ ಜನವಸತಿಯ ಹೆಚ್ಚಳ ಕಂಡುಬರುತ್ತದೆ.

ಅಧ್ಯಯನ ಪ್ರದೇಶದ ನೆಲೆಗಳಲ್ಲಿ ದೊರೆತಿರುವ ಸಾಂಸ್ಕೃತಿಕ ಅವಶೇಷಗಳ ಆಧಾರದ ಮೇಲೆ ಈ ನೆಲೆಗಳನ್ನು ಮೂರು ವರ್ಗಗಳಾಗಿ ವಿಭಾಗಿಸಬಹುದಾಗಿದೆ.

೧) ಕೇವಲ ಶಿಲಾ ಉಪಕರಣಗಳು ದೊರೆತಿರುವ ನೆಲೆಗಳು,

೨) ಕೇವಲ ಮೃತ್‌ಪಾತ್ರೆಗಳು ದೊರೆತಿರುವ ನೆಲೆಗಳು

೩) ಶಿಲೋಪಕರಣ ಹಾಗೂ ಮೃತ್‌ಪಾತ್ರೆಗಳೆರಡೂ ದೊರೆತಿರುವ ವಸತಿ ನೆಲೆಗಳು.

ಈ ದೃಷ್ಟಿಯನ್ನನುಸರಿಸಿ ಈ ಸಂಸ್ಕೃತಿಯ ಬೆಳವಣಿಗೆಯನ್ನು ಗುರುತಿಸಬಹುದಾಗಿದೆ. ಅದರಂತೆಯೇ ಈ ಸಂಸ್ಕೃತಿಯ ಒಟ್ಟು ಹಂತವನ್ನು ಮೂರು ವಿಭಾಗವಾಗಿ ವಿಂಗಡಿಸಬಹುದಾಗಿದೆ.

೧) ಮೃತ್‌ಪಾತ್ರೆ (ಬಳಕೆಯ) ಪೂರ್ವ (ಅಥವಾ ಇಲ್ಲದ) ನೂತನ ಶಿಲಾಯುಗ ಸಂಸ್ಕೃತಿ.

೨) ನೂತನ ಶಿಲಾ ಉಪಕರಣಗಳಿಲ್ಲದ ಸುಧಾರಿತ ಮೃತ್‌ಪಾತ್ರೆ ಬಳಕೆಯುಳ್ಳ ಸಂಸ್ಕೃತಿ.

೩) ಇವೆರಡೂ ವರ್ಗಗಳ ಸಂಗಮದಿಂದ ಬೆಳೆದುಬಂದ ಶಿಲಾ-ತಾಮ್ರ ಹಂತದಲ್ಲಿಯ ನೂತನ ಶಿಲಾಯುಗ ಸಂಸ್ಕೃತಿ.

ಅದೇ ರೀತಿಯಾಗಿ ಈ ಹಂತಗಳು ಕಾಲಾನುಕ್ರಮದಂತೆ ಬೆಳವಣಿಗೆಯಾಗಿರುವುದು ತಿಳಿಯುತ್ತದೆ. ಅದರಂತೆ ಈ ಪ್ರದೇಶದ ಈ ಸಂಸ್ಕೃತಿಯ ಕಾಲಮಾನವನ್ನು ಈ ಕೆಳಗಿನಂತೆ ವರ್ಗೀಕರಿಸಬಹುದಾಗಿದೆ.

***ಮೊದಲನೆಯ ಹಂತ ಕ್ರಿ. ಪೂ. ೨೦೦೦-೧೭೦೦, ಎರಡನೆಯ ಹಂತ ಕ್ರಿ. ಪೂ. ೧೭೦೦-೧೪೦೦, ಮೂರನೆಯ ಹಂತ ಕ್ರಿ. ಪೂ. ೧೪೦೦-೧೦೦೦***

ಒಟ್ಟಾರೆ ದಕ್ಷಿಣ ಭಾರತದ ಈ ಸಂಸ್ಕೃತಿಯ ವೈಶಿಷ್ಟ್ಯಗಳ ವಿದ್ಯಮಾನದ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶದ ನೆಲೆಗಳನ್ನು ಪರಿಶೀಲಿಸಿದರೆ ಇಲ್ಲಿಯೂ ಕೂಡ ಈ ಪ್ರಕಾರದ ಮೂರು ಹಂತಗಳನ್ನು ಗುರುತಿಸಬಹುದಾಗಿದೆ. ಆದರೆ ಆಯ್ದ ಉತ್ತಮ ನೆಲೆಗಳಲ್ಲಿ ವೈಜ್ಞಾನಿಕ ಉತ್ಖನನ ನಡೆಸದ ಹೊರತು, ನಿರ್ದಿಷ್ಟವಾಗಿ ಏನನ್ನೂ ಹೇಳುವುದು ಸಾಧ್ಯವಾಗುವುದಿಲ್ಲ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


Allchin, F. R., 1960, ***Piklihal Excavations***, *Andhra Pradesh Govt. Archaeological Series No. 1.*

Foote R. B., 1916, *The Foote Collection of Indian Pre-Historic and Protohistoric Antiquities, Notes on their Ages and Distribution*, Govt. Museum, Chennai (Madras).

Nagaraju & Hanumantha Rao .M & S. 1974, *Excavations at Hemmige-1964*. Directorate of Archaeology Museums in Karnataka, Mysore.

Majumdar G. G & Rajaguru & Sharad Narahar . 1966, *Ash Mound Excavations at Kupgal,* Deccan College Post Graduate & Research Institute, Pune -6.

Nagaraja Rao, M. S., 1971, *Proto Historic Cultures of Tungabhadra Valley (Report on Hallur Excavations)* Dharwad.

Nagaraja Rao, M. S. & Malhotra K. C. 1965, *Stone Age Hill Dwellers of Tekkala Kota*, Deccan College Post Graduate and Research Institute, Pune-6.

Paddayya. K. 1973, "Investigation into the Neolithic Culture of the Shorapur Doab, South India", Leiden.

Poonach K. P., 1990, *Archaeology of Malnad Region, Comprising the districts of Hassan, Chikmagalore and Shimoga, with special reference to Pre and Proto History.* (Unpublished thesis) Karnataka University, Dharwad.

Shivatarak, K. B. 2000, "Recent Archaeological Explorations in Tumkur Region", *Recent Researches in Karnataka Archaeology* (Ed. Krishnappa M.V. & Gopal, R.) Directorate of Archaeology and Museums, Govt. of Karnataka, Mysore.

Shadakshariah, R. M. 1995, *Pre-Historic and Early Historic Cultures in the Manjra and the Karanja Valleyes*. Thesis Unpublished , Karnataka University, Dharwad.

Thapar, B. K. 1957., "Maski - 1954 : Chalcolithic Site of the Southern Deccan", *Ancient India Vol. 13.* New Delhi, pp.4-142.

Wheeler, R.E.M. 1948., "Brahmagiri and Chandravalli, 1947 : Megalithic and other Cultures in the Chitardurg Dist. Mysore State" *Ancient India. Vol. 4* New Delhi, pp.180-310.

ಶಿವತಾರಕ್ ಕೆ. ಬಿ. ೧೯೯೯., **ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು - ಒಂದು ಸಾಂಸ್ಕೃತಿಕ ಅಧ್ಯಯನ**, ಪಿಎಚ್.ಡಿ. ಮಹಾಪ್ರಬಂಧ (ಅಪ್ರಕಟಿತ)., ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀಮತಿ ಸ್ಮಿತಾ ಸುರೆಬಾನಕರ*

# ಹಲಸಿಯಲ್ಲಿ ಬೃಹತ್ ಶಿಲಾಯುಗಸಂಸ್ಕೃತಿಯ ಇನ್ನೊಂದು ನೆಲೆ

ಆದಿ ಕದಂಬರ ತಾಮ್ರಪಟಗಳಲ್ಲಿ ಶ್ರೀವಿಜಯ **ಪಲಾಸಿಕಾ** ಎಂದೂ, ಗೋವೆ ಕದಂಬರ ಶಾಸನಗಳಲ್ಲಿ **ಪಲಾಸಿಕಾ ಷಣ್ಣಿರ್ಬ್ಬಾಸಿರವೆಂದೂ** ಮತ್ತು ಧರ್ಮಾಸಕ್ತರಾದ ಭಕ್ತರಿಗೆ **ದಕ್ಷಿಣಕಾಶಿ** ಎಂದೂ ಪ್ರಖ್ಯಾತಿ ಪಡೆದ **ಪಲಾಸಿಕಾ**, ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಮೇಲೆ ಒಂದಿಲ್ಲೊಂದು ವಿಧದಲ್ಲಿ ಪ್ರಭಾವ ಬೀರಿದ ಐತಿಹಾಸಿಕ ಬೀಡು. ಬೆಳಗಾವಿಯ ದಕ್ಷಿಣಕ್ಕೆ ಖಾನಾಪೂರದಿಂದ ೧೪ ಕಿ.ಮೀ. ಅಂತರದಲ್ಲಿರುವ ನಿಸರ್ಗ ರಮಣೀಯ ಸ್ಥಳವಾದ ಪಲಾಶಿಕಾ ಪ್ರಾಚೀನ ದೇವಾಲಯಗಳಿಂದ ತೀರ್ಥಗಳಿಂದ ಬಸದಿಗಳಿಂದೊಡಗೂಡಿ ತೆಂಗು, ಕೊಂಗು, ಮಾವು, ಹಲಸುಗಳಿಂದ ನಿಬಿಡವಾಗಿ ಕಂಗೊಳಿಸುತ್ತಿದೆ ಈ ಕ್ಷೇತ್ರ. ಇಂಥ ಪ್ರದೇಶ ಗತಕಾಲದಿಂದಲೂ ಮಾನವ ವಾಸ್ತವ್ಯದ ನೆಲೆಯಾಗಿ ಜನರನ್ನು ಆಕರ್ಷಿಸಿತ್ತೆನ್ನಲು ಇಲ್ಲಿಯ ಬೃಹತ್ ಶಿಲಾ ಸಂಸ್ಕೃತಿಯ ಅವಶೇಷಗಳೇ ಸಾಕ್ಷಿ.

ಇತಿಹಾಸ ಕಾಲದ ಅವಶೇಷಗಳು ಹಾಗೂ ಇತರ ಆಕರಗಳಾದ, ತಾಮ್ರ ಪಟಗಳು, ಶಿಲಾಲೇಖಗಳೂ ಬಹಳಷ್ಟು ದೊರೆತಿದ್ದರೂ, ಇತ್ತೀಚಿನವರೆಗೆ ಪ್ರಾಗೈತಿಹಾಸ ಕಾಲದ ಅವಶೇಷಗಳು ಸಿಕ್ಕಿರಲಿಲ್ಲ. ಈ ಪ್ರದೇಶದಲ್ಲಿ ಯಾವ ಕಾಲದಿಂದ ಮಾನವನ ವಾಸ್ತವ್ಯ; ಎಂಬ ಬಗ್ಗೆ ಇತ್ತೀಚಿನವರೆಗೆ ಏನೂ ತಿಳಿದಿರಲಿಲ್ಲ. ಆದರೆ ಸಾಂಸ್ಕೃತಿಕ ಬೆಳವಣಿಗೆಯಲ್ಲಿ, ನಂತರದ ಹಂತವಾದ ಕಬ್ಬಿಣ ಯುಗದಲ್ಲಿ ಹಲಸಿ ಭಾಗದಲ್ಲಿ ಜನವಸತಿಯಿತ್ತೆಂಬುದು ಇಲ್ಲಿ ದೊರೆತ ಬೃಹತ್ ಶಿಲಾಯುಗದ ಗೋರಿಗಳ ಅವಶೇಷಗಳಿಂದ ಸ್ಪಷ್ಟವಾಗುತ್ತದೆ.

ಹಲಸಿಯಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಅವಶೇಷಗಳಿದ್ದ ಬಗ್ಗೆ ಡಾ। ಸುಂದರ ಅವರು ೭೦ರ ದಶಕದಲ್ಲಿಯೇ ವರದಿ ಮಾಡಿದ್ದಾರೆ.[*೧] ಏಪ್ರಿಲ್-ಮೇ ತಿಂಗಳಲ್ಲಿ ಪಿಎಚ್.ಡಿ. ಸಂಶೋಧನೆಯ ಸಲುವಾಗಿ ಹಲಸಿ ಗ್ರಾಮದಲ್ಲಿ ಕ್ಷೇತ್ರ ಕಾರ್ಯ ಕೈಗೊಂಡಾಗ ಬೃಹತ್ ಶಿಲಾ ಸಂಸ್ಕೃತಿಯ ನೆಲೆಯ ಅವಶೇಷಗಳು ಬೆಳಕಿಗೆ ಬಂದವು. ಒಂದೇ ಗ್ರಾಮದಲ್ಲಿ (ಪ್ರದೇಶದಲ್ಲಿ) ಎರಡು ವಿವಿಧ ದಿಕ್ಕಿಗೆ ಎರಡು ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಿರುವುದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಸಂಸ್ಕೃತಿಯ ಹಲವಾರು ನೆಲೆಗಳು ಈ ಪ್ರದೇಶದಲ್ಲಿ ಸಿಗುವ ಸಾಧ್ಯತೆಯನ್ನು ಬಲಪಡಿಸುತ್ತದೆ. ಆದ್ದರಿಂದ ಲಭ್ಯವಿದ್ದ ಹೆಚ್ಚಿನ ಮಾಹಿತಿಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಉತ್ತರ ಕರ್ನಾಟಕದ ಬೃಹತ್ ಶಿಲಾಯುಗಸಂಸ್ಕೃತಿಯ ಕಲ್ಗೋರಿಯ ಪ್ರಕಾರಗಳಲ್ಲಿ ಪ್ರಮುಖವಾದವುಗಳು ಎರಡು : *ದಾರಿಕೋಣೆ ಗೋರಿ* (Passage chambers) ಮತ್ತು *ಕಂಡಿಕೋಣೆ ಗೋರಿ* (Port-hole chambers). *ದಾರಿಕೋಣೆ ಗೋರಿಗಳು* ಕೊಲ್ಲಾಪುರ, ಹರಲಿ, ಐನಾಪುರದಿಂದ ಹಿಡಿದು ಹಿಡ್ಕಲ್, ಕುನೂರ, ತೇರದಾಳ, ಹಲಿಂಗಡಿ ಮತ್ತು ಮುಂದೆ ಪೂರ್ವಕ್ಕೆ ಐಹೊಳೆಯವರೆಗೂ ಸುಮಾರು ೨೨ ನೆಲೆಗಳಲ್ಲಿ ಇರುವುದನ್ನು ಈಗಾಗಲೇ ಗುರುತಿಸಲಾಗಿದೆ.[*೨] ಕಂಡಿಕೋಣೆ ಗೋರಿಗಳು ಐಹೊಳೆಯಿಂದ ಹಿಡಿದು ಇನ್ನು ಮುಂದೆ ಪೂರ್ವ ಮತ್ತು ಆಗ್ನೇಯ ದಿಕ್ಕಿನೆಡೆಗೆ ನೂರಾರು ನೆಲೆಗಳಲ್ಲಿ ಅಂದರೆ ಕೊಪ್ಪಳ ಹಿರೇಬೆನಕಲ್ (ತಾ।। ಗಂಗಾವತಿ, ಜಿಲ್ಲೆ।। ಕೊಪ್ಪಳ), ಅಶೋಕನ ಕಿರುಬಂಡೆ ಶಾಸನವುಳ್ಳ ಬ್ರಹ್ಮಗಿರಿ, (ತಾ।। ಮೊಳಕಾಲ್ಮೂರ, ಜಿ।। ಚಿತ್ರದುರ್ಗ)[*೩] ಇನ್ನೂ ಮುಂದಕ್ಕೆ ಪೂರ್ವ ಮತ್ತು ಆಗ್ನೇಯ ದಿಕ್ಕಿನೆಡೆಗೆ ಕೋಲಾರ, ತಮಿಳುನಾಡು, ಆಂಧ್ರಪ್ರದೇಶ ಇಂಥ ನೆಲೆಗಳಿವೆ. ಐಹೊಳೆ ಪಟ್ಟದಕಲ್ಲಿನಲ್ಲಿ ಇವೆರಡು ಪ್ರಕಾರದ ಕೋಣೆಗೋರಿಗಳನ್ನು ವಿಶ್ಲೇಷಿಸಿ ಮತ್ತು ಹಗರಟಗಿ (ತಾ।। ಸುರಪುರ ಜಿ।। ಗುಲ್ಬರ್ಗಾ) ದಲ್ಲಿಯ ಕಂಡಿಸಹಿತ ದಾರಿಕೋಣೆಯನ್ನು ಮತ್ತು ಇವೆರಡೂ ಪ್ರಕಾರಗಳ ಗೋರಿಗಳಲ್ಲಿ ದೊರೆತ ಅವಶೇಷಗಳು, ಭೌಗೋಳಿಕ ಪ್ರಸರಣ, ಇವುಗಳ ನಿರ್ಮಿತಿಯಲ್ಲಿ ಉಪಯೋಗಿಸಿದ ವಿವಿಧ ಪ್ರಕಾರಗಳ ಕಲ್ಲುಗಳು ಅವುಗಳ ವಿನ್ಯಾಸವನ್ನು ಗಮನಿಸಿ, ಬಹುಮಟ್ಟಿಗೆ ಕಂಡಿಕೋಣೆ ಗೋರಿಯು ದಾರಿಕೋಣೆ ಗೋರಿಯ, ಒಂದು ಸುಧಾರಿತ ಪ್ರಕಾರವೆಂಬ ಅಭಿಪ್ರಾಯವನ್ನು ಡಾ।। ಸುಂದರ ಅವರು ಮಂಡಿಸಿದ್ದಾರೆ. ಆದರೆ ಅನಂತರ ಹಲಸಿಯಲ್ಲಿ ಕಂಡು ಬಂದ ಕಂಡಿಕೋಣೆ ಗೋರಿಯನ್ನು ಗಮನಿಸಿ ಈ ಅಭಿಪ್ರಾಯ ದೊಡನೆ ಪಶ್ಚಿಮಘಟ್ಟ ಮತ್ತು ಕಡಲು ತೀರದ ಪ್ರದೇಶದ ಒಂದು ವಿಶಿಷ್ಟ ಪ್ರಕಾರವನ್ನು ಗುರುತಿಸಲು ಯತ್ನಿಸಿದ್ದಾರೆ.[*೪] ಇವೆಲ್ಲ ವಿಷಯಗಳನ್ನು ಗಮನಿಸಿದಾಗ ಹಲಸಿಯ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಕಂಡಿಕೋಣೆ ಗೋರಿ ಅವಶೇಷಗಳ ಶೋಧನೆಯ ಮಹತ್ವವನ್ನು ಹೆಚ್ಚಿಸುತ್ತದೆ.

ಎಪ್ಪತ್ತರ ದಶಕದಲ್ಲಿ ಡಾ। ಸುಂದರ ಅವರು ಹಲಸಿಯ ದಕ್ಷಿಣ ದಿಕ್ಕಿಗೆ ಒಂದು ಜಮೀನಿನ ಸರಹದ್ದಿಯಲ್ಲಿ ಇಂತಹ ಕಂಡಿಕೋಣೆ ಗೋರಿಗಳಿಂದ ತಂದ ಕಲ್ಲು ಚಪ್ಪಡಿಯ ಸಾಲುಗಳನ್ನು ಮತ್ತು ಅಂತಹ ಒಂದು ಚಪ್ಪಡಿಯಲ್ಲಿ ವರ್ತುಲ ಕಂಡಿಯನ್ನು

* ಪ್ರಾಚಾರ್ಯರು, ಇತಿಹಾಸ ವಿಭಾಗ, ಆರ್.ಪಿ.ಡಿ. ಕಾಲೇಜ್, ಬೆಳಗಾವಿ.

ಗುರುತಿಸಿದ್ದಾರೆ. ಇದೂ ಸೇರಿದಂತೆ ಶೃಂಗೇರಿಯ ಸಮೀಪದಲ್ಲಿರುವ ಬೆಳುವನ-ಕೊಡಿಗೆ, ದಕ್ಷಿಣ ಕನ್ನಡ ಜಿಲ್ಲೆಯ ಬೇಲೂರು (ತಾ. ಕುಂದಾಪುರ) ಕಜೇಕಾರಗಳಲ್ಲಿಯ ಕಂಡಿಕೋಣೆ ಗೋರಿಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದಾರೆ.[*೫] ಅನಂತರ ವಸಂತ ಶೆಟ್ಟಿಯವರು ಗಾವುಡಿ (ತಾ॥ ಕುಂದಾಪುರ) ಮತ್ತು ಅದರ ಸಮೀಪ ಕಕ್ಕುಂಜೆ (ಜಿಲ್ಲಾ॥ ಉಡುಪಿ)ಯಲ್ಲಿ ಕ್ರಮವಾಗಿ ಬಂಡೆ ರೇಖಾ ಚಿತ್ರಗಳನ್ನು ಮತ್ತು ಕಂಡಿಕೋಣೆ ಗೋರಿಗಳನ್ನು ಶೋಧಿಸಿದ್ದಾರೆ.[*೬] ಆದ್ದರಿಂದ ಪಶ್ಚಿಮಘಟ್ಟ ಮತ್ತು ಕಡಲತೀರಪ್ರದೇಶದಲ್ಲಿ ಕಂಡಿಕೋಣೆ ಗೋರಿಯು ಒಂದು ಪ್ರಧಾನ ಪ್ರಕಾರವಾಗಿದೆ.

ಮುಂದುವರೆದ ನನ್ನ ಶೋಧನೆಯಲ್ಲಿ, ಸುಂದರ ಅವರು ಶೋಧಿಸಿದ ನೆಲೆಯು, ಹಲಸಿಯ ದಕ್ಷಿಣಕ್ಕಿದ್ದರೆ, ನನ್ನ ಶೋಧನೆಯ ನೆಲೆಯು ಊರಿನ ಉತ್ತರ ದಿಕ್ಕಿನ ಹೊರವಲಯದಲ್ಲಿದೆ. ಈ ನೆಲೆಗೆ ಹೋಗುವಾಗ ಮಧ್ಯದಲ್ಲಿನ ಗೋವಾ ಕದಂಬರ ಕಾಲದ ಕಲ್ಮೇಶ್ವರ ದೇವಾಲಯದ ನೆಲೆಯಲ್ಲಿಯೇ ಅರಮನೆ ಮತ್ತು ಟಂಕಶಾಲೆಗಳಿದ್ದವೆಂದು ಪ್ರತೀತಿ ಇದೆ. ಕಲ್ಮೇಶ್ವರ ದೇವಾಲಯದ ಎದುರಿಗೆ ಹೂಡೆಯ ವಿಶಾಲವಾದ ಪ್ರದೇಶವಿದೆ. ಹೂಡೆಯ ಉತ್ತರ ದಿಕ್ಕಿಗೆ ಸುಮಾರು ಒಂದು ನೂರು ಮೀಟರುಗಳಷ್ಟು ದೂರದಲ್ಲಿ ತಗ್ಗಿನಲ್ಲಿ ಈ ನೆಲೆಯಿದೆ. ಈಶಾನ್ಯ ದಿಕ್ಕೊಂದನ್ನು ಬಿಟ್ಟು ಉಳಿದ ಎಲ್ಲ ಕಡೆಗಳಿಂದಲೂ ದುರ್ಗಮವಾದ ಬೆಟ್ಟಗಳಿಂದ ಕೂಡಿದ ವಿಶಾಲವಾದ ಸ್ಥಳವಿದೆ. ಸ್ಥಳೀಯವಾಗಿ ಈ ಪ್ರದೇಶವನ್ನು **ರಣಕಮತವೆಂದು** ಕರೆಯುತ್ತಾರೆ. ಇಲ್ಲಿ ಕಾಣಸಿಗುವ ಚಪ್ಪಡಿ ಕಲ್ಲುಗಳ ಸಾಲುಗಳಲ್ಲಿ ಕೆಲವೊಂದು ಕಲ್ಲುಗಳಿಗೆ ಸುಮಾರು ೫೮ ಸೆಂ.ಮೀ. ವ್ಯಾಸದ ಒಂದೊಂದು ತೂತುಗಳಿವೆ. ಸ್ಥಳೀಯರು ಈ ಕಲ್ಲುಗಳನ್ನು ಹಿಂದಿನ ಕಾಲದಲ್ಲಿ ಆನೆಕಟ್ಟಲು ಉಪಯೋಗಿಸುತ್ತಿದ್ದರೆಂದು ಹೇಳುವುದು ರೂಢಿ. ಪ್ರಾಯಶಃ ಈ ತೂತುಗಳನ್ನು ಆನೆಕಾಲಿಗೆ ಕಟ್ಟಿದ ಹಗ್ಗವನ್ನು ಕಟ್ಟಲು ಅನುಕೂಲ ಮಾಡಿದವು ಎಂದು ಗ್ರಾಮಸ್ಥರ ತರ್ಕವಿರಬಹುದು. ಆದರೆ ಈ ನೆಲೆಗಳಲ್ಲಿ ಇಂತಹ ಹಲವಾರು ಚಪ್ಪಡಿ ಕಲ್ಲುಗಳಿದ್ದು ಕೇವಲ ಒಂದೆರಡು ಕಲ್ಲುಗಳಲ್ಲಿ ಮಾತ್ರ ತೂತುಗಳಿವೆ ಮತ್ತು ಆನೆಗೆ ಇಂತಹ ಚಪ್ಪಡಿಕಲ್ಲನ್ನು ಎಳೆಯುವುದು ಅಷ್ಟೇನೂ ಕಷ್ಟದ ಕೆಲಸವಲ್ಲ. ಆದ್ದರಿಂದ ಇವು ಆನೆಗಳನ್ನು ಕಟ್ಟುವುದಕ್ಕೋಸ್ಕರ ಹಾಕಿದ ಕಲ್ಲುಗಳಾಗಿರಲು ಸಾಧ್ಯವಿಲ್ಲ.

ಈ ನೆಲೆಯಲ್ಲಿ ಇಂತಹ ಕಲ್ಲುಗಳು ಒಂದರ ಪಕ್ಕದಲ್ಲಿ ಒಂದರಂತೆ ಮೂರು ಸಾಲುಗಳಿವೆ. ಸಾಲುಗಳ ನಡುವಿನ ಅಂತರ ಸುಮಾರು ೨-೩ ಮೀಟರ್ ಇದೆ. ಮೊದಲು, ಎರಡು ಮತ್ತು ಮೂರನೆಯ ಸಾಲಿನಲ್ಲಿ ಕ್ರಮವಾಗಿ ೧೦, ೧೭ ಮತ್ತು ೧೭ ಚಪ್ಪಡಿಕಲ್ಲುಗಳಿವೆ. ಈ ಚಪ್ಪಡಿ ಕಲ್ಲುಗಳ ಸಾಲುಗಳು ಉತ್ತರ, ದಕ್ಷಿಣಾಭಿಮುಖಗಳಾಗಿವೆ. ಎರಡನೆಯ ಸಾಲಿನ ಚಪ್ಪಡಿಯ ಮಧ್ಯದಲ್ಲಿ ವರ್ತುಲ ಕಂಡಿಯಿದೆ. ಈ ಚಪ್ಪಡಿಗಳಲ್ಲಿ ಕೆಲವೊಂದು ಮಾತ್ರ ಅಸಮ ಚೌಕೋನವಾಗಿದ್ದು ಸುಮಾರು ೧೦ ರಿಂದ ೨೦ ಸೆಂ.ಮೀ. ದಪ್ಪವಾಗಿವೆ. ಅವು ಹಲವಾರು ಇಂತಹ ಚೌಕೋನ ಚಪ್ಪಡಿಗಳ ತುಂಡುಗಳೆಂದೇ ಹೇಳಬಹುದು. ಇವೆಲ್ಲವನ್ನು ಗಮನಿಸಿದಾಗ, ಇವೆಲ್ಲವೂ ಈ ನೆಲೆಯಲ್ಲಿ ಹಿಂದೆ ಇದ್ದ ಕಂಡಿಕೋಣೆ ಗೋರಿಗಳ ಅವಶೇಷಗಳೆಂದೇ ಹೇಳಬಹುದು. ಈ ನೆಲೆಯನ್ನು ಕೃಷಿಗೆ ಒಳಪಡಿಸುವ ಹಿಂದೆ ಇಂತಹ ಹಲವಾರು ಕಂಡಿಕೋಣೆ ಗೋರಿಗಳು ಕನಿಷ್ಠ ೮-೧೦ ಕಂಡಿಕೋಣೆ ಗೋರಿಗಳು ಇದ್ದಿರಬೇಕು. ತೂತು ಇರುವ ಕಲ್ಲುಚಪ್ಪಡಿಯು ಸುಮಾರು ೧ ಮೀಟರ್ × ೧ ಮೀಟರ್ × ೧೨-೧೫ ಸೆಂ.ಮೀ. ದಪ್ಪವಾಗಿದೆ. ಈ ಪ್ರಕಾರದ ಮತ್ತು ಅಳತೆಯ ಕಲ್ಲು ಚಪ್ಪಡಿಗಳನ್ನು ಬೇರೆ ನೆಲೆಗಳಲ್ಲಿ ಕಂಡಿಕೋಣೆಗೋರಿಗಳ ನಿರ್ಮಿತಿಯಲ್ಲಿ ಉಪಯೋಗಿಸಲಾಗಿದೆ. ಆದ್ದರಿಂದ ಇವು ನಿರ್ಧಾರವಾಗಿ ಕಂಡಿಕೋಣೆ ಗೋರಿಗಳ ಅವಶೇಷಗಳು. ಇವುಗಳ ಅಂಚುಗಳನ್ನು ಸ್ವಲ್ಪ ಮಟ್ಟಿಗೆ ಸುತ್ತಿಗೆಯಿಂದ ಜೋರಾಗಿ ಹೊಡೆದು ಸರಿಪಡಿಸಿದಂತಿದೆ. ಸದ್ಯದಲ್ಲಿ ಇವುಗಳಿದ್ದ ನೆಲೆಯಲ್ಲಿ ಹುಲ್ಲು ಬೆಳೆದುದರಿಂದ ಮೃತ್ಪಾತ್ರೆ ಅವಶೇಷಗಳು ಅಲ್ಲಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಸಾಧ್ಯತೆಯನ್ನು ಶೋಧದ ಸಮಯದಲ್ಲಿ ಗುರುತಿಸಲಾಗಲಿಲ್ಲ. ಮತ್ತೆ ಈ ನೆಲೆಯನ್ನು ಶೋಧಿಸಬೇಕಾಗಿದೆ. ಈ ಪ್ರದೇಶದ ಕಲ್ಲು ಗುಡ್ಡಗಳು ಈ ಚಪ್ಪಡಿ ಕಲ್ಲುಗಳನ್ನು ಪಡೆಯಲು ಯೋಗ್ಯವಾಗಿದೆ. ಇಂದಿಗೂ ಈ ಪ್ರದೇಶದಲ್ಲಿ ಕಲ್ಲು ಒಡ್ಡರು ಬಂಡೆಗಳ ಮೇಲೆ ದುರ್ಬಲ ಭಾಗದಲ್ಲಿ ಬೆಂಕಿ ಇಟ್ಟು ಚಪ್ಪಡಿಗಳನ್ನು ಎಬ್ಬಿಸುವ ಪದ್ಧತಿಯಿಂದ ಚಪ್ಪಡಿಗಳನ್ನು ತೆಗೆಯುತ್ತಾರೆ.

ಈ ನೆಲೆಯ ಎರಡು ಕಲ್ಲು ಚಪ್ಪಡಿಗಳ ಅಂತರದಲ್ಲಿ ಒಂದು ಅಂಚಿನಲ್ಲಿ (ಈಗ ಮೇಲ್ಮುಖ ಮಾಡಿದ) ಅರ್ಧ ವರ್ತುಲಾಕಾರದ ಬೂಚು ಇದೆ. ವೈನಾಡು (ಕೇರಳ) ಪ್ರದೇಶದ ಪ್ರಸಿದ್ಧ ಎಡಕಲ್ಲು ಗುಡ್ಡದ ಸಮೀಪದಲ್ಲಿಯ ಕಂಡಿಕೋಣೆ ಗೋರಿಯ ನೆಲೆಯಲ್ಲಿಯ ಎರಡರಲ್ಲಿ ಇಂತಹ ಬೂಚುಗಳಿವೆ.[*೭] ಅನಂತರ ಬೇರೆ ಬೇರೆ ನೆಲೆಗಳಲ್ಲಿ ಶೋಧವಾದ ಮೊಟ್ಟೂರು (ಜಿಲ್ಲಾ ಆರ್ಕಾಡ, ತಮಿಳುನಾಡು) ಐಹೊಳೆ ಮುಂತಾದ ನೆಲೆಗಳಲ್ಲಿ ಕಂಡುಬಂದ ಮನುಷ್ಯಾಕೃತಿಯ ಬೃಹತ್ ಶಿಲಾ ಗೊಂಬೆಗಳನ್ನು ಗಮನಿಸಿದಾಗ, ಈ ಬೂಚುಗಳು ಮಾನವ ನೆಲೆಯ ಸಂಕೇತವಾಗಿರಬಹುದೆಂದು ಅನುಮಾನಪಡಬಹುದು. ಮೊಟ್ಟೂರಿನ ಉತ್ಖನನದ ಗೊಂಬೆಯು ಬೃಹತ್ ಶಿಲಾಯುಗ ಸಂಸ್ಕೃತಿಯ ವೃತ್ತದ ಒಂದು ಭಾಗವೇ ಆಗಿತ್ತು.[*೮] ಆದ್ದರಿಂದ ಎಡಕಲ್ಲುಗುಡ್ಡದ ಕಲ್ಗೋರಿಯ ಬೂಚನ್ನು ಮಾನವನೆಲೆಯ ಸಂಕೇತವೆಂದೇ ಅಭಿಪ್ರಾಯಪಡಲಾಗಿದೆ*. ಈ ಹಿನ್ನೆಲೆಯಲ್ಲಿ ಹಲಸಿಯ ಬೂಚು ಕಲ್ಲನ್ನು ಗಮನಿಸಿದಾಗ ಅದೂ ಕೂಡ ಮಾನವ ತಲೆಯ ಸಂಕೇತವಾಗಿರಬಹುದೇ? ಎಂಬ ಅನುಮಾನ ಬರುತ್ತದೆ. ಆದರೆ ಈ ಬೂಚುಗಳು ಆ ಸಂಸ್ಕೃತಿಯವೇ ಎಂದು ಇನ್ನೂ ಹೆಚ್ಚು ಸ್ಪಷ್ಟಪಡಿಸಬೇಕಾಗಿದೆ. ಏಕೆಂದರೆ ಕಲ್ಲು ಚಪ್ಪಡಿಗಳನ್ನು ತುಂಡು ತುಂಡಾಗಿ ಮಾಡಿರುವದರಿಂದ ಈ ಬೂಚು

ಹಾಗೇ ತುಂಡು ಮಾಡಿದ ಭಾಗವೂ ಆಗಿರಬಹುದು. ಆದ್ದರಿಂದ ಇದನ್ನು ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸಬೇಕಾಗಿದೆ.

ಹಲಸಿಯಲ್ಲಿ ಈ ಹಿಂದೆ ದೊರೆತ ಬೃಹತ್ ಶಿಲಾ ಸಂಸ್ಕೃತಿಯ ನೆಲೆಯ ಕಾಲಮಾನ ಸುಮಾರು ಕ್ರಿ. ಪೂ. ೮೦೦ ರಿಂದ ಕ್ರಿ. ಪೂ. ೨೦೦ ಎಂದು ಸುಂದರ ಅವರು ಅಭಿಪ್ರಾಯಪಟ್ಟಿದ್ದಾರೆ. ಸಧ್ಯಕ್ಕೆ ಈ ಕಾಲಮಾನವನ್ನು ಈಗ ಶೋಧಿಸಿದ ನೆಲೆಗೂ ಅನ್ವಯಿಸಬಹುದಾಗಿದೆ.

ಬೃಹತ್ ಶಿಲಾ ಸಂಸ್ಕೃತಿಯ ಈ ಗೋರಿಗಳ ಅವಶೇಷಗಳು ಆಗ ಪ್ರಚಲಿತವಿದ್ದ ನಿರ್ಮಾಣ ಕೌಶಲ್ಯವನ್ನು, ಧಾರ್ಮಿಕ ಆಚರಣೆ ನಂಬಿಕೆಗಳನ್ನು ತಿಳಿಯುವಲ್ಲಿ ಸಹಾಯಕವಾಗಿವೆ. ಆ ಕಾಲದ ಜನರು ಸಾಧಿಸಿದ ತಾಂತ್ರಿಕ ಪ್ರಗತಿಯಿಂದ ಕಾಡನ್ನು ಕಡಿದು ಕೃಷಿಯ ವಿಸ್ತರಣೆ ಮಾಡುವುದು ಸಾಧ್ಯವಾಯಿತು. ಹೀಗೆ ಈ ಹಲಸಿ ಪ್ರದೇಶದ ಸಾಂಸ್ಕೃತಿಕ ಮತ್ತು ಆರ್ಥಿಕ ಪ್ರಗತಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ಒಂದು ಪ್ರಮುಖ ಮೈಲಿಗಲ್ಲೆನ್ನಬಹುದು. ಈ ಅವಶೇಷಗಳು ಈ ಪ್ರದೇಶದಲ್ಲಿ ಮಾನವನ ವಾಸದ ನೆಲೆಯನ್ನು ಬೆಳಕಿಗೆ ತರುವದರ ಜೊತೆಗೆ ಹಂತ ಹಂತವಾಗಿ ಜನ ಜೀವನ ಹೇಗೆ ಪ್ರಗತಿಯಾಯಿತೆಂಬುದನ್ನು ಸ್ಪಷ್ಟಪಡಿಸುತ್ತದೆ.

ಒಟ್ಟಿನಲ್ಲಿ ಈ ನೆಲೆಯು ಹಿಂದೆ ಶೋಧವಾದ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ಹೋಲುವುದರಿಂದ, ಈ ಪ್ರದೇಶದ ಪ್ರಾಗೈತಿಹಾಸದ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲುವುದರಿಂದ ಮಹತ್ವ ಪೂರ್ಣವಾಗಿದೆ. ಮತ್ತು ಹಲಸಿ ಹಾಗೂ ಇದರ ಸುತ್ತಮುತ್ತಲಿನ ಪ್ರದೇಶದಲ್ಲಿ; ಇನ್ನೂ ಕೆಲವು ಇಂತಹ ನೆಲೆಗಳಿರುವದನ್ನು ಸೂಚಿಸುತ್ತದೆ. ಈ ನೆಲೆಯ ಮತ್ತು ಇತರ ನೆಲೆಗಳ ಹೆಚ್ಚಿನ ಶೋಧನೆ ಮತ್ತು ಅಧ್ಯಯನ ಅವಶ್ಯ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*1 Sundara. A : "Archaeology of Halasi with special reference to Sculptures and Temples", ***Indian History & Culture*** (Dr. Sankalia felicitation volume), Delhi. 1989, p. 199.

*2 Sundara. A : ***The Early Chamber Tombs of South India***, Delhi 1975, p. 15-41.

*3. Op. cit. p. 61-90.

*4. ಸುಂದರ. ಅ : "ಇತ್ತೀಚಿನ ಕೆಲವು ಮುಖ್ಯ ಪುರಾತತ್ವ ಶೋಧನೆಗಳು", **ಕರ್ನಾಟಕ ಭಾರತಿ**, ಸಂ. ೮, ಸಂಚಿಕೆ ೩, ಪುಟ ೧೧-೧೨.

*5. Sundara. A : ***"Megaliths in Western coasts and ghat regions of Karnataka"***, ***Journal of Karnatak University*** (Soc. Sc.) Vol. 10 Dharwad, 1974, p. 62-71.

*6. ವಸಂತ ಶೆಟ್ಟಿ. ಬಿ. : "ದಕ್ಷಿಣ ಕನ್ನಡದ ಪ್ರಾಗೈತಿಹಾಸ", **ಸಂಶೋಧನ** (ಡಾ. ಎಂ. ಚಿದಾನಂದಮೂರ್ತಿ ಗೌರವ ಸಂಪುಟ), ಬೆಂಗಳೂರು, ೧೯೯೧, ಪು. ೭೧೮.

*7. Sundara. A : ***The Early Chamber Tombs of South India***, Delhi. 1975, p. 162-163.

*8. IAR. 1993-94. p.



(ಈ ಸಂಶೋಧನ ಪ್ರಬಂಧವನ್ನು ರಚಿಸಲು ನೆರವಾದ ಡಾ। ಅ. ಸುಂದರರವರನ್ನು ಮತ್ತು ಡಾ। ಎಚ್. ಆರ್. ರಘುನಾಥಭಟ್ಟರವರನ್ನು ಸ್ಮರಿಸುತ್ತೇನೆ.)

ಜಿ. ಕೆ. ದೇವರಾಜಸ್ವಾಮಿ*

# ತೀರ್ಥಹಳ್ಳಿ ತಾಲೂಕು ಮೃಗವಧೆಯಲ್ಲಿನ ಪ್ರಾಗೈತಿಹಾಸಿಕ ಚಿತ್ರಗಳು

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನಲ್ಲಿ ಅರೆಹಳ್ಳಿ, ಬಂಡಿಗಾಣೆ, ಬುಕ್ಲಾಪುರ, ಸೀತೂರು, ಯಡಗುಡ್ಡೆ ಮುಂತಾದ ಸ್ಥಳಗಳಲ್ಲಿ ಬೃಹತ್ ಶಿಲಾಯುಗದ ಶಿಲಾಗೋರಿಗಳು ಈ ಹಿಂದೆಯೇ ಪತ್ತೆಯಾಗಿದ್ದವು. ಮಜ್ಜಿಗೆಸರ, ಸೂರನಕೊಡಿಗೆ ಹಾಗೂ ಬುಕ್ಲಾಪುರಗಳಲ್ಲಿ ನೂತನ ಶಿಲಾಯುಗದ ಆಯುಧಗಳು ಹಾಗೂ ಮಡಕೆ ಕುಡಿಕೆಗಳ ಚೂರುಗಳು ದೊರೆತಿದ್ದವು. ಆದರೆ ತೀರ್ಥಹಳ್ಳಿ ತಾಲೂಕಿನಾದ್ಯಂತ ಎಲ್ಲಿಯೂ ಶಿಲಾಯುಗದ ರೇಖಾಚಿತ್ರಗಳು ಮಾತ್ರ ದೊರೆತಿರಲಿಲ್ಲ. ಈಗ ಮೊಟ್ಟಮೊದಲ ಬಾರಿಗೆ ತೀರ್ಥಹಳ್ಳಿ ತಾಲೂಕಿನ ಮೃಗವಧೆ ಎಂಬಲ್ಲಿ ಶಿಲಾಯುಗದ ರೇಖಾಚಿತ್ರಗಳು ನನ್ನ ಕ್ಷೇತ್ರ ಕಾರ್ಯದ ವೇಳೆಯಲ್ಲಿ ಶೋಧಿತವಾಗಿವೆ.

ತೀರ್ಥಹಳ್ಳಿಯಿಂದ ಸು. ೨೫ ಕಿ.ಮೀ. ದೂರದಲ್ಲಿರುವ ಮೃಗವಧೆ ಗ್ರಾಮವು ಬೆಟ್ಟಗುಡ್ಡ ಕಾಡು ಹಾಗೂ ನದಿಯಿಂದ ಸುತ್ತುವರಿಯಲ್ಪಟ್ಟಿರುವ ಪ್ರಕೃತಿಯ ಮಡಿಲಲ್ಲಿರುವ ಪುಟ್ಟ ಗ್ರಾಮ. ತ್ರೇತಾಯುಗದಲ್ಲಿ ಶ್ರೀರಾಮನು ವನವಾಸದ ವೇಳೆಯಲ್ಲಿ ಜಿಂಕೆಯನ್ನು ಸಂಹರಿಸಿದ ಸ್ಥಳ ಇದೆಂಬ ಸ್ಥಳಪುರಾಣವನ್ನುಳ್ಳ ಈ ಮೃಗವಧೆ ಗ್ರಾಮದ ದಕ್ಷಿಣ ದಿಕ್ಕಿನಲ್ಲಿ ೨ ಕಿ.ಮೀ. ದೂರದ ಮಲ್ಲಾಪುರ ಹಾಗೂ ಮಾನಿಕೊಪ್ಪಗಳ ಗಡಿಯಲ್ಲಿ ತುಂಗಾನದಿಯ ಉಪನದಿಯಾದ ಬ್ರಾಹ್ಮೀ ನದಿಯು ಹರಿಯುತ್ತಿದೆ. ಅದರ ಬಲ ಭಾಗಕ್ಕೆ ಸುಮಾರು ೧೦೬.೫ ಮೀಟರ್ ಆಗಲ ಹಾಗೂ ಭೂಮಟ್ಟದಿಂದ ಸುಮಾರು ಮೂರು ಮೀಟರುಗಳಷ್ಟು ಎತ್ತರವಾಗಿರುವ ಬಂಡೆಯ ಮೇಲೆ ಈ ರೇಖಾ ಚಿತ್ರಗಳನ್ನು ಬರೆಯಲಾಗಿದೆ. ಇವು ಕಠಿಣವಾದ ಕಣಶಿಲೆಯ ಬಂಡೆಯ ಮೇಲೆ ಕಲ್ಲಿನಿಂದಲೇ ಕುಟ್ಟಿ ರಚಿಸಿದ ಗೀರು ಚಿತ್ರಗಳಾಗಿವೆ.

ಇಲ್ಲಿಯ ಚಿತ್ರಗಳಲ್ಲಿ ಒಂದು ಹಸು, ಎರಡು ಗೂಳಿಗಳು, ಮೂರು ಜಿಂಕೆಗಳು ಹಾಗೂ ಗುರಿತಿಸಲು ಸಾಧ್ಯವಾಗದಂತಹ ಚೌಕಾಕೃತಿ; ಅದರಲ್ಲಿ ಬೆಟ್ಟಗಳಂತಹ ರಚನೆ-ಒಟ್ಟು ಏಳು ಚಿತ್ರಗಳು ಈ ಬಂಡೆಯ ಮೇಲಿವೆ.

ಒಟ್ಟು ಎರಡು ಹಂತಗಳಲ್ಲಿ ಚಿತ್ರಗಳಿದ್ದು, ಮೊದಲನೇ ಹಂತದಲ್ಲಿ ಒಂದು ಹಸು ಹಾಗೂ ಎರಡು ಗೂಳಿಗಳಿವೆ. ಎಡಭಾಗದಲ್ಲಿ ಹಸುವು ನಿಂತಿದ್ದರೆ ಅದರ ಎದುರಿನಲ್ಲಿ ಒಂದರ ಹಿಂದೆ ಒಂದರಂತೆ ಎರಡು ಗೂಳಿಗಳು ಹಸುವಿನ ಕಡೆಗೆ ಮುಖ ಮಾಡಿ ನಿಂತಿರುವಂತೆ ಚಿತ್ರಿಸಲ್ಪಟ್ಟಿದೆ. ಮೊದಲನೇ ಗೂಳಿಯ ಕೊಂಬುಗಳು ಹಿಂದಕ್ಕೆ ನೇರವಾಗಿ ಬಾಗಿವೆ. ಮೊದಲನೇ ಗೂಳಿಯ ಕುತ್ತಿಗೆ ಮತ್ತು ಮುಂಗಾಲುಗಳ ಮೇಲೆ ಗೆರೆಗಳಿವೆ. ಅದರ ಬಾಲ ಬಿರುಸಿನಿಂದ ನಿಮಿರಿ ನಿಂತಿದೆ. ಎರಡನೆಯ ಗೂಳಿಯ ಕೊಂಬು ಅರ್ಧಚಂದ್ರಾಕಾರಕ್ಕೆ ಬಾಗಿದೆ. ಉದರ ಭಾಗದಲ್ಲಿ ವೃತ್ತಾಕಾರದ ಗೆರೆಗಳನ್ನು ರಚಿಸಲಾಗಿದೆ. ಎರಡೂ ಗೂಳಿಗಳು ತಮ್ಮ ಎದುರಿನಲ್ಲಿರುವ ಹಸುವಿನೊಡನೆ ಹೋರಾಟಕ್ಕೆ ನಿಂತಂತೆ ಚಿತ್ರಿಸಲಾಗಿದೆ.

ಇವುಗಳಲ್ಲಿ ಹಸುವಿನ ಚಿತ್ರವು ೩೮ ಸೆಂ.ಮೀ. ಅಗಲ ಹಾಗೂ ೩೩ ಸೆಂ.ಮೀ. ಉದ್ದವಾಗಿದೆ. ಮೊದಲನೆಯ ಗೂಳಿಯು ೫೩.೫ ಸೆಂ.ಮೀ. ಉದ್ದ ಹಾಗೂ ೩೮ ಸೆಂ.ಮೀ. ಅಗಲವಾಗಿದೆ. ಎರಡನೆಯ ಗೂಳಿಯ ೬೩.೫ ಸೆಂ.ಮೀ. ಉದ್ದ ಹಾಗೂ ೮೦.೬ ಸೆಂ.ಮೀ. ಅಗಲವಾಗಿದೆ.

ಎರಡನೇ ಹಂತದಲ್ಲಿ, ಮೂರು ಜಿಂಕೆಯ ಚಿತ್ರಗಳಲ್ಲಿ ಮೊದಲನೆಯದು ಚೌಕಾಕಾರದ ಮನೆಯ ಚಿತ್ರದ ಸನಿಹದಲ್ಲಿದೆ. ಇನ್ನೆರಡು ಜಿಂಕೆಯ ಚಿತ್ರಗಳು ಒಂದರ ಪಕ್ಕ ಮತ್ತೊಂದು ನಿಂತಿದ್ದು ತಮ್ಮ ಮುಂದೆ ಇರುವ ಮೊದಲನೇ ಜಿಂಕೆಯ ಕಡೆಗೆ ನೋಡುತ್ತಾ ಅದರ ಬಳಿಗೆ ಓಡುತ್ತಿರುವಂತೆ ಚಿತ್ರಿತವಾಗಿವೆ. ಅವುಗಳು ಚಲನೆಯಲ್ಲಿರುವಂತೆ ರೇಖೆಗಳಲ್ಲಿ ಚಿತ್ರಕಾರನು ಸೊಗಸಾಗಿ ರಚಿಸಿದ್ದಾನೆ. ಇವುಗಳಲ್ಲಿ ಮೊದಲನೇ ಜಿಂಕೆಯು ೩೩ ಸೆಂ.ಮೀ. ಉದ್ದ ಹಾಗೂ ೩೫.೫ ಸೆಂ.ಮೀ. ಅಗಲವಾಗಿದೆ. ಉಳಿದೆರಡು ಜಿಂಕೆಗಳು ೪೮.೨ ಸೆಂ.ಮೀ. ಉದ್ದ, ೩೮ ಸೆಂ.ಮೀ. ಅಗಲ ಹಾಗೂ ೬೩.೫ ಸೆಂ.ಮೀ. ಉದ್ದ ಮತ್ತು ೧೨.೭ ಸೆಂ.ಮೀ. ಅಗಲವಾಗಿವೆ.

ಎರಡನೇ ಹಂತದಲ್ಲಿ ಒಂದು ಚೌಕಾಕಾರದ ಮನೆಯಂತಿದ್ದು ಅದರಲ್ಲಿ ಬೆಟ್ಟವೋ ಮನೆಯ ಚಿತ್ರವೋ ಗೊತ್ತಾಗುತ್ತಿಲ್ಲ. ಅದನ್ನು ಸಂಪೂರ್ಣ ಅರ್ಥೈಸಲು ಸಾಧ್ಯವಾಗಿಲ್ಲ.

ಶಿವಮೊಗ್ಗಾ ಜಿಲ್ಲೆಯಲ್ಲಿ ಈವರೆಗೆ ಎರಡು ಕಡೆ ಪ್ರಾಗೈತಿಹಾಸಿಕ ಬಂಡೆ ಚಿತ್ರಗಳು ದೊರೆತಿವೆ (ಹೊಳಲೂರು ಮತ್ತು ಹೊಳೆಹಟ್ಟಿ). ಇದು ಮೂರನೆಯದಾಗಿದೆ. ಹೊಳಲೂರು ಮತ್ತು ಹೊಳೆಹಟ್ಟಿಯ ಗೀರುರೇಖಾಚಿತ್ರಗಳನ್ನೆ ಇವು ಹೋಲುತ್ತವೆ. ಮತ್ತು ಹೊಳೆಹಟ್ಟಿಯಲ್ಲಿರುವ ಗೂಳಿಯ ರೇಖಾಚಿತ್ರದ ಪಡಿಯಚ್ಚೇನೋ ಎಂಬಂತೆ ಇಲ್ಲಿಯ ಗೂಳಿಯ ರೇಖಾಚಿತ್ರವನ್ನು ಬಿಡಿಸಲಾಗಿದೆ.

* ನಂ. ೩೯೩೬, ೨ನೇ ಅಡ್ಡರಸ್ತೆ, 'ಬಿ' ಬ್ಲಾಕ್, ೨ನೇ ಹಂತ, ಗಾಯತ್ರಿನಗರ, ಬೆಂಗಳೂರು - ೫೬೦ ೦೨೧.




೧. ಬೃಹತ್ ಶಿಲಾಯುಗದ ನಿವೇಶನಗಳು ದೊರೆತ ಸ್ಥಳ
೨. ನೂತನ ಶಿಲಾಯುಗದ ಆಯುಧಗಳು ದೊರೆತ ಸ್ಥಳ

ಪ್ರಾಗೈತಿಹಾಸಿಕ ರೇಖಾ ಚಿತ್ರಗಳು



ಇದೇ ರೀತಿಯ ಪ್ರಾಗೈತಿಹಾಸಿಕ ರೇಖಾಚಿತ್ರಗಳು ಕರ್ನಾಟಕದಲ್ಲಿ, ಬೆಳಗಾಂ, ವಿಜಾಪುರ, ರಾಯಚೂರು, ಬಳ್ಳಾರಿ, ಚಿತ್ರದುರ್ಗ (ನವಿಲುತೀರ್ಥ) ಬಿಲ್ಲಮರಾಯನಗುಡ್ಡ, ಮಸ್ಕಿ, ಕಲ್ಲೂರು, ಕುಪ್ಪಗಲ್, ಹಳಕಂಡಿ ಇನ್ನೂ ಮುಂತಾದ ಕಡೆ ದೊರೆತಿವೆ. ಇವುಗಳಲ್ಲಿ ಹೆಚ್ಚಾಗಿ ಆಕಳು, ಗೂಳಿ, ಜಿಂಕೆಯ ಚಿತ್ರಗಳೇ ಕಂಡುಬಂದಿವೆ. ಈ ಎಲ್ಲಾ ರೇಖಾಚಿತ್ರಗಳ ಕಾಲವನ್ನು ಶಿಲಾ-ತಾಮ್ರಯುಗ (ಕ್ರಿ. ಪೂ. ಸು. ೨೦೦೦-೨೦೦) ಎಂದು ವಿದ್ವಾಂಸರು ನಿರ್ಣಯಿಸಿದ್ದಾರೆ.* ಮೃಗವಧೆಯ ರೇಖಾಚಿತ್ರಗಳು ಅವುಗಳ ಹೋಲಿಕೆ ಇರುವುದರಿಂದ ಶಿಲಾ-ತಾಮ್ರಯುಗ-ಬೃಹತ್ ಶಿಲಾಯುಗದ ಕಾಲದವುಗಳೆಂದು ಹೇಳಬಹುದು.



[ಈ ಚಿತ್ರಗಳ ಬಗ್ಗೆ ನನ್ನ ಗಮನ ಸೆಳೆದ ಹಾಗೂ ಕ್ಷೇತ್ರಕಾರ್ಯದಲ್ಲಿ ಎಲ್ಲ ರೀತಿಯ ಸಹಕಾರ ನೀಡಿದ ಮೃಗವಧೆಯ ಇತಿಹಾಸದಲ್ಲಿ ಆಸಕ್ತರಾದ ಶ್ರೀಯುತ ಸೂರ್ಯನಾರಾಯಣ (೬೮ ವರ್ಷ) ಮತ್ತು ಶ್ರೀಧರಮೂರ್ತಿ ಎಂ. ಎಸ್. ಸಹೋದರರಿಗೆ ನನ್ನ ಕೃತಜ್ಞತೆಗಳು ಹಾಗೂ ಮಿತ್ರ ಎಂ. ಎನ್. ಸುಬ್ರಮಣ್ಯ ಅವರಿಗೆ ವಂದನೆಗಳು.]

---

* ಅಂತ್ಯ ಹಳೇ ಶಿಲಾಯುಗ - ಸು. ಕ್ರಿ. ಪೂ. (೪೦,೦೦೦-೧೦,೦೦೦)
ನೂತನ ಶಿಲಾ-ತಾಮ್ರಯುಗ - ಸು. ಕ್ರಿ. ಪೂ. (೨೦೦೦-೮೦೦)
ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿ - ಸು. ಕ್ರಿ. ಪೂ. (೧೨೦೦-೧೦೦)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಅ. ಸುಂದರ : **ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ**, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪.
*೨. ಜಯದೇವಪ್ಪ ಜೈನಕೇರಿ : *ಶಿವಮೊಗ್ಗ ಪರಿಸರದಲ್ಲಿಯ ಬೃಹತ್ ಶಿಲಾ ಸಂಸ್ಕೃತಿಯ ಗೀರುಬಂಡೆ ಚಿತ್ರಗಳು ಒಂದು ಹೊಸ ಶೋಧ*, **ಇತಿಹಾಸ ದರ್ಶನ**, ಸಂಪುಟ ೧೪, ೧೯೯೯, ಪುಟ-೮.

ಕರುಣ ಮಂಗಳವೇಢೆ*

# ಪ್ರಾಗಿತಿಹಾಸ ಕಾಲದ ಚಿತ್ರಗಳಲ್ಲಿ ನೃತ್ಯ

ಪ್ರಾಗಿತಿಹಾಸಕಾಲದ ಚಿತ್ರಗಳು ಆದಿಮಾನವನ ಜೀವನದ ಅಧ್ಯಯನಕ್ಕೆ ದೊರಕುವ ಪ್ರಮುಖ ಆಕರಗಳು. ಚಿತ್ರಗಳ ಶೋಧನೆ, ಅಧ್ಯಯನ ಪ್ರಾಗಿತಿಹಾಸಕಾಲದ ಮಾನವನ ಜೀವನ ಶೈಲಿಯ ಬಗ್ಗೆ ಅನೇಕ ಮಾಹಿತಿಗಳನ್ನು ಒದಗಿಸುತ್ತವೆ. ಭಾರತದಲ್ಲಿ ಇದರ ಅಧ್ಯಯನವು ಸುಮಾರು ಕ್ರಿ.ಶ. ೧೮೮೦ ರಿಂದ ಪ್ರಾರಂಭವಾಗಿದೆ ಎಂಬುದು ಡಾ। ಅ. ಸುಂದರ ಅವರ ಅಭಿಪ್ರಾಯ. ಪ್ರಾಗಿತಿ ಹಾಸಕಾಲದ ಅಧ್ಯಯನವು ಭಾರತದಲ್ಲಿ ಹ್ಯೂಬರ್ಟ್‌ನಾಕ್ಸ್ ಅವರಿಂದ ಪ್ರಾರಂಭವಾಗಿ, ಮುಂದೆ ೧೮೮೦-೮೩ರಲ್ಲಿ ಆರ್ಚಿಬಾಲ್ಡ್‌ಕಾರ್ಲೈಲ್ ಮತ್ತು ಜಾನ್‌ಕಾಕ್‌ಬರ್ನ್ ಅವರಿಂದ ಮುಂದುವರಿದು ಕ್ರಿ.ಶ.೧೯೩೫ರಲ್ಲಿ ಲಿಯೋನಾರ್ಡ್‌ಮನ್ ಅವರಿಂದ ಶೋಧನೆಗಳು ಮತ್ತು ಅಧ್ಯಯನ ನಡೆದವು. ನಂತರ ಕ್ರಿ.ಶ. ೧೯೫೭ರಲ್ಲಿ ಡಾ। ವಿಷ್ಣು. ಎಸ್. ವಾಕಣ್‌ಕರ್ ಎಂಬುವರಿಂದ ಮಹತ್ವದ ಶೋಧನೆಯಾಯಿತು, ಎಂದೆಲ್ಲ ಡಾ। ಅ.ಸುಂದರ ಅವರು *'ಕರ್ನಾಟಕದಲ್ಲಿ ಪ್ರಾಗಿತಿಹಾಸ ಕಲೆ'* ಎಂಬ ಪುಸ್ತಕದಲ್ಲಿ ತಿಳಿಸುತ್ತಾರೆ*[೧].

ಪ್ರಾಗಿತಿಹಾಸಕಾಲದ ನೃತ್ಯಕ್ಕೆ ಸಂಬಂಧಪಟ್ಟಂತೆ 'ಕಪಿಲ ವಾತ್ಸಾಯನ' ಅವರ *'ಡಾನ್ಸ್ ಇನ್ ಇಂಡಿಯನ್ ಪೈಂಟಿಂಗ್ಸ್'* ಎಂಬ ಪುಸ್ತಕದಲ್ಲಿ ಕೆಲವು ಮಾಹಿತಿಗಳು ದೊರೆಯುತ್ತವೆ.

ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಡಾ। ಅ.ಸುಂದರ ಅವರ ಮೇಲ್ಲೂಚಿತ ಪುಸ್ತಕ ಬಹಳ ಮುಖ್ಯವಾಗುತ್ತದೆ. ಡಾ। ಚೂಡಾಮಣಿ ನಂದಗೋಪಾಲ್ ತಮ್ಮ ಸಂಶೋಧನಾ ಗ್ರಂಥವಾದ *'ಡ್ಯಾನ್ಸ್ ಅಂಡ್ ಮ್ಯೂಸಿಕ್ ಇನ್ ಆರ್ಕಿಟೆಕ್‌ಚರ್'*ನ ಅಧ್ಯಾಯ ಹತ್ತರಲ್ಲಿ 'ಡಾ। ಆರ್.ಎಸ್.ಮುಗಳಿ' ಅವರ *'ದಿ ಹೆರಿಟೇಜ್ ಆಫ್ ಕರ್ನಾಟಕ'* ಪುಸ್ತಕದಲ್ಲಿ ತಿಳಿಸಿರುವ ವಿಷಯವನ್ನು*[೨] ಸಮರ್ಥಿಸಿ, ಕರ್ನಾಟಕದಲ್ಲಿ 'ಗೋಂಬಿಗುಡ್ಡ' ಎಂಬ ಪ್ರದೇಶದ ಬೆಟ್ಟಗುಡ್ಡಗಳಲ್ಲಿ ಆದಿಮಾನವನಿಂದ ನಿರ್ಮಿತವಾದ ಗೀರುಚಿತ್ರಗಳನ್ನು ಕಾಣಬಹುದು ಎಂದು ತಿಳಿಸುತ್ತಾರೆ.*[೩]

ಇದುವರೆಗೆ ಗಮನಿಸಿರುವಂತೆ ಪ್ರಾಗಿತಿಹಾಸಕಾಲದ ಚಿತ್ರಗಳಲ್ಲಿ ನೃತ್ಯಕ್ಕೆ ಸಂಬಂಧಪಟ್ಟ ಚಿತ್ರಗಳು ಸಾಕಷ್ಟು ದೊರೆತಿದ್ದರೂ, ಅವುಗಳ ವ್ಯಾಪಕವಾದ ಅಧ್ಯಯನವು ನಡೆದಿಲ್ಲವೆಂದು ತಿಳಿದು ಬರುತ್ತದೆ. ಈ ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವುಗಳಲ್ಲಿ ಅನೇಕ ವ್ಯತ್ಯಾಸಗಳು, ವರ್ಗೀಕರಣಗಳು ಇರುವುದು ತಿಳಿದು ಬರುತ್ತದೆ.

ಪ್ರಾಗಿತಿಹಾಸಕಾಲದ ನೃತ್ಯಗಳನ್ನು ಮುಖ್ಯವಾಗಿ ಎರಡು ವರ್ಗಗಳಲ್ಲಿ ವಿಂಗಡಿಸಬಹುದು:

*೧. 'ಕುಣಿತ', ೨. 'ನೃತ್ಯ'.*

ಚಿತ್ರ ೧ ರಲ್ಲಿ ಬೇಟೆಯ ಸಮಯದಲ್ಲಿ ಬೇಟೆ ಸಿಕ್ಕಾಗ ಬೇಟೆಗಾರ ಮತ್ತು ಆತನ ಸಂಗಡಿಗರು ಹೇಗೆಂದರೆ ಹಾಗೆ ಕುಣಿಯುತ್ತಿರುವುದು ಕಂಡುಬರುತ್ತದೆ. ಮತ್ತು ಇಲ್ಲಿ ಪುರುಷರು ಮಾತ್ರ ಕುಣಿತದಲ್ಲಿ ಮಗ್ನರಾಗಿದ್ದಾರೆ. ಚಿತ್ರ ೧ರಲ್ಲಿ ಕಾಣುವುದು 'ಕುಣಿತ' ಎಂದು ಹೇಳಬಹುದು.

ಚಿತ್ರ ೨ ರಲ್ಲಿ ಕಾಣುವ ಚಿತ್ರವನ್ನು 'ನೃತ್ಯ' ಎಂದು ಹೆಸರಿಸಬಹುದು. ಇಲ್ಲಿನ ಕುಣಿತದಲ್ಲಿ 'ಲಯ','ಗತಿ', ಗಳಿರುವುದನ್ನು ಗಮನಿಸಬಹುದು.

ಇದುವರೆಗೆ ದೊರೆತಿರುವ ಚಿತ್ರಗಳ ಆಧಾರದಲ್ಲಿ ನೃತ್ಯದ ಬೆಳವಣಿಗೆಯ ವಿವಿಧ ಹಂತಗಳು ಹೀಗಿರಬಹುದೆಂದು ಊಹಿಸಲು ಅವಕಾಶವಿದೆ.

***ಹಂತ-೧ :*** ಆದಿಮಾನವ ಯಶಸ್ವಿಯಾಗಿ ಬೇಟೆಯನ್ನು ಹಿಡಿಯುವ ಹಂಬಲದಲ್ಲಿ ಏಕಾಗ್ರತೆಯನ್ನು ಪಡೆಯಲು ತಾನು ನೆಲೆಸಿದ ತಾಣದ ನೆಲ, ಗೋಡೆಗಳ ಮೇಲೆ ಬೇಟೆಯ ಪ್ರಾಣಿಯ ಚಿತ್ರಗಳನ್ನು ಬಿಡಿಸಿ ಅದೇ ಗುಂಗಿನಲ್ಲಿ ಪ್ರಾಣಿಯ ಚಲನೆಯನ್ನು ಅನುಕರಿಸಿರುವ ಸಾಧ್ಯತೆ ಇದೆ. ಇದೇ ಕ್ರಿಯೆಯು ಮುಂದುವರೆದು 'ಅನುಕರಣ' (IMMITATION DANCE) ಉಗಮ ವಾಗಿರಬಹುದು.

***ಹಂತ-೨ :*** ಬೇಟೆಯ ಪ್ರಾಣಿ ತನಗೆ ಸಿಗಲೇಬೇಕೆಂಬ ಹಠದಲ್ಲಿ ನಿರ್ದಿಷ್ಟ ಪ್ರಾಣಿಯನ್ನು ವಶಪಡಿಸಿಕೊಳ್ಳಲೇಬೇಕೆಂದು ಬೇಟೆಗೆ ಮುನ್ನ ಅದರ ಚಿತ್ರ ಬರೆದು, ಅದರ ಲಯ, ಗತಿಗಳಲ್ಲಿ ತಾನೂ ಕುಣಿದು ಬೇಟೆಯಲ್ಲಿ ಯಶಸ್ವಿಯಾದಾಗ ಮುಂದಿನ ದಿನಗಳಲ್ಲಿ ಅದನ್ನೇ ತನ್ನ ದಿನಚರಿಯಾಗಿ ಪರಿವರ್ತಿಸಿಕೊಂಡಿರುವ ಸಾಧ್ಯತೆಗಳಿವೆ. ಅಂದರೆ ಒಂದು ಶಕ್ತಿಯನ್ನು ಆಹ್ವಾನಿಸಿ, ಆರಾಧಿಸಿ, ತನ್ನದಾಗಿಸಿಕೊಳ್ಳುವ ಕ್ರಿಯೆ 'ವಶೀಕರಣ ನೃತ್ಯ'ವಾಗಿ RITUAL DANCE ಪ್ರಾರಂಭವಾಗಿರಬಹುದು.

***ಹಂತ-೩ :*** ಯಶಸ್ವಿಯಾಗಿ ಬೇಟೆಯಾಡಿದ ನಂತರ ಬೇಟೆ ಸಿಕ್ಕಾಗ ಬಹಳ ಸಂತೋಷ ಸಂಭ್ರಮದಲ್ಲಿ ತನ್ನ ಗುಂಪಿನವರೊಡನೆ

* ೮೭೭, ೧೪ನೇ ಅಡ್ಡರಸ್ತೆ, ಮಹಾಲಕ್ಷ್ಮೀ ಬಡಾವಣೆ, ಬೆಂಗಳೂರು - ೫೬೦ ೦೮೬.



ಸೇರಿ ತನ್ನ ಭಾವನೆಗಳನ್ನು ವ್ಯಕ್ತಪಡಿಸಿ ಅವರೂ ಸಂತೋಷ ಸಂಭ್ರಮದಲ್ಲಿ ಪಾಲ್ಗೊಳ್ಳುವ ಸಂದರ್ಭವೇ 'ಪ್ರದರ್ಶನ ನೃತ್ಯ'ವೆಂದು [PI RFORMING DANCE] ಬೆಳೆದಿರುವ ಸಾಧ್ಯತೆಗಳಿವೆ.

***ಹಂತ-೪*** : ಕಾಲವು ಕಳೆದಂತೆ ಯಶಸ್ವಿಯಾಗಿ ಬೇಟೆಯಾಡಿದ ಮೇಲೆ ಅನೇಕ ಸಾಮಾಜಿಕ ಕಾರ್ಯಗಳ ಹಿನ್ನಲೆಯಲ್ಲಿ 'ಸಾಮಾಜಿಕ ನೃತ್ಯ'ಗಳು ಉಗಮವಾಗಿರಬಹುದು.

ಮುಂದೆ ಸಮಾಜವು ಬೆಳೆದಂತೆ ಮಾನವ ಸಾಮಾಜಿಕ ಕಟ್ಟು ಪಾಡುಗಳ ಹಿನ್ನೆಲೆಯಲ್ಲಿ ಅನೇಕ ಪದ್ಧತಿ, ಶಾಸ್ತ್ರೀಯತೆ, ಸಾಮಾಜಿಕ ಕಟ್ಟಳೆ, ನಿಯಮಗಳಲ್ಲಿ ಶಾಸ್ತ್ರೀಯ ನೃತ್ಯವು ಬೆಳೆದು ಬಂದಿರುವ ಸಾಧ್ಯತೆಗಳಿವೆ.

ಹೀಗೆ ಪ್ರಾಗಿತಿಹಾಸ ಕಾಲದಲ್ಲಿನ ನೃತ್ಯಗಳನ್ನು ೪ ರೀತಿಯಾಗಿ ವರ್ಗೀಕರಿಸಬಹುದಾಗಿದೆ.

| | | |
|---|---|---|
| ೧. | ಅನುಕರಣ ನೃತ್ಯ | IMMITATION DANCE |
| ೨. | ವಶೀಕರಣ ನೃತ್ಯ | RITUAL DANCE |
| ೩. | ಪ್ರದರ್ಶನ ನೃತ್ಯ | PERFORMING DANCE |
| ೪. | ಸಾಮಾಜಿಕ ನೃತ್ಯ | SOCIAL DANCE |

(ಅನಂತರದ್ದು ) ಶಾಸ್ತ್ರೀಯ ನೃತ್ಯ

TRADITIONAL DANCE

ಇಂದಿಗೂ ಜಾನಪದ ನೃತ್ಯಗಳಲ್ಲಿ ನಾಲ್ಕು ರೀತಿಯ ವರ್ಗೀಕರಣ ವಿರುವುದು ತಿಳಿದು ಬರುತ್ತದೆ.*೪

೧. ಸಾಂಸಾರಿಕ ಅಥವ ಅರೆಧಾರ್ಮಿಕ ನೃತ್ಯ

೨. ಸಾಮಾಜಿಕ ನೃತ್ಯ

೩. ಕ್ಷಾತ್ರ ನೃತ್ಯ

೪. ಋತು ಪ್ರಾಮಾಣಿಕ ನೃತ್ಯ

ಈ ನೃತ್ಯಗಳು ಪ್ರಾಗಿತಿಹಾಸಕಾಲದಿಂದ ಬೆಳವಣಿಗೆ ಹೊಂದಿ ಬಂದಿರುವ ನೃತ್ಯಗಳು ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಾಗಿತಿಹಾಸಕಾಲದ ನೃತ್ಯಗಳಲ್ಲಿ ವಿವಿಧ ವರ್ಗಗಳಿರುವ ಸಾಧ್ಯತೆಗಳಿವೆ ಎಂದು ಹೇಳಬಹುದಾಗಿದೆ.

ಡಾ|| ವಿಷ್ಣು. ಎಸ್. ವಾಕಣ್‌ಕರ್ ಮತ್ತು ಇರ್ವಿನ್ ನ್ಯೂಮೇಯರ್ ಅವರ ಪುಸ್ತಕಗಳಲ್ಲಿ ದೊರೆಯುವ ಭಾರತದ ವಿವಿಧ ಪ್ರದೇಶಗಳಲ್ಲಿನ ಪ್ರಾಗಿತಿಹಾಸ ಕಾಲದ ಚಿತ್ರಗಳ ಸ್ಥಳಗಳು ಮತ್ತು ವರ್ಗೀಕರಣ ಈ ಕೆಳಕಂಡಂತಿ**ದೆ.**

| | ಸ್ಥಳ | ನೃತ್ಯಗಳವಿಂಗಡನೆ |
|---|---|---|
| ೧. | ಸಿಮ್ಲಾ ಹಿಲ್, ಭೂಪಾಲ್ | ಬೇಟೆಕುಣಿತ |
| ೨. | ಸಿಮ್ಲಾ ಹಿಲ್,ಭೂಪಾಲ್ | ಬೇಟೆಕುಣಿತ-ವಶೀಕರಣ ನೃತ್ಯ |
| ೩. | ಬಿ.ಬಿ.ಹಾಸ್ಪಿಟಲ್ ಹಿಲ್, ಭೂಪಾಲ್ | ಅನುಕರಣಾ ನೃತ್ಯ-ಸಾಲುಕುಣಿತ |
| ೪. | ಶಿವಮಂದಿರ-ಭೂಪಾಲ್ | ವಶೀಕರಣ ನೃತ್ಯ- |
| ೫. | ಸಿಗ್ನಾಪುರ್ | ಪ್ರದರ್ಶನ ನೃತ್ಯ-ಸಾಲುಕುಣಿತ |
| ೬. | ಮೋದಿ | ವಶೀಕರಣ ನೃತ್ಯ |
| ೭. | ಭೀಮ್‌ಭೇಟ್ಕಾ | ವಶೀಕರಣ ನೃತ್ಯ ಮತ್ತು ಅನುಕರಣಾ ನೃತ್ಯ |
| ೮. | ಮೋದಿ | ಪ್ರದರ್ಶನ ನೃತ್ಯ-ಸಾಲುಕುಣಿತ |

| | | |
|---|---|---|
| ೯. | ರೈಸನ್ | ವಶೀಕರಣ ನೃತ್ಯ |
| ೧೦. | ಖಾರ್‌ವೈ | ಸಾಮಾಜಿಕ/ನೃತ್ಯ-ಸಾಲುಕುಣಿತ |
| ೧೧. | ಸುಜನಾಪುರ | ಬೇಟೆಕುಣಿತ-ಸುತ್ತು ಕುಣಿತ (ಸಾಮಾಜನೃತ್ಯ?) |
| ೧೨. | ನರಸಿಂಗ್‌ಘರ್ | ಬೇಟೆಗಾಗಿ, ವಶೀಕರಣ ನೃತ್ಯ |
| ೧೩. | ರೈಸನ್ | ವಶೀಕರಣ ನೃತ್ಯ |
| ೧೪. | ಧರ್ಮಪುರಿ | ವಶೀಕರಣ ನೃತ್ಯ |
| ೧೫. | ಖಾರಾವೈ | ವಶೀಕರಣ ನೃತ್ಯ |
| ೧೬. | ಭಾವ್ಲಾ | ವಶೀಕರಣ ನೃತ್ಯ |
| ೧೭. | ಭಲ್‌ದಾರಿಯಾ | ವಶೀಕರಣ ನೃತ್ಯ |
| ೧೮. | ಲಾಖಾ ಜೋರ್(ಭೀಮ್ ಭೇಟ್ಕಾ) | ವಶೀಕರಣ ನೃತ್ಯ |
| ೧೯. | ಕಂಡಕೋಬಾ | ವಶೀಕರಣ ನೃತ್ಯ |
| ೨೦. | ಪುಲಿಕರಾರ್ | ವಶೀಕರಣ ನೃತ್ಯ |

***ಡಾ।। ಅ. ಸುಂದರ ಅವರ 'ಕರ್ನಾಟಕದಲ್ಲಿ ಪ್ರಾಗಿತಿಹಾಸ ಕಾಲದ ಕಲೆ' ಪುಸ್ತಕದಲ್ಲಿ ದೊರೆಯುವ ಚಿತ್ರಗಳ ವಿಂಗಡನೆ***

| | ಸ್ಥಳ | ನೃತ್ಯಗಳ ವಿಂಗಡನೆ |
|---|---|---|
| ೧. | ಹಿರೇಬೆನಕಲ್ | ಪ್ರದರ್ಶನ ನೃತ್ಯ(ಸಾಲು ನೃತ್ಯ) |
| ೨. | ವೆಂಕಟಾಪುರ | ಪ್ರದರ್ಶನ ನೃತ್ಯ(ಜೋಡಿ ಸಾಲು ನೃತ್ಯ) |
| ೩. | ಮಲ್ಲಾಪುರ | ವಶೀಕರಣ ನೃತ್ಯ |
| ೪. | ಹಿರೇಬೆನಕಲ್ | ವಶೀಕರಣ ನೃತ್ಯ |
| ೫. | ಹಂಪಿ | ವಶೀಕರಣ ನೃತ್ಯವಿರಬಹುದು. ಗುಂಪು ನೃತ್ಯವಿದೆ |
| ೬. | ಮಲ್ಲಾಪುರ | ಜೋಡಿ ನೃತ್ಯ |
| ೭. | ಬಾದಾಮಿ-ಹಿರೇಗುಡ್ಡ | ವಶೀಕರಣ ನೃತ್ಯ-(ರೇಖಾಚಿತ್ರಗಳು) |
| ೮. | ತೆಕ್ಕಲಕೋಟೆ | ಪ್ರದರ್ಶನ ನೃತ್ಯ-(ಸಾಲುನೃತ್ಯ) |
| ೯. | ಹಿರೇಬೆನಕಲ್ | ಪ್ರದರ್ಶನ-ನೃತ್ಯ/ಕಲಹ(?). ಸಾಲುನೃತ್ಯ(?) ಸ್ಪಷ್ಟವಾಗಿ ತಿಳಿಯುವುದಿಲ್ಲ |
| ೧೦. | ಹಿರೇಬೆನಕಲ್ | ವಶೀಕರಣ ನೃತ್ಯ, ಪ್ರದರ್ಶನ ನೃತ್ಯ, ಸಾಮಜಿಕ ನೃತ್ಯ ಎಲ್ಲವೂ ಇದೆ. |

***ಇರ್ವಿನ್ ನ್ಯೂಮೇಯರ್ ಅವರ ಪ್ರಿಹಿಸ್ಟಾರಿಕ್ ಇಂಡಿಯನ್ ರಾಕ್ ಪೈಂಟಿಂಗ್ಸ್ ಪುಸ್ತಕದಲ್ಲಿ ಕಂಡು ಬರುವ ಚಿತ್ರಗಳ ವಿಂಗಡನೆ***

| | ಸ್ಥಳ | ನೃತ್ಯವಿಂಗಡನೆ |
|---|---|---|
| ೧. | ಲಾಖಾಜೋರು | ಬೇಟೆ ಕುಣಿತ |
| ೨. | ಭೀಮ್‌ಭೇಟ್ಕಾ | ಪ್ರದರ್ಶನ ನೃತ್ಯ |
| ೩. | ಲಾಖಾಜೋರು | ಪ್ರದರ್ಶನ ನೃತ್ಯ |
| ೪. | ಜೋರಾ | ಪ್ರದರ್ಶನ ನೃತ್ಯ |
| ೫. | ಖಾರ್‌ವೈ | ಸಾಮಾಜಿಕ ನೃತ್ಯ |
| ೬. | ಖಾರ್‌ವೈ | ಸಾಮಾಜಿಕ ನೃತ್ಯ(ಜೋಡಿ ನೃತ್ಯ) |
| ೭. | ರಾಮಭಜಾ | ಸಾಮಾಜಿಕ ನೃತ್ಯ(ಸಾಲು ನೃತ್ಯ) |
| ೮. | ಕಥೋಡಿಯಾ | ಸಾಮಾಜಿಕ ನೃತ್ಯ(ಸಾಲು ನೃತ್ಯ) |
| ೯. | ಭೀಮ್ ಬೇಟ್ಕಾ | ವಶೀಕರಣ ನೃತ್ಯ(ಸಾಂಸಾರಿಕ ನೃತ್ಯ) |

ಡಾ। ವಿಷ್ಣು. ಎಸ್. ವಾಕಣ್‌ಕರ್ ಮತ್ತು ರಾಬರ್ಟ್‌ಬ್ರೂಕ್ ಅವರ ಸ್ಟೋನ್ ಏಜ್ ಪೈಂಟಿಂಗ್ಸ್ (ಪುಸ್ತಕಗಳಲ್ಲಿ ದೊರೆಯುವ ಚಿತ್ರಗಳ ಆಧಾರದಲ್ಲಿ)'



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಡಾ। ಅ. ಸುಂದರ., **ಕರ್ನಾಟಕದಲ್ಲಿ ಪ್ರಾಗಿತಿಹಾಸಕಲೆ** ಪುಟ.೮೯.
*೨. ಡಾ। ಆರ್.ಎಸ್. ಮುಗಳಿ., **ದಿ ಹೆರಿಟೇಜ್ ಆಫ್ ಕರ್ನಾಟಕ**. ಪುಟ.೧೯೮.
*೩. ಡಾ। ಚೂಡಾಮಣಿ ನಂದಗೋಪಾಲ್., **ಡಾನ್ಸ್ ಅಂಡ್ ಮ್ಯೂಸಿಕ್ ಇನ್ ಆರ್ಕಿಟೆಕ್ಚರ್**: ಪುಟ:೧೧೦.
*೪. ಪ್ರೊ.ಯು.ಎಸ್.ಕೃಷ್ಣರಾವ್. ಚಂದ್ರಭಾಗಾದೇವಿ., **'ನೃತ್ಯಕಲೆ'**. ಪುಟ:೨೪೫.

ಎನ್. ಗೀತಾ* ಡಾ| ಪಿ. ವಿ. ಕೃಷ್ಣಮೂರ್ತಿ**

# ಶಾಸನಗಳಲ್ಲಿ ಸಂಕೇತ ಮತ್ತು ಸಂಕ್ಷೇಪಗಳ ಬಳಕೆ - ಒಂದು ಅವಲೋಕನ

ಪ್ರಾಚೀನ ಕಾಲದಿಂದಲೂ ಮಾನವ ಹಲವಾರು ಸಂಕೇತಗಳನ್ನು ತನ್ನ ಜೀವನದ ವ್ಯವಹಾರಗಳಲ್ಲಿ ಬಳಸುತ್ತಾ ಬಂದಿದ್ದಾನೆ. ಲಿಪಿ ಇಲ್ಲದಿದ್ದಾಗ ಆಂಗಿಕ ಸನ್ನೆಗಳಿಂದ ತೊಡಗಿ ಅವನ್ನು ಬರವಣಿಗೆಯ ಮಟ್ಟಕ್ಕೆ ಇಳಿಸುವಾಗ ಸಂಕೇತ ಅಥವಾ ಚಿಹ್ನೆಗಳನ್ನಾಗಿಸಿದ್ದಾನೆ. (ಮೂಲತಃ ಲಿಪಿಗಳು ಕೂಡ ಧ್ವನಿಯ ಸಂಕೇತಗಳೇ!) ಅಂದರೆ ವಿಶಾಲಾರ್ಥವನ್ನು ತಿಳಿಸುವ ಒಂದು ನಿರ್ದಿಷ್ಟ ಚಿಹ್ನೆಯನ್ನು **ಸಂಕೇತ** ಎನ್ನಬಹುದು. ಸಂಕೇತ ಎಂಬುದಕ್ಕೆ ನಿಘಂಟುಗಳಲ್ಲಿ ಏನನ್ನಾದರೂ ತೋರಿಸುವ ಚಿಹ್ನೆ, ಸನ್ನೆ, ಸೂಚನೆ, ಒಂದು ಗುರುತು, ಅಪ್ರತ್ಯಕ್ಷ ಸೂಚನೆ, ಕಟ್ಟುಪಾಡು ಎಂದು ಮುಂತಾಗಿ ಅರ್ಥಗಳನ್ನು ಕೊಡಲಾಗಿದೆ. ಒಂದು ಸಂಗತಿ ಅಥವಾ ವಸ್ತುವಿನ ಗುಣವನ್ನು ವಿಶೇಷವಾದ ಅರ್ಥದೊಂದಿಗೆ ತಿಳಿಸುವ ಸಂಕ್ಷಿಪ್ತ ಗುರುತುಗಳೇ *ಸಂಕೇತಗಳಾಗಿವೆ*. ಈ ಸಂಕೇತಗಳು ಧಾರ್ಮಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ರಂಗಗಳಲ್ಲಿ ಬಳಕೆಗೊಂಡಿವೆ. *ಸಂಕೇತಗಳ ಬಳಕೆ ಶಾಸನಶಿಲ್ಪ ಮತ್ತು ಶಾಸನ ಬರಹದ ಆರಂಭಭಾಗದಲ್ಲಿ ಹೆಚ್ಚಾಗಿ ಕಂಡುಬಂದಿದೆ.*

*ಸಂಕ್ಷೇಪ* ಎಂಬುದಕ್ಕೆ ಸಂಗ್ರಹ, ಅಡಕ ಎಂಬ ಅರ್ಥಗಳಿವೆ. ಹಾಗೇ ಸಂಕ್ಷಿಪ್ತ ಎಂಬುದಕ್ಕೆ ಅಡಕಗೊಳಿಸುವುದು ಕುಗ್ಗಿಸಲ್ಪಟ್ಟ ಎಂಬ ಅರ್ಥಗಳಿವೆ. ಯಾವುದೇ ಪದದ ಒಂದು ನಿರ್ದಿಷ್ಟ ಅಕ್ಷರವನ್ನು ಸಾಮಾನ್ಯವಾಗಿ ಮೊದಲ ಅಕ್ಷರವನ್ನು ಆ ನಿರ್ದಿಷ್ಟ ಪದಕ್ಕೆ ಪರ್ಯಾಯವಾಗಿ ಅಂದರೆ ಸಂಕೇತವಾಗಿ ಪರಿಗಣಿಸುವ ಅಕ್ಷರ ಅಥವಾ ಅಕ್ಷರಗಳ ಗುಂಪನ್ನು **ಸಂಕ್ಷೇಪ** ಎಂದು ಅರ್ಥೈಸಬಹುದು. ಈ ರೀತಿಯ ಸಂಕ್ಷಿಪ್ತ ಅಥವಾ *ಸಂಕ್ಷೇಪಗಳು ಶಾಸನಗಳಲ್ಲಿ - ವಿಶೇಷವಾಗಿ ಕಾಲ ಸೂಚನೆಯ, ಭೂ, ವಸ್ತು ಅಳತೆ-ಪ್ರಮಾಣ ಸೂಚನೆಯ ಭಾಗಗಳಲ್ಲಿ ಬಳಕೆಯಾಗಿರುವುದು ಉಂಟು. ಕೆಲವೊಮ್ಮೆ ಅಳತೆ ಪ್ರಮಾಣ ಮಾನಗಳನ್ನು ಸಂಕೇತಗಳ ಅಂದರೆ ಚಿಹ್ನೆಗಳ ರೂಪದಲ್ಲೂ ತೋರಿಸಿರುವುದನ್ನು ಕಾಣಬಹುದು.* ಸದ್ಯಕ್ಕೆ ಈ ಲೇಖನದಲ್ಲಿ ಶಾಸನ ಬರಹಕ್ಕೆ ಸಂಬಂಧಿಸಿದ-ಶಾಸನಗಳ ಆರಂಭ ಭಾಗ; ಕಾಲ ಉಲ್ಲೇಖ ಭಾಗ, ಮತ್ತು ದಾನ ವಿವರದ ಭಾಗಗಳಲ್ಲಿ ಬರುವ ಭೂಮಿ, ವಸ್ತು, ನಾಣ್ಯ ಇತ್ಯಾದಿ ವಿಧ ಹಾಗೂ ಪ್ರಮಾಣವನ್ನು ಸೂಚಿಸುವ ಸಂದರ್ಭಗಳಲ್ಲಿ ಬಳಕೆಯಾಗಿರುವ ಸಂಕೇತ-ಚಿಹ್ನೆ ಮತ್ತು ಸಂಕ್ಷೇಪಗಳ ಬಗ್ಗೆ ಸ್ಥೂಲವಾಗಿ ಅವಲೋಕಿಸಿ ಪರಿಶೀಲಿಸುವ ಪ್ರಯತ್ನವನ್ನು ಮಾಡಲಾಗಿದೆ.

ಸಾಮಾನ್ಯವಾಗಿ ಸಿದ್ಧಂ, ಸ್ವಸ್ತಿ, ಶ್ರೀ, ಎಂಬ ಶುಭಸೂಚಕ ಮಂಗಳದಾಯಕ ಪದಗಳ ಬಳಕೆ ಶಾಸನಗಳ ಆರಂಭದಲ್ಲಿ ಬಂದಿರುತ್ತವೆ. ಇವು ಶಾಸನಗಳ ಬರಹ ಭಾಗಕ್ಕೆ ಸಂಬಂಧಿಸಿದ ಪದಗಳಾಗಿದ್ದು, ಇವನ್ನು ಸಂಕೇತ ಚಿಹ್ನೆಗಳ ರೂಪದಲ್ಲಾಗಲೀ ಅಥವಾ ಹೆಚ್ಚು ಅಲಂಕಾರಿಕವಾಗಿಯಾಗಲೀ ಕಂಡರಿಸಿರುವುದುಂಟು. ಹಾಗೆಯೇ ಶಾಸನಶಿಲ್ಪಕ್ಕೆ ಸಂಬಂಧಿಸಿದಂತೆಯೂ ಚಿಹ್ನೆ ಅಥವಾ ಸಂಕೇತಗಳನ್ನು ಬಳಸಿರುವುದುಂಟು.[1]

ಬಹುತೇಕ ಶಾಸನಗಳ ಆರಂಭದಲ್ಲಿ ಹಾಗೂ ಕೆಲವೊಮ್ಮೆ ಶಾಸನ ಬರಹದ ಮಧ್ಯೆ ಅಥವಾ ಅಂತ್ಯದಲ್ಲಿ ಶುಭಸೂಚಕ ಸಂಕೇತ ಅಥವಾ ಶಬ್ದಗಳನ್ನು ಕಂಡರಿಸಿರುವುದು ಕಂಡುಬರುತ್ತದೆ. ಅವುಗಳಲ್ಲಿ ಮೇಲೆಯೇ ಸೂಚಿಸಿರುವಂತೆ 'ಸಿದ್ಧಂ', 'ಸ್ವಸ್ತಿ', 'ಶ್ರೀ' ಎಂಬುವು ಮುಖ್ಯವಾದುವಾಗಿವೆ. 'ಸಿದ್ಧಂ' ಎಂಬುದು ಕಾಲಾಂತರದಲ್ಲಿ ಚಿಹ್ನೆಯ ರೂಪದಲ್ಲಿ ಕಂಡರಿಸಿರುವುದನ್ನು ಕಾಣಬಹುದು. ಇತರ ಶುಭ ಸೂಚಕ ಚಿಹ್ನೆಗಳಾದ 卐 **ಸ್ವಸ್ತಿಕ**.[2] ಚಕ್ರದ ಮೇಲಿರುವ ತ್ರಿಶೂಲದಂತಿರುವ **ತ್ರಿರತ್ನ**,[3] ಶ್ರೀವತ್ಸ,[4] 'ಬೇಲಿಯೊಳಗಿನ ಮರ',[5] ಜೊತೆಗೆ ಪ್ರಣವ ಸೂಚಕವಾದ ಓಂಕಾರ- ಓಂ[6] ಎಂಬ ಸಂಕೇತವೇ ಮುಂತಾದವು ಹಲವು ಪ್ರಾಚೀನ ಶಾಸನಗಳಲ್ಲಿ ಕಂಡುಬಂದಿರುತ್ತವೆ.

ಆರಂಭ ಕಾಲದ ಪ್ರಾಕೃತ ಶಾಸನಗಳಲ್ಲಿ ವಿಶೇಷವಾಗಿ 'ಸಿದ್ಧಂ' ಎಂಬ ಶುಭ ಸೂಚಕ ಪದ ಬಳಕೆಯಾಗಿದೆ, 'ಸಿದ್ಧಂ' ಎಂದರೆ 'ಸಿದ್ಧಿರಸ್ತು' ಎಂದೇ ಅರ್ಥ. ಅಂದರೆ ಸಿದ್ಧಿಯಾಗಲೀ, ಜಯಸಿಗಲಿ ಎಂದು. 'ಸಿದ್ಧಂ' ಜೊತೆಗೆ 'ಸ್ವಸ್ತಿ' ಎಂಬುದನ್ನು ಬಳಸಿರುವುದುಂಟು. ಮುಂದೆ 'ಸಿದ್ಧಂ' ಎಂಬುದನ್ನು ಸಂಕೇತದ ಮೂಲಕ ಸೂಚಿಸುವ ಪದ್ಧತಿ ವ್ಯಾಪಕವಾಯಿತು. ಅಂತೆಯೇ ಆ ಸಂಕೇತದ ಅನಂತರ ಸ್ವಸ್ತಿ ಎಂಬ ಪದ ನಿಯತವಾಗಿ ಬರೆಯಲಾಗಿರುವುದು ಕಂಡುಬರುತ್ತದೆ. ಕಾಲಾಂತರದಲ್ಲಿ ಶಾಸನದ ಆರಂಭದಲ್ಲಿ ದಾನಿ ಅಥವಾ ಪ್ರತಿಗ್ರಾಹಿಯ ಇಷ್ಟದೇವರನ್ನು ಸ್ತುತಿಸುವ ಭಾಗಗಳು ಸೇರತೊಡಗಿದವು. ಅಂತಹ ಸಂದರ್ಭಗಳಲ್ಲಿ 'ಸಿದ್ಧಂ' ಎಂಬುದನ್ನು ಸೂಚಿಸುವ ಸಂಕೇತವನ್ನು ಮೊದಲು ಬರೆದು ಅನಂತರ 'ಸ್ವಸ್ತಿ' ಎಂಬ ಪದವನ್ನು ಬರೆದು ಮುಂದೆ ಇಷ್ಟ ದೇವತಾ ಸ್ತುತಿಯನ್ನು ಬರೆಯುತ್ತಿದ್ದರು. ಉದಾಹರಣೆಗೆ. ಗಂಗರ ಸು. ಕ್ರಿ.ಶ.

*ಸಂಶೋಧನ ವಿದ್ಯಾರ್ಥಿನಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.
**ಶಾಸನಶಾಸ್ತ್ರ ಗೌರವ ಉಪನ್ಯಾಸಕ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು - ೫೬೦ ೦೧೮.

೪೫೦ರ ಪೆನುಗೊಂಡೆಯ ತಾಮ್ರ ಶಾಸನ ಇದಕ್ಕೆ ಒಂದು ಒಳ್ಳೆಯ ಸಾಕ್ಷಿಯಾಗಿದೆ. ಅನಂತರ ಕಾಲದ ಶಾಸನಗಳಲ್ಲಿ ದೇವತಾಸ್ತುತಿ ಭಾಗ ವಿಸ್ತೃತವಾಗಿರುವುದುಂಟು.

ಶಾಸನಗಳಲ್ಲಿ 'ಸಿದ್ಧಂ' ಎಂಬುದಕ್ಕೆ ಬಳಸಿರುವ ಸಂಕೇತ ಸುರಳಿಯಂತಿದ್ದರೂ, ಕೆಲವು ಶಾಸನಗಳಲ್ಲಿ ವಿಭಿನ್ನವಾಗಿರುವುದು ಕಾಣುತ್ತದೆ, ಅಂದರೆ, S ಅಥವಾ S ಆಕಾರದಲ್ಲೂ ಕಂಡರಿನೆರುವುದು. 'ಸಿದ್ಧಂ' ಎಂಬುದರ ಸಂಕೇತ ಬೇರೆ ಬೇರೆ ಶಾಸನಗಳಲ್ಲಿ ವಿಭಿನ್ನವಾಗಿದೆ.

ಎಪಿಗ್ರಾಫಿಯ ಇಂಡಿಕ, ಸಂಪುಟ ೩೦, ಪು. ೨೭ ಎದುರು ಚಿತ್ರ

ಅದೇ ಪು. ೨೨ರ ಎದುರು ಚಿತ್ರ

ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೩, ನಂಜನಗೂಡು ೧೭೫. ಇತ್ಯಾದಿ

ಶ್ರವಣಬೆಳಗೊಳದ ಮೊದಲನೇ ಶಾಸನದಲ್ಲಿ ಬಳಸಿರುವ ಇದನ್ನು 'ಸಿದ್ಧಂ' ಎಂದೇ ಓದಲಾಗಿದೆ.

ಇಂತಹ ಚಿಹ್ನೆಗಳನ್ನೇ ಕೆಲವು ಶಾಸನಗಳಲ್ಲಿ ಪ್ರಣವ-ಓಂ ಎಂಬುದಕ್ಕೆ ಬಳಸಲಾಗಿದೆ. ಹಾಗಾಗಿ ಎಷ್ಟೋ ವೇಳೆ ಸಿದ್ಧಂ ಚಿಹ್ನೆಗೂ 'ಓಂ' ಚಿಹ್ನೆಗೂ ಅಂತಹ ವ್ಯತ್ಯಾಸವೇನು ಕಂಡು ಬರುವುದಿಲ್ಲ. ವಾಕ್ಯದ ಪ್ರಾರಂಭದಲ್ಲಿ ಮಾತ್ರವಲ್ಲದೆ ವಾಕ್ಯದ ಮಧ್ಯದಲ್ಲಿ ಆ ವಾಕ್ಯ ಮುಗಿದಾಗ ಓಂ, ಓಂ ಎಂದು ಎರಡು ಸಲ ಚಿಹ್ನೆಯಾಗಿ ಬಳಸಲಾಗಿದೆ. (ಎ.ಇಂ. ಸಂ-೫, ಸಂಖ್ಯೆ ೧೮.)

ಭಾರತೀಯ ಸಂಸ್ಕೃತಿಯಲ್ಲಿ ಪ್ರಣವ ಮಂತ್ರ ಓಂ ಕಾರಕ್ಕೆ ವಿಶೇಷ ಮನ್ನಣೆ ಇದೆ. 'ಓಮಿತ್ಯೇತದಕ್ಷರಮಿದಮ್ ಸರ್ವ್ವಂ' ಎಂದರೆ ಹಿಂದೆ ಆದದ್ದು ಈಗ ಇರುವುದು, ಮುಂದಿನದು ಈ ಮೂರು ಕಾಲಗಳಿಗೂ ಮೀರಿದ್ದು ಯಾವುದೋ ಅದೇ ಇದು ಎಂದು ಮಾಂಡೋಕ್ಯೋಪನಿಷತ್ ಆರಂಭವಾಗುತ್ತದೆ. 'ಓಂ' ಎಂಬುದು ಒಂದು ಬೀಜಾಕ್ಷರ, ಇದು **ಅ ಉ ಮ** ಧ್ವನಿಗಳ ಸಂಯೋಗದಿಂದ ಆಗಿದೆ. ಇದನ್ನು ಓಂಕಾರ, ಪ್ರಣವ ಎಂದೂ ಕರೆಯುತ್ತಾರೆ. ಸ್ತುತಿಸು ಅಥವಾ ಶಬ್ದ ಮಾಡು ಎಂಬ ಅರ್ಥವುಳ್ಳ ಧಾತುವಿನಿಂದ ಪ್ರಣವ ಶಬ್ದ ಹುಟ್ಟಿದೆ ಎಂದೂ, ನಮಸ್ಕರಿಸು ಎನ್ನುವ ಅರ್ಥ ಕೊಡುವ **ನಮ್** ಧಾತುವಿನಿಂದ ಉತ್ಪತ್ತಿಯಾಗಿದೆ ಎಂದು ಹೇಳಿಕೆಗಳಿವೆ. 'ಓಂ' ಪರಬ್ರಹ್ಮ ಸ್ತುತಿ; ಅವನಿಗೆ ನಮಿಸುವುದರ ಸಂಕೇತ ಅಂದರೆ ವಿಷ್ಣು, ಶಿವ, ಬ್ರಹ್ಮರ ಪ್ರತಿರೂಪವೆಂದು ಭಾವಿಸಿರುವುದರಿಂದ 'ಓಂ' ತ್ರಿಮೂರ್ತಿಗಳ ಏಕತೆಯನ್ನು ಸೂಚಿಸುತ್ತದೆ ಎಂಬ ಅಭಿಪ್ರಾಯವಿದೆ. ಈ ಪ್ರಣವ ಶಬ್ದ 'ಓಂ' ಎಂಬುದನ್ನು ಶಾಸನಗಳಲ್ಲಿ ಬಹು ಪ್ರಾಚೀನ ಕಾಲದಲ್ಲೇ ಬಳಕೆಯಾಗಿರುವುದು ಕಂಡುಬರುತ್ತದೆ. ಈ ಓಂ ಕಾರವನ್ನು ಮೇಲೆ ವಿವರಿಸಿದಂತೆ ಸುರಳಿಯಾಕಾರದಲ್ಲಿ ಸಂಕೇತವಾಗಿ ಬಳಸಿದ್ದರೂ 'ಓಂ' ಎಂಬ ಅಕ್ಷರದ ಪೂರ್ಣ ರೂಪದಲ್ಲಿ ಆಯಾ ಪ್ರಾದೇಶಿಕ ಲಿಪಿಗಳಲ್ಲಿ ಬಳಸಲಾಗಿದೆ, ಉದಾ: ॐ ಓಂ ಇತ್ಯಾದಿ., ಅನೇಕ ಶಾಸನಗಳು ಓಂ ನಮಶ್ಶಿವಾಯಃ, ಓಂನಮಃ ಸಿದ್ಧೇಭ್ಯಃ ಎಂದು ಮುಂತಾಗಿ ಆರಂಭಗೊಳ್ಳುತ್ತವೆ.

ಸು + ಅಸ್ತಿ ಸೇರಿ 'ಸ್ವಸ್ತಿ' ಆಗಿದೆ. ಒಳ್ಳೆಯದು, ಶುಭವಾಗಲಿ ಎಂಬುವ ಅರ್ಥದಲ್ಲಿ ಶಾಸನಗಳ ಆರಂಭದಲ್ಲಿ ಈ ಶುಭ ಸೂಚಕ ಪದ ವ್ಯಾಪಕವಾಗಿ ಬಳಕೆಗೊಂಡಿದೆ. ಇದನ್ನು ಸ್ವಸ್ತಿಕ ಚಿಹ್ನೆಯ ಮೂಲಕ ಕೆಲವು ಕಡೆ ಸೂಚಿಸಿರುವುದುಂಟು. ಉದಾ: ಕಾರ್ಕಳದ ಹಿರೇ ನೇಮೀಶ್ವರ ಬಸದಿ, ಗುರುಗಳ ಬಸದಿ ಮುಂತಾದೆಡೆಗಳಲ್ಲಿ

卐 ನಮಸ್ಸಿದ್ಧೇ ಭ್ಯಃ (ಸೌ.ಇಂ.ಇ ಸಂಪುಟ ೭, ಶಾಸನ ಸಂಖ್ಯೆ ೨೪೭)

卐 ಶ್ರೀಮತ್ಪರಮಗಂಭೀರಸ್ಯಾಧ್ವಾಮೋಘ ಲಾಂಛನಂ (ಅದೇ, ೨೪೬)

卐 ಶಕನೃಪನ ೧೩೨೮ ರಾಕ್ಷಸ ಸಂವತ್ಸರದ .....ಎ.ಇಂ. ಸಂಪುಟ ೭, ಪು. ೧೧೧-೧೨, ಸಂಖ್ಯೆ ೧೪)

卐 ಶ್ರೀಮತು ಶಕವರ್ಷ ೧೦೩೧ನೆಯ ಕಾಲಯುಕ್ತ ಸಂವಚ್ಛರ (ಕೆರವಸೆ ಕಾರ್ಕಳ, ಸಂಖ್ಯೆ ೬೯, ತುಳುನಾಡಿನ ಶಾಸನಗಳು).

ಪರಸ್ಪರ ಛೇದಿಸುವ ಬಾಗಿಸಿದ ಬಾಹುಗಳ ಆಕಾರದಲ್ಲಿ ಸ್ವಸ್ತಿಕ ಚಿಹ್ನೆ ಇದೆ. ನಾಗರ ಹಾವಿನ ಹೆಡೆಯಲ್ಲಿ ಸ್ವಸ್ತಿಕ ಚಿಹ್ನೆ ಇದೆಯೆಂದು ನಾಗಾಜನ, ನಾಗಪೂಜಕರು ನಂಬಿರುತ್ತಾರೆ. ಅಂತೆಯೇ ಅವರ ಸಂಸ್ಕೃತಿಯೊಂದಿಗೆ ಸ್ವಸ್ತಿಕ ಸಂಬಂಧವಿದೆ. ಇದಲ್ಲದೆ ವಸಂತದ ಸೂರ್ಯನನ್ನು ಪ್ರತಿನಿಧಿಸುವ ಬಲಗೈ ಪ್ರದಕ್ಷಿಣಾಕಾರದಲ್ಲಿನ ಸ್ವಸ್ತಿಕ (ಇದು ಶುಭಕಾರಕ) ಹಾಗೇ ಎಡಗೈ - ಅಪ್ರದಕ್ಷಿಣಾಕಾರದ ಸ್ವಸ್ತಿಕ ಶರತ್ಕಾಲದ ಸೂರ್ಯನನ್ನು ಪ್ರತಿನಿಧಿಸುತ್ತದೆ-ಇದು ಅಶುಭವೆಂದು ಹೇಳಲಾಗಿದೆ. ಆರ್ಯರ ಸೂರ್ಯ ಉಪಾಸನೆಯಲ್ಲಿ ಇದು ಅನಿವಾರ್ಯ ಅಂಶ. ಸೂರ್ಯನ ಪ್ರತಿನಿಧಿಯಾಗಿ ಈ ಚಿಹ್ನೆಯ ಬಳಕೆಯಾಗಿದೆ. ಹಿಟ್ಲರನ ನೇತೃತ್ವದಲ್ಲಿ ಜರ್ಮನಿಯಲ್ಲಿ ತಿರುಗು ಮುರುಗಾದ ಸ್ವಸ್ತಿಕ ರಾಷ್ಟ್ರೀಯ ಸಂಕೇತವಾಗಿತ್ತು.

ಶಾಸನಗಳಲ್ಲಿ 'ಸ್ವಸ್ತಿ'ಯೊಂದಿಗೆ 'ಶ್ರೀ' ಬಹುಮಟ್ಟಿಗೆ ಕೂಡಿಕೊಂಡೇ ಬಂದಿರುತ್ತದೆ. ಶ್ರೀ ಎಂಬುದಕ್ಕೆ ಸಿರಿ, ಸಂಪತ್ತು ಐಶ್ವರ್ಯ; ಅಭಿವೃದ್ಧಿ, ಏಳಿಗೆ, ಘನತೆ, ಗಾಂಭೀರ್ಯ, ಕಾಂತಿ, ಶೋಭೆ, ಸಂಪತ್ತಿನ ಅಧಿದೇವತೆ ಲಕ್ಷ್ಮಿ ಎಂಬ ಅರ್ಥಗಳಿವೆ. ಋಗ್ವೇದದ ಶ್ರೀಸೂಕ್ತದಲ್ಲಿ 'ಶ್ರೀ' ಅಥವಾ ಲಕ್ಷ್ಮಿಯನ್ನು 'ಪದ್ಮ', 'ಪದ್ಮಮಾಲಿನೀ', 'ಪದ್ಮಾಸಿನೀ', 'ಪದ್ಮಿನೀ' ಎಂದು ವರ್ಣಿಸಲಾಗಿದೆ. ಹೀಗೆ ವೇದೋಕ್ತವಾಗಿ 'ಶ್ರೀ'ಯ ಚರಿತ್ರೆ ಎರಡು ರೀತಿ ಬೆಳೆದಿರುವುದು ಕಂಡುಬರುತ್ತದೆ. ಶಕ್ತಿಯಾಗಿ ವಿಷ್ಣುವಿನ ಜೊತೆಯಲ್ಲಿ ಕಲ್ಪಿಸಿರುವುದು ಒಂದು. ಭೂಮಾತೆಯೊಂದಿಗೆ ದೇವತೆಯಾಗಿ ರೂಪಿಸಿರುವುದು ಇನ್ನೊಂದು. ಅಂದರೆ ವೇದ ಕಾಲಕ್ಕೂ ಮೊದಲು ಈಕೆ ಬೇಸಾಯಗಾರರ ಧಾನ್ಯ ದೇವತೆ ಯಾಗಿದ್ದಂತೆ ತೋರುತ್ತದೆ. ಆಕೆಯ ಬಳಕೆಯ ಹೆಸರಾದ 'ಸಿರಿ' 'ಸಿರಿಮಾದೇವತಾ' 'ದೇವಿಸಿರಿ' ಇವುಗಳನ್ನು ಬಾರ್ಹತ್, ಸಾಂಚಿ ಸ್ತೂಪಗಳಲ್ಲಿ, ಗುಪ್ತರ ನಾಣ್ಯಗಳಲ್ಲಿ ಕಾಣುತ್ತೇವೆ; ಲ್ಯಾಟಿನ್

ಭಾಷೆಯ 'ಸಿರಿಸ್' ಮತ್ತು ಈ ಸಿರಿ (ಶ್ರೀ) ಇದಕ್ಕೆ ನಿಕಟ ಸಂಬಂಧವಿದ್ದಂತೆ ತೋರುತ್ತದೆ. ಗ್ರೀಕರ 'ಡಿಮೀಟರ್' 'ಆಫ್ರೋಡೈಟ್' ಇವರೆಲ್ಲ ಧಾನ್ಯದೇವತೆಗಳೇ, ತುಷ್ಟಿಗೆ, ಸಂಪತ್ತಿಗೆ, ಸುಖಕ್ಕೆ ಅಭಿಯಾನ ದೇವತೆಗಳೇ, ಒಂದೇ ಮನೋಧರ್ಮದ ಹಿನ್ನೆಲೆಯಲ್ಲಿ ಮೈದಳೆದವರು. ಈ ವಿವರಗಳಲ್ಲದೆ ಹೆಚ್ಚುಗಾರಿಕೆ, ಶ್ರೇಷ್ಠತೆ; ಅಲಂಕಾರ, ಬುದ್ಧಿ ಶಕ್ತಿ, ಪ್ರತಿಭೆ; ಎಂಬಂತೆ ವಿಶಾಲ ವ್ಯಾಪ್ತಿಯ ಅರ್ಥಗಳನ್ನು ಪಡೆದಿದ್ದು ಧರ್ಮ, ಅರ್ಥ ಕಾಮಗಳೆಂಬ ತ್ರಿವರ್ಗಗಳನ್ನು ಪ್ರತಿನಿಧಿಸುತ್ತದೆ ಎಂಬುದನ್ನು ನಿಘಂಟುಕಾರರು ತೋರಿಸಿದ್ದಾರೆ. ಶ್ರೀ ಎಂಬುದು ಚಂದ್ರನ ಹದಿನಾರು ಕಲೆಗಳಲ್ಲಿ ಒಂದೆಂದು ವಿವೇಕ ಚಿಂತಾಮಣಿಯಲ್ಲಿ ಉಕ್ತವಾಗಿದೆ. ಶ್ರೀ ಹೆಸರಿನ ಸಸ್ಯ, ಛಂದಸ್ಸು, ಸಂಗೀತದ ರಾಗವೂ ಇದೆ. ಅಲ್ಲದೆ ಜೈನ ಸಂಪ್ರದಾಯದ ಅಷ್ಟದಿಕ್ಕನ್ನಿಕೆಯರಲ್ಲಿ 'ಶ್ರೀ' ಎಂಬುವಳು ಒಬ್ಬಳು. ಹೀಗೆ ಭಾರತೀಯ ಸಂಸ್ಕೃತಿಯಲ್ಲಿ ಬಹುವ್ಯಾಪಕತೆಯನ್ನು ಪಡೆದಿರುವ 'ಶ್ರೀ' ಎಂಬುದನ್ನು ವಿಭಿನ್ನ ಭಾಷಾ ಲಿಪಿಗಳಲ್ಲಿ ಹೆಚ್ಚು ಅಲಂಕಾರಿಕವಾಗಿ ಶಾಸನಗಳಲ್ಲಿ ಮೂಡಿಸಿರುವುದು ವಿಸ್ಮಯದ ಸಂಗತಿ.

ಕ್ರಿಸ್ತ ಶಕದ ಆರಂಭದ ಶತಕಗಳಿಂದಲೇ ಕಾಲಗಣನೆಗೆ ಸಂಬಂಧಿಸಿದ ಪದಗಳನ್ನು ಸಂಕ್ಷೇಪಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದಾಗಿದೆ. ನಾಗಾರ್ಜುನ ಕೊಂಡದ ಇಕ್ಷ್ವಾಕುವಂಶದ ಶಾಸನದಲ್ಲಿ ಸವಂತ್ಸರ ಎಂಬುದಕ್ಕೆ 'ಸಂವ' ಎಂದೂ, ಪಕ್ಷ ಎಂಬುದಕ್ಕೆ 'ಪ' ಎಂದು ದಿವಸ ಎಂಬುದಕ್ಕೆ 'ದಿವ' ಎಂದೇ ಬಳಕೆಯಾಗಿರುವುದನ್ನು ಕಾಣಬಹುದು (ಎ.ಇಂ. ಸಂಪುಟ ೨೦ ಪು.೧೨).

| **ಕಾಲ ಸೂಚಕ ಪದಗಳು** | **ಬಳಕೆಯಾಗಿರುವ ಸಂಕ್ಷೇಪಗಳು** |
|---|---|
| *ಸಂವತ್ಸರ* | ಸ, ಸಂ, ಸವ, ಸಂವ, ಸಂವತ್ |
| *ಪಕ್ಷ* | ಪ |
| ಶುಕ್ಲ ಪಕ್ಷ ದಿನ / ತಿಥಿ | ಶುದಿ, ಸುದಿ ಅಥವಾ ಶುತಿ |
| ಬಹುಳ ಪಕ್ಷ ದಿನ / ತಿಥಿ | ಬದಿ, ವದಿ, ಬತಿ, ವತಿ |
| *ದಿವಸ* | ದಿ, ದಿನ |
| **ಋತುಗಳು:** ಗ್ರೀಷ್ಮ | ಗಿ, ಗ್ರಿ, ಗ್ರಿ |
| ವರ್ಷ | ವ, ವಾ, (ಪ್ರಾಕೃತ-ವಾಸ ಎಂಬುದಕ್ಕೆ) |
| ಹೇಮಂತ | ಹೇ, ಹೇಮ |

ಸಂವತ್ಸರ ದಿನಾಂಕ, ತಾರೀಖು ಮುಂತಾದ ಕಾಲ ಗಣನೆಗೆ ಸಂಬಂಧಿಸಿದ ವಿವರಗಳಿಗೆ ಸಂಕ್ಷೇಪಗಳನ್ನು ನಾವು ಇಂದಿಗೂ ಬಳಸುತ್ತಿದ್ದೇವೆ. ಕನ್ನಡ ಶಾಸನಗಳಲ್ಲಿ ವಾರಗಳ ಉಲ್ಲೇಖಗಳಿಗಿಂತ ಪಕ್ಷದ ದಿನಗಳ ಉಲ್ಲೇಖಕ್ಕೆ ಹೆಚ್ಚಿನ ಗಮನ ಕೊಟ್ಟಿರುವುದು ಕಂಡುಬರುತ್ತದೆ. ತೀರ ಅಪರೂಪಕ್ಕೆ ವಾರದ ಹೆಸರಿಗೂ ಸಂಕ್ಷೇಪಗಳು ಬಳಕೆಯಾಗಿರುವುದುಂಟು:

....ಪರಾಭವ ಸಂವತ್ಸರದ ಮೇಷ ಮಾಸ ೧೦ನೆಯ **ಗುರು** ಚಕ್ರಪಾಣಿಯ ದೇವಾಲ್ಯದ ........ (ಸೌ.ಇಂ.ಇ. ಸಂಪುಟ ೭, ಸಂಖ್ಯೆ ೧೭೮)

....ವಿಳಂಬಿ ಸಂವಚ್ಛರದ ಚಯಿ[ತ್ರ] ಸು ೧ **ಆ।**.... (ಅದೇ, ೧೮೨)

....ಶೋಭಕೃ[ತ್] ಸಂವಛರದ ಪಾ[ಲ್ಗು]ಣ [ಶು]ದ್ಧ ೫ **ಸೋ**ಲು (ಅದೇ, ೧೯೫)

....ಪ್ರಮಾದಿ ಸಂವತ್ಸರದ ಕಾರ್ತ್ತಿಕ ಶು೧ **ಬು ವಾರ**ದಲೂ ಬರದ ಶಾಸನದ (ಅದೇ, ೨೪೩)

.....ಚಿತ್ರಭಾನು ಸಂವತ್ಸರದ **ಭಾ।** ಶು ೫ ಗು। ಕೆಳಲಿಗೆಯ್ಯ (ಅದೇ, ೨೭೦)

....ಶಕವರುಶ ೧೪೪೭ ವರ್ತಮಾನ ತಾರಣ ಸಂವಚ್ಛರದ ಚಯಿತ್ರ ಶು ೧೦ **ಮ** - ಲೂ (ಅದೇ, ೩೪೩)

....ಶಕವರುಷ ೧೩೨೧ನೆಯ ವರ್ತ್ತಮಾನ [ಪ್ರಮಾದಿ] ಸಂವತ್ಸರದ ಶ್ರಾವಣ ಶು೧ **ಶು** ಶ್ರೀ ಮ(ಂ)ನ್ ಮಹಾರಾಜಾಧಿರಾಜ (ಅದೇ ೩೫೦)

**ಮೇಲಿನ ಉದಾಹರಣೆಗಳಿಂದ: ಆದಿತ್ಯವಾರಕ್ಕೆ - ಆ।; ಸೋಮವಾರಕ್ಕೆ - ಸೋ; ಮಂಗಳವಾರಕ್ಕೆ - ಮ; ಬುಧವಾರಕ್ಕೆ - ಬು ವಾರ; ಗುರುವಾರಕ್ಕೆ-ಗುರು, ಗು; ಶುಕ್ರವಾರಕ್ಕೆ- ಶು;** ಎಂಬ ಸಂಕ್ಷೇಪಗಳು ಬಳಕೆಯಾಗಿರುವುದನ್ನು ಗಮನಿಸಿಬಹುದಾಗಿದೆ.

........೯೮೦ನೆಯ ವಿಳಂಬಿ ಸಂವತ್ಸರದ ಚೈತ್ರದ ಸುದ್ಧ ಪುಣ್ಣಮೆ ೧೯ನೆ ಯುಡೆಯಂ **ವಡ್ಡವಾರ**ದನ್ದು....... (ಸೌ.ಇಂ.ಇ, ಸಂಪುಟ ೭, ಸಂ. ೨೭೮)

...........ಶಕವರುಷ ೧೫೩೬ನೆಯ ಸಂದ ಆನಂದ ಸಂವತ್ಸರದ ಪುಷ್ಯ ಶುದ್ಧ ೧೦ **ಸ್ತಿರವಾರ**ದಲ್ಲು........ (ಅದೇ, ೩೦೧)

**ವಡ್ಡವಾರ** ಎಂಬುದು ಮಂಗಳವಾರವೆಂದು ರನ್ನನ ಗದಾಯುದ್ಧದ ಪದ್ಯವೊಂದರಿಂದ ಮನಗಾಣಬಹುದು. ಇದು ಶನಿವಾರ, ಸೋಮವಾರ, ಗುರುವಾರಗಳಿಗೆ ಪರ್ಯಾಯವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಶನಿವಾರಕ್ಕೆ - **ಸ್ಥಿರವಾರ** ಎಂದು ಶಾಸನಗಳಲ್ಲಿ ಉಕ್ತವಾಗಿರುವುದು ಕಂಡುಬರುತ್ತದೆ. ವಡ್ಡವಾರ, ಸ್ಥಿರವಾರ ಎಂಬುವು ಸಂಕ್ಷೇಪಗಳೆಂಬುದಕ್ಕಿಂತ ಪರ್ಯಾಯ ಸಂಕೇತಗಳಾಗಿವೆ ಎಂಬುದನ್ನು ಗಮನಿಸಬಹುದಾಗಿದೆ.

ಬೃಹಸ್ಪತ್ಯಮಾನದ ಸಂವತ್ಸರಗಳ ಹೆಸರುಗಳಾದ ಪ್ರಭವ, ವಿಭವ, ಮುಂತಾದವುಗಳನ್ನು ಸಂಕ್ಷೇಪಗೊಳಿಸಿರುವುದಕ್ಕೆ ಅಪರೂಪದ ಉದಾಹರಣೆಗಳಿವೆ. ಪ್ರ।। ಸಂವಚ್ಛರದ ಆಶ್ವಿಜ ಶುದ್ಧ ದಶಮಿ........ (ಕವಿವಿಶಾ ಸಂಪುಟ ೨, ಗಂಗಾವತಿ ೭೬) ಹೀಗೆ ಸಂವತ್ಸರ

ಹಾಗೂ ಚೈತ್ರಾದಿ ತಿಂಗಳುಗಳಿಗೂ ಸಂಬಂಧಿಸಿದಂತೆ ಸಂಕ್ಷೇಪಗಳ ಬಳಕೆ ತೀರ ಕ್ವಚಿತ್ತಾಗಿ ಪ್ರಯೋಗವಾಗಿರುವಂತೆ ತೋರುತ್ತದೆ.

ಕನ್ನಡದ ಶಾಸನಗಳಲ್ಲಿ ಶಕವರ್ಷದ ಉಲ್ಲೇಖ ಕ್ರಿ.ಶ. ಆರನೆಯ ಶತಮಾನದಿಂದಲೇ ಕಂಡುಬರುತ್ತದೆ. ಹಾಗೇ ಕಲಿವರ್ಷದ ಗಣನೆಯೂ ಪ್ರಚಲಿತವಿತ್ತು. ಈ ಕಾಲಗಣನೆಯಲ್ಲಿ ಬಳಕೆಯಾಗುವ ಸಂಖ್ಯೆಗಳಿಗೆ ಕೆಲವೊಮ್ಮೆ ಅದರಲ್ಲೂ ವಿಶೇಷವಾಗಿ ತಾಮ್ರಶಾಸನಗಳಲ್ಲಿ ಸಂಕೇತಗಳನ್ನು ಬಳಸಿರುವುದು ಕಂಡು ಬರುತ್ತದೆ. ಅವುಗಳಲ್ಲಿ ೦ ಗೆ ಶೂನ್ಯ, ಗಗನ, ಅಂಬರ, ಅನಂತ, ಪೂರ್ಣ ಬಿಂದು, ಇತ್ಯಾದಿ; ೧ಕ್ಕೆ ಆದಿ ಇಂದು, ಚಂದ್ರ, ಭೂಮಿ, ಆತ್ಮ ಇತ್ಯಾದಿ; ೨ಕ್ಕೆ ಯಮ, ಯಮಳ, ಅಶ್ವಿನಿ, ನೇತ್ರ, ಕುಚ, ಓಷ್ಠ ಇತ್ಯಾದಿ; ೩ಕ್ಕೆ ತ್ರಿಗುಣ, ಗುಣ, ಲೋಕ, ಅಗ್ನಿ ಇತ್ಯಾದಿ, ೪ಕ್ಕೆ ವೇದ, ಜಲಧಿ, ಚತುರ್ಮುಖ, ಇತ್ಯಾದಿ; ೫ಕ್ಕೆ ಬಾಣ, ಪಾತಕಿ, ತಂತ್ರ ಇತ್ಯಾದಿ; ೬ಕ್ಕೆ ರಸ, ಅಂಗ, ಕಾಯ, ದರ್ಶನ ಇತ್ಯಾದಿ; ೭ಕ್ಕೆ ಪರ್ವತ, ಋಷಿ, ವಾರ, ಸಾಗರ ಇತ್ಯಾದಿ; ೮ಕ್ಕೆ ನಾಗ, ಗಜ ದಿಕ್ಪಾಲ, ಸಿದ್ಧಿ, ವಸು ಇತ್ಯಾದಿ; ೯ಕ್ಕೆ ಅಂಕ, ನಂದ, ನಿಧಿ, ನಿಧಾನ ಎಂಬಿತ್ಯಾದಿ ಸಂಕೇತಗಳು ಬಳಕೆಗೊಂಡಿವೆ. ಉದಾ: *ಗುಣವಸ್ವಂಬುರಾಶೀಂದು* ಎಂದು ಬರೆದಿದ್ದರೆ ಗುಣ - ೩, ವಸು - ೮, ಅಂಬುರಾಸಿ - ೪, ಇಂದು - ೧ ಎಂದಾಗುತ್ತದೆ. ಅಂದರೆ ೩೮೪೧ ಇದನ್ನು ತಿರುಗುಮುರುಗಾಗಿ ಬರೆಯಬೇಕು. ಆಗ ೧೪೮೩ ಎಂದಾಗುತ್ತದೆ. ಇದನ್ನು ವಾಮಗತಿ ಲೆಕ್ಕಾಚಾರವೆಂದು ಕರೆಯುತ್ತಾರೆ.

ಅಂಕಿಗಳಿಗೆ ಅಕ್ಷರಗಳನ್ನು ಸಂಕೇತವಾಗಿ ಬಳಸುವ ಪದ್ಧತಿ ಇದೆ. ಅದನ್ನು ಕಟಪಯಾದಿ ಪದ್ಧತಿ ಎನ್ನುತ್ತಾರೆ. ಇದರಲ್ಲಿ **ಕ ಟ ಪ ಯ** ಎಂಬ ಅಕ್ಷರಗಳು ಆದಿಯಾಗಿ ೧ ಎಂಬ ಅಂಕಿಯನ್ನು ಸೂಚಿಸಿದರೆ, ಚ - ೬, ಇ - ೦ ಎಂದು ಮುಂತಾಗಿ ಸಂಕೇತಗೊಂಡು ಕಾಲಗಣನೆ ಮತ್ತು ಸಂಗೀತ ರಾಗಗಳ ಮೇಳ ಸಂಖ್ಯೆ ನಿರ್ದೇಶಿಸಲು ಬಳಕೆಗೊಂಡಿವೆ.

ಬಹಳಷ್ಟು ಶಾಸನಗಳ ಮುಖ್ಯ ಉದ್ದೇಶ ದಾನ. ಶಾಸನಗಳೆಂದರೆ ದಾನಶಾಸನಗಳೆಂದೇ ಸ್ಥೂಲವಾಗಿ ಅರ್ಥೈಸ ಬಹುದೇನೋ? ದಾನಶಾಸನಗಳಲ್ಲಿ ಪ್ರಧಾನವಾಗಿ ಭೂಮಿ, ತೆರಿಗೆ, ಧಾನ್ಯ, ಮುಂತಾವುಗಳನ್ನು ದತ್ತಿಯಾಗಿ ನೀಡುತ್ತಿದ್ದರು. ಆ ಸಂದರ್ಭದಲ್ಲಿ ಸಮಕಾಲೀನವಾಗಿ ಪ್ರಚಲಿತವಿದ್ದ ಅಳತೆ, ಪ್ರಮಾಣ, ಮಾನ ಹಾಗೂ, ನಾಣ್ಯ ವಿಶೇಷಗಳನ್ನು ಶಾಸನಗಳಲ್ಲಿ ದಾಖಲಿಸುತ್ತಿದ್ದರು. ಹಾಗೆ ದಾಖಲಿಸುವಾಗ ಆ ಅಳತೆ, ಮಾನ, ಪ್ರಮಾಣಗಳನ್ನು ಸಂಕ್ಷೇಪಗೊಳಿಸಿ ಇಲ್ಲವೇ ಸಂಕೇತ(ಚಿಹ್ನೆ) ಗೊಳಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದಾಗಿದೆ. ಇವು ಭೂಮಿ ಪ್ರಮಾಣಕ್ಕೆ ಸಂಬಂಧಿಸಿದಂತೆ, ಅಳತೆ, ಮಾನಗಳಿಗೆ ಸಂಬಂಧಿಸಿ ದಂತೆ ಹಾಗೂ ನಾಣ್ಯ ವಿಶೇಷಗಳಿಗೆ ಸಂಬಂಧಿಸಿದಂತೆ ಸಾಮಾನ್ಯವಾಗಿ ಇರುತ್ತವೆ.

ವಿಶೇಷವಾಗಿ ಗಂಗವಾಡಿ ಪ್ರದೇಶದಲ್ಲಿ ಭೂ ವಿಸ್ತೀರ್ಣ ಬೀಜವರಿ ಅಥವಾ ಬಿತ್ತನೆ ಕಾಳಿನ ಪ್ರಮಾಣದ ಹಿನ್ನೆಲೆಯಲ್ಲಿ ಗಣಿಸುವುದು ಕಂಡುಬರುತ್ತದೆ. ಖಂಡಗ, ಕೊಳಗ, ಬಳ್ಳ, ಸೊಲಗೆ, ಮಾನ ಎಂಬುವು ಮೂಲತಃ ಧ್ಯಾನಗಳನ್ನು ಅಳತೆಮಾಡಲು ಇರುವ ಮಾನಗಳಾಗಿವೆ. ಇವು ಸಂಕ್ಷೇಪಗಳಾಗಿ ಶಾಸನಗಳಲ್ಲಿ ಬಳಕೆಯಾಗಿವೆ.

**ಖಂಡುಗ** - ಖ೧ ಬೆದಲು (ಎ. ಕ. ಸಂ. ೪ ಚಾಮರಾಜನಗರ ೮೯)
**ಕೊಳಗ** - ಬೋಳಗದ್ದೆ ಖ೧ ಕೊ ೯ (ಅದೇ ಸಂ.೧, ಕೊಡಗು ೭೫)

ಕೊಳಗ ಎಂಬುದು ಕೇವಲ ಸಂಕ್ಷೇಪ ರೂಪದಲ್ಲಷ್ಟೇ ಅಲ್ಲದೆ ಸಂಕೇತರೂಪದಲ್ಲೂ ಕಾಣಿಸಿಕೊಂಡಿದೆ. ಉದಾ :
S = ಕೊಳಗ, S೧ = ಒಕ್ಕಳ, S೨ = ಇಕ್ಕೊಳ ಇವುಗಳ ಜೊತೆಗೆ ಕಾಲು, ಅರ್ಧ, ಮುಕ್ಕಾಲು ಎಂಬುದನ್ನು I II III ದಂಡಗಳನ್ನು ಅಂಕಿಯ ಪಕ್ಕದಲ್ಲಿ ಹಾಕುವುದರ ಮೂಲಕ ಸೂಚಿಸಲಾಗುತ್ತಿತ್ತು. ಹಾಗೇ ಅರ್ಧ ಎಂಬುದನ್ನು ಸೂಚಿಸಲು ~ ಎಂಬ ಸಂಕೇತ ಬಳಕೆಯಾಗಿದೆ. ~ ~ ಆಕಾರದ ಚಿಹ್ನೆಗಳೂ ಕೊಳಗದ ಸೂಚಕವಾಗಿರುವಂತೆ ತೋರುತ್ತದೆ.

**ಸೊಲಗೆ/ಸಲಗೆ** .......... ಪಡುವ ಹಳ್ಳ ಗದ್ದೆ ಸ ೧ .... (ಅದೇ, ೮೪)
**ಬಳ್ಳ ಮತ್ತು ಮೂಡೆ** - ಮೂಡಮನೆಯ ಅಂಣಬಾಹಿರಿಗೆ ಬಳ ೩೦ ಮೂ ೧೦ಯಿಂದ್ರಾಣಿ ಬಾಧ್ಯಮರಿನಾಯನಿಂದ ಬ೩೦ಲೆಕ್ಕದ ಮೂ ೧೦ (ಸೌ. ಇಂ.ಇ. ಸಂ. ೭ ಸಂ. ೨೮೮)

ಉತ್ತರ ಕರ್ನಾಟಕದ ಶಾಸನಗಳಲ್ಲಿ ಮತ್ತರು ಅಥವಾ ಕಮ್ಮ/ಕಂಭ - ಎಂಬುವ ಪ್ರಮಾಣವನ್ನು ಸೂಚಿಸುವ ಮಾನ ಹೆಚ್ಚಾಗಿ ಬಳಕೆಯಾಗಿದೆ.

**ಮತ್ತರು** - ........ ಮಟ್ಟುಗೆಯ ಭೋಗದ ಭೂಮಿ ಮ ೬೦............. ಮಳವದ ಕೆಯಿ ಮ೮...... (ಕ ಇ ೨ ಸಂ ೪೨, ಸಾಲು ೧೭- ೧೮)

ಹೀಗೇ *ಭಂದಿ, ಸ್ಥಳ, ಕುಟಿ, ವೇಲಿ, ನಿವರ್ತನ* ಎಂಬುವ ಭೂಮಿ ಪ್ರಮಾಣವನ್ನು ಸೂಚಿಸುವ ಪದಗಳಿಗೂ ಸಂಕ್ಷೇಪಗಳು ಶಾಸನಗಳಲ್ಲಿ ಬಳಕೆಯಾಗಿರುವುದುಂಟು.

ತೆರಿಗೆಗಳನ್ನು ಧಾನ್ಯರೂಪದಲ್ಲಿ ಮಾತ್ರವಲ್ಲದೆ ಹಣದ ರೂಪದಲ್ಲಿ ನಿರ್ಧರಿಸಲಾಗುತ್ತಿತ್ತು. ಗದ್ಯಾಣ[೭], ಹಣ/ಪಣ[೮], ಕಟಿಂಜು[೯], ಹೊನ್ನು-ಪೊನ್[೧೦], ವರಾಹ[೧೧], ಹಾಗ[೧೨] ಮುಂತಾದ ನಾಣ್ಯ ವಿಶೇಷಗಳು ಶಾಸನೋಕ್ತವಾಗಿವೆ. ಇವುಗಳಿಗೂ ಸಂಕ್ಷೇಪಗಳು ಬಳಕೆಯಾಗಿದೆ ಉದಾ :

**ಗದ್ಯಾಣ** - ಗುತ್ತಿಗೆ ಭೂಮಿ ೨೨೦೦ಕ್ಕೆ ಸಿದ್ದಾಯ ಗ ೨೦॥ (ಎ. ಕ. ಸಂ. ೪)
**ವರಹ** - ಕಂದಾಯ ಗ ೧೨ ಹನೆರಡು ವರಹವಂನು (ಎ. ಕ. ೧, ಕೊಡಗು ೬೬)
**ಹಾಗ** - ಹಾಗ ೧೨೨ ಪ ೨ ನು....... (ಎ. ಕ. ಸಂ. ೪. ಚಾಮರಾಜನಗರ ೬೫)
**ಪಣ** - ಅದೇ

ಇವುಗಳಿಗೆ ಮೇಲಿನಂತೆ ಸಂಕ್ಷೇಪಗಳಲ್ಲದೆ ಚಿಹ್ನೆ ಅಥವಾ ಸಂಕೇತಗಳು ಕ್ವಚಿತ್ತಾಗಿ ಶಾಸನಗಳಲ್ಲಿ ಬಳಕೆಯಾಗಿದೆ.

ವರಹ = ⌐

೧ ವರಹ ೧⌐೦

೧೮⌐ = ೧೮ ವರಹ

ಅಡ್ಡ ॥

ಹಾಗ = ಅಥವಾ।

ಬೇಳೆ ‿‿

ವೀಸ ‿

ಅರೆವೀಸ ೦॥

೧/೪ ಎಂಬುದಕ್ಕೆ । ಗೀಟು

೧/೨ ॥

೩/೪ |||

ಇಪ್ಪತ್ತನೇ ಶತಮಾನದ ಆದಿಯಲ್ಲಿ ಪ್ರಕಟವಾದ ವೈದ್ಯ ಗ್ರಂಥವೊಂದರಲ್ಲಿ ಮಾನಗಳಿಗೆ ಸಂಬಂಧಿಸಿದ ಕೋಷ್ಟಕವೊಂದು ಇಂತಿದೆ :

ವೀಸ = ·—

ಬೇಳೆ = ·═

ಮುರ್ವೀಸ = ·≡

ಹಾಗ = ·|·

ಅಡ್ಡ = ·||·

ಮುಪ್ಪಾಗ = ·|||·

ಸಂಕೇತ ಮತ್ತು ಸಂಕ್ಷೇಪಗಳಿಗೆ ಸಂಬಂಧಿಸಿದ ಈ ಸ್ಥೂಲ ಅವಲೋಕನವು ಶಾಸನ ಬರಹಗಳಲ್ಲಿ ಉಕ್ತವಾಗಿರುವ ಹಲವು ಸಂಕೇತ ಮತ್ತು ಸಂಕ್ಷೇಪಗಳಿಗೆ ಸಂಬಂಧಿಸಿದ ಕೇವಲ ಕೆಲವೇ ವಿವರಗಳನ್ನು ಮಾತ್ರ ಇಲ್ಲಿ ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಇಲ್ಲಿನ ಒಂದೊಂದು ಅಂಶವನ್ನು ಕೆದಕುತ್ತಾ ಕೆಣಕುತ್ತಾ ಹೋದರೆ ಅನೇಕ ಸಮಸ್ಯೆಗಳು ಜೊತೆಗೆ, ಹಲವಾರು ಪರಿಹಾರಗಳು ಲಭ್ಯವಾಗುತ್ತಾ ಹೋಗುತ್ತದೆ. ಕರ್ನಾಟಕದ ಶಾಸನಗಳಲ್ಲಿ ಉಕ್ತವಾಗಿರುವ ಸಂಕೇತ ಸಂಕ್ಷೇಪಗಳನ್ನು ಒಂದು ವ್ಯಾಪಕವಾದ ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಬೇಕಾದ ಅಗತ್ಯತೆಯನ್ನು ನಮ್ಮ ಈ ಸ್ಥೂಲ ಅವಲೋಕನ ತೋರಿಸಿಕೊಟ್ಟಿದೆಯೆಂದು ನಾವು ಭಾವಿಸಿತ್ತೇವೆ. ಈ ನಿಟ್ಟಿನಲ್ಲಿ ಸೂಕ್ಷ್ಮವೂ ವ್ಯಾಪಕವು ಆದ ಅಧ್ಯಯನ ನಡೆದು ಶಾಸನಗಳಿಗೆ ಸಂಬಂಧಿಸಿದ ಇನ್ನೂ ಹೊಸ ಹೊಸ ವಿವರಗಳು ಬೆಳಕಿಗೆ ಬರಲೆಂದು ನಾವು ಬಯಸುತ್ತೇವೆ.



(ಈ ಲೇಖನದಲ್ಲಿನ ಕೆಲವು ಸಂಕೇತಗಳ ಬಗೆಗೆ ಹೆಚ್ಚಿನ ಮಾಹಿತಿ ನೀಡಿದ ಪ್ರೊ॥ ಎಂ. ಜಿ. ನಾಗರಾಜ್ ಅವರಿಗೆ ನಾವು ಕೃತಜ್ಞರಾಗಿದ್ದೇವೆ -ಲೇಖಕರು)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಮಧ್ಯಕಾಲೀನ ಶಾಸನಗಳಲ್ಲಿ ; ಸಾಮಾನ್ಯವಾಗಿ ದಾನಶಾಸನಗಳ ಮೇಲಿನ ಭಾಗದಲ್ಲಿ ; ಶಿವಲಿಂಗ, ನಂದಿ (ಶಿವನ ವೃಷಭ), ಹಸು - ಕರು, ಸೂರ್ಯ, ಚಂದ್ರ, ಖಡ್ಗ ಹಾಗೂ ವಿಶಿಷ್ಟ ಧರ್ಮಕ್ಕೆ ಸಂಬಂಧಿಸಿದುದನ್ನು ಸೂಚಿಸುವ ಸಂಕೇತವಾಗಿ ಕೆಲವೊಮ್ಮೆ ಜಿನಬಿಂಬ, ಮುಕ್ಕೊಡೆ, ತ್ರಿಪುಂಡ್ರ, ಶಂಖ, ಚಕ್ರಗಳಲ್ಲದೆ; ದುರ್ಗಾ, ನಾಟ್ಯಶಿವ, ವಿಷ್ಣು, ಗಜಲಕ್ಷ್ಮಿ ಇತ್ಯಾದಿ ಉಬ್ಬುಶಿಲ್ಪ ಅಥವಾ ರೇಖಾ ಚಿತ್ರಗಳನ್ನು ಬಿಡಿಸಿರುವುದು ಕಂಡುಬರುತ್ತದೆ. ಸ್ಮಾರಕ ಶಿಲೆಗಳಾದ ವೀರಗಲ್ಲು, ಮಾಸ್ತಿ, ವೀರಮಾಸ್ತಿ, ಹಾಗೂ ನಿಸದಿಶಾಸನಗಳಲ್ಲೂ ಸಂಕೇತಗಳು ವ್ಯಾಪಕವಾಗಿಯೇ ಬಳಕೆಯಾಗಿರುವುದು ಗಮನ ಸೆಳೆಯಯುತ್ತದೆ.

೨. *Corpus Inscriptionum Indicarum*, Vol. I, plate facing p. 116.

೩. *Archaeological Survey of Western India*, Vol. IV, plate 49, Nos. 8, 10, 15 etc.,

೪. *Select Inscriptions*, D. C. Sircar., (ed.), plate facing, p. 208 (ಕಾರವೇಲನ ಹಾತಿಗುಂಪ ಶಾಸನ).

೫. ಅದೇ, plate facing, p. 209.

೬. **ಎಪಿಗ್ರಾಫಿಯ ಇಂಡಿಕ**, (ಎ.ಇಂ.) ಸಂ. ೨೯, ಪು. ೧೯೨ಕ್ಕೆ ಎದುರು ಚಿತ್ರ.

೭. **ಎಪಿಗ್ರಾಫಿಯ ಕರ್ನಾಟಕ**, (ಎ.ಕ.), ಸಂಪುಟ ೯, ಕಾನಕಾನಹಳ್ಳಿ ೭೫, (ರೈಸ್ ಆವೃತ್ತಿ).

೮. ಅದೇ, ೬, ಚಿಕ್ಕಮಗಳೂರು, (ರೈಸ್ ಆವೃತ್ತಿ).

೯. ಅದೇ, ೧೪, ತಿ. ನರಸೀಪುರ ೩೪ (ಪುರವಣಿ ಸಂಪುಟ).

೧೦. ಅದೇ, ೧೮೩.

೧೧. *MAR*, 1940, No. 24, p. 144, ಸಾಲು ೧೬-೧೭ ಪಠ್ಯ.

೧೨. ಎ. ಕ. ೬, ಚಿಕ್ಕಮಗಳೂರು ೧೪೧. (ರೈಸ್ ಆವೃತ್ತಿ).

ವಿದ್ಯಾ. ಎಸ್. ಹಡಗಲಿ*

# ಹುಬ್ಬಳ್ಳಿಯ ಗೋಕುಲದಲ್ಲಿ ಕಂಡುಬಂದ ಶಾಸನವನ್ನುಳ್ಳ ವೀರಗಲ್ಲು



ಹುಬ್ಬಳ್ಳಿ ಪ್ರದೇಶದಲ್ಲಿ ಈ ಪೂರ್ವದಲ್ಲಿ ಸುಮಾರು ೨೦ ಶಿಲಾಶಾಸನಗಳು ಬೆಳಕನ್ನು ಕಂಡಿವೆ. ಶಾಸನವನ್ನುಳ್ಳ ವೀರಗಲ್ಲೊಂದು ಮಹತ್ವದ್ದೆನಿಸಿದ್ದು, ಆ ವೀರಗಲ್ಲು ಹುಬ್ಬಳ್ಳಿ ನಗರದ ಗೋಕುಲದ ಯರೆಕೊಪ್ಪ ಸಾಹುಕಾರರು ನಿರ್ಮಿಸಿದ ಶಿವಾನಂದ ಕಲ್ಯಾಣ ಮಂಟಪದಲ್ಲಿರುವ ಗುಡಿಯಲ್ಲಿದೆ. ಅದನ್ನು ಸ್ಥಳೀಕರು ದುರ್ಗಾದೇವಿ ಎಂದು ಕರೆಯುತ್ತಿದ್ದು, ಅದು ಕಲ್ಯಾಣ ಮಂಟಪದ ಎಡಬದಿಯಲ್ಲಿದೆ.

ಈ ವೀರಗಲ್ಲು ಕಪ್ಪು ಶಿಲೆಯಿಂದ ರಚಿತವಾಗಿದ್ದು ಸುಮಾರು ೩೫ ಸೆಂ.ಮೀ. ಅಗಲ ೩೫ ಸೆಂ.ಮೀ. ಉದ್ದವಿದೆ. ಅದರ ಮೇಲಿನ ಅರ್ಧಭಾಗದಲ್ಲಿ ವೀರನ ಚಿತ್ರವಿದೆ. ಕೆಳಗಿನ ಅರ್ಧಭಾಗದಲ್ಲಿ ನಾಲ್ಕು ಸಾಲುಳ್ಳ ಶಾಸನವಿದೆ. ಅದು ಕನ್ನಡ ಭಾಷೆ ಮತ್ತು ಲಿಪಿಯಲ್ಲಿದೆ. ಈ ಶಾಸನದ ಕೆಲವು ಅಕ್ಷರಗಳು ತ್ರುಟಿತವಾಗಿವೆ. ಮತ್ತು ಅದರ ಮೂಲೆಭಾಗ ಒಡೆದು ಹೋಗಿದೆ. ಈ ಶಾಸನದ ಪಠ್ಯ ಹೀಗಿದೆ.

೧ *.. ಷ್ಯ .. ಗ್ಗ ಉಣ್ಕಲಿನ್ದ*
೨ *.. ನ್ಕಳ್ಳರಾನ್ಲಾದೆ ಅವರನಾಡನ್ನಿ*
೩ *... ತ್ತೊಡೆ ಆತನೊಳ್ಳನ್ನುವ ಸೂಳೆ [ಅ]*
೪ *... ನಿಱಿಸಿದೊ[ಳ್]*

ಈ ಶಾಸನದಲ್ಲಿ ಉಣ್ಕಲ್ಲಿನ ವೀರನೊಬ್ಬ ಕಳ್ಳರೊಂದಿಗೆ ಹೋರಾಡುತ್ತಾ ಮರಣವನ್ನಪ್ಪಿದ ನಿಮಿತ್ತ ಅವನ ಸ್ಮರಣಾರ್ಥವಾಗಿ ಅವನ ಸೂಳೆಯೊಬ್ಬಳು ಈ ವೀರಗಲ್ಲು ನೆಡಿಸಿದಳೆಂದು ಹೇಳಲಾಗಿದೆ, ಮತ್ತು ಉಣ್ಕಲ್ಲಿನ ಉಲ್ಲೇಖವಿದೆ. ಅದರ ಲಿಪಿ, ಭಾಷೆಯ ಶೈಲಿಯಿಂದ ಅದರ ಕಾಲ ಸುಮಾರು ಕ್ರಿ. ಶ. ೯ನೆಯ ಶತಮಾನವೆಂದು ತರ್ಕಿಸಬಹುದು. ಈ ಸ್ಥೂಲ ವಿಷಯವು ಎರಡು-ಮೂರು ದೃಷ್ಟಿಯಿಂದ ಮಹತ್ವದ್ದೆನಿಸಿದೆ.

೧. *ಸೂಳೆಯೊಬ್ಬಳು ವೀರಗಲ್ಲನ್ನು ನಿಲ್ಲಿಸಿರುವುದು.*
೨. *ಉಣ್ಕಲ್ಲಿನ ಗ್ರಾಮದ ಹೆಸರು ಉಲ್ಲೇಖವಾಗಿರುವುದು.*
೩. *ಶಿಲ್ಪದಲ್ಲಿ ವೀರನ ಚಿತ್ರ ದೃಶ್ಯ.*

***ಸೂಳೆಯೊಬ್ಬಳು ವೀರಗಲ್ಲನ್ನು ನಿಲ್ಲಿಸಿರುವುದು*** : ಶಾಸನ ಸಾಹಿತ್ಯದಿಂದ ಈ ಕಾಲಪೂರ್ವದಲ್ಲಿ ಸೂಳೆಯರೂ ದಾನ, ದತ್ತಿ ನೀಡಿ ಖ್ಯಾತಿ ಪಡೆದ ಉದಾಹರಣೆಗಳಿವೆ. ಅದರಲ್ಲಿ ಬಾದಾಮಿ ಚಾಲುಕ್ಯರ ಕಾಲದ ವಿಜಯಾದಿತ್ಯನ ಮಹಾಕೂಟ ಶಾಸನದಿಂದ ವೀಣಾಪೋಟಿ ಎಂಬ ವೇಶ್ಯೆಯೊಬ್ಬಳು ಮಹಾಕೂಟ ದೇವಾಲಯಕ್ಕೆ ಛತ್ರಿ, ಚಾಮರ ಹಾಗೂ ದತ್ತಿ ನೀಡಿದ ವಿಷಯವಿದೆ. ಆದರೆ ಸೂಳೆಯರಿಂದ ವೀರಗಲ್ಲು ನಿಲ್ಲಿಸಿದ್ದು ಕಾಣುವುದಿಲ್ಲ. ಪ್ರಾಚೀನ ಕಾಲದಲ್ಲಿ ಸಾಮಾಜಿಕ ಪರಿಸರದಲ್ಲಿ ಸ್ತ್ರೀಯರಿಗೆ ಮಹತ್ವದ ಸ್ಥಾನಮಾನವಿದ್ದಂತೆ ವೇಶ್ಯೆಯರಿಗೂ ಅವರದೇ ಆದ ಸ್ಥಾನಮಾನವಿದ್ದಿತು.

***ಉಣ್ಕಲ್ಲಿನ ಗ್ರಾಮದ ಹೆಸರು ಉಲ್ಲೇಖವಾಗಿರುವುದು*** : ಹುಬ್ಬಳ್ಳಿ ಪ್ರದೇಶದಲ್ಲಿ ಇಲ್ಲಿಯವರೆಗೆ ಬೆಳಕಿಗೆ ಬಂದ ಶಿಲಾಶಾಸನಗಳು ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಕಳಚೂರಿ, ಹೊಯ್ಸಳ, ಹಾನಗಲ್ ಕದಂಬರು, ಗೋವೆಯ ಕದಂಬರು, ಸೇವುಣ ಮತ್ತು ವಿಜಯನಗರ ಕಾಲದ್ದಾಗಿವೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಉಣ್ಕಲ್ಲಿನ ಉಲ್ಲೇಖ ಶಾಸನಗಳಿಂದ ತಿಳಿದುಬಂದಿದೆ. ಈ ಸ್ಥಳ ಆ ಕಾಲದಲ್ಲಿ ಹೆಚ್ಚು ಖ್ಯಾತಿ ಪಡೆದಿತ್ತು. ಆದರೆ ಈ ಪ್ರಸ್ತುತ ಶಾಸನದಿಂದ ಈ ಗ್ರಾಮದ ಪ್ರಾಚೀನತೆಯು ಸುಮಾರು ಕ್ರಿ. ಶ. ೯ನೆಯ ಶತಮಾನದಷ್ಟು ಹಿಂದಕ್ಕೆ ಹೋಗುವುದು. ಇದರಿಂದ ಈ ಕಾಲದಲ್ಲಾಗಲೇ ಈ ಗ್ರಾಮವು ಅಸ್ತಿತ್ವದಲ್ಲಿತ್ತೆಂದು ತಿಳಿದುಬರುವುದು.

ಉಣಕಲ್ ಕ್ರಾಸಿನಲ್ಲಿ ಈಗ ಹೊಸದಾಗಿ ಕಟ್ಟಿರುವ ದೇವಾಲಯದಲ್ಲಿ ಒಂದು ಶಿವಲಿಂಗವಿದೆ. ೧೯೭೬ರಲ್ಲಿ ಪತ್ತೆ

* ಸಂಶೋಧನ ವಿದ್ಯಾರ್ಥಿನಿ, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ಕರ್ನಾಟಕ ವಿ.ವಿ., ಧಾರವಾಡ - ೫೮೦ ೦೦೩.

ಹಚ್ಚಿದ ಡಾ॥ ಶ್ರೀನಿವಾಸ ಪಾಡಿಗಾರ ಅವರು, ಅದನ್ನು ಬಾದಾಮಿ ಚಾಲುಕ್ಯರ ಶೈಲಿಯಲ್ಲಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಹೀಗಾಗಿ ಉಣ್ಕಲ್ಲಿನ ಸಾಂಸ್ಕೃತಿಕ ಚರಿತ್ರೆ ಇನ್ನೂ ಹಿಂದಕ್ಕೆ ಹೋಗುತ್ತದೆ.

*ವೀರನ ಚಿತ್ರ ದೃಶ್ಯ* : ಈ ವೀರಗಲ್ಲಿನ ಮೇಲಿನ ಅರ್ಧ ಭಾಗದಲ್ಲಿರುವ ಈ ಶಿಲ್ಪವು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಅರ್ಧ ವೃತ್ತಾಕಾರದ ಗುರಾಣಿಯನ್ನು ಮುಂದಕ್ಕೆ ಚಾಚಿ ಹಿಡಿದಿದ್ದಾನೆ. ಅದಕ್ಕೆ ಅನೇಕ ಬಾಣಗಳು ತಾಗಿದ್ದು, ಅವು ಸಮಾನಾಂತರದಲ್ಲಿರುವುದನ್ನು ಚಿತ್ರಿಸಲಾಗಿದೆ. ಕೆಲವು ಬಾಣಗಳು ಅವನ ಎದೆಯಲ್ಲಿ ನೆಟ್ಟಿವೆ. ಈ ಕಾಲದ ಈ ಮಾದರಿಯ ವೀರಗಲ್ಲನ್ನು ಈ ಹಿಂದೆ ಉ. ಕನ್ನಡ ಜಿಲ್ಲೆಯ ಭಟ್ಕಳ ತಾಲೂಕಿನ ಹಾಡುವಳ್ಳಿಯಲ್ಲಿ ಗುರ್ತಿಸಲಾಗಿದೆ. ಈ ವಿಶಿಷ್ಟ ಮಾದರಿಯ ಚಿತ್ರವನ್ನು ನೋಡಿ ಸ್ಥಳೀಕರು ಇದನ್ನು ದುರ್ಗಾದೇವತೆಯೆಂದು ಆರಾಧಿಸುತ್ತಿರುವರು.



(ಈ ಶಾಸನದ ಪ್ರತಿ ತೆಗೆಯುವಲ್ಲಿ ಸಹಕರಿಸಿದ ಸ್ನೇಹಿತರಾದ ಶಿರೇಶಿ ಮತ್ತು ಕಡಗಂಚಿಯವರಿಗೂ ಮತ್ತು ಓದಲು ಸಹಾಯ ನೀಡಿದ ಗುರುಗಳಾದ ಡಾ॥ ರು. ಮ. ಷಡಕ್ಷರಯ್ಯ ಮತ್ತು ಡಾ॥ ಶ್ರೀನಿವಾಸ ಪಾಡಿಗಾರ ಅವರಿಗೂ ಧನ್ಯವಾದಗಳು.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. **ಧಾರವಾಡ ಜಿಲ್ಲೆ ಶಾಸನ ಸೂಚಿ.**, ೧೯೭೫, ಸಂಪಾದಕರು - ಡಾ॥ ಎಂ. ಎಂ. ಕಲಬುರ್ಗಿ, ಕರ್ನಾಟಕ ವಿ. ವಿ., ಧಾರವಾಡ.
*೨. **ಧಾರವಾಡ ಜಿಲ್ಲಾ ಗ್ಯಾಸೆಟಿಯರ್.**, ೧೯೯೫, ಮುಖ್ಯ ಸಂಪಾದಕರು - ಡಾ॥ ಸೂರ್ಯನಾಥ ಯು. ಕಾಮತ್, ಬೆಂಗಳೂರು.
*೩. **ಕರ್ನಾಟಕದ ವೀರಗಲ್ಲುಗಳು.**, ೧೯೮೨, ಡಾ॥ ಆರ್. ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

ಡಾ. ಎಂ. ಜಿ. ಮಂಜುನಾಥ*

# ದೊಡ್ಡೇರಿಯ ಅಪ್ರಕಟಿತ ವೀರಗಲ್ಲು ಶಾಸನ

ಬೆಂಗಳೂರು ದಕ್ಷಿಣ ತಾಲೂಕು ತಾವರೆಕೆರೆ ಹೋಬಳಿಯ ದೊಡ್ಡೇರಿ ಗ್ರಾಮದಲ್ಲಿ ದೊರೆತ ಅಪ್ರಕಟಿತ ವೀರಗಲ್ಲು ಶಾಸನದ ಬಗ್ಗೆ ಪ್ರಸ್ತುತ ಸಂಪ್ರಬಂಧ ರಚಿಸಲಾಗಿದೆ.

ಎರಡೂವರೆ ಅಡಿ ಅಗಲ ಹಾಗೂ ನಾಲ್ಕೂವರೆ ಅಡಿ ಎತ್ತರದ ಕಣಶಿಲೆಯ ಫಲಕದ ಮೇಲೆ ಈ ಶಾಸನವನ್ನು ಕೊರೆಯಲಾಗಿದೆ. ಅದರ ಪಕ್ಕದಲ್ಲಿಯೇ ಆ ಶಾಸನಕ್ಕೆ ಸಂಬಂಧಿಸಿದಂತೆ ಇರುವ ವೀರಗಲ್ಲನ್ನು ನಾಲ್ಕು ಅಡಿ ಅಗಲ ಹಾಗೂ ಐದು ಅಡಿ ಎತ್ತರವಾಗಿರುವ ಕಣಶಿಲೆಯ ಫಲಕದ ಮೇಲೆ ಕೊರೆಯಲಾಗಿದೆ.

ಶಾಸನದಲ್ಲಿ ಒಟ್ಟು ಇಪ್ಪತ್ತೊಂದು ಸಾಲುಗಳ ಬರಹವಿದೆ. ಹೊಯ್ಸಳ ಚಕ್ರವರ್ತಿ ಮೂರನೆಯ ವೀರಬಲ್ಲಾಳನು ರಾಜ್ಯಭಾರ ಮಾಡುತ್ತಿದ್ದಾಗ ಈ ಶಾಸನವನ್ನು ಹಾಕಿಸಲಾಗಿದೆ. ವೀರಬಲ್ಲಾಳನ ಅಧೀನದಲ್ಲಿ ಕುಕ್ಕಲನಾಡನ್ನು ನರಲೋಕಗಂಡನೆಂಬ ಬಿರುದಾಂಕಿತನಾಗಿದ್ದ ಮಯಿಲೆಯ ನಾಯಕನು ಆಳುತ್ತಿದ್ದನು. ಆತ ಮಹಾಸಾಮಂತಾಧಿಪತಿಯಾಗಿದ್ದನೆಂದು ಪ್ರಸ್ತುತ ಶಾಸನ ದಾಖಲಿಸಿದೆ. ಮೈಲೆಯನಾಯ್ಕನ ತಮ್ಮ ಚೆನ್ನೆಯನಾಯ್ಕನು ನಾಡಪ್ರಮುಖನಾಗಿ ಕುಕ್ಕಲನಾಡನ್ನು ಆಳುತ್ತಿದ್ದನು. ಆ ಸಂದರ್ಭದಲ್ಲಿ ದೊಡ್ಡೇರಿಯ ಬೊಮ್ಮೋಜನ ಮಕ್ಕಳ ಮೇಲೆ ದಾರಿಯಲ್ಲಿ ಕಳ್ಳರು ಆಕ್ರಮಣ ಮಾಡಿದಾಗ ಬೊಮ್ಮೋಜನ ಮಗ ಗೋವಿಂದನು ಕಳ್ಳರೊಡನೆ ಹೋರಾಡಿ ಮಡಿದಾಗ ಅವನ ಸ್ಮಾರಕವಾಗಿ ವೀರಗಲ್ಲನ್ನು ಬೊಮ್ಮೋಜನು ಮಾಡಿಸಿದನೆಂದು ಈ ಶಾಸನ ದಾಖಲಿಸಿದೆ. ಈ ಶಾಸನವನ್ನು ಬೊಮ್ಮೋಜನ ಸೇನಬೋವನಾದ ಕಿಟ್ಟಪ್ಪನು ತನ್ನ ಸ್ವಹಸ್ತದಿಂದ ಬರೆದಿದ್ದಾನೆ. ಶಾಸನದ ಕಡೆಯಲ್ಲಿ ವೊಪ್ಪವಾಗಿ ಶ್ರೀ ಯಲ್ಲಾಳನಾಥ ಎಂಬ ಬರಹವಿದೆ.

ಶಾಸನವು ಶಕವರುಷ ೧೨೫೬ನೆಯ ಭಾವ ಸಂವತ್ಸರದ ಕಾರ್ತಿಕ ಶುದ್ಧ ೧ ಗುರುವಾರದಂದು ರಚಿತವಾಗಿದೆ. ಇದು ಕ್ರಿ. ಶ. ೧೩೩೪ನೆಯ ಇಸವಿ ಅಕ್ಟೋಬರ್ ೨೮ರ ಗುರುವಾರಕ್ಕೆ ಸರಿಹೊಂದುತ್ತದೆ.

ಈ ಶಾಸನ ಫಲಕದ ಪಕ್ಕದಲ್ಲಿಯೇ ಇರುವ ಮತ್ತೊಂದು ಶಿಲಾಫಲಕದಲ್ಲಿ ಪ್ರಸ್ತುತ ಶಾಸನೋಕ್ತ ವಿವರಗಳಿಗೆ ಸಂಬಂಧಿಸಿದ ವೀರಗಲ್ಲನ್ನು ಕಂಡರಿಸಲಾಗಿದೆ. ಈ ವೀರಗಲ್ಲಿನಲ್ಲಿ ಮೂರು ಹಂತಗಳ ಶಿಲ್ಪವಿದೆ. ಕೆಳಗಿನಿಂದ ಒಂದನೆಯ ಹಂತದಲ್ಲಿ ವೀರಗಲ್ಲಿನ ಬಲಭಾಗದಲ್ಲಿ ವೀರನೊಬ್ಬನು ತನ್ನ ಎಡಗಾಲನ್ನು ಮುಂದಕ್ಕಿಟ್ಟು ಮುಂದಕ್ಕೆ ನುಗ್ಗುತ್ತಿರುವ ಭಂಗಿಯಲ್ಲಿ ನಿಂತು ತನ್ನ ಬಲಗೈಯಲ್ಲಿರುವ ಖಡ್ಗದಿಂದ ಎದುರಿನಲ್ಲಿರುವ ವ್ಯಕ್ತಿಯನ್ನು ಹೊಡೆಯುತ್ತಿರುವಂತಿದೆ. ಆತನ ಎಡಗೈಯಲ್ಲಿ ಉದ್ದನೆಯ ಕೋಲು ಇದೆ. ಸೊಂಟದಲ್ಲಿ ಕಠಾರಿಯಿದೆ. ಆತನು ಧರಿಸಿರುವ ವಸ್ತ್ರಗಳು ಸಹ ಸ್ಪಷ್ಟವಾಗಿ ಕಾಣುವಂತೆ ಕೆತ್ತಲ್ಪಟ್ಟಿದೆ. ಆತನ ಎದುರಿನಲ್ಲಿ ವ್ಯಕ್ತಿಯೊಬ್ಬನು ತನ್ನ ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ಬಾಣವನ್ನು ಪ್ರಯೋಗಿಸುತ್ತಿರುವ ಶಿಲ್ಪವಿದೆ. ಅವರಿಬ್ಬರ ಪಾದಗಳ ಬಳಿ ವ್ಯಕ್ತಿಯೊಬ್ಬನ ಶವ ಬಿದ್ದಿದೆ. ಎರಡನೆಯ ಹಂತದಲ್ಲಿ ಅಪ್ಸರ ಸ್ತ್ರೀಯರಿಬ್ಬರು ವೀರನನ್ನು (ಗೋವಿಂದ) ಕೈಲಾಸಕ್ಕೆ ಒಯ್ಯುತ್ತಿದ್ದಾರೆ. ಅವರ ಇಕ್ಕೆಲಗಳಲ್ಲಿ ಮತ್ತಿಬ್ಬರು ಅಪ್ಸರೆಯರು ವಾದ್ಯಗಳನ್ನು ನುಡಿಸುತ್ತಿದ್ದಾರೆ. ಮೂರನೆಯ ಹಂತದಲ್ಲಿ ಶಿವಲಿಂಗದ ಬಲಭಾಗದಲ್ಲಿ ಕೈಗಳನ್ನು ಮುಗಿದು ನಿಂತಿರುವ ಗೋವಿಂದನ ಶಿಲ್ಪ, ಎಡಭಾಗದಲ್ಲಿ ನಂದಿಯ ಶಿಲ್ಪಗಳಿವೆ. ಶಿಲಾಫಲಕದ ಎರಡೂ ಬದಿಗಳಲ್ಲಿ ಸೂರ್ಯ ಚಂದ್ರರ ಶಿಲ್ಪಗಳಿವೆ.

***ಐತಿಹಾಸಿಕ ಅಂಶಗಳು***

ಪ್ರಸ್ತುತ ಶಾಸನೋಕ್ತ ಕುಕ್ಕಲನಾಡು ಎಂಬ ಆಡಳಿತ ಘಟಕವು* ಕ್ರಿ. ಶ. ೭೫೦ರ ಸುಮಾರಿನಲ್ಲಿಯೇ ಶಾಸನಗಳಲ್ಲಿ ಕಂಡು ಬರುತ್ತದೆ. ಬೆಂಗಳೂರಿನ ದಾಸರಹಳ್ಳಿಯಲ್ಲಿರುವ ಗುಂಗದೊರೆ ಶ್ರೀಪುರುಷನ ಒಂದು ಶಾಸನದಲ್ಲಿ 'ಕರಿಕನಾಡಿಗೆ ಸೇರಿದ ಕುಕ್ಕರ ಪಾಟಿಕ್ಕಾಱ ನಾಡು' ಎಂಬ ಉಲ್ಲೇಖ ಸಿಗುತ್ತದೆ.*[೧]

ಕರ್ನಾಟಕ ರಾಜ್ಯ ಗ್ಯಾಸೆಟಿಯರ್‌ನ ಬೆಂಗಳೂರು ಜಿಲ್ಲಾ ಸಂಪುಟದಲ್ಲಿ ಕುಕ್ಕಲನಾಡಿನ ದೊರೆಗಳ ಬಗ್ಗೆ ವಿವರಗಳಿವೆ. ಅಲ್ಲಿ ಈ ವಂಶದ ಆಳ್ವಿಕೆಯ ಬಗ್ಗೆ ಬರೆಯುತ್ತಾ, 'ಈ ಕುಕ್ಕಲನಾಡಿನ ಅರಸರು ಒಂದು ಶತಮಾನಕ್ಕೂ ಹೆಚ್ಚು ಕಾಲ ಆಳ್ವಿಕೆ ನಡೆಸಲಿಲ್ಲ' ಎಂದು ಅಭಿಪ್ರಾಯಪಟ್ಟಿದ್ದಾರೆ, ಹಾಗೂ 'ಕುಕ್ಕಲನಾಡಿನ ದೊರೆಗಳು ಕ್ರಿ. ಶ. ೧೩೩೦ರಲ್ಲಿ ಮೊಟ್ಟ ಮೊದಲು ಕಾಣಿಸಿಕೊಳ್ಳುತ್ತಾರೆ' ಎಂದು ಅಭಿಪ್ರಾಯಪಟ್ಟಿದ್ದಾರೆ.*[೨]

ಆದರೆ ಈ ಎರಡೂ ಹೇಳಿಕೆಗಳು ತಪ್ಪಾಗಿವೆ. ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲೂಕಿಗೆ ಸೇರಿದ ಮಂತಾಳು ಶಾಸನದಲ್ಲಿ ಕ್ರಿ. ಶ. ೧೩೧೧ರಲ್ಲಿಯೇ ಮಯಿಲೆ ನಾಯಕನು ಮಹಾ ಸಾಮಂತಾಧಿಪತಿಯಾಗಿದ್ದುದು ದಾಖಲಾಗಿದೆ.*[೩]

* ಕನ್ನಡ ಉಪನ್ಯಾಸಕ, ಬೆಂಗಳೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ, ಕೋಲಾರ.



ಮಯಿಲೆಯನಾಯಕನ ತಂದೆಯ ಹೆಸರು ಕೋಟೆಯ ನಾಯಕ. ಈತನೂ ಸಹ ಸಾಮಂತ ದೊರೆಯಾಗಿದ್ದನು. ಇವನನ್ನು ಸಹ ಮಹಾಸಾಮಂತಾಧಿಪತಿ ಎಂದು ಶಾಸನಗಳಲ್ಲಿ ಕರೆಯ ಲಾಗಿದೆ. ಇವನಿಗೂ ನರಲೋಕಗಂಡ ಎಂಬ ಬಿರುದಿತ್ತೆಂದು ಬೆಂಗಳೂರು ದಕ್ಷಿಣ ತಾಲೂಕಿನ ರಾಮಸಮುದ್ರದಲ್ಲಿರುವ ಒಂದು ಶಾಸನ ದಾಖಲಿಸಿದೆ.*[೪] ಕೆಂಗೇರಿಯಲ್ಲಿರುವ ಒಂದು ಅಪ್ರಕಟಿತ ಶಾಸನವು ನರಲೋಕಗಂಡ ಬಿರುದಾಂಕಿತನಾದ ಮಯಿಲೆ ನಾಯಕನ ತಂದೆ ಕೋಟೆಯನಾಯಕನನ್ನು 'ಮೂರು ಲೋಕದ ಗಂಡ' ಎಂಬ ಬಿರುದನ್ನು ಹೊಂದಿದ್ದುದನ್ನು ದಾಖಲಿಸಿದೆ.*[೫]

ಈ ಎಲ್ಲ ಆಧಾರಗಳಿಂದ ಕುಕ್ಕಲನಾಡಿನ ದೊರೆಗಳು ಕ್ರಿ. ಶ. ೧೩೦೦ರ ವೇಳೆಗಾಗಲೇ ಆಳ್ವಿಕೆ ಪ್ರಾರಂಭಿಸಿದ್ದಿರ ಬಹುದೆಂದು ಹೇಳಬಹುದು. ಈ ವಂಶದ ಆಳ್ವಿಕೆಯ ಕಡೆಯ ಶಾಸನವು ಕ್ರಿ. ಶ. ೧೪೩೦ರ ಕಾಲದ್ದಾಗಿದ್ದು ಪ್ರೌಢದೇವರಾಯನ ಆಳ್ವಿಕೆಯ ಕಾಲದಲ್ಲಿ ಬುಕ್ಕನಾಯಕ ಎಂಬುವನು ಕುಕ್ಕಲನಾಡನ್ನು ಆಳುತ್ತಿದ್ದುದನ್ನು ದಾಖಲಿಸಿದೆ.*[೬] ಆದ್ದರಿಂದ ಈ ವಂಶದ ಅರಸರು ಸುಮಾರು ೧೩೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರೆಂದು ಹೇಳಬಹುದು.

ಕರ್ನಾಟಕ ರಾಜ್ಯ ಗ್ಯಾಸೆಟಿಯರ್‌ನಲ್ಲಿ ಚಿನ್ನೆಯನಾಯಕನನ್ನು ಮಯಿಲೆಯನಾಯಕನ ಮಗ ಎಂದು ತಪ್ಪಾಗಿ ಬರೆದಿದ್ದಾರೆ.*[೭] ಬೆಂಗಳೂರುದಕ್ಷಿಣ ತಾಲೂಕಿನ ಹಲಗೆವಡೇರಹಳ್ಳಿಯ ಕ್ರಿ. ಶ. ೧೩೪೦ರ ಶಾಸನದ ಪ್ರಕಾರ ಮಯಿಲೆನಾಯಕ ಹಾಗೂ ಚಿನ್ನೆಯನಾಯಕರು ಕೋಟೆಯನಾಯಕನ ಕುಮಾರರು ಎಂಬ ಅಂಶ ಖಚಿತವಾಗುತ್ತದೆ. ಆದ್ದರಿಂದ ಚಿನ್ನೆಯನಾಯಕನು ಮಯಿಲೆ ನಾಯಕನ ತಮ್ಮ ಎಂಬುದು ಸುಸ್ಪಷ್ಟ.

ಡಾ. ಎಚ್. ಎಸ್. ಗೋಪಾಲರಾವ್ ಅವರು ಬೈಲ ಕೋನೇನಹಳ್ಳಿ ಶಾಸನದ ಬಗ್ಗೆ ಬರೆಯುತ್ತಾ ಮಯಿಲೆಯ ನಾಯಕ, ಚೆಂನಯನಾಯಕರಿಗೆ ಮೊದಲು ಕುಕ್ಕಲನಾಡನು ಉಪ್ಪೂರ ಬೊಂಮಯ ನಾಯಕ ಆಳುತ್ತಿದ್ದನು ಎಂಬುದಾಗಿ ಅಭಿಪ್ರಾಯಿಸಿದ್ದಾರೆ.*[೮] ಆದರೆ ಈ ಅಭಿಪ್ರಾಯ ತಪ್ಪಾಗಿದ್ದು ಮಯಿಲೆಯ ನಾಯಕನ ಕೈಕೆಳಗೆ ಉಪ್ಪೂರ ಬೊಂಮಯನಾಯಕನು ಕುಕ್ಕಲನಾಡನ್ನು ಆಳುತ್ತಿದ್ದನು. ಆತನ ಕೈಕೆಳಗೆ ಕುಕ್ಕಲನಾಡ ಪ್ರಭು ಕಿತ್ತನೆಲೆಯ ದೊಡ್ಡ ಗೌಡನ ಮಕ್ಕಳು ಆಳುತ್ತಿದ್ದುದು ಸ್ಪಷ್ಟವಾಗಿದೆ. ಕಿತ್ತನಲ್ಲಿಯ ಮತ್ತೊಂದು ಶಾಸನವೂ ಇದನ್ನು ಸ್ಪಷ್ಟಪಡಿಸುತ್ತದೆ.*[೯]

ಒಟ್ಟಾರೆ ಈ ಎಲ್ಲ ಆಧಾರಗಳಿಂದ ಈ ಮನೆತನದ ಅರಸರ ವಂಶಾವಳಿಯನ್ನು ಈ ಕೆಳಗಿನಂತೆ ಪುನಾರಚಿಸಬಹುದು.

ಮೂರು ಲೋಕದ ಗಂಡ, ನರಲೋಕಗಂಡ, ಮಹಾ ಸಾಮಂತಾಧಿಪತಿ ಬಿರುದಾಂಕಿತನಾದ ಕೋಟೆಯ ನಾಯಕ - ಅವನ ಮಕ್ಕಳು ಮಯಿಲೆಯನಾಯಕ,. ಚಿನ್ನೆಯ ನಾಯಕ, ಮಯಿಲೆಯನಾಯಕನ ಮಗ - ಕುಮಾರ ಕೋಟೆಯನಾಯಕ. ನಂತರ ಕ್ರಿ. ಶ. ೧೪೩೦ರ ವೇಳೆಗೆ ಬುಕ್ಕನಾಯಕನು ಅರಸನಾಗಿದ್ದುದು ದೊಡ್ಡ ಬೊಮ್ಮಸಂದ್ರದ ಶಾಸನದಿಂದ ತಿಳಿದುಬರುತ್ತದೆ.*[೧೦] ಆದರೆ ಈತನಿಗೂ ಕುಮಾರ ಕೋಟೆಯ ನಾಯಕನಿಗೂ ಇದ್ದಿರಬಹುದಾದ ಸಂಬಂಧದ ಸ್ವರೂಪ ತಿಳಿಯುವುದಿಲ್ಲ. ಬಹುಶಃ ಬುಕ್ಕನಾಯಕನು ಕುಮಾರ ಕೋಟಿಯ ನಾಯಕನ ಮೊಮ್ಮಗನಿರಬಹುದೆಂದು ತೋರುತ್ತದೆ.

ಮಯಿಲೆಯ ನಾಯಕನನ್ನು ವೀರಬಲ್ಲಾಳದೇವರಸರ ಕುಮಾರ ಎಂದು ಕ್ರಿ. ಶ. ೧೩೪೧ರ ಬೈಚಗುಪ್ಪೆ ಶಾಸನ ದಾಖಲಿಸಿದೆ.*[೧೧] ಇಲ್ಲಿ 'ಕುಮಾರ' ಎಂದರೆ ಸ್ವಂತ ಪುತ್ರ ಎಂಬರ್ಥವನ್ನು ಸ್ವೀಕರಿಸಬಾರದು. ಪ್ರೀತಿ ಪಾತ್ರನಾದವನೆಂಬ ಅರ್ಥ ತೆಗೆದುಕೊಳ್ಳಬಹುದು. ಮಯಿಲೆಯ ನಾಯಕನು ದಂಡನಾಯಕನೂ ಆಗಿದ್ದನೆಂದು ಕ್ರಿ. ಶ. ೧೩೩೫ರ ಬ್ಯಾಡರಹಳ್ಳಿ ಶಾಸನವು ದಾಖಲಿಸಿದೆ.*[೧೨]

ದೊಡ್ಡೇರಿಯ ಶಾಸನದಲ್ಲಿ ಶ್ರೀ ಅಲ್ಲಾಳನಾಥ ಎಂಬ ವೊಪ್ಪವನ್ನು ಬಳಸಲಾಗಿದೆ. ಮಾಗಡಿ ತಾಲೂಕಿನ ವರದೇನಹಳ್ಳಿಯ ಬಳಿಯಲ್ಲಿರುವ ಕಲ್ಲೂರು ಗ್ರಾಮದಲ್ಲಿನ ಅಲ್ಲಾಳನಾಥನನ್ನು (ವರದ ರಾಜ ಸ್ವಾಮಿ) ಪ್ರಸ್ತುತ ವೊಪ್ಪವಾಗಿ ಬಳಸಿರುವುದನ್ನು ಗಮನಿಸ ಬಹುದು. ಕುಕ್ಕಲನಾಡಿನ ದೊರೆಗಳ ಕೆಲವು ಶಾಸನಗಳಲ್ಲಿ ಭಿನ್ನಮಂಗಲದ 'ಮುಕ್ತಿನಾಥ'ನನ್ನು ಸಹ ಒಪ್ಪವಾಗಿ ಬಳಸಿರುವುದು ಗಮನಾರ್ಹ.

## ದೊಡ್ಡೇರಿಯ ವೀರಗಲ್ಲು ಶಾಸನ

### ಶಾಸನ ಪಾಠ

೧ ಸ್ವಸ್ತಿ ಭುನಾಶ್ರಯ
೨ ೦ ಶ್ರೀ ಪ್ರಿತ್ವೀವಲ್ಲಭಂ ಶ್ರೀ ಹೊ
೩ ಯ್ಸಳ ಶ್ರೀ ವೀರಬಲ್ಲಾಳ ದೇವರು
೪ ಪ್ರಿಥ್ವೀರಾಜ್ಯಂಗೆಯ್ಯಲು ಸಕ
೫ ವರುಷ ೧೨೫೬ನೆಯ ಭಾ

೬ ವ ಸಂವತ್ಸರದ ಕಾರ್ತಿಕ ಸು
೭ । ಗು ಶ್ರೀಮನು ಮಹಾಸಾ
೮ ಮಂತಾಧಿಪತಿ ನರಲೋಕ ಗಂಡಮ್ಮೆ
೯ ಲೆಯ ನಾಯ್ಕ ಚಿಂನೆಯ ನಾಯ್ಕ
೧೦ ನವರು ನಾಡ ಪ್ರಮುಖ್ಯವಾಗಿಕುಕ್ಕಲ
೧೧ ನಾಡ ನಾಳುವ ಕಾಲಕೆ ಯೀದೊ
೧೨ ಡ್ಡೇರಿಯ ಬೊಂಮೋಜನ ಮಕ್ಕಳನು ದಾ
೧೩ ರಿಯಲಿ ಕಳ್ಳರು ತಾಗಿದಡೆ ಆಗೋ
೧೪ ವಿಂದನು ಕಳ್ಳರ ಕೂಡೆ ಹೊ
೧೫ ಯ್ದಾಡಿ ಬಿದ್ದಡೆ ಆ ಬೊಂ
೧೬ ಮೋಜನು ತಂನ ಮಗಗೋ
೧೭ ವಿಂದಂಗೆ ನಡ್ಡಿದ ವೀರಗ
೧೮ ಲು ಅವರ ಮಾ ಸೇನಬೋವ
೧೯ ಕಿಠಪ್ಪನ ಸುವಸ್ತದ ಬರ
೨೦ ಹ ಮಂಗಳ ಮಹಾಶ್ರೀಶ್ರೀ
೨೧ ವೊಪ್ಪ ಶ್ರೀ ಯಲ್ಲಾಳನಾಥ



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

* ಈ ಆಡಳಿತದ ಘಟಕದ ..............
*೧. EC. IX, ಬೆಂಗಳೂರು ೩೬, ದಾಸರಹಳ್ಳಿ, ಕ್ರಿ. ಶ. ೭೫೦.
*೨. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಬೆಂಗಳೂರು ಜಿಲ್ಲಾ ಸಂಪುಟ, ಪುಟ ೬೦
*೩. EC. IX, ನೆಲಮಂಗಲ ೯, ಮಂಠಾಳು, ಕ್ರಿ. ಶ. ೧೩೧೧.
*೪. EC. IX, ಬೆಂಗಳೂರು III, ರಾಮಸಮುದ್ರ, ಕ್ರಿ. ಶ. ೧೩೪೦.
*೫. ಈ ಅಪ್ರಕಟಿತ ಶಾಸನವನ್ನು ಇಷ್ಟರಲ್ಲಿಯೇ ಪ್ರಕಟಿಸುತ್ತೇನೆ.
*೬. EC. IX, ಬೆಂಗಳೂರು ೨೬, ದೊಡ್ಡಬೊಮ್ಮಸಂದ್ರ, ಕ್ರಿ. ಶ. ೧೪೩೦.
*೭. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಬೆಂಗಳೂರು ಜಿಲ್ಲಾ ಸಂಪುಟ.
*೮. **ಇತಿಹಾಸ ದರ್ಶನ**, ಸಂ. ೨ (೧೯೮೭), ಪುಟ. ೫೮, ಡಾ. ಎಚ್. ಎಸ್. ಗೋಪಾಲರಾವ್ : ಬೈಲಕೋನೇನಹಳ್ಳಿ ಶಿಲಾಶಾಸನ.
*೯. EC. IX, ನೆಲಮಂಗಲ, ೧೧, ಕಿತ್ತನಲ್ಲಿ, ಕ್ರಿ. ಶ. ಸು. ೧೩೪೦.
*೧೦. EC. IX, ಬೆಂಗಳೂರು ೨೬, ದೊಡ್ಡ ಬೊಮ್ಮಸಂದ್ರ, ಕ್ರಿ. ಶ. ೧೪೩೦.
*೧೧. EC. IX, ಮಾಗಡಿ ೮೧, ಬೈಚಗುಪ್ಪೆ, ಕ್ರಿ. ಶ. ೧೩೪೧ ಪುಟ ೧೩೧.
*೧೨. EC. IX, ಬೆಂಗಳೂರು ೧೧೦, ಬ್ಯಾಡರಹಳ್ಳಿ, ಕ್ರಿ. ಶ. ೧೩೩೫.

ಡಾ. ಎಂ. ಪಿ. ಮಹದೇವಯ್ಯ*

# ಬರಾಳು ಗ್ರಾಮದ ಅಪ್ರಕಟಿತ ಹೊಯ್ಸಳ ಶಾಸನ

ಈ ಶಾಸನವು ಇತ್ತೀಚೆಗೆ ಹಾಸನ ಜಿಲ್ಲೆಯ. ಚನ್ನರಾಯಪಟ್ಟಣದ ಬರಾಳು ಎಂಬ ಗ್ರಾಮದಲ್ಲಿ ದೊರೆತಿದೆ. ಇದನ್ನು ಒಂದು ಬೆಣಚುಗಲ್ಲಿನ ಮೇಲೆ ಕೆತ್ತಲಾಗಿದೆ. ಈ ಗ್ರಾಮ ಒಳ ಪ್ರದೇಶ ದಲ್ಲಿರುವುದರಿಂದ ಅದು ಜನರ ಗಮನಕ್ಕೆ ಬಂದಿರಲಿಲ್ಲ.

ಶಾಸನವನ್ನು ಹದಿಮೂರನೆ ಶತಮಾನದ ಕನ್ನಡ ಲಿಪಿಯಲ್ಲಿ ಬರೆದಿರುವುದು ಕಂಡುಬರುತ್ತದೆ. ಅದರ ಶೈಲಿಯಲ್ಲಿ ಹೊಯ್ಸಳ ಲಕ್ಷಣಗಳು ನಿಚ್ಚಳವಾಗಿವೆ. ಅಕ್ಷರಗಳು ಇತರ ಹೊಯ್ಸಳ ಕಾಲದ ಶಾಸನಗಳಲ್ಲಿರುವಂತೆ ಗುಂಡಾಗಿವೆ. ಆದ್ದರಿಂದ ಇದನ್ನು ಸುಲಭವಾಗಿ ಹದಿಮೂರನೆಯ ಶತಮಾನದ್ದೆಂದು ಹೇಳ ಬಹುದಾಗಿದೆ. ಸಾಮಾನ್ಯವಾಗಿ ಪ್ರತಿಯೊಂದು ಅಕ್ಷರವು ೬.೩೫ ಸೆಂ. ಮೀ. ಎತ್ತರವಿದೆ.

ಶಾಸನದಲ್ಲಿ ಐದು ಸಾಲುಗಳಿವೆ. ಇದರಲ್ಲಿ ಆರಂಭದ ಶ್ಲೋಕವಾಗಲಿ ಅಂತ್ಯದ ಶಾಪಾಶಯ ಭಾಗವಾಗಲಿ ಇಲ್ಲ. ಶಾಸನದ ಪ್ರಾರಂಭದ ಸಾಲಿನಲ್ಲಿ ಶುಭಚಿಹ್ನೆ ಇರುವುದರಿಂದ ಇದನ್ನು ಶಾಸನದ ಒಂದು ಭಾಗ ಎಂದು ಹೇಳುವಂತಿಲ್ಲ. ಈ ಶಾಸನವು ಚಿಕಿಸೆಟ್ಟಿ ಮತ್ತು ಕಾಳಿಸೆಟ್ಟಿಯರು ಹುಳ್ಳ ಜಿನಾಲಯಕ್ಕೆ ನೀಡಿದ ಕೊಡುಗೆಗಳನ್ನು ದಾಖಲಿಸಿದೆ. ಈ ಶಾಸನದ ಪಾಠವು ಈ ಕೆಳಗಿನಂತಿದೆ.

೧ ಹುಳ್ಳ ಜಿನಾಲೆಯಕ್ಕೆ ಚಿಕಿಸೆ
೨ ಟ್ಟಿ ಕಾಳಿಸೆಟ್ಟಿ ಹುಳ್ಳ ಸಮುದ್ರ
೩ ದ ತೆಂಕಣ ಕೋಡಿಯ ಕೆಳಗೆ
೪ ಗದ್ದೆ ಸ ೨ ಬಸದಿಯ ಮೂಡಣ ಬೆದ್ದಲೆ ಕೊ ೧೦
೫ ಕಾಳಿಗವುಡಿ ಕೊನ್ತಗವುಡಿ ಮಹದೇವಿ॥

ಮೊದಲಿಗೆ ಹುಳ್ಳ ಜಿನಾಲಯದ ಬಗ್ಗೆ ಪರಿಶೀಲಿಸೋಣ. ಹೊಯ್ಸಳರಲ್ಲಿ ಮಂತ್ರಿಯಾಗಿದ್ದ ಹುಳ್ಳ ಅಥವಾ ಹುಳ್ಳರಾಜನು ಶ್ರವಣಬೆಳಗೊಳದಲ್ಲಿ ಹುಳ್ಳ ಬಸದಿ ಅಥವಾ ಹುಳ್ಳ ಜಿನಾಲಯ ವನ್ನು ಕಟ್ಟಿಸಿರುವುದು ಹೊಯ್ಸಳ ಇತಿಹಾಸವನ್ನು ಬಲ್ಲ ವಿದ್ಯಾರ್ಥಿಗಳಿಗೆ ಪರಿಚಿತವಾಗಿದೆ*[೧]. ಈ ಬಸದಿಗೆ 'ಭಂಡಾರಿ' ಬಸದಿ ಎಂಬ ಹೆಸರೂ ಇದೆ. ಇದಕ್ಕೆ ಹೊಯ್ಸಳ ರಾಜರುಗಳಾದ ವಿಷ್ಣುವರ್ಧನ ಮತ್ತು ಒಂದನೆಯ ನರಸಿಂಹನ ಕಾಲದಲ್ಲಿ ಇದನ್ನು ನಿರ್ಮಿಸಲು ಕಾರಣನಾದ ಹುಳ್ಳನು ಭಂಡಾರಿ ಅಂದರೆ ಅರ್ಥ ಮಂತ್ರಿಯಾಗಿದ್ದುದು ಕಾರಣವಾಗಿದೆ. ಈ ಬಸದಿಯನ್ನು ಇಪ್ಪತ್ತನಾಲ್ಕು ತೀರ್ಥಂಕರರಿಗೆ ಅರ್ಪಿಸಿರುವುದರಿಂದ ಇದನ್ನು ಚತುರ್ವಿಂಶತಿ ತೀರ್ಥಂಕರ ಬಸದಿ ಎಂದು ಸಹ ಕರೆಯಲಾಗಿದೆ*[೨]. ಅದರಲ್ಲಿ ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖ ಮಂಡಪಗಳಿವೆ. ಇವೆಲ್ಲವೂ ಒಂದು ಪ್ರಾಕಾರದೊಳಗೆ ಸೇರಿ ಕೊಂಡಂತಿವೆ. ಗರ್ಭಗೃಹದಲ್ಲಿ ಇಪ್ಪತ್ತನಾಲ್ಕು ತೀರ್ಥಂಕರರ ವಿಗ್ರಹಗಳಿದ್ದು ಅವನ್ನು ಅಲಂಕೃತ ಪೀಠದ ಮೇಲೆ ಸಾಲಾಗಿ ನಿಲ್ಲಿಸಲಾಗಿದೆ. ಬಸದಿಯಲ್ಲಿ ದೊರೆತಿರುವ ಒಂದು ಶಾಸನದ ಪ್ರಕಾರ ಈ ಬಸದಿಯನ್ನು ಹುಳ್ಳನು ಕ್ರಿ.ಶ. ೧೧೫೯ರಲ್ಲಿ ಕಟ್ಟಿಸಿದನು. ಒಂದನೆಯ ಹೊಯ್ಸಳ ನರಸಿಂಹನು ಶ್ರವಣಬೆಳಗೊಳಕ್ಕೆ ಭೇಟಿನೀಡಿದಾಗ ಈ ಬಸದಿಯ ಭವ್ಯತೆ ಮತ್ತು ಸೌಂದರ್ಯವನ್ನು ನೋಡಿ ಸಂತೋಷಪಟ್ಟು **ಭವ್ಯಚೂಡಾಮಣಿ** ಎಂಬ ಇನ್ನೊಂದು ಹೆಸರನ್ನಿಟ್ಟನು. ಈ ಬಸದಿಯ ಪ್ರಸಾದ ದುರಸ್ತಿ ಮತ್ತು ಪೂಜೆಗಾಗಿ ಸವಣೇರು ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದನು*[೩]. ಈ ಗ್ರಾಮವನ್ನು ಹುಳ್ಳನು ಭಾನುಕೀರ್ತಿ ಪಂಡಿತರಿಗೆ ಬಿಟ್ಟುಕೊಟ್ಟನು. ಈ ಬಸದಿಯಲ್ಲೇ ಎಂಟು ಶಾಸನಗಳು ದೊರೆತಿದ್ದು ಅವೆಲ್ಲ ಹೊಯ್ಸಳರ ಕಾಲಕ್ಕೆ ಸೇರಿದವಾಗಿವೆ*[೪]. ಇನ್ನೊಂದು ಶಾಸನದ ಪ್ರಕಾರ ನಯಕೀರ್ತಿ ಸಿದ್ಧಾಂತದೇವರು ಗುಣಚಂದ್ರ ಸಿದ್ಧಾಂತದೇವರ ಶಿಷ್ಯರಾಗಿದ್ದು ಈ ಬಸದಿಯ ಆಚಾರ್ಯರಾಗಿದ್ದರು*[೫]. ಕ್ರಿ. ಶ. ೧೨೭೮ರ ಇನ್ನೊಂದು ಶಾಸನದಿಂದ ಉದಯಚಂದ್ರದೇವರ ಶಿಷ್ಯ ಮುನಿಚಂದ್ರ ದೇವರು ಹಣವನ್ನು ಕೊಡುಗೆಯಾಗಿ ನೀಡಿದ ಬಗ್ಗೆ ತಿಳಿದುಬರುತ್ತದೆ*[೬]. ಈ ಎಲ್ಲ ಶಾಸನಗಳ ಆಧಾರದಿಂದ ಹುಳ್ಳಬಸದಿಯು ಶ್ರವಣಬೆಳಗೊಳದ ಸುತ್ತ ಮುತ್ತಲ ಪ್ರದೇಶಕ್ಕೆ ಮುಖ್ಯ ಜೈನ ಧಾರ್ಮಿಕ ಕೇಂದ್ರವಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ.

ಶಾಸನಗಳು ಒಂದನೆಯ ನರಸಿಂಹನ ಮಂತ್ರಿಯಾಗಿದ್ದ ಹುಳ್ಳನ ಬಗ್ಗೆ ವಿವಿರಗಳನ್ನು ಒದಗಿಸುತ್ತವೆ. ಚಾಲುಕ್ಯರ ಸಾಮಂತ ಮನೆತನಕ್ಕೆ ಸೇರಿದ ಹುಳ್ಳರಸನೆಂಬವನಿದ್ದನು*[೭] ವರ್ಷಗಳು ಹೊಂದಿಕೆಯಾಗದಿರುವುದರಿಂದ ಈ ಶಾಸನೋಕ್ತ ಹುಳ್ಳನು ಚಾಲುಕ್ಯರ ಹುಳ್ಳನಿಗಿಂತ ಬೇರೆಯವನೆಂದು ತಿಳಿಯುವುದು ಸೂಕ್ತ. ಈ ಹುಳ್ಳರಾಜನು ಒಂದನೆಯ ಹೊಯ್ಸಳ ನರಸಿಂಹನ ಮಂತ್ರಿಯಾಗಿದ್ದನು. ಅವನು ಜಕ್ಕಿ ರಾಜ ಮತ್ತು ಲೋಕಾಂಬಿಕೆಯರ ಮಗನಾಗಿದ್ದು ವಾಜಿಕುಲಕ್ಕೆ ಸೇರಿದವನಾಗಿದ್ದನು*[೮]. ಅವನು

* ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬.

ಚಂದಿರಾಜನ ಮೊಮ್ಮಗ ಅವನ ಪತ್ನಿ ಪದ್ಮಾವತಿ*೯. ಹುಳ್ಳನು ಜೈನ ಧರ್ಮಾನುಯಾಯಿಯಾಗಿದ್ದು ಜೈನ ಧರ್ಮ ಮತ್ತು ಕಲೆಗಳ ಪೋಷಕನಾಗಿದ್ದನು. ಅವನು ಜೈನ ಸಂಘಸಂಸ್ಥೆಗಳಿಗೆ ನೀಡಿದ ಅನೇಕ ಕೊಡುಗೆಗಳಲ್ಲಿ ಈ ಮುಂದಿನದು ಹೆಚ್ಚು ಪ್ರಾಮುಖ್ಯದಿಂದ ಕೂಡಿದೆ. ನಯಕೀರ್ತಿ ಸಿದ್ಧಾಂತದೇವನು ಆತನ ಗುರು. ಆ ಗುರುವಿನ ಮಾರ್ಗದರ್ಶನದಲ್ಲಿ ಅವನು ಅನೇಕ ಜೈನ ಕೇಂದ್ರಗಳಿಗೆ ಕೊಡುಗೆಗಳನ್ನು ನೀಡಿದನು. ಅವನು ಒಂದನೆಯ ನರಸಿಂಹನಿಂದ ಪಡೆದ ಸವಣೇರು, ಬೆಕ್ಕ ಮತ್ತು ಕೆಗ್ಗೆರೆಗಳೆಂಬ ಮೂರು ಗ್ರಾಮಗಳನ್ನು ಗೊಮ್ಮಟೇಶ್ವರ ದೇವರಿಗೆ ದತ್ತಿ ಬಿಟ್ಟನು. ಅವನು ಬಂಕಾಪುರದ ಧೋರ ಜಿನಾಲಯವನ್ನು ಪುನರುದ್ಧಾರ ಮಾಡಿದನೆಂದು ಇನ್ನೊಂದು ಶಾಸನವು ತಿಳಿಸುತ್ತದೆ*೧೦. ಅವನು ಅದಿತೀರ್ಥವೆಂದು ಪ್ರಸಿದ್ಧವಾಗಿದ್ದ ಮತ್ತು ಗಂಗರಿಂದ ನಿರ್ಮಿಸಲ್ಪಟ್ಟಿದ್ದ ಕೆಲ್ಲಂಗೆರೆ ಬಸದಿಯನ್ನು ಜೀರ್ಣೋದ್ಧಾರ ಮಾಡಿಸಿದನು. ಆದಾಗ್ಯೂ ಶ್ರವಣಬೆಳಗೊಳದಲ್ಲಿ ಅವನು ನಿರ್ಮಿಸಿದ **ಭವ್ಯಚೂಡಾಮಣಿಯು** ಅವನ ಸಾಧನೆಗಳಿಗೆ ಕಳಸಪ್ರಾಯವಾಗಿದೆ. ಹುಳ್ಳನಿಗೆ ನರಸಿಂಹನೆಂಬ ಮಗನಿದ್ದನು ಮತ್ತು ಅವನು ತನ್ನ ತಂದೆಯ ಚಟುವಟಿಕೆಗಳಲ್ಲಿ ಸಕ್ರಿಯ ಪಾತ್ರವಹಿಸಿತ್ತಿದ್ದನು.*೧೧ ಹರಿಯಣನು ಅವನ ಭಾವ ಮೈದುನನಾಗಿದ್ದು ಆತನು ಒಂದನೆಯ ನರಸಿಂಹನ ಅಶ್ವದಳ ಕಛೇರಿಯಲ್ಲಿ ಹೆಗ್ಗಡೆಯಾಗಿದ್ದನು. ಹೀಗೆ ಹುಳ್ಳನ ಕುಟುಂಬದ ಸದಸ್ಯರು ಒಂದನೆಯ ನರಸಿಂಹನ ಸೇವೆಯಲ್ಲಿದ್ದು ಅಪಾರ ಪ್ರಭಾವ ಹೊಂದಿದ್ದರು.

ಸ್ವಾಭಾವಿಕವಾಗಿಯೇ ಆತನು ಶ್ರವಣಬೆಳಗೊಳದಲ್ಲಿ ಕಟ್ಟಿಸಿದ ಬಸದಿಯು ರಾಜಪ್ರೋತ್ಸಾಹ ಪಡೆಯಿತು. ಬರಾಳುವಿನಲ್ಲಿ ದೊರೆತಿರುವ ಪ್ರಸ್ತುತ ಶಾಸನದಲ್ಲಿ ಭೂದಾನ ಮಾಡಿದ ಚಿಕಿಸೆಟ್ಟಿ ಮತ್ತು ಕಾಳಿಸೆಟ್ಟಿಯರ ಹೆಸರುಗಳು ಉಕ್ತವಾಗಿದ್ದರೂ ಅವರ ಕುರಿತು ಏನೂ ತಿಳಿದುಬರುವುದಿಲ್ಲ. ಅವರಿಬ್ಬರೂ ಸೇರಿ ಈ ಜಿನಾಲಯಕ್ಕೆ ೨ ಸಲಗೆ ಅಳತೆಯ ತರಿ ಜಮೀನು ಮತ್ತು ೧೦ ಕೊಳಗ ಅಳತೆಯ ಖುಷ್ಕಿ ಜಮೀನನ್ನು ಬಿಟ್ಟಿದ್ದಾರೆ. ಹುಳ್ಳ ಸಮುದ್ರ ಎಂಬ ಪ್ರಸ್ತಾಪವಿರುವುದು ಆಸಕ್ತಿಕರವಾಗಿದೆ. ಬಹುಶಃ ಇದು ಶ್ರವಣಬೆಳಗೊಳದಲ್ಲಿ ಅಥವಾ ಬರಾಳು ಗ್ರಾಮದಲ್ಲಿ ಇದ್ದಿರ ಬಹುದಾದ ಒಂದು ಕೆರೆಯನ್ನು ಸೂಚಿಸುತ್ತದೆ. ಶ್ರವಣಬೆಳಗೊಳದಲ್ಲಿ ಅನೇಕ ಕರೆಗಳಿದ್ದು ಅವುಗಳಲ್ಲೊಂದನ್ನು ಹುಳ್ಳರಾಜ ನಿರ್ಮಿಸಿರಬಹುದು. ಆದರೆ ಇದಕ್ಕೆ ಯಾವುದೇ ಆಧಾರ ದೊರತಿಲ್ಲ. ಶಾಸನದ ಕೊನೆಯ ಸಾಲಿನಲ್ಲಿ ಕಾಳಿಗವುಡಿ, ಕೊನ್ತಗವುಡಿ ಮತ್ತು ಮಹದೇವಿಯರ ಉಲ್ಲೇಖ ಬರುತ್ತದೆ. ಬಹುಶಃ ಅವರು ಈ ದತ್ತಿ ನೀಡಿದ ಗೌಡರ ಪತ್ನಿಯರಿರಬೇಕು.

ಶಾಸನದಲ್ಲಿ ಯಾವುದೇ ದಿನಾಂಕದ ನಮೂದಿಲ್ಲ. ಇತರ ಶಾಸನಗಳಿಂದ ಹುಳ್ಳನು ಈ ಬಸದಿಯನ್ನು ಕ್ರಿ. ಶ. ೧೧೫೯ರಲ್ಲಿ ನಿರ್ಮಿಸಿದನೆಂದು ತಿಳಿದುಬರುತ್ತದೆ. ಆದ್ದರಿಂದ ಶಾಸನದ ಕಾಲವನ್ನು ಅದು ನಿರ್ಮಿತವಾದ ಕಾಲಕ್ಕೆ (ಕ್ರಿ. ಶ. ೧೧೫೯) ನಿಕಟೋತ್ತರದಲ್ಲಿ ಅಂದರೆ ಸುಮಾರಾಗಿ ಕ್ರಿ.ಶ. ೧೧೬೦-೬೫ಕ್ಕೆ ನಿಗದಿ ಪಡಿಸಬಹುದು. ಹೀಗೆ ಪ್ರಸ್ತುತ ಶಾಸನವು ಶ್ರವಣಬೆಳಗೊಳ ದಲ್ಲಿರುವ ಹುಳ್ಳ ಬಸದಿಗೆ ಹೆಚ್ಚು ಪ್ರಮುಖವಾದ ಸಮಕಾಲೀನ ಉಲ್ಲೇಖನವನ್ನು ನೀಡುತ್ತದೆ.



(ಈ ಶಾಸನವನ್ನು ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಉಪನಿರ್ದೇಶಕರಾದ ಡಾ. ಆರ್. ಗೋಪಾಲ್‌ರವರು ಪರಿಶೋಧಿಸಿದ್ದು ಅದನ್ನು ಪ್ರಕಟಿಸಲು ನನಗೆ ಅನುಮತಿ ನೀಡಿರುವುದಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ. ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಪ್ರೊ. ಎ. ವಿ. ನರಸಿಂಹಮೂರ್ತಿಯವರು ನೀಡಿದ ನೆರವಿಗಾಗಿ ಅವರಿಗೆ ಲೇಖಕರು ಆಭಾರಿ. ಶಾಸನದ ಪಠ್ಯವನ್ನು ಪರಿಶೀಲಿಸಿದ್ದಕ್ಕಾಗಿ ಶ್ರೀ ಎಚ್. ಎಂ. ನಾಗರಾಜರಾವ್, ಶಾಸನತಜ್ಞರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಇವರಿಗೆ ಕೃತಜ್ಞತೆಗಳು ಸಲ್ಲುತ್ತವೆ.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. K. A. Nilakanta Sastri (ed) ; *Sravanabelagola,* Mysore, 1981, P. 39.
*೨. ಎ. ಕ. ೨ (ಪರಿಷ್ಕೃತ) ಸಂಖ್ಯೆ ೪೭೬
*೩. ಎ. ಕ. ೨ (ಪರಿಷ್ಕೃತ) ಸಂಖ್ಯೆ ೪೮೧
*೪. ಎ. ಕ. ೨ (ಪರಿಷ್ಕೃತ) ಸಂಖ್ಯೆ ೪೭೬-೪೮೪
*೫. ಎ. ಕ. ೨ (ಪರಿಷ್ಕೃತ) ಸಂಖ್ಯೆ ೪೭೬
*೬. ಎ. ಕ. ೨ (ಪರಿಷ್ಕೃತ) ಸಂಖ್ಯೆ ೪೭೮
*೭. ಎ. ಕ. ೨ (ಪರಿಷ್ಕೃತ) ಸಂಖ್ಯೆ ೫೬೩
*೮. ಎ. ಕ. ೨ (ಪರಿಷ್ಕೃತ) ಸಂಖ್ಯೆ ೫೬೪
*೯. ಎ. ಕ. ೨ (ಪರಿಷ್ಕೃತ) ಸಂಖ್ಯೆ ೪೭೭
*೧೦. ಸೌ. ಇಂ. ಇ ಸಂಪುಟ ೧೧, ಭಾಗ ೧, ಸಂಖ್ಯೆ ೩೪
*೧೧. ಎ. ಕ. ೨ (ಪರಿಷ್ಕೃತ) ಸಂಖ್ಯೆ ೫೬೫

ಆದಪ್ಪ ಹಾಸೋಡಿ*

# ಇಂಡಿ ತಾಲೂಕಿನ ಅಪ್ರಕಟಿತ ಶಾಸನಗಳು



ವಿಜಾಪುರ ಜಿಲ್ಲೆಯ ಇಂಡಿ ಪಟ್ಟಣದಿಂದ ಪೂರ್ವಕ್ಕೆ ೩೨ ಕಿ. ಮೀ. ಅಂತರದಲ್ಲಿ ಭೀಮಾನದಿಯ ದಂಡೆ ಮೇಲಿರುವ ಗ್ರಾಮ ಮಿರಿಗಿ. ನಾದನಾಲೆಯು ಭೀಮಾನದಿಯನ್ನು ಸೇರುವ ಈ ಸಂಗಮ ಸ್ಥಳದಲ್ಲಿ ಇತಿಹಾಸ ಪ್ರಸಿದ್ಧ ಸಂಗಮೇಶ್ವರ ದೇವಾಲಯವಿದೆ. ಸುಮಾರು ೩೦೦ ವರ್ಷಗಳ ಹಿಂದೆ ರಮಾನಂದಸ್ವಾಮಿಯವರು ಇಲ್ಲಿ ತಪಸ್ಸು ಮಾಡಿದರೆಂದು ತಿಳಿದು ಬರುತ್ತದೆ[*1]. ಅರ್ಜುನಗಿ, ಚಿಕ್ಕ ಅರ್ಜುನಗಿ ಹಾಗೂ ಮಿರಿಗಿ ಗ್ರಾಮಗಳ ಅಸ್ತಿತ್ವವನ್ನು ಏಳು ಶತಮಾನಗಳಷ್ಟು ಹಿಂದಕ್ಕೆ ಒಯ್ಯುವ ಅಪರೂಪದ ಸೀಮೆಶಾಸನದ ಕಲ್ಲೊಂದು ಶ್ರೀ ಪರಮಣ್ಣ ಹಂಜಗಿಯವರ ದೇಶಪಾಂಡೆ ಹೊಲದಲ್ಲಿ ಸಿಕ್ಕಿದೆ.

ಪ್ರಸ್ತುತ ಶಾಸನವು ಕೋಳಿಗೂಡಿಗೆ ಗೋಡೆಯಾಗಿ ಬಳಸಲ್ಪಟ್ಟಿದ್ದು, ಎಂಟು ಸಾಲುಗಳಲ್ಲಿದೆ. ಶಿರೋಭಾಗದಲ್ಲಿ ಸೂರ್ಯ-ಚಂದ್ರ, ಖಡ್ಗ ಮತ್ತು ಆಕಳು-ಕರುವಿನ ರೇಖಾಚಿತ್ರ ಕೆತ್ತಲಾಗಿದೆ. ಶಾಸನದ ಹಿಂಭಾಗ ಬಂಡೆಗಲ್ಲಿನಂತೆ ಕಂಡರೆ ಮುಂಭಾಗವನ್ನು ಸಿದ್ಧಪಡಿಸಿಕೊಂಡು ಬರೆಯಲಾಗಿದೆ. ಆರಂಭದಲ್ಲಿ ಶುಭಚಿಹ್ನೆ ಇದೆ.

**ಶಾಸನದ ಪಾಠ**

೧[*2] (ಚಂದ್ರ) ಶ್ರೀ ಮತು ಅರ್ಜುನಿಗಿ
೨ ಯ ಯಿಸಾನ್ಯದ ಹೊಲ
೩ ದ ಮಿರಿಗಿಯ ಆಗ್ನಿಯ
೪ ಹೊಲದಾ ಚಿಕ ಅರ್ಜುನಿ
೫ ಗಿಯ ಹಳ್ಳದ ಅವೆಯ
೬ ಹೊಡಲ ಮಾಕುರ ಮುಂ
೭. ಗಡೆಯ ಸಿಮಿಯ ಸಾಸ
೮. ನದ ಕಲ್ಲು॥

ಚಿಕ್ಕ ಅರ್ಜುನಗಿ ಹಳ್ಳದ ದಂಡೆಯ ಮೇಲಿರುವ ಕಪ್ಪು ಮಣ್ಣಿನ ವಿಸ್ತಾರವಾದ ಇಳಿಜಾರು (ಹೊಡಲು) ಭೂಮಿಯ ಗಡಿಯನ್ನು ಸೂಚಿಸುವ ಶಾಸನ ಇದಾಗಿದೆ. ಉಲ್ಲೇಖಿತ ಮಾಕರ (ಫಲವತ್ತಾದ) ಹೊಡಲಿನ ಒಂದು ಸೀಮೆ ಅರ್ಜುನಗಿಯ ಈಶಾನ್ಯದ ಹೊಲವಾದರೆ ಇನ್ನೊಂದು ಸೀಮೆ ಮಿರಿಗಿಯ ಆಗ್ನೇಯ ಹೊಲವಾಗಿದೆ.

ಲಿಪಿಯನ್ನು ಆಧರಿಸಿ ಈ ಶಾಸನದ ಕಾಲಮಾನ ಕರ್ನಾಟಕ (ವಿಜಯನಗರ) ಸಾಮ್ರಾಜ್ಯ ಆರಂಭ ಎನ್ನಬಹುದು. ಇಂಡಿಯಿಂದ ಪೂರ್ವಕ್ಕೆ ೨೬ ಕಿ.ಮೀ. ದೂರದ ಲಾಳಸಂಗಿ* ಗ್ರಾಮದಲ್ಲಿ ಇನ್ನೊಂದು ಶಾಸನ ದೊರೆತಿದೆ. ಅಗಸಿ ಬಾಗಿಲಿನ ಬಲಭಾಗದಲ್ಲಿ ಅದನ್ನು ನಿಲ್ಲಿಸಲಾಗಿದೆ. ೭೭ ಸೆಂ.ಮೀ ಎತ್ತರ, ೪೮ ಸೆಂ.ಮೀ. ಅಗಲ ಹಾಗೂ ೧೯ ಸೆಂ.ಮೀ. ದಪ್ಪವಿರುವ ಶಾಸನಕಲ್ಲಿನ ಮೇಲ್ಭಾಗ ತ್ರುಟಿತವಾಗಿರುತ್ತದೆ.

**ಶಾಸನ ಪಾಠ**

೧[*3] ಲ ಸ್ವಸ್ತಿ ಶ್ರೀ ಮತು ಕಾಮಾ
೨ ಇಯ ಸುಪುತ್ರ ಪೊಂಮಿ
೩ ದೇವ ಸೋಇದೇವ ರಾ

* ಆಂಗ್ಲ ಭಾಷಾ ಶಿಕ್ಷಕ, ಸರ್ಕಾರಿ ಕಾಲೇಜಿನ ಪ್ರೌಢ ಶಾಲೆ ವಿಭಾಗ, ವರ್ತೂರು, ಬೆಂಗಳೂರು - ೮೭

೪ ಣ**ಯರು ಬಿಟ್ಟ ಧ

೫ (ರ್ಮ) ಇಟ್ಟ ಆರವೆಗೆ ಕೊ

೬ ಟ್ಟ ಕೇಇ ಮನೆ

ಮೇಲ್ಭಾಗದಲ್ಲಿ ಸೂರ್ಯ ಚಂದ್ರ ರೇಖಾಚಿತ್ರಗಳಿರುವ ಈ ಶಾಸನ ಶುಭಚಿಹ್ನೆಯಿಂದ ಪ್ರಾರಂಭವಾಗಿದೆ. ಕಾಮಾಯಿಯ ಸುಪುತ್ರ ಪೊಂಮಿದೇವ ಮತ್ತು ಸೋಯಿದೇವ ರಾಣಯರು ಆರಮನೆತೋಟ ಉದ್ಯಾನದ ನಿರ್ಮಾಣ ಹಾಗೂ ನಿರ್ವಹಣೆಗಾಗಿ ಹೊಲ-ಮನೆಯನ್ನು ದಾನ ಬಿಟ್ಟು ಉಲ್ಲೇಖವಿದೆ. ದಾನ ನೀಡಿದ ಭೂಮಿ ಎಷ್ಟು? ಮನೆ ಯಾವುದು? ಮತ್ತು ಅವು ಎಲ್ಲಿವೆ? ಎಂಬ ಬಗ್ಗೆ ವಿವರಗಳು ಇದರಲ್ಲಿ ದೊರಕುವುದಿಲ್ಲ. 'ರಾಣುವೆ' ಎಂದರೆ ಸೈನಿಕ, ಸಿಪಾಯಿ ಅಥವಾ ಸೇನೆ ಎಂಬ ಅರ್ಥ ಬರುವುದರಿಂದ ಶಾಸನದಲ್ಲಿ ಉಕ್ತವಾಗಿರುವ ಪೊಂಮಿದೇವ, ಸೋಯಿದೇವ ಸೇನಾಪತಿಗಳಾಗಿದ್ದರೆಂದು ತಿಳಿಯುತ್ತದೆ. ಲಿಪಿಯ ದೃಷ್ಟಿಯಿಂದ ಕಳಚುರಿಗಳ ಕಾಲಕ್ಕೆ ಸಂಬಂಧಿಸಿದ ಶಾಸನವೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಆದ್ದರಿಂದ ಬಿಜ್ಜಳನ ಕಾಲದಲ್ಲಿ ಮಂಗಳವೇಢೆ (ಮಹಾರಾಷ್ಟ್ರದ ಸೋಲಾಪುರ ಜಿಲ್ಲೆ)ಯಲ್ಲಿ ತರ್ದವಾಡಿ ೧೦೦೦ ವನ್ನಾಳುತ್ತಿದ್ದ ಕಲಚುರಿ ಚಕ್ರವರ್ತಿ ರಾಯಮುರಾರಿ ಸೋವಿದೇವನೇ (೧೧೬೭-೭೬) ಶಾಸನೋಕ್ತ ರಾಣಯನಾಗಿರಬಹುದೇ? ಇಲ್ಲಿ ತೊಡಕನ್ನುಂಟು ಮಾಡುವ ಪದಗಳು 'ಚಕ್ರವರ್ತಿ' ಮತ್ತು 'ರಾಣಯ' ಚಕ್ರವರ್ತಿಯಾಗಿದ್ದು ಕೊಂಡು ಸೇನಾಪತಿಯ ಸ್ಥಾನವನ್ನು ನಿರ್ವಹಿಸಿರುವ ದೊರೆ ಸೋಯಿದೇವನಾಗಿರಬಹುದು. ಏಕೆಂದರೆ ಎರಡನೆಯ ಬಿಜ್ಜಳನ ತಮ್ಮ ಮೈಳಗಿ, ಬಿಜ್ಜಳನ ಜೇಷ್ಠ ಪುತ್ರ ವಜ್ರದೇವನ ಮಗ ಕರ್ಣದೇವ ಇವರು ರಾಯಮುರಾರಿ ಸೋಯಿದೇವನೊಡನೆ ಸಿಂಹಾಸನಕ್ಕಾಗಿ ಹೋರಾಡುತ್ತಿದ್ದರು.

ಶಾಸನದಲ್ಲಿ ಪೊಂಮಿದೇವ, ಸೋಯಿದೇವರು ಕಾಮಾಯಿಯ ಸುಪುತ್ರರು ಎನ್ನಲಾಗಿದೆ. ಸೋವಿದೇವನ ಅಣ್ಣ ವಜ್ರದೇವನೇ ಪೊಂಮಿದೇವನೆಂದು ಕರೆಯಲ್ಪಡುತ್ತಿದ್ದಿರಬೇಕು ಹಾಗಾದರೆ ಎರಡನೆಯ ಬಿಜ್ಜಳನ ಹೆಂಡತಿ ಕಾಮಾಯಿ ಎಂದಾಯಿತು.

ಉದ್ಯಾನ ಎಂಬುದನ್ನು ಸೂಚಿಸಲು ಐದು ಎಲೆಗಳುಳ್ಳ ಸಸ್ಯದ ಕಾಂಡ ಹಾಗೂ ಅದರ ಪಕ್ಕದಲ್ಲಿ ಹಸುವಿನ ರೇಖಾಚಿತ್ರಗಳನ್ನು ಶಾಸನದ ಕೆಳಭಾಗದಲ್ಲಿ ತೋರಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪೊಂಮಿದೇವ, ಸೋವಿದೇವರಾಣಯರು ಪರಿಸರ ಪ್ರೇಮಿಗಳಾಗಿದ್ದರು ಎಂದು ತಿಳಿಯುತ್ತದೆ. ಲಾಳಸಂಗಿ ಗ್ರಾಮದ ಉತ್ತರ ದಿಕ್ಕಿನಲ್ಲಿ ಕೆರೆಯ ದಂಡೆಯಿಂದ ಪೂರ್ವದ ವಿಶಾಲ ಭೂಮಿಯೇ ಉದ್ಯಾನವಾಗಿತ್ತೆಂದು ಹೇಳುವಲ್ಲಿ ಪಕ್ಕದ ಮೆಟ್ಟಿಲುಗಳುಳ್ಳ ಬಾವಿ, ಅದರ ದಂಡೆಯ ಮೇಲೆ ಗುರುತಿಸಲಾಗದ ಸ್ಥಿತಿಯಲ್ಲಿರುವ ಒಡೆದು ಹಾಳಾದ ಶಿಲ್ಪಗಳು ಆಧಾರವಾಗುವವು. ಅಷ್ಟೇ ಏಕೆ ಜೈನತೀರ್ಥಂಕರನ ಭಗ್ನ ಮೂರ್ತಿ ಸಿಂಹಪೀಠ, ಅಸಂಖ್ಯಾತ ಕುಡಿಯುವ ನೀರಿನ ಬಾವಿಗಳು, ಕರಿಕಲ್ಲಿನಲ್ಲಿ ಕಟ್ಟಿದ ಹೊಡೆ (ಈಗ ಬಿದ್ದು ಹೋಗಿದೆ) ಹೀಗೆ ಒಂದೇ ಎರಡೇ.... ಅನೇಕ ಅವಶೇಷಗಳು.

ಲಾಳಸಂಗಿ ಗ್ರಾಮದ ಸರ್ವೆ ಸಂಖ್ಯೆ ೩೨ ಶ್ರೀ ಕರೀಮ್‌ಸಾಬ ಮುಲ್ಲಾ ಅವರ ಬಿಡಿಗೇರಿ ಹೊಲದಲ್ಲಿ ಲಘು ಬಂಡೆ ಶಾಸನ ದೊರೆತಿದೆ. ಮೇಲ್ಭಾಗದಲ್ಲಿ ಸೂರ್ಯ ಚಂದ್ರ ಮತ್ತು ಲಿಂಗವನ್ನು ರೇಖಾಚಿತ್ರದಲ್ಲಿ ಕಂಡರಿಸಲಾಗಿದೆ. ಯೋಗಿಯೊಬ್ಬ ತನ್ನ ದಂಡವನ್ನು ಎಡಭಾಗದಲ್ಲಿರಿಸಿ, ಧ್ಯಾನಾಸಕ್ತನಾಗಿರುವ ಚಿತ್ರ ಬಂಡೆಯ ಮೇಲಿದೆ.

**ಶಾಸನದ ಪಾಠ**

೧. [ದೇವೃತ]...........ಧ್ದ

೨. ನ [..........] ಇದು

ದನಕುರಿ ಕಾಯುವ ಹುಡುಗರು ಶಾಸನಬಂಡೆಯನ್ನು ಒಡೆದಿರುತ್ತಾರೆ. ಏಳೆಂಟು ಕಲ್ಲಿನ ಪದರುಗಳನ್ನು ಆಯ್ದು ಜೋಡಿಸಿ ಫೊಟೋ ತೆಗೆಯಲಾಗಿದೆ*.

ಶಿಲಾಯುಗ ಸಂಸ್ಕೃತಿಯ ನೆಲೆಯೆಂದು ಗುರುತಿಸಲಾದ ಇಂಡಿ ತಾಲೂಕಿನ ಗೋಳಸಾರ ಗ್ರಾಮದಲ್ಲಿ ದೇವನಾಗರಿ ಲಿಪಿಯ ೫ ಸಾಲುಗಳ ಶಾಸನ ಸಿಕ್ಕಿದೆ. ಮೋಟುಗಲ್ಲಿನ ಮೇಲೆ ಬರೆದಿರುವುದರಿಂದ ಸ್ವಲ್ಪ ಅಸ್ಪಷ್ಟವಾಗಿದೆ. ಇದು ಕೂಡ ಸೀಮೆ ಶಾಸನವಾಗಿದ್ದು, ಕೆಳಾರ್ಧಭಾಗ ತ್ರುಟಿತವಾಗಿರುತ್ತದೆ; ಮೇಲೆ ಚಂದ್ರ ಸೂರ್ಯ, ಲಿಂಗ ಮತ್ತು ತ್ರಿಶೂಲಗಳ ರೇಖಾಚಿತ್ರಗಳಿವೆ.





**ಶಾಸನದ ಪಾಠ**

೧. ............ಲಲ ಆಟೆ
೨. ಸರ್ವತ್ರ ಪೀಲತ್ತ
೩. ತೀಸಿದ ಗಡಿ
೪. ಹಾಪ್ತರ ಣ ಉಟರ
೫. ಭೀಕ್ಷತಿ.



* (ಹೊಲದ ಮಾಲಿಕ ಕರೀಮ್ ಸಾಬರವರ ತಾಯಿ- ಈ ಬಂಡೆಯನ್ನು ಮುಟ್ಟಬೇಡ, ಇದರ ಬಗ್ಗೆ ಓದಬೇಡ, ಬರೆಯಬೇಡ, ಮೇಲೆತ್ತಬೇಡ, ಎಂದು ಹಟ ಹಿಡಿದಾಗ ಪ್ರಥಮ ಬಾರಿ ವಿಷಯ ದೊರಕಲಿಲ್ಲ. ಶ್ರೀ ಲಕ್ಷ್ಮಣ ವಾಗ್ಮೋರೆ ಅವರು ತಿಳಿ ಹೇಳಿದಾಗ ಅಜ್ಜಿ ನನಗೆ - 'ನಿನ್ನ ಕಣ್ಣು ಹೋದರೆ ನಾವೇನು ಜವಾಬ್ದಾರಳಲ್ಲ' ಎಂದು ಎಚ್ಚರಿಸಿ ಬಂಡೆಯತ್ತ ಹೋಗುವಲ್ಲಿ ಅನುಮತಿಯಿತ್ತಳು. ಪ್ರಾಯಶಃ ವ್ಯಕ್ತಿಯೋರ್ವನ ಸ್ಮಾರಕವಾಗಿರುವ ಶಾಸನದ ವಿವರ ಅಸ್ಪಷ್ಟ.)

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

* 'ಲಾಳಸಂಗಿ' ಸ್ಥಳನಾಮದ ಕುರಿತು ಆಲೋಚಿಸುವುದಾದರೆ ಲಾಳ ಎಂದರೆ ಲಾಟ ದೇಶವಲ್ಲ. ನಾಡಿನೊಳಗೆ ಕಲಹಗಳನ್ನು ನಿವಾರಿಸಿ, ಶಾಂತಿ ಸುವ್ಯವಸ್ಥೆ ಕಾಪಾಡುತ್ತಿದ್ದ 'ನಾಡಸಂಧಿವಿಗ್ರಹಿ' ಎಂಬ ಅಧಿಕಾರಿಯ ವಾಸದ ನೆಲೆ ಇದಾಗಿದ್ದಿರಬೇಕು ಅಥವಾ 'ಲಾಳಸಂಗವಿಗೆ' ಎಂಬ ವ್ಯಕ್ತಿಮಹತ್ವದ ಸಂಗತಿ ಸ್ಥಳನಾಮಕ್ಕೆ ಅಂಟಿಕೊಂಡಿರುವ ಸಾಧ್ಯತೆಯಿದೆ. (ನಾಡಸಂಧಿ ವಿಗ್ರಹಿ > ಲಾಳಸಂಧಿ ವಿಗ್ರಹಿ > ಲಾಳಸಂಗಿ ವಿಗ್ರಹಿ >; ಲಾಲ್ ಸಂಗವಿಗೆ > ಲಾಳ್ ಸಂಗವಿ > ಲಾಳಸಂಗಿ) ಎಂದು ಪರಿಭಾವಿಸಬಹುದು.

*೧. ಬಿ. ಎನ್. ಶ್ರೀ ಸತ್ಯನ್: (ಪ್ರ. ಸಂ.) **ಮೈಸೂರು ಸ್ಟೇಟ್ ಗ್ಯಾಜೆಟಿಯರ್**, ಬಿಜಾಪುರ ಡಿಸ್ಟ್ರಿಕ್ಟ್; ೧೯೬೬, ಪುಟ ೫೧೨, ೫೧೩.
*೨. ಡಾ। ಹಾ. ಮಾ. ನಾಯಕ (ಪ್ರ. ಸಂ.) **ಕನ್ನಡ ವಿಷಯ ವಿಶ್ವಕೋಶ** ಮೈಸೂರು ವಿಶ್ವವಿದ್ಯಾಲಯ, ೧೯೭೯, ಪುಟ, ೨೯೩.
*೩. ಡಾ। ಅ ಸುಂದರ ; ೧೯೯೫; **'ನಾಯಕರತ್ನ'**, ಶ್ರೀ ಬಿ. ಕೆ. ಗುಡದಿನ್ನಿ ಅವರ ಅಭಿನಂದನ ಗ್ರಂಥ - ೬೫ನೆಯ ವರ್ಧಂತಿ ಮಹೋತ್ಸವ ಸಮಿತಿ ವಿಜಾಪುರ; ವಿಜಾಪುರ ಜಿಲ್ಲೆಯ ಪ್ರಾಗಿತಿಹಾಸ ಲೇಖನ ನೋಡಿ.

### ಗ್ರಂಥ ಋಣ

* ಡಾ। ಶಿವರಾ ಕಾರಂತ : ೧೯೮೧ : **ಸಿರಿಗನ್ನಡ ಅರ್ಥಕೋಶ** : ಐಬಿಎಚ್ ಪ್ರಕಾಶನ, ಬೆಂಗಳೂರು.
* ಆರ್. ಎಫ್. ಕಿಟೆಲ್: ೧೮೯೪: **ಕನ್ನಡ ಇಂಗ್ಲೀಷ್ ಡಿಕ್ಷನರಿ** ಬಾಸೆಲ್ ಮಿಶನ್ ಬುಕ್ ಆ್ಯಂಡ್ ಟ್ರಾಕ್ಟ್ ಡೆಪೊಸಿಟರಿ, ಮಂಗಳೂರು
ಪವಾರ್ ವಿ. ಮಾಧವರ್ : ೧೯೮೮ : 'ಕರ್ನಾಟಕದಲ್ಲಿ ಮರಾಠ ಜನಾಂಗದ ಇತಿಹಾಸ', **ಇತಿಹಾಸ ದರ್ಶನ**, ಸಂಪುಟ, ೩ ಕರ್ನಾಟಕ ಇತಿಹಾಸ ಅಕಾದೆಮಿ (ರಿ), ಬೆಂಗಳೂರು - ಈ ಕೃತಿಗಳನ್ನು ಪರಾಮರ್ಶಿಸಿದೆ.
* ಶಾಸನ ಶೋಧ ಮತ್ತು ಓದುವಲ್ಲಿ ಮಾರ್ಗದರ್ಶನ ಮಾಡಿದ ಪೂಜ್ಯ ಗುರುಗಳಾದ ಡಾ. ಪಿ. ವಿ. ಕೃಷ್ಣಮೂರ್ತಿ, ಡಾ. ಕೆ. ಆರ್. ಗಣೇಶ್, ಡಾ. ರು. ಮ. ಷಡಕ್ಷರಯ್ಯ, ಡಾ. ಎಚ್. ಆರ್. ರಘುನಾಥ ಭಟ್ಟರವರನ್ನು ಸ್ಮರಿಸುವೆ. ನಾಗರಿ ಲಿಪಿಯ ಪಾಠ ತಿದ್ದಿ ಕೊಟ್ಟ ಶ್ರೀ ಎಂ. ವೈ. ಸಾಮಂತವರಿಗೆ ಕೃತಜ್ಞತೆಗಳು.

ಪ್ರೊ. ಬಿ. ರಾಜಶೇಖರಪ್ಪ *

# ವಿಚಿತ್ರ ಜಾಗದಲ್ಲಿ ದೇವರಾಯನ ಹೆಸರಿನ ಶಾಸನ

ಚಿತ್ರದುರ್ಗದ ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಪಕ್ಕದಲ್ಲಿರುವ ಮಠದಕುರುಬರಹಟ್ಟಿಗೆ ವಾಯವ್ಯದಲ್ಲಿ ಹರಡಿರುವ ಗುಡ್ಡಗಳಲ್ಲಿ **ಮಾತಾಡುವಕಲ್ಲು** ಎಂಬ ಹೆಸರಿರುವ ಒಂದು ಸಣ್ಣ ಗುಡ್ಡವಿದೆ. ಆದರ ಆಗ್ನೇಯ ಪಾರ್ಶ್ವದಲ್ಲಿ ನೆಲಮಟ್ಟದಿಂದ ಸ್ವಲ್ಪ ಮೇಲೆ ಹೋದರೆ, ಅಲ್ಲಿ ಬಂಡೆ ಗುಂಡುಗಳ ನಡುವೆ ಒಂದು ಇಕ್ಕಟ್ಟಾದ ಜಾಗ. ಅಲ್ಲಿ ನೆಲದಿಂದ ಮೇಲಕ್ಕೆ ಸುಮಾರು ೮-೧೦ ಅಡಿ ಎತ್ತರ ಇದ್ದ ಒಂದು ದೊಡ್ಡ ಬಂಡೆ*[೧] ಆ ಬಂಡೆಯ ಉತ್ತರ ಮೇಲ್ಮೈಯಲ್ಲಿ ಗುಡ್ಡಕ್ಕೆ (ಉತ್ತರ ದಿಕ್ಕಿಗೆ) ಅಭಿಮುಖವಾಗಿ ಕೊರೆಯಲಾದ ಶಾಸನವು ಅಡ್ಡ ಸುಮಾರು ೧೫ ಅಂಗುಲ, ಎತ್ತರ ೧೮ ಅಂಗುಲ ಅಳತೆಯ ಹರಹಿನಲ್ಲಿ ಇದ್ದು ಮೇಲೆ ಸೂರ್ಯ ಚಂದ್ರ, ಅವುಗಳ ಕೆಳಗೆ ಒಬ್ಬ ಪುರುಷ ವ್ಯಕ್ತಿ, ಇವುಗಳ ರೇಖಾ ಕೆತ್ತನೆಗಳನ್ನು ಹೊಂದಿದೆ. ಆ ಪುರುಷ ವ್ಯಕ್ತಿಯ ಚಾಚಿದ ಎಡತೋಳಿನಿಂದ ಮೇಲೆ, ಅಡ್ಡ ಸುಮಾರು ೩೨ ಅಂಗುಲ ಎತ್ತರ ೫ ಅಂಗುಲ ಈ ಹರಹಿನಲ್ಲಿ ಕ್ರಿ. ಶ. ಸುಮಾರು ೧೫ನೆಯ ಶತಮಾನಕ್ಕೆ ಸೇರುವ ಕನ್ನಡದ ಗುಂಡನೆಯ ಅಕ್ಷರಗಳ ಎರಡು ಪಂಕ್ತಿಗಳ ಶಾಸನವಿದು.

(ಈಗ್ಗೆ ಕೆಲವು ವರ್ಷಗಳ ಹಿಂದೆ ನಾನು ಪತ್ತೆ ಮಾಡಿದ ಈ ಶಾಸನ ಕುರಿತಾದ ಲೇಖನವಿದು.)

*ಶಾಸನದ ಪಾಠ*

೧ ಶ್ರೀಮಂನ್ಮಹಾರಾಜಾದಿರಾಜ ರಜಪರಮೇಶ್ವರ
೨ ಶ್ರೀ ವೀರಪ್ರತಾಪ ದೇವರಯ ಮಹರಯರು

ಈ ಶಾಸನದ ಪಾಠವನ್ನು ಗಮನಿಸಿದರೆ, ಇದು, 'ಮಹಾರಾಜಾಧಿರಾಜ', 'ರಾಜಪರಮೇಶ್ವರ', 'ವೀರಪ್ರತಾಪ' ಮುಂತಾಗಿ ವಿಶೇಷಿಸಲ್ಪಟ್ಟಿರುವ **ದೇವರಾಯ** ಎಂಬ ದೊರೆಯೊಬ್ಬನನ್ನು ಹೆಸರಿಸಿರುವುದು ಸ್ಪಷ್ಟವಾಗಿದೆ. ಇಷ್ಟು ಬಿಟ್ಟರೆ ಈ ಬರಹದಲ್ಲಿ ಇನ್ನಾವುದೇ ಹೆಚ್ಚಿನ ವಿವರ ಇಲ್ಲ. ಈಗಾಗಲೇ ಮೇಲೆ ತಿಳಿಸಿರುವಂತೆ ಈ ಶಾಸನ ಬರಹ ಕ್ರಿ. ಶ. ೧೫ನೆಯ ಶತಮಾನದ ಶೈಲಿಯಲ್ಲಿರುವುದರಿಂದ ಮತ್ತು ಮೇಲೆ ತಿಳಿಸಿದ ವಿಶೇಷಣಗಳಿಂದ, ಇದು ದೇವರಾಯ ಎಂಬ ಹೆಸರಿನ ವಿಜಯನಗರದ ಚಕ್ರವರ್ತಿಗಳಲ್ಲಿ ಒಬ್ಬನನ್ನು ಸೂಚಿಸುತ್ತದೆ ಎನ್ನುವುದು ಸ್ಪಷ್ಟ. ವಿಜಯನಗರ ಸಾಮ್ರಾಜ್ಯದ ಆ ಕಾಲದ ಇತಿಹಾಸದಲ್ಲಿ ದೇವರಾಯ ಎಂಬ ಹೆಸರಿನ ದೊರೆಗಳಿಬ್ಬರು ಬರುತ್ತಾರೆನ್ನುವುದು ಈಗಾಗಲೇ ತಿಳಿದ ಸಂಗತಿ. ಪ್ರಸ್ತುತ ಶಾಸನ ಹೆಸರಿಸುವುದು ಆ ಇಬ್ಬರು ದೊರೆಗಳಲ್ಲಿ ಯಾರನ್ನು ಎಂಬುದು ವಿಚಾರಣೀಯ.

*ಪುರುಷ ವ್ಯಕ್ತಿಯ ಚಿತ್ರ*

ಆ ಬಗ್ಗೆ ವಿಚಾರಣೆಗೆ ತೊಡಗುವ ಮೊದಲು ಈ ಬರಹದ ಬದಿಯಲ್ಲಿ ಕೊರೆಯಲಾಗಿರುವ ಪುರುಷ ವ್ಯಕ್ತಿಯ ಚಿತ್ರದ ಪರಿಶೀಲನೆ ಆವಶ್ಯಕ. ಬಲಗೈಯಲ್ಲಿ ಛತ್ರಿಯನ್ನು ಎಡಗೈಯಲ್ಲಿ ಕಲಶವನ್ನು ಹಿಡಿದು ನಡೆಯುತ್ತಿರುವವನಂತೆ ಚಿತ್ರಿಸಲ್ಪಟ್ಟಿರುವ ಈ ಪುರುಷ ಸ್ಥೂಲನೋಟಕ್ಕೆ ಬ್ರಾಹ್ಮಣರಿಗೆ ನೀಡಿದ ದಾನ ಶಾಸನಗಳಲ್ಲಿ ಮತ್ತು ದಾಸನದ ಭೂಮಿಯ ಸೀಮೆಕಲ್ಲುಗಳಲ್ಲಿ ಕಾಣುವ **ವಾಮನ** ಇರಬಹುದೇ ಎಂದು ಸಹಜವಾಗಿಯೇ



*ಕನ್ನಡ ಪ್ರಾಧ್ಯಾಪಕ, ಪ್ರಾಂಶುಪಾಲರು, ೨ನೇ ಅಡ್ಡರಸ್ತೆ (ಪಶ್ಚಿಮ), ಜೆ.ಸಿ.ಆರ್ ಬಡಾವಣೆ, ಚಿತ್ರದುರ್ಗ - ೫೭೭ ೫೦೧.



ಅನ್ನಿಸುತ್ತದೆ. ಈ ಅನಿಸಿಕೆಯ ಜೊತೆಗೆ ಈ ಶಾಸನ ಬರಹ, ದಾನಶಾಸನವಾಗಿ ಕೊರೆಸಲು ಉದ್ದೇಶಿತವಾಗಿ ಪೂರ್ಣಗೊಳಿಸದೆ ಇಷ್ಟಕ್ಕೇ ಬಿಟ್ಟಿರಬಹುದೇ ಎಂಬ ಅನಿಸಿಕೆಯೂ ಜೊತೆಗೂಡುತ್ತದೆ. ಈ ಚಿತ್ರ ವಾಮನನದಾದರೆ, ಈ ಬರಹ ಒಂದು ಅಪೂರ್ಣ ದಾನಶಾಸನ ಇರಬೇಕಾಗುತ್ತದೆ. ಈ ಬಗ್ಗೆ ವಾಸ್ತವಿಕ ಸಂಗತಿಯನ್ನು ಅರಿಯಲು ಪುರುಷ ವ್ಯಕ್ತಿಯ ಚಿತ್ರವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗುತ್ತದೆ. ವಾಮನ ಸಾಮಾನ್ಯವಾಗಿ ಬರಿದಲೆ, ಇಲ್ಲವೆ ತಲೆಯಲ್ಲಿ ಶಿಖೆ, ಬಲಗೈಯಲ್ಲಿ ಛತ್ರಿ, ಹೆಗಲಿಂದ ಕಕ್ಷದವರೆಗೆ ಯಜ್ಞೋಪವೀತ, ಸೊಂಟದಲ್ಲಿ ಕೌಪೀನ ಇಲ್ಲವೆ ದಟ್ಟಿಪಂಚೆ-ಹೀಗೆ ಇರುವಂತೆ ಚಿತ್ರಿತನಾಗಿರುತ್ತಾನೆ. ಆದರೆ ಇಲ್ಲಿಯ ವ್ಯಕ್ತಿ ತಲೆಯ ಮೇಲೆ ಸಣ್ಣ ಪಾಗು, ಬಲಗೈಯಲ್ಲಿ ಛತ್ರಿ, ಎಡಗೈಯಲ್ಲಿ ಕಲಶ, ಸೊಂಟದಲ್ಲಿ ಕಾಸೆಯನ್ನು ಹೋಲುವ ಉಡುಗೆ, ಕಿವಿಯಲ್ಲಿ ಕುಂಡಲದಂತಿರುವ ಕರ್ಣಾಭರಣ, ಕತ್ತು ಮುಂಗೈ ರಟ್ಟೆಗಳಲ್ಲಿ ಯಾವುದೇ ಸಣ್ಣ ಸರ ಅಥವಾ ಅಂಥ ತೊಡವು, ಹೀಗೆ ಇದ್ದು ಬರಿಗಾಲಿನಲ್ಲಿ ನಡೆಯುತ್ತಿರುವವನಂತೆ ಚಿತ್ರಿತನಾಗಿದ್ದಾನೆ. ಅಂದರೆ ಈತನಿಗೆ ಶಿಖೆ, ಯಜ್ಞೋಪವೀತಗಳಿಲ್ಲ ಎಂಬುದನ್ನು ಗಮನಿಸಬೇಕು. ಜೊತೆಗೆ ಬಾಯಿ ಗದ್ದ ಗಲ್ಲ ಕುತ್ತಿಗೆಗಳನ್ನು ನೋಡಿದರೆ, ಈತ ವಯಸ್ಸಿನಲ್ಲಿ ಹಿರಿಯನಾಗಿರುವ ವ್ಯಕ್ತಿ ಎಂಬಂತೆ ಚಿತ್ರಿತವಾಗಿರವುದು ಸಹ ಗಮನಕ್ಕೆ ಬರುತ್ತದೆ. ಈ ಎಲ್ಲ ಅಂಶಗಳಿಂದ ಈ ಚಿತ್ರ ವಾಮನನ್ನು ಹೋಲುವಂತಿದ್ದರೂ ವಾಮನಲ್ಲದ ಹಿರಿಯ ವಯಸ್ಸಿನ ವ್ಯಕಿಯೊಬ್ಬನ ಚಿತ್ರ ಎಂದು ಸ್ಫುಟವಾಗುತ್ತದೆ.

*ಎರಡೇ ಪಂಕ್ತಿಗಳ ಬರಹ*

ಎರಡೇ ಎರಡು ಪಂಕ್ತಿಗಳ ಇಲ್ಲಿಯ ಶಾಸನದಲ್ಲಿ ವಿಶೇಷಣಗಳೊಂದಿಗೆ ದೇವರಾಯ ದೊರೆಯ ಹೆಸರನ್ನು ಬಿಟ್ಟು ಇನ್ನೇನೂ ವಿವರಗಳಿಲ್ಲದಿರುವುದರಿಂದ, ಈ ಶಾಸನವನ್ನು ಹಾಕಿಸಿದ್ದು ಯಾರು? ಯಾವ ಉದ್ದೇಶಕ್ಕಾಗಿ? ಎಂಬುದು ಒಂದು ಒಗಟಾದರೆ, ಇಲ್ಲಿಯ ಚಿತ್ರದಲ್ಲಿ ದಾನ ಶಾಸನದ ವಾಮನನಿಂದ ಭಿನ್ನವಾಗಿರುವ ಈ ವ್ಯಕ್ತಿ ಯಾರು? ಎಂಬುದು ಇನ್ನೊಂದು ಒಗಟಾಗಿದೆ. ಇದಲ್ಲದೆ ಈ ಚಿತ್ರ-ಬರಹಗಳೆರಡೂ ಇಂಥ ಬಂಡೆಗಳ ಇಕ್ಕಟ್ಟಿನ ಜಾಗದಲ್ಲಿ ಕೊರೆಯಲ್ಪಟ್ಟಿರುವುದೇಕೆ? ಎಂಬುದು ಮತ್ತೊಂದು ಒಗಟೆನ್ನಬೇಕು. ಇಂತಹ ಸನ್ನಿವೇಶದಲ್ಲಿ ಸಂಭವನೀಯ ಸಂಗತಿ ಅಥವಾ ವಸ್ತುಸ್ಥಿತಿ ಏನಿರಬಹುದು ಎಂದು ಅಧ್ಯಯನಿಸಲು ಈ ಕೆಲವು ಅಂಶಗಳನ್ನು ಮನಸ್ಸಿಗೆ ತೆಗೆದು ಕೊಳ್ಳಬೇಕಾಗುತ್ತದೆ.

*(೧) ಈ ಶಾಸನ ದೊರೆಯೊಬ್ಬನನ್ನು ಹೆಸರಿಸಿರುವ ಎರಡೇ ಎರಡು ಪಂಕ್ತಿಗಳದಿದ್ದು, ಯಾವುದೇ ದಾನದ ಪ್ರಸ್ತಾಪವನ್ನು ತಿಳಿಸುವ ರೀತಿಯಲ್ಲಿ ಮುಂದುವರಿಯದೆ ಅಷ್ಟಕ್ಕೆ ಪೂರ್ಣ ಗೊಂಡಂತೆ ನಿಂತಿದೆ.*

*(೨) ದಾನಶಾಸನವಾಗಿ ಕೊರೆಸಲು ಉದ್ದೇಶಿತವಾಗಿದ್ದು ಅಪೂರ್ಣವಾಗಿರಬಹುದೇ ಎಂದು ಅನುಮಾನಿಸುವುದಕ್ಕೆ ವ್ಯತಿರಿಕ್ತವಾಗಿ, ಬರಹದ ಎರಡೂ ಪಂಕ್ತಿಗಳ ಆರಂಭಾಕ್ಷರ ಗಳಿಗೆ ಕೆಳಗೆ ಅದೇ ನೇರಕ್ಕೆ ಇತರ ಪಂಕ್ತಿಗಳನ್ನು ಕೆತ್ತಲಾಗದಂತೆ ಆ ವ್ಯಕ್ತಿಯ ಎಡತೋಳು ಶಾಸನ ಪಂಕ್ತಿಗಳ ಕೆಳಕ್ಕೆ ಅಡ್ಡಲಾಗಿ ಚಾಚಿಕೊಂಡಿರುವಂತೆ ಕೊರೆಯಲ್ಪಟ್ಟಿದೆ.*

*(೩) ಈ ಬರಹ ಮತ್ತು ಚಿತ್ರಗಳೆರಡೂ ಬಂಡೆಗಳ ನಡುವಿನ ಇಕ್ಕಟ್ಟಿನ ಒಂದು ವಿಲಕ್ಷಣ ಜಾಗದಲ್ಲಿ ಕೊರೆಯಲ್ಪಟ್ಟಿವೆ.*

*(೪) ಶಾಸನ ಬರಹ ದಾನ ಭೂಮಿಯನ್ನು ನಿರ್ದೇಶಿಸುವಂತೆ ಇಲ್ಲಿಯ ಯಾವ ಹೊಲದ ಕಡೆಗೂ ಅಭಿಮುಖವಾಗಿ ಕೊರೆಯಲ್ಪಡದೆ, ಬಂಡೆ ಗುಂಡುಗಳಿಂದ ತುಂಬಿರುವ ಗುಡ್ಡದತ್ತ ಅಭಿಮುಖವಾಗಿರುವಂತೆ ಕೊರೆಯಲ್ಪಟ್ಟಿದೆ.*

*(೫) ಇಲ್ಲಿಯ ಪುರುಷವ್ಯಕ್ತಿಯ ಚಿತ್ರ ವಾಮನನನ್ನು ಹೋಲು ವಂತಿದ್ದರೂ ವಾಮನನಿಗೆ ವಿಭಿನ್ನವಾದ ರೀತಿಯಲ್ಲಿ ಚಿತ್ರಿತವಾಗಿದೆ.*

ಈ ಎಲ್ಲ ಅಂಶಗಳಿಂದ ಈ ಬರಹ ಒಂದು ಅಪೂರ್ಣ ದಾನಶಾಸನವೆಂದಾಗಲಿ, ಇಲ್ಲಿಯ ಪುರುಷವ್ಯಕ್ತಿ ದಾನಶಾಸನಗಳಲ್ಲಿ ಸಾಮಾನ್ಯವಾಗಿ ಕಾಣುವ ವಾಮನವೆಂದಾಗಲಿ ತಿಳಿಯಲು ಆಗುವಂತಿಲ್ಲ. ಹಾಗಾದರೆ ಈಗಾಗಲೇ ನಾವು ನೋಡಿರುವಂತೆ,



ಇಲ್ಲಿಯ ಬರಹ ದೇವರಾಯ ಎಂಬ ವಿಜಯನಗರದ ಒಬ್ಬ ದೊರೆಯನ್ನು ಸೂಚಿಸಿದಂತೆ, ಇಲ್ಲಿಯ ಚಿತ್ರ ಕೂಡಾ ಆ ದೊರೆಯನ್ನೆ ಸೂಚಿಸುತ್ತಿರಬಹುದೆ? ಇದಲ್ಲದೆ ಇವೆರಡೂ, ಒಟ್ಟಾಗಿ ಏನನ್ನು ಸೂಚಿಸುತ್ತಿರಬಹುದು? ಈ ಬಗ್ಗೆ ವಿಚಾರ ಮಾಡಬೇಕಾಗಿದೆ.

***ಯಾರು ಈ ದೇವರಾಯ? ಏಕೆ ಈ ಶಾಸನ?***

ಮೊದಲನೆಯದಾಗಿ, ಈ ಶಾಸನದ ದೇವರಾಯ ವಿಜಯ ನಗರದ ಈ ಹೆಸರಿನ ಇಬ್ಬರು ದೊರೆಗಳಲ್ಲಿ ಯಾರು? ಎಂಬುದನ್ನು ನೋಡೋಣ. ವಿಜಯನಗರದ ಅರಸರಲ್ಲಿ, ಅದೂ ಅತ್ಯಲ್ಪ ಅಂತರದಲ್ಲಿ ಆ ಇಬ್ಬರು ದೇವರಾಯರೂ ಬರುತ್ತಾರೆ. ಕ್ರಿ.ಶ. ೧೪೦೬ ರಿಂದ ೧೪೨೨ ರವರೆಗೆ ಆಳಿದವನು ೧ನೇಯ ದೇವರಾಯನಾದರೆ, ಕ್ರಿ. ಶ ೧೪೨೪ರಿಂದ ೧೪೪೬ ರವರೆಗೆ ಆಳಿದವನು ೨ನೇಯ ದೇವರಾಯ ಎಂಬುದು ಬಹುತೇಕ ಇತಿಹಾಸಕಾರರ ತಿಳುವಳಿಕೆಯಾಗಿದೆ. ಈ ಇಬ್ಬರು ದೇವರಾಯರಲ್ಲಿ ಪ್ರಸ್ತುತ ಶಾಸನ ಒಬ್ಬನಿಗೆ ಸಂಬಂಧಿಸಿದ್ದು, ಅವನು ಈ ಸ್ಥಳಕ್ಕೆ ಪ್ರಾಯಶಃ ಬಂದಿದ್ದಾಗ ಇಲ್ಲಿಯ ಇಕ್ಕಟ್ಟಿನ ಜಾಗದಲ್ಲಿ ಏನೋ ಒಂದು ಘಟನೆ ಜರುಗಿ, ಅದರ ನೆನಪನ್ನು ಅದು ನಡೆದ ಸ್ಥಳದಲ್ಲೋ ಸೂಚ್ಯವಾಗಿ ಉಳಿಸಲು ಈ ಶಾಸನ ಹಾಕಿಸಿದ್ದಿರಬಹುದೆ? ಹಾಗಿದ್ದರೆ ಇಲ್ಲಿ ಜರುಗಿರಬಹುದಾದ ಆ ಘಟನೆ ಏನಿರಬಹುದು? ಈ ನಿಟ್ಟಿನಲ್ಲಿ ಪರಿಶೀಲಿಸುತ್ತ ಹೋದಾಗ ಈ ಶಾಸನ ಮತ್ತು ಚಿತ್ರ ಬಹುಶಃ ೧ನೇ ದೇವರಾಯನದ್ದಿದ್ದು, ಇಲ್ಲಿ ಜರುಗಿದ ಆ ಘಟನೆ ಅವನ ಮರಣವಿರಬಹುದೆ? ಎಂಬ ಸಂದೇಹ ಮೊಳೆಯುತ್ತದೆ.

ನಾವು ಈಗಾಗಲೇ ತಿಳಿದಿರುವಂತೆ ವಿಜಯನಗರದ ೨ನೇ ದೇವರಾಯನ ಮರಣವನ್ನು ತಿಳಿಸುವ ಎರಡು ಶಾಸನಗಳು ಶ್ರವಣಬೆಳಗೊಳದಲ್ಲಿ ಕಂಡುಬಂದಿವೆ*೨ ಅವುಗಳಲ್ಲಿ ಒಂದರ ಪಾಠ ಪೂರ್ಣವಿದ್ದು ಇನ್ನೊಂದರ ಪಾಠ ಅದರ ಪುನರಾವರ್ತನೆಯಾಗಿದ್ದು ಅಪೂರ್ಣವಾಗಿದೆ. ಪೂರ್ಣ ಪಾಠವಿರುವ ಶಾಸನದಿಂದ ಆ ದೊರೆ ಕ್ರಿ.ಶ. ೧೪೪೬ರ ಮೇ ತಿಂಗಳ ೨೪ನೆಯ ದಿನಾಂಕದಂದು ಮರಣಿಸಿದ್ದನೆಂದು ಸ್ಪಷ್ಟವಾಗುತ್ತದೆ. ಆದರೆ ೧ನೇ ದೇವರಾಯನ ಮರಣ ತಿಳಿಸುವ ಶಾಸನವಾಗಲಿ ಉಲ್ಲೇಖವಾಗಲಿ ಯಾವುದೂ ಈವರೆಗೆ ತಿಳಿದುಬಂದಂತಿಲ್ಲ. ಪ್ರಸ್ತುತ ಶಾಸನದ ದೇವರಾಯ ಎರಡನೆಯ ದೇವರಾಯನಿರದೆ, ೧ನೇ ದೇವರಾಯನಿರುವುದು ಸಂಭವನೀಯವಾಗಿ ಕಾಣುತ್ತದೆ. ಏಕೆಂದರೆ ೨ನೇ ದೇವರಾಯನ ಮಕ್ಕಳಲ್ಲಿ ಒಬ್ಬನಾದ ವೀರ ಮಲ್ಲಣ್ಣ ಒಡೆಯನು ಕ್ರಿ. ಶ. ೧೫ನೇ ಶತಮಾನದ ಆದಿಭಾಗದಲ್ಲಿ ಚಿಮ್ಮತ್ತನಕಲ್ಲ ಪಟ್ಟಣ (ಹಿಂದಿನ ಚಿತ್ರದುರ್ಗ)ದಲ್ಲಿ ಮಹಾಮಂಡಳೇಶ್ವರನಾಗಿ ಆಳುತ್ತಿದ್ದನು. ಈ ಸಂಗತಿ ಚಿತ್ರದುರ್ಗದ ಬೆಟ್ಟದ ಮೇಲಿರುವ ಹಿಡಿಂಬೇಶ್ವರ ದೇವಾಲಯದೊಳಗಿರುವ ಕ್ರಿ.ಶ. ೧೪೧೧ರ ಶಾಸನದಿಂದ ಸ್ಪಷ್ಟವಾಗಿದೆ*೪.

ಆ ಶಾಸನದಲ್ಲಿ ವೀರ ಮಲ್ಲಣ್ಣ ಒಡೆಯನನ್ನು **'ಶ್ರೀ ಮಂಮ್ಮಹರಾಜ್ಯಾಧಿರಾಜ್ಯ ರಾಜ್ಯಪರಮೇಸ್ವರ ಶ್ರೀ ವೀರಪ್ರತಾಪ ದೇವರಾಯ ಮಹಾರಾಯರ ಕುಮಾರ .....'** ಎಂದು ಹೆಸರಿಸಲಾಗಿದೆ. ಇಲ್ಲಿ ದೇವರಾಯನ ಬಗೆಗೆ ಬಳಸಿರುವ ವಿಶೇಷಣಗಳೇ ಪ್ರಸ್ತುತ ಶಾಸನದಲ್ಲೂ ಬಂದಿರುವುದನ್ನು ಕಾಣಬಹುದು. ಈ ವೀರಮಲ್ಲಣ್ಣ ಒಡೆಯನು ತನ್ನ ತಾಯಿ ಮಲ್ಲವ್ವೆಗೆ ಪರದಲ್ಲಿ ಸುಕ್ರುತವಾಗಬೇಕೆಂದು ಚಿತ್ರದುರ್ಗಗಕ್ಕೆ ಮೂಡಣದಿಕ್ಕಿನಲ್ಲಿರುವ ಹಳ್ಳಿಗಳಲ್ಲೊಂದಾದ ಕುಂಬೆಗನ ಹಳ್ಳಿಯನ್ನು ತನ್ನ ತಾಯಿಯ ಹೆಸರಲ್ಲಿ **ಮಲ್ಲಪುರ** ಎಂದು ಮರುನಾಮಕರಣ ಮಾಡಿ, ಹಿಡಿಂಬೇಶ್ವರ ದೇವರಿಗೆ ದತ್ತಿಯಾಗಿ ನೀಡಿದ್ದನ್ನು ಆ ಶಾಸನ ತಿಳಿಸುತ್ತದೆ. ತಮ್ಮ ಮನೆತನಕ್ಕೆ ಸಂಬಂಧಿಸಿದ ಇಂಥ ಧಾರ್ಮಿಕ ಚಟುವಟಿಕೆಯ ಸಂದರ್ಭದಲ್ಲಿ ಮತ್ತು ಇತರ ಕೆಲವು ಸಂದರ್ಭಗಳಲ್ಲಿ ತನ್ನ ಮಗ ಹಾಗೆಯೇ ಪ್ರಾಯಶಃ ಪತ್ನಿ ಇರುತ್ತಿದ್ದ ಚಿತ್ರದುರ್ಗಕ್ಕೆ ಚಕ್ರವರ್ತಿಯಾದ ೧ನೇ ದೇವರಾಯ ವಿಜಯನಗರದಿಂದ ಬಂದು ಹೋಗಿರುವ ಸಾಧ್ಯತೆ ಇದೆ. ಅದೇ ರೀತಿ ೨ನೇ ದೇವರಾಯನ ರಕ್ತ ಸಂಬಂಧಿಗಳು ಇಲ್ಲಿದ್ದು ಅವನು ಇಲ್ಲಿಗೆ ಬಂದು ಹೋಗಿರುವ ಸಾಧ್ಯತೆ ಕಾಣುವುದಿಲ್ಲ.ಆದುದರಿಂದ ಪ್ರಸ್ತುತ ಶಾಸನ ಸೂಚಿಸುತ್ತಿರುವುದು ೧ನೇ ದೇವರಾಯ ದೊರೆಯನ್ನು ಎಂಬುದು ಸಂಭವನೀಯವಾಗಿ ಕಾಣುತ್ತದೆ.

೧ನೇ ದೇವರಾಯ ಕ್ರಿ. ಶ. ೧೪೨೨ರವರೆಗೆ ಇದ್ದಂತೆ ತಿಳಿದುಬಂದಿರುವುದದಾದರೂ ಅವನು ಮರಣಿಸಿದ್ದು ಎಲ್ಲಿ? ಹೇಗೆ? ಎಂದು? ಈ ಯಾವ ಸಂಗತಿಯೂ ಸದ್ಯದವರೆಗೆ ನಿರ್ದಿಷ್ಟವಾಗಿ ತಿಳಿದಿರುವುದಿಲ್ಲ. ಈ ದೊರೆ ಚಿತ್ರದುರ್ಗಕ್ಕೆ ಬಂದಿದ್ದಾಗ ಈ ಪ್ರಸ್ತುತ ಶಾಸನವಿರುವ ಬಂಡೆಯ ಇಕ್ಕಟ್ಟಿನ ಸ್ಥಳಕ್ಕೆ ಬಂದಿದ್ದು ಅಲ್ಲಿ ಅವನ ಸಾವು ಏನೋ ಬಂದು ಕಾರಣಕ್ಕೆ ಸಂಭವಿಸಿದ್ದಿರಬಹುದೆ? ಎಂದು ಶಂಕೆಯುಂಟಾಗುತ್ತದೆ. ವಿಜಯನಗರದದಂಥ ದೊಡ್ಡ ಸಾಮ್ರಾಜ್ಯದ ದೊರೆಯೊಬ್ಬ ಇಂಥ ಸ್ಥಳಕ್ಕೆ ಬರಲು ಕಾರಣವಾಗುವಂಥ ಅಂಶವಾದರೂ ಏನಿರಬಹುದು? ಈ ಪ್ರಶ್ನೆ ಮನಸ್ಸನ್ನು ಕಾಡುತ್ತದೆ.

ವಿಜಯನಗರದ ಇತಿಹಾಸದಲ್ಲಿ ೧ನೇ ದೇವರಾಯನ ಬಗ್ಗೆ ನೋಡುವಾಗ ಅವನ ಕಡೆಯ ದಿನಗಳು ಹೇಗಿದ್ದಿರಬಹುದೆಂಬ ಬಗ್ಗೆ ಒಂದು ಚಿತ್ರ ನಮಗೆ ದೊರೆಯುತ್ತದೆ ಬಹಮನಿ ಸುಲ್ತಾನರೊಡನೆ ಆದ ಕೆಲವು ಯುದ್ಧಗಳ ಪರಿಣಾಮದಿಂದ ಅವನು ಮಾನಸಿಕವಾಗಿ ನರಳಿದ್ದ. ಹಾಗಾಗಿ ಪಾರಲೌಕಿಕದ ಕಡೆಗೆ ಆಸಕ್ತನಾಗಿದ್ದ ಎಂಬ ಚಿತ್ರ ಅಲ್ಲಿ ನಮಗೆ ಸಿಗುತ್ತದೆ. ಇದನ್ನು ಮನಸ್ಸಿಗೆ ತೆಗೆದುಕೊಂಡು ನೋಡಿದರೆ, ತನ್ನ ಮಗನಿದ್ದ ಚಿತ್ರದುರ್ಗಕ್ಕೆ ಕೊನೆಗಾಲದಲ್ಲಿ ಅವನು ಬಂದಿದ್ದಾಗ, ಕಾರಣಾಂತರದಿಂದ ಈ ಬಂಡೆಗಳ ಇಕ್ಕಟ್ಟಿನ ಸ್ಥಳಕ್ಕೆ ಬಂದಾಗ ಆಕಸ್ಮಿಕವಾಗಿ ಅವನು ಇಲ್ಲಿ ಮೃತ್ಯುವಶನಾಗಿರಬಹುದೆ? ಈ ಹಿನ್ನಲೆಯಿಂದ ನೋಡಿದಾಗ, ಇಲ್ಲಿಯ ಚಿತ್ರದ ಪುರುಷ ಇಳಿಯವಸ್ಸಿನವನಿದ್ದು, ಛತ್ರಿ ಅಲ್ಪ

ತೊಡವು ಮತ್ತು ಅಲ್ಪ ವಸ್ತ್ರಧಾರಿಯಾಗಿದ್ದು ಪಾರಲೌಕಿಕದತ್ತ ಆಸಕ್ತನಾಗಿರುವವನಂತೆ ಕಾಣುವುದರಿಂದ ಇವನು ೧ನೇ ದೇವರಾಯನೇ ಏಕಾಗಿರಬಾರದು? ಎನ್ನಿಸುತ್ತದೆ. ಲೌಕಿಕ ಜೀವನಕ್ಕೆ ವಿಮುಖವಾಗಿ ಪಾರಮಾರ್ಥಿಕ ಜೀವನವನ್ನು ಅಪ್ಪಿಕೊಂಡು ಈ ಸ್ಥಳದಲ್ಲೇ ನಿಂತು ಬಹುಶಃ ಧ್ಯಾನವನ್ನು ಆಚರಿಸುತ್ತಲೋ, ಪ್ರಾಯೋಪವೇಶ ಸ್ವೀಕರಿಸಿಯೋ ಅವನು ಇಲ್ಲಿ ಮರಣಿಸಿರ ಬಹುದೆ? ಎಂಬ ಶಂಕೆ ದೃಢವಾಗುತ್ತ ಹೋಗುತ್ತದೆ. ಅಂಥ ದೊರೆಯೊಬ್ಬನ ಸಾವು ಇಂಥ ವಿಲಕ್ಷಣ ಜಾಗದಲ್ಲಿ ಆಗಿರಬಹುದುದಾದ ಕಾರಣಕ್ಕೋ ಏನೋ ಸಾವಿನ ಬಗ್ಗೆ ಏನನ್ನೂ ಬರೆಯಲೂ ವಿವರಿಸಲೂ ಉದ್ಗರಿಸಲೂ ಮನಸ್ಸಾಗದೆ, ಅದನ್ನು ಕೇವಲ ಇಂಥ ಚಿತ್ರ ಬರಹಗಳ ಮೂಲಕ ಸಾಂಕೇತಿಕವಾಗಿ ಸೌಮ್ಯೋಕ್ತಿರೂಪದಲ್ಲಿ ಸೂಚ್ಯವಾಗಿಸಿರಬಹುದೆ? ಈ ಚಿತ್ರ ಬರಹಗಳನ್ನು ನೋಡಿದರೆ ಮೇಲಿನ ಸಂಗತಿ ಅಸಂಭವನೀಯ ಎನ್ನಿಸುವುದಿಲ್ಲ.

ಪ್ರಸ್ತುತ ಶಾಸನ ೧ನೇ ದೇವರಾಯನ ಸಾವನ್ನೂ ಸಾವಿನ ಸ್ಥಳವನ್ನೂ, ಈ ಚಿತ್ರ ಕೊನೆಗಾಲದಲ್ಲಿದ್ದ ಅವನನ್ನೂ ಸೂಚಿಸುತ್ತವೆ ಎಂದಾದರೆ, ಈ ಶಾಸನದ ಕಾಲ ಕ್ರಿ. ಶ, ೧೪೨೨ ಎಂದೂ ಇದನ್ನು ಅವನ ಮಗ ವೀರಮಲ್ಲಣ್ಣ ಒಡೆಯನು ಹಾಕಿಸಿರ ಬಹುದೆಂದೂ ತಿಳಿಯಬೇಕಾಗುತ್ತದೆ. ಇದರಿಂದ ಈ ಚಿತ್ರ ಬರಹ ಮತ್ತು ಈ ಸ್ಥಳ ವಿಜಯನಗರದ ಚಕ್ರವರ್ತಿಯೊಬ್ಬನು ಗತಿಸಿದುದರ ಬಹು ಮುಖ್ಯ ಐತಿಹಾಸಿಕ ಸ್ಮಾರಕವಾಗಿ ಪರಿಗಣಿತವಾಗುತ್ತದೆ. ಆದರೆ ಒಂದು ದುರ್ದೈವದ ಸಂಗತಿ ಏನೆಂದರೆ ಇಂಥ ಅಮೂಲ್ಯವಾದ ಈ ಚಿತ್ರ ಬರಹಗಳೆರಡೂ ಈಗ್ಗೆ ಕೆಲಕಾಲದ ಹಿಂದೆ ನಮ್ಮ ಪಾಲಿಗೆ ಶಾಶ್ವತವಾಗಿ ಕಳೆದುಹೋಗಿವೆ. ಸರ್ಕಾರಿ ಅಧಿಕಾರಿಗಳು ಹಿಂದು ಮುಂದು ನೋಡದೆ, ಗ್ರಾನೈಟ್ ಗಣಿಗಾರಿಕೆಗೆ ಗುತ್ತಿಗೆ ನೀಡುತ್ತಿರುವುದರಿಂದ ಅಮೂಲ್ಯ ಸ್ಮಾರಕಗಳು ಕಳೆದು ಹೋಗುತ್ತಿರುವ ದುರಂತ ಪರಿಣಾಮಕ್ಕೆ ಇದೊಂದು ನಿದರ್ಶನ ಮಾತ್ರ. ಆದರೆ ಇಲ್ಲಿಯ ಬಂಡೆಗಳೆಲ್ಲ ಇದ್ದಾಗ, ಈ ಶಾಸನ ಚಿತ್ರ ಮತ್ತು ಇಕ್ಕಟ್ಟಿನ ಜಾಗ ಇವುಗಳ ಛಾಯಚಿತ್ರಗಳನ್ನು ತೆಗೆದಿದ್ದುದರಿಂದ ಅವುಗಳಲ್ಲಾದರೂ ಇವು ನಮ್ಮ ಪಾಲಿಗೆ ಉಳಿದುಕೊಂಡಿವೆ ಎಂಬುದೇ ಸಮಾಧಾನ.



(ಈ ಶಾಸನವನ್ನು ಓದಲೆಂದು ನನ್ನನ್ನು ಕರೆದೊಯ್ದು ಇದನ್ನು ತೋರಿಸಿ ನೆರವಾದ ಮಠದ ಕುರುಬರಹುಟ್ಟಿಯ ಬೊಮ್ಮೇನಹಳ್ಳಿ ಚಂದ್ರಪ್ಪನವರಿಗೆ ನಾನು ಕೃತಜ್ಞನಾಗಿದ್ದೇನೆ.)

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. ಆ ಬಂಡೆ ಇದ್ದದ್ದು ಆ ಗುಡ್ಡದ ಬುಡದಲ್ಲಿ, ಗೌಡರ ಗೋವಿಂದಣ್ಣ ಎಂಬುವರ ಹೊಲದ ಉತ್ತರ ಮೇರೆಯ ಉತ್ತರಕ್ಕೆ ಸ್ವಲ್ಪ ಮೇಲೆ.
*೨. ಎ. ಕ. ಸಂಪುಟ ೨ (ಹೊಸ ಆವೃತ್ತಿ ೧೯೭೩); ಕಅಸಂ, ಮೈವಿವಿ, ಮೈಸೂರು; ಶ್ರ. ಬೆ. ೪೪೫(೩೨೮) ಮತ್ತು ೪೪೭ (೩೩೦).
*೩. ಎ. ಕ. ಸಂಪುಟ ೧೧ (ಹಳೆಯ ಆವೃತ್ತಿ ೧೯೦೩);ಚಿತ್ರದುರ್ಗ ೧೪.

ಡಾ| ಎಚ್. ಎಸ್. ಗೋಪಾಲರಾವ್*

# ತಮಿಳುನಾಡಿನಲ್ಲಿ ವಿಜಯನಗರದ ಅರಸರ ಕನ್ನಡ ಶಾಸನಗಳು

ಹೊಯ್ಸಳ ಸಾಮ್ರಾಜ್ಯವು ಅವನತಿಯ ದಿಕ್ಕಿನಲ್ಲಿ ಸಾಗಿದ್ದಾಗ, ದಕ್ಷಿಣದ ಹಲವು ರಾಜ್ಯಗಳ ಮೇಲೆ ಮುಸಲ್ಮಾನರ ದಾಳಿ ಹೆಚ್ಚುತ್ತಿದ್ದಾಗ, ಇಡಿಯಾಗಿ ದಕ್ಷಿಣ ಭಾರತವನ್ನು ಒಗ್ಗೂಡಿಸಿ ಆಳುವ ಕನಸು ಕಂಡು, ಅದನ್ನು ಬಹುಪಾಲು ನನಸು ಮಾಡಿಕೊಂಡವರು ವಿಜಯನಗರದ ಅರಸರು. ಅವರ ವಿರೋಧವು ಮುಸಲ್ಮಾನ್ ದಾಳಿಕೋರರ ದಾಳಿಗೆ ಮಾತ್ರ ಸೀಮಿತವಾಗಿತ್ತು. ಅವರಿಗೆ ದಕ್ಷಿಣ ಭಾರತವು ಎಂದೂ ಇಡಿಯಾಗಿ ಒಂದು ರಾಜಮನೆತನದ ಆಳ್ವಿಕೆಗೆ ಸೇರಿರಲಿಲ್ಲ. ಹಿಂದೂ ರಾಜ್ಯ ಪ್ರತಿಷ್ಠಾಪನಾಚಾರ್ಯರೆಂದು ಹೆಸರಾದ ವಿಜಯನಗರದ ಅರಸರನ್ನು ಹಿಂದೂ ರಾಯ ಸುರತ್ರಾಣರೆಂದೂ ಕರೆಯಲಾಗಿದೆ. ಬಿಜಾಪುರ, ಬೀದರ್, ಗುಲಬರ್ಗಾ ಮತ್ತು ರಾಯಚೂರು ಭಾಗಗಳನ್ನು ಬಿಟ್ಟರೆ ಉಳಿದಂತೆ ಸಾಮಾನ್ಯವಾಗಿ ಇಡೀ ದಕ್ಷಿಣ ಭಾರತವನ್ನು ಒಂದು ಮಾಡಿ ಆಳಿದವರು ವಿಜಯನಗರದ ಅರಸರು. ಹಿಂದೂ ರಾಯ ಸುರತ್ರಾಣರೆಂದು ಕರೆಸಿಕೊಂಡರೂ ಸಹ ಇಸ್ಲಾಂ ಧರ್ಮವೂ ಸೇರಿದಂತೆ, ಬಹುತೇಕ ಎಲ್ಲಾ ಧರ್ಮಗಳನ್ನೂ ಸಮಾನವಾಗಿ ಕಂಡ ಉದಾರಿಗಳು ಅಥವಾ ಧರ್ಮ ಸಹಿಷ್ಣುಗಳು ವಿಜಯನಗರದ ಅರಸರು. ಈಗಿನ ತಮಿಳುನಾಡು, ಆಂಧ್ರಪ್ರದೇಶ, ಕೇರಳ ಮತ್ತು ಬಹುಪಾಲು ಕರ್ನಾಟಕದ ಪ್ರಾಂತ್ಯಗಳನ್ನೊಳಗೊಂಡ ಪ್ರದೇಶವನ್ನು ದೀರ್ಘಕಾಲ ಆಳಿದವರು ವಿಜಯನಗರದ ಅರಸರು. ಆ ಹೊತ್ತಿಗಾಗಲೇ ಬಹುಭಾಷಾ ಪ್ರದೇಶವಾಗಿದ್ದ ವಿಜಯನಗರ ಸಾಮ್ರಾಜ್ಯದಲ್ಲಿ ಆಯಾಯಾ ಪ್ರದೇಶಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿದ್ದ ಭಾಷೆಯನ್ನು ಶಾಸನಗಳಲ್ಲಿ ಬಳಸಲಾಗಿದೆ. ಆದ್ದರಿಂದಲೇ ಈಗಿನ ರಾಜ್ಯ ವ್ಯವಸ್ಥೆಯಲ್ಲಿನ ಗಡಿ ಭಾಗಗಳಲ್ಲಿ ಎರಡು ಭಾಷೆಗಳ ಬಳಕೆಯನ್ನು ಕಾಣಬಹುದು ಅಥವಾ ಈಗಿನ ಕರ್ನಾಟಕದ ಭಾಗಗಳಲ್ಲಿ ತೆಲುಗು ಭಾಷೆಯನ್ನೂ, ಆಂಧ್ರದ ಭಾಗಗಳಲ್ಲಿ ಕನ್ನಡ ಭಾಷೆಯನ್ನೂ, ಅಂತೆಯೇ ತಮಿಳುನಾಡಿನಲ್ಲೂ ಕನ್ನಡ ಮತ್ತು ತೆಲುಗು ಭಾಷೆಯ ಶಾಸನಗಳನ್ನು ಕಾಣಬಹುದು. ಇದರಲ್ಲಿ ವಿಸ್ಮಯದ ವಿಚಾರಗಳೇನಿಲ್ಲ. ಆಯಾ ಪ್ರದೇಶದಲ್ಲಿ ವಾಸ ಮಾಡುವ ಜನರ ಭಾಷೆಯಲ್ಲಿ ಆಳುವ ವರ್ಗದವರು ವ್ಯವಹರಿಸಿ, ತಮ್ಮ ವಿಚಾರಗಳನ್ನು ದಾಖಲು ಮಾಡಿ ತಾವು ಆಡಳಿತದಲ್ಲಿ ಎಷ್ಟು ಪಾರದರ್ಶಕವಾಗಿದ್ದರು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಈಗಿನ ತಮಿಳುನಾಡಿನಲ್ಲಿ ವಿಜಯನಗರದ ಅರಸರ ಕಾಲದ ಸುಮಾರು ೪೫ ಕನ್ನಡ ಶಾಸನಗಳನ್ನು ಗುರುತಿಸಲಾಗಿದೆ. ಇನ್ನೂ ಹಲವು ಶಾಸನಗಳಿರಬಹುದಾದರೂ, ಸದ್ಯಕ್ಕೆ ಇಷ್ಟು ಶಾಸನಗಳಂತೂ ಲಭ್ಯವಿವೆ. ಇವುಗಳಲ್ಲಿ ಕೆಲವು ದ್ವಿಭಾಷಾ ಶಾಸನಗಳು. ಇಂತಹ ದ್ವಿಭಾಷಾ ಶಾಸನಗಳನ್ನು ತೀರ್ಥಕ್ಷೇತ್ರಗಳಲ್ಲಿ ಕಾಣಬಹುದು. ಕೆಲವು ಶಾಸನಗಳ ಭಾಷೆಯು ಒಂದೇ ಆಗಿದ್ದು, ಲಿಪಿ ಮಾತ್ರ ಬೇರೆ ಆಗಿರುವ ಸಾಧ್ಯತೆಗಳೂ ಇವೆ. ಹೊಯ್ಸಳ ರಾಮನಾಥನ ಸಮಯಾವರಂ ಶಾಸನದ[೧] ನಂತರ ನಮಗೆ ದೊರಕುವ ಶಾಸನವು ವಿಜಯನಗರದ, ಸಂಗಮ ವಂಶದ ಬುಕ್ಕಣ್ಣ ಒಡೆಯ ಅಂದರೆ ಒಂದನೆಯ ಬುಕ್ಕನ ಮಗ ಕುಮಾರ ಕಂಪಣನದು. ಈಗಿನ ಕಡಲೂರು ಜಿಲ್ಲೆಯ, ಅದೇ ತಾಲ್ಲೂಕಿನ ತಿರುವಡಿಯಲ್ಲಿ ದೊರೆತಿರುವ ಈ ಶಾಸನದ ಕಾಲ ಕ್ರಿ. ಶ. ೧೩೭೦[೨]. ತಮಿಳುನಾಡಿನಲ್ಲಿ ಸದ್ಯಕ್ಕೆ ಲಭ್ಯವಿರುವ ವಿಜಯನಗರದ ಅರಸರ ಕಾಲದ ಮೊದಲ ಕನ್ನಡ ಶಾಸನವು ಇದೇ ಆಗಿದೆ. ಈ ಶಾಸನವು ವೀರ ಬುಕ್ಕಣ್ಣ ಒಡೆಯನ ಮಗ ಕುಮಾರ ಕಂಪಣವೊಡೆಯನ ಮನ್ನೆಯ ದುಗ್ಗಣದೇವರು, ಪೂಜಾ ಕೈಂಕರ್ಯಗಳು ನಿಂತು ಹೋಗಿದ್ದ ತಿರುವಡಿಯ ಮೊದಲೀಶ್ವರಮೊಡೆಯ ನಾಯನಾರ್ ದೇವರ ಅಂಗರಂಗ ಭೋಗಕ್ಕೆ ಅಮೃತಪಡಿಗೆ ಕೀಳೆ ಆಣೆಂಜಿ ಗಾಡಿ ಪಟ್ಟಣಕ್ಕೆ ಸೇರಿದ ಸಾತಿಪಟು ಗ್ರಾಮ ದತ್ತಿಯನ್ನು ಸ್ಥಾನಿಕರ ವಶಕ್ಕೆ ನೀಡಿರುವ ವಿವರಗಳನ್ನು ದಾಖಲಿಸಿದೆ. ಈ ಕಂಪಣನು ಆಳ್ವಿಕೆ ನಡೆಸಿದಂತೆ ತೋರುವುದಿಲ್ಲ. ಆದರೆ ಆಡಳಿತದಲ್ಲಿ ಬಹು ಪ್ರಭಾವಶಾಲಿಯಾಗಿದ್ದಂತೆ ತೋರುತ್ತದೆ. ವೀರ ಹರಿಯಪ್ಪ ಒಡೆಯ ಅಂದರೆ ಎರಡನೆಯ ಹರಿಹರನ ಆಳ್ವಿಕೆಯ ಕಾಲದ ಕಾಲದ ಎರಡು ಶಾಸನಗಳು ಧರ್ಮಪುರಿ ಜಿಲ್ಲೆಯ, ಹೊಸೂರು ತಾಲ್ಲೂಕಿನ ಹೊಸೂರಿನಲ್ಲೂ[೩], ಒಂದು ಶಾಸನವು ಈರೋಡ್ ಜಿಲ್ಲೆಯ, ಗೋಪಿ ಚೆಟ್ಟಿಪಾಳ್ಯ ತಾಲೂಕಿನ ಎರಡನಹಳ್ಳಿಯಲ್ಲೂ[೪] ದೊರೆತಿವೆ. ಇವುಗಳಲ್ಲಿ ಎರಡನೆಯ ಶಾಸನವು ಹರಿಯಪ್ಪ ಒಡೆಯನ ಪ್ರಧಾನಿ ಮುದೆಯನಾಯಕ ಎನ್ನುವವನು ದೇವಾಲಯಗಳಿಗೆ ನೀಡಿದ ದಾನವನ್ನು ಉಲ್ಲೇಖಿಸಿದರೆ, ಮೂರನೆಯ ಶಾಸನವು ಚಿಕ್ಕ ತಮ್ಮ ಎಂಬುವವನು ಕೊಡಲಿಯಿಂದ ಕಳ್ಳರೊಡನೆ ಹೋರಾಡಿ ಅವರನ್ನು ಕೊಂದು, ನಂತರ ತಾನೂ ಸತ್ತ ಘಟನೆಯನ್ನು ಪ್ರಸ್ತಾಪಿಸಿದೆ. ಈ ವೀರಗಲ್ಲು ಶಾಸನವನ್ನು ಅವನ ತಮ್ಮ ಕೇತಣ್ಣ ಹಾಕಿಸಿದ್ದಾನೆ. ಧರ್ಮಪುರಿ ಜಿಲ್ಲೆಯ, ಹೊಸೂರು ತಾಲ್ಲೂಕಿನ ಬೆನಿಕ್ಕಲ್‌ನಲ್ಲಿ[೫] ದೊರೆತಿರುವ ದೇವರಾಯ ಒಡೆಯ, ಅಂದರೆ ಮೊದಲನೆಯ ದೇವರಾಯನ ಆಳ್ವಿಕೆಯ ಅವಧಿಯ ಒಂದು

* 'ಸ್ವಸ್ತಿ ಶ್ರೀ ಸ್ಕಂದ' ಅರಿಶಿನಕುಂಟೆ, ನೆಲಮಂಗಲ ತಾ. ೫೬೨ ೧೨೩.

ಶಾಸನವು, ಅಸ್ಪಷ್ಟವಾಗಿ ದಾನವೊಂದನ್ನು ದಾಖಲಿಸಿದೆ. ಎರಡನೆಯ ಹರಿಹರನ ಆಳ್ವಿಕೆಯ ಕಾಲದ ಒಂದು ತಾಮ್ರ ಶಾಸನವು ತಿರುಚಿನಾಪಳ್ಳಿ ಜಿಲ್ಲೆಯ ಮತ್ತು ಅದೇ ತಾಲ್ಲೂಕಿನ, ಪ್ರಸಿದ್ಧ ಶ್ರೀವೈಷ್ಣವ ತೀರ್ಥ ಕ್ಷೇತ್ರವಾದ ಶ್ರೀರಂಗಂನಲ್ಲಿ ದೊರೆತಿದೆ[೬]. ಶಾಸನದಲ್ಲಿ ವೀರಪ್ರತಾಪದೇವರಾಯರ ಕುಮಾರ ವೀರಪ್ರತಾಪ ಹರಿಹರರಾಯ ಎಂದು ಸಂಬೋಧಿತನಾಗಿರುವ ಈತನು ಎರಡನೆಯ ಹರಿಹರ ಎಂದು ಒಪ್ಪಿಕೊಳ್ಳಬಹುದು. ಆದರೆ, ಉಲ್ಲೇಖಿತ ಕಾಲದಲ್ಲಿ ಆಳುತ್ತಿದ್ದವನು ಒಂದನೆಯ ದೇವರಾಯ. ಆದ್ದರಿಂದ ಕಾಲದ ಉಲ್ಲೇಖ ಅಥವಾ ರಾಜನ ಹೆಸರನ್ನು ಅನುಮಾನಿಸಬೇಕಾಗುತ್ತದೆ. ಅದೇ ಸ್ಥಳದ ಮತ್ತೊಂದು ಶಾಸನವು[೭] ವೀರಪ್ರತಾಪದೇವರಾಯನನ್ನು ಉಲ್ಲೇಖಿಸಿದ್ದು, ಉಕ್ತವಾದ ಕಾಲವು ಅವನ ಆಳ್ವಿಕೆಗೆ ಖಚಿತವಾಗಿ ಸೇರುತ್ತದೆ. ಆದ್ದರಿಂದ ಯಾವ ಅನುಮಾನವೂ ಇಲ್ಲದೆ ಆ ಶಾಸನ ಇಮ್ಮಡಿ ದೇವರಾಯನ ಹೆಸರಿಗೆ ಸೇರಿಸಬಹುದುದಾಗಿದೆ. ಕಡಲೂರು ಜಿಲ್ಲೆಯ ಮತ್ತು ಅದೇ ತಾಲೂಕಿನ ತಿರುಮಾಣಿಕುಳಿಯ ಒಂದು ಶಾಸನ[೮] ಮತ್ತು ತಿರುವಳ್ಳಂ (ತಿರುವಳ್ಳೂರು) ಜಿಲ್ಲೆಯ, ಡೆಂಕಣಿಕೋಟೆ ತಾಲೂಕಿನ ಕೆಲಮಂಗಲದ ಒಂದು ಶಾಸನ[೯] ಇವು ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲಕ್ಕೇ ಸೇರುತ್ತವೆ. ತಿರುಮಾಣಿಕುಳಿಯ ಶಾಸನವು, ಮಾದಪ್ಪ ಎಂಬ ಅಧಿಕಾರಿಯು ರಾಜನ ಹೆಸರಿನಲ್ಲಿ ತಿರುಮಾಣಿ ಕುಳಿಯ ಸ್ಥಾನದ ದೇವರಿಗೆ ಅಂಗಭೋಗ, ಅಮೃತಪಡಿ ಮುಂತಾದ ಪೂಜಾ ಕೈಂಕರ್ಯಗಳಿಗಾಗಿ ತಿರುಮಾಣಿಕುಳಿ ಗ್ರಾಮವನ್ನು ದತ್ತಿ ಬಿಟ್ಟಿರುವುದನ್ನು ದಾಖಲಿಸಿದ್ದರೆ, ಕೆಲಮಂಗಲದ ಶಾಸನವು ಕುಮಾರ ದೇವರಾಯನ ಆಳ್ವಿಕೆಯನ್ನು ಉಲ್ಲೇಖಿಸಿ, ಮಲ್ಲಿಕಾರ್ಜುನನಿಗೆ ಅರಸು ಪಟ್ಟಸಿಗಲಿ ಎಂದೋ ಏನೋ ವೀರಪ್ಪಣ್ಣ ಗೌಡ ಎಂಬುವವನಿಗೆ ನೀಡಿರಬಹುದಾದ ದಾನ ಅಥವಾ ಮತ್ತೇನನ್ನೋ ಅಸ್ಪಷ್ಟವಾಗಿ ಉಲ್ಲೇಖಿಸುತ್ತದೆ. ಶಾಸನವು ಅಪೂರ್ಣವಾಗಿರುವುದರಿಂದ ಹೆಚ್ಚು ವಿವರಣೆಗೆ ಅವಕಾಶ ಇಲ್ಲವಾಗಿದೆ. ಧರ್ಮಪುರಿ ಜಿಲ್ಲೆಯ, ಕೃಷ್ಣಗಿರಿ ತಾಲೂಕಿನ ಕುಪ್ಪಂನ ಒಂದು ಶಾಸನವು[೧೦] ಪ್ರೌಢ ದೇವರಾಯನ ಆಳ್ವಿಕೆಯನ್ನು ಉಲ್ಲೇಖಿಸಿದೆ. ಕೇವಲ ಪರಾಭವ ಸಂವತ್ಸರದ ಉಲ್ಲೇಖವಿರುವದರಿಂದ, ಕಾಲದ ಬಗ್ಗೆ ಅನುಮಾನ ವ್ಯಕ್ತಪಡಿಸಲು ಅವಕಾಶಗಳಿವೆ. ಶಾಸನದ ಕಾಲವು ಕ್ರಿ.ಶ. ೧೪೨೬ ಕೂಡಾ ಆಗಿರುವ ಸಾಧ್ಯತೆ ಇದೆ. ಅದೇ ಧರ್ಮಪುರಿ ಜಿಲ್ಲೆಯ ಉತ್ತಂಗರೈ ತಾಲೂಕಿನ ಕುನ್ನತ್ತೂರಿನ ಒಂದು ಶಾಸನವು[೧೧], ಪ್ರೌಢ ದೇವರಾಯನನ್ನು ಉಲ್ಲೇಖಿಸುತ್ತಿದ್ದು, ಶಾಸನದಲ್ಲಿ ಉಕ್ತವಾಗಿರುವ ಕಾಲವು ಕ್ರಿ.ಶ. ೧೪೪೯ಕ್ಕೆ ಸರಿಹೋಗುವುದರಿಂದ, ಈ ಶಾಸನವನ್ನು ಇಮ್ಮಡಿ ದೇವರಾಯನ ಕಾಲದ್ದೆಂದು ತಿಳಿದರೆ ತಪ್ಪಾಗಲಾರದು. ತಿರುವಳ್ಳಂ ಜಿಲ್ಲೆಯ ಹರೂರು ತಾಲ್ಲೂಕಿನ ತೀರ್ಥಮಲೈನ ಒಂದು ಶಾಸನದ[೧೨] ಉಕ್ತ ಕಾಲವು ಕ್ರಿ.ಶ. ೧೪೭೩ಕ್ಕೆ ಸರಿಹೊಂದುತ್ತಿದ್ದು, ಅದರಲ್ಲಿ ವೀರಪ್ರತಾಪ ದೇವರಾಯ ವಿರೂಪಾಕ್ಷರಾಯ, ಅಂದರೆ ಮೂರನೆಯ ವಿರೂಪಾಕ್ಷನನ್ನು ಪ್ರಸ್ತಾಪಿಸಲಾಗಿದೆ. ಅದೇ ಶಾಸನವು, ಮಹಾ ಅರಸು ಎಂದೂ ಕರೆಸಿಕೊಳ್ಳುವ, ಮಹಾ ಮಂಡಲೇಶ್ವರ ಕಠಾರಿ ನರಸಿಂಗನ ಕಾರ್ಯಕೆ ಕರ್ತರಾದ ಈಶ್ವರ ನಾಯಕ ಮುತ್ತಿತ್ತರರನ್ನು ಉಲ್ಲೇಖಿಸುತ್ತದೆ. ಕಡಲೂರು ಜಿಲ್ಲೆಯ, ಅದೇ ತಾಲೂಕಿನ ತಿರುವಡಿಯ ಒಂದು ಶಾಸನವು ಕ್ರಿ. ಶ. ೧೪೭೩ಕ್ಕೆ ಸೇರಿದ್ದು, ಇದರಲ್ಲಿ ಸಾಳುವ ನರಸಿಂಗ ದೇವ ಮಹಾ ಅರಸುವಿನ ಪ್ರಸ್ತಾಪವಿದೆ[೧೩]. ಮೇಲಿನ ಎರಡೂ ಶಾಸನಗಳಲ್ಲಿ ಪ್ರಸ್ತಾಪಿತನಾಗಿರುವ ಸಾಳುವ ನರಸಿಂಗನಾಯಕನು ಒಬ್ಬನೇ ಎಂದು ತಿಳಿದರೆ ತಪ್ಪಾಗಲಾರದು. ಡೆಂಕಣಿಕೋಟೆ ತಾಲೂಕಿನ ಕುಮ್ಮಲಂನಲ್ಲಿರುವ ಒಂದು ಶಾಸನವು[೧೪] ಪ್ರತಾಪ ದೇವರಾಯನನ್ನು ಉಲ್ಲೇಖಿಸುತ್ತಿದ್ದು, ಇವನನ್ನು ಸಂಗಮ ವಂಶದ ಮಲ್ಲಿಕಾರ್ಜುನನಿಗೆ ಸಮೀಕರಿಸಬಹುದಾಗಿದೆ. ಶಾಸನದಲ್ಲಿ ಕಾಲದ ಉಲ್ಲೇಖ ಖಚಿತವಾಗಿರುವುದರಿಂದ ಇಲ್ಲಿ ಹೆಸರಿಸಲ್ಪಟ್ಟಿರುವ ಪ್ರತಾಪ ದೇವರಾಯನು, ಮೂರನೆಯ ದೇವರಾಯ ಎಂದು ತಿಳಿಯಬಹುದಾಗಿದೆ. ಈವರೆಗೆ ತಿಳಿದಿರವಂತೆ ಇವನ ಆಳ್ವಿಕೆಯ ಕಾಲವು ಕ್ರಿ,ಶ. ೧೪೪೬ರಿಂದ ೧೪೬೫. ತಿರುವಳ್ಳಂ ಜಿಲ್ಲೆಯ ಡೆಂಕಣಿಕೋಟೆ ತಾಲ್ಲೂಕಿನ, ಗುಮ್ಮಳಾಪುರದ ಒಂದು ಶಾಸನವು[೧೫], ಶ್ರೀ ವಿರಪ್ರತಾಪ, ಶ್ರೀ ನರಸಿಂಹದೇವರಾಯನನ್ನು ಉಲ್ಲೇಖಿಸಿ, ಅವನು ವಿದ್ಯಾನಗರದ ಸ್ಥಿರ ಸಿಂಹಾಸನಾರೂಢನಾಗಿದ್ದನೆಂದು ತಿಳಿಸುತ್ತದೆ. ಈ ನರಸಿಂಹ ದೇವನು ಸಾಳುವ ಮನೆತನದ ಒಂದನೆಯ ನರಸಿಂಹ ಇರಬೇಕು. ಆದ್ದರಿಂದ ಈ ಕಾಲವು ಆಡಳಿತದಲ್ಲಿ ಬದಲಾವಣೆಗಳು ಆದ ಕಾಲ ಎಂದು ತಿಳಿಯಬಹುದು. ನಮಗೆ ತಿಳಿದಿರುವಂತೆ ಸಾಳುವ ನರಸಿಂಹನು ಅಧಿಕಾರಕ್ಕೆ ಬಂದದ್ದು ಕ್ರಿ.ಶ. ೧೪೮೫ರಲ್ಲಿ; ಆದರೆ ಗುಮ್ಮಳಾಪುರದ ಶಾಸನವು ಸಾಳುವ ನರಸಿಂಹನ ಆಳ್ವಿಕೆಯ ಕಾಲವನ್ನು ಇನ್ನೂ ೧೧ ವರ್ಷಕ್ಕೆ ಮೊದಲೇ ಆರಂಭಿಸಿದೆ. ಈ ಮೇಲೆ ಪ್ರಸ್ತಾಪಿಸಿರುವ ತೀರ್ಥಮಲೈ ಮತ್ತು ತಿರುವಡಿಯ ಶಾಸನಗಳು ಸಾಳುವ ನರಸಿಂಗನಾಯಕನ ಹೆಸರನ್ನು ಪ್ರಸ್ತಾಪಿಸಿವೆ. ತಿರುವಳ್ಳಂ ಜಿಲ್ಲೆಯ, ಧರ್ಮಪುರಿ ತಾಲೂಕಿನ ಕೂತ್ತಪಾಡಿಯ ಎರಡು ಶಾಸನಗಳು ಸಾಳುವ ವೀರಭುಜಬಲರಾಯನನ್ನು ಪ್ರಸ್ತಾಪಿಸಿವೆ. ಎರಡೂ ಶಾಸನಗಳ ಕಾಲ ಕ್ರಿ.ಶ. ೧೫೦೯. ಮೊದಲ ಶಾಸನದಲ್ಲಿ[೧೬] ವೀರಭುಜಬಲ ಎಂಬ ಹೆಸರಿನ ಜೊತೆಗೆ 'ರಾಯ' ಸೇರ್ಪಡೆ ಆಗಿದೆ. ಆದರೆ, ಎರಡನೆಯ ಶಾಸನದಲ್ಲಿ[೧೭] ಕಠಾರಿ ಸಾಳುವ ವೀರಭುಜಬಲ ಎಂದಷ್ಟೇ ಇದೆ. ಆದರೂ ಶಾಸನಗಳಲ್ಲಿ ಪ್ರಸ್ತಾಪಿತರಾಗಿರುವ, ಬಹುತೇಕ ಆ ಭಾಗದ ಆಡಳಿತ ಮುಖ್ಯಸ್ಥನಾದವನ ಹೆಸರು ತಿಪ್ಪರಸಯ್ಯ ಎಂದೇ ಇರುವುದರಿಂದ ಇವೆರಡೂ ಶಾಸನಗಳು ಒಬ್ಬ ರಾಜನ ಕಾಲಕ್ಕೇ ಸೇರುತ್ತವೆ ಎಂದು ತಿಳಿಯಬಹುದು. ಅಲ್ಲದೆ, ಎರಡೂ

ಶಾಸನಗಳಲ್ಲಿ ಕಾಲದ ಉಲ್ಲೇಖ ಸ್ಪಷ್ಟವಾಗಿದೆ. ಮೊದಲ ಶಾಸನದ ಕಾಲವು ೧೫೦೯ರ ಆಗಸ್ಟ್ ೧೬ ಮತ್ತು ಎರಡನೆಯ ಶಾಸನದ ಕಾಲವು ಕ್ರಿ.ಶ. ೧೫೦೯ರ ಆಗಸ್ಟ್, ೩೧. ಆ ಸಂದರ್ಭದಲ್ಲಿ, ಕೇವಲ ಹದಿನೈದು ದಿನಗಳ ಅಂತರದಲ್ಲಿ ಯಾವುದೇ ಬದಲಾವಣೆ ಆದ ಮಾಹಿತಿ ಇಲ್ಲ. ಆದ್ದರಿಂದ ಈ ಎರಡೂ ಶಾಸನಗಳೂ ವೀರಭುಜಬಲರಾಯನಿಗೇ ಸೇರುತ್ತವೆ. ಅದೂ ಸಹ ಅಲ್ಲೇ, ಪ್ರಸ್ತಾಪಿತವಾಗಿರುವಂತೆ ಸಾಳುವ ವಂಶಕ್ಕೇ ಸಂಬಂಧಿಸಿವೆ. ಆದರೆ, ಕ್ರಿ.ಶ. ೧೫೦೫ ವೇಳೆಗೆ ಸಾಳುವ ವಂಶದವರ ಆಳ್ವಿಕೆ ಮುಗಿದು, ತುಳುವ ವಂಶದವರ ಆಳ್ವಿಕೆ ಆರಂಭವಾಗಿತ್ತು. ಅಲ್ಲದೆ, ಅದು ತುಳುವ ವಂಶದ ವೀರನರಸಿಂಹನ ಆಳ್ವಿಕೆಯ ಕೊನೆಯ ವರ್ಷವೂ ಹೌದು. ಆದ್ದರಿಂದ ಈ ಶಾಸನದಲ್ಲಿ ಉಲ್ಲೇಖಿತವಾದ ಕಾಲ ಅಥವಾ ರಾಜನ ಹೆಸರು, ಇವೆರಡರಲ್ಲಿ ಯಾವುದೋ ಒಂದು ಸರಿಯಲ್ಲವಾದ್ದರಿಂದ, ಈ ಬಗ್ಗೆ ಚರ್ಚೆಯಂತೂ ಅವಶ್ಯಕ ಎನಿಸುತ್ತದೆ. ಈ ಶಾಸನಗಳಲ್ಲಿ ಉಲ್ಲೇಖಿತನಾಗಿರುವ ದೊರೆಯು ಸಾಳುವ ವಂಶದ ಎರಡನೆಯ ನರಸಿಂಹನೇ ಆಗಿರಬೇಕು. ಆದರೆ ಉಲ್ಲೇಖಿತ ಕಾಲವು ತುಳುವ ಮನೆತನದ ವೀರನರಸಿಂಹನ ಕಾಲಕ್ಕೆ ಸೇರುತ್ತದೆ.

ಕ್ರಿ.ಶ. ೧೫೦೫ ಎಂದು ತಿಳಿಯಲಾಗಿರುವ, ಆದರೆ ಉಲ್ಲೇಖಿತ ಕಾಲದ ವಿವರಗಳು ಸರಿಹೊಂದದ ಕಾಂಜೀವರಂನ ಒಂದು ಶಾಸನವು*[೧೮] ಕನ್ನಡ ಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿದ್ದರೂ, ದಾನದ ಭಾಗ ಮಾತ್ರ ಕನ್ನಡ ಭಾಷೆಯಲ್ಲೇ ಇದೆ. ಇದರಲ್ಲಿ ಕೃಷ್ಣರಾಯ ಮಹಾರಾಯನು ತನ್ನ ತಂದೆ ನರಸಣ್ಣನಾಯಕ, ತಾಯಿ ನಾಗಲಾದೇವಿ ಮತ್ತು ತನಗೆ ಧರ್ಮವಾಗಲಿ ಎಂದು, ವರದರಾಜಸ್ವಾಮಿ ದೇವಾಲಯದ ಪುಣ್ಯಕೋಟಿ ವಿಮಾನಕ್ಕೆ ಲೋವೆಯಿಂದ ಕಳಸದವರೆಗೆ ಪೂರ್ಣವಾಗಿ ಚಿನ್ನದ ಹೊದಿಕೆಯನ್ನು ಹಾಕಿಸಿದ್ದನ್ನು ದಾಖಲಿಸಿದೆ. ತಿರುವಳ್ಳಂ ಜಿಲ್ಲೆಯ, ಹೊಸೂರು ತಾಲ್ಲೂಕಿನ ಗಂಗನಹಳ್ಳಿಯ ಒಂದು ಶಾಸನವು*[೧೯], ಅಪೂರ್ಣ ಎನಿಸುತ್ತದೆ. ಆದರೂ ಈ ಶಾಸನದಲ್ಲಿ ಉಕ್ತವಾಗಿರುವ ಕಾಲವು ಸ್ಪಷ್ಟವಾಗಿದ್ದು, ಕೃಷ್ಣರಾಯನಿಗೆ ಎರಡು ಅಪರೂಪದ ವಿಶೇಷ ಬಿರುದುಗಳು ಸೇರಿಕೊಂಡಿವೆ. ಅವುಗಳೆಂದರೆ, 'ಕಠಾರಿ ಸಾಳುವ' ಮತ್ತು 'ಇಮ್ಮಡಿ'. ಇದು ಲಿಪಿಕಾರನ ದೋಷ ಎನ್ನಬಹುದಾದರೂ, ಇಂತಹ ಮತ್ತು ಈ ಹಿಂದೆ ಪ್ರಸ್ತಾಪಿಸಿರುವ ಸಾಳುವ ಮನೆತನದ ಎರಡನೆಯ ನರಸಿಂಹ, ತುಳುವ ಮನೆತನದ ವೀರನರಸಿಂಹ ಇವರ ವಿಚಾರವಾಗಿ ಗೊಂದಲವನ್ನು ಸೃಷ್ಟಿಸುವ ಶಾಸನಗಳ ಹಿನ್ನಲೆಯಲ್ಲಿ ಈ ಭಾಗದ ಜನತೆಗೆ, ಅದರಲ್ಲೂ ಬರಹ ಬಲ್ಲ ಜನತೆಗೂ ಸಹ ಆಳುವ ಅರಸನ ಮನೆತನ ಮತ್ತು ಬಿರುದು ಇತ್ಯಾದಿಗಳು ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಇರಲಿಲ್ಲವೆ ಎಂಬ ಅನುಮಾನಗಳು ಕಾಡುತ್ತವೆ. ರಾಜಧಾನಿಯಿಂದ ದೂರವಾಗಿರುವ ಜನತೆಗೆ ಬಹುತೇಕ ವಿಚಾರಗಳು ಖಚಿತವಾಗಿ ಅಥವಾ ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ ಎನಿಸುತ್ತದೆ. ತಿರುವಳ್ಳಂ ಜಿಲ್ಲೆಯ, ಪೊನ್ನೇರಿ ತಾಲೂಕಿನ, ನಾಗಲಾಪುರಂನ ವೇದನಾರಾಯಣ ಸ್ವಾಮಿ ದೇವಾಲಯದಲ್ಲಿನ ಒಂದು ಶಾಸನವು*[೨೦] ಕೃಷ್ಣದೇವರಾಯನ ಆಳ್ವಿಕೆಯ ಕಾಲಕ್ಕೇ ಸೇರಿದ್ದು ಅದರಲ್ಲಿ ಕೆಲವು ದಾನಗಳ ಪ್ರಸ್ತಾಪವಿದೆ. ಈ ಶಾಸನದ ಕಾಲ ಕ್ರಿ.ಶ. ೧೫೨೯. ಇದೇ ಶಾಸನವು ಅದೇ ದೇವಾಲಯದ ಮತ್ತೊಂದು ಸ್ಥಳದಲ್ಲಿ ಸಹ ದಾಖಲಾಗಿದೆ*[೨೧]. ಅಚ್ಯುತ ದೇವರಾಯನ ಕಾಲದ ಸುಮಾರು ಎಂಟು ಶಾಸನಗಳು ಲಭ್ಯವಿದ್ದು ಇದರಲ್ಲಿ ಮೊದಲನೆಯದು, ಕಾಂಜೀವರಂನ ಅರುಳಾಳ್ - ಪೆರುಮಾಳ್ ದೇವಾಲಯದಲ್ಲಿದೆ*[೨೨]. ಈ ದೇವಾಲಯದಲ್ಲೇ ಅಚ್ಯುತದೇವರಾಯನ ಇನ್ನೂ ಮೂರು ಶಾಸನಗಳಿವೆ. ಇವುಗಳಲ್ಲಿ ಕೆಲವು ಪ್ರತಿಗಳಾಗಿಯೂ ಬರೆಯಲ್ಪಟ್ಟಿವೆ. ಅಲ್ಲಿಯದೇ ಒಂದು ಶಾಸನವು*[೨೩] ಅಚ್ಯುತ ದೇವರಾಯನ ಪಟ್ಟಾಭಿಷೇಕದ ದಿನದಂದೂ ಅವನು ಕಂಚಿಯ ದೇವರುಗಳಿಗೆ ನೀಡಿದ ದಾನಗಳನ್ನು ದಾಖಲಿಸಿದೆ. ಈ ಶಾಸನದಿಂದ ಅಚ್ಯುತದೇವರಾಯನು ೨೧-೧೦-೧೫೨೯ರ ಗುರುವಾರದಂದು ಪಟ್ಟಾಭಿಷಿಕ್ತನಾದನೆಂದು ತಿಳಿಯುತ್ತದೆ. ಈಗಾಗಲೇ, ಪ್ರಸ್ತಾಪಿತವಾಗಿರುವ ಶ್ರೀ ಕೃಷ್ಣದೇವರಾಯನ ಆಳ್ವಿಕೆಯ ಅವಧಿಯ ಶಾಸನವು, ದೇವರ ಕೈಂಕರ್ಯಗಳಿಗೆ ನೀಡಿದ ದಾನಗಳ ವಿವರ ನೀಡಿದೆ ಮತ್ತು ಇದರ ಕಾಲ ೧೩-೧-೧೫೨೯. ಶ್ರೀರಂಗಂನ ಒಂದು ಶಾಸನವು ಕಾಂಜೀವರಂನ ಕೆಲವು ಶಾಸನಗಳ ಪ್ರತಿಗಳು ನಾಗರಿ ಲಿಪಿಯಲ್ಲಿರುವುದೊಂದು ವಿಶೇಷ ಎನ್ನಬಹುದು. ಅಚ್ಯುತದೇವರಾಯನ ಆಳ್ವಿಕೆಯನ್ನು ಉಲ್ಲೇಖಿಸುವ ಶ್ರೀರಂಗಂನ ಒಂದು ಶಾಸನದ ಕಾಲ ೧೯-೧-೧೫೨೯. ೧೩-೧-೧೫೨೯ ಎಂದು ಕೃಷ್ಣದೇವರಾಯನ ಆಳ್ವಿಕೆಯ ಕಾಲ ದೊರೆತರೆ, ೧೯-೧-೧೫೨೯ ಅಚ್ಯುತದೇವರಾಯನ ಆಳ್ವಿಕೆಯ ಉಲ್ಲೇಖ ಬರುತ್ತದೆ. ಅಂದರೆ, ಈ ಎರಡು ದಿನಗಳ ನಡುವೆ ಯಾವುದೋ ಒಂದು ದಿನ ಅನಧಿಕೃತವಾಗಿ ಅಧಿಕಾರದ ಹಸ್ತಾಂತರ ಆಗಿರಬೇಕು. ಆದರೆ, ಅಚ್ಯುತ ದೇವರಾಯನಿಗೆ, ಅಧಿಕೃತವಾಗಿ ಪಟ್ಟಾಭಿಷೇಕ ಆದದ್ದು ೧೨-೧೦-೧೫೨೯ರಂದು. ಅಧಿಕೃತ ಪಟ್ಟಾಭಿಷೇಕಕ್ಕೆ ಇಷ್ಟು ಅಂದರೆ ಸುಮಾರು ಒಂಭತ್ತು ತಿಂಗಳ ವಿಳಂಬ ಏಕಾಯಿತು ಎಂದು ತಿಳಿಯಲು ಅವಕಾಶಗಳಿವೆ. ಕ್ರಿ.ಶ. ೧೫೨೦ರ, ಅಧಮಾನ್‌ಕೋಟೆಯ ಒಂದು ಶಾಸನವು*[೨೪] ಅಚ್ಯುತದೇವರಾಯನ ಆಳ್ವಿಕೆಯ ಕಾಲದಲ್ಲೇ ಕೆಲವು ಸುಂಕಗಳಿಗೆ ಕಟ್ಟಳೆಯನ್ನು ಮಾಡಿ, ಖಿಲವಾಗಿದ್ದ ಸಂತೆಯನ್ನು ಪುನರಾರಂಭಿಸಿದ ವಿವರಗಳನ್ನು ನೀಡುತ್ತದೆ. ಈ ಶಾಸನದಲ್ಲಿ ಅಚ್ಯುತದೇವರಾಯನಿಗೆ ಇಮ್ಮಡಿ ಎಂಬ ಪೂರ್ವಪದ ಸೇರ್ಪಡೆ ಆಗಿದೆ. ಇದಕ್ಕೆ ಕಾರಣಗಳು ಸ್ಪಷ್ಟವಿಲ್ಲ. ಈರೋಡ್ ಜಿಲ್ಲೆಯ, ಗೋಪಿಚೆಟ್ಟಿಪಾಳ್ಯಂ ತಾಲೂಕಿನ ಎರಗನಹಳ್ಳಿಯ ಎರಡು ಶಾಸನಗಳು*[೨೫] ಒಂದೇ ದಿನಾಂಕಕ್ಕೆ

ಸೇರಿವೆ. ಇವೆರಡೂ ಶಾಸನಗಳು ಭೂಮಿದಾನವನ್ನು ದಾಖಲಿಸಿವೆ. ಅದೇ ಊರಿನ ಮತ್ತೊಂದು ಶಾಸನವು[೨೬], ಅಚ್ಯುತದೇವರಾಯನ ಕಾಲದ ಮತ್ತೊಂದು ಭೂಮಿದಾನವನ್ನು ಪ್ರಸ್ತಾಪಿಸಿದೆ. ಕಾಂಜೀವರಂ ಜಿಲ್ಲೆಯ, ಅದೇ ತಾಲೂಕಿನ ಮತ್ತು ಅದೇ ಊರಿನ ಐದು ಶಾಸನಗಳು[೨೭] ಅಚ್ಯುತದೇವರಾಯನ ಆಳ್ವಿಕೆಯ ಕಾಲಕ್ಕೇ ಸೇರುತ್ತವೆ. ಇವುಗಳಲ್ಲಿ ಎರಡು ಶಾಸನಗಳ ಕಾಲ ೩೦-೫-೧೫೩೨, ಒಂದು ಶಾಸನದ ಕಾಲ ೨೮-೭-೧೫೩೨ ಮತ್ತು ಇನ್ನೆರಡು ಶಾಸನಗಳು ೪-೩-೧೫೩೪ಕ್ಕೆ ಸೇರುತ್ತವೆ. ಮೊದಲ ಎರಡು ಮತ್ತು ಕೊನೆಯ ಎರಡು ಶಾಸನಗಳಲ್ಲಿ ಒಂದೊಂದು ಶಾಸನಗಳು ಪ್ರತಿಗಳಾಗಿವೆ. ಆದರೆ ಈ ಎರಡೂ ಪ್ರತಿಗಳೂ ನಾಗರೀ ಲಿಪಿ ಹಾಗೂ ಕನ್ನಡ ಭಾಷೆಯಲ್ಲಿವೆ. ೧೫೩೨ರ ಶಾಸನವು, ಅಚ್ಯುತದೇವರಾಯನ ರಾಜಕೀಯ ಸಾಧನೆಗಳನ್ನು ದಾಖಲಿಸಿದ ನಂತರ, ರಾಜನು ರಾಣಿ ವರದಾದೇವಿ ಮತ್ತು ರಾಜಕುಮಾರ ವೆಂಕಟಾದ್ರಿ ಅವರುಗಳ ಸಹಿತ ವರದ ರಾಜದೇವರ ಸನ್ನಿಧಿಯಲ್ಲಿ ತುಲಾಪುರುಷ ಮಹಾದಾನಗಳನ್ನು ಮಾಡಿ, ಹಲವು ದಾನಗಳ ಜೊತೆಗೆ ೧೭ ಗ್ರಾಮಗಳನ್ನು ದತ್ತಿ ಬಿಟ್ಟ ವಿಷಯವನ್ನು ದಾಖಲಿಸಿವೆ. ೪-೩-೧೫೩೪ರ ಶಾಸನವು, ಅಚ್ಯುತದೇವರಾಯನ ಪಟ್ಟಾಭಿಷೇಕದ ದಿನಾಂಕವನ್ನು ದಾಖಲಿಸುತ್ತಾ (೨೧-೧೦-೧೫೨೯), ವರದರಾಜ ಸ್ವಾಮಿ ಮತ್ತು ಏಕಾಂಬರನಾಥ ಸ್ವಾಮಿ ದೇವರುಗಳಿಗೆ ಸಮ ಪ್ರಮಾಣದಲ್ಲಿ ದತ್ತಿಗಳನ್ನು ಬಿಟ್ಟು ಕುಂದಿದ್ದ ಗ್ರಾಮ ದಾನಗಳನ್ನು ಸರಿಪಡಿಸಿದ್ದನ್ನು ತಿಳಿಸುತ್ತವೆ. ಕೊನೆಯ ಶಾಸನವು, ಈ ಶಾಸನದ ಪ್ರತಿಯೇ ಆಗಿದ್ದು ಅದರ ಭಾಷೆ ಕನ್ನಡವಾದರೂ ಲಿಪಿಯ ನಾಗರಿ ಆಗಿದೆ. ಶ್ರೀರಂಗಂಗೆ ಅಚ್ಯುತರಾಯ ಬಂದಿದ್ದುದನ್ನು ಶ್ರೀರಂಗಂನ ೧೮-೭-೧೫೩೩ರ ಒಂದು ಶಾಸನವು ದಾಖಲಿಸಿದೆ[೨೮]. ಕ್ರಿ.ಶ. ೧೫೩೯ರ ಹೊಸೂರಿನ[೨೯] ಮತ್ತು ಎರಗಳಹಳ್ಳಿಯ[೩೦] ಶಾಸನಗಳು ಅಚ್ಯುತರಾಯನ ಆಳ್ವಿಕೆಯ ಕಾಲಕ್ಕೆ ಸೇರಿದ್ದು ಅನಂತರ ಅವನ ಉಲ್ಲೇಖವಿರುವ ಕನ್ನಡ ಶಾಸನಗಳಿಲ್ಲ. ಕ್ರಿ.ಶ. ೧೫೪೨ರಿಂದ ೧೫೭೦ರವರೆಗೆ ಆಳಿದ ಸದಾಶಿವನ ಎರಡು ಶಾಸನಗಳು ಈರೋಡ್ ಜಿಲ್ಲೆಯ, ಧಾರಪುರಂನಲ್ಲಿವೆ. ಅವುಗಳಲ್ಲಿ ಮೊದಲನೆಯ ಶಾಸನವು ೨೭-೪-೧೫೪೯ಕ್ಕೆ ಸೇರಿದ್ದು[೩೧], ಎರಡನೆಯ ಶಾಸನದ ಕಾಲವು ೧೦-೯-೧೫೫೧[೩೨]. ಅದು ಧಾರಾಪುರದ ಚಾವಡಿಗೆ ಸಲುವ ಇಪ್ಪತ್ತನಾಲ್ಕು ನಾಡುಗಳೊಳಗಿನ ಕೆಲವು ವೃತ್ತಿಗಳನ್ನು ಪ್ರಸ್ತಾಪಿಸಿದೆ. ಕಾರಿಮಂಗಲಂನ[೩೩] ೨೪-೧೨-೧೫೫೭ನೆಯ ದಿನಾಂಕದ, ಸದಾಶಿವರಾಯನ ಆಳ್ವಿಕೆಯ ಒಂದು ಶಾಸನವು ಅವನ ಅಳಿಯ ರಾಮರಾಜ ಅಯ್ಯನನ್ನು ಉಲ್ಲೇಖಿಸುತ್ತದೆ. ಇದರಿಂದ ಅವನು ಅಗಲೇ ಆಡಳಿತದ ತರಬೇತಿಯನ್ನು ಪಡೆಯುತ್ತಿದ್ದ ಎಂದು ತಿಳಿಯುತ್ತದೆ. ತಿರುವಳ್ಳಂ ಜಿಲ್ಲೆಯ, ಡೆಂಕಣಿಕೋಟೆ ತಾಲ್ಲೂಕಿನ ಗುಮ್ಮಳಾಪುರದ ಒಂದು ಶಾಸನವು[೩೪] ಅರವೀಡು ಮನೆತನದ ವೆಂಕಟಪತಿದೇವನ ಆಳ್ವಿಕೆಯ ಕಾಲದ್ದಾಗಿದ್ದು, ಅದರಲ್ಲಿ ಚತುರ್ಥಗೋತ್ರದ ಯಲಹಂಕ ನಾಡ ಪ್ರಭು ಕೆಂಪನಾಚೇಗೌಡರ ಪೌತ್ರ, ಕೆಂಪೇಗೌಡರ ಪುತ್ರ ಇಮ್ಮಡಿ ಕೆಂಪೇಗೌಡನು ಗುಂಮಳಾಪುರದ ಸಿಂಹಾಸನದ ಕರ್ತರಾದ ನಂಜೇದೇವರ ಪೌತ್ರರಾದ ಚೆನ್ನಮಲ್ಲಿಕಾರ್ಜುನ ದೇವರ ಪುತ್ರರಾದ ನಂಜೇದೇವ ಅಯ್ಯನವರಿಗೆ ಗುಂಮಳಾಪುರ ಗ್ರಾಮವನ್ನು ಶಿವಾರ್ಪಿತವಾಗಿ ಸಮರ್ಪಿಸಿದ್ದನ್ನು ದಾಖಲಿಸಿದೆ.

ಬೆನಿಕ್ಕಲ್‌ನ ಒಂದು ಶಾಸನದ[೩೫] ಪ್ರಕಾರ ದೇವರಾಯನ ಆಳ್ವಿಕೆಯ ಕಾಲದಲ್ಲಿ ಸಾಮ್ರಾಜ್ಯವು ಒಂಭತ್ತು ಆಡಳಿತ ವಿಭಾಗ ಗಳಾಗಿ ಹಂಚಿಹೋಗಿತ್ತು. ಆ ವಿಭಾಗಗಳಲ್ಲಿ, ಸಿರಿಯನಾಡು, ಮೊರಸು ನಾಡು, ಪಶ್ಚಿಮನಾಡು, ಮುಳುವಾಯಿ ನಾಡುಗಳ ಹೆಸರುಗಳು ಲಭ್ಯವಿವೆ. ಆಡಳಿತ ವಿಭಾಗಗಳಲ್ಲಿ ನಾಡು ಮತ್ತು ವೇಂಠೆಗಳೂ ಇದ್ದುದನ್ನು ಮತ್ತು ಅಂತಹ ಉದಾಹರಣೆಯನ್ನು ಶ್ರೀರಂಗಂನ ಒಂದು ಶಾಸನವು[೩೬] ನೀಡಿದೆ. ಆ ಶಾಸನದಲ್ಲಿ ಕಿಳಂಗು ನಾಡು ಮತ್ತು ರಾಯಪುರಂ ವೇಂಠೆಯಗಳು ಹೆಸರಿದೆ. ಅದೇ ಶ್ರೀರಂಗಂನ ಮತ್ತೊಂದು ಶಾಸನವು[೩೭] ತೆಂಕರಾಜ ಗಂಭೀರ ವಳನಾಡ ಮತ್ತು ಮಳನಾಡುಗಳನ್ನು ಪ್ರಸ್ತಾಪಿಸುವುದಲ್ಲದೆ, ತಿರುಚಿರಾಪಳ್ಳಿಯ ಚಾವಡಿಯನ್ನು ಹೆಸರಿಸಿದೆ. ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲಕ್ಕೆ, ಸ್ಥಳ ಮತ್ತು ಹೋಬಳಿಗಳೂ ಆಡಳಿತ ವಿಭಾಗಗಳಲ್ಲಿ ಸೇರಿಕೊಂಡಿದ್ದುದನ್ನು ಗುಮ್ಮಳಾಪುರದ ಒಂದು ತಾಮ್ರಶಾಸನವು[೩೮] ತಿಳಿಸಿದೆ. ಆ ಶಾಸನದಲ್ಲಿ ಬೆಂಗಳೂರು ಸ್ಥಳ ಮತ್ತು ಗುಮ್ಮಳಾಪುರ ಹೋಬಳಿಗಳು ಪ್ರಸ್ತಾಪಗೊಂಡಿವೆ. ವಿಜಯನಗರ ಸಾಮ್ರಾಜ್ಯದ ನಂತರದ ಕಾಲದ. ಮಲ್ಲೇಶ್ವರಂನ ಒಂದು ಶಾಸನವು,[೩೯] ಹೊಸೂರುಸೀಮೆಗೆ ಸೇರಿದ ಗುಮ್ಮಳಾಪುರ ಹೋಬಳಿಯನ್ನು ಪಾಪ್ಪಾರಪಟ್ಟಿ ಶಾಸನವು[೪೦] ವೀರಭದ್ರದುರ್ಗ ಸೀಮೆಯ ಕುಂನೆಕೊಳ ಹೋಬಳಿಯನ್ನು ದಾಖಲಿಸಿವೆ. ಕಾರಿಮಂಗಲ ಸೀಮೆ ಮತ್ತು ತಗಡ ನಾಡುಗಳನ್ನು ಕಾರಿಮಂಗಲಂನ ಒಂದು ಶಾಸನವೂ[೪೧], ಮೊರಸು ಮತ್ತು ಯಲಹಂಕ ನಾಡುಗಳನ್ನು ಗುಮ್ಮಳಾಪುರದ ಒಂದು ಶಾಸನವೂ[೪೨] ದಾಖಲಿಸಿವೆ. ಕಂಚಿಯ ಏಕಾಂಬರನಾಥ ಸ್ವಾಮಿಯು ವಿಜಯನಗರದ ಅಚ್ಯುತ ದೇವರಾಯನ ಕಾಲದಲ್ಲಿ ಕೆಲವು ದಾನಗಳನ್ನು ಪಡೆದಿದ್ದಾನೆ.[೪೩] ಪ್ರಸಿದ್ಧ ಶೈವ ಕ್ಷೇತ್ರಗಳಲ್ಲಿ ಒಂದಾದ ತಿರುವಡಿಯ[೪೪] ತಿರುವೀರತ್ತಾನೇಶ್ವರ ದೇವಾಲಯಕ್ಕೆ ವಿಜಯನಗರದ ದೊರೆಗಳ ಕಾಲದಲ್ಲಿ ಅನೇಕ ದಾನಗಳು ಲಭಿಸಿವೆ.

ಗುಮ್ಮಳಾಪುರವು ಪ್ರಸಿದ್ಧ ಶೈವ ಕ್ಷೇತ್ರವಾಗಿತ್ತು. ಇದನ್ನು ಅಲ್ಲಿಯ ಎರಡು ಶಾಸನಗಳು ಖಚಿತಪಡಿಸುತ್ತವೆ. ಅಲ್ಲಿಯ ಒಂದು ಶಾಸನವು[೪೫] ಶರಣ ವೀರಣ್ಣದೇವರು, ಶಾಂತದೇವರು, ಬಿಟ್ಟಮಂಡೆ ಪ್ರಭು, ಪ್ರಸಾದ ದೇವ ಮುಂತಾದವರನ್ನು, ಅಶೇಷ ವೀರಮಾಹೇಶ್ವರರು ಎಂದೇ ಉಲ್ಲೇಖಿಸಿದೆ. ಅಂದರೆ ೧೫ನೆಯ

ಶತಮಾನದ ಕೊನೆಯ ವೇಳೆಗೆ ಗುಮ್ಮಳಾಪುರವು, ಒಂದು ಮಹತ್ವದ ವೀರಶೈವ ಕೇಂದ್ರವಾಗಿತ್ತು ಎಂಬುದು ಖಚಿತವಾಗುತ್ತದೆ ಮತ್ತು ಇಲ್ಲಿಯ ಗುರುಗಳಲ್ಲಿ ಮುಖ್ಯನಾದ ಒಬ್ಬನೆಂದರೆ, ನಂಜೇದೇವರು. ಈತನನ್ನು ಇಲ್ಲಿಯ ಮತ್ತೊಂದು ಶಾಸನವೂ[*೪೬] ಪ್ರಸ್ತಾಪಿಸಿದೆ. ಕ್ರಮವಾಗಿ, ಕ್ರಿ.ಶ. ೧೫೩೨ ಮತ್ತು ಕ್ರಿ.ಶ. ೧೫೩೯ಕ್ಕೆ ಸೇರುವ ಎರಗನಹಳ್ಳಿಯ ಎರಡು ಶಾಸನಗಳು[*೪೭] ಜಂಗಮ ಮತ್ತು ಜಂಗಮ ಛತ್ರಗಳನ್ನು ಉಲ್ಲೇಖಿಸಿವೆ. ಆದ್ದರಿಂದ ಎರಗನಹಳ್ಳಿಯೂ ಸಹ ಒಂದು ವೀರಶೈವ ಕ್ಷೇತ್ರವಾಗಿತ್ತು ಎಂದು ತಿಳಿಯುತ್ತದೆ. ತಿರುಮಲೈಚ್ಚೇರಿ, ಅಧಮಾನ್ ಕೋಟೆ ಮತ್ತು ಧರ್ಮಪುರಿಗಳೂ ಸಹ ಶಾಕ್ತ ಕೇಂದ್ರಗಳಾಗಿದ್ದವು.

ಕಂಚಿಯು ಪ್ರಸಿದ್ಧ ವೈಷ್ಣವ ಕ್ಷೇತ್ರ. ಇಲ್ಲಿಯ ಅರುಳಾಳ್ ಪೆರುಮಾಳ್, ಅಂದರೆ ವರದರಾಜ ಸ್ವಾಮಿಯ ದೇವಾಲಯವು ಬಹುತೇಕ ಎಲ್ಲಾ ಮನೆತನದ ರಾಜರುಗಳಿಂದ ಮತ್ತು ಜನತೆಯಿಂದ ಎಲ್ಲಾ ಮನೆತನದ ರಾಜರುಗಳಿಂದ ಮತ್ತು ಜನತೆಯಿಂದ, ಎಲ್ಲಾ ಕಾಲದಲ್ಲೂ ಹೇರಳವಾದ ಮತ್ತು ಬೆಲೆ ಬಾಳುವ ದಾನಗಳನ್ನು ಸ್ವೀಕರಿಸಿದೆ. ವಿಜಯನಗರದ ದೊರೆ ಅಚ್ಯುತದೇವರಾಯನು ೧೫೩೨ರಲ್ಲಿ ವಿಷ್ಣುಕಂಚಿಗೆ ಹೋಗಿ, ಅಲ್ಲಿಯ ವರದರಾಜ ಸ್ವಾಮಿಗೆ , ತನ್ನ, ತನ್ನ ರಾಣಿಯ ಮತ್ತು ಮಗ ಚಿಕ್ಕ ವೆಂಕಟಾದ್ರಿಯ ಒಳಿತಿಗಾಗಿ ಹದಿನೇಳು ಗ್ರಾಮಗಳನ್ನು ವರದರಾಜ ಸ್ವಾಮಿಯ ಸೇವೆಗಾಗಿ ದಾನವಾಗಿ ಕೊಟ್ಟ ವಿಷಯ ತಿಳಿದಿದೆ[*೪೮].

ಎಲ್ಲೆ ಕಲ್ಲುಗಳನ್ನು ತೆಗೆದವರಿಗೆ ದಂಡ ವಿಧಿಸಲಾಗುತ್ತಿತ್ತು. ಈ ವಿಷಯವನ್ನು ನಾಗಲಾಪುರಂನ ಶಾಸನವೊಂದು[*೪೯] ದಾಖಲಿಸಿದೆ. ಹಾಗೆ ವಸೂಲಿ ಮಾಡಿದ ದಂಡವನ್ನು ದೇವಾಲಯಕ್ಕೆ ನೀಡಲಾಗುತ್ತಿತ್ತು. ಕಾರಿಮಂಗಲಂನ ಒಂದು ಶಾಸನವು[*೫೦] ಸದಾಶಿವರಾಯನ ಕಾಲದಲ್ಲಿ ನಾಯಿಂದರಿಗೆ ಬಿಟ್ಟ ದತ್ತಿಯನ್ನು ತಿಳಿಸಿದೆ. ಧಾರಾಪುರಂನ ಒಂದು ಶಾಸನವು[*೫೧] ಸದಾಶಿವದೇವನ ಆಳ್ವಿಕೆಯಲ್ಲಿ ಕಂದಾಚಾರದ ತಿಮ್ಮರಸಯ್ಯನವರ ಮಗ ನಂಜಪ್ಪಯ್ಯನು ರಾಘವದೇವರ ಪಲ್ಲಕ್ಕಿಯ ಸೇವೆಗಾಗಿ ಧಾರಾಪುರದ ಚಾವಡಿಗೆ ಸಲ್ಲುವ ಇಪ್ಪತ್ತನಾಲ್ಕು ನಾಡುಗಳೊಳಗಿನ ನಾಯಕ ಮಗ, ಯಕ್ಕಟಿಗಳು, ಬಿಲ್ಲಹೆಗಡೆ, ಬಾಣದ ಬಾಗಿಲ ಗೊಲ್ಲರು, ಬೋಯರು, ಊಳಿಗದವರು, ಹುಲ್ಲವರು, ದೀಯರು ಮುಂತಾದವರ ಒಪ್ಪಿಗೆ ಪಡೆದು, ಬಂಡಿ ಹಣವನ್ನು ದತ್ತಿ ಬಿಟ್ಟದ್ದನ್ನು ದಾಖಲಿಸಿದೆ.

ಕಾಂಜೀವರಂ ಮತ್ತು ಶ್ರೀರಂಗಂಗಳು ಶ್ರೀಮಂತ ಹಾಗೂ ಪ್ರಸಿದ್ಧ ಧಾರ್ಮಿಕ ಕ್ಷೇತ್ರಗಳು. ಇವುಗಳಿಗೆ ಎಲ್ಲಾ ಕಾಲದಲ್ಲಿಯೂ ಹೇರಳವಾಗಿ ಬೆಲೆ ಬಾಳುವ ದಾನ ದತ್ತಿಗಳು ದೊರೆತಿವೆ. ಶ್ರೀ ಕೃಷ್ಣದೇವರಾಯನು, ತನ್ನ ತಂದೆ ನರಸಣ್ಣನಾಯಕ ಮತ್ತು ತಾಯಿ ನಾಗಲಾದೇವಿ ಅಮ್ಮನವರಿಗೆ ಹಾಗೂ ತನಗೆ ಪುಣ್ಯವಾಗಬೇಕೆಂದು, ಕಾಂಜೀವರಂನ ವರದರಾಜಸ್ವಾಮಿ ದೇವಾಲಯದ ಪುಣ್ಯಕೋಟಿ ವಿಮಾನಕ್ಕೆ ಲೋವೆಯಿಂದ ಕಳಸದವರೆಗೂ ಅಪರಂಜಿ ಚಿನ್ನದಲ್ಲಿ ಹೊದಿಕೆ ಹಾಸಿದ್ದನ್ನು ಅಲ್ಲಿಯದೇ ಒಂದು ಶಾಸನವು ದಾಖಲಿಸಿದೆ[*೫೨]. ಶ್ರೀರಂಗಂನ ಒಂದು ಶಾಸನವು[*೫೩], ರಾಜನು ಅವಸರದ ಮಲ್ಲರಸನ ಪಾರುಪತ್ಯದಲ್ಲಿ ಶ್ರೀರಂಗನಾಥ ದೇವರಿಗೆ ಸಮರ್ಪಿಸಿದ ಚಿನ್ನದ ಪಾತ್ರೆ ಸಾಮಾನುಗಳು, ಚಿನ್ನದ ಪೀತಾಂಬರ ಹಾಗೂ ಸಜ್ಜಾಗೃಹದ ಬಾಗಿಲವಾಡಕ್ಕೆ ಚಿನ್ನದ ಹೊದಿಕೆಯನ್ನು ನೀಡಿದ ವಿವರಗಳನ್ನು ದಾಖಲಿಸಿದೆ.

ತಮಿಳುನಾಡಿನ ಕೆಲವು ಶಾಸನಗಳ ಭಾಷೆ ಒಂದಾದರೆ, ಲಿಪಿ ಬೇರೆ ಆಗಿರುತ್ತದೆ. ಇಂತಹ ಎರಡು ಉದಾಹರಣೆಗಳನ್ನು ಕಾಂಜೀವರನಲ್ಲಿ ಕಾಣಬಹುದು[*೫೪]. ಮೂಲಪಾಠವು ಕನ್ನಡ ಭಾಷೆ ಮತ್ತು ಲಿಪಿಯಲ್ಲಿದ್ದು, ಪ್ರತಿಯನ್ನು ಕನ್ನಡ ಭಾಷೆ ಮತ್ತು ನಾಗರೀ ಲಿಪಿಯಲ್ಲಿ ಬರೆಸಿರಬಹುದು. ಇಂತಹ ಕ್ರಮವು ಯಾತ್ರಾರ್ಥಿಗಳಾಗಿ ಬರುವ ವಿವಿಧ ಭಾಷೆಗಳ ಜನರಿಗೆ ವಿಷಯವನ್ನು ತಿಳಿಸುವ ಉದ್ದೇಶದಿಂದ ಇರಬೇಕು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೪**, ತಮಿಳುನಾಡು *ಕನ್ನಡ ಶಾಸನಗಳು*, ಸಂ. ಡಾ। ಬಾ. ರಾ. ಗೋಪಾಲ್ ಮತ್ತು ಇತರರು, ಹಂಪಿ, ೨೦೦೦, ಶಾಸನ ಸಂ.೩೫, ಕ್ರಿ. ಶ. ೧೨೯೫.

*೨. ಅದೇ, ಸಂ. ೧೧, ಕ್ರಿ.ಶ. ೧೩೭೦.

*೩. ಅದೇ, ಸಂ. ೧೨೮,೧೨೯, ಕ್ರಿ.ಶ. ೧೩೭೮,೧೩೭೯.

*೪. ಅದೇ, ಸಂ. ೩, ಕ್ರಿ.ಶ. ೧೩೮೬.

*೫. ಅದೇ, ಸಂ. ೧೧೯, ಕ್ರಿ.ಶ. ೧೪೧೨.

*೬. ಅದೇ, ಸಂ. ೨೩, ಕ್ರಿ.ಶ. ೧೪೧೪.

*೭. ಅದೇ, ಸಂ. ೨೪, ಕ್ರಿ.ಶ. ೧೪೩೪.

*೮. ಅದೇ, ಸಂ. ೧೦, ಕ್ರಿ.ಶ. ೧೪೩೬, ೧೪೨೭.

*೯. ಅದೇ, ಸಂ. ೫೮, ಕ್ರಿ.ಶ. ೧೪೪೧.

*೧೦. ಅದೇ, ಸಂ. ೪೩, ಕ್ರಿ.ಶ. ೧೪೮೬.

*೧೧. ಅದೇ, ಸಂ. ೪೦, ಕ್ರಿ.ಶ. ೧೪೪೯.

*೧೨. ಅದೇ, ಸಂ. ೧೦೩, ಕ್ರಿ.ಶ. ೧೪೭೨.

*೧೩. ಅದೇ, ಸಂ. ೧೨, ಕ್ರಿ.ಶ. ೧೪೭೨.

*೧೪. ಅದೇ, ಸಂ. ೫೭, ಕ್ರಿ.ಶ. ೧೪೮೭.

*೧೫. ಅದೇ, ಸಂ. ೬೧, ಕ್ರಿ.ಶ. ೧೪೭೪.

*೧೬. ಅದೇ, ಸಂ. ೮೧, ಕ್ರಿ.ಶ. ೧೫೦೯.

*೧೭. ಅದೇ, ಸಂ. ೮೨, ಕ್ರಿ.ಶ. ೧೫೦೯.

*೧೮. ಅದೇ, ಸಂ. ೧೫, ಕ್ರಿ.ಶ. ೧೫೦೫.
*೧೯. ಅದೇ, ಸಂ. ೧೧೫, ಕ್ರಿ.ಶ. ೧೫೧೭.
*೨೦. ಅದೇ, ಸಂ. ೩೬, ಕ್ರಿ.ಶ. ೧೫೨೯.
*೨೧. ಅದೇ, ಸಂ. ೩೭, ಕ್ರಿ.ಶ. ೧೫೨೯.
*೨೨. ಅದೇ, ಸಂ. ೧೬, ಕ್ರಿ.ಶ. ೧೫೩೨.
*೨೩. ಅದೇ, ಸಂ. ೧೯, ಕ್ರಿ.ಶ. ೧೫೩೪.
*೨೪. ಅದೇ, ಸಂ. ೭೫, ಕ್ರಿ.ಶ.೧೫೩೦.
*೨೫. ಅದೇ, ಸಂ. ೪, ಮತ್ತು ೫, ಕ್ರಿ.ಶ. ೧೫೩೨.
*೨೬. ಅದೇ, ಸಂ. ೬, ಕ್ರಿ.ಶ. ೧೫೩೯.
*೨೭. ಅದೇ, ಸಂ. ೧೬, ೧೭, ೧೮, ೧೯ ಮತ್ತು ೨೦, ಕ್ರಮವಾಗಿ, ಕ್ರಿ.ಶ. ೧೫೩೨, ೧೫೩೪.
*೨೮. ಅದೇ, ಸಂ. ೨೮, ಕ್ರಿ.ಶ. ೧೫೩೩.
*೨೯. ಅದೇ, ಸಂ. ೧೨೫, ಕ್ರಿ.ಶ ೧೫೩೯.
*೩೦. ಅದೇ, ಸಂ. ೬, ಕ್ರಿ.ಶ. ೧೫೩೯.
*೩೧. ಅದೇ, ಸಂ. ೭; ಕ್ರಿ.ಶ. ೧೫೪೯.
*೩೨. ಅದೇ, ಸಂ. ೮, ಕ್ರಿ.ಶ. ೧೫೫೧.
*೩೩. ಅದೇ, ಸಂ. ೮೦, ಕ್ರಿ.ಶ. ೧೫೫೭.
*೩೪. ಅದೇ, ಸಂ. ೬೦, ಕ್ರಿ.ಶ. ೧೬೦೬.
*೩೫. ಅದೇ, ಸಂ. ೧೧೯, ಕ್ರಿ.ಶ. ೧೪೧೨.
*೩೬. ಅದೇ, ಸಂ. ೨೩, ಕ್ರಿ.ಶ. ೧೪೧೪.
*೩೭. ಅದೇ, ಸಂ. ೨೪, ಕ್ರಿ.ಶ. ೧೪೩೪.
*೩೮. ಅದೇ, ಸಂ. ೬೧, ಕ್ರಿ.ಶ. ೧೪೭೪.
*೩೯. ಅದೇ, ಸಂ. ೭೧, ಕ್ರಿ.ಶ. ೧೭೬೩.
*೪೦. ಅದೇ, ಸಂ. ೯೫, ಕ್ರಿ.ಶ. ೧೭೧೭.
*೪೧. ಅದೇ, ಸಂ. ೮೦, ಕ್ರಿ.ಶ. ೧೫೫೭.
*೪೨. ಅದೇ, ಸಂ. ೬೦, ಕ್ರಿ.ಶ. ೧೬೦೬.
*೪೩. ಅದೇ, ಸಂ. ೧೯, ಕ್ರಿ.ಶ. ೧೫೩೪.
*೪೪. ಅದೇ, ಸಂ. ೧೧, ೧೨, ೧೩, ಕ್ರಿ.ಶ. ೧೩೭೦, ೧೪೭೨,?
*೪೫. ಅದೇ, ಸಂ. ೬೧, ೧೪೭೪.
*೪೬. ಅದೇ, ಸಂ ೬೦, ಕ್ರಿ.ಶ. ೧೬೦೬.
*೪೭. ಅದೇ, ಸಂ. ೫, ಮತ್ತು ೬, ಕ್ರಿ.ಶ. ೧೫೩೨ ಮತ್ತು ೧೫೩೯.
*೪೮. ಅದೇ, ಸಂ. ೧೬, ಕ್ರಿ.ಶ. ೧೫೩೨.
*೪೯. ಅದೇ, ಸಂ. ೩೬, ಕ್ರಿ.ಶ. ೧೫೨೯.
*೫೦. ಅದೇ, ಸಂ. ೮೦, ಕ್ರಿ.ಶ. ೧೫೫೭.
*೫೧. ಅದೇ, ಸಂ. ೮, ಕ್ರಿ.ಶ. ೧೫೫೧.
*೫೨. ಅದೇ, ಸಂ. ೧೫, ಕ್ರಿ.ಶ.?
*೫೩. ಅದೇ, ಸಂ. ೨೯, ಕ್ರಿ.ಶ. ೧೫೩೪.
*೫೪. ಅದೇ, ಸಂ. ೧೬ ಮತ್ತು ೧೭, ಕ್ರಿ.ಶ. ೧೫೩೨ ಹಾಗೂ ಸಂ. ೧೯ ಮತ್ತು ೨೦ ಕ್ರಿ.ಶ. ೧೫೩೪.

ಕೆ. ನಂಜುಂಡ ಪ್ರಸಾದ್*
ಡಾ|| ಎಂ.ಜಿ. ಮಂಜುನಾಥ**

# ಚನ್ನರಾಯನದುರ್ಗದ ಅಪ್ರಕಟಿತ ತಾಮ್ರಶಾಸನ

ಕೊರಟಗೆರೆ ತಾಲ್ಲೂಕಿನ ಪ್ರಸ್ತುತ ೩೦ ಸಾಲುಗಳ ತಾಮ್ರಶಾಸನವು ೨೮ ಸೆಂ.ಮೀ. ಅಗಲ ಹಾಗೂ ೪೬ ಸೆಂ.ಮೀ. ಉದ್ದವಾಗಿರುವ ತಾಮ್ರದ ಫಲಕದ ಮೇಲೆ ಕೊರೆಯಲ್ಪಟ್ಟಿದೆ. ಶಾಸನದ ಭಾಷೆ ಹಾಗೂ ಲಿಪಿ ತೆಲುಗು.

ವಿಜಯನಗರದ ಅರಸರ ಕುಲಕ್ಕೆ ಸೇರಿದ ಯದು ವಂಶದ ದುಮ್ಮಿದೊಡ್ಡನಾಯಕ ಹಾಗೂ ತಿಮ್ಮನಾಯಕ ಎಂಬ ವೀರರಿಬ್ಬರು ಭಯಂಕರವಾದ ಹುಲಿಯೊಂದನ್ನು ಕೊಂದು, ಪಂಚಕಲ್ಯಾಣಿ ಕುದುರೆಯೊಂದನ್ನು ಪಳಗಿಸಿ ಸವಾರಿ ಮಾಡಿದರು ಹಾಗೂ ಅಂಡೆ ಬಾಹರಾವುತ ಜಟ್ಟಿ ಮತ್ತು ಅಂಡೆ ಮಲುಗುರಾವುತ ಜಟ್ಟಿಗಳನ್ನು ಸೋಲಿಸಿದರು. ಸಹೋದರರ ಈ ಪರಾಕ್ರಮವನ್ನು ಮೆಚ್ಚಿಕೊಂಡ ಮಹಾರಾಜರು ಬಿರುದು ಬಾವಲಿಗಳು, ಶ್ವೇತಛತ್ರಿ, ಪಚ್ಚೆ, ಹಸಿರು, ನೀಲ, ಮುಂತಾದ ನವರತ್ನಗಳು, ನಾಭಿಘಂಟೆ, ಹುಲಿಚರ್ಮ, ಮುತ್ತಿನ ತುರಾಯಿ, ಭುಜಕೀರ್ತಿ, ವೀರಹುಂಕಿ, ವೀರಚೌಲಿ, ಮಕರ ಡಿಂಕಿ, ಕಾಲುಪೆಂಡೇರ, ಹಗಲು ದೀವಟಿಗೆ, ಹನುಮಡಿಂಕಿ, ಬೀದಿ ಮೆರವಣಿಗೆ, ಹೂವಿನ ಪಲ್ಲಕ್ಕಿ, ಬಿರುದಾವಳಿಗಳನ್ನು ಹಾಡಿ ಹೊಗಳುವ ಹೊಗಳುಭಟ್ಟರು ಮುಂತಾದವುಗಳನ್ನು ನೀಡಿ ೫ ಗ್ರಾಮಗಳನ್ನು ಜಹಗೀರಾಗಿ ನೀಡಿ ಈ ವೀರರ ವಂಶದವರಿಗೆ ಇನ್ನು ಮುಂದೆ ಅಳಿಕಾರ ಕುಲ ಎಂಬ ಪ್ರತ್ಯೇಕ ನಾಮ ಬರಲಿ ಎಂದು ಅರಸರು ಶಾಸನ ಬರೆಸಿಕೊಟ್ಟರೆಂದು ಈ ಶಾಸನ ದಾಖಲಿಸಿದೆ.

ಶಾಸನದ ಕಡೆಯ ಭಾಗದಲ್ಲಿ ದೇವನಾಗರಿ ಲಿಪಿಯಲ್ಲಿ ತಿರುಮಲರಾಯರ ಮುದ್ರಣ, ಶ್ರೀ ಕೃಷ್ಣರಾಯ ಮುದ್ರಣ, ಎಂದು ದೇವನಾಗರೀ ಲಿಪಿಯಲ್ಲಿ ಬರಹ ಹಾಗೂ ಆನೆಗೊಂದಿರಾಯನ ಪಾಲಿಂಚೇವ್ರಾಲು, ಬಲ್ಲಾಳರಾಯನ ಪಾಲಿಂಚೇವ್ರಾಲು ಎಂಬ ತೆಲುಗು ಲಿಪಿಯ ಬರಹವಿದೆ.

ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕಿನ ಚನ್ನರಾಯನ ದುರ್ಗದ ಹರಿಯಪ್ಪ ಗೌಡರ ಪುತ್ರ ಸಂಜೀವಗೌಡ ಅವರ ಮನೆಯಲ್ಲಿ ದೊರೆತ ಅಪ್ರಕಟಿತ ತಾಮ್ರ ಶಾಸನದ ಬಗ್ಗೆ ಈ ಸಂಪ್ರಬಂಧ ರಚಿಸಲಾಗಿದೆ.

*ಶಾಸನದ ಕಾಲ* : ಈ ಶಾಸನದಲ್ಲಿ ಕಾಲದ ಉಲ್ಲೇಖವಿದ್ದು ಶಾಲಿವಾಹನ ಶಕ ೧೪೪೯ನೆಯ ಪ್ಲವ ಸಂವತ್ಸರದ ಕಾರ್ತಿಕ ಶುದ್ಧ ಆದಿತ್ಯವಾರದಂದು ರಚಿತವಾಗಿದೆಯೆಂದು ಉಲ್ಲೇಖಿತ ವಾಗಿದೆ. ಇದು ಕ್ರಿ.ಶ. ೧೫೨೭ನೆಯ ಇಸವಿ ಜುಲೈ ತಿಂಗಳಿನ ೨೯ ಸೋಮವಾರಕ್ಕೆ ಸರಿ ಹೊಂದುತ್ತದೆ. ಆದರೆ ಇದು ಸರ್ವಜಿತು ಸಂವತ್ಸರ ಎಂಬುದು ಗಮನಾರ್ಹ ಅಂಶ.

*ಶಾಸನದ ಶಿಲ್ಪ*: ಶಾಸನದ ಮೇಲ್ಭಾಗದಲ್ಲಿ ಶಂಖ, ಚಕ್ರ, ಸೂರ್ಯ, ಚಂದ್ರ ಹಾಗೂ ಮೂರು ನಾಮದ ರೇಖಾ ಚಿತ್ರಗಳಿವೆ. ಶಾಸನ ಬರಹದ ಕೆಳಭಾಗದಲ್ಲಿ ವೀರನೊಬ್ಬನು ಹೆಬ್ಬುಲಿಯೊಂದರ ಮೇಲೆ ಆಕ್ರಮಣ ಮಾಡುತ್ತಿರುವ ರೇಖಾ ಚಿತ್ರವಿದೆ.

*ಸಾಂಸ್ಕೃತಿಕ ಮಹತ್ವ* : ಈ ಶಾಸನವು ವಿಜಯನಗರದ ಅರಸರ ಶಾಸನವೆಂದು ಉಲ್ಲೇಖಿತವಾಗಿದ್ದರೂ ಇದೊಂದು ಕೂಟ ಶಾಸನವೆಂದು ಹೇಳಬಹುದು. ಶಾಸನದ ಕಡೆಯ ಭಾಗದಲ್ಲಿ ತಿರುಮಲರಾಯ ಹಾಗೂ ಶ್ರೀಕೃಷ್ಣ ದೇವರಾಯರ ಸಹಿಗಳ ಉಲ್ಲೇಖವಿದೆ. ಆದರೆ ವಿಜಯನಗರದ ಅರಸರ ಶಾಸನಗಳಲ್ಲಿ ಅವರ ಸಹಿಗಳ ಬದಲಿಗೆ ಶ್ರೀ ವಿರೂಪಾಕ್ಷ ಎಂಬ ಒಪ್ಪವಿರುವುದು ಸಾಮಾನ್ಯ. ಆದರೆ ಈ ಶಾಸನದಲ್ಲಿ ಶ್ರೀ ವಿರೂಪಾಕ್ಷ ಎಂಬ ಒಪ್ಪವಾಗಲೀ ವಿಜಯನಗರದ ಅರಸರ ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಒಕ್ಕಣೆಯಾಗಲೀ ಕಂಡು ಬರುವುದಿಲ್ಲ. ಈ ಶಾಸನದಲ್ಲಿ ಉಕ್ತವಾದ ಕಾಲ ಕ್ರಿ. ಶ. ೧೫೨೭. ಆದರೆ ಈ ಶಾಸನದ ಲಿಪಿ ಸ್ವರೂಪದ ಆಧಾರದಿಂದ ಇದು ಕ್ರಿ. ಶ. ಸು. ೧೮ನೆಯ ಶತಮಾನದ್ದೆಂದು ಗುರ್ತಿಸಬಹುದು.

ಶಾಸನದ ಕಡೆಯ ಭಾಗದಲ್ಲಿ ತಿರುಮಲರಾಯ, ಶ್ರೀ ಕೃಷ್ಣದೇವರಾಯ, ಬಲ್ಲಾಳರಾಯ, ಆನೆಗೊಂದಿರಾಯ ಈ ನಾಲ್ಕು ಮಂದಿ ಅರಸರ ಸಹಿಗಳನ್ನು ಒಟ್ಟಿಗೆ ಕಂಡರಿಸಲಾಗಿದೆ. ಶ್ರೀ ಕೃಷ್ಣದೇವರಾಯನು ಕ್ರಿ. ಶ. ೧೫೦೯ ರಿಂದ ೧೫೨೯ರ ವರೆಗೆ ಅರಸನಾಗಿದ್ದುದು ನಿಜ. ಆದರೆ ಈ ಅವಧಿಯಲ್ಲಿ ಪ್ರಸ್ತುತ ಶಾಸನೋಕ್ತರಾಗಿರುವ ತಿರುಮಲರಾಯ, ಆನೆಗೊಂದಿರಾಯ ಹಾಗೂ ಬಲ್ಲಾಳರಾಯರು ಅರಸರಾಗಿರಲಿಲ್ಲ. ಈ ಎಲ್ಲ ಪ್ರತಿಕೂಲ ಅಂಶಗಳನ್ನೊಳಗೊಂಡಿರುವುದರಿಂದ ಈ ಶಾಸನವನ್ನು ಒಂದು ಕೂಟ ಶಾಸನವೆಂದು ಹೇಳಬಹುದು. ಆದರೆ ಈ ಶಾಸನವನ್ನು ಹೊಂದಿರುವ ಸಂಜೀವಗೌಡರ ಮನೆತನದವರಿಗೆ ಈ ಶಾಸನೋಕ್ತ ೫ ಗ್ರಾಮಗಳಾದ ಮಲ್ಲೆಕಾವು, ಜೇನಿಗಪಲ್ಲಿ, ಬಿರುದಪಲ್ಲಿ, ಬೂದಿಗವಿ, ಹಂಚಿಪಲ್ಲಿ ಗ್ರಾಮಗಳು ಇಂದಿನ ಮಲ್ಲೇಕಾವು, ಜೋನಿಗರಹಳ್ಳಿ, ಬಿರದೇನಹಳ್ಳಿ, ಸಿದ್ಧರಬೆಟ್ಟ ಹಾಗೂ ಹಂಚೀಮಾರನಹಳ್ಳಿ ಈ ಗ್ರಾಮಗಳ ಒಡೆತನವು ತಲೆ ತಲಾಂತರದಿಂದ ಇಂದಿನವರೆಗೂ ನಡೆದುಕೊಂಡು ಬರುತ್ತಿದೆ. ಆ ೫ ಗ್ರಾಮಗಳಲ್ಲಿನ ಎಲ್ಲ ಪ್ರಮುಖ ಶುಭಕಾರ್ಯಗಳು, ಉತ್ಸವ

*೨೫, ೧ನೇ 'ಎ' ಮುಖ್ಯರಸ್ತೆ, ೧ನೇ ಅಡ್ಡರಸ್ತೆ, ವಿವೇಕಾನಂದನಗರ, ಬನಶಂಕರಿ ೩ನೇ ಹಂತ, ಬೆಂಗಳೂರು-೮೫.
**ಕನ್ನಡ ಉಪನ್ಯಾಸಕ, ಸ್ನಾತಕೋತ್ತರ ಕೇಂದ್ರ, ಬೆಂಗಳೂರು ವಿ. ವಿ., ಕೋಲಾರ.



ಹಾಗೂ ಹಬ್ಬ ಹರಿದಿನಗಳಲ್ಲಿ ಆ ಮನೆತನದವರಿಗೆ ಅಗ್ರವೀಳ್ಯದೊಡನೆ ಗೌರವ ಮರ್ಯಾದೆಗಳು ಲಭಿಸುತ್ತಿವೆ. ಅವರ ಪ್ರಕಾರ ಈ ಶಾಸನೋಕ್ತ ದುಮ್ಮಿನಾಯಕ, ಸೇಲ್ಯಂತಿಮ್ಮನಾಯಕರು ಅವರ ವಂಶದ ಮೂಲ ಪುರುಷರೆಂದು ಹೇಳಿಕೊಳ್ಳುತ್ತಾರೆ. ಆ ಕಾಲದಿಂದಲೂ ಆ ೫ ಗ್ರಾಮಗಳು ಅವರ ಅಧೀನದಲ್ಲಿಯೇ ಇವೆ. ತೀರಾ ಇತ್ತೀಚೆಗೆ ಭೂಸುಧಾರಣಾ ಕಾಯ್ದೆಯ ಅನುಸಾರ ಅಲ್ಲಿಯ ಜಮೀನುಗಳು ಅವರ ಕೈತಪ್ಪಿ ಹೋಗಿದ್ದರೂ ಸಹ ಆ ಗ್ರಾಮಗಳಲ್ಲಿನ ಗೌರವ ಮರ್ಯಾದೆಗಳಿಗೇನೂ ಕುಂದುಂಟಾಗಿಲ್ಲ.

ಆದ್ದರಿಂದ ಈ ಶಾಸನವನ್ನು ಕೇವಲ ಕೂಟ ಶಾಸನವೆಂದು ಹೇಳುವುದರ ಬದಲು ಈ ಹಿಂದೆ ಕೊಟ್ಟಿದ್ದಿರಬಹುದಾದ ಶಾಸನವೊಂದರ ನಕಲೆಂದು ಹೇಳಬಹುದು.

**ಶಾಸನ ಪಾಠ**

೧ ಶ್ರೀ ಮದ್ರಾಜಾಧಿರಾಜ ರಾಜಮಾರ್ತಾಂಡ ವೀರ ಪ್ರತಾಪುಲಗು ವಿಜಯನಗರ ಸಂಸ್ಥಾನಂ

೨ ರಾಯಲ ವಾರಿ ಕುಲುವುಲಾನುಂಡಿನ ಯದುವಂಶಂ ದುಮ್ಮಿ ದೊಡ್ಡ ನಾಯಕುಡು ಸೇಲ್ಯಂತಿಮ್ಮ

೩ ನಾಯಕುಡು ವೀರಿದ್ದರು ರಾಯಲವಾರಿ ಯದುಉಚೂ ಪಿಂಚಿನ ಪ್ರತಾಪ ಮೇಯನಗಾಪಾಮುನು

೪ ತ್ರೊಕ್ಕಿ ಪುಲಿನಿ ಚಂಪಿನದಿಬಕ ಸಾಹಸಂ, ಪಂಚಕಲ್ಯಾಣಿ ಗುಜ್ರಮುನೆಕಿಲ್ಕಾ ಸ್ವಾರಿ ಚೇಸಿನದಿ

೫ ಒಕ ಸಾಹಸಂ, ಅಂಡೇ ಬಾಹ ರಾವುತ ಜಟ್ಟಿ, ಅಂಡೆ ಮಲಗು ರಾವುತ ಜಟ್ಟಿಲನು ಗೆಲಿಚಿನ ಸಾಹ

೬ ಸಂ ಒಕಟಿ ಈ ಮೂಡು ಸಾಹಸಮುಲಕು ಮೆಚ್ಚಿರಾಯಲ ವಾರಿಚ್ಚಿನ ಬಿರುದುಲು ಪಚ್ಚೆತೆಲುಪು

೭ ಶ್ವೇತ ಛತ್ರಿ ಪಸುರು ನೀಲಂ ಚಂದ್ರಗಾವಿ ನಾಭಿಘಂಟ ಪುಲಿಚರ್ಮಂ ಉಡಾಸ್ವಾವಡಂ ಮುತ್ಯಾ

೮ ಲ ತುರಾಯಿ ಭುಜಕೀರ್ತಿ, ವೀರಹುಂಕಿ ವೀರ ಚೌಲಿ ಮಕರ ಡಿಂಕಿ ಕಾಲು ಪೆಂಡೇರಂ ಪಗಲುದೀವಿಟಿ

೯ ವರಿಸರವಿ ಹನುಮ ಡಿಂಕಿ ವೀದಿ ಮೆರವಣಿ ಪೂಲಪಾಲಕಿ ಕೀರ್ತಿ ವಕ್ಕಾಣಿಂಚು ಭಟ್ರಾಜುಲು

೧೦ ಪಗುಲವತ್ತಿ ಈ ಮೊದಲಗು ಭಿರುದುಲ ನಿಚ್ಚಿರಾಯಲವಾರು ವೀರಿಕಿ ೫ ಗ್ರಾಮ ಮುಲನಗಾ ಮಲ್ಲೇ

೧೧ ಕಾವು೧ ಜೇನಿಗಲಪಲ್ಲಿ ೨ ಬಿರುದಪಲ್ಲಿ ೩ ಬೂದಿಗವಿ ೪ ಹಂಚಿಪಲ್ಲಿ ೫ ಈ ಅಯಿದು ಗ್ರಾಮಮುಲನು

೧೨ ಜಹಗೀರುಗಾ ಸೂರ್ಯಚಂದ್ರಲುಂಡು ವರಕು ನಡ ಚೇಲಾಗು ನಯಿಚ್ಚಿ ಯಾವ ಚಕ್ರ ವರ್ತುಲುಗಾನಿ ಯಾವ

೧೩ ರಾಜುಲುಗಾನಿ ಆಚಂದ್ರ ತಾರಾರ್ಕಂ ಪರ್ಯಂತರಂ ನಡಪಿಂಚೇ ಲಾಗುನರಾಗಿ ಶಾಸನಂ ಯಿಚ್ಚಿನಂದುಕು

೧೪ ಕೃಷ್ಣದೇವುನಿ ಪಾದಾರವಿಂದಂ ಸಾಕ್ಷಿ ಈ ಯದು ವಂಶವೀರುಲು ಧರ್ಮಚೇರನು ವಿಡಿಪಿಂಚಿನರಾ

೧೫ ದಿಗಾಕೀರ್ತಿ ವಕ್ಕಾಣಿಂಚು ಭಟ್ರಾಜುಲು ಆನೇಕ ಬಿರುದುಲು ಬಹುಮತು ಅಚ್ಚಿವರ್ಪಾಚಲಮಿಚ್ಚು

೧೬ ನಲ್ಲು ಒಪ್ಪುಕುನಿ ಶಾಸನ ಮಿಚ್ಚಿನಾ ಈ ಯದುವಂಶ ವೀರಲಕು ಅಳಿಕಾರುಲನಿ ಪ್ರತ್ಯೇಕನಾ

೧೭ ಮ ಮುಕಲದು॥ ಶಾಲೀವಾಹನ ೧೪೪೯=ಪ್ಲವ ಕಾರ್ತಿಕ ಶುದ್ಧಂ। ಆದಿತ್ಯವಾರಂ ಶಾ

೧೮ ಸಾನಂ ಇಚ್ಚಿನದಿ

೧೯ ತಿರುಮಲರಾಯರ ಮುದ್ರಣ ಆನೆಗೊಂದಿ ರಾಯಲವಾರಿ ಚೆಪ್ರೋಲು

೨೦ ಶ್ರೀಕೃಷ್ಣರಾಯ ಮುದ್ರಣ ಬಳ್ಳಾಲರಾಯಲವಾರಿ ಚೆಪ್ರೋಲು.



(ಕ್ಷೇತ್ರ ಕಾರ್ಯದ ವೇಳೆಯಲ್ಲಿ ಸಹಕರಿಸಿದ ಚನ್ನರಾಯನದುರ್ಗದ ಶ್ರೀ ಸಂಜೀವಗೌಡ ಹಾಗೂ ಗೆಳೆಯ ಶ್ರೀ ರುಕ್ಮಾಂಗದ ಅವರಿಗೆ ಕೃತಜ್ಞತೆಗಳು)

ಹೊ. ನ. ನೀಲಕಂಠೇಗೌಡ*
ಡಾ। ಎಂ. ಜಿ. ಮಂಜುನಾಥ**

# ಮೂಡುಬಿದರೆಯ ಎರಡು ಅಪ್ರಕಟಿತ ತಾಮ್ರಶಾಸನಗಳು

ಮೂಡುಬಿದರೆಯ ಜೈನ ಮಠದಲ್ಲಿ ದೊರೆತ ಎರಡು ಅಪ್ರಕಟಿತ ತಾಮ್ರಶಾಸನಗಳ ಬಗ್ಗೆ ಪ್ರಸ್ತುತ ಸಂಪ್ರಬಂಧ ರಚಿಸಲಾಗಿದೆ. ಅವುಗಳಲ್ಲಿ ಮೊದಲನೆಯ ತಾಮ್ರಪತ್ರವು ಇಪ್ಪತ್ತು ಸೆಂ.ಮೀ. ಅಗಲ ಹಾಗೂ ಮೂವತ್ತೆಂಟೂವರೆ ಸೆಂ.ಮೀ. ಉದ್ದವಾಗಿದೆ. ತಾಮ್ರ ಪತ್ರದ ಮೊದಲನೆಯ ಬದಿಯಲ್ಲಿ ಇಪ್ಪತ್ತೇಳು ಸಾಲುಗಳು ಹಾಗೂ ಎರಡನೆಯ ಬದಿಯಲ್ಲಿ ಒಂಬತ್ತು ಸಾಲುಗಳು ಒಟ್ಟು ಮೂವತ್ತಾರು ಸಾಲುಗಳ ಬರಹವಿದೆ.

ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾದ ಶ್ರೀ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ರತ್ನಪ್ಪೊಡೆಯರು ಮಂಗಳೂರ ಬಾರಕೂರು ರಾಜ್ಯವನ್ನು ಸಾಮಂತ ದೊರೆಯಾಗಿ ಆಳುತ್ತಿದ್ದರು. ರತ್ನಪ್ಪೊಡೆಯರ ಕೈಕೆಳಗೆ ಬಿದಿರೆಯ ನಗರವನ್ನು ಅಂದರೆ ಇಂದಿನ ಮೂಡುಬಿದಿರೆಯನ್ನು ವಿಟ್ಠರಸೊಡೆಯರು ಆಳುತ್ತಿದ್ದರು. ಪುತ್ತಿಗೆಯಲ್ಲಿ ಚೌಟರು ಆಳುತ್ತಿದ್ದರು. ಆ ಸಂದರ್ಭದಲ್ಲಿ ಆ ಪ್ರಾಂತ್ಯದ ಮುಖಂಡರಾದ ಅಂಣಸೇನಬೋವರು ಮೂಡುಬಿದರೆಯ ಜೈನ ಮಠಾಧೀಶರಾದ ಅಭಿನವ ಚಾರುಕೀರ್ತಿ ಪಂಡಿತ ದೇವರ ಸಮ್ಮುಖದಲ್ಲಿ ಮೂಡುಬಿದರೆ ನಗರದ ಎಂಟು ಜನ ಸೆಟ್ಟಿಕಾರರಿಗೆ ಹಾಗೂ ನಾಲ್ವರು ಸಣ್ಣ ವ್ಯಾಪಾರಿಗಳಿಗೆ ಈ ಶಾಸನವನ್ನು ಬರೆಸಿಕೊಟ್ಟುದಾಗಿ ದಾಖಲಿಸಿದೆ.

ಶಾಸನದ ಪ್ರಕಾರ ಅಂಣಸೇನಬೋವರ ಕಡೆಯ ಮನುಷ್ಯರು ಕಕ್ಕೆದಾಸುಸೆಟ್ಟಿಯ ಮನೆಯನ್ನೂ, ಅಡ್ಡಣೆ ಬಾಲ್ಯಮ್ಮ ಸೆಟ್ಟಿಯ ಮನೆಯನ್ನೂ ಜಪ್ತಿ ಮಾಡಿ ಅವರ ಸರ್ವಸ್ವವನ್ನೂ ಕಿತ್ತುಕೊಂಡು ಹೋಗಿರುತ್ತಾರೆ. ಆಗ ಆ ಊರಿನ ಸಮಸ್ತರೂ ಕೂಡಿಕೊಂಡು ಹೀಗಾದರೆ ನಮಗೆ ಈ ನಗರದಲ್ಲಿ ಬಾಳುವುದು ಅಶಕ್ಯವೆಂದು ಆ ಊರಿನಲ್ಲಿದ್ದ ಜೈನ ಬಸದಿಗಳ ಬಾಗಿಲನ್ನು ಹಾಕಿಸಿ ಊರು ಬಿಟ್ಟು ಬೇರೆ ಊರಿಗೆ ಒಕ್ಕಲು ತೆಗೆದುಕೊಂಡು ಹೊರಟಾಗ ಅಣ್ಣ ಸೇನಬೋವರು ತಾವು ಜಪ್ತಿ ಮಾಡಿಸಿಕೊಂಡು ಹೋದ ಸರ್ವಸ್ವವನ್ನೂ ಹಿಂದಕ್ಕೆ ಕೊಡಿಸಿ ಬಸದಿಗಳ ಬಾಗಿಲು ತೆಗೆಸಿ ತಪ್ಪು ಕಾಣಿಕೆ ಕೊಟ್ಟು ನೊಂದವರನ್ನು ಸಂತೈಸಿ ಇನ್ನು ಮುಂದೆ ನಿಮ್ಮ ಮನೆಯು ಹೊಸ್ತಿಲನ್ನು ನಮ್ಮ ಜನರು ತುಳಿಯುವುದಕ್ಕೆ ಬಿಡುವುದಿಲ್ಲ. ನಿಮ್ಮನ್ನು ಪೂರ್ವ ಮರ್ಯಾದೆಯಂತೆ ಬಾಳಿಸುತ್ತೇವೆ. ಇದಕ್ಕೆ ತಪ್ಪಿದರೆ ಸೋಮನಾಥನಿಗೆ, ಪಾರ್ಶ್ವನಾಥನಿಗೆ ತಪ್ಪಿದವರು ಎಂದು ತಾಮ್ರಶಾಸನವನ್ನು ಬರೆಸಿಕೊಟ್ಟದ್ದು ದಾಖಲಾಗಿದೆ.

ಈ ಶಾಸನವು ಶಾಲಿವಾಹನ ಶಕವರ್ಷ ೧೪೩೩ನೆಯ ಪ್ರಜೋತ್ಪತ್ತಿ ಸಂವತ್ಸರದ ಭಾದ್ರಪದ ಶುದ್ಧ ಬಿದಿಗೆಯಂದು ರಚಿತವಾಗಿದೆ. ಅಂದರೆ ಕ್ರಿ. ಶ. ೧೫೧೧ ನೆಯ ಇಸವಿ ಸೆಪ್ಟೆಂಬರ್ ತಿಂಗಳು ೨೪ ಬುಧವಾರದಂದು ರಚಿತವಾಗಿದೆ.

ಎರಡನೆಯ ತಾಮ್ರ ಪತ್ರವು ಇಪ್ಪತ್ತೆಂಟೂವರೆ ಸೆಂ.ಮೀ. ಅಗಲವಾಗಿದ್ದು ಆರೂವರೆ ಸೆಂ.ಮೀ. ಉದ್ದವಾಗಿದೆ. ತಾಮ್ರಪತ್ರದ ಒಂದನೆಯ ಬದಿಯಲ್ಲಿ ಎಂಟು ಸಾಲುಗಳು ಹಾಗೂ ಎರಡನೆಯ ಬದಿಯಲ್ಲಿ ಐದು ಸಾಲುಗಳು ಒಟ್ಟು ಹದಿಮೂರು ಸಾಲುಗಳ ಬರಹವಿದೆ.

ಈ ಶಾಸನವು ಮೂಲತಃ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಪೆನುಗೊಂಡೆಯ ಜೈನಮಠಕ್ಕೆ ಸೇರಿದುದು. ಪೆನುಗೊಂಡೆಯ ಜೈನ ಮಠಾಧೀಶರಾದ ಶ್ರೀಲಕ್ಷ್ಮೀಸೇನ ಭಟ್ಟಾರಕರಿಗೆ ಪಡುಬಿದರೆಯ ಶ್ರೀಬ್ರಹ್ಮ ಅರಸರಾದ ಕಿನ್ನಿಕ ಹೆಗ್ಗಡೆಯವರು ಈ ತಾಮ್ರಶಾಸನವನ್ನು ಬರೆದುಕೊಟ್ಟಿದ್ದಾರೆ. ಲಕ್ಷ್ಮೀಸೇನ ಭಟ್ಟಾರಕರಿಂದ ಕಿನ್ನಿಕ ಹೆಗ್ಗಡೆಯವರ ಪೂರ್ವಿಕರು ತೆಗೆದುಕೊಂಡ ಸಾಲದ ಬಡ್ಡಿಗೆ ಪ್ರತಿಯಾಗಿ ಹೊಸಂಗಡಿಯ ಗುಡ್ಡೆ ಬಸದಿಯ ಪಾರ್ಶ್ವನಾಥ ದೇವರ ಪೂಜಾಕಾರ್ಯದ ಅಮೃತಪಡಿ ಹಾಗೂ ನಂದಾದೀಪಕ್ಕೆ ಹದಿನೈದು ಮುಡಿ ಅಕ್ಕಿ ಗೇಣಿ ಬರುವಂತಹ ಗದ್ದೆಯನ್ನು ಲಕ್ಷ್ಮೀಸೇನ ಭಟ್ಟಾರಕರಿಗೆ ಕಿನ್ನಿಕ ಹೆಗ್ಗಡೆಯವರು ಕೊಟ್ಟದ್ದನ್ನು ಈ ಶಾಸನವು ದಾಖಲಿಸಿದೆ. ಶಾಪಾಶಯದ ನಂತರ ಇಬ್ಬರು ಸಾಕ್ಷಿಗಳ ಸಹಿಯೊಡನೆ ಈ ಶಾಸನವನ್ನು ರಚಿಸಿದ ಸೇನಬೋವ ಈಶ್ವರನ ಹೆಸರಿನ ಉಲ್ಲೇಖವಿದೆ. ಶಾಸನದ ಕಡೆಯ ಭಾಗದಲ್ಲಿ ಶ್ರೀ ಮಹಾದೇವ ಎಂಬ ಒಪ್ಪವಿದೆ.

ಈ ಶಾಸನವು ಶಾಲಿವಾಹನ ಶಕ ೧೫೮೯ನೆಯ ಪ್ಲವಂಗ ಸಂವತ್ಸರದ ಜೇಷ್ಠ ಬಹುಳ ೧೩ ಅಂದರೆ ಕ್ರಿ. ಶ. ೧೬೬೭ನೆಯ ಇಸವಿ ಜೂನ್ ತಿಂಗಳ ೯ರ ಭಾನುವಾರದಂದು ರಚಿತವಾಗಿದೆ.

ಜೈನ ಮಠಾಧೀಶರೊಬ್ಬರು ಸಾಲಕೊಟ್ಟು ಬಡ್ಡಿ ವಸೂಲಿ ಮಾಡುತ್ತಿದ್ದ ಅಪೂರ್ವ ಸಂಗತಿ ಈ ಶಾಸನದಲ್ಲಿ ದಾಖಲಾಗಿದೆ. ಆಂಧ್ರಪ್ರದೇಶದ ಪೆನುಗೊಂಡೆಯಲ್ಲಿದ್ದ ಜೈನ ಮಠವು ಕ್ರಿ. ಶ. ೧೪ನೆಯ ಶತಮಾನದ ವೇಳೆಗೆ ನಾಶವಾಗಿತ್ತೆಂದು ಕೆಲವು

*ಕನ್ನಡ ಉಪನ್ಯಾಸಕ, ಸರ್ಕಾರಿ ಪದವಿ ಪೂರ್ವ ಕಾಲೇಜು, ಬಂಗಾರಪೇಟೆ, ಕೋಲಾರ ಜಿಲ್ಲೆ
**ಕನ್ನಡ ಉಪನ್ಯಾಸಕ, ಬೆಂ.ವಿ.ವಿ. ಸ್ನಾತಕೋತ್ತರ ಕೇಂದ್ರ, ಕೋಲಾರ.

ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಶಾಸನ ರಚಿತವಾದ ಕ್ರಿ. ಶ. ೧೬೬೭ನೆಯ ಇಸವಿಯವರೆಗೂ ಪೆನುಗೊಂಡೆಯ ಜೈನ ಮಠ ಅಸ್ತಿತ್ವದಲ್ಲಿದ್ದು ಸೇನಗಣದ ಶ್ರೀ ಲಕ್ಷ್ಮೀಸೇನ ಭಟ್ಟಾರಕರು ಆ ಮಠದ ಪೀಠಾಧೀಶರಾಗಿದ್ದುದು ಈ ಶಾಸನದಿಂದ ತಿಳಿದು ಬರುವುದನ್ನು ಗಮನಿಸಿದರೆ, ಜೈನ ಮಠದ ಅಸ್ತಿತ್ವದ ಅವಧಿಯ ಬಗ್ಗೆ ಹೆಚ್ಚಿನ ಅರಿವುಂಟಾಗುತ್ತದೆ.

ಪೆನುಗೊಂಡೆ ಜೈನಮಠದ ಅಧೀನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಹೊಸಂಗಡಿಯ ಗುಡ್ಡೆ ಬಸ್ತಿಯ ಪಾರ್ಶ್ವನಾಥ ಬಸದಿಯು ಇತ್ತೆಂದು ತಿಳಿದುಬರುತ್ತದೆ. ಬಹುಶಃ ಕ್ರಿ. ಶ. ೧೬೬೭ರ ನಂತರದ ಕಾಲಘಟ್ಟದಲ್ಲಿ ಪೆನುಗೊಂಡೆಯಲ್ಲಿದ್ದ ಜೈನಮಠ ನಾಶವಾಗಿದ್ದಿರ ಬಹುದು. ಈಗ ಪೆನುಗೊಂಡೆಯಲ್ಲಿ ಜೈನ ಮಠದ ಯಾವುದೇ ಅವಶೇಷಗಳೂ ಇಲ್ಲ. ಕೇವಲ ಎರಡು ಜೈನ ಬಸದಿಗಳು ಮಾತ್ರ ಇವೆ.

## ಶಾಸನ ಪಾಠ

**ಒಂದನೆಯ ತಾಮ್ರ ಶಾಸನ**

ಮೊದಲನೆಯ ಬದಿಯಲ್ಲಿನ ಬರಹ

೧ ಸ್ವಸ್ತಿ ಶ್ರೀಮತು ಶಕವರ್ಷ ೧೪೩೩ನೆಯ ಪ್ರ
೨ ಜೋತ್ಪತ್ತಿ ಸಂವತ್ಸರದ ಭಾದ್ರಪದ ಶುದ್ಧ
೩ ಬಿದಿಗೆಯಲು ಶ್ರೀಮನ್ಮಹಾರಾಜಾಧಿರಾ
೪ ಜ ರಾಜಪರಮೇಶ್ವರ ಶ್ರೀವೀರ ಪ್ರತಾಪ ಕೃಷ್ಣ
೫ ದೇವರಾಯ ಮಹಾರಾಯರ ಕಾಲದ
೬ ಲು ತದ್ದಕ್ಷಿಣ ಭುಜಬಲ ಪ್ರತಾಪರುಮಪ್ಪ
೭ ರತ್ನಪ್ಪೊಡೆಯರು ಮಂಗಲೂರ ಬಾರಕೂ
೮ ರ ರಾಜ್ಯವನೂ ಪ್ರತಿಪಾಲಿಸುತ್ತಿರ್ದ್ದಲ್ಲಿ ಅವ
೯ ರ ನಿರೂಪದಿಂದ ಬಿದಿರೆಯ ನಗರವನೂ
೧೦ ವಿಟ್ಟರಸೊಡೆಯರೂ ಆಳುತ್ತಿರ್ದ್ದಲ್ಲಿ ಪುತ್ತಿ
೧೧ ಗೆಯಲೂ ತಿರುಮಲೆ ರಾಯರ ಸರಾ
೧೨ ದ ಚೌಟರೂ ಬುದ್ಧಿವಂತ ಅಂಣ ಸೇನಬೋ
೧೩ ವರೂ ಆಳು ಸಾವಿರ ಬಳಿ ಸಾವಿರದವರೂ
೧೪ ಕೂಡಿ ಅಭಿನವ ಚಾರುಕೀರ್ತ್ತಿ ಪಂಡಿತ ದೇ(ವ)ರು
೧೫ ಗಳಿಗೆ ಬಿದಿರೆಯ ನಗರದ ಯೆಂಟು ಪ್ರಜೆ
೧೬ ಸೆಟ್ಟಿಕಾಱರು ನಾಲ್ವರು ಯೆಳಮೆಗಳೊಳ
೧೭ ಗಾದ ಸಮಸ್ತ ಹಲರಿಗೆ ಕೊಟ್ಟ ತಾಂಬ್ರದಸಾ
೧೮ ಧನದ ಕ್ರಮವೆಂತೆಂದರೆ ನಮ್ಮ ಮನುಷ್ಯರು
೧೯ ಕಕ್ಕೆ ದಾಸು ಸೆಟ್ಟಿಯ ಮನೆಯನೂ ಅಡ್ಡಣೆ
೨೦ ಬಾಲ್ಯಮ್ಮ ಸೆಟ್ಟಿಯ ಮನೆಯನೂ ಮುದ್ರಿಸಿ
೨೧ ಸರ್ವ್ವಸ್ವನುಕೊಂಡು ಹೋಗಲಾಗಿ ನೀಲೂ ಸಮ
೨೨ ಸ್ತರು ಕೂಡಿ ಹೀಗಾದರೆ ನಮಗೆ ಯೀನಗರ
೨೩ ದಲೂ ಬಾಳೂ ದಶಕ್ಯವೆಂದು ಯೆಲ್ಲಾ
೨೪ ಬಸ್ತಿಗಳ ಬಾಗಿಲ ಕಟ್ಟಿ ನೀವೆಲ್ಲರೂ ಊ
೨೫ ರಿಂದ ಪೊಕ್ಕಲು ತೆಗೆದು ಹೋಗಲಾಗಿ ನಾ
೨೬ ಉ ಕೊಂಡು ಹೋದ ಸರ್ವ್ವಸ್ವವನೂ ಹಿಂ
೨೭ ದಕ್ಕೆ ಕೊಡಿಸಿ ಬಸ್ತಿಯ ಬಾಗಿಲುಗಳ ತೆಗ

ಎರಡನೆಯ ಬದಿಯಲ್ಲಿನ ಬರಹ

೨೮ ಸಿ ಯೆರಡು ಬಸ್ತಿಗಳಿಗೆ ಕಾಣಿಕೆಯ ನಿಕ್ಕಿನಿಂ
೨೯ ಮನು ಸಂತಯಿಸಿ ಮುಂದಕ್ಕೆ ನಂಮಮ
೩೦ ನುಶ್ಯರು ನಿಂಮ ಮನೆಯ ಹೊಸ್ತಿಲ ಪ್ರ
೩೧ ಮಾಣವ ಮೀರಲೀಸೆವು ನಿಂಮ ಮನೆಯ
೩೨ ಬಾಗಿಲುಗಳಿಗೆ ಕಲ್ಲನೇರಿಸಲೀಸೆವು ನಿಂ
೩೩ ಮನು ಪೂರ್ವ್ವಮರ್ಯ್ಯಾದೆಯಲು ಬಾಳಿ
೩೪ ಸಿಯೇವು ಯಿದಕ್ಕೆ ತಪ್ಪಿದರೆ ಸೋಮ
೩೫ ನಾಥಗೆ ಪಾರ್ಶ್ವನಾಥಗೆ ತಪ್ಪಿದ
೩೬ ವರು.

**ಎರಡನೆಯ ತಾಮ್ರಶಾಸನ**

ಒಂದನೆಯ ಬದಿಯ ಬರಹ

೧ ಸ್ವಸ್ತಿ ಶ್ರೀ ಜಯಾಭ್ಯುದಯ। ಸಾಲ್ಲಿವಾಹನ ಸಕ ವ ೧೫೮೯ನೇ ಪ್ಲವಂಗ ಸಂ।ಜೇಷ್ಟ ಬ
೨ ೧೩ ಆದಿತ್ಯಾವಾರದಲು। ಶ್ರೀಮತ್ತು। ಪೆನುಗುಂಡೇ ಸೇನಗಣದ ಲ(ಕ್ಷ್ಮಿ)ಸೇನ ಭಟ್ಟಾರಕರಿಗೆ ಪಡೂ
೩ ಬಿದರೆ ಬ್ರಂಹ್ಮ ಅರಸರಾದ ಕಿಂನಿಕ ಹೆಗಡೆಯರೂ ಬರದು ಕೊಟ್ಟ ಪತ್ರದ ಕ್ರಮವೆಂತ್ತೆಂದರೆ। ದೇವರ ಕೈ
೪ ಯ್ಯ ಪ್ರಾಕ್ಕು ನಂಮ್ಮ ಹಿರಿಯರೂ ಪತ್ರ ಸಾಲವಾಗಿತ್ತೆಗದು ಕ್ಕೊಂಡ ಬಡ್ಡಿ ಬಗ್ಗೆ ಮೂಲಕೆ ಹೊಸಂಗಡಿಯ ಗುಡೆ ಬಸ್ತಿಯ
೫ ಪಾರಿಶ್ವನಾಥ ದೇವರಿಗೆ ನಂಮುಲಿಯು ಬೆಂಗನೆಲೆ ಗ್ರಾಮುದೊಳಗಣ ಭೂಮಿ ಚಕ್ರುಪಟದ ವಿವರ ಅರಳೀರಾಮ
೬ ಗೇ ಉತ್ತಿದ ಮೂಡಲು ಕೊರುವಳಗುಡೆ ಪಡುವಲು ತ್ತೆಂಕಲು ಗೋವಿಂದ ಅತಿಕಾರಿಗದೆಯಿಂದ ಬಡಗಲು ಪ
೭ ಡುವಲು ಆ ಕಾಸಿರಾಮನ ಗದೆಯಿಂದ ಮೂಡಲು ಬಡಗಲು ಗುಂಮಟ ಬಾಲಂಮನಗದೆಯಿಂದತ್ತೆಂಕ್ಕಲು ಯೀ
೮ ಗಡಿವಳಗುಳ್ಳಗದ್ದೆ ಗೇಣಿ ಅಕ್ಕಿ ಹಾಳಿಂಲ್ಲೂ ಮೂ ೧೫ ಇ ಹದಿನ್ನೆದು ಮುಡಿ ಅಕ್ಕಿಯ ಅಮ್ರುತಪಡಿ ನಂದ್ಹಾ ದೀಪ್ತಿಗೆ ಬಿಟೆಉ.

ಎರಡನೆಯ ಬದಿಯಲ್ಲಿನ ಬರಹ

೯ ಯೀ ಧರ್ಮವ ಕಾಲಕಾಲಂ ಪ್ರತೀಲಿ ನಡಸಿ ಬಂಹೆಉ ಯೀ ಧರ್ಮಕ್ಕೆ ವಿಘ್ನ ಮಾಡಿದವರಿಗೆ ಉರ್ಜ್ಜಂತ್ತಗಿರಿಯಲ್ಲಿ। ಮುನಿ

೧೦ ಗಳಕ್ಕೊಂದ ಪಾಪ। ಕಾಶಿಯಲ್ಲಿ ಕವಿಲೆ ಕೊಂದ ಪಾಪ। ಪರುರ್ವತದಲ್ಲಿ ಬಸವನ ಕೊಂದ ಪಾಪ ಉಂಟೆಂದು

೧೧ ಕೊಟ್ಟ ತಾಂಬ್ರದ ಪತ್ರಕ್ಕೆ ಸಾಕ್ಷಿಗಳು। ಮೂಲಿಕೆ ಉಂಞಾತ್ತಿಕಾರಿ। ಪಡೂಬಿದಿರೆ ಗುಂಮಟ ಸೆಟ್ಟಿಕರ್ತ್ತುವಿನ

೧೨ ವಪಿತ್ತ। ಯಿಂತ್ತೀಯಿವರ ಉಭಯ ಸಾನುಮತದಿಂದ ಬರದಾತ್ತ ಸ್ತಳದ ಸೇನಬೋ

೧೩ ವ ಯೀಶ್ವರ। ಶ್ರೀ ಮಹಾದೇವ.



(ಕ್ಷೇತ್ರಕಾರ್ಯದ ವೇಳೆಯಲ್ಲಿ ನೆರವು ನೀಡಿದ ಮೂಡುಬಿದರೆ ಜೈನಮಠದ ಆಡಳಿತ ವರ್ಗದವರಿಗೆ ಕೃತಜ್ಞತೆಗಳು).

ಬಿ. ಆರ್. ಭಾರತೀ*, ಎ. ಆರ್. ಗುರು**

# ಮರಸಣಿಗೆಯ ಅಪರೂಪದ ಬೇಟೆ ವೀರಗಲ್ಲು

ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲೂಕಿನಲ್ಲಿರುವ ಮರಸಣಿಗೆಯ ಕಾಮನಕೊಡಿಗೆ ಕಾಫಿತೋಟದಲ್ಲಿ ವಿಶಿಷ್ಟವಾದ ವೀರಗಲ್ಲೊಂದಿದೆ. ಇದು ೧೪೭.೩ ಸೆಂ.ಮೀ. ಎತ್ತರ, ೭೮.೭ ಸೆಂ.ಮೀ. ಅಗಲವಿದ್ದು ಬಳಪದಕಲ್ಲಿನದಾಗಿದೆ. ಮುಂಭಾಗದಲ್ಲಿ ನಾಲ್ಕು ಹಂತಗಳು, ಹಿಂಭಾಗದಲ್ಲಿ ಒಂದು ಹಂತವಿದೆ.

ಬೇಟೆ; ರಾಜ ಮಹಾರಾಜರುಗಳ ಮೃಗಯಾವಿಹಾರಕ್ಕೆ ದುಷ್ಟಪ್ರಾಣಿಗಳ ಉಪಟಳವು (ಬೆಳೆನಾಶ ಅಥವಾ ಇನ್ಯಾವುದೇ ಹಾನಿ) ಹೆಚ್ಚಿದಾಗ ಅವುಗಳನ್ನು ನಿಗ್ರಹಿಸಲು ಹಾಗು ಜೀವನ ನಿರ್ವಹಣೆಗಾಗಿ ಗೊತ್ತುಗೊಂಡದ್ದು ಪ್ರಾಚೀನದಿಂದಲೂ ಕಾಣಬರುತ್ತದೆ. ಇದೇ ರೀತಿ ಪ್ರಾಚೀನ ಕರ್ನಾಟಕದಲ್ಲಿ ಕೂಡ ಹಲವು ರೀತಿಯ ಬೇಟೆಗಳನ್ನು ಹೇಳುತ್ತಾರೆ. ಇದು ಕೂಡ ಪ್ರಾಣಿ ಪಕ್ಷಿ ಬೇಟೆಗಳನ್ನು ಆಧರಿಸಿ ಮಾಡಿದ ವಿಧಾನ. ಮಿಗವೇಂಟೆ, ಪಕ್ಕಿವೇಂಟೆ ಇತ್ಯಾದಿ. ಹಂದಿ, ಪುಲ್ಲೆ, ಮಱಿಸಾರಂಗ ಮೊದಲಾದ ಮೃಗಗಳನ್ನು ಬೇಟೆಯಾಡುವುದು **ಮಿಗವೇಂಟೆ** ಎನಿಸಿಕೊಳ್ಳುತ್ತದೆ. ಮರಸಣಿಗೆಯ ಬೇಟೆಯ ವೀರ ಶಿಲ್ಪವನ್ನು ಗಮನಿಸಿದಾಗ **ಶ್ವಗಣಿಕಾ ಮಾರ್ಗ**'ದಲ್ಲಿ ಮಿಗವೇಂಟೆ ಮಾಡಿರುವುದನ್ನು ಕಾಣಬಹುದು. ಇಲ್ಲಿ ಜಿಂಕೆ ಮತ್ತು ಹಂದಿಯ ಬೇಟೆಯೊಂದನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಸ್ಥಳೀಯರು ಇದನ್ನು **ಒದರುಬೇಟೆ** ಎಂದು ಕರೆಯುತ್ತಾರೆ. ನಾಯಿಗಳನ್ನು ಬಿಟ್ಟು ಬೇಟೆಯಾಡುವುದಕ್ಕೆ ಈ ಹೆಸರು ಕೊಟ್ಟಿದ್ದಾರೆ.

ಕ್ರಿ. ಶ. ೧೦೧೨-೪೪ರ ವೀರಗಲ್ಲಿನಿಂದ ಕನ್ನಾಲ ಎಂಬ ಗ್ರಾಮದ ಪಲ್ಲವಗಾವುಂಡ ಎಂಬ ಬೇಟೆಗಾರನ ಮಾದಕೇಸರಿ ಎಂಬ ಹೆಸರಿನ ನಾಯಿ ಹಂದಿಯೊಡನೆ ಹೋರಾಡುವಲ್ಲಿ ಸತ್ತ ವಿಷಯ ತಿಳಿಯುತ್ತದೆ. (ಎಂ. ಚಿದಾನಂದಮೂರ್ತಿ, 'ಬೇಟೆಯ ವೀರಗಲ್ಲುಗಳು', ಉದಯವಾಣಿ - ದೀಪಾವಳಿ ವಿಶೇಷ ಸಂಚಿಕೆ, ೧೯೭೩/ ಪು. ೭೫).

ಈ ರೀತಿಯ ವಿಧಾನದಲ್ಲಿ ಹಂದಿಯನ್ನು ಕೊಲ್ಲುವುದಕ್ಕೆ ನಾಯಿಗಳ ಸಹಾಯ ಎಷ್ಟರಮಟ್ಟಿಗೆ ಅವಶ್ಯವಿತ್ತು ಎಂಬುದು ಕ್ರಿ. ಶ. ೯೭೫ರ ವೀರಗಲ್ಲೊಂದರಿಂದ ತಿಳಿಯುತ್ತದೆ. ಈ ಶಾಸನದಲ್ಲಿ 'ಲೋಕ' ಮತ್ತು 'ಧಳಗ' ಎಂಬ ಎರಡು ನಾಯಿಗಳ ಪ್ರಸ್ತಾಪ ಬರುತ್ತದೆ. ಪಿರಿಸಂದಿಯ ಮಗನು ಈ ಎರಡೂ ನಾಯಿಗಳ ಸಹಾಯದಿಂದ ಹಂದಿಬೇಟೆಯನ್ನು ಆಡಿದ. ಆ ಬೇಟೆಯಲ್ಲಿ ನಾಯಿಗಳು ಸತ್ತಿವೆ. ಅವುಗಳಿಗೆ ಸ್ಮಾರಕವನ್ನು ಹಾಕಿಸುತ್ತಾ ಅವನು "ಲೋಕನೆಂಬುದೆಟ್ಟಿತ್ತೈದು ಪಂದಿಯಂ ಕೊಂದತ್ತು" ಎಂದೂ ಧಳಗ ಎಂಬ ನಾಯಿಯು ಇಪ್ಪತ್ತಾರು ಹಂದಿಗಳನ್ನು ಕೊಂದಿತ್ತು, ಎಂಬುದಾಗಿ ತಿಳಿಸುತ್ತದೆ. (ಎ.ಕ.X. ಮುಳುಬಾಗಲು ೮೫). ಈ ವೀರಗಲ್ಲಿನ ಶಿಲ್ಪ ಗಮನಾರ್ಹವಾಗಿದೆ. ಈ ಎರಡೂ ನಾಯಿಗಳು ಒಂದೇ ಬೇಟೆಯಲ್ಲಿ ಸತ್ತಿದ್ದರೂ ಅವುಗಳ ಒಡೆಯನಿಗೆ ಅವುಗಳ ಪರಾಕ್ರಮವನ್ನು ಬೇರೆಬೇರೆಯಾಗಿ ತಿಳಿಸಬೇಕೆಂಬ ಉದ್ದೇಶವಿದ್ದಿರಬೇಕು. ಈ ಕಾರಣದಿಂದಲೇ ಒಂದೇ ಕಲ್ಲಿನಲ್ಲಿ ಎರಡು ಹಂತಗಳಿವೆ. ಒಂದು ಹಂತದಲ್ಲಿ 'ಲೋಗ' - ಎಂಬ ನಾಯಿ ಹಂದಿಯೊಡನೆ



*೩೭೮, ೪೨ನೆಯ ಅಡ್ಡರಸ್ತೆ, ೮ನೇ ವಿಭಾಗ, ಜಯನಗರ, ಬೆಂಗಳೂರು - ೫೬೦ ೦೮೨.
**೭೮, ಬಿ.ಎಚ್.ಇ.ಎಲ್. ಓ.ಎಚ್.ಸಿ. ಸೊಸೈಟಿ, ನಂದಿನಿ ಲೇಔಟ್, ಬೆಂಗಳೂರು - ೫೬೦ ೦೯೬.

ಹೋರಾಡುತ್ತಿರುವಂತೆಯೂ, ಅದರ ತಳಗೆ ಇಪ್ಪತ್ತಾರು ಹಂದಿಗಳನ್ನು ಕೊಂದ ಧಳಗ ಹಂದಿಯೊಡನೆ ಹೋರಾಡುತ್ತಿರುವಂತೆಯೇ ಶಿಲ್ಪವನ್ನು ಬಿಡಿಸಲಾಗಿದೆ. ಈ ಶಾಸನದ ಶಿಲ್ಪ ಮತ್ತು ಪಾಠದಿಂದ ಹಂದಿಬೇಟೆಯಲ್ಲಿ ನಾಯಿಗಳದ್ದು ಎಂಥ ಮಹತ್ವದ ಪಾತ್ರವಿತ್ತು ಎಂಬುದು ವೇದ್ಯವಾಗುತ್ತದೆ.

ಜಿಂಕೆಯನ್ನು ಬೇಟೆಯಾಡುವ ಉಲ್ಲೇಖಗಳು ಬಹಳ ಕಡಿಮೆ. ಒಂದೇ ಒಂದು ವೀರಗಲ್ಲು ಬನಶಂಕರಿಯ ಎರಡನೆಯ ಹಂತದಲ್ಲಿದ್ದು ಇದನ್ನು ಡಾ|| ಪರಮಶಿವಮೂರ್ತಿ ಅವರು ತಮ್ಮ ಗ್ರಂಥದಲ್ಲಿ ವಿವರಿಸಿದ್ದಾರೆ. ಈ ಶಿಲ್ಪದಲ್ಲಿ ಬೇಟೆಯಾಡುತ್ತಿರುವ ವ್ಯಕ್ತಿ ಬಾಣ ತಗುಲಿ ಸತ್ತಿದ್ದಾನೆ. ಕಡವೆಯನ್ನು ಹೊಡೆದವರಾರು ಎಂಬ ವಿಷಯದಲ್ಲಿ ಕಲಹವಾಗಿ ಸತ್ತಿರಬಹುದು ಎಂದು ಊಹಿಸಿದ್ದಾರೆ.

ಪ್ರಸ್ತುತ ವೀರಗಲ್ಲಿನಲ್ಲಿ ಮೊದಲನೆಯ ಹಂತದಲ್ಲಿ ಬಲ ಭಾಗಕ್ಕೆ ಇಬ್ಬರು ಪುರುಷರು ಬಿಲ್ಲುಗಳನ್ನು ಹಿಡಿದು ಜಿಂಕೆ ಮತ್ತು ಹಂದಿಯ ಬೇಟೆಯಾಡುತ್ತಿದ್ದಾರೆ. ಈ ಬೇಟೆಗಾರರ ನಾಯಿಗಳಲ್ಲಿ ಎರಡು ನಾಯಿಗಳು ಹಂದಿಯ ಮುಂದೆ ಮತ್ತು ಹಿಂದಿನಿಂದ ಆಕ್ರಮಣ ಮಾಡಿವೆ. ಅದೇ ರೀತಿ ಇನ್ನೆರಡು ನಾಯಿಗಳು ಜಿಂಕೆಯ ಮೇಲೆ ಆಕ್ರಮಣ ಮಾಡಿವೆ. ಬೇಟೆಗಾರರು ಮತ್ತು ಪ್ರಾಣಿಗಳ ನಡುವೆ ಮರದ ಬೊಡ್ಡೆಯಂತೆ ಕಾಣುವ ಚಿತ್ರವಿದ್ದು ಬೇಟೆಗಾರರು ಅನುಸರಿಸುತ್ತಿದ್ದ 'ಶ್ವಗಣಿಕಾ'ದ ನೆನಪನ್ನು ತರುವಲ್ಲಿ ಯಶಸ್ವಿಯಾಗುತ್ತದೆ. ಈ ಹಂತವು ಕಾಡಿನಲ್ಲಿ ಬೇಟೆಯಾಡುತ್ತಿರುವ ಚಿತ್ರವನ್ನು ನೀಡಲು ಪ್ರಯತ್ನಿಸಿದೆ ಎನ್ನಬಹುದು. ಎರಡನೆಯ ಹಂತದಲ್ಲಿ ಇಬ್ಬರು ವ್ಯಕ್ತಿಗಳು ಕುದುರೆಯ ಮೇಲೆ ಕುಳಿತಿದ್ದಾರೆ. ಅವರ ಕೈಗಳಲ್ಲಿ ಹಿರಿದ ಕತ್ತಿಯಿದೆ. ಅವರ ಎಡಬಲಗಳಲ್ಲಿ ನೆಲದ ಮೇಲೆ ಬಿಲ್ಲು ಬಾಣಗಳನ್ನು ಹಿಡಿದ ಯೋಧರಿದ್ದಾರೆ. ಬಲಭಾಗದಲ್ಲಿರುವ ಯೋಧ ಬಿಲ್ಲನ್ನು ಮಾತ್ರ ಹಿಡಿದಿದ್ದು, ಬಾಣವನ್ನು ಕೈಯಲ್ಲಿ ಹಿಡಿದಿದ್ದಾನೆ. ಎಡಭಾಗದಲ್ಲಿರುವ ಯೋಧನ ಬಳಿ ಬಿಲ್ಲು ಬಾಣದ ಜೊತೆಗೆ ಕಠಾರಿಯೂ ಇದೆ. ಶಿಖೆಯು ಉಳಿದವರಿಗಿದ್ದಂತೆ ಪಕ್ಕಕ್ಕಿರದೆ ತಲೆಯ ಮೇಲಿರುವುದರಿಂದ ಮೊದಲನೆಯ ಹಂತದಲ್ಲಿರುವವರು ಇವರಲ್ಲ ಎಂದು ತಿಳಿಯುತ್ತದೆ. ಎರಡನೆಯ ಹಂತವನ್ನು ಬೇಟೆ ಮುಗಿಸಿಕೊಂಡು ಹಿಂದಿರುಗುತ್ತಿದ್ದಾರೆ ಅಥವಾ ಹೋಗುತ್ತಿದ್ದಾರೆ ಎಂದು ಭಾವಿಸಬಹುದು. ಕುದುರೆಗಳು ಮುಂಗಾಲುಗಳನ್ನು ಎತ್ತಿ ನಿಂತಿವೆ. ಕುದುರೆಯ ಅಲಂಕರಣವು ಬಹಳ ಸುಂದರವಾಗಿದೆ. ಮೂರನೆಯ ಹಂತದಲ್ಲಿ ಐದು ಜನರು ಪೀಠದ ಮೇಲೆ ಬಲತುದಿಗೆ ಇಬ್ಬರು ಸ್ತ್ರೀಯರು ಕೈಯಲ್ಲಿ ಕನ್ನಡಿಯಂತೆ ಕಾಣುವ ವಸ್ತುವನ್ನು ಹಿಡಿದುಕೊಂಡು ಕುಳಿತಿದ್ದಾರೆ. ಎತ್ತಿ ಹಿಡಿದಿರುವ ಕೈಗಳು ಮಾಸ್ತಿ ಕೈಯನ್ನು ಸೂಚಿಸುತ್ತದೆ. ಅವರಿಬ್ಬರ ಹಿಂದೆ ಇನ್ನೊಬ್ಬಾಕೆ ಛತ್ರಿಯನ್ನೋ, ಬೀಸಣಿಗೆಯನ್ನೋ ಹಿಡಿದಿದ್ದಾಳೆ. ಎಡಭಾಗಕ್ಕೆ ಇಬ್ಬರು ವ್ಯಕ್ತಿಗಳು



ಧ್ಯಾನಭಂಗಿಯಲ್ಲಿ ಕುಳಿತಿದ್ದಾರೆ. ಇವರನ್ನು ಯತಿಗಳೆಂದು (ಇವರ ಜಟೆಗಳು ವಿಶಿಷ್ಟವಾಗಿವೆ) ಕರೆಯಬಹುದು. ಮಧ್ಯದಲ್ಲಿ ವ್ಯಕ್ತಿಯೊಬ್ಬ ಕೈಮುಗಿದುಕೊಂಡು ಕುಳಿತಿದ್ದಾನೆ. ಈತನೇ ವೀರನೆಂದು ತಿಳಿಯಬಹುದು. ಸ್ತ್ರೀಯರು ಸತಿಯಾಗುತ್ತಿದ್ದಾರೆ ಎಂದು ಹೇಳಿದರೆ ಬೇಟೆಗೆ ಹೋದ ವ್ಯಕ್ತಿ ಏಕೆ ಮತ್ತು ಹೇಗೆ ಸತ್ತ ಎಂದು ತಿಳಿಯುವುದಿಲ್ಲ. ಯತಿಗಳ ಬಳಿ ಉಪದೇಶ ಪಡೆಯುತ್ತಿದ್ದಾನೆ ಎಂದರೆ ಮಾಸ್ತಿಯಾಗುತ್ತಿರುವುದೇಕೆ? ಎನ್ನುವ ಪ್ರಶ್ನೆ ಬರುತ್ತದೆ.

ನಾಲ್ಕನೆಯ ಹಂತವು ಕೈಲಾಸದ ಚಿತ್ರಣವಾಗಿದ್ದು ವೀರನು ಲಿಂಗದ ಮುಂದೆ ಕೈಮುಗಿದು ಕುಳಿತ್ತಿದ್ದಾನೆ. ಅರ್ಚಕನು ಲಿಂಗಕ್ಕೆ ಧೂಪದ ಆರತಿಯನ್ನು ಮಾಡುತ್ತಿದ್ದಾನೆ. (ನೋಡಿದೊಡನೆಯೇ ಕಾಳಾಮುಖರ ನೆನಪನ್ನು ತಂದರೂ ಕಾಳಾಮುಖನಲ್ಲ. ಅವರ ಪ್ರಭಾವ ಎಂದು ಹೇಳಬಹುದು). ಲಿಂಗದ ಪಾಣಿಪೀಠವು ಕೆತ್ತನೆಯಿಂದ ಅಲಂಕೃತವಾಗಿದೆ. ಲಿಂಗಕ್ಕೆ ಪ್ರಭಾವಳಿ ಇದ್ದು ಮಂಟಪದ ಒಳಗಿದೆ. ಇದು ದೇವಾಲಯದ ಪ್ರತಿಕೃತಿಯಾಗಿದ್ದು ಮಲೆನಾಡು ಮಾದರಿಯಂತಿರುವ ಮಾಡನ್ನು ಗಮನಿಸಬಹುದು. ಮಂಟಪದ ಮೇಲೆ ವ್ಯಾಳಿಯೆಂದು ಗುರುತಿಸಬಹುದಾದ ಪ್ರಾಣಿಯಿದೆ. (ನಾಲ್ಕೈದು ಪ್ರಾಣಿಗಳ ಲಕ್ಷಣವನ್ನು ಹೊಂದಿರುವ ಪ್ರಾಣಿ, ಆನೆಕಾಲು, ಸಿಂಹ ಅಥವಾ ಎತ್ತಿನಬಾಲ, ಸೊಂಡಿಲು ಅಥವಾ ಮೊಸಳೆಯ ಬಾಯಿ) ಮಂಟಪದ ಎರಡೂ ಬದಿಗೆ ದೀವಟಿಕೆಗಳಿವೆ. ಮಂಟಪದಲ್ಲಿ ಎರಡು ಗಂಟೆಗಳನ್ನು ಕಟ್ಟಿದ್ದಾರೆ. ಅದು ಅರ್ಚಕನ ಕೈಯಲ್ಲಿರುವ ಗಂಟೆಯಂತೆಯೇ ಇದೆ. ಲಿಂಗದ ಮುಂದಿರುವ ನಂದಿಯೂ ಕೂಡ ಅಲಂಕೃತವಾಗಿದೆ. ಸೂರ್ಯ, ಚಂದ್ರರ ಕೆತ್ತನೆಯಿದೆ. ಇನ್ನೊಂದು ಬದಿಯಲ್ಲಿ ಹಸುಕರುವಿನ (ಉಭಯಮುಖಿ ದಾನವನ್ನು ಸೂಚಿಸುತ್ತಿದೆ ಎನ್ನಬಹುದು) ಶಿಲ್ಪವಿದೆ.

ಇನ್ನೊಂದು ವಿಶೇಷವೇನೆಂದರೆ ಕಲ್ಲಿನ ಹಿಂಭಾಗದಲ್ಲೂ ಕೆತ್ತನೆಯಿದೆ. ದಾನ ನೀಡುತ್ತಿರುವ ಕ್ರಿಯೆಯನ್ನು ಇಲ್ಲಿ ಕೆತ್ತಿದ್ದಾರೆ. ಮುಂಭಾಗದ ಶಿಲ್ಪದ ಮೂರನೆಯ ಹಂತದಲ್ಲಿರುವ ಯತಿ ಅಥವಾ ಬ್ರಾಹ್ಮಣನಿಗೆ ಮಧ್ಯದಲ್ಲಿ ಕುಳಿತಿರುವ ವ್ಯಕ್ತಿಯು ದಾನ ನೀಡುತ್ತಿದ್ದಾನೆ. ಗಿಂಡಿಯಿಂದ ನೀರನ್ನು ಹಾಕುತ್ತಿರುವುದು ಇನ್ನೊಬ್ಬ ವ್ಯಕ್ತಿ ಅದಕ್ಕೆ ಕೈಯೊಡ್ಡಿರುವುದು ಇಲ್ಲಿ ಕಂಡುಬರುತ್ತದೆ. ದಾನ ಪಡೆಯುವವನು ಯಾವಾಗಲೂ ಒಂದು ಹೆಜ್ಜೆ ಕೆಳಗೆ ಎನ್ನುವುದನ್ನು ತೋರಿಸಲು ಯತಿಯ ಒಂದು ಪಾದವನ್ನು ಸ್ವಲ್ಪ ಕೆಳಗಿರುವಂತೆ ಬಿಡಿಸಿದ್ದಾನೆ. ಹಿಂಭಾಗದ ಕೆತ್ತನೆ ಮತ್ತು ಮೂರನೆಯ ಹಂತದ ಕೆತ್ತನೆಗೆ ಸಂಬಂಧ ಕಲ್ಪಿಸಬಹುದು.

ಈ ಶಿಲ್ಪದಲ್ಲಿ ಬೇಟೆಕಲ್ಲು, ವೀರಗಲ್ಲು, ಮಾಸ್ತಿಕಲ್ಲು, ದಾನಕಲ್ಲು ಇತ್ಯಾದಿ ಎಲ್ಲಾ ಅಂಶಗಳು ಸೇರಿವೆ. ನಾಲ್ಕು ಹಂತಗಳು, ಹಿಂಭಾಗದ ಶಿಲ್ಪವನ್ನು ಸೇರಿಸಿಕೊಂಡರೆ ಐದು ಹಂತಗಳಲ್ಲಿರುವ ಈ ಕಲ್ಲು ಒಂದೇ ವ್ಯಕ್ತಿಯ ಜೀವನದಲ್ಲಿ ಬೇರೆ ಬೇರೆ ಕಾಲಗಳಲ್ಲಿ ನಡೆದ ಘಟನೆಗಳನ್ನು ನಿರೂಪಿಸುತ್ತಿವೆಯೋ ಅಥವಾ ಒಂದೇ ಘಟನೆಯ ಬಗ್ಗೆ ನಿರೂಪಿಸುತ್ತಿದೆಯೋ ಎನ್ನುವ ಅನುಮಾನ ಬರುತ್ತದೆ. ಮೊದಲೇ ಹೇಳಿರುವಂತೆ ಬೇಟೆಗೆ ಹೋದವನು ಸತ್ತಿದ್ದಾನೆ ಎಂದರೆ ಹೇಗೆ, ಎನ್ನುವ ಪ್ರಶ್ನೆ ಬರುತ್ತದೆ. ಜಿಂಕೆಯಿಂದಾಗಿ ಸತ್ತಿರುವ ಸಾಧ್ಯತೆಯಿಲ್ಲ, ಹಂದಿಯಿಂದ ಸತ್ತಿರುವ ಸಾಧ್ಯತೆಯಿಲ್ಲ. ಆದರೆ ಹಂದಿಯು ತಿವಿದು ಹೋಗಿರಬಹುದೇ? ಜೀವಭಯ ಉಂಟಾದಾಗ ಪ್ರಾಣಿ ಚಿಕ್ಕದಿರಲಿ ದೊಡ್ಡದಿರಲಿ ಸ್ವರಕ್ಷಣೆಗೆ ಪ್ರಯತ್ನ ಪಡುತ್ತದೆ. ಇಲ್ಲಿಯೂ ಹಾಗೆಯೇ ಆಗಿದ್ದು ಸತ್ತಿದ್ದಾನೆ ಎಂದು ಭಾವಿಸಬಹುದು. ಆ ನಿಟ್ಟಿನಲ್ಲಿ ಮೊದಲನೆಯ ಹಂತಕ್ಕೂ ಎರಡನೆಯ ಹಂತಕ್ಕೂ ಸಂಬಂಧ ಕಲ್ಪಿಸಬಹುದು. ಜಿಂಕೆ ಮತ್ತು ಹಂದಿಯನ್ನು ಬೇಟೆಯಾಡುವಾಗ, ಹಂದಿಯಿಂದ ಹಾನಿಗೊಳಗಾಗಿ ಸತ್ತಿರುವ ಸಾಧ್ಯತೆಗಳು ಇರಬಹುದು. ಹಾಗೆಯೇ ಮುಂದುವರಿದರೆ ಮೂರನೆಯ ಹಂತದಲ್ಲಿ ಮಧ್ಯೆ ಕುಳಿತಿರುವ ವ್ಯಕ್ತಿಯು ಕೆಳಗಿನ ಹಂತದಲ್ಲಿರುವ ಇಬ್ಬರಲ್ಲಿ ಒಬ್ಬನಾಗಿದ್ದು, ಇನ್ನೊಬ್ಬನು ಮಡಿದಿದ್ದಾನೆ ಎಂದು ಭಾವಿಸಿದರೆ ಸತಿಯಾಗಿರುವುದು ಆತನ ಪತ್ನಿಯರು ಎಂದು ಹೇಳಬಹುದು. ಆದರೂ ಸರಿಯಾದ ಕಾರಣ ಹೇಳಲಾಗದೆ ಆಕಸ್ಮಿಕ ಸಾವು*೧೨ ಎಂದಷ್ಟೇ ಹೇಳಬಹುದಾದ ಸಾಧ್ಯತೆಗಳೇ ಹೆಚ್ಚು ಕಂಡುಬರುತ್ತದೆ. ಮಡಿದ ವ್ಯಕ್ತಿಯ ಗೌರವಾರ್ಥವಾಗಿ ಇನ್ನೊಬ್ಬ ವ್ಯಕ್ತಿಯು ದಾನವನ್ನು ಕೊಟ್ಟಿದ್ದಾನೆ ಎಂದು ಊಹಿಸಬಹುದು.

ಈ ಶಿಲ್ಪಕ್ಕೆ ಏನೇ ಅರ್ಥಗಳನ್ನು ಹೇಳಿದರೂ ಸಾಮಾನ್ಯವಾಗಿ ಕೆಳಗಿನ ಹಂತಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟು ಉಳಿದ ಹಂತಗಳ ವಿಶ್ಲೇಷಣೆ ಮಾಡುವುದು ವಾಡಿಕೆಯಾಗಿದೆ. ಆದ್ದರಿಂದ ಇದನ್ನು ಬೇಟೆಯಕಲ್ಲು ಎಂದೇ ಕರೆಯುವುದು ಸೂಕ್ತವೆನಿಸುತ್ತದೆ. ಕಂಡರಣೆಕಾರನು ಘಟನೆಗೆ ಅಂದರೆ ಬೇಟೆಗೆ ಪ್ರಾಮುಖ್ಯತೆಯನ್ನು ಕೊಟ್ಟಿದ್ದಾನೆ ಎಂದು ಹೇಳಬಹುದು. ಎರಡನೆಯ ಹಂತವು ಮೊದಲು ಇದ್ದು ನಂತರ ಬೇಟೆಯಾಡುತ್ತಿರುವ ಶಿಲ್ಪವಿದ್ದಿದ್ದರೆ ಅರ್ಥೈಸುವುದು ಇಷ್ಟೊಂದು ಕಠಿಣವಾಗುತ್ತಿರಲಿಲ್ಲವೇನೋ ಎನಿಸುತ್ತದೆ. ಆದರೂ ಶಿಲ್ಪದ ವೈಶಿಷ್ಟ್ಯತೆಯು ಗಮನಾರ್ಹವಾಗಿದೆ.

ಶಿಲ್ಪದ ದೃಷ್ಟಿಯಿಂದ ಹೊಯ್ಸಳ ಕಾಲದ್ದೆಂದು ಹೇಳಬಹುದಾಗಿದೆ. ಇದರ ಕಾಲವನ್ನು ಸು. ೧೨-೧೩ನೆಯ ಶತಮಾನಕ್ಕೆ ಸೇರಿಸಬಹುದಾಗಿದೆ.

ಬೇಟೆಗೆ ಪ್ರಾಮುಖ್ಯತೆ ಅದರಲ್ಲೂ ಜಿಂಕೆಯ ಬೇಟೆಗೆ ಪ್ರಾಮುಖ್ಯತೆ ನೀಡಿರುವುದು ಇಲ್ಲಿನ ವಿಶೇಷ. ಜಿಂಕೆ ಬೇಟೆಯಕಲ್ಲು ಬಹಳ ಅಪರೂಪ. ಈಗ ಸಿಕ್ಕಿರುವುದರಲ್ಲಿ ಬೆಂಗಳೂರು ಬನಶಂಕರಿ ಎರಡನೆಯ ಹಂತದಲ್ಲಿ ಸಿಕ್ಕಿರುವುದು ಮೊದಲನೆಯದಾಗಿದೆ. ಪ್ರಸ್ತುತ ವೀರಗಲ್ಲು ಎರಡನೆಯ ಜಿಂಕೆಬೇಟೆಯ ವೀರಗಲ್ಲಾಗಿದ್ದು ಅನೇಕ ವಿಶೇಷತೆಗಳಿಂದ ಕೂಡಿದೆ. ಮೊದಲನೆಯದು ಬಹಳ ಸರಳವಾಗಿದೆ.*೬ ಒಂದೇ ಹಂತದಲ್ಲಿ ಬೇಟೆಯಾಡುತ್ತಿರುವುದು, ಬಾಣವು ಚುಚ್ಚಿ ಸತ್ತಿರುವುದು ಮತ್ತು ಸ್ವರ್ಗಾರೋಹಣವನ್ನು ಕಡೆದಿದ್ದಾರೆ. ಪ್ರಸ್ತುತ ವೀರಗಲ್ಲು ಐದು ಹಂತಗಳಿಂದ ಕೂಡಿದ್ದು ಹಲವಾರು ಮಾಹಿತಿಗಳನ್ನು ನೀಡುತ್ತಿದೆ. ಮತ್ತು ಶಿಲ್ಪವು ಸ್ಪಷ್ಟವಾಗಿದೆ ಮತ್ತು ಕ್ರಿಯೆಯನ್ನು ಸೂಚಿಸುವಲ್ಲಿ ಯಶಸ್ವಿಯಾಗುತ್ತದೆ.



(ತಮ್ಮ ಕಾಮನಕೊಡಿಗೆ ಕಾಫಿ ತೋಟದ ಈ ಶಿಲ್ಪದ ಬಗ್ಗೆ ಅಧ್ಯಯನ ನಡೆಸಲು ಸಹಕಾರ ನೀಡಿದ ಮರಸಣಿಗೆಯ ಶ್ರೀ ಎ. ವಿಜಯಕುಮಾರ್‌ರವರಿಗೆ ಮತ್ತು ವೀರಗಲ್ಲನ್ನು ವಿಶ್ಲೇಷಿಸಲು ಸಹಾಯ ಮಾಡಿದ ಶಾಸನಶಾಸ್ತ್ರದ ಗುರುಗಳಿಗೆ ಬಹಳ ಕೃತಜ್ಞರಾಗಿದ್ದೇವೆ.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ನಾಯಿಗಳನ್ನು ಪ್ರಾಣಿಗಳ ಮೇಲೆ ಬಿಟ್ಟು, ಆ ಮೂಲಕ ಅವುಗಳನ್ನು ನಿಲ್ಲಿಸಿ, ಶಸ್ತ್ರಪ್ರಯೋಗ ಮಾಡಿ ಬೇಟೆಯಾಡುವುದು.

*೨. ಶ್ವಗಣಿಕಾ ಮಾರ್ಗದ, ಬೇಟೆಯಲ್ಲಿ ಅದರಲ್ಲಿಯೂ ಹಂದಿಯ ಬೇಟೆಯಲ್ಲಿ, ಮಡಿದ ನಾಯಿಗಳಿಗೆ ಹಾಕಿಸಿರುವ ವೀರಗಲ್ಲುಗಳಿಂದ ಇಲ್ಲಿ ಬೇಟೆಗಾರರು ಸತ್ತಿಲ್ಲ ಎಂಬ ಅಂಶವನ್ನು ವಿಶೇಷವಾಗಿ ಗಮನಿಸಬಹುದು.
ಪಾದಪ್ರೇಕ್ಷ ವಿಧಾನದಲ್ಲಿ ಬೇಟೆಯಾಡುವುದು ಬೇಟೆಗಾರನಿಗೆ ಹಲವಾರು ರೀತಿಗಳಲ್ಲಿ ಕ್ಷೇಮ. ಈ ವಿಧಾನಕ್ಕೆ ಹಂದಿಯು ಮಡಿಯದೇ ಹೋದರೆ ಬೇಟೆಗಾರ ಹೋಗಿ ಹಂದಿಯನ್ನು ಇರಿಯುವ ಪ್ರಯತ್ನ ಮಾಡುತ್ತಿದ್ದ. ಹಂದಿಯ ಬೇಟೆಯಲ್ಲಿ ಮಡಿದ ವೀರರೆಲ್ಲರೂ ಬಹುಶಃ ಇದೇ ವಿಧಾನವನ್ನು ಅನುಸರಿಸಿದ್ದಂತೆ ತೋರುತ್ತದೆ. ಕ್ರಿ. ಶ. ೧೧೪೪ರ ಒಂದು ವೀರಗಲ್ಲಿನಿಂದ ಅಸಗರ ಗೊರವನೆಂಬುವನು ಹಂದಿಯನ್ನು ಇಱಿದು ಸತ್ತನೆಂಬ ವಿಷಯ ತಿಳಿಯುತ್ತದೆ.

*೩. ಡಾ॥ ಪರಮಶಿವಮೂರ್ತಿಗಳ ವಿವರಣೆ : ಜಿಂಕೆ (ಕಡವೆ) ಬೇಟೆ ಶಿಲ್ಪ - ಸುಮಾರು ನಾಲ್ಕು ಅಡಿ ಅಗಲ ಮತ್ತು ನಾಲ್ಕು ಅಡಿ ಎತ್ತರವಿರುವ ಈ ಶಾಸನಶಿಲ್ಪ ಬಹಳ ಕುತೂಹಲಕಾರಿಯಾಗಿದೆ. ಈ ಶಿಲ್ಪದಲ್ಲಿ ವೀರನೊಬ್ಬನು ಬಿಲ್ಲಿಗೆ ಬಾಣವನ್ನು ಹೂಡಿ ಪ್ರಯೋಗಿಸಲು ನಿಂತಿದ್ದಾನೆ. ಅವನ ಮುಡಿ ಹಾಗೂ ಸೊಂಟಕ್ಕೆ ಕಟ್ಟಿರುವ ಲಂಗೋಟಿ ಗಮನಾರ್ಹವಾಗಿದೆ. ಇವನ ಮುಂದೆ ಚಿಕ್ಕದಾಗಿ ಒಂದು ಕಡವೆಯನ್ನು ಬಿಡಿಸಲಾಗಿದೆ. ಇದರ ಕೊಂಬುಗಳ ಚಿತ್ರಣದಿಂದ ಮಾತ್ರ ಇದನ್ನು ಕಡವೆಯೆಂದು ಗುರುತಿಸಬಹುದು. ಕೊಂಬುಗಳು ಕವಲು ಕವಲುಗಳಾಗಿ ಉದ್ದವಾಗಿ ಚಿತ್ರಿತವಾಗಿವೆ. ಇಲ್ಲಿನ ಮತ್ತೊಂದು ಗಮನಾರ್ಹ ಅಂಶವೆಂದರೆ ವೀರನ ನಡುವಿಗೆ ಬಾಣ ಚುಚ್ಚಿಕೊಂಡಿದೆ. ಈ ಶಿಲ್ಪವನ್ನು ಈ ರೀತಿ ಅರ್ಥೈಸಬಹುದು : ವೀರನು ಕಡವೆ ಬೇಟೆಗೆ ಹೋಗಿದ್ದು ಅಲ್ಲಿ ಇತರ ಬೇಟೆಗಾರರ ಧಾಳಿಗೆ ಸಿಕ್ಕಿ ಮಡಿದಿದ್ದಾನೆ. ಅಥವಾ ಕಡವೆ ಬೇಟೆಯ ಸಮಯದಲ್ಲಿ ಸತ್ತ ಕಡವೆಯ ಸಲುವಾಗಿ ಉಭಯ ಪಕ್ಷದಲ್ಲಿ ಕಲಹವಾಗಿ ವೀರನು ಹತನಾಗಿರಬಹುದು.

ಡಿ. ಕೆ. ಚಿತ್ರಯ್ಯ ಪೂಜಾರ್*

# ಅಮರಾಪುರಂ ಜೈನಬಸದಿಗಳು ಮತ್ತು ನಿಷಧಿಗಲ್ಲುಗಳು

ಆಂಧ್ರ ಪ್ರದೇಶದ ಅನಂತಪುರಂ, ಜಿಲ್ಲೆಯ ಮಡಕಶಿರಾ ತಾಲೂಕಿನ ಅಮರಾಪುರಂ ಕನ್ನಡ-ತೆಲುಗು ದ್ವಿಭಾಷಾ ಪ್ರದೇಶವಾಗಿದ್ದು ಕರ್ನಾಟಕದ ಗಡಿ ಭಾಗವಾದ ಪಾವಗಡ, ಶಿರಾ, ತಾಲುಕುಗಳೊಂದಿಗೆ ಸುತ್ತಿಕೊಂಡಿದೆ. ಇಲ್ಲಿ ಎರಡು ಜೈನ ಬಸದಿಗಳಿದ್ದು ಅನೇಕ ನಿಷಧಿಗಲ್ಲುಗಳು ಸಹ ಕಂಡು ಬರುತ್ತವೆ. ಹಾಗಾಗಿ ಇದೊಂದು ಪ್ರಸಿದ್ಧ ಜೈನ ಕೇಂದ್ರವಾಗಿದ್ದಿತು ಎಂಬುದನ್ನು ಸ್ಪಷ್ಟಪಡಿಸಲು ಶಾಸನವೂ ಜೊತೆಗೂಡಿದಂತೆ ಅನೇಕ ಸಾಕ್ಷಾಧಾರಗಳನ್ನು ನೋಡಬಹುದು. ಅಮರಾಪುರಂ ಮತ್ತು ಗೌಡನ ಕುಂಟೆಗ್ರಾಮಗಳ ಮಧ್ಯದಲ್ಲಿರುವ ಕೆರೆಯ ಏರಿಯ ಮೇಲೆ ಆಂಜನೇಯ ಸ್ವಾಮಿ, ಬಸವೇಶ್ವರ ದೇವಾಲಯಗಳಿದ್ದು ಅನೇಕ ವೀರಗಲ್ಲು, ಮಾಸ್ತಿಕಲ್ಲುಗಳು ಕಂಡುಬರುತ್ತವೆ. ಹಾಗೆಯೇ ಮುಂದಕ್ಕೆ ಹೋದರೆ ಕೆರೆಯ ಕೋಡಿಯಲ್ಲಿ ಒಂದು ಹಾಳು ಬಸದಿ ಇದೆ. ಇದನ್ನೇ ತೈಲಂಗೆರೆ ಬಸದಿ ಎಂದೂ ಮತ್ತು ಬ್ರಹ್ಮಜಿನಾಲಯವೆಂದೂ ಇದುವರೆಗೂ ಕರೆದಿರುವುದುಂಟು. ಅನೇಕ ನಿಷದಿ ಕಲ್ಲುಗಳ ಜೊತೆಗೆ ೧೨ನೇ ಶತಮಾನಕ್ಕೆ ಸೇರುವ ಇರುಂಗಳೇಶ್ವರ (II ನೇ ಇರುಂಗಳೇಶ್ವರನಿರಬಹುದು) ನ ಶಾಸನವೂ ಸಹ ಬಸದಿಯ ಮಧ್ಯಭಾಗದಲ್ಲಿ ಕಂಡು ಬರುತ್ತದೆ.

ಅಮರಾಪುರಂ ಊರಿನಲ್ಲಿ ಇನ್ನೊಂದು ಜೈನ ಬಸದಿ ಇದ್ದು ಇದು ಈಗಲೂ ನಿತ್ಯಪೂಜೆಗೊಳ್ಳುತ್ತದೆ. ಈ ಬಸದಿಗೆ ಹೊಂದಿ ಕೊಂಡಂತೆಯೇ ಜೈನ ಕುಟುಂಬಗಳು ಮತ್ತು ಪೂಜಾರಿಯ ಮನೆಯೂ ಸಹ ಇದೆ. ಬಸದಿಯನ್ನು ಆಧುನೀಕರಿಸಿಕೊಂಡು ವಿವಿಧ ಬಣ್ಣಗಳಿಂದ ಅಲಂಕೃತಗೊಳಿಸಿ ಆಕರ್ಷಣೀಯವಾಗಿಟ್ಟು ಕೊಂಡಿದ್ದಾರೆ. ಬಹುಶಃ ಇದೇ ಬ್ರಹ್ಮಜಿನಾಲಯವಾಗಿದ್ದು ಕೆರೆ ಕೋಡಿಯಲ್ಲಿರುವ ಬಸದಿ ತೈಲಂಗೆರೆಯ ಬಸದಿಯಾಗಿರಬಹುದು. ಕಾರಣ IIನೇ ಇರುಂಗೋಳನು ನಿಡುಗಲ್ಲನ್ನು ರಾಜಧಾನಿ ಮಾಡಿಕೊಂಡು ರಾಜ್ಯಭಾರ ಮಾಡುತ್ತಿದ್ದ ಸಂದರ್ಭದಲ್ಲಿ ಅವನ ಪಾದಪದ್ಮೋಪಜೀವಿ ಗಂಗೆಯಮಾರಯನು ಶ್ರೀ ಮೂಲ ಸಂಘ ದೇಶಿಯಗಣ ಕೊಂಡಕುಂದಾನ್ವಯ ಪುಸ್ತಕಗಚ್ಛದ ಶ್ರೀ ವೀರನಂದಿ ಸಿದ್ಧಾಂತ ಚಕ್ರವರ್ತಿಯ ಶಿಷ್ಯನಾದ ಮೇದಿನಿಸಿದ್ಧರ ಪದ್ಮಪ್ರಥಮಲದಾರಿ ದೇವರ....ನೇಮಿಪಂಡಿತರಿಂದ ವ್ರತ ಸ್ವೀಕರಿಸಿ ನಂತರ ಅಕುತ್ಕೀಳದ ಚದರ ತಟಾಕದ ದಕ್ಷಿಣ ಶಿಲಾಗ್ರದಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದಂತೆ ಹೇಳಲಾಗಿದೆ. ಇದೇ ಹೆಸರಿನ ಕೆರೆಯ ಮೇಲೆಯೇ ಈ ಬಸದಿ ಇರುವುದು. ಇದಕ್ಕೆ ಗಂಗೆಯ ಮಾರಯನ ಹೆಂಡತಿ ತೈಲಂಗೆರೆ ಹಿಂದೆ ಭೂಮಿಯನ್ನು ದಾನ ಬಿಟ್ಟಂತೆಯೂ ಸಹ ನಿಡಗಲ್ಲಿನ ಶಾಸನವೊಂದು ತಿಳಿಸುತ್ತದೆ.

ಮೂಲ ಸಂಘ ದೇಸಿಯ ಗಣ ಕೊಂಡ ಕುಂದಾನ್ವಯ ಪುಸ್ತಕ ಗಚ್ಚಕ್ಕೆ ಸೇರಿದ ತ್ರಿಭುವನ ಕೀರ್ತಿರಾವುಳ ಎಂಬುವವರ ಶಿಷ್ಯ ಬಾಳೇಂದು ಮಲಧಾರಿ ದೇವರು, ಇವರ ಪ್ರಿಯ ಶಿಷ್ಯನಾದ ಮಲ್ಲಿಸೆಟ್ಟಿಯು ಬೊಮ್ಮಿಸೆಟ್ಟಿ ಮಲ್ಲವ್ವೆಯರ ಮಗ, ಈ ಮಲ್ಲಿ ಸೆಟ್ಟಿಯು ಜೋಗವಟ್ಟಿಗೆಯ ಬ್ರಹ್ಮಜಿನಾಲಯವನ್ನು ನಿರ್ಮಾಣ ಮಾಡಿಸಿದ ಎಂದು ಮತ್ತೊಂದು ಶಾಸನ ತಿಳಿಸುತ್ತದೆ (ಅಂದರೆ ಅಮರಾಪುರಂನಲ್ಲಿ ಪ್ರಸ್ತುತ ಪೂಜೆಗೊಳ್ಳುತ್ತಿರುವ ಬಸದಿಯ ನಿರ್ಮಾಣ).

ಶಿರಾ ತಾಲೂಕಿನ ಶಾಸನವೊಂದು[೨] ತೈಲಂಗೆರೆ ಗ್ರಾಮವನ್ನು ಹಿಂದೆ ದಾನ ನೀಡಿದ ವಿಚಾರವನ್ನು ತಿಳಿಸುತ್ತಾ ಮುಂದುವರೆದು ತೈಲಂಗೆರೆ ಬಸದಿಯಲ್ಲಿ ಪ್ರಸನ್ನ ಪಾರ್ಶ್ವದೇವರ ಮೂರ್ತಿ ಇತ್ತೆಂದು



*ಸಂಶೋಧನ ವಿದ್ಯಾರ್ಥಿ, ಕನ್ನಡ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬.

ಆ ಬಸದಿಯ ವೃತ್ತಿಯನ್ನು ಬಾಳೇಂದು ಮಲಧಾರಿ ದೇವರ ಮತ್ತೊಬ್ಬ ಶಿಷ್ಯ ಚಲ್ಲಪಿಳ್ಳೆ ದೇವರು ನಡೆಸಿಕೊಂಡು ಹೋಗುತ್ತಿದ್ದನೆಂದು ತಿಳಿಸುತ್ತದೆ. ಅಲ್ಲೇ ಇರುವ ಮತ್ತೊಂದು ಶಾಸನ, ಈ ಬಸದಿಗೆ ವೃತ್ತಿಯಾಗಿ ತಮ್ಮಡಿಹಳ್ಳಿಯ ಎರಡು ಸಾವಿರ ಅಡಿಕೆ ಮರಗಳ ಉತ್ಪತ್ತಿಯನ್ನು 'ಬಸದಿಯ ಕಲ್ಲು ಕೆಲಸಕ್ಕೆ ಉಪಾನದಿಂದ ಸ್ತೂಪಿಯವರೆಗೆ 'ಮಹಾಮಂಟಪ' ಭದ್ರ ಲಕ್ಷ್ಮೀ ಮಂಟಪ, ಗೋಪುರ, ಪರಿಸೂತ್ರ, ವಂದನಾಮಾಲೆ, ಮಾನಸ್ತಂಭ, ಮಕರ ತೋರಣ, ಪರಿಪೂರ್ಣವಾಹನಗಳಿಗೆ' ಬಳಸಬೇಕು, ಎಂದು ಶಾಸನವು ತಿಳಿಸುತ್ತದೆ. ಆದರೆ ಶಾಸನದಲ್ಲಿ ಹೇಳಿರುವ ಯಾವುದೇ ಭಾಗಗಳು ಈಗ ಉಳಿದಿಲ್ಲ ಬಸದಿಯ ಮಧ್ಯದಲ್ಲಿ ಪಾಣಿಪೀಠ ಸಿಂಹಲಾಂಛನವನ್ನು ಹೊಂದಿದೆ, ಆದರೆ ವಿಗ್ರಹವಿಲ್ಲ.

ಅದೇ ಸ್ಥಳದ ಮತ್ತೊಂದು ಶಾಸನದಲ್ಲಿ ರೇಚಯ್ಯರಸರ್ ನೊಳಂಬವಾಡಿಮೂವತಿರ್ಚಾಸಿರವು ಪ್ರತಿಪಾಲಿಸುವ ಸಮಯದಲ್ಲಿ ಕೆರೆಗೆ ಕಲ್ಲ ತೂಬನು ಇಟ್ಟು ದಾನ ನೀಡಿರುವ ವಿಚಾರವನ್ನು ತಿಳಿಸುತ್ತದೆ. ಆದರೆ ಈ ರೇಚಯ್ಯ ಯಾರು? ಎಂಬುದು ತಿಳಿದು ಬರುವುದಿಲ್ಲ. ಕಾಣೂರ್ಗಣ ಕೊಂಡ ಕುಂದಾನ್ವಯದ ಶಿಷ್ಯಳೂ ಇರುಂಗೋಳ ದೊರೆಯ ರಾಣಿಯೂ ಆದ ಆಳ್ವದೇವಿಯು ಶಿಥಿಲವಾಗುತ್ತಿದ್ದ ಈ ಮಂಟಪವನ್ನು ರಕ್ಷಿಸಿದಳು ಎಂದು ಮತ್ತೊಂದು ಶಾಸನ ತಿಳಿಸುತ್ತದೆ.[೪]

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅಮರಾಪುರಕ್ಕೆ ಹೊಂದಿಕೊಂಡಂತೆ ಇರುವ ಕೆರೆಯೆ ತೈಲಂಗೆರೆಯಾಗಿದ್ದು ಆ ಕೆರೆಯ ಕೋಡಿಯಲ್ಲಿರುವ ಬಸದಿಗೆ ತೈಲಂಗೆರೆ ಬಸದಿ ಎಂದೂ, ಅಮರಾಪುರ ಉರಿನ ಮಧ್ಯೆ ಅಂದರೆ ಕೆರೆಯ ಮತ್ತೊಂದು ಭಾಗದಲ್ಲಿರುವ ಈಗಲೂ ಸುಸ್ಥಿತಿಯಲ್ಲಿದ್ದು ನಿತ್ಯ ಪೂಜೆಗೊಳ್ಳುವ ಬಸದಿಗೆ ಜೋಗವಟ್ಟಿಗೆಯ ಬ್ರಹ್ಮಜಿನಾಲಯ ಬಸದಿ ಎಂದೂ ಕರೆಯಬಹುದು. ಈ ಎಲ್ಲಾ ಅಂಶಗಳು ಈ ಎರಡೂ ಬಸದಿಗಳ ಬಗ್ಗೆ ಇದ್ದ ಗೊಂದಲ ಬಗೆಹರಿಯುವಲ್ಲಿ ಸಹಾಯಕವಾಗಬಹುದು.

**ನಿಷದಿಗಳು** : ತೈಲಂಗೆರೆಯ ಬಸದಿಯ ದಕ್ಷಿಣಕ್ಕೆ ಕೆರೆಯ ಅಂಗಳದಲ್ಲಿ ಒಟ್ಟು ೫ ನಿಷಧಿಗಲ್ಲುಗಳಿವೆ. ಅವುಗಳನ್ನು ಅನುಕ್ರಮವಾಗಿ ಈ ಕೆಳಗಿನಂತೆ ನೋಡಬಹುದು.

೧. ಪೋತೋಜ ಮತ್ತು ಅವನ ಮಗ ಸಮಟಿ ಮಾರಯನ ನಿಷಧಿ.
೨. ಮೂಲ ಸಂಘ ಸೇನಗಣಕ್ಕೆ ಸೇರಿದ ವಿರೋಧಿ ಭಯಂಕರ(?) ನಾದ ಭಾವಸೇನ ತ್ರೈವಿದ್ಯ ಚಕ್ರವರ್ತಿಯ ನಿಷಧಿ.
೩. ಮೂಲಸಂಘ ದೇಸಿಯಗಣದ ಬಾಳೇಂದು ಮಲದಾರಿ ದೇವರ ಶಿಷ್ಯನಾದ ವಿರುಪಯ ಮತ್ತು ಮಾರಯರ ನಿಷಧಿ.
೪. ಕೆರೆಯಲ್ಲಿರುವ ಈ ಕಲ್ಲಿನ ಮೇಲೇ 'ಮೂಲ ಸಂಘ..... ಸೇರಿದ ಇಂಗಳೇಶ್ವರ ಪ್ರಭಾಚಂದ್ರ ಭಟ್ಟಾರಕರ ಶಿಷ್ಯ ಬೊಮ್ಮಿಸೆಟ್ಟಿಯರ ಬಾಚಯ್ಯನ ನಿಷದಿ.'



೫. ಮತ್ತೊಂದು ಕಲ್ಲಿನ ಮೇಲೆ 'ಪ್ರಭಾಚಂದ್ರ ದೇವರ ಶಿಷ್ಯರಾದ ಕೊಮ್ಮಸೆಟ್ಟಿಯ ನಿಷದಿ.'

**ಬಸದಿಯ ಪ್ರಕಾರದಲ್ಲಿರುವ ನಿಷದಿಗಳು**

೬. ಬೇರಿ ಸೆಟ್ಟಿಯರ ಮಗ ಸಂಟಿಸೆಟ್ಟಿಯ ನಿಷದಿ
೭. ಅಲ್ಲೆ ಪಕ್ಕದಲ್ಲಿ ಕೆರೆಯ ಮತ್ತೊಂದು ಭಾಗದಲ್ಲಿ ಆಂಜನೇಯ ಸ್ವಾಮಿ ದೇವಾಲಯದ ಆವರಣದಲ್ಲಿರುವ ಕಲ್ಲಿನ ಮೇಲೆ ಮೂಲಸಂಘ ದೇಸಿಯಗಣದ ಚಾರುಕೀರ್ತಿ ಭಟ್ಟಾರಕರ ಶಿಷ್ಯನಾದ ಚಂದ್ರಾನ್ಕ ಭಟ್ಟಾರಕನ ನಿಷದಿ ಎಂದಿದೆ.

ಹಾಗೆಯೇ ಇನ್ನು ಕೆಲವಾರು ಶಾಸನಗಳಿರದ ನಿಷದಿ ಕಲ್ಲುಗಳು ಇಲ್ಲಿ ಕಾಣಬರುತ್ತವೆ. ಅವುಗಳನ್ನು ಒಡೆದು ಇತ್ತೀಚೆಗೆ ಕೆರೆ ಏರಿಯ ರಿಪೇರಿಯ ಸಂದರ್ಭದಲ್ಲಿ ಬಳಸಿಕೊಂಡಿದ್ದಾರೆ. ಹಲವು ವಿಗ್ರಹಗಳನ್ನು ಜಿನ ಬಿಂಬಗಳನ್ನು ಯಥಾವತ್ ಹಾಗೆಯೇ ಏರಿಗೆ ಹಾಕಿರುವುದು ಕಂಡುಬರುತ್ತದೆ.

ಹೀಗಾಗಿ ಪ್ರಸಿದ್ಧ ಜೈನ ಕೇಂದ್ರವಾದ ಅಮರಾಪುರಂನ ಜೈನ ಗುರುಪರಂಪರೆಯು ನೂರೈವತ್ತು ವರ್ಷಗಳಷ್ಟು ದೀರ್ಘಾಧಿಯವರೆಗೆ ಇರುವುದು ತಿಳಿಯುತ್ತದೆ. ಪ್ರಭಾಚಂದ್ರ ಭಟ್ಟಾರಕರಿಂದ ಹಿಡಿದು ದೇವಚಂದ್ರರವರೆಗೂ ಗುರ್ತಿಸಬಹುದು (ಹೆಚ್ಚಿನ ವಿಷಯಕ್ಕೆ, ಆಂಧ್ರ ಪ್ರದೇಶದ ಕನ್ನಡ ಶಾಸನಗಳು- ಡಾ। ಕೆ. ಆರ್. ಗಣೇಶ್ ಅವರ ಕೃತಿ ನೋಡಬಹುದು)

ಇಲ್ಲಿನ ಒಟ್ಟಾರೆ ನಿಷದಿಗಲ್ಲುಗಳನ್ನು ಗಮನಿಸಿದಾಗ ಬರೀ ಶಿಷ್ಯರಲ್ಲದೆ, ಭಕ್ತರಲ್ಲದೆ, ಜೈನಗುರುಗಳು ಸಹ ಸಲ್ಲೇಖನ ವ್ರತ ಕೈಗೊಂಡು ಸತ್ತ ವಿಚಾರಗಳನ್ನು ತಿಳಿಸುತ್ತವೆ. ಅಲ್ಲದೆ ೧೨ ನೇ ಶತಮಾನದ ಸುಮಾರಿನಲ್ಲಿ ಈ ಎಲ್ಲಾ ನಿಷದಿಗಲ್ಲುಗಳು ನಿರ್ಮಾಣಗೊಂಡಿರುವುದು ಆಶ್ಚರ್ಯದ ಸಂಗತಿ. ಅಲ್ಲದೆ ಒಂದೊಂದು ನಿಷದಿಗಲ್ಲಿನಲ್ಲಿ ಎರಡು ಮೂರು ಜನರು ನಿಷದಿಗೆ ಹೋದಂತೆ ಶಾಸನ ತಿಳಿಸುವುದನ್ನು ನೋಡಿದರೆ ಸಾಮೂಹಿಕ ವ್ರತ ಸ್ವೀಕರಿಸಿ ನಿಷದಿಗೊಂಡಿರಬಹುದೆ? ಎನಿಸುತ್ತದೆ. ಹಾಗಾದರೆ ಅದಕ್ಕೆ ಕಾರಣವೇನು? ಎನ್ನುವ ಪ್ರಶ್ನೆಗಳು ಏಳುತ್ತವೆ.

ನಿಡುಗಲ್ಲು, ಅಮರಾಪುರಂ, ಶಿರಾಪಟ್ಟಣ, ಹೇಮಾವತಿ, ಅಗಳಿ ಮುಂತಾದ ಸ್ಥಳಗಳಲ್ಲಿ ಈಗಲ್ಲೂ ಜೈನ ಬಸದಿಗಳು ಪೂಜೆಗೊಳ್ಳುತ್ತಿದ್ದು ಸುಸ್ಥಿತಿಯಲ್ಲಿವೆ. ನಿಡುಗಲ್ಲಿನ ಇರುಂಗೋಳನ

ಕಾಲಕ್ಕೆ ಮುಂಚೆ ಅಂದರೆ ಕ್ರಿ.ಶ. ೧೦,೧೧ ನೇ ಶತಮಾನದಲ್ಲಿ ಈ ಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದು ತದನಂತರ ಕ್ರಿ. ಶ. ೧೨ನೇ ಶತಮಾನದ ಕೊನೆಯ ಭಾಗದಲ್ಲಿ ಶೈವಧರ್ಮದ ಪ್ರಭಾವ ಹೆಚ್ಚಾದಂತೆಲ್ಲಾ ಈ ಧರ್ಮ ನಿಡುಗಲ್ಲಿನ ಚೋಳರ ಕಾಲದಲ್ಲಿ ಅವರ ರಕ್ಷಣೆ ಹಾಗೂ ಪ್ರಜೆಗಳ ಆದರ ಕಳೆದುಕೊಂಡಂತೆ ಕಾಣುತ್ತದೆ. ಈ ಒಂದೇ ಕಾಲಮಾನದಲ್ಲಾದ ನಿಷಧಿಗಲ್ಲುಗಳು ಗುಂಪು ಗುಂಪಾಗಿರುವುದು ಮತ್ತು ಸಾಮೂಹಿಕವಾಗಿ ತಂದೆ ಮಕ್ಕಳು ಗುರು- ಶಿಷ್ಯರು ಸಲ್ಲೇಖನ ವ್ರತ ಸ್ವೀಕರಿಸಿರುವುದನ್ನು ನೋಡಿದರೆ ನಮ್ಮ ಅನುಮಾನ ಇನ್ನಷ್ಟು ಖಚಿತವಾಗುತ್ತದೆ.

ಇಲ್ಲಿ ದೊರೆಯುವ ಎಲ್ಲಾ ನಿಷಿಧಿಗಲ್ಲುಗಳು ಕಪ್ಪುಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದು ಮುಕ್ಕೊಡೆ ಜಿನನ ಶಿಲ್ಪ ಅಥವಾ ಜಿನಮೂರ್ತಿಗಳ ಶಿಲ್ಪಗಳು ಮಾತ್ರ ಇದೆ ಹಾಗೂ ಗುರುವಿನ ಮುಂದೆ ಸನ್ಯಸನ ವ್ರತಧಾರಿಯಾಗಿರುವ ವ್ಯಕ್ತಿಯ ಚಿತ್ರಗಳನ್ನು ಕಾಣಬಹುದು. ಒಟ್ಟಾರೆಯಾಗಿ ಈ ಕಪ್ಪು ಕಲ್ಲಿನಲ್ಲಿ ಕೆತ್ತಲ್ಪಟ್ಟಿರುವ ನಿಷಧಿ ಶಿಲೆಗಳು ಎರಡು-ಮೂರು ಹಂತಗಳಲ್ಲಿದ್ದು ಬಹಳ ಆಕರ್ಷಣೀಯವಾಗಿ ಕಂಡುಬರುತ್ತವೆ. ಹಾಗಾಗಿ ಈ ಲೇಖನದ ಉದ್ದೇಶ ಅಮರಾಪುರಂನ ಬಸದಿಗಳ ಬಗೆಗೆ ಇದ್ದ ಗೊಂದಲ ಹಾಗೂ ನಿಡುಗಲ್ಲಿನ ಚೋಳರ ಕಾಲದಲ್ಲಿ ಜೈನಧರ್ಮದ ಸ್ಥಿತಿ-ಗತಿಯ ಬಗ್ಗೆ ಗಮನ ಸೆಳೆಯುವುದಾಗಿದ್ದು ಅದರ ಸಮಗ್ರ ಅಧ್ಯಯನಕ್ಕೆ ಕೆಲವು ಸಂಶಯಗಳನ್ನು ಎತ್ತಿದೆ ಎನ್ನಬಹುದು. ಕಾರಣ ೧೦-೧೧ ನೇ ಶತಮಾನದಲ್ಲಿ ಪ್ರಸಿದ್ಧ ಜೈನ ಕೇಂದ್ರವಾಗಿದ್ದಿತು ಎಂಬುದೇ ಆಗಿದೆ. ಈಗಲೂ ಆ ಸುತ್ತಲಿನ ಜೈನರಿಗೆ ಅದು ಪವಿತ್ರ ಸ್ಥಳವಾಗಿಯೇ ಉಳಿದುಕೊಂಡಿದೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಎ.ಕ. ಸಂ XII, ಪಾವಗಡ ೫೨. ಕ್ರಿ. ಶ. ೧೨೩೨.
*೨. ಎ. ಆರ್. ಎಸ್. ಐ. ಇ. ೧೯೧೭-ಸಿ ೪೨.
*೩. ಎ.ಕ. ಸಂ XII, ಶಿರಾ ೩೨.
*೪. ಎ. ಆರ್. ಐ. ಇ. ೧೯೬೦-೬೧. ನಂ ಬಿ. ೧೬ (ಕ್ರಿ. ಶ. ೧೧೪೦).

ಡಾ. ಪಿ. ಎಸ್. ನರಸಿಂಹಮೂರ್ತಿ*

# ಎಳತ್ತೂರಿನ ಅವಶೇಷಗಳು - ಒಂದು ಟಿಪ್ಪಣಿ

ಇತಿಹಾಸ ದರ್ಶನ ಸಂಪುಟ ೧೪ (೧೯೯೯) ರಲ್ಲಿ ಪ್ರಕಟವಾಗಿರುವ* "ಎಳತ್ತೂರಿನ ಅವಶೇಷಗಳು" (ಪುಟ ೬೬-೬೭) ಕುರಿತಾಗಿ ಈ ಟಿಪ್ಪಣಿ.

ಈ ಲೇಖನದಲ್ಲಿ ಎರಡು ಶಿಲಾ ಶಾಸನಗಳ ಬಗ್ಗೆ ವಿವರಣೆ ಇದೆ. ಇದರಲ್ಲಿ ಒಂದು ತಾಳಿಪಾಡಿಯಲ್ಲಿರುವುದು; ಎರಡನೆಯದು ಎಳತ್ತೂರಿನ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಪ್ರಾಕಾರ ದೊಳಗಿರುವುದು. ಲೇಖನದಲ್ಲಿ ಶಾಸನಗಳನ್ನು ಪ್ರಥಮ ಬಾರಿಗೆ ಬೆಳಕಿಗೆ ತಂದಿರುವುದು ಎಂದು ನೇರವಾಗಿ ಹೇಳದಿದ್ದರೂ ಅದರ ಒಕ್ಕಣೆಯ ಸ್ವರೂಪ ಅದನ್ನು ಪರೋಕ್ಷವಾಗಿ ಹೇಳುತ್ತದೆ. ಪ್ರಸ್ತುತ ಎರಡು ಶಾಸನಗಳಲ್ಲಿ ಒಂದಾದ ತಾಳಿಪಾಡಿಯ ಶಾಸನ ಪಾಠ, ಅರ್ಥ ಮತ್ತು ಕಾಲಗಳ ಬಗ್ಗೆ ನನ್ನ ಅನಿಸಿಕೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ದಾಖಲಿಸಲಿಚ್ಛಿಸುತ್ತೇನೆ.

ಈಗ್ಗೆ ಸುಮಾರು ೨೨ ವರ್ಷಗಳ ಹಿಂದೆ ನಾನು ಈ ಎರಡೂ ಶಾಸನಗಳನ್ನು ಅಧ್ಯಯನಾರ್ಥ ಪ್ರಥಮಬಾರಿಗೆ ಪ್ರತಿ ಮಾಡಿದೆ. ಇದಕ್ಕೆ ಆಗ ನನಗೆ ಸಹಕಾರವಿತ್ತವರು ಮಿತ್ರರಾದ ಕಟೀಲು ಶಾಲಾ ಅಧ್ಯಾಪಕ (ಈಗ ನಿವೃತ್ತ) ಶ್ರೀ ಪ್ರ. ಶ್ರೀನಿವಾಸ ಭಟ್ಟರು. ತಾಳಿಪಾಡಿಯ ಶಾಸನವು ಬೆಟ್ಟುಗದ್ದೆಯೊಂದರಲ್ಲಿದ್ದು ಅದರ ತಲೆಯ ತುಣುಕು ಮಾತ್ರ ಮೇಲೆ ಕಾಣುತ್ತಿತ್ತು. ಪ್ರತಿ ಮಾಡುವ ಕಾರ್ಯಕ್ಕಾಗಿ ನೆಲವನ್ನು ಅಗೆದು ಸ್ಥಳೀಯ ಶಾಲಾ ಅಧ್ಯಾಪಕರ ನೆರವಿನಿಂದ ಶಾಸನ ಕಲ್ಲನ್ನು ಮೇಲಕ್ಕೆ ತರಲಾಯಿತು. ಆ ನಂತರ ಸ್ಥಳೀಯ ದಿನಪತ್ರಿಕೆ ಉದಯವಾಣಿಯಲ್ಲಿ (೭-೪-೧೯೮೧ರ ಸಂಚಿಕೆ) ಶಾಸನದ ಬಗ್ಗೆ ಒಂದು ಸಂಕ್ಷಿಪ್ತ ವರದಿಯನ್ನು ಪ್ರಕಟಿಸಿದೆ.

ಪ್ರಸ್ತುತ ಟಿಪ್ಪಣಿಗಾಗಿ ತಾಳಿಪಾಡಿ ಶಾಸನದ ಬಗ್ಗೆ ಮೇಲೆ ಉಲ್ಲೇಖಿಸಿರುವ ಲೇಖನದಲ್ಲಿ ಕೊಟ್ಟಿರುವ ವಿವರಣೆಯನ್ನು ಗಮನಿಸೋಣ.

೧. "ಈ ಶಾಸನದಲ್ಲಿ ಶಕ ೧೫೨೮ ವಿಶ್ವಾವಸು, ಧನುಮಾಸ ೯, ಆದಿತ್ಯವಾರವೆಂದಿದ್ದು ಇದು ಕ್ರಿ. ಶ. ೮-೧೨-೧೬೦೫ರ ಭಾನುವಾರಕ್ಕೆ ಸರಿಹೊಂದುತ್ತದೆ. ಈ ಶಾಸನದಲ್ಲಿ ಉಕ್ತನಾದ ಅರಸ ಬಂಕಿದೇವಾಳುಪೇಂದ್ರನಾಗಿದ್ದು, ರಾಜಧಾನಿ ಮಂಗಳಾಪುರದ ಆಚಾರ್ಯರಿಗೆ ದಾನ ನೀಡಿದಂತೆ ತಿಳಿದು ಬರುತ್ತದೆ."

೨. "ಕರ್ನಾಟಕ ರಾಜ್ಯ ಗ್ಯಾಜೆಟಿಯರ್ ದಕ್ಷಿಣ ಕನ್ನಡ ಜಿಲ್ಲೆ" ಪುಟ ೪೮ರಲ್ಲಿ ಇಮ್ಮಡಿ ವೀರ ಪಾಂಡ್ಯದೇವನೇ (ಕ್ರಿ. ಶ. ಸುಮಾರು ೧೩೯೦-೧೪೦೦) ಕೊನೆಯ ಅಳುಪ ರಾಜನೆಂದು ತಿಳಿಸಿರುತ್ತಾರೆ. ಅದಾದನಂತರ ಕ್ರಿ. ಶ. ೧೪೦೫ರ ಶಾಸನದಲ್ಲಿ ಕೊಮ್ಮ ಎಂಬುವನು ಅಳುಪ ವಂಶದ ಅರಸನಾಗಿ ಇತ್ತಲ ಮಹಾದೇವ ದೇವಸ್ಥಾನಕ್ಕೆ ದಾನ ನೀಡಿರುವಂತೆ ತಿಳಿಯುತ್ತದೆ. ಮುಂದೆ ಕ್ರಿ. ಶ. ೧೫೨೪ರ ವರೆಗೆ ಮಾತ್ರ ಇವನ ಪೀಳಿಗೆಯವರ ಶಾಸನಗಳು ದೊರೆಯುತ್ತವೆ. ಹೀಗಾಗಿ ಈಗ ದೊರೆತಿರುವ ಶಾಸನ ಕ್ರಿ. ಶ. ೧೬೦೫ರದ್ದಾಗಿದ್ದು ಬಹುಶಃ ಮೂಲ ಅಳುಪ ವಂಶದ (ಪಾಂಡ್ಯ) ಮುಂದುವರಿಕೆಯ ಭಾಗವಿರುವಂತೆ ತೋರುತ್ತದೆ. ಇವರು ರಾಜಧಾನಿಯನ್ನು ಮಂಗಳಪುರವೆಂದು ಹೇಳಿ ಕೊಂಡಿರುವುದರಿಂದ ಮೂಲ ಅಳುಪರಸರ ಗುಂಪಿಗೆ ಸೇರಿದವರೆಂದು ಹೇಳಬಹುದಾಗಿದೆ."

*ತಾಳಿಪಾಡಿ ಶಾಸನ ಕುರಿತಾದ ಈ ಅರ್ಥ ವಿವರಣೆ ಸಂಪೂರ್ಣ ದೋಷಪೂರ್ಣವಾಗಿದ್ದು ಈ ಬಗ್ಗೆ ನನ್ನ ವಿವರಣೆ ಕೆಳಗಿನಂತಿದೆ:*

೧. ಲೇಖಕಿಯವರು (ವಂಶ ನಿರ್ದೇಶನಾರ್ಥ) ಉಪಯೋಗಿಸಿರುವ ಪದ 'ಅಳುಪ' ತಪ್ಪು; ಇದು **ಆಳುಪ** ಎಂದಾಗಬೇಕು.

೨. ಕ್ರಿ. ಶ. ೧೪೦೫ರ ಯಾವ ಶಾಸನ ಎಂದು ತಿಳಿಸಿಲ್ಲ. ಇವರು ತಿಳಿಸಿರುವಂತೆ ಈ ಶಾಸನದ ಕೊಮ್ಮ ಅರಸು ಆಳುಪ ರಾಜನಲ್ಲ. ಪ್ರಾಯಶಃ ೧೪೦೫ಕ್ಕೆ ಸೇರುವ ಕಾರ್ಕಳ ತಾಲೂಕಿನ ಹಚವೆತ್ತು*[1] ಗ್ರಾಮದ ಶಾಸನವನ್ನು ಇವರು ಇಲ್ಲಿ ಉಲ್ಲೇಖಿಸಿರಬಹುದು. ಆದರೆ ಈ ಶಾಸನದಲ್ಲಿ ಬರುವವ ಕಾಂತಣ ಮಾರಾಳುವ ಬಿನ್ ಕೊಣ್ಣ. ಈತ ಇಲ್ಲಿಗೆ ಸಮೀಪದ ಪಣಪಿಲದ ಅರಸೊತ್ತಿಗೆಗೆ ಸೇರಿದ ಕೊಣ್ಣ ಅರಸನೇ ಹೊರತು ಆಳುಪ ಅರಸನಲ್ಲ. ಕೊಣ್ಣರು ಜೈನರು. (ಈ ವಂಶ ಈಗಲೂ ಇದೆ). ಪರಧರ್ಮ ಸಹಿಷ್ಣುತೆ ಇಲ್ಲಿ ರಾಜಕೀಯ ಮತ್ತು ಸಾಮಾಜಿಕವಾಗಿ ಭದ್ರವಾಗಿ ಬೇರೂರಿದ್ದರಿಂದ ಜೈನ ರಾಜರುಗಳು ಹಿಂದೂ ದೇವಾಲಯಗಳಿಗೆ ದಾನ ಧರ್ಮಗಳನ್ನು ಮಾಡಿದ ವಿಚಾರ ಸರ್ವೇ ಸಾಮಾನ್ಯವಾಗಿ ಕಾಣುತ್ತೇವೆ.

"ಮುಂದೆ ಕ್ರಿ. ಶ. ೧೫೨೪ರ ವರೆಗೆ ಮಾತ್ರ ಇವನ ಪೀಳಿಗೆಯವರ ಶಾಸನಗಳು ದೊರೆಯುತ್ತವೆ" ಎಂದಿದ್ದಾರೆ. ಅವು ಯಾವುವು ಮತ್ತು ಸಂಖ್ಯೆ ಎಷ್ಟು ಎಂಬ ವಿಚಾರ ಇಲ್ಲಿ ಇಲ್ಲ. ಕ್ರಿ. ಶ. ೧೩೯೩ಕ್ಕೆ ಸೇರುವ ಇಮ್ಮಡಿ ವೀರ

*ಪ್ರಿನ್ಸಿಪಾಲ್ (ನಿವೃತ್ತ) 'ಶ್ರಿಂಗಾರ್', ಕಡಿಯಾಲಿ ಹಿರಿಯ ಪ್ರಾಥಮಿಕ ಶಾಲೆ, ಕಡಿಯಾಲಿ, ಉಡುಪಿ - ೫೭೬೧೦೨.

ಪಾಂಡ್ಯನ ಮೂಡಬಿದುರೆ ಶಾಸನದ*[೨] ನಂತರ ಇಷ್ಟರವರೆಗೆ ಯಾವ ಆಳುಪ ಶಾಸನವೂ ದೆರೆತಿಲ್ಲ.*[೩] ಹಾಗಾಗಿ ಲೇಖಕಿಯವರು ೧೪೦೫-೧೫೨೪ರ ಅವಧಿಯೊಳಗೆ ಸೇರಿದ ಯಾವ ಆಳುಪ ಶಾಸನ ತಮಗೆ ದೊರೆತಿದೆ ಎಂದು ತಿಳಿಸಿದ್ದರೆ ಉಪಕಾರವಾಗುತ್ತಿತ್ತು.

೩. ಡಾ. ಕೆ. ವಿ. ರಮೇಶ್ ಅವರು ಆಳುಪ ವಂಶದ ಇತಿಹಾಸವನ್ನು ಆಮೂಲಾಗ್ರವಾಗಿ ಚರ್ಚಿಸಿ ಪ್ರಾಯಶಃ ಈ ವಂಶದ ಅಂತ್ಯ ಕ್ರಿ. ಶ. ೧೪೦೦ರ ವೇಳೆಗೆ ಆಯಿತು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.*[೪] ಇದೊಂದು ಅತ್ಯಂತ ನಿಖರವಾದ ಅಭಿಪ್ರಾಯ. ಗೆಜೆಟಿಯರ್‌ನಲ್ಲಿರುವ ಅಭಿಪ್ರಾಯ ಇದನ್ನೆ ಆಧರಿಸಿದ್ದು ಅಂದಮೇಲೆ ಕ್ರಿ. ಶ. ೧೪೦೫ಕ್ಕೂ ಹಿಂದಿನಿಂದಲೇ ಆಳುಪ ವಂಶ ಅಸ್ತಿತ್ವದಲ್ಲಿರಲಿಲ್ಲ ಎಂದಾಯಿತು. ಈ ಪರಿಸ್ಥಿತಿಯಲ್ಲಿ ದಿಢೀರನೆ ೧೬೦೫ರಲ್ಲೂ ಈ ಮೂಲ ಆಳುಪ ವಂಶ ಮುಂದುವರೆದಿತ್ತು ಎಂಬ ವಿಚಾರಕ್ಕೆ ಸಮರ್ಥನೆ ದೊರೆಯುವುದಿಲ್ಲ.*[೫]

೪. ಅಂದಮೇಲೆ ತಾಳಿಪಾಡಿಯಲ್ಲಿ ದೊರೆತಿರುವ ಈ ಶಿಲಾಶಾಸನವೇ ತಪ್ಪೆ? ಈ ಭಾವನೆ ಮೂಡಿದರೆ ತಪ್ಪೇನಿಲ್ಲ. ಆದರೆ ಶಾಸನ ತಪ್ಪಲ್ಲ, ಅಲ್ಲಿ ತಪ್ಪೂ ಇಲ್ಲ. ಮೂಲಭೂತವಾಗಿರುವ ತಪ್ಪು, ಶಾಸನ ಓದುವಲ್ಲಿ ಮತ್ತು ಅದರ ಪಾಠ ಸಿದ್ಧಮಾಡುವಲ್ಲಿ. ಬಹುಮುಖ್ಯವಾದ ತಪ್ಪೆಂದರೆ ತೇದಿ ವಿವರವನ್ನು ಓದುವಲ್ಲಿ ಶಾಸನದಲ್ಲಿ ಶಕವರ್ಷ ಸ್ಪಷ್ಟವಾಗಿದ್ದು ಇದು ೧೨೨೮ ವಿಶ್ವಾವಸು ಸಂವತ್ಸರ ಆಗಿದ್ದು ಲೇಖಕಿಯವರು ಹೇಳಿದಂತೆ ೧೫೨೮ ಅಲ್ಲ. ಇಲ್ಲಿಯೇ ಮುನ್ನೂರು ವರ್ಷಗಳ ವ್ಯತ್ಯಾಸವನ್ನು ಕಾಣುತ್ತೇವೆ. ಶಾಸನದ ಲಿಪಿಯ ಕಡೆಗೆ ಗಮನಹರಿಸಿ ಇದೆ ೧೭ನೆಯ ಶತಮಾನದ ಪ್ರಾರಂಭಿಕ ಕಾಲದ ಕನ್ನಡ ಲಿಪಿಯೇ (?) ಎಂಬ ಅನುಮಾನಾಸ್ಪದ ಆಲೋಚನೆ ಮಾಡಿದ್ದರೆ ಅವರು ಮುಂದೆ ಮಾಡಿದ ತಪ್ಪುಗಳಾಗುತ್ತಲೇ ಇರಲಿಲ್ಲ.

೫. ಶಾಸನ ಪಾಠ ತಯಾರಿಸುವಲ್ಲಿ ಆಗಿರುವ ಇನ್ನೊಂದು ತಪ್ಪನ್ನು ಇಲ್ಲಿ ಅವಲೋಕಿಸಲು ಇಷ್ಟಪಡುತ್ತೇನೆ.
"ಶಾಸನದಲ್ಲಿ ಉಕ್ತನಾದ ಅರಸ ಬಂಕಿ ದೇವಾಳು ಪೇಂದ್ರನಾಗಿದ್ದು ರಾಜಧಾನಿ ಮಂಗಳಾಪುರದ ಆಚಾರ್ಯರಿಗೆ ದಾನ ನೀಡಿದುಂತೆ ತಿಳಿದು ಬರುತ್ತದೆ" ಎಂದು ಲೇಖಕಿಯರು ತಿಳಿಸಿದ್ದಾರೆ. ಅವರು ಓದಿದ ಶಾಸನ ಸಾಲುಗಳು ಇಂತಿವೆ.

೬. ರಾಜಧಾನಿ ಮಂಗಳಾಪುರದ ಚಾರ್ಯರ ಮನೆ
೭. ಯ ಭುವನಾಮಾ.....ಧವೊಮಿಸಾ ಆಯಿತು ಮ

ಇದು ಅಶುದ್ಧ ಪಾಠ -
ಶುದ್ಧ ಪಾಠ ಈ ಕೆಳಗಿನಂತಿದೆ.

೮. ರಾಜಧಾನಿ ಮಂಗಳಾಪುರದ ಹಿರ್ಯ್ಯರ ಮನೆ
೯. ಯ ಭುವನಾಸ್ರ(ಶ್ರ)ಯದ ಮೊಖ[ಗ] ಸಾಲೆಯು ವೊ
೧೦. ಡ್ಡೋಲಗಂ ಗೊಟ್ಟಿರಲು

ಇಲ್ಲಿ ಯಾವ (ಆ)ಚಾರ್ಯರಾಗಲೀ, ರಾಜ ಅವರಿಗೆ ದಾನ ಕೊಟ್ಟಿದ್ದಾಗಲೀ ಉಕ್ತವಾಗಿಲ್ಲ. ಸಾಲು ೯ರಲ್ಲಿ ಅವರು ಓದಿರುವ "ಧವೊಮಿಸಾ ಅಯಿತು ಮ" ಎಂಬುದರ ಅರ್ಥವೇನು ಎಂಬ ಬಗ್ಗೆ ಕನಿಷ್ಠ ಸಂದೇಹದ ಮಾತಾದರೂ ವ್ಯಕ್ತವಾಗಬೇಕಿತ್ತು. ಶುದ್ಧ ಪಾಠದ ಪ್ರಕಾರ ಈ ಸಾಲುಗಳ ಸರಿಯಾದ ಅರ್ಥ - "(ರಾಜ ತನ್ನ) ರಾಜಧಾನಿ ಮಂಗಳಾಪುರದ (ಮಂಗಳೂರಿನ) ಹಿರಿಯ ಅರಮನೆಯ ಭುವನಾಶ್ರಯದ ವೊಗಸಾಲೆಯಲ್ಲಿ ವೊಡ್ಡೋಲಗದಲ್ಲಿದ್ದಾಗ" ಎಂದು.

ಡಾ. ಕೆ. ಜಿ. ವಸಂತ ಮಾಧವ ಅವರು ೧೯೮೮ರಲ್ಲಿ ಪ್ರಕಟಿಸಿರುವ ತಮ್ಮ ಹೊತ್ತಿಗೆ - "ಮೂಲಿಕೆಯ ಇತಿಹಾಸ"*[೬] ದಲ್ಲಿ ಈ ಶಾಸನದ ಪಡಿಯಚ್ಚು ಸಹಿತ ಪಾಠವನ್ನು ಪ್ರಕಟಿಸಿದ್ದಾರೆ.*[೭]



ಒಟ್ಟಿನಲ್ಲಿ ತಾಳಿಪಾಡಿಯ ಬಂಕಿ ದೇವಾಳುಪೇಂದ್ರನ ಶಾಸನ ಕ್ರಿ. ಶ. ೧೩೦೫ಕ್ಕೆ ಸೇರುವುದೇ ಹೊರತು ಕ್ರಿ. ಶ. ೧೬೦೫ಕ್ಕೆ ಅಲ್ಲ.

**ಶಾಸನ ಪಾಠ**

೧ ಸ್ವಸ್ತಿ ಶ್ರೀಮತು ಪಾಂಡ್ಯ ಚಕ್ರವರ್ತಿ*[೮] ರಾಯ ಗಜಾಂ
೨ ಕುಷ ಬಂಕಿದೇವಾಳ್ವೇಂದ್ರ ದೇವರ ವಿಜಯ ರಾಜ್ಯ
೩ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನ ಮಾಚಂದ್ರಾರ್ಕ ತಾರ-
೪ ೦(ಬರ)೦ ದುಷ್ಟ ನಿಗ್ರಹ ಶಿಷ್ಟ*[೯] ಪ್ರತಿಪಾಳಕರಾಗಿ ಸುಖ
೫ ಸಂಕತಾ ವಿನೋದದಿಂ ರಾಜ್ಯಂ ಗೆಯಿ ಉತ್ತಮಿರ್ದ ಶ-
೬ ಕನೃಪ ಕಾಲಾತೀತದೊಳು*[೧೦] ೧೨೨೮ನೆಯ ವಿಶ್ವಾವಸು
೭ ಸಂವತ್ಸರದ ದನುಮಾಸ ೯ನೆಯ ಆ। ಶ್ರೀಮತು
೮ ರಾಜಧಾನಿ ಮಂಗಳಾಪುರದ ಹಿರ್ಯ್ಯರ ಮನೆ
೯ ಯ ಭುವನಾಸ್ರ(ಶ್ರ)ಯದ ಮೊಖ(ಗ)ಸಾಲೆಯಲು ವೊ
೧೦ ಡ್ಡೋಲಗಂ ಗೊಟ್ಟಿರಲು ಕುಲಶೇಖರ ದೇವರು ಮು*[೧೧]
೧೧ ಖ್ಯರಾದ ಅಳಿಯಂದಿರೂ ಕುಮಾರ ಬಂಮದೇ(ವ)*[೧೨]
೧೨ ರು ಸಮಸ್ತ ಪ್ರಧಾನರು .. .. .. ..
೧೩ - ೧೮ ಅಕ್ಷರಗಳು ಮಾಸಿವೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

* ಶ್ರೀಮತಿ ಜಯಮ್ಮ ಕರಿಯಣ್ಣ ಅವರ ಲೇಖನ.
*೧. **ಕೇಂದ್ರ ಶಾಸನ ಇಲಾಖೆಯ ವಾರ್ಷಿಕ ವರದಿ** (ARISE) - ೧೯೨೮-೨೯. ನಂ. ೫೧೯, ಕೆ. ವಿ. ರಮೇಶ : ಎ ಹಿಸ್ಟರಿ ಆಫ್ ಸೌತ್ ಕೆನರ, ಪು. ೧೬೧.
*೨. **ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್** (S.I.I.), ಸಂ. ೭, ನಂ. ೨೨೧.
*೩. ಕೆ. ವಿ. ರಮೇಶ್ - ಅದೇ - ಪು. ೧೪೮-೧೪೯.
*೪. ಅದೇ ಪು. ೧೪೫-೧೪೯.
*೫. **ದ. ಕ. ಜಿಲ್ಲಾ ಗೆಜೆಟಿಯರ್**‌ನ ಪುಟ ೪೮ರಲ್ಲಿರುವ ಮಾಹಿತಿ ಈ ತಪ್ಪಿಗೆ ಕಾರಣವಿರಬಹುದೇ?
*೬. ಡಾ. ಕೆ. ಜಿ. ವಸಂತಮಾಧವ - "ಮೂಲಿಕೆಯ ಇತಿಹಾಸ" (ಬೆಳ್ಳಿ ಹಬ್ಬದ ನೆನಪಿನ ಗ್ರಂಥ) ೧೯೮೮. ಪ್ರ. ವಿಜಯ ಕಾಲೇಜ್ ವಿಶ್ವಸ್ಥ ಮಂಡಳಿ, ಮೂಲ್ಕಿ (ದ. ಕ.).
*೭. ಇಲ್ಲಿರುವ ಶಾಸನ ಪಡಿಯಚ್ಚಿನ ಫೋಟೊ ಪೂರ್ಣವಾಗಿಲ್ಲ. ಅಲ್ಲದೆ ಶಾಸನ ಪಾಠ ಸಹ ಅಪೂರ್ಣ.
*೮. **ಇತಿಹಾಸ ದರ್ಶನ** (೧೪) ಪು. ೬೭ರಲ್ಲಿರುವ ಪಾಠ -
ಸಾಲು ೧ : ಸ್ವಸ್ತಿ ಶ್ರೀಮತು ಪಾಂಡ್ಯ....ಮತ್ತರಾಯ ಗಜಾಂ.
*೯. ಅದೇ ಸಾಲು ೪ : ೦ಬರಂ ಸಲುತ್ತ ಮಿರೆ.... ಪ್ರತಿ .. ಕರಾಗಿ ಸುಖ
*೧೦. ಅದೇ ಸಾಲು ೬ : .... ಶಕ ವರಿಷ ೧೫೨೮ ನೆಯ ವಿಶ್ವಾವಸು
*೧೧. ಅದೇ ಸಾಲು ೧೦ : .... ೦ಗ್ರರಿದಾ ಊರಲು ಕುಳ ..... ಮಹರಿ
*೧೨. ಅದೇ ಸಾಲು ೧೧ : .... ಅಳಿಮಂದಿರು ಕೊಟ್ಟ ......

ಜಯದೇವಪ್ಪ ಜೈನಕೇರಿ*

# ಆನಂದಪುರಂ ಶ್ರೀ ಮುರುಘಾಮಠದ ಶಿವಪ್ಪನಾಯಕ ವಸ್ತುಸಂಗ್ರಹಾಲಯ ಸಂಶೋಧನಾ ಕೇಂದ್ರದ ಅಪ್ರಕಟಿತ ಶಾಸನ

ಸುಮಾರು ೨೬೪ ವರ್ಷಗಳ ಕಾಲ ಕನ್ನಡ ನಾಡಿನ ಬಹುಭಾಗವನ್ನು ಸಮರ್ಥವಾಗಿ ಆಳಿದವರು ಕೆಳದಿ ಅರಸರು (ಕ್ರಿ. ಶ. ೧೪೯೯-೧೭೬೩). ತಮ್ಮ ರಾಜಕೀಯ ಸಾಧನೆ, ಧಾರ್ಮಿಕ ಶ್ರದ್ಧೆಗಳ ಅಂಗವಾಗಿ ಎಲ್ಲ ೧೬ ರಾಜರೂ, ಇಬ್ಬರೂ ರಾಣಿಯರೂ ನೂರಾರು ದಾನದತ್ತಿಗಳನ್ನು, ಭೂಮಿದಾನಗಳನ್ನು ನೀಡಿದ್ದಾರೆ. ಇವುಗಳು ಅನೇಕ ಶಿಲಾಶಾಸನಗಳು, ತಾಮ್ರ ಶಾಸನಗಳು ಮತ್ತು ಕಡತಗಳ ರೂಪದಲ್ಲಿ ದಾಖಲಾಗಿವೆ. ಕೆಳದಿ ಅರಸರಿಗೆ ಸಂಬಂಧಿಸಿದ ಸುಮಾರು ೩೦೦ಕ್ಕೂ ಹೆಚ್ಚು ಶಾಸನಗಳು*[1] ಪ್ರಕಟವಾಗಿವೆ. ಕೆಳದಿ ಅರಸರು ಚೈತ್ಯಾಲಯ ಮತ್ತು ಮಸೀದಿಗಳಿಗೂ*[2] ದಾನದತ್ತಿ ನೀಡಿದ್ದಾರೆ. ಅವರಲ್ಲಿ ಅನೇಕ ರಾಜರು ಸಾಹಿತ್ಯ ಕೃತಿಗಳನ್ನು ರಚಿಸಿರುವರಲ್ಲದೆ, ಕಲಾರಾಧಕರೂ ಸಾಹಿತ್ಯ ಪ್ರೇಮಿಗಳೂ ಆಗಿದ್ದರು. ಅವರ ಕಾಲದ ಅನೇಕ ದೇವಾಲಯಗಳು, ಮಠಗಳು ಇಂದಿಗೂ ಪ್ರಸಿದ್ಧವಾಗಿವೆ.

ಕೆಳದಿ ಅರಸರಿಂದ ಪೋಷಿತವಾಗಿ ಇಂದಿಗೂ ತನ್ನ ಪರಂಪರೆಯನ್ನು ಉಳಿಸಿಕೊಂಡು ಬಂದಿರುವ ಶ್ರೀ ಆನಂದಪುರಂ ಮುರುಘಾಮಠವು ಕೆಳದಿ ರಾಜಪರಂಪರೆಯನ್ನು ಜನತೆಗೆ ಪರಿಚಯಿಸುವ ಮಹಾಕಾರ್ಯವನ್ನು ಕೈಗೆತ್ತಿಕೊಂಡಿದೆ.*[3] ಈ ಮಠದ ಆಶ್ರಯದಲ್ಲಿರುವ ಶಿವಪ್ಪನಾಯಕ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರದಲ್ಲಿರುವ ಶಾಸನಗಳನ್ನು ಇತ್ತೀಚೆಗೆ ಪರಿಶೀಲಿಸುವ ಸಂದರ್ಭದಲ್ಲಿ ಒಂದು ಅಪ್ರಕಟಿತ ತಾಮ್ರ ಶಾಸನ ಕಂಡುಬಂದಿದೆ.

ಪ್ರಸ್ತುತ ತಾಮ್ರಶಾಸನವು ಸುಮಾರು ೧೮ ಸೆಂ.ಮೀ. ಅಗಲ, ೨೧ ಸೆಂ.ಮೀ. ಉದ್ದವಿದೆ. ಮೇಲ್ಭಾಗದಲ್ಲಿ ೪.೫ ಸೆಂ.ಮೀ. ಅಗಲದ ಅರ್ಧ ಚಂದ್ರಾಕೃತಿಯ ಹಿಡಿ ಇದೆ. ೧೯ ಸಾಲುಗಳಿರುವ ಈ ಶಾಸನದ ಕೊನೆಗೆ "ಶ್ರೀ ಸದಾಶಿವ" ಎಂಬ ಅಂಕಿತವಿದೆ. ಕನ್ನಡ ಭಾಷೆಯಲ್ಲಿರುವ ಈ ಶಾಸನದ ಕಾಲಮಾನ ಶಾ.ಶ. ೧೫೯೪ (ಕ್ರಿ. ಶ. ೧೬೭೨).

ಶಾಸನ ಪಾಠ

೧ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವ
೨ ರುಶ ೧೫೯೪ ನೆಯ ವಿರೋದಿಕೃತ [ಸಂವತ್ಸರ ]ದ ಜೆ
೩ ಷ್ಟಶು ೧೫ ಲೂ ಶ್ರೀಮತ್ಕೆಳದಿ ಸೋಮಶೇಖ[ರ] ನಾಯ
೪ ಕರೂ ದೊದೂರ ಬಡಗಿ ವೀರಗೆ ಕೊಟ ಶಾಸನದ ಕ್ರಮ
೫ ವೆಂತ್ತೆಂದರೆ ನೀನು ಉಂಬಳಿ ಕೊಡಬೇಕೆಂದು ಹೇಳಿ
೬ ಕೊಂಡ ಸಂಮಂದ ಮುಂಗಿನಾಡ ಸಿಮೆಯ ವಳಗ
೭ ಣ ದೊದೂರ ಗ್ರಾಮದಿಂದ ಸಾಲೆಕೊಪ ಪದ ತ್ತಿಂಮ
೮ ನಿಂದ ಮಾವಿನಹೊಳಿ ಗದೆಯಿಂದ ಬಿಜ ಖ೧ಕೆಗ॥
೯ [ಬೊಂಮ]ನಗದೆ ಚಂನನಿಂದ ಹೊಲೆನ ಹೊಳಿ ಗದೆ ಯಿ
೧೦ ಂದ ಬಜ ಖ॥ ಕೆ ೨॥ ವಿರ ಗೊಂಡಿಯಿಂದ ಬಸ
೧೧ ರಗಣಿ ಗದೆ ಯಿಂದ ಬಿಜ ಖ॥ ೨॥ಕುಂಟ
೧೨ ಣ ಪದಕೊಲೂರನಿಂದ ಕುಂಟಹೂಳಿ ಸೊಂನುಗ
೧೩ ನ ಮರದ ಗದೆಯಿಂದ ಬಿಜ ೧ ಕೆಗ ॥ ಅಂತು ಬಿಜ
೧೪ ಖ೩ಕೆಗೆ ೧॥ ಮೂರು ಹೊಂನಿನ ಭೂಮಿಯನು ನಿನ
೧೫ ಗೆ ಉಂಬಳಿಯಾಗಿ ಕೊಟೆವಾಗಿ ಯಿ ಭೂಮಿಗೆ ಸಲು
೧೬ ವ ಸರ್ವಸಾಂಮ್ಯವನು ಪೂರ್ವ ಮರಿಯಾದೆಯಲಿ ಆ
೧೭ ಗು ಮಾಡಿಕೊಂಡು ನಿಂನ ಸಂತಾನ ಪಾರಂಪರೆಯಾ
೧೮ ಗಿ ಅನುಭವಿಸಿಕೊಂಡು ಬಾಹುದೆಂದು ಕೊಟ ಶಾ
೧೯ ಸನ॥ ಶ್ರೀ ಸದಾಶಿವ

*ಸಾರಾಂಶ* : ಪ್ರಸ್ತುತ ಪತ್ತೆಯಾಗಿರುವ ತಾಮ್ರ ಶಾಸನದಲ್ಲಿ ಕೆಳದಿ ಅರಸು ಸೋಮಶೇಖರ ನಾಯಕರು (ಕ್ರಿ. ಶ. ೧೬೬೩-೧೬೭೨) ಅವರ ಅಂತಿಮ ದಿನಗಳಲ್ಲಿ ಭೂಮಿದಾನ ನೀಡಿದ ವಿವರಗಳಿವೆ, ಕೆಳದಿ ರಾಜ್ಯದ ದೊದೂರ ಗ್ರಾಮದ ಬಡಗಿ ವೀರಗೆ "ಮೂರು ಹೊಂನಿನ" ಭೂಮಿಯನ್ನು ಮುಂಗಿನಾಡ ಸೀಮೆಯೊಳಗಿನ ಮಾವಿನಹೊಳೆ ಗ್ರಾಮದಲ್ಲಿ ಭೂಮಿದಾನ ನೀಡಿದ ವಿವರಗಳಿವೆ. "ಮುಂಗಿನಾಡ ಸೀಮೆ" ಉಲ್ಲೇಖವು ಹಿರಿಯ ಬಸವಪ್ಪ ನಾಯಕರ ಅವಧಿಯ (ಕ್ರಿ. ಶ. ೧೬೯೭-೧೭೧೪) ಕೆಳದಿ ಅರಸರ ಶಾಸನ ಸಂಖ್ಯೆ ೨೨೯ರಲ್ಲಿ ೫ನೇ ಸಾಲಿನಲ್ಲಿ ಮತ್ತು ಶಾಸನ ಸಂಖ್ಯೆ ೨೩೨ರ ೪ನೇ ಸಾಲಿನಲ್ಲಿ ಕಂಡುಬರುತ್ತದೆ. ಮುಂಗಿನಾಡ ಸೀಮೆಯ ಮೂಡುಕೊಪ್ಪದಲ್ಲಿ ಭೂಮಿ ದಾನ ನೀಡಿದ ವಿವರಗಳು ಮೇಲ್ಕಂಡ ಎರಡು ಶಾಸನಗಳಲ್ಲಿವೆ. ಪ್ರಸ್ತುತ ಶಾಸನದಲ್ಲಿರುವ ದೊದೂರ, ಮಾವಿನಹೊಳೆ, ಹೊಲೆನಹಳ್ಳಿ ಮತ್ತು ಕುಂಠಿಹೊಳೆ ಗ್ರಾಮಗಳು ಪ್ರಾಯಶಃ ಇಂದಿನ ಮೂಡದೂರು, ಮಾವಿನಸರ, ಹೊನಗಲ್ಲು ಮತ್ತು ಕುಂಠಿಕೊಪ್ಪ ಎಂಬುದಾಗಿ ಸ್ಥಳನಾಮಗಳು ವ್ಯತ್ಯಾಸವಾಗಿರುವ ಸಾಧ್ಯತೆಗಳಿವೆ. ಈ ಗ್ರಾಮಗಳೆಲ್ಲವು ಸಾಗರ

* ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ - ೧.



ತಾಲೂಕಿನಲ್ಲಿವೆ. ಈ ದಾನ ಶಾಸನದ ಕೊನೆಯಲ್ಲಿ ಭೂಮಿ ಉಂಬಳಿಯನ್ನು ಸಂತಾನ ಪರಂಪರೆಯಾಗಿ ಅನುಭವಿಸಿಕೊಂಡು ಬರಬಹುದೆಂದು ಕೊಟ್ಟ ಶಾಸನವೆಂಬ ಉಲ್ಲೇಖವಿದೆ. ಕೆಳದಿ ರಾಜ್ಯದ ಮುಂಗಿನಾಡ ಸೀಮೆಯ ಗಡಿಗಳನ್ನು ಗುರುತಿಸುವ ಕೆಲಸ ನಡೆಯಬೇಕಾಗಿದೆ. ಕೆಳದಿ ಅರಸರ ಸಮಕಾಲೀನ ಐತಿಹಾಸಿಕ ಮಹತ್ವವನ್ನು ಈ ತಾಮ್ರ ಶಾಸನ ತಿಳಿಸುತ್ತದೆ. ಈ ತಾಮ್ರ ಶಾಸನದ ಕಾಲಮಾನವು, ಶಾಸನ ನೀಡಿದ ಕೆಳದಿ ಸೋಮಶೇಖರ ನಾಯಕರ ಆಳ್ವಿಕೆಯ ಅವಧಿಯ ಕಾಲಕ್ಕೆ (ಕ್ರಿ. ಶ. ೧೬೬೩-೧೬೭೨)*೪ ಹೊಂದುವುದರಿಂದಲೂ, ಲಿಪಿ ಮತ್ತು ವಿಷಯದ ದೃಷ್ಟಿಯಿಂದಲೂ ಇದೊಂದು ಅಸಲಿ ತಾಮ್ರಶಾಸನವಾಗಿ**ದೆ.**



(ಈ ಅಪ್ರಕಟಿತ ಶಾಸನವನ್ನು ಬೆಳಕಿಗೆ ತರಲು ಸಹಕರಿಸಿದ ಶ್ರೀ ರಾಮಚಂದ್ರಕಾರಂತರಿಗೆ ಮತ್ತು ಶ್ರೀ ಜಗದೀಶ್ ಅಗಸಿಬಾಗಿಲರವರಿಗೆ ಕೃತಜ್ಞತೆಗಳು.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಡಾ।। ವೆಂಕಟೇಶ್., ೧೯೯೧, **ಕೆಳದಿ ಅರಸರ ಶಾಸನ ಸಂಪುಟ.** ಪುಟ ೯. ವೀರಶೈವ ಅಧ್ಯಯನ ಸಂಸ್ಥೆ, ಗದಗ.
*೨. ಅದೇ.,
*೩. ಡಾ।। ಎಂ. ಎಂ. ಕಲಬುರ್ಗಿ, ೧೯೯೪, (ಸಂ.) **ಕೆಳದಿ ಸಮಗ್ರ ಅಧ್ಯಯನ,** ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರಂ ಪು. ೫೧೧, ಅನುಬಂಧ ೨.
*೪. ಡಾ।। ಅ. ಸುಂದರ., (೧೯೯೪), ಕೆಳದಿ ಇತಿಹಾಸ ಮತ್ತು ಸಂಸ್ಕೃತಿ : ಪುರಾತತ್ವ, **ಕೆಳದಿ ಸಮಗ್ರ ಅಧ್ಯಯನ,** ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರಂ, ಪುಟ ೨೧.

ಡಾ। ಸುಭಾಸ. ರಾ. ಚಿಂಚೋಲಿ*

# ಬಿಜಾಪುರ ಆದಿಲ್‌ಶಾಹಿ ಕಾಲದ ಕನ್ನಡದ ಎರಡು ಹೊಸ ಶಾಸನಗಳು

ಬಿಜಾಪುರ ಜಿಲ್ಲೆಯಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಕೈಗೊಂಡ ನನಗೆ ೧೨ ಹೊಸ ಶಾಸನಗಳು ದೊರೆಕಿವೆ. ಇವುಗಳಲ್ಲಿ ಒಂಬತ್ತು ಶಾಸನಗಳು ಕಲ್ಯಾಣ ಚಾಲುಕ್ಯರ ಕಾಲದವುಗಳಾದರೆ ಒಂದು ಯಾದವ, ಎರಡು ಬಿಜಾಪುರ ಆದಿಲ್‌ಶಾಹಿಗಳ ಕಾಲಕ್ಕೆ ಸೇರಿದವುಗಳಾಗಿವೆ. ಪ್ರಸ್ತುತ ಬಿಜಾಪುರ ಆದಿಲ್‌ಶಾಹಿ ಕಾಲದ ಎರಡು ಶಾಸನಗಳ ಕುರಿತು ಈ ಪ್ರಬಂಧ.

ಈ ಶಾಸನಗಳು ಬಿಜಾಪುರ ಜಿಲ್ಲೆ ಸಿಂದಗಿ ತಾಲೂಕಿನ ಗೋಲಗೇರಿ ಮತ್ತು ಢವಳಾರ ಗ್ರಾಮಗಳಲ್ಲಿ ದೊರೆತಿವೆ. ಭೂದಾನದ ವಿಷಯವನ್ನು ಹೊಂದಿರುವ ಇವನ್ನು ಕಪ್ಪು ಶಿಲೆಯ ಬಂಡೆಗಳ ಮೇಲೆ ಕೆತ್ತಲಾಗಿದೆ. ಶಾಸನಗಳ ಭಾಷೆ ೧೬ನೇ ಶತಮಾನದ ಕನ್ನಡವಾಗಿದ್ದು, ಅಕ್ಷರಗಳು ಸ್ಫುಟವಾಗಿರದೆ ಅಂಕುಡೊಂಕಾಗಿವೆ. ಢವಳಾರ ಗ್ರಾಮದ ಶಾಸನ ಅಲ್ಲಿನ ಹನುಮಾನ ಗುಡಿಯ ಮೊಗಸಾಲೆಯ ಒಳಗೋಡೆಯಲ್ಲಿ ಪ್ರತಿಷ್ಠಾಪಿಸಲಾಗಿದ್ದು ಮೂರು ಅಡಿ ಎತ್ತರ, ಒಂದುವರೆ ಅಡಿ ಅಗಲವಾಗಿದೆ. ಶಾಸನದ ಮೇಲ್ಭಾಗದಲ್ಲಿ ಲಿಂಗ, ಸೂರ್ಯ, ಚಂದ್ರ ಹಾಗೂ ಹಕ್ಕಿಯ ಚಿತ್ರಗಳನ್ನು ಕೆತ್ತಲಾಗಿದೆ. ಶಾಸನವು ೧೩ ಸಾಲುಗಳನ್ನು ಹೊಂದಿದೆ. ಶಾಸನದ ತೇದಿ ಶ್ರೀಶಕ ಸಂವತ್ಸರದ ೧೪೯೯ನೆಯ ಈಶ್ವರನಾಮದ ಜನ್ಮಾಷ್ಯಾಡ ೧ ಶನಿವಾರ ಎಂದಿದ್ದು ಇದು ಮೇ ೨೩ ಅಥವಾ ಜೂನ್ ೨೩, ಕ್ರಿ. ಶ. ೧೫೭೭ ಕ್ಕೆ ಸರಿಹೊಂದುತ್ತದೆ. ಕ್ರಿ. ಶ. ೧೫೭೭ರ ಕಾಲಮಾನವು ಬಿಜಾಪುರ ಆದಿಲ್ ಶಾಹಿ ಮನೆತನದ ಅರಸ ಒಂದನೆ ಅಲಿ ಆದಿಲ್‌ಶಾಹಿಯ ಕಾಲವಾಗುತ್ತದೆ (ಕ್ರಿ. ಶ. ೧೫೫೭-೮೦).

ಗೋಲಗೇರಿ ಶಾಸನವನ್ನು ಗ್ರಾಮದ ಗೋಲ್ಲಾಳೇಶ್ವರ ದೇವಾಲಯದ ಉತ್ತರ ಮೊಗಸಾಲೆಯ ಹೊರ ಗೋಡೆಯಲ್ಲಿ ಅಡ್ಡಲಾಗಿ ಜೋಡಿಸಲಾಗಿದೆ. ಇದು ಮೂರು ಅಡಿ ಎತ್ತರ ಮತ್ತು ಎರಡು ಅಡಿ ಅಗಲವಾಗಿದೆ ಶಾಸನದ ಮೇಲ್ಭಾಗದಲ್ಲಿ ಲಿಂಗ ಸೂರ್ಯ, ಚಂದ್ರ ಹಾಗೂ ಬಳ್ಳಿಯ ಚಿತ್ರಗಳನ್ನು ಬಿಡಿಸಲಾಗಿದೆ. ತೇದಿಯಿರದ ಈ ಶಾಸನವು ಭಾಷೆ ಮತ್ತು ಬರವಣಿಗೆಯಲ್ಲಿ ಢವಳಾರ ಗ್ರಾಮದ ಶಾಸನವನ್ನು ಸಂಪೂರ್ಣವಾಗಿ ಹೋಲುತ್ತದೆ ಇದರ ಸಮಕಾಲೀನವಾಗಿ ಹಾಕಿಸಲ್ಪಟ್ಟಿದೆಯೆಂದು ಹೇಳಬಹುದು.

ಬಿಜಾಪುರ ಜಿಲ್ಲೆ ಆದಿಲ್‌ಶಾಹಿ ಅರಸರ ರಾಜ್ಯದ ಮಧ್ಯದ ಕೇಂದ್ರ ಸ್ಥಳ ಮತ್ತು ಈ ಮನೆತನದ ಅರಸರು ತಮ್ಮ ರಾಜ್ಯದಲ್ಲಿರುವ ಜನತೆಯ ಸಲುವಾಗಿ ಶ್ರಮಿಸಿದವರು. ಅದರಲ್ಲಿಯೂ ಒಂದನೇ ಅಲಿ ಆದಿಲ್‌ಶಾಹಿಯ ಕಾಲವಂತು ಧಾರ್ಮಿಕ ಸಾಹಿತ್ಯ ಮತ್ತು ವಾಸ್ತು ಕಲೆಗೆ ಪ್ರಸಿದ್ಧಿ ಪಡೆದಂತಹ ಕಾಲ. ಇವನು ಪರ್ಶಿಯನ್ ಸಾಹಿತ್ಯಕ್ಕೆ ನೀಡಿದಂತೆ ಕನ್ನಡ ಸಾಹಿತ್ಯಕ್ಕೂ ಪ್ರೋತ್ಸಾಹ ನೀಡಿದ್ದನು. ಹೀಗಾಗಿ ಆಡಳಿತಾವಧಿಯಲ್ಲಿ ಶಿಲಾಶಾಸನಗಳು ಕನ್ನಡದಲ್ಲಿಯೆ ಬರೆಯಲ್ಪಟ್ಟವು. ಅಂತವುಗಳಲ್ಲಿ ಈ ಎರಡು ಗ್ರಾಮಗಳ ಶಾಸನಗಳು ಹೊರತಾಗಿಲ್ಲ.

*ಢವಳಾರ ಶಾಸನದ ಪಾಠ*

೧ ಶ್ರೀ ಸಕವಂತಶ ೧೪೯೯
೨ ಯಿಷ್ವರ ನಾಮಸಂವಷರದ
೩ ಜನ್ಮಾಸ್ಯಾಡ ೧ ಸನಿವಾರದಲು ದವಳಾರ
೪ ದೆಗುಲಗೆ ಸಿನಿನಾಯ್ಕವಲ ಖಿನಾಯ್ಕವಲೊ
೫ ಮಾನ್ಯ ಕೊಲಳು ನಮಶವ ಸಮಪ ಪ್ರಜೆ
೬ ಸಯನಃ ಲುದಶೋದುರಲಗ್ರದೆಸೆಯ
೭ ಬಿನ್ವಮಲುನ ಶಿನ್ನುಬರದುಳೊಪನಿ
೮ ಜಿ ವಿಮನೆ ಹನುಮಂತ ದೆವರ ಗುಡಿ
೯ ಮತ ಒದ ನಿಮಿತ್ಯದಾಗಿ ಕೊಲವಿದಿಯ
೧೦ ಖಿ ಮೊಯಿತೆರಕಂಕೆಯ ನಿಮಗೆ ಬನಿರಗ
೧೧ ಚಔಸೋಜ್ವರ ನಿಯ ನಾಯ ಕೊಟ್ಟ ಬ
೧೨ ಬರಟಾರ್ರ ಜೊಯಿಮಪನ ದಾನ
೧೩ ಯಿ ಯಂ ನೂ॥

ಶಕ ಸಂವತ್ಸರ ೧೪೯೯ನೆಯ (ಕ್ರಿ. ಶ. ೧೫೭೭) ರ ಈಶ್ವರ ನಾಮ ಸಂವತ್ಸರದ ಜನ್ಮಾಷ್ಯಾಡ ಶನಿವಾರ ೧ ರಂದು ಢವಳಾರದ ದೇಗುಲಕ್ಕೆ ಸಿನಿನಾಯ್ಕನ ಹೊಲ ಮತ್ತು ಖಿನಿನಾಯ್ಕನ ಹೊಲಗಳನ್ನು ಮಾನ್ಯದ ಕೋಲಿನಿಂದ ಸಮಸ್ತ ಪ್ರಜೆಗಳ ಸಮಕ್ಷಮದಲ್ಲಿ ದಾನಬಿಡಲಾಯಿತ್ತಲ್ಲದೆ ಗ್ರಾಮದ ಹನುಮಂತ ದೇವರ ಗುಡಿಯ ಮತ (ಮೂರ್ತಿ) ಒಡೆದ ನಿಮಿತ್ಯ ಅದರ ಬದಲಿಗೆ ಮತ್ತೊಂದು ಶಿಲ್ಪವನ್ನು ಮಾಡಿದ ಶಿಲ್ಪಿ ಚವೊಸೋಜ್ವರ (ಜಓಸೋಜ್ವರ)ನ ನಿತ್ಯ ನಿಯಮಕ್ಕೆ ಭಟ್ಟಾರಕ ಜೋಯಿಮಪನು ದಾನವನ್ನು ನೀಡಿದನೆಂದು ಹೇಳುತ್ತದೆ.

ಈ ಶಾಸನದ ೬ನೇ ಸಾಲಿನ, 'ಲುದಶೊದುರಗ್ರದೆಸೆಯ' ಎಂಬ ವಾಕ್ಯ ಮತ್ತು ೭ನೇ ಸಾಲಿನ 'ಬಿನ್ವಮಲುನ ಶಿನ್ನು ಬರದುಳೊಪನಿ'ಜ ಹಾಗೂ ೧೦ನೇ ಸಾಲಿನ 'ಮೊಯಿತೆರಕಂಕೆಯ'

*ಕನ್ನಡ ಸಂಶೋಧನಾ ಸಂಸ್ಥೆ, ಕ.ವಿ.ವಿ., ಧಾರವಾಡ - ೩.



ಎಂಬ ವಾಕ್ಯಗಳ ಅರ್ಥ ತಿಳಿದು ಬರುವುದಿಲ್ಲ. ಇವಿಷ್ಟನ್ನು ಬಿಟ್ಟರೆ ಶಾಸನದ ಸಂಪೂರ್ಣ ಪಾಠದ ಅರ್ಥ ದೊರೆಯುತ್ತದೆ.

*ಗೋಲಗೇರಿ ಶಾಸನ ಶಾಸನದ ಪಾಠ*

೧ ಸಪ್ತಃ ಖಾನ ನಾಗರಸ ಗೊಲ

೨ ಗಿಶಯ ಕೊಂಡಗುಣೆಯ ಸಿಬೆ

೩ ಯಪಜದರು ಆಚೋರಣದ

೪ ಹೊಲ ಮೂಡಲು ಪಡು

೫ ವಲು ವಣಗಿ ಮೂರು

೬ ಕಲ್ಲು ನಿಭ ಹೊಡೆದುಯಿ

೭ ಧಲು ನಾಂದನಭ ಪ್ರ

೮ ನಾಮಲು

ತೇದಿಯಿಲ್ಲದ ಈ ಶಾಸನವನ್ನು ಲಿಪಿಯಾಧಾರದ ಮೇಲೆ ಥವಳಾರ ಶಾಸನದ ಸಮಕಾಲೀನದೆನ್ನಬಹುದಾಗಿ ಶಾಸನವು ಸಪ್ತಹಖಾನ ನಾಗರಸನೆಂಬುವವನು ಗೋಲಗಿಶಯನಿಗೆ (ಈಶ್ವರ) ಕೊಂಡಗೂಳಿ ಮತ್ತು ಯಂಕಂಚಿ ಗ್ರಾಮಗಳ ಸೀಮಗಳು ಸೇರುವ ಅರಣ್ಯ ಭೂಮಿಯ ವಣಗಿ ಹಳ್ಳದ ಮೇಲಿನ ಭೂಮಿಯನ್ನು ಮೂರು ಸೀಮಾ ಕಲ್ಲನ್ನು ನೆಟ್ಟು ದೇವರಿಗೆ ಭೂಮಿದಾನ ಬಿಟ್ಟದ್ದನ್ನು ಹೇಳುತ್ತದೆ. ಶಾಸನದ ಸಪ್ತಹಖಾನ ನಾಗರಸ ಎನ್ನುವವನು ಗೋಲಗಿರಿಯ ಗ್ರಾಮದ ಆಡಳಿತ ಅಧಿಕಾರಿಯಾಗಿದ್ದಾಗ ಗೋಲಗಿರಿಯ ಈಶನಿಗೆ (ಈಶ್ವರ, ಲಿಂಗಯ್ಯ) ಎರಡು ಗ್ರಾಮಗಳ ಸೀಮೆಗಳು ಕೂಡುವಲ್ಲಿನ ವಣಗಿ (ವಗಣೆ) ಹಳ್ಳದ ಮೇಲಿನ ಭೂಮಿಯನ್ನು ದತ್ತಿಯಾಗಿ ಬಿಟ್ಟಿರುವುದನ್ನು ತಿಳಿಸುತ್ತದೆ.

ಮೇಲಿನ ಎರಡು ಶಾಸನಗಳನ್ನು ಗಮನಿಸಿದಾಗ ಹಾಗೂ ಈಗಾಗಲೇ ಜಿಲ್ಲೆಯಲ್ಲಿ ಆದಿಲ್‌ಶಾಹಿ ಅರಸರ ಕಾಲದಲ್ಲಿ ಹಾಕಿಸಿದ ಅನೇಕ ಕನ್ನಡ ಶಾಸನಗಳು ದೊರೆಯುತ್ತಿರುವುದರಿಂದ ಆದಿಲ್‌ಶಾಹಿ ಅರಸರು ಕನ್ನಡ ಭಾಷೆಗೆ ಬರವಣಿಗೆಗೆ ಪ್ರೋತ್ಸಾಹ ನೀಡಿ ತಮ್ಮ ಪ್ರದೇಶದಲ್ಲಿರುವ ಹಿಂದಿನ ಮೂಲ ಕನ್ನಡ ಭಾಷೆಗೆ ಯಾವುದೇ ಧಕ್ಕೆಯನ್ನು ಮಾಡದೆ ಅದು ಹುಲುಸಾಗಿ ಬೆಳೆಯಲು ಸಹಕಾರ ನೀಡಿದ್ದರೆಂಬುದು ಇವುಗಳಿಂದ ಸ್ಪಷ್ಟವಾಗುತ್ತದೆ. ಜಿಲ್ಲೆಯಲ್ಲಿ ದೊರೆತ ಇತರ ಕನ್ನಡ ಶಾಸನಗಳೆಂದರೆ ಮನಗೂಳಿ*[೧], ಯಾಚವಾರ*[೨], ಕಲಕೇರಿ*[೩], ದೇವಣಗಾವಿ*[೪], ಹಿಪ್ಪರಗಿ*[೫], ಜುಮನಾಳ*[೬] ಇತ್ಯಾದಿ ಗ್ರಾಮಗಳಲ್ಲಿ ಕಂಡುಬರುತ್ತವೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. **ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್**, ಸಂ-೧೫, ನಂ. ೬೮೪.(ಬಾಗೇವಾಡಿ-೮) ಮನಗೂಳಿ ಕ್ರಿ. ಶ. ೧೫೨೨-೨೩.
*೨. ಅದೇ, ನಂ ೬೯೧, (ಬಾಗೇವಾಡಿ-೮) ಯಾಳವಾರ ಕ್ರಿ. ಶ ೧೫೫೭.
*೩. ಅದೇ, ಸಂ-೨೦, ನಂ-೪೦೮ (ಸಿಂದಗಿ-ತಾ) ಕಲಕೇರಿ ಕ್ರಿ. ಶ. ೧೬೦೯.
*೪. ಅದೇ, ನಂ-೪೦೯, (ಸಿಂದಗಿ-ತಾ) ದೇವಣಗಾವಿ ಕ್ರಿ. ಶ. ೧೬೩೫.
*೫. ಅದೇ, ನಂ-೪೧೦, (ಸಿಂದಗಿ-ತಾ) ಹಿಪ್ಪರಗಿ ಕ್ರಿ. ಶ. ೧೬೪೪.
*೬. ಅದೇ , ನಂ-೫೧೨, (ಬಿಜಾಪುರ-ತಾ) ಜುಮನಾಳ ಕ್ರಿ. ಶ. ೧೬೯೯.

ಮಹಾಂತೇಶ ಎಂ. ಅಕ್ಕಿ *

# ಯಡ್ರಾವಿಯ ಹನ್ನೊಂದು ಹೊಸ ಶಾಸನಗಳು

ಕರ್ನಾಟಕದ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನಲ್ಲಿ ಯಡ್ರಾವಿಯು ಒಂದು ಗ್ರಾಮವಾಗಿದೆ. ಸವದತ್ತಿಯಿಂದ ಮೂರು ಕಿ. ಮೀ. ದೂರದಲ್ಲಿರುವ ಯಡ್ರಾವಿ ಗ್ರಾಮದ ಬೇರೆ ಬೇರೆ ಹೊಲಗಳಲ್ಲಿ ಹನ್ನೊಂದು ಹೊಸ ಶಾಸನಗಳು ಕಂಡು ಬಂದಿವೆ. ಈ ಶಾಸನಗಳನ್ನು ಪರೀಕ್ಷಿಸಿದಾಗ ಈ ಕೆಳಗಿನ ಮಾಹಿತಿಗಳು ತಿಳಿದುಬರುತ್ತವೆ. ಈ ಎಲ್ಲ ಶಾಸನಗಳ ಮೊದಲನೇ ಭಾಗದಲ್ಲಿ ರಾಜರ ಹೆಸರಾಗಲಿ, ಅವರು ಆಳಿದ ಕಾಲವಾಗಲಿ ಉಲ್ಲೇಖವಾಗಿರುವುದಿಲ್ಲ. ಲಿಪಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ಈ ಎಲ್ಲ ಶಾಸನಗಳು ಸುಮಾರು ೧೨ರಿಂದ ೧೩ನೇ ಶತಮಾನಕ್ಕೆ ಸಂಬಂಧಪಟ್ಟವುಗಳೆಂದು ಕಂಡುಬರುತ್ತವೆ. ಈ ಹನ್ನೊಂದು ಶಾಸನಗಳನ್ನು ಅಧ್ಯಯನ ಮಾಡಿದಾಗ ಐದು ರೀತಿಯ ಮಾಹಿತಿಗಳು ದೊರೆಯುತ್ತವೆ. ಇವುಗಳಲ್ಲಿ ನಾಲ್ಕು ಶಾಸನಗಳು ಮಲ್ಲಿನಾಥದೇವರ ವಿಷಯ ತಿಳಿಸಿದರೆ, ಮೂರು ಶಾಸನಗಳು ಬ್ರಹ್ಮದೇವರ ಬಗ್ಗೆ ಮತ್ತು ಎರಡು ಶಾಸನಗಳು ಉಪ್ಪುನೀರಿನ ಬಾವಿಯ ಬಗ್ಗೆ ವಿಷಯ ತಿಳಿಸುತ್ತವೆ.

೧. ಮೊದಲನೆಯ ಶಾಸನವು *ಶ್ರೀ ಸುಗಂಧವರ್ತಿಯ ನಾಗರಕೆರೆಯ ಶ್ರೀ ಮಲ್ಲಿನಾಥದೇವರಿಗೆ ಪನ್ನಿಸೆಟ್ಟಿಯರ ಮಗ ಚೌಡಿಶೆಟ್ಟಿಯರು ಕೊಟ್ಟ ಮತ್ತರು ಎರಡು ಅಂತು ಸರ್ವನಮಸ್ಯದ* ಮತ್ತರು ೬ ಎಂದಿದೆ. ಈ ಶಾಸನದಿಂದ ಸವದತ್ತಿಯ ಹಿಂದಿನ ಹೆಸರು 'ಸುಗಂಧವರ್ತಿ' ಎಂದು ಇತ್ತು ಎಂಬ ವಿಷಯ ಗೊತ್ತಾಗುತ್ತದೆ. ಅಲ್ಲದೆ ನಾಗರಕೆರೆಯ ಹತ್ತಿರ ಶ್ರೀ ಮಲ್ಲಿನಾಥದೇವರ ದೇವಾಲಯವಿದ್ದಿರಬೇಕು. ಅದಕ್ಕೆ ಪನ್ನೀರ್ವರು (ಹನ್ನೆರಡು ಜನರ ಒಂದು ಸಂಘ) ಅಥವಾ ಹನ್ನೆರಡು ಜನ ಮಹಾಜನರು ನಾಲ್ಕು ಮತ್ತರು ಭೂಮಿಯನ್ನು ದಾನ ಕೊಟ್ಟಿರುವರು. ಅದೂ ಅಲ್ಲದೇ ಅರಿಯ (ಆರ್ಯ) ಮಲ್ಲಿಸೆಟ್ಟಿಯರ ಮಗ ಚೌಡಿಶೆಟ್ಟಿ ಎರಡು ಮತ್ತರು ಭೂಮಿಯನ್ನು ದಾನ ಕೊಟ್ಟಿರುವರು. ಈ ಶಾಸನದ ಕೊನೆಯಲ್ಲಿ "ಅರಿತು ಸರ್ವಸಮಸ್ಯದ ಮತ್ತರು ಆರು" ಎಂದಿದೆ.

೨. ಎರಡನೆಯ ಶಾಸನವು ಯಡರಾವಿಯ ಪನ್ನಿರ್ವ್ವರು ನಾಲ್ಕು ಮತ್ತರು ಭೂಮಿಯನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಈ ಭೂಮಿಯನ್ನು ಮಲ್ಲಿನಾಥನ ಕೋಲಿನಿಂದ ಅಳತೆ ಮಾಡಿದ್ದಾರೆ. ಆದ್ದರಿಂದ ಹಿಂದಿನ ಕಾಲದಲ್ಲಿ ದೇವರ ಹೆಸರಿನಲ್ಲಿ ಭೂಮಿಯನ್ನು ಅಳೆಯುತ್ತಿದ್ದರೆಂಬ ವಿಷಯ ತಿಳಿದುಬರುತ್ತದೆ. ಇಲ್ಲಿ ಉಲ್ಲೇಖಿತವಾದ **ಮಲ್ಲಿನಾಥನ ಕೋಲು** ಎಂದರೆ ಮಲ್ಲಿನಾಥ ದೇವರಿಗೆ ಸಂಬಂಧಪಟ್ಟ ಅಳತೆಗೋಲು ಎಂದು ತಿಳಿಯುತ್ತದೆ. ಈ ಶಾಸನದ ಕೊನೆಯ ಭಾಗದಲ್ಲಿ ನಾಗರಬಳ್ಳಿ ಎಂಬ ಉಲ್ಲೇಖವಿದೆ. 'ನಾಗರಬಳ್ಳಿ'ಯು ನಾಗರಕೆರೆಯ ಇನ್ನೊಂದು ಹೆಸರು ಆಗಿದ್ದಿರಬಹುದು.

೩. ಮೂರನೆಯ ಶಾಸನದಲ್ಲಿ ಯಡರಾವಿಯ ಉಲ್ಲೇಖವಿದೆ. ನಾಗಕಳಕೆರೆ (ನಾಗರಕೊಳ), ಮಲ್ಲಿನಾಥನಿಗೆ ನಾಲ್ಕು ಮತ್ತರು ಮತ್ತು ಎರಡು ಮಣ್ಣುಕೆಯಿ ಭೂಮಿಯನ್ನು ದಾನ ನೀಡಿದ ವಿಷಯ ಇದರಲ್ಲಿದೆ. ದಾನ ನೀಡಿದವರ ಉಲ್ಲೇಖ ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಈ ಶಾಸನದ ಮೇಲೆ ಶಿವಲಿಂಗ, ಆಕಳು, ಚಂದ್ರ, ಸೂರ್ಯ, ಶಿವಲಿಂಗವನ್ನು ಪೂಜಿಸುವ ಒಬ್ಬ ಭಕ್ತನ ಚಿತ್ರಣವಿದೆ. ಅದೂ ಅಲ್ಲದೇ ಭರ್ಚಿಯ ಚಿತ್ರಣವಿದೆ.

೪. ನಾಲ್ಕನೇ ಶಾಸನದಲ್ಲಿ ನಾಗರಕೆರೆಯ ಮಲ್ಲಿನಾಥ ಎಂದೂ, ಮಲ್ಲಿನಾಥನಿಗೆ ಎರಡು ಮತ್ತರು ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ. ಈ ಶಾಸನದ ಮೇಲೆಯೂ ಶಿವಲಿಂಗ, ಆಕಳು, ಚಂದ್ರ ಸೂರ್ಯ, ಒಬ್ಬ ಭಕ್ತನ ಬಿಂಬಗಳ ಕೆತ್ತನೆಯಿರುತ್ತದೆ.

ಈ ಶಾಸನಗಳಿಂದ ಯಡ್ರಾವಿಯಲ್ಲಿ ಹಿಂದೆ ನಾಗರಕೆರೆಯ ಹತ್ತಿರ ಇದ್ದ ಮಲ್ಲಿನಾಥ ಎಂಬ ಶಿವ ದೇವಾಲಯಕ್ಕೆ ಅಂದಿನ ವಿವಿಧ ವರ್ಗಗಳ ಜನರು ಭೂದಾನ ಮಾಡಿದ ವಿಷಯ ತಿಳಿದುಬರುತ್ತದೆ.

೫, ೬ ಮತ್ತು ೭ ನೆಯ ಶಾಸನಗಳು ಬ್ರಹ್ಮೇಶ್ವರ ದೇವರಿಗೆ ಹನ್ನೆರಡು ಮತ್ತರು ಭೂಕೇಯಿ (ವ್ಯವಸಾಯ ಯೋಗ್ಯ ಭೂಮಿ) ದಾನ ನೀಡಿದ ವಿಷಯವನ್ನು ತಿಳಿಸುತ್ತವೆ. ಶಾಸನದಲ್ಲಿ ದಾನ ನೀಡಿದ ವ್ಯಕ್ತಿಗಳ ಉಲ್ಲೇಖವಿಲ್ಲ. ಈ ಶಾಸನದ ಮೇಲ್ಭಾಗದಲ್ಲಿ ಶಿವಲಿಂಗ, ಆಕಳು, ಚಂದ್ರ ಸೂರ್ಯ ಮತ್ತು ಭರ್ಚಿಯ ಚಿತ್ರಗಳಿವೆ.

ಈ ಮೂರೂ ಶಾಸನಗಳೂ ಒಂದೇ ವಿಷಯವನ್ನು (ದಾನ ನೀಡಿದ) ಹೇಳುತ್ತವೆ. ಹಿಂದಿನ ಕಾಲದಲ್ಲಿ ಭೂಮಿಯನ್ನು ಮತ್ತರಿನ ಪ್ರಮಾಣದಲ್ಲಿ ಅಳೆದು ದಾನ ಕೊಟ್ಟಿರುವರು. ದಾನವಾಗಿ ನೀಡಿದ ಭೂಮಿಯ ನಾಲ್ಕು ಕಡೆಗಳಲ್ಲಿ ಗುರುತಿಗಾಗಿ ಶಾಸನದ ಕಲ್ಲನ್ನು ನೆಟ್ಟಿರಬೇಕು. ನಾಲ್ಕನೆಯ ಶಾಸನದ ಕಲ್ಲು ನಮಗೆ ದೊರಕಿರುವುದಿಲ್ಲ. ಈಗ ಸಿಕ್ಕಿದ ಮೂರು ಕಲ್ಲುಗಳನ್ನು ರೈತರು ಹೊಲದಲ್ಲಿ ತಮಗೆ ಬೇಕಾದಲ್ಲಿ ಇಟ್ಟಿರುವುದರಿಂದ ಇಲ್ಲಿನ ಒಂದು ಮತ್ತರಿನ ಭೂಮಿಯ ಅಳತೆ ಎಷ್ಟೆಂದು ತಿಳಿಯಲು

*ಸಂಶೋಧನ ವಿದ್ಯಾರ್ಥಿ, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ಕ.ವಿ.ವಿ., ಧಾರವಾಡ - ೫೮೦ ೦೦೩.

ಸಾಧ್ಯವಾಗುವುದಿಲ್ಲ. ಒಂದು ವೇಳೆ ನಾಲ್ಕೂ ದಿಕ್ಕಿನಲ್ಲಿ ಶಾಸನ ಕಲ್ಲುಗಳು ತಮ್ಮ ಮೂಲ ಸ್ಥಳದಲ್ಲಿಯೇ ಇದ್ದಿದ್ದರೆ ನಮಗೆ ೧೨ ಮತ್ತರು ಭೂಮಿಯ ಅಳತೆ ಕಂಡು ಹಿಡಿಯಲು ತುಂಬ ಸಹಕಾರಿಯಾಗುತ್ತಿತ್ತು. ಆದರೆ ಈಗ ಅವು ತಮ್ಮ ಮೂಲ ಸ್ಥಳಗಳಲ್ಲಿ ಇಲ್ಲದಿರುವುದು ಒಂದು ದುರದೃಷ್ಟದ ಸಂಗತಿ ಎನ್ನಬಹುದು.

ಎಂಟನೆಯ ಶಾಸನವು 'ದಾಮೋದರ ದೇವರ ಕೆಯಿ' ಎಂಬ ಸಾಲನ್ನು ಹೊಂದಿದೆ. ಅಂದರೆ ದಾಮೋದರ ದೇವರಿಗೆ ಸಂಬಂಧಿಸಿದ ಹೊಲ ಎಂದು ಅರ್ಥವಾಗುತ್ತದೆ. ಹಾಲನ ಗಾಥಾಸಪ್ತಶತಿಯಲ್ಲಿ ಕೃಷ್ಣನನ್ನು ದಾಮೋದರ ಮಾಧವ ಹರಿ ಎಂದೆಲ್ಲ ಉಲ್ಲೇಖಿಸಿದ್ದಾರೆ. ಡಾ. ಎಸ್. ವಿ. ಪಾಡಿಗಾರ ಅವರು ದಾಮೋದರ ಎನ್ನುವುದು ವಿಷ್ಣುವಿನ ೧೪ ಹೆಸರುಗಳಲ್ಲಿ ೧೨ನೆಯ ಹೆಸರು (ಅವತಾರ) ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಶಾಸನದ ಮೇಲ್ಭಾಗದಲ್ಲಿ ಆಕಳು, ಭರ್ಚಿ, ಚಂದ್ರ, ಸೂರ್ಯ ಮತ್ತು ವಾಮನರೂಪಿ ಮನುಷ್ಯನ ಚಿತ್ರಗಳಿವೆ. ಯಡ್ರಾವಿ ಗ್ರಾಮದ ರೈತರನ್ನು ವಿಚಾರಿಸಿದಾಗ ಹಿಂದೆ ಈ ಗ್ರಾಮದ ಬಹಳಷ್ಟು ಹೊಲಗಳು ಬ್ರಾಹ್ಮಣರಿಗೆ ಸೇರಿದ್ದವು, ಎಂದು ಹೇಳಿದರು ಆದ್ದರಿಂದ ಇಲ್ಲಿ ದಾಮೋದರ ದೇವರ ದೇವಾಲಯ ಇದ್ದಿರಬಹುದು ಎಂದು ಹೇಳಬಹುದು.

೯. ಒಂಬತ್ತನೆಯ ಶಾಸನದಲ್ಲಿ ಭೂದಾನದ ಬಗ್ಗೆ ಉಲ್ಲೇಖವಿದ್ದು ಭೂದಾನವನ್ನು ಯಾರು ಯಾರಿಗೆ ನೀಡಿದರು ಎಂಬ ವಿಷಯ ತಿಳಿದುಬರುವುದಿಲ್ಲ. ಶಾಸನದ ಮೇಲೆ ಆಕಳು ಮತ್ತು ವಾಮನರೂಪಿ ಮನುಷ್ಯನ ಚಿತ್ರಣವಿದೆ.

೧೦. ಹತ್ತನೆಯ ಶಾಸನವು ಚೌಡಿಶೆಟ್ಟಿ ಎಂಬವನು ಒಂದು ಮತ್ತರು ಭೂಮಿಯನ್ನು ಉಪ್ಪು ನೀರಿನ ಬಾವಿಗೆ ದಾನ ನೀಡಿದ ವಿಷಯ ತಿಳಿಸುತ್ತದೆ. ಯಡ್ರಾವಿಯ ಹೊಲಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಅಲ್ಲಿಯ ರೈತರು ಈಗಲೂ ಇರುವ ಉಪ್ಪು ನೀರಿನ ಬಾವಿಯನ್ನು ತೋರಿಸಿದರು. ಶಾಸನದಲ್ಲಿ ಚೌಡಿಶೆಟ್ಟಿಯನ್ನು ಸರ್ವಾಧಿಕಾರಿ ಎಂದು ಕರೆಯಲಾಗಿದೆ. ಈ ಶಾಸನದ ಮೇಲೆ ಆಕಳು, ಭರ್ಚಿ, ಚಂದ್ರ ಸೂರ್ಯರ ಚಿತ್ರಗಳಿವೆ.

೧೧. ಹನ್ನೊಂದನೇ ಶಾಸನವು ಬಾಯಿಸರ ಪಾರಿಸಗೌಡನ ಧರ್ಮೇತದ ಬಾವಿಗೆ ಚೌಡಿಸೆಟ್ಟಿ, ಒಂದು ಮತ್ತರು ಭೂಮಿ ದಾನ ನೀಡಿದ ವಿಷಯ ತಿಳಿಸುತ್ತದೆ. ಧರ್ಮೇತದ ಬಾವಿಯು ಬಾಯಿಸರ ಅಂದರೆ ವೈಶ್ಯ ಪಾರಿಸಗೌಡನಿಗೆ ಸೇರಿತ್ತು. ಪಾರಿಸಗೌಡ (ಪಾರ್ಶ್ವಗೌಡ) ಜೈನನಾಗಿದ್ದಿರಬಹುದು. ಧರ್ಮೇತದ ಬಾವಿ ಎಂದರೆ ಸಾರ್ವಜನಿಕರಿಗೆ ಬಾವಿಯಿಂದ ನೀರನ್ನು ಉಪಯೋಗಿಸಲು ಅನುಕೂಲವಿದ್ದ ಬಾವಿಯಿರಬೇಕು. ಅಥವಾ ಧಾರ್ಮಿಕ ಕಾರ್ಯಗಳಿಗೆ ಉಪಯೋಗಿಸುವಂತಹ ಬಾವಿಯಾಗಿದ್ದಿರಬೇಕು. ಈ ಶಾಸನದ ಮೇಲ್ಭಾಗದಲ್ಲಿ ಆಕಳು, ಚಂದ್ರ, ಸೂರ್ಯ, ಭರ್ಚಿಯ ಚಿತ್ರಗಳಿವೆ.

## ಸಮಾರೋಪ

ಇಲ್ಲಿ ಸಿಕ್ಕ ಹನ್ನೊಂದು ಹೊಸ ಶಾಸನಗಳಿಂದ ನಾವು ಈ ಕೆಳಗಿನ ವಿಷಯಗಳನ್ನು ತಿಳಿಯಬಹುದು.

೧. *ಯಡ್ರಾವಿಯ ಹಿಂದಿನ ಹೆಸರು ಯಳರಾವಿ, ಮತ್ತು ಯಡರಾವಿ.*
೨. *ಸವದತ್ತಿಯ ಹಿಂದಿನ ಹೆಸರು* ***ಸುಗಂಧವರ್ತಿ.***
೩. *ನಾಗರಕೆರೆಯ ಹತ್ತಿರ ಮಲ್ಲಿನಾಥ ದೇವಾಲಯವಿದ್ದ ವಿಷಯ.*
೪. *ಅಲ್ಲಿ ಪನ್ನೀರ್ವರು (ಮಹಾಜನರು)-(೧೨ ಜನರ ಸಂಘ) ಇದ್ದರೆಂಬ ವಿಷಯ.*
೫. *ಭೂಮಿಯ ಅಳತೆಯ ಕೋಲು ಮಲ್ಲಿನಾಥ ದೇವರ ಹೆಸರಿನಲ್ಲಿ ಇದ್ದ ವಿಷಯ.*
೬. *ನಾಗರಕೆರೆಯ ಹೆಸರು, ನಾಗಳಕೆರೆ, ನಾಗರಕೊಳ, ನಾಗರಬಳ್ಳ ಎಂದು ಇದ್ದಿರಬಹುದಾದ ವಿಷಯ.*
೭. *ಬ್ರಹ್ಮೇಶ್ವರ ದೇವಾಲಯವಿದ್ದ ವಿಷಯ ಮತ್ತು ಅದಕ್ಕೆ ಕೊಟ್ಟ ಭೂದಾನ ಮಾಡಿದ ವಿಷಯ.*
೮. *ಮತ್ತರು ಅಳತೆಯ ಭೂಮಿಯ ವಿವರ.*
೯. *ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳಲ್ಲಿ (೨೪ ಅವತಾರ) ೧೨ನೇ ಹೆಸರಿನ ದೇವಾಲಯವಿದ್ದ ಉಲ್ಲೇಖ.*
೧೦. *ಎರಡು ಶಾಸನಗಳ ಮೇಲ್ಭಾಗದಲ್ಲಿ ವಾಮನರೂಪಿಯ ಮನುಷ್ಯನ ಚಿತ್ರಗಳಿವೆ.*
೧೧. *ಯಡ್ರಾವಿಯಲ್ಲಿ ಉಪ್ಪು ನೀರಿನ ಮತ್ತು ಧರ್ಮೇತದ ಬಾವಿ ಇದ್ದ ಉಲ್ಲೇಖ.*
೧೨. *ಬಾಯಿಸರ (ವೈಶ್ಯ) ಪಾರಿಸಗೌಡನ ಧರ್ಮೇತದ ಬಾವಿ ಇದ್ದ ಕಾರಣ ಆಗಲೂ ಜೈನರು ಸಾರ್ವಜನಿಕರಿಗೆ ಅರವಟ್ಟಿಗೆ ಕಟ್ಟಿ ಮತ್ತು ಅವರ ಉಪಯೋಗಕ್ಕಾಗಿ ಬಳಸುತ್ತಿದ್ದ ವಿಷಯ.*
೧೩. *ಶಾಸನದ ಮೇಲ್ಭಾಗದಲ್ಲಿ ಆಕಳು, ಕರು, ಚಂದ್ರ, ಸೂರ್ಯ, ಭಕ್ತ ಅಲ್ಲದೇ ಭರ್ಚಿ ಚಿತ್ರಗಳಿವೆ.*



*i (ಕ. ವಿ. ವಿ., ಧಾರವಾಡ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದ ಪ್ರವಾಚಕರಾದ ಶ್ರೀಮತಿ ವಾರಿಜ ಆರ್. ಬೋಳಾರ್ ಅವರು ಈ ಪ್ರಬಂಧದ ಸಂಬಂಧದಲ್ಲಿ ಮಾರ್ಗದರ್ಶನ ನೀಡಿರುವುದಕ್ಕೆ ಲೇಖಕ ಕೃತಜ್ಞ)

*i (ಈ ಎಲ್ಲ ಶಾಸನಗಳನ್ನು ಓದಿ ಅದರ ಅರ್ಥವನ್ನು ವಿವರಿಸಿ ಕೊಟ್ಟವರು ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ಎಸ್. ವಿ. ಪಾಡಿಗಾರ್ ಮತ್ತು ಅದೇ ವಿಭಾಗದ ಪ್ರೊ. ರು. ಮ. ಷಡಕ್ಷರಯ್ಯನವರು).

ಡಾ। ಕೆ. ವಸಂತಲಕ್ಷ್ಮಿ*

# ಕೆಲ್ಲಂಗೆರೆ ಲಕ್ಷ್ಮೀನಾರಾಯಣ ದೇವಾಲಯದ ಶಾಸನಗಳು

ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ಒಂದು ಸಣ್ಣಹಳ್ಳಿ-ಕೆಲ್ಲಂಗೆರೆ. ಇದು ಹೊಯ್ಸಳರ ಕಾಲದಲ್ಲಿ ಪ್ರಮುಖವಾದ ಗ್ರಾಮವಾಗಿದ್ದಿತು. ಈ ಹಳ್ಳಿಯಲ್ಲಿ ಲಕ್ಷ್ಮೀನಾರಾಯಣ, ಚೆನ್ನಕೇಶವ ಮತ್ತು ಶಿವ ದೇವಾಲಯಗಳಿವೆ. ಈ ಊರಿಗೆ ಸಂಬಂಧಿಸಿದಂತೆ ಒಟ್ಟು ೧೨ ಶಾಸನಗಳಲ್ಲಿ ೯ ಶಾಸನಗಳು ಲಕ್ಷ್ಮೀನಾರಾಯಣ ದೇವಾಲಯದ ಆವರಣದಲ್ಲಿವೆ. ಹೀಗಾಗಿ ಈ ಪ್ರಬಂಧದಲ್ಲಿ ಕೆಲ್ಲಂಗೆರೆಯ ಲಕ್ಷ್ಮೀನಾರಾಯಣ ದೇವಾಲಯದ ಬಗೆಗೆ ಬೆಳಕು ಚೆಲ್ಲಲು ಪ್ರಯತ್ನಿಸಲಾಗಿದೆ. ಹೊಯ್ಸಳರ ಕಾಲದಲ್ಲಿ ಅನಾದಿ ಅಗ್ರಹಾರವೂ, ಹರಿಹರಪುರವೂ ಆಗಿದ್ದ ಕೆಲ್ಲಂಗೆರೆಯ ಮಹತ್ವವನ್ನು ಶಾಸನಗಳು ಹೀಗೆ ಬಣ್ಣಿಸಿವೆ : ***ಕೆಲ್ಲಂಗೆರೆಯು 'ಸರಧಿವ್ಯಾವರ್ಣ್ಣನಕ್ಕವಳಿಪ ಕೆರೆಗಳಿಂದಲೂ ಶಕ್ರನುದ್ಯಾನಗಳಿಂದ, ಕೀರೋತ್ಕರದಿಂದ ಕೂಡಿದ್ದು ಲೋಕಕ್ಕೆ ಅತಿರಮಣೀಯವಾಗಿ ಕಂಗೊಳಿಸುತ್ತಿತ್ತೆಂದು ತಿಳಿಯುತ್ತದೆ'*** (ಅಕೆರೆ ೧೫೫). ಇಲ್ಲಿಯ ವಿಪ್ರರ ಮಹತ್ವವನ್ನು ತಿಳಿಸುತ್ತಾ ಶಾಸನವೊಂದು (ಅಕೆರೆ ೧೪೯). *ಬಲ್ಲಿವರು ತೊಡರ್ದಡಾರ್ಗ್ಗಂ ಮಲ್ಲಿದರಿಪ್ಪತ್ತ ದೆಡೆಗೆ ಶಾಸ್ತ್ರೋಕುತಿಯಿಂದಲ್ಲದೆ ನುಡಿಯರು ನುಡಿವಡೆ ಕೆಲ್ಲಂಗೆರೆಯಸೆವ ವಿಪ್ರರೇಂ ಕೇವಳವೇ* - ಎಂದು ಬಣ್ಣಿಸಿದೆ.

ಹೀಗೆ ಅಗ್ರಹಾರವಾಗಿದ್ದ ಕೆಲ್ಲಂಗೆರೆಯಲ್ಲಿ ಶಿವಾಲಯ ಚೆನ್ನಕೇಶವ ದೇವಾಲಯಗಳೆರಡೂ, ಇದ್ದುದರಿಂದ 'ಹರಿಹರಪುರ'ವೆನ್ನಿಸಿತೆಂದು ಶಾಸನವೇ ತಿಳಿಸಿದೆ. ಮತ್ತೊಂದು ಶಾಸನವು (ಅಕೆರೆ ೧೫೫) *'ಕೆಲ್ಲಂಗೆರೆಯ ಧರಾಮರರು....... ಕವಿಗಮಶಿವಾದಿವಾಗ್ಮಿಗಳ್ ಯಶೋವಲ್ಲಭರ್ ಚೆಂನಕೇಶವ ಸಲ್ಲಲಿತ ಪದಾಬ್ಜಭಕ್ತರೆಸವರ್ಧರೆಯೊಳ್*॥ ಎಂದಿದೆ.

ಅರಸೀಕೆರೆ ತಾಲೂಕಿನ ಕೆಲ್ಲಂಗೆರೆ ಗ್ರಾಮದ ಮಧ್ಯೆ ಸುಸ್ಥಿತಿಯಲ್ಲಿರುವ ಲಕ್ಷ್ಮೀನಾರಾಯಣ ದೇವಾಲಯದ ವಾಸ್ತುಶಿಲ್ಪವು ದೂರದಿಂದಲೇ ಗಮನ ಸೆಳೆಯುತ್ತದೆ. ದೇವಾಲಯದ ಮುಂದೆ ತೆರೆದ ಪ್ರಾಂಗಣವಿದ್ದು, ಪ್ರಾಂಗಣದ ಮಧ್ಯೆ ಎತ್ತರವಾದ ಸುಂದರವಾದ ಗಂಗರ ಶೈಲಿಯ ದ್ವಾರ ಬಂಧವೊಂದು ನಿಂತಿದೆ. ಮೊದಲಿಗೆ ಗಂಗರ ಕಾಲದ ದೇವಾಲಯದ ಮುಖಮಂಟಪದ ಭಾಗವಾಗಿದ್ದ ಈ ಪ್ರಾಂಗಣದಲ್ಲಿ ನಾಲ್ಕು ದಪ್ಪದಾದ ಗಂಗರ ಶೈಲಿಯ ಕಂಬಗಳೂ ಇವೆ. ಇಲ್ಲಿಯ ರುದ್ರಕಾಂತ ಕಂಬಗಳ ಕಾಂಡಭಾಗವು ಅಷ್ಟಾಸ್ರವಾಗಿದೆ. ದೇವಾಲಯದ ನವರಂಗದ ಭಾಗಕ್ಕೆ ಹೋಗಲು ಸೋಪಾನಗಳಿವೆ. ಪ್ರವೇಶದ್ವಾರವಿದೆ. ದೇವಾಲಯದ ಗರ್ಭಗೃಹ ಮತ್ತು ಅಂತರಾಳದ ಹೊರ-ಭಿತ್ತಿಯು ಪ್ರಾಚೀನ ಲಕ್ಷಣಗಳಿಂದ ಕೂಡಿದೆ. ಈ ಭಿತ್ತಿಯ ಭಾಗವು ತೆಳುವಾದ ನೀಳವಾದ ಭಿತ್ತಿಸ್ತಂಭಗಳಿಂದ ಕೂಡಿರುವ ಸರಳ ಭಿತ್ತಿಯಾಗಿದೆ. ಇದು ಶ್ರವಣಬೆಳಗೊಳದ ನಗರಜಿನಾಲಯದ ಹೊರಭಿತ್ತಿಯನ್ನು ಹೋಲುತ್ತದೆ. ಗರ್ಭಗೃಹವು ಚಿಕ್ಕದಾದ ತೆರದ ಅಂತರಾಳವನ್ನು ಹೊಂದಿದೆ. ಅಂತರಾಳದ ದ್ವಾರಬಂಧದಲ್ಲಿ ಗಜಲಕ್ಷ್ಮಿಯ ಮಂಗಳ ಫಲಕವಿದೆ. ನವರಂಗದ ಕಂಬಗಳು ಹೊಯ್ಸಳರ ಶೈಲಿಯದಾಗಿವೆ. ಗರ್ಭಗೃಹದಲ್ಲಿರುವ ಪೀಠದ ಮೇಲೆ ಹೊಯ್ಸಳರ ಶೈಲಿಯ ಲಕ್ಷ್ಮೀನಾರಾಯಣ ಶಿಲ್ಪವನ್ನು ಇಡಲಾಗಿದೆ. ಪೀಠಕ್ಕೆ ಸೇರಿಸಿದಂತಿರುವ ಈ ಶಿಲ್ಪವು ಮೂಲಬಿಂಬವಲ್ಲವೆಂಬುದನ್ನು ಸೂಚಿಸುತ್ತಿದೆ. ಈ ದೇವಾಲಯದ ಶಾಸನಗಳಲ್ಲೂ ದೇವರನ್ನು 'ಚೆನ್ನಕೇಸವ'ನೆಂದು ಉಲ್ಲೇಖಿಸಲಾಗಿದೆ. ಕೆಲ್ಲಂಗೆರೆಯ ಈ ಲಕ್ಷ್ಮೀನಾರಾಯಣ ದೇವಾಲಯಕ್ಕೆ ಸಂಬಂಧಿಸಿದಂತೆ ೯ ಶಾಸನಗಳು ದೊರೆತಿದ್ದು ಇದು ಹೊಯ್ಸಳರ ಕಾಲದಲ್ಲಿ ಊರಿನ ಪ್ರಮುಖ ದೇವಾಲಯವಾಗಿತ್ತೆಂದು ತಿಳಿಯುತ್ತದೆ. ಆ ಕಾಲದಲ್ಲಿ ಕೆಲ್ಲಂಗೆರೆ ಗ್ರಾಮವು ವೈಷ್ಣವರ ಕೇಂದ್ರಗಳಲ್ಲಿ ಒಂದಾಗಿತ್ತೆಂದು ತಿಳಿಯುತ್ತದೆ.

ಕೆಲ್ಲಂಗೆರೆಯ ಶಂಕರೇಶ್ವರ ದೇವಾಲಯದ ಒಂದು ಶಾಸನವು (ಅಕೆರೆ ೧೫೦, ವಿಕ ೧೦-ಕ್ರಿ. ಶ. ೧೧೪೨) ಶಿವಾಲಯಕ್ಕೆ ಬಿಟ್ಟ ದಾನದ ವಿವರವನ್ನು ತಿಳಿಸುವುದರ ಜೊತೆಗೆ 'ಕೇಶವ ದೇವರಿಗೆ ಬಿಟ್ಟಗಾಣ'ವನ್ನು ಉಲ್ಲೇಖಿಸಿದೆ. ಇದರಿಂದ ಕೆಲ್ಲಂಗೆರೆ ಗ್ರಾಮದಲ್ಲಿ ಚೆನ್ನಕೇಶವ ದೇವಾಲಯವು ಕ್ರಿ. ಶ. ೧೧೪೨ಕ್ಕಿಂತ ಮೊದಲಿನಿಂದಲೂ ಇತ್ತೆಂದು ತಿಳಿದುಬರುತ್ತದೆ.

ಲಕ್ಷ್ಮೀನಾರಾಯಣ ದೇವಾಲಯದ ಪ್ರಾಚೀನ ಶಾಸನವು (ಅಕೆರೆ ೧೫೧ ಕ್ರಿ. ಶ. ೧೧೭೩) ಅನಾದಿ ಅಗ್ರಹಾರವೂ, ಹರಿಹರಪುರವಾಗಿದ್ದ ಕೆಲ್ಲಂಗೆರೆಯ ಚೆನ್ನಕೇಶವದೇವರ ನೈವೇದ್ಯಕ್ಕೆ ದೇವರಗ್ರಾಸನಕ್ಕೆ ಮತ್ತು ಬ್ರಾಹ್ಮಣರ ಆಹಾರ ದಾನಕ್ಕೆಂದು ಬಿಟ್ಟ ದತ್ತಿಯನ್ನು ದಾಖಲಿಸುತ್ತಿದೆ. ಮಹಾಮಂಡಳೇಶ್ವರನಾಗಿದ್ದ ನಾರಸಿಂಹದೇವರ ಕೈಯಲ್ಲಿ ಕೊಂಡುಕೊಂಡು ಮಹಾಪ್ರಧಾನಿ, ಶ್ರೀಕರಣದ ಹೆಗ್ಗಡೆಯಾಗಿದ್ದ ಕೇತಯೆಂಣ್ನನು ದಾನ ಬಿಡುತ್ತಾನೆ. ಈ ಶಾಸನ ಪಾಠವನ್ನು ಚಬ್ಬರಾಜನ ಪುತ್ರನಾದ ಶಾಂತಿನಾಥ ಪಂಡಿತನು ರಚಿಸಿದ್ದಾನೆ.

ಈ ದೇವಾಲಯದ ಮತ್ತೊಂದು ಶಾಸನವು (ಅಕೆರೆ ೧೫೨-೧೧೭೫) ವಿಷ್ಣುವಿನ ಪ್ರಾರ್ಥನೆಯೊಂದಿಗೆ *ಶ್ರೀನಾರಾಯಣಾಯನಮಃ* ಎಂದು ಉಲ್ಲೇಖಿಸಿದೆ. ಹೊಯ್ಸಳ ದೊರೆ ವೀರ ಬಲ್ಲಾಳದೇವನ ಪಾದಪದ್ಮೋಪಜೀವಿಯಾದ, ಮಂತ್ರಿಯೂ, ವಿಪ್ರಸಿಖಾಮಣಿಯೂ ಆಗಿದ್ದ. ಸೋಮನ ಪುತ್ರರಾದ ನಾರಸಿಂಹ, ಕಲಿದೇವ ಮತ್ತು ಮಹಾದೇವರನ್ನು ಸೂಚಿಸಿದೆ. ಕಲಿದೇವನನ್ನು

*೫೫೭, ೧೧ನೇ ಮುಖ್ಯರಸ್ತೆ, ಶ್ರೀನಿವಾಸನಗರ, ಬೆಂಗಳೂರು - ೫೬೦ ೦೫೦.

ಶಾಸನವು 'ವೀರಬಲ್ಲಾಳನ ವಿಭವ' ದಂತಿದ್ದನೆಂದಿದೆ. ಹರಿಹರಪುರವಾದ ಕೆಲ್ಲಂಗೆರೆಯ ಶ್ರೀಧರಗೌಡನ ಗೌಡಿಕೆಗೆ ಸೇರಿದ್ದ ಭೂಮಿಯಲ್ಲಿ ೧೮೦೦ ಅಡಿಕೆಯ ಮರಗಳನ್ನೂ ೧೨೦೦ ಕಮ್ಮ ಬೆದ್ದಲೆ, ಬೂದಿಹಾಳ ಬೆದ್ದಲೆ ೮೦೦ ಕಮ್ಮ ಭೂಮಿಯನ್ನು ಕ್ರಯಕ್ಕೆ ಕೊಂಡು ಕೇಶವ ದೇವರಿಗೆ ದಾನಬಿಟ್ಟದ್ದನ್ನು ತಿಳಿಸಿದೆ.

ಕ್ರಿ. ಶ. ೧೧೯೦ರ ಶಾಸನ (ಅಕೆರೆ ೧೫೭) ಹರಿಹರಪುರವಾದ ಕೆಲ್ಲಂಗೆರೆಯ ಮಹಾಜನರ ಎದುರಿನಲ್ಲಿ ಆತ್ರೇಯ ಗೋತ್ರದ ಮಾಳಿಗೆ ಬಿಟ್ಟಿಮಯ್ಯನ ಪುತ್ರನಾದ ಹರಿಹರಭಟ್ಟನು ಚೆನ್ನಕೇಶವ ದೇವರ ಅಂಗರಂಗಭೋಗಕ್ಕೆಂದು ಬಿಟ್ಟ ದಾನವನ್ನು ಉಲ್ಲೇಖಿಸಿದೆ. ಈ ಹರಿಹರಭಟ್ಟನನ್ನು ಶಾಸನವು *'ಸ್ರುತಿಸಬುದಾರ್ತ್ತಶಾಸ್ತ್ರ......... ದಿಂ ಬಹುತರ್ಕ ಪುರಾಣ ದರ್ಥವನು ಬೆಸಗೊಳಳ್ಪಮತಿ ಮತ್ತೆ ಸಾಹಸ ಸದುಗುಣಿ. ಕೀರ್ತಿವೆತ್ತಿಪ ಹರಿಹರ ಭಟ್ಟ(ಗೆಂ) ಪೆಸರುವೆತ್ತ ಪರಿಧರೆ ಬಂಣ ಪಂಣ್ಯನಗಂ॥* ಎಂದಿದೆ. ಇವನು ತನ್ನಲ್ಲಿದ್ದ ಹಣವನ್ನು, ಕೌಂಗಿನ ಮರವನ್ನು, ಕೆಲ್ಲಂಗೆರೆ ವಿಪ್ರರನ್ನು ಕರೆಸಿ ದೇವರಿಗೆಂದು ದಾನ ಬಿಡುತ್ತಾನೆ.

***ಕ್ರಿ. ಶ. ೧೨೮೮ರ ಮತ್ತೊಂದು ಶಾಸನ (ಅಕೆ ೧೫೯) ಈ ಗ್ರಾಮವು ವೈಷ್ಣವಕೇಂದ್ರವಾಗಿತ್ತೆಂದು ತಿಳಿಸಿದೆ. ಇಲ್ಲಿ ನಿಜಬೋಧ ಪ್ರಭುಗಳ ಔರಸಪುತ್ರರಾದ ಅನುಪಮ ಸುಖರೂಪ ದೇವನೆಂಬು ವರು ದೇವರಿಗೆ ಮಹಾಜನಂಗಳ ಕೈಯಲ್ಲಿ ಕೊಂಡು ದಾನ ಬಿಡುತ್ತಾರೆ. ಈ ಶಾಸನಾಂತ್ಯದಲ್ಲಿ 'ಮಹಾದೇವಣ' ನೆಂಬುವನು ಶ್ರೀರಾಮಕೃಷ್ಣ ದೇವರ ಪುತ್ರರೆಂದು ತಿಳಿಸಿರುವುದಲ್ಲದೇ, ಅವನನ್ನು ಶ್ರೀ ಶಾಶ್ವತಾತ್ಮಕ ಎಂದಿದೆ. 'ಶ್ರೀ ಮಠದ ಶ್ರೀಕಾರ್ಯಕ್ಕೆ' ಎಂಬ ಉಲ್ಲೇಖವುಳ್ಳ ಈ ಶಾಸನದಿಂದ ಕೆಲ್ಲಂಗೆರೆಯಲ್ಲಿ ವೈಷ್ಣವಮಠವೊಂದಿ ತ್ತೆಂದು ತಿಳಿದುಬರುತ್ತದೆ.***

ಈ ದೇವಾಲಯದ ಉಳಿದೆರಡು ಶಾಸನಗಳು ಆ ಗ್ರಾಮದ ಸ್ಥಿತಿಗತಿಯ ಬಗೆಗೆ ಬೆಳಕು ಚೆಲ್ಲಿವೆ. ಕ್ರಿ. ಶ. ೧೩೧೮ರ (ಅಕೆರೆ ೧೫೪) ಶಾಸನವು ಈ ಊರಿನಲ್ಲಿ ನಡೆದ ದೇವದಾನದ ಮಾರಾಟದ ಬಗೆಗೆ ತಿಳಿಸುತ್ತಿದೆ. ದೇವಾಲಯದ ವ್ಯವಸ್ಥಾಪಕ ವರ್ಗದವರಾದ ಮದ್ದಿಕ ಕೂಟಗಟ್ಟದಲ್ಲಿ ಮಹೇಸ್ವರ ಹರಿಯಂಣ್ಣಗಳು ಕರಿಯಮಾದುಣಗಳ ಮಕ್ಕಳಾದ ನರಸಿಂಹದೇವ ಮತ್ತು ಸಂಕಣ್ಣ ಗೋಪಣ್ಣಂಗಳು 'ತಾವು ಆಳಲಾರದೆ' ಎಂದು ಕಟ್ಟಿಗೆಧಾರೆಯನೆರೆದು ವೋಲೆ ಕೊಟ್ಟುಬಿಡುತ್ತಾರೆ. ಆಗ ರಾಮಣ್ಣನವರು ಆ ಕ್ಷೇತ್ರಗಳಿಗೆ ೮ ಗದ್ಯಾಣವನ್ನು ಕಟ್ಟುಗೆ ಕಾಣಿಕೆ ನೀಡಿ ಕೊಂಡುಕೊಳ್ಳುತ್ತಾರೆ. ಆ ಕ್ಷೇತ್ರಕ್ಕೆ ಪ್ರತಿವರ್ಷ, ಪುಷ್ಯಮಾಸದಲ್ಲಿ ರಾಮಣ್ಣನವರು ಮಹಾಜನರಿಗೆ ಒಂದು ಗದ್ಯಾಣವನ್ನು ನೀಡಬೇಕೆಂದು ಕಟ್ಟಳೆ ತಿಳಿಸಿದೆ. ಶಾಸನದಲ್ಲಿ ರಾಮಣ್ಣನವರಿಗೆ ಸೇರಿದ ಭೂಮಿ ಸೀಮಾ ವಿವರವನ್ನು ಸ್ಪಷ್ಟವಾಗಿ ತಿಳಿಸಿದ್ದು. 'ಈ ಭಾಗವನ್ನು ಆಳುವರು', ಎಂದಿದೆ. ಶಾಸನವು ಅಂದಿನ ವ್ಯವಹಾರದ ರೀತಿಯನ್ನು ತಿಳಿಸುತ್ತಾ ಸಿದ್ಧಾಯದ ಗದ್ಯಾಣ ಒಂದನ್ನು ಮತ್ತು ಅರಮನೆಯಿಂದ ಬಂದ ಪೂರ್ವಾಯ ಅಪೂರ್ವಾಯಗಳೇನೇ ಬಂದರೂ ಮಹಾಜನರೇ ಪರಿಹರಿಸಿ ಕೊಡುವರು ಮತ್ತು ಸೀಮಾವಿವಾದ ಬಂದರೂ ಮಹಾಜನರೇ ತಿದ್ದಿ ಕೊಡುವರು ಎಂದು ಹೇಳಿದೆ. ಈ ಭೂಮಿಯ ಒಂದು ಭಾಗವಾದ ಬಡಗಣಾ ಹೊಲವನ್ನು ಮಹಾಜನರೇ ಅನುಭವಿಸುವರೆಂದು ತಿಳಿಸಿದೆ. ಶಾಸನಾಂತ್ಯದಲ್ಲಿ ಶ್ರೀ ಚೆನ್ನಕೇಶವ ಒಪ್ಪ ಮತ್ತು ಮಹಾಜನರ ಒಪ್ಪವಿದೆ. ಶಾಸನವನ್ನು ಗ್ರಾಮದ ನಿಯೋಗದವರು ಹೇಳಿದ್ದರಿಂದ ಹರಿಯಣ್ಣನ ಮಗ ಸೇನಬೋವ ಸಿರಿಪಣ್ಣನು ಬರೆದಿದ್ದಾನೆ.

ಈ ದೇವಾಲಯದ ಮತ್ತೊಂದು ಶಾಸನ (ಅಕೆರೆ ೧೫೬) ೧೩೯೪ರಲ್ಲಿ ಕೆಲ್ಲಂಗೆರೆಯ ದೇವಪ್ಪಂಗಳ ಮಕ್ಕಳಾದ ನೋಟದ ಚಂದಪ್ಪಗಳು ಕೆರೆಯ ಧರ್ಮಕ್ಕೆ ಭಂಡಿ ಹೊಡೆದು ಭಂಡಿಯನ್ನು ನಡೆಸುವುದಕ್ಕಾಗಿ ಬಿಟ್ಟ ದಾನವನ್ನು ಉಲ್ಲೇಖಿಸಿದೆ. ಆ ಭಂಡಿ ನಡೆಸುವವರಿಗೆ ಮಹಾಜನಂಗಳು ಮ . . ಳ ಜೀವಿತಕ್ಕೆ ಮಾಡಿದ ಕಟ್ಟಳೆಯನ್ನು ತಿಳಿಸುತ್ತಾ ಪುರಾಣದ ಗದ್ದೆ, ಮಠದ ಗದ್ದೆ ಬಿಟ್ಟ ನಿಗುಚುಂಡ ಗದ್ದೆಯೂ ಸೇರಿ ಒಟ್ಟು ಖಂಡುಗ ೧, ಕೊಳಗ ೧೦ ಬೆದ್ದಲುವನ್ನು ಆಳಜೀವಿತಕ್ಕೆಂದು ಬಿಡುತ್ತಾರೆ. ಹಿರಿವೂರಿನ ಹಳ್ಳಿಗಳಲ್ಲಿ ಎತ್ತು ಕೋಣಂಗಳ ಗುಗ್ಗರಿಗೆ ಎಂದೂ ಹಣ ಬಿಡುತ್ತಾರೆ. ಹೀಗೆ ಬಂಡಿ ನಡೆಸಲು ಬಿಟ್ಟ ದಾನ ಉಲ್ಲೇಖಿಸುವಲ್ಲಿ 'ಶ್ರೀ ಚೆನ್ನಕೇಶವ' ವೊಪ್ಪವೂ ಇದೆ. ಇದು ಧರ್ಮಾರ್ಥವಾಗಿ ಬಿಟ್ಟ ದಾನವೆಂದು ತಿಳಿಸಿದೆ.

*ಕ್ರಿ. ಶ. ೧೩೬೭ರ ಶಾಸನವೊಂದು ಕೆಲ್ಲಂಗೆರೆಯ ಮಹಾಜನಂಗಳು ಒಟ್ಟಾಗಿ ಸೇರಿ ಕೆರೆಯ ಭಂಡಿಯ ಕೋಣ, ಆಳಜೀವಿತ, ಹೆರೆಯವಿಂಣ್ಣೆ ಮತ್ತು ಹಾರೆ, ಗುದ್ದಲಿ ಮುಂತಾದ ವಕ್ಕೆಂದು ಕೊಟ್ಟ ಆದಾಯವನ್ನು ತಿಳಿಸುತ್ತಾ ಅಲ್ಲಿಗೆ ಬರುತ್ತಿದ್ದ ಹೇರುಗಳನ್ನು ತಿಳಿಸಿದೆ. ಅಡಕೆ ಹೇರು, ಎಲೆ ಹೇರು ಮತ್ತು ಕಿತ್ತಳೆ ಹಣ್ಣಿನ ಹೇರನ್ನು ದಾಖಲಿಸಿದೆ.*

*ಈ ದೇವಾಲಯದ ಮಾಳಿಗೆಯ ಶಾಸನವು (ಅಕೆರೆ ೧೫೮) ಈ ಊರಿನಲ್ಲಿ ದೊರೆತಿರುವ ಪ್ರಾಚೀನ ಜೈನ ಶಾಸನವಾಗಿದೆ. ಸು. ೧೦-೧೧ನೇ ಶತಮಾನದಲ್ಲಿದ್ದಿರಬಹುದಾದ, 'ಕೆಲ್ಲಂಗೆರೆಯ ಬಿದುಗ ಜಿನಾಲಯ'ದ ಬಗ್ಗೆ ತಿಳಿಸುತ್ತಿದೆ. ಈ ಜೈನ ಶಾಸನವು ಆಗ ಭಟಾರರ ಪದವಿಯಲ್ಲಿದ್ದ ಸಿಂದಾಚಾರರನ್ನೂ ಅವರ ಶಿಷ್ಯರಾದ ಲಾಗಾಚಾರ ನನ್ನೂ ಹೆಸರಿಸಿದೆಯಲ್ಲದೇ, ಸ್ಥಾನಗುರುಗಳು ಅಳಿದರೆ ಲಾಗಾ ಚಾರ್ಯರಿಗೆ ಒಪ್ಪಿಸುವೆಂದೆಂದೂ ಅವರು ಮತ್ತೊಬ್ಬರನ್ನು ಸ್ಥಾನೀಕರಾಗಿ ಇರುಸುವರೆಂದು ತಿಳಿಸುತ್ತಾ ಅಂದಿನ ಬಸದಿಗಳ ಪೂಜಾ ವ್ಯವಹಾರದ ಬಗೆಗೆ ಬೆಳಕು ಚೆಲ್ಲಿದೆ. ಒಂದು ವೇಳೆ ಭಟಾರರು ಸ್ಥಾನೀಕರು (ಕೆಟ್ಟರೆ?) ಅವರನ್ನು ದಾತಾರರು, ಕೆಲ್ಲಂಗೆರೆಯ ಮಂದಿ, ಪಳ್ಳಿಗಳ ಗಾವುಂಡರು ಸೇರಿ ಸ್ಥಾನದಿಂದ ಇಳಿಸಬೇಕೆಂದು ಕಟ್ಟಳೆ ವಿಧಿಸುತ್ತಿರುವ ಈ ಶಾಸನ ಅಂದಿನ ಜೈನ ಮತದ ಸ್ಥಿತಿಗತಿಯನ್ನು ಬಿಂಬಿಸುತ್ತಿದೆ. ಆದರೆ ಈ ಗ್ರಾಮದಲ್ಲಿ ಬೇರೆ ಜೈನಾವಶೇಷಗಳಾವುವೂ ದೊರೆತಿರು ವುದಿಲ್ಲ.*

ಹೀಗೆ ಗಂಗರ ಕಾಲದ ವಾಸ್ತುವಿನೊಂದಿಗೆ ಹೊಯ್ಸಳರ ದೇವಾಲಯವಾದ ಲಕ್ಷ್ಮೀನಾರಾಯಣ (ಚೆನ್ನಕೇಶವ) ದೇವಾಲ ಯವು ಜೈನ ಶಾಸನವನ್ನು ಒಳಗೊಂಡಿದ್ದು ಕುತೂಹಲ ಕೆರಳಿಸು ವಂತಿದೆ.



ಡಾ। ಶೀಲಾಕಾಂತ ಪತ್ತಾರ*

# ಚಲುಕ್ಯ ಮತ್ತು ಕಪ್ಪೆ ಅರಭಟ್ಟ: ಎರಡು ಟಿಪ್ಪಣಿಗಳು

### ಟಿಪ್ಪಣಿ ೧ : ಚಲುಕ್ಯ

ಬಾದಾಮಿ ಅರಸು ಮನೆತನದ ಹೆಸರಾದ 'ಚಲುಕ್ಯ' ಎಂಬ ಪದವನ್ನು ಜೇಮ್ಸ ಬರ್ಜೆಸ್*೧, ಹೆನ್ರಿ ಕಜಿನ್ಸ*೨ ಮೊದಲಾದವರು ತಪ್ಪಾಗಿ ಚಾಲುಕ್ಯ ಎಂದು ಬಳಸಿದರು. ಕೆ. ಎ. ನೀಲಕಂಠ ಶಾಸ್ತ್ರಿ*೩, ಆರ್. ಡಿ. ಬ್ಯಾನರ್ಜಿ*೪ ಇದನ್ನೆ ಅನುಕರಿಸಿದರು. ಆರ್. ಎಸ್. ಪಂಚಮುಖಿ, ಮತ್ತು ಲಕ್ಷ್ಮಿನಾರಾಯಣರಾಯರು ಚಲುಕ್ಯ ಎಂದು ಉಪಯೋಗಿಸಿದ್ದಾರೆ*೫.

ಒಂದನೆಯ ಪುಲಿಕೇಶಿಯ ಬಂಡೆಗಲ್ಲು ಶಾಸನವು ಚಲುಕ್ಯರ ಅತಿ ಪ್ರಾಚೀನ ಶಾಸನ*೬. ಇದರಲ್ಲಿ ಈ ರಾಜವಂಶದ ಹೆಸರು ***ಚಲಿಕ್ಯ*** ಎಂದು ಕಾಣಸಿಕೊಂಡಿದ್ದು ಇದೇ ಈ ಪದದ ಮೂಲರೂಪವಿರಬಹುದು. ನಂತರ ಸಂಕ್ಷಿಪ್ತವಾಗಿ ***ಚಲ್ಕ್ಯ****೭ ಎಂದು, ಇಲ್ಲವೆ ಉಚ್ಚರಿಸಲು ಹೆಚ್ಚು ಸರಳವೆನಿಸುವ ಚಲುಕ್ಯ ಎಂದು ಬಳಕೆಯಲ್ಲಿ ಬಂದಿರಬಹುದು. ಶಾಸನದಲ್ಲಿ ಹೆಚ್ಚಾಗಿ ಕಂಡು ಬರುವ ರೂಪಗಳೆಂದರೆ ***ಚಲಿಕ್ಯ*** ಮತ್ತು ***ಚಲುಕ್ಯ***. ಇವುಗಳ ಜೊತೆಗೆ ವಿರಳವಾಗಿ ***ಚಲುಕಿನ್****೯, ***ಚಲ್ಕಿ****೧೦, ***ಚುಳುಕಿ****೧೧, ***ಚಳುಕ್ಯ****೧೨, ಮತ್ತು ***ಚಲುಕಿಕಿ****೧೩ ಎಂಬ ರೂಪಗಳೂ ಇವೆ. ಈ ಪದಗಳ ಆದಿಯಲ್ಲಿ ಇರುವ ಅಕ್ಷರವು 'ಚ' ಆಗಿರುವುದು ಗಮನಾರ್ಹ. ***ಚಲುಕ್ಯ*** ಎಂಬುದೇ ಈ ಅರಸು ಮನೆತನದ ಸರಿಯಾದ ಹೆಸರು. ಮೂಲವಂಶದಿಂದ ಶಾಖೆಗೊಂಡ ಮನೆತನವು ಚಾಲುಕ್ಯ ಎಂದೆನಿಸುತ್ತದೆ. ಹೀಗಾಗಿ ಕಲ್ಯಾಣದ ಅರಸರು, ವೆಂಗಿ ಅರಸರು ಚಾಲುಕ್ಯರು.

ಚಲುಕಿ, ಚಲ್ಕಿ, ಮತ್ತು ಸಲುಕಿ ಇವು ಸಲ್ಕಿ ಎಂಬ ಪದದ ರೂಪಗಳೆಂದೂ ಸಲ್ಕಿ ಎಂಬುದು ಒಂದು ಕೃಷಿ ಉಪಕರಣವೆಂದೂ ಸಮೀಕರಿಸಿ ಡಾ। ಎಸ್. ಸಿ. ನಂದಿಮಠ ಅವರು ಚಲುಕ್ಯರು ಬಾದಾಮಿ ಪರಿಸರದ ಕೃಷಿಕರಾಗಿರಬೇಕೆಂದು ಊಹಿಸುತ್ತಾರೆ*೧೪. ಈ ಪ್ರದೇಶದಲ್ಲಿ ಈಗಲೂ ಸಲಿಕೆಪ್ಪ, ಗುದ್ಲೆಪ್ಪ ಎಂಬ ಹೆಸರುಗಳಿರುವುದನ್ನು ತಿಳಿಸುತ್ತ ಈ ಅರಸು ಮನೆತನದ ಮೂಲಪುರುಷನು 'ಸಲ್ಕಿ' ಎಂಬ ಕೃಷಿ ಉಪಕರಣವನ್ನೇ ಅಂಕಿತನಾಮವಾಗಿ ಸ್ವೀಕರಿಸಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಹಾಗಿದ್ದಲ್ಲಿ 'ಸಲ್ಕಿ' ಜನಪ್ರಿಯ ಕೃಷಿ ಉಪಕರಣವಾಗಿರಬೇಕು. ಚಲುಕ್ಯರ ಶಾಸನಗಳಲ್ಲಿ ಮೆಂಡಿ, ನೇಗಿಲು, ಕುಡುಗೋಲು, ಕೊಡಲಿ ಎಂಬ ಕೃಷಿ ಉಪಕರಣಗಳ ಉಲ್ಲೇಖಗಳಿರುವುದನ್ನು ಎಸ್. ರಾಜೇಂದ್ರಪ್ಪ ಎತ್ತಿ ತೋರಿಸಿದ್ದಾರೆ*೧೫. ಆದರೆ ಸಲ್ಕಿ ಉಪಕರಣದ ಪ್ರಸ್ತಾಪವೇ ಕಂಡು ಬರುವುದಿಲ್ಲ. ಇದರಿಂದಾಗಿ ಡಾ। ನಂದಿಮಠರ ಅಭಿಪ್ರಾಯವನ್ನು ಒಪ್ಪಿಕೊಳ್ಳಲು ಮನಸ್ಸಾಗುವುದಿಲ್ಲ. ಸಲ್ಕಿ ಎಂಬುದು ಕೃಷಿ ಉಪಕರಣವಾಗಿರದೆ ಸಲ್ಲಕಿ ಎಂಬ ವೃಕ್ಷವಾಗಿರುವ ಸಂಭಾವ್ಯವಿದೆ. ಸಲ್ಲಕಿ ಪದವೇ ಸಲ್ಕಿ, ಚಲ್ಕಿ, ಚಲಿಕ್ಯ ಎಂಬ ರೂಪಗಳನ್ನು ಪಡೆದಿರುವ ಸಾಧ್ಯತೆ ಇದೆ. ಸಲ್ಲಕಿ ಎಂದರೆ ಬೆಳವಲ ಮರ. ಪಂಪನ ಆದಿಪುರಾಣದಲ್ಲಿ ಸಲ್ಲಕಿಯ ಪ್ರಸ್ತಾಪವಿದೆ*೧೬. ಆದ್ದರಿಂದ ಪ್ರಾಚೀನ ಕಾಲದಲ್ಲಿ ಇದು ಬಳಕೆಯಲ್ಲಿದ್ದ ಪದ ಎಂಬುದು ಸ್ಪಷ್ಟ. ಈ ವೃಕ್ಷವು ಭಾರತದಲ್ಲೆಲ್ಲ ಬೆಳೆಯುತ್ತಿದ್ದರೂ ಬೆಳವಲ ನಾಡಿನ ವಿಶೇಷತೆ ಎನ್ನಬಹುದು. ಇದು ಉತ್ತರ ಕರ್ನಾಟಕದ ಜನಪದರ ಪ್ರೀತಿಯ ಮರವಾಗಿದ್ದು, ಸಸ್ಯ ಸಂಪದ ಕ್ಷೀಣಗೊಂಡಿರುವ ಈ ದಿನಗಳಲ್ಲೂ ಬಾದಾಮಿ ಪರಿಸರದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಾಣಸಿಗುವ ಮರವಾಗಿದೆ.

ಮನೆತನಕ್ಕೆ ಹಣ್ಣಿನ ಮರಗಳ ಹೆಸರುಗಳಿರುವುದು ಈ ಪ್ರದೇಶದಲ್ಲಿ ಸಾಮಾನ್ಯ. ಬಾರಿಗಿಡದ, ಮಾವಿನಮರದ, ಅರಳಿಮರದ, ಹುಣಸಿಮರದ ಎಂಬ ಹೆಸರುಗಳು ಹೇರಳವಾಗಿವೆ. ಬಳೂಲದ ಎಂಬ ಹೆಸರಿನ ಮನೆತನಗಳೂ ಇವೆ. ಬಳೂಲ ಎಂಬುದು ಬೆಳವಲ (=ಸಲ್ಲಕಿ) ಪದದ ಸಂಕ್ಷಿಪ್ತ ರೂಪ.

ಚಲುಕ್ಯರು ಕದಂಬರಂತೆ ತಾವು ಮಾನವ್ಯಗೋತ್ರದವರೆಂದೂ ಹಾರಿತೀಪುತ್ರರೆಂದೂ ಹೇಳಿಕೊಂಡದ್ದಲ್ಲದೆ ಯಜ್ಞಯಾಗಾದಿಗಳ ಆಚರಣೆ ಆಡಳಿತ ವ್ಯವಸ್ಥೆಗಳಲ್ಲಿ ಕದಂಬರನ್ನು ಅನುಸರಿಸಿದಂತೆ ತೋರುತ್ತದೆ. ಕದಂಬರು ಕದಂಬ ವೃಕ್ಷವನ್ನು ತಮ್ಮ ಮನೆತನದ ಅಂಕಿತನಾಮವಾಗಿ ಸ್ವೀಕರಿಸಿದಂತೆ ಚಲುಕ್ಯರು ಸಲ್ಲಕಿ (ಸಲ್ಕಿ) ಮರವನ್ನು ಸ್ವೀಕರಿಸಿರಬಹುದು.

'ಸಲ್ಲಕಿ'ಗೆ ಅಂದರೆ ಕಪಿತ್ಥ ಮರಕ್ಕೆ ಪಾವಿತ್ರ್ಯದ ಹಿನ್ನೆಲೆ ಇದೆ. ಚಲುಕ್ಯರು ಗಣೇಶನನ್ನು ಆರಾಧಿಸಿದ್ದುದು ಅವರ ಬಹು ಸಂಖ್ಯೆಯ ಗಣಪತಿ ಶಿಲ್ಪಗಳಿಂದ ಸೂಚಿತ. ಶಿವ ಗುಹಾಲಯ ಒಂದರಲ್ಲಿಯೇ ಮೂರು ಇಂಥ ಶಿಲ್ಪಗಳಿವೆ. ಕೆಳಗಿನ ಶಿವಾಲಯವು ವಾತಾಪಿ ಗಣಪತಿಯ ಗುಡಿಯಾಗಿರಬಹುದೆಂಬ ಅಭಿಪ್ರಾಯವಿದೆ*೧೭. ಗಣಪತಿ ಕಪಿತ್ಥ ಪ್ರಿಯ. ಗಜಪ್ರಿಯ ಎಂಬುದು ಬೆಳವಲ್ಲ (ಸಲ್ಲಕಿ)ದ

*ಈಶ್ವರ ಶಿಲ್ಪ, ವಿದ್ಯಾನಗರ, ಬಾದಾಮಿ.

ಇನ್ನೊಂದು ಹೆಸರು. ಅದನ್ನು ಆನೆ ಬೇಲ ಎಂದೂ ಕರೆಯುತ್ತಾರೆ. ಹೀಗೆ ಸಲ್ಲಕಿಯೂ ಗಣೇಶನ ಪ್ರಿಯಫಲವಾಗಿದೆ. ಗಣಪತಿಯನ್ನು 'ಕಪಿತ್ಥಫಲ ಜಂಬೂ ಫಲಸಾರ ಭಕ್ಷಿತಂ ಉಮಾಸುತಂ' ಎಂದು ಬಣ್ಣಿಸಲಾಗಿದೆ. ಗಣಪತಿಗೆ ಪ್ರಿಯವಾದ ಸಲ್ಲಕಿ ವೃಕ್ಷದ ಹೆಸರನ್ನು ಚಲುಕ್ಯರು ತಮ್ಮ ಮನೆತನದ ಹೆಸರಾಗಿ ಸ್ವೀಕರಿಸಿರಬಹುದೆಂದು ತಿಳಿಯಬಹುದು.*

**ಟಿಪ್ಪಣಿ ೨ : ಕಪ್ಪೆ ಅರಭಟ್ಟ**

ಬಾದಾಮಿಯ ಭೂತನಾಥ ಕೆರೆಯ (ಅಗಸ್ತ್ಯ ತೀರ್ಥ) ಪೂರ್ವದ ದಂಡೆಯ ಮೇಲೆ ಒಂದು ನೈಸರ್ಗಿಕ ಗುಹೆ ಇದೆ. ಇದನ್ನು ಕೋಷ್ಠರಾಯನ ಗುಡಿ ಎನ್ನುತ್ತಾರೆ. ಒಳಗೆ ಬೃಹದಾಕಾರದ ಕೋಷ್ಠರಾಯನ ಶಿಲ್ಪವಿದೆ.

ರಾಯನು ಸಿಂಹಾಸನ ಮೇಲೆ ಪದ್ಮಾಸನದಲ್ಲಿ ಕುಳಿತಂತೆ ಚಿತ್ರಿತನಾಗಿದ್ದಾನೆ. ಕರ್ಣಕುಂಡಲ, ರತ್ನಹಾರ, ಭುಜಕೀರ್ತಿ, ಕೈಕಡಗಗಳಿಂದ ಅಲಂಕೃತನಾಗಿದ್ದಾನೆ. ಜಪಮಾಲೆ ಹಿಡಿದ ಬಲಗೈ ಅಭಯ ಮದ್ರೆಯಲ್ಲಿದೆ. ಎಡಗೈ ಧ್ಯಾನ ಮುದ್ರೆಯಲ್ಲಿದೆ.

ಪ್ರಚಲಿತ ದಂತಕಥೆಯಿಂದ ಈ ಗುಹೆಯಲ್ಲಿ ಕುಷ್ಠ ರೋಗದಿಂದ ಬಳಲುತ್ತಿದ್ದ ಅರಸನು ವಾಸವಾಗಿದ್ದನೆಂದು ತಿಳಿದುಬರುತ್ತದೆ. ಆ ಕುಷ್ಠರೋಗಿಯೇ ಈ ಕುಷ್ಠರಾಯ. ಬಾದಾಮಿಯ ಶಾಸನದಲ್ಲಿ ಕಾಣಿಸಿಕೊಳ್ಳುವ ಕಪ್ಪೆ ಅರಭಟ್ಟನ ಹೆಸರಿನ ಬಗ್ಗೆ ಅನೇಕ ವಿದ್ವಾಂಸರು ಚರ್ಚೆ ಮಾಡಿದ್ದಾರೆ. ಆದರೆ ಕಪ್ಪೆ ಎಂಬುದು ಒಂದು ರೋಗದ ಹೆಸರು ಅಗಿರುವ ಅಂಶವನ್ನು ಅವರು ಗಮನಿಸಿಲ್ಲ. ಕಪ್ಪೆ ಎಂದರೆ ಕಪ್ಪೆಹುಣ್ಣು. ಇದನ್ನು ಕಿಟ್ಟೆಲ್‌ರು ತಮ್ಮ ನಿಘಂಟಿನಲ್ಲಿ a spreading sore in the palm fo the hand, on the sole of the foot etc., (South Maratha) ಎಂದು ಅರ್ಥೈಸಿದ್ದಾರೆ. ಕಪ್ಪೆ ಅರಭಟ್ಟ ಎಂದರೆ ಕಪ್ಪೆಹುಣ್ಣಿನಿಂದ ಬಳಲುವ ಅರಸುಭಟ್ಟ ಅಥವಾ ಕುಷ್ಠರಾಯ ಎಂದರ್ಥ ಅಂಗ ದೌರ್ಬಲ್ಯದ ಹಿನ್ನೆಲೆಯಲ್ಲಿ ವಿಷ್ಣುವರ್ಧನನನ್ನು ಕುಬ್ಜ ವಿಷ್ಣುವರ್ಧನ ನೆಂದು ಗುರುತಿಸಿದಂತೆ ಅರಭಟ್ಟನನ್ನು ಕಪ್ಪೆ ಅರಭಟ್ಟ ಎಂದು ಗುರುತಿಸಿರಬಹುದು.

ಇದರಿಂದಾಗಿ ಕಪ್ಪೆ ಅರಭಟ್ಟನ ಶಾಸನವು ಹೆಚ್ಚು ಅರ್ಥಪೂರ್ಣವಾಗುತ್ತದೆ. ಕಪ್ಪೆ ಅರಭಟ್ಟನಿಗೆ ದಿನ ದಿನವು ಮಾನಭಂಗವನ್ನು ಅನುಭವಿಸುವ ದುರ್ದೆಸೆ ಬಂದದ್ದು ಈ ಕುಷ್ಠರೋಗದಿಂದ. ಸುಶ್ರುತನು ಕುಷ್ಠರೋಗವನ್ನು ಸಾಂಕ್ರಾಮಿಕ ರೋಗವೆಂದು ಹೇಳಿ ರೋಗಿಯ ಬಟ್ಟೆಯನ್ನು ಸಹ ಇತರರು ಮುಟ್ಟುವುದನ್ನು ನಿಷೇಧಿಸುತ್ತಾನೆ. ಹೀಗಾಗಿ ಕುಷ್ಠ ಪೀಡಿತನಾದ ಅರಸನು ಅರಮನೆಯಿಂದ ದೂರವಾಗಿ ಈ ನೈಸರ್ಗಿಕ ಗುಹೆಯಲ್ಲಿ ವಾಸವಾಗಿರಬಹುದಾಗಿದೆ. ಈ ಗುಹೆಯು ವಿಶಾಲವಾಗಿದ್ದು ಬಂಡೆಗಳ ನಡುವಿನ ಕಿಂಡಿಯಿಂದ ತೂರಿಬರುವ ಪ್ರಕಾಶ ಹಾಗೂ ಗಾಳಿ, ವಸತಿಗೆ ತಕ್ಕ ಅನೂಕೂಲತೆಯನ್ನು ಒದಗಿಸಿದಂತಿದೆ. ಪ್ರಾಯಶಃ ಒಬ್ಬ ಸೇವಕನಿಂದಲೂ ತಿರಸ್ಕೃತನಾಗಿ ಒಂಟಿಯಾಗಿ ಇಲ್ಲಿ ದಿನ ಕಳೆದ ಅರಸನ ಸ್ಥಿತಿ ಅತ್ಯಂತ ದಯನೀಯ ವಾದುದಾಗಿರಬೇಕು, ಸಾಮಾಜಿಕವಾಗಿ ಮಾನಭಂಗವನ್ನುಂಟು ಮಾಡಿದ ಈ ಕ್ಷಣಗಳು ಈಟಿಯಂತೆ ಆತನ ಮನಸ್ಸನ್ನು ಚುಚ್ಚಿರಬಹುದು.

ಕಪ್ಪೆ ಅರಭಟ್ಟನ ಶಾಸನದ ಒಂದೆರಡು ಸಾಲುಗಳು ಬಾದಾಮಿಯ ಹತ್ತಿರ ಮತ್ತೆರಡು ಜಾಗೆಗಳಲ್ಲಿ ಕಾಣಸಿಗುವುದು ಗಮನಾರ್ಹವೆನಿಸುತ್ತದೆ. ಕೋಷ್ಠರಾಯನ ಗುಡಿಗಿಂತಲೂ ವಿಶಾಲವಾದ ಇನ್ನೊಂದು ನೈಸರ್ಗಿಕ ಗುಹೆ ಎಂದರೆ ಬಾದಾಮಿ ಯಿಂದ ಸುಮಾರು ೪-೫ ಕಿ.ಮೀ ಅಂತರದಲ್ಲಿರುವ ಸಿಡಿಲಫಡಿ. ಪ್ರಾಗೈತಿಹಾಸ ಕಾಲದ ಚಿತ್ರ, ಶಿಲಾ ಉಪಕರಣಗಳಿಂದಾಗಿ ಪುರಾತತ್ವ ಕೋವಿದರ ಗಮನ ಸೆಳೆದ ನೆಲೆ ಇದು. ಈ ಗುಹೆಯ ಉತ್ತರ ಗೋಡೆಯ ಮೇಲೆ 'ಕಷ್ಟಜನ ವರ್ಜಿತನ್ ಕಲಿಯುಗ ವಿಪರೀತನ್' ಎಂಬ ೭-೮ ನೆಯ ಶತಮಾನದ ಶಾಸನವಿದೆ. ಕುಷ್ಠರಾಯನು ಪ್ರಾಯಶಃ ಕೆಲಕಾಲ ಇಲ್ಲಿ ವಾಸವಾಗಿದ್ದನೆಂದು ತಿಳಿಯಬಹುದು. ಮಹಾಕೂಟಕ್ಕೆ ಹೋಗುವ ದಾರಿಯಲ್ಲಿ ಶಿಬಾರ ಎಂಬ ಸ್ಥಳದಲ್ಲಿಯ ಇನ್ನೊಂದು ಕಲ್ಲಾಸರೆಯಲ್ಲಿ 'ವರನ್ತೇಜಸ್ವಿನೋ ಮೃತ್ಯುರ್ನತು ಮಾನಾವ ಖಂಡನಂ। ಮೃತ್ಯುಸ್ತತ್ಕ್ಷಣಿಕೋ ಮಾನಭಂಗ ದಿನೇ ದಿನೇ' ಎಂಬ ಸಾಲುಗಳನ್ನು ಕೆತ್ತಲಾಗಿದೆ. ಹೀಗೆ ಕಪ್ಪೆ ಅರಭಟ್ಟನ ಶಾಸನದ ತುಂಡುಗಳು ಕಾಣಸಿಗುವ ಈ ನೈಸರ್ಗಿಕ ಗುಹೆಗಳಲ್ಲಿ ಅರಭಟ್ಟನು ವಾಸವಾಗಿದ್ದನೆಂದು ತಿಳಿಯಬಹುದು. ಇವೆಲ್ಲ ಬಾದಾಮಿಯಿಂದ ಅನತಿ ದೂರದಲ್ಲಿರುವ ಸ್ಥಳಗಳು.

ಕೋಷ್ಠರಾಯಗುಡಿಯ ರಾಯನೇ, ಕಪ್ಪೆ ಅರಭಟ್ಟನ ಶಾಸನದಲ್ಲಿ ವರ್ಣಿತನಾದ ಮಾಧವ. ಈತನೇ ಪರಮ ಭಾಗವತನೆನಿಸಿದ ಒಂದನೆಯ ಕೀರ್ತಿವರ್ಮ ಆಗಿರಬಹು**ದೇ**?



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು


*೧. James Burgess., (1874), *Antiquities of the Belgaum and Kaladig;* Archaeological Survey of Western India, Vol. III.

*೨. Henry Cousens., (1926), *The Chalukyan Architecture of the Kanarese Districts,* Archaeological Survey of India, Vol. XLII, (Calcutta).

*೩. Yázdani, G. (Ed), (1982), *The early History of the Deccan,* New Delhi.

*೪. Banerji, R. D., (1928), *Basreliefs of Badami,* Memoris of the Archealogical Survey of India,Calcutta

*೫. ಎನ್. ಲಕ್ಷ್ಮೀನಾರಾಯಣರಾಯ ಮತ್ತು ಆರ್. ಎಸ್. ಪಂಚಮುಖಿ, (೧೯೪೬), **ಕರ್ನಾಟಕದ ಅರಸುಮನೆತನಗಳು,** ಸಂಪುಟ ೧, ಕರ್ನಾಟ ಇತಿಹಾಸ ಸಂಶೋಧನ ಮಂಡಲ, ಧಾರವಾಡ

*೬. E. I., XXVII, 2.

*೭. I. A., X, P. 57.

*೮. E. I., XXVIII, no. 10

*೯. I. A., VII, P. 237.

*೧೦. Desai, P. B., (1970), *A History of Karnataka*, Dharwad, P. 92.

*೧೧. ಅದೇ.

*೧೨. E.I., XXVIII, no. 23.

*೧೩. E.I., XXVII, P. 37-41.

*೧೪. ನಂದಿಮಠ. ಎಸ್. ಸಿ., (೧೯೯೨), **ಕರ್ನಾಟಕದ ಪರಂಪರೆ,** ಸಂಪುಟ ೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು.೨೩೮.

*೧೫. ರಾಜೇಂದ್ರಪ್ಪ., ಎಸ್., (೧೯೮೪), ಬಾದಾಮಿ ಚಲುಕ್ಯರ ಆಳ್ವಿಕೆಯಲ್ಲಿ ಕೃಷಿ **ಮಾನವಿಕ ಕರ್ನಾಟಕ,** ಸಂಪುಟ ೧೪, ಸಂಚಿಕೆ ೫, ಮೈಸೂರು.

*೧೬. ಸೈನ್ಯದಂತಿ ಕರೋಚ್ಚಾಟಿತ ಸಲ್ಲಕೀಸಲಯಂ (ಆದಿಪುರಾಣ - ೧೨.೫೫).

*೧೭. ಸುಂದರ. ಅ., (೧೯೭೭), ಬಾದಾಮಿಯ ಕೆಳಗಣ ಶಿವಾಲಯವು ಮೂಲತಃ ಗಣೇಶ ದೇವಾಲಯವೇ? **ಮಾನವಿಕ ಭಾರತಿ,** ಸಂ. ೬, ಧಾರವಾಡ, ಪು. ೧೭೯.

ಎಸ್. ಕೆ. ಮೇಲಾಕಾರ*

# ಕೊಪ್ಪಳ ಜಿಲ್ಲೆಯ ಶಾಸನೋಕ್ತ ಕವಿಗಳು

೧೯೯೭ ಆಗಸ್ಟ್ ೧೧ರಂದು ಕುಷ್ಟಗಿ, ಯಲಬುರ್ಗಾ, ಗಂಗಾವತಿ, ಕೊಪ್ಪಳ ಈ ತಾಲೂಕುಗಳನ್ನೊಳಗೊಂಡು, ಕೊಪ್ಪಳವು ನೂತನ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದು ಭೌಗೋಳಿಕವಾಗಿ ೫,೫೫೯ ಚದರ ಕಿ.ಮೀ. ಗಳಷ್ಟು ಭೂ ವಿಸ್ತೀರ್ಣವನ್ನು ಹೊಂದಿದೆ.*[೧] ಈ ಜಿಲ್ಲೆಯಲ್ಲಿ ೩೨೮ ಶಾಸನಗಳು ಲಭ್ಯವಾಗಿದ್ದು*[೨] ಈ ಪಟ್ಟಣವನ್ನು ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ಕೋಪಣನಗರ, ಕೋಪಣಾ ಚಲ, ಕೋಪಣಾದ್ರಿ, ಆದಿತೀರ್ಥ, ಮಹಾತೀರ್ಥ, ಕೋಪಣೀರ್ಥ, ಮೊದಲಾದ ಹೆಸರುಗಳಿಂದ ಗುರುತಿಸಲಾಗಿದೆ.

ಕೊಪ್ಪಳ ಜಿಲ್ಲೆಯಲ್ಲಿ ಅನೇಕ ಅರಸರ ಕಾಲದ ವಿವಿಧ ಶಾಸನಗಳು ದೊರೆತಿದ್ದು, ಅರಸನೇ ಸರ್ವಾಧಿಕಾರಿ ಯಾಗಿರುತ್ತಿದ್ದರಿಂದ ಅವನ ಆಣತಿ ಅನುಸಾರ ಶಾಸನ ರಚಿಸಿದ ಕವಿಗಳು ಬಹಳ. ಅವರು ಎಲೆಮರೆಯಲ್ಲುಳಿದು ಅಲ್ಲಲ್ಲಿ ತಮ್ಮ ಹೆಸರನ್ನು ಸೂಚಿಸಿರುವುದು ಕಂಡು ಬರುತ್ತದೆ.

*ಕವಿ ಸಜ್ಜನತಿಲಕ :* ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕೂಕನೂರು ಗ್ರಾಮದಲ್ಲಿಯ ಶಿಲಾಶಾಸನವೊಂದು 'ಸಜ್ಜನ ತಿಲಕ'ನೆಂಬ ಕವಿಯ ಕುರಿತು ಉಲ್ಲೇಖ ನೀಡುತ್ತಿದ್ದು ಕ್ರಿ.ಶ. ೧೧೭೦ರಲ್ಲಿ ರಾಯಮುರಾರಿ ಸೋಮೇಶ್ವರನ ಆಳ್ವಿಕೆಯಲ್ಲಿ ಈ ಕವಿಯೂ ಈ ಶಾಸನ ರಚಿಸಿರಬೇಕು ಎಂದು ತಿಳಿದು ಬರುವುದು. ಕವಿಯ ಬಗ್ಗೆ ಶಾಸನವು*[೩].

*ಪಂಬರ್ಪೊಗಳಲ್ಸಸ್ಥರ ಕುಳತಿಳಕಂ ನೆಗಳ್ದ*
*ಸುಕವಿ ಪರಮಾತ್ಮಸುತಂ, ನಲವಿಂ*
*ಪೇಳ್ದಂ ಸಜ್ಜನ ತಿಲಕನೆನಲ್ ಮೆಚ್ಚು ನಾವನೀ*
*ಶಾಸನಮಂ॥*

- ಎಂದಿದೆ. ಇದೆ ಕವಿಯನ್ನು ಬೆಳಗಾವಿ ಜಿಲ್ಲೆಯ ಸವನದತ್ತಿ ತಾಲೂಕಿನ ಸಿರಸಂಗಿ ಶಾಸನದಲ್ಲಿ, *'ಶಾಸನಮನುಸಿರ್ವ ನೆವದಿಂ ಲೇಸೆನಿಸಿದರಿ ಸ್ವಶ್ರಂಗ ಮಹಿಮೋನ್ನತಿಯಂ, ಭಾಸರಮತಿ ಬಣ್ಣಿಸಿದಂ, ಶ್ರೀ ಸಜ್ಜನತಿಲಕನೊಸೆದು ಪೊಸಗನ್ನಡಂ॥'* ಎಂಬುದಾಗಿ ಕವಿ ತನ್ನ ಶಾಸನದ ಬಗೆಗೆ ಹೇಳಿಕೊಂಡಿರುವುದು ಸಮುಚಿತವೇ ಆಗಿದೆ. ಶಾಸನ ಹೇಳುವುದು ಕವಿಗೆ ನಿಮಿತ್ತ ಮಾತ್ರ. ಊರ ಪೌರಾಣಿಕ ಮಾಹಿತಿಯ ಬಗ್ಗೆ, ನಾಡ ಜನಗಳ ಬಗ್ಗೆ ತನಗಿದ್ದ ಪ್ರೀತಿ ಅಭಿಮಾನಗಳನ್ನು ತನ್ನ ಕವಿತ್ವ ಕಲ್ಪನಾ ವಿನ್ಯಾಸವನ್ನು ಇದೊಂದು ಸಂದರ್ಭವೆಂದು 'ಬಣ್ಣಿಸಿದಂ ಪೊಸಗನ್ನಡಂ' ಎಂದು ಕನ್ನಡ ಭಾಷೆ ಮತ್ತು ಶಾಸನ ರಚನೆಯ ಪದ್ಧತಿಯ ಪರಂಪರೆಯನ್ನು ತೋರಿಸಿರುವುದು ಕವಿಗಳ ಪಂಕ್ತಿಯಲ್ಲಿ ಸಜ್ಜನತಿಲಕನನ್ನು ಸೇರಿಸಲು ಸೂಕ್ತವೆನಿಸುವುದು. ಈ ಶಾಸನದಲ್ಲಿ ಕವಿ ತನ್ನ ಗೋತ್ರ ಹೇಳಿಕೊಂಡಿಲ್ಲ. ಆದರೆ ಕೂಕನೂರ ಶಾಸನಗಳಲ್ಲಿ ಗೋತ್ರ ಹೇಳಿಕೊಂಡ ಸಜ್ಜನ ತಿಲಕನೂ. ಈ ಸಿರಸಿಂಗಿ ಶಾಸನದ ಸಜ್ಜನತಿಲಕನೂ ಒಂದೇ ಎನ್ನಬಹುದಾಗಿದೆ. ಈ ಕವಿಯು ಪ್ರಶಸ್ತಿಯನ್ನೋ ಅಥವಾ ಸಚ್ಚಾರಿತ್ರ್ಯವನ್ನು ಸೂಚಿಸುವ ವಿಶೇಷಣ ಮಾತ್ರವನ್ನೋ ಹೇಳಿದ್ದಾನಲ್ಲದೆ ಹೆಸರನ್ನು ಹೇಳಿಲ್ಲ. ಆದರೆ ಗೋತ್ರ ಮತ್ತು ತಂದೆಯ ಹೆಸರನ್ನು ತಿಳಿಸಿದ್ದಾನೆ. ಗೋತ್ರ : ಅಗಸ್ತ್ಯ ಗೋತ್ರ, ತಂದೆಯ ಹೆಸರು : ಪರಮಾತ್ಮ ಎಂದು ಶಾಸನ ಹೇಳುತ್ತದೆ. ಈ ಪರಮಾತ್ಮ ಎಂಬುದು ಹೆಸರೋ ಅಥವಾ ಪರಮೇಶ್ವರ ಎಂಬುದರ ರೂಪಾಂತರವೋ ತಿಳಿಯದು ಈ ಕವಿಯ ಹೇಳಿಕೆ ಪ್ರಕಾರ ಪರಮಾತ್ಮನು ಒಳ್ಳೆಯ ಕವಿಯಾಗಿದ್ದನೆಂದು ಗೊತ್ತಾಗುತ್ತದೆ*[೪].

ಮುಂದಿನ ಶಾಸನ ಸಾಲಿನಲ್ಲಿ :

*'ವರಕಾಶ್ಯಪ ಗೋತ್ರದ ದೇವರಾಜ*
*ನಂಗನೆಯ ಮಾಗಳಿಯಕ್ಕನ ತನಯಂ*
*ಬರೆದನಿದಂ ಶ್ರೀ ನಗೆವಡೆಯರ ತಿಲಕಂ*
*ಗಣಕ ಮಂಡನಂ ಶಿವದೇವ'॥*

- ಎಂದಿದೆ.

ಮೇಲಿನ ಪದ್ಯದಲ್ಲಿಯ ಅಗಸ್ತ್ಯಕುಲವು ಗೋತ್ರವಾಗಿರದೆ ಅಗಸ್ತ್ಯಕುಲದ ಕಾಶ್ಯಪಗೋತ್ರದ ಶಿವದೇವನೇ ಕವಿ ಯಾಗಿರಬಹುದು. ಹೀಗಾದ ಪಕ್ಷದಲ್ಲಿ ೧೨ನೇ ಶತಮಾನದ ಒಬ್ಬ ಶಾಸನ ಕವಿಯ ನಾಮವು ಉಪಲಬ್ಧವಾದಂತಾಗಲಿಲ್ಲವೆ*[೫]! ಈ ಶಾಸನಸ್ಥ ದಾತೃವಿನ ಕುಲವು ಅಗಸ್ತ್ಯಕುಲವು; ಕವಿಯದೂ ಅಗಸ್ತ್ಯಕುಲವು. ಹೀಗೆ ಒಂದೇ ಮನೆತನದಲ್ಲಿ ಕವಿಯೂ ದಾತೃವೂ ಇದ್ದಾರೆ*[೬].

ಶಾಸನದ ಭಾಷೆಯೂ ಬಂಧವೂ ಅಂತಹ ಪ್ರೌಢ ವಾದುದೇನೂ ಅಲ್ಲ, ಸರಳವಾಗಿದೆ. ಶಾಸನ ಕೆತ್ತುವವನಿಂದ 'ವಿಪಭ', 'ವ್ರಿಥ', 'ವ್ರಿತ', 'ನ್ರಿಪ' ಎಂಬ ಶಬ್ದ ಬಳಕೆ ಇದ್ದು ಇವು ಗ್ರಾಮ್ಯರೂಪಗಳಾಗಿವೆ. ಈ ಶಾಸನದಲ್ಲಿ ೨೩ ಕಂದ ಪದ್ಯಗಳು, ೩ ಚಂಪಕ ಮಾಲೆಗಳು ೩ ಮತ್ತೇಭ, ೧ ಉತ್ಪಲಮಾಲೆ, ೧ ಸ್ರಗ್ಧರಾ - ಹೀಗೆ ೨೦ ಪದ್ಯಗಳಿವೆ. ಮೇಲಿನ ಎರಡು ಪದ್ಯ ಸಂಸ್ಕೃತದಲ್ಲಿರುವವು.

*ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩.

***ಕವಿ ಕಂದರ್ಪ :*** ೨ನೇಯದಾಗಿ ಕೊಪ್ಪಳ ತಾಲೂಕಿನ ಕಾಲೂರು ಗ್ರಾಮದಲ್ಲಿಯ ಶಿಲಾಶಾಸನವೊಂದೂ 'ಕವಿ ಕಂದರ್ಪ'ನ ಕುರಿತ ಉಲ್ಲೇಖಿಸುತ್ತಿದ್ದು ಈ ಕವಿಯೂ ಕ್ರಿ.ಶ. ೧೧೭೭ರಲ್ಲಿ ಕಳಚೂರಿ ಸಂಕಮ ಅರಸನ ಆಳ್ವಿಕೆಯಲ್ಲಿದ್ದನೆಂದು ಶಾಸನ ತಿಳಿಸುವುದು. ಕವಿಯ ಬಗ್ಗೆ ಶಾಸನವು*[೭].

*'ಶಾಸನ ............. ಧ ಮೇದನಿಟ್ಟನೆ.......ಸೆಯ*
*ಶಾಸನ ಮಂವೀರಚಿಸಿದಂ ...........ಗಮಸೂರಿ*
*ಚಾತುರ್ಭಾಷಾ ಚಕ್ರವರ್ತಿ ಕವಿಕಂದರ್ಪಂ॥'*

- ಎಂದು ಸ್ಪಷ್ಟವಾಗಿ ಕವಿಯ ಬಗ್ಗೆ ಶಾಸನದಲ್ಲಿ ಕುನ್ತಳದ ದೇಶ ಆಳುತ್ತಿದ್ದ ಬಿಜ್ಜಳ, ಆತನ ಕೈ ಕೆಳಗಿನ ಏಚಿದೇವ, ಇವನ ಕೈ ಕೆಳಗಿನ ರೇಚಿದೇವ ಮಲ್ಲರಸ, ಕಾರೂರಿನ ೫೦೦ ಮಹಾಜನರ ವರ್ಣನೆ ಬರುತ್ತದೆ.

*ಪೇಳ್ದನೊಲ್ದು ಶಾಸನಮಂ ಪೇಯಾಕ್ಷಸಮಸೂಕ್ತಿ*
*ಚಾತುರ್ಭಾಷ ಕವಿ ಚಕ್ರವರ್ತಿ ಕಂದರ್ಪ*
*ವಿದ್ವಜ್ಜನ ಸಮ್ಮತಿ ಸ್ಫೋಟ ಪದಾರ್ಥಳಂ ಕ್ರಿಯಾ ಸಂಕುಳ*
*ಮಹಮಪ್ಪರಿತಿರೆ ಪೇಳ್ದನಿಂತೀ ಕವಿಕಂದರ್ಪ॥*

- ಎಂದು ಕವಿಯನ್ನು ಸಮಸ್ತ ಚಾತುರ್ಭಾಷಾ ಕವಿ ಚಕ್ರವರ್ತಿ ಎಂದು ಶಾಸನ ಹೊಗಳಿರುವುದು ಸಂಶೋಧಕರಿಗೆ ಆಸಕ್ತದಾಯಕವಾಗಿದೆ. ಇದೇ ರೀತಿ ಬೆಳಗಾವಿ ಶಾಸನಗಳಲ್ಲಿ ಕವಿ ಕಂದರ್ಪನ ಬಗ್ಗೆ ಉಲ್ಲೇಖ ಬರುವುದು. ಇದರಿಂದ ಕ್ರಿ.ಶ. ೧೨೦೪ರ ಸುಮಾರಿಗೆ ಜನ್ನ-ಪಾರ್ಶ್ವ ಮೊದಲಾದ ಕನ್ನಡ ಮಹಾ ಕವಿಗಳಿಂದ ಪ್ರಶಂಸಿತನಾದ ಬಾಲಚಂದ್ರ ಕವಿಕಂದರ್ಪನು ಆ ಮೊದಲೆ ಅಂದರೆ ಸುಮಾರು ೨೫ ವರ್ಷಗಳ ಹಿಂದಿನಿಂದಲೂ ಅವನು ಕಾವ್ಯ ರಚನೆ ಮಾಡುತ್ತಿದ್ದಿರಬೇಕು. ಈ ಕವಲೂರು ಕವಿ ಕಂದರ್ಪನು ಬೆಳಗಾವಿಯ ಕವಿಕಂದರ್ಪನೇ ಅಗಿರಲಾರನೆ ಎಂಬ ಅನುಮಾನ ಕಾಡುತ್ತದೆ. ಬಹುಶಃ ಕ್ರಿ.ಶ. ೧೧೭೭ರ ಈ ಕವಲೂರ ಶಾಸನವನ್ನು ಬರೆದ ಕವಿ ಕಂದರ್ಪನು ಶಿವೋಪಾಸಕನಾಗಿ ಮುಂದೆ ಜಿನೋಪಾಸಕನಾಗಿ ಆ ಕಾವ್ಯನಾಮದಿಂದಲೇ ಶಾಸನಗಳನ್ನು ಬರೆದಿರಬೇಕೆಂದು ಊಹಿಸಿದರೆ ತಪ್ಪೇನಲ್ಲ.

ಈ ಕವಿ ಕಂದರ್ಪರ ಬಗ್ಗೆ ಸಂಶೋಧಕರೊಬ್ಬರು ಸ್ಪಷ್ಟಪಡಿಸುತ್ತಾ : ಜೈನರಲ್ಲಿ ಪ್ರಸಿದ್ಧ ಮುನಿಯಾದ ಬಾಲ ಚಂದ್ರಯತಿಯ ಮಗನು ಶಿಷ್ಯನು ಆಗಿದ್ದು ಈ ಉಭಯಭಾಷಾ ಕವಿ ಚಕ್ರವರ್ತಿಯಾದ ಕಂದರ್ಪದೇವ ಮತ್ತು ಸೊನ್ನದೇವಿಯರ ಪುತ್ರ ಬಾಲಚಂದ್ರ ಮುನಿ ಕಾಣೂರ್ಗಣಕ್ಕೆ ತಿಳಕ ಪ್ರಾಯನಾಗಿದ್ದ. ಈತ ತನ್ನ ಗುರುಗಳಿಗೆ ಪರೋಕ್ಷವಾಗಿ ಪ್ರತಿಷ್ಠಾಕಾರ್ಯ ಮಾಡಿದನೆಂದು ತಿಳಿದು ಬರುತ್ತದೆ. ಕವಿ ಕಂದರ್ಪನು ಬಾಲಚಂದ್ರನಿಗೆ ತಂದೆ ಮತ್ತು ಗುರು ಎರಡೂ ಆಗಿದ್ದನೆಂದು*[೮] ಹೇಳಿದ್ದಾರೆ. ಈ ಕವಿ ಕಂದರ್ಪ ಮತ್ತು ಬಾಲಚಂದ್ರರು ಶ್ರಾವಕ ಸನ್ಯಾಸಿಗಳಾಗಿದ್ದರೆಂದಿರುವ ವಿದ್ವಾಂಸರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

***ಗೋಮ ಕವಿ :*** ಕೊಪ್ಪಳಜಿಲ್ಲೆಯ ಯಲಬುರ್ಗಿ ತಾಲೂಕಿನ ಕುಕನೂರು ಗ್ರಾಮದ ಮಹಾಮಾಯಾ ದೇವಸ್ಥಾನದ ಮುಖಮಂಟಪದಲ್ಲಿ ನಿಲ್ಲಿಸಿದ ಕ್ರಿ. ಶ. ೧೧೭೪ರ ಕಳಚೂರಿ ಸಂಕಮನ ಕಾಲದ ಶಾಸನದ ೧೧೭ ಸಾಲುಗಳು ಚಂಪು ಕಾವ್ಯರೂಪದ ಸಾಲುಗಳಾಗಿವೆ. ಇಲ್ಲಿರುವ ಕನ್ನಡ ಪದ್ಯಗಳ ೫೩ ಸಾಲುಗಳು ನೀಳ್ಗವನದಂತಿದ್ದು ಕೊನೆ ಕೊನೆಯಲ್ಲಿ ದತ್ತಿಗಳನ್ನು ಹೇಳುವ ಭಾಗದಲ್ಲಿ ಗೋಮಕವಿಗೆ ಸಾಲಿಗರ ಗ್ರಾಮದಲ್ಲಿ ಹೊಲಮನೆಗಳನ್ನು ಕೊಟ್ಟು ಮನ್ನಣೆ ಮಾಡಲಾಯಿತೆಂಬ ಸಂಗತಿ ಒಂದು ಕಂದಪದ್ಯದಲ್ಲಿ ಕಂಡುಬರುವುದು. ಈ ಕವಿಯನ್ನೇ ಇದಕ್ಕೂ ಮುಂಚಿಯೊಮ್ಮೆ ಕುಡಗಂಟೆಯಲ್ಲಿ ಹೊಲಮನೆಗಳನ್ನಿತ್ತು ಗೌರವಿಸಲಾಗಿತ್ತೆಂಬ ಮಾತು ಅದೇ ಪದ್ಯದಲ್ಲಿ ಹೇಳಿದೆ. ಗೋಮಕವಿಗೆ ಈ ಪುರಸ್ಕಾರವಿತ್ತವರು ಕುಕನೂರಿನ ಜೇಷ್ಠಾ ದೇವಿಯರ ಸ್ಥಾನಾಚಾರ್ಯರಾಗಿದ್ದ ಹಾಗೆಯೂ ಸೋಮೇಶ್ವರ ದೇವರ ನವಮಠಾಚಾರ್ಯರಾಗಿದ್ದ ಲೋಕಗುರು ಕಳೇಶ್ವ ರಾರ್ಯರು. ಕಳೇಶ್ವರಾರ್ಯರಿಗೆ ಅವರು ವಹಿಸಿಕೊಂಡಿದ್ದ ದೇವಾಲಯ ವಿದ್ಯಾಸಂಸ್ಥೆಗಳ ನಿರ್ವಹಣೆಗಾಗಿ ದತ್ತಿಗಳನ್ನು ಬಿಟ್ಟಂತೆ ಶಾಸನದಲ್ಲಿ ಹೇಳಿದೆ. ಆ ದತ್ತಿಗಳನ್ನು ಪಡೆದಿದ್ದ ಕಳೇಶ್ವರಾರ್ಯರು ೧೨ ಮತ್ತರು ಭೂಮಿ ಮತ್ತು ಮನೆ ಕೊಟ್ಟು ಗೋಮಕವಿಗೆ ಮರ್ಯಾದೆ ಮಾಡಿದರೆಂಬುದು ಶಾಸನದಲ್ಲಿ ಉಲ್ಲೇಖವಾಗಿದೆ. ಈ ಸನ್ಮಾನ ಆ ಶಾಸನ ಬರೆದುದಕ್ಕಾಗಿಯೇ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಇದನ್ನು ನೋಡಿದರೆ ಈತನು ಆಗಾಗ್ಯೆ ಶಾಸನಗಳನ್ನು ಬರೆಯುವ ವೃತ್ತಿಯುವನಾಗಿದ್ದನೆಂದು ಹೇಳಬಹುದು. ಈತನ ಕುರಿತು ಶಾಸನವು ***'ಉತ್ತಮವನೆ ಕುಡುಗುಂಟೆ ಯೊಳಿತ್ತಂತಿರೆ ಗೋಮಕವಿಗೆ ದಯೆಯಿಂ ಹಂನಿರ್ಮ್ಮತ್ತರ್ಕ್ಕೆಯಾ ಮನ್ನೆಯುಮನಿತ್ತಂ ಸಲಗರದೊಳಂ ಕಳೇಶ್ವರ ದೇವರು*[೯]*** ಎಂದಿದೆ. ಈ ಕವಿಯ ಕುರಿತು ಹಾಗೂ ಈತನು ಬಳಸಿದ ಭಾಷೆ, ಛಂದಸ್ಸುಗಳ ದೃಷ್ಟಿಯಿಂದ ಶಾಸನ ಅಮೂಲ್ಯವಾಗಿದೆ ಮತ್ತು ಶುದ್ಧವಾಗಿದೆ ಎನ್ನಬಹುದು.

**ಆದಿತ್ಯದೇವ ಕವಿ :** ಯಲಬುರ್ಗಿ ತಾಲೂಕಿನ ಇಟಗಿ ಗ್ರಾಮದ ಸಾದರ ರುದ್ರಗೌಡನ ಮನೆಯಲ್ಲಿರುವ ತಾಮ್ರಪಟದ ರೀತ್ಯ ಶಾಸನವು ಕ್ರಿ.ಶ. ೧೧೮೩ರಲ್ಲಿ ಆದಿತ್ಯದೇವ ಕವಿಯೂ ಸಂಸ್ಕೃತ ಭಾಷೆಯಲ್ಲಿ ಬರೆದನೆಂದು ತಿಳಿದು ಬರುವುದು. ಈ ಶಾಸನ ೮೯ ಸಾಲುಗಳ ೨೪ ಶ್ಲೋಕಗಳನ್ನೊಳಗೊಂಡಿರುವುದು. ಕವಿ ಕುರಿತು ಶಾಸನವು.

ಶಕ್ತಿವುತ್ಪತ್ತಿ ಸಂಪನ್ನವಿದ್ವತೆ
ಶೀಪಾದಸೇನಿ ನಾ।
ರಚಿತಾದಿತ್ಯದೇವೇನ ಸೆಯಂ ಶಾಸನ
ಪದ್ಧತಿಃ ಕೃತಿರಿಯಂ ತ್ರಿಭುವನ ವಿದ್ಯಾಚಕ್ರವರ್ತಿ
ನಃ ಶ್ರೀಮದಾದಿತ್ಯದೇವಸ್ಯ। ಲಿಖಿತಮಿದಂ ಪಂಡಿತ
ಲಕ್ಷ್ಮೀಧರೇಣ। ಉತ್ತೀರ್ಣರಾಜ ವಿಜ್ಞಾನಿನಾ
ಪಂದಯೇನ ಮಂಗಲಮಹಾಶ್ರೀ'

ಎಂದು ಶಾಸನವ್ನ ಬರೆದವನು ಪಂಡಿತಲಕ್ಷ್ಮೀಧರ. ಇದನ್ನು ಕೆತ್ತಿದವನು ಪಂದಯ ಎಂಬುವವನು. ಕಾತಾರದ ದಿವಾಕರ ದಂಡನಾಯಕನು ೫ ಮತ್ತರು ಭೂಮಿಯನ್ನು ಒಂದು ಮನೆಯನ್ನು ದಾನ ಬಿಟ್ಟನೆಂದು ಅಲ್ಲದೆ ಕವಿ ತನ್ನನ್ನು ಶಕ್ತಿವುತ್ಪತ್ತಿ ಸಂಪನ್ನ ಪಂಡಿತನೆಂದು ಕರೆದುಕೊಂಡ ಬಗ್ಗೆ ಹೇಳುತ್ತದೆ.

***ಸೇನಭೋವ ಬಂಮರಸ*** : ಕುಷ್ಟಿಗಿ ತಾಲೂಕಿನ ಪುರ ಎಂಬ ಊರಿನ ಅಗಸೆಯಲ್ಲಿ ೩೩ ಸಾಲುಗಳುಳ್ಳ ಕ್ರಿ.ಶ. ೧೨ನೇ ಶತನಮಾನದ ಶಾಸವೊಂದಿದ್ದು ಈ ಶಾಸನದಲ್ಲಿ.

*ಇಂತೀ ಧರ್ಮ ಶಾಸನಂ ಭೂಮ್ಮಂಡಳ*
*ಧ ರೆದಿವಂ ಚಂದ್ರಾರ್ಕ್ಕರುಳ್ಳಿನಂ ಸ್ಥಿರಾಯು*
*ಧರ್ಮವೆಂದು ಬರೆದಂ।। ಸೇನಭೋವ ಬಂಮರಸ।।*
*ನರಸಿಂಹ (ಹ)ಯ। ದೇವರ ಮನೆಯ ಸೇನಭೋವ*
*ಬಸವರಸಿರಿಗೆ ಹಿರಿಯಕೋಲ ವಿದರ ಮತ್ತುರೊಂದು।।*[೧೦]*

-ಎಂದು ಶಾಸನವನ್ನು ಬರೆದಂತ ಕವಿ 'ಸೇನಭೋವ ಬಂಮರಸರ' ಕುರಿತು ಹಾಗೂ ನಾನಾ ದೇಸಿಯ ಮುಂಮರಿದಂಡುಗಳು, ಕೆಳವಾಡಿನಾಡಿನ ಮನ್ನೆಯಶೆಟ್ಟರು. ಸಭೆ ಸೇರಿ ಶ್ರೀ ಗವರೇಶ್ವರ ದೇವರಿಗೆ ವಿವಿಧ ದಾನ ದತ್ತಿಗಳನ್ನೇ ನೀಡಿದ ಕುರಿತು ವಿವರಿಸುವುದು.

***ಕವಿ ರಾಮೋಜ*** : ಕ್ರಿ. ಶ. ೧೫೧೨ನೇ ಶತಮಾನಕ್ಕೆ ಸೇರಿದ ಶ್ರೀ ಕೃಷ್ಣದೇವರಾಯನ ಆಳ್ವಿಕೆಯ ಕಾಲದ ಶಾಸನವೊಂದು ಕೊಪ್ಪಳ ತಾಲೂಕಿನ ಗೊಂಡಬಾಳ ಶ್ರೀಕಂತಯ್ಯ ಬನ್ನಿಮಠ ಅವರ ಮನೆಯ ಬಳಿಯಲ್ಲಿರುವ ಶಾಸನವು ಇಂತಿದೆ:

ಕೊಪಳದ ದಾರಿಯ ವಾಮನಕಲ್ಲು।। ಆ ಪಡುವಲು
ಸೂರಿಯ ಚಂದ್ರನ ಕೆಂದಗಲು।। ವಾಯುವ್ಯದಲು
ವಾಮನ ಕಲ್ಲು। ಯಿ ಶಾಸನವ ಬರೆದ ಕೊಪಣದ
ಕಂಮ್ಮಾಜಿೋಜನ ಮಗ ರಾವೋಜ ಶ್ರೀ।।*[೧೧]

ಈ ಶಾಸನವನ್ನು ಬರೆದ ಕವಿ ಕೊಪಣದ ಕಮ್ಮಾರೋಜನ ಮಗ ರಾಮೋಜ ಬರೆದನು ಎಂದು ಹೇಳುವುದು. ಅಲ್ಲದೆ ಶ್ರೀ ಕೃಷ್ಣದೇವರಾಯನು ಗೊಂಡಬಾಳ ಅಗ್ರಹಾರವನ್ನು ಪ್ರಭಾಕಾರ ಎಂಬವನಿಗೆ ದಾನ ನೀಡಿದ ಕುರಿತು ಹಾಗೂ ಈ ಗ್ರಾಮದ ಎಲ್ಲೆಯನ್ನು ವಿಸ್ತಾರವಾಗಿ ಹೇಳಿದೆ.

***ಕವಿ ಮೈದುನ ಮಾದಿಯ ಹೆಗ್ಗಡೆ*** : ಕ್ರಿ. ಶ. ೧೩೧೫ನೇ ಶತಮಾನ ಎನ್ನಲಾದ ಶಾಸನವೊಂದು ಕೊಪ್ಪಳ ತಾಲೂಕಿನ ಕಮ್ಮಟದುರ್ಗದ ಕಣಿವೆಯ ಬೈಚಪ್ಪನ ಅರಮನೆಯ ಮುಂದಿದೆ. ವೀರ ಕಂಪಲದೇವನು ರಾಜ್ಯಭಾರ ಮಾಡುತ್ತಿರುವಾಗ ಸುರತ್ರಾಣನ (ಸುಲ್ತಾನನ) ದಳವು ನೆಮಿಯ ನೇತೃತ್ವದಲ್ಲಿ ಬಂದು ಯುದ್ಧ ಸಾರಿದಾಗ ಆ ಯುದ್ಧದಲ್ಲಿ ಗಡೆಸಿಂಗನಾಯ್ಕನ ತಮ್ಮ ಕಾಮಿನಾಯ್ಕನು ಸೇರಿ ಹೋರಾಡುತ್ತಿರುವಾಗ ಆಕಸ್ಮಿಕವಾಗಿ ಮರಣಹೊಂದುತ್ತಾನೆ; ಆತನ ನೆನಪಿಗಾಗಿ ಆತನ ಅಕ್ಕ ಮತ್ತು ಅಳಿಯ ಸೇರಿ ಈ ವೀರಗಲ್ಲು ನೆಟ್ಟರೆಂದು ಈ ಶಾಸನ ವಿವರಿಸಿದೆ. ಕೊನೆಯಲ್ಲಿ ಮೈದುನ ಮಾದಿಯ ಹೆಗ್ಗಡೆ ಮಂಗಳ ಮಹಾಶ್ರೀ ಎಂದು ಶಾಸನವನ್ನು ಬರೆದ ಕವಿಯ ಬಗ್ಗೆ ತಿಳಿಸುವುದು. ಕವಿಯ ಕುರಿತು ಹೇಳುವ ಶಾಸನ ಪಠ್ಯ ಹೀಗಿರುವುದು.

*ಸೂರತಾಣನದಳ ನೇಮಿಸಹಿತ ನಡೆದು ಬಂದಲ್ಲಿ*
*ತುಳುವ ಯಿ ಸಿಂಗನಾಯ್ಕನ ತಂಮ ಕಾಮಿನಾಯ್ಕನು*
*ರಣದಲ್ಲಿ ಹೊಯ್ದಾಡ ಬದ್ದನು ಹತನ ಅಕ್ಕ ಅಳಿಯ*
*ಬಿರುಯಿಕ್ಕಿಸಿದ ವೀರಗಲ್ಲು ಬರೆದಾತ ಮೈದುನ*
*ಮಾದಿಯ ಹೆಗ್ಗಡೆ ಮಂಗಳ ಮಹಾಶ್ರೀ।।*

***ಕವಿ ಗಿರಿಜೇಶ*** : ಗಂಗಾವತಿ ತಾಲುಕಿನ ಆನೆಗುಂದಿ ಗ್ರಾಮದ ಉತ್ತರಕ್ಕಿರುವ ಕಡೆ ಬಾಗಿಲು ಬಳಿಯ ಹೊಲದಲ್ಲಿ ಕ್ರಿ.ಶ. ೧೩ನೇ ಶತಮಾನದ ಶಾಸನವಿದ್ದು, ಇದೊಂದು ಐತಿಹಾಸಿಕ ದಾಖಲೆ ಆಗಿರದೆ, ಕುಂಬಾರರ ಹೆಗ್ಗಳಿಕೆಯನ್ನು ಮಾತ್ರ ಹೇಳುವ ಶಾಸನವಾಗಿರುತ್ತದೆ. ಈ ಶಾಸನದಲ್ಲಿ ಗಿರಿಜೆಯ ವಿವಾಹದ ಕಥೆಯಲ್ಲದೆ, ಅಮೃತಮಥನದ ಕಥೆಯೂ ಇದೆ. ಶಾಸನದ ಆರಂಭದಲ್ಲಿ ಆಯ್ಯಾಮಂತರ ಪ್ರಶಸ್ತಿಯಲ್ಲದೆ ಕುಂಬಾರ ಕುಲ ಹುಟ್ಟಲು ಕಾರಣವಾದ ಕಥೆಯೊಂದಿಗೆ ಶಿವಪಾರ್ವತಿಯರ ವಿವಾಹದ ಕಥೆ ಆರಂಭವಾಗುತ್ತದೆ.

ಈ ಶಾಸನವನ್ನು ಗಿರಿಜಾ ಸಮೇತವಾಗಿ ಶಂಕರನು ಗಿರಿರಾಜನಿಗೆ ಹೇಳಿ ಇತ್ತನೆಂದು ಹೇಳಿದೆ. ಮುಂದೆ ಅಮೃತಮಥನ ಕಥೆ ಪ್ರಾರಂಭವಾಗಿ ಕೊನೆಯಲ್ಲಿ ಈ ಶಾಸನವನ್ನು 'ಗಿರಿಜೇಶನು ಹೇಳಲು ವಿಶ್ವಾಮಿತ್ರ ಬರೆದ ಎಂದಿರುವುದು'. ಅಲ್ಲದೆ ಈ ವಿದ್ಯಾಮಾನವರು (ಕುಂಬಾರರು), ಕೈಲ್ಲಿ ಹಡೆಯ, ಗಳೆ, ಕಂಬುಳಿಕೆ ಹಿಡಿಯಬಹುದೆಂದಿದೆ. ಅದೆಲ್ಲವನು ಹೇಳುವ ಶಾಸನ ಹೀಗಿದೆ: *"ಗಿರಿಜೇಶ ಪೇಳ್ದನಾವರ ಮನಿಸ್ವೆಪ್ಪನಾದರಿಂದ ಬರೆದ ವಿಶ್ವಮಿತ್ರನೆ ಪಿರಿದೊಲವಿನಿಂದ ಕೊವ ಕುಲಕ್ಕೆ ಕುಡುವೇಳ್ದು ಗಿರಿರಾಜಗಿತ್ತನೀ ಸಾಸನವನು।। ಪಸವುಂ ಮಾರಿಯ ಬರನಸದಳಂ ಪಿಂಗುಗೆ ಸಸಿಗಳು ಬೆಳಗೆನುಗಳು ಕರಗೆ ವಸುಧೆಯೋಳು ಗಿರಿರಾಜವಸರ ವೆಸರ ಸಾಸನಮಚ್ಚಿ ಬೆಸಯ್ದುತಿರ್ಕ್ಕು ಅಯ್ಸವಂತರ್ಗ್ಗೆ। ದೇವರು ಕೊಟ್ಟ ವಿದ್ಯ ಮಾನವರ ಕೈಯಲು ಹಡೆಯವುಗಳವುಂಟು ಕಂಚುಳಿವುಂಟು ವಂ (ಮಂ) ಗ (ಳ) ಮಹಾಶ್ರೀ ಇ ಸಾಸನಾರ್ಥಂ ಸ್ರೋಹೋಯರ್ದ್ದಂ ಗಂಗಾಸ್ನಾನಸತಂ ಫಳಂ।। ಯಿದಂ ಸಾಸನಮತ್ತಿಕ್ರಮ್ಯಂ ಸ್ಥಾನಯೋನ್ಯನ ಜಾಯತೇ।।"* ಎಂದಿದೆ.

ಈ ಶಾಸನವು ದೊಡ್ಡ ಶಾಸನವಾಗಿದ್ದು ೨೬೯ ಸಾಲುಗಳನ್ನೊಳಗೊಂಡ ಕನ್ನಡ ಭಾಷೆ ಲಿಪಿಯಲ್ಲಿರುವ ಶಾಸನ ಕಾವ್ಯಮಯಾಗಿ ಪೌರಾಣಿಕ ಕಥೆಯನ್ನು ವರ್ಣಿಸುತ್ತಾ ಕವಿಯ ಕುರಿತು ಕೊನೆಯಲ್ಲಿ ಗಿರಜೇಶ ಹೆಳಲು ವಿಶ್ವಾಮಿತ್ರ ಬರೆದನೆಂದು ಕವಿ ಗಿರಿಜೇಶನ ಕುರಿತು ಹೆಳುವುದರಿಂದ ಗಿರಿಜೇಶನು ಕವಿಯಾಗಿ ವಿಶ್ವಾಮಿತ್ರ ಲಿಪಿಕಾರನಾಗಿದ್ದನೆಂದು ತಿಳಿದುಬರುವುದು.

***ಕವಿ ಮುದ್ದಣಾಚಾರ್ಯಲಿತಂ*** : ೨ನೇ ಇಮ್ಮಡಿ ಹರಿಹರಮಹಾರಾಯನ ಆಳ್ವಿಕೆಯ ಕಾಲಕ್ಕೆ ಸಂಬಂಧಿಸಿದ ಕ್ರಿ.ಶ.

೧೩೭೯ನೇ ವರ್ಷಕ್ಕೆ ಸೇರಿದ ತಾಮ್ರಪಟವೊಂದು ಕುಕನೂರು ಗ್ರಾಮದ ದೇಸಾಯಿಯವರ ಅಧೀನದಲ್ಲಿದ್ದು ಅದರಲ್ಲಿ ಹರಿಹರ ಮಾಹಾರಾಯರು ಮಹಾ ಅಗ್ರಹಾರವಾದ ಕುಕನೂರಿನ ಸಾವಿರ ಮಹಾಜನರಲ್ಲಿ ಶ್ರೀ ಗಂಡಿನ ಭಟ್ಟಪ್ಪಯ್ಯನಿಗೆ ಕೊಟ್ಟ ಕುಕನೂರು ಗ್ರಾಮದ ಪ್ರಭುತ್ವಕ್ಕೆ ಸಲ್ಲುವ ತೇಜಸ್ವಾಮ್ಯ ನೀಡುತ್ತಾನೆ. ಕುಕನೂರಿನ ಅಗ್ರಹಾರದ ಜೀರ್ಣೋದ್ಧಾರಕ್ಕೆ ಕುಕನೂರಿನ ಮಹಾರಾಯಾ ಅಂಗರಂಗ ಭೋಗಕ್ಕೆ ಚತುರ್ವೇದದ ಅಧ್ಯಯನಕ್ಕಾಗಿ ಕುಕನೂರನ್ನು ಸಮರ್ಪಿಸಿ ಆ ಗ್ರಾಮಕ್ಕೆ ಸಲ್ಲುವ ಕಾಶ್ಯಪ ಗೋತ್ರದ ದೇವರಾಜನ ಪತ್ನಿಯಾದ ಮಾಳಿಯಕ್ಕನ ತನಯನೂ ಶ್ರೀ ನೆಗದೆಡೆಯರ ಕುಲ ತಿಲಕನು ಗಣಕ ಮಂಡನೂ ಆದ 'ಶಿವದೇವನು' ಇದನ್ನು ಬರೆದನು ಎಂದು ಹೇಳುವುದು. ಶಾಸನದಲ್ಲಿ ಪೇಳ್ದಂ ಎಂದಿದ್ದು ಶಾಸನ ಕರ್ತೃವಿನ ಹೆಸರಿಲ್ಲ. ಮುಂದಿನ ಸಾಲಿನಲ್ಲಿ ಬರೆದನು, ಎಂದಿದ್ದು ಅಂಕಿತವಿದೆ. ಕೆಳಗಣ ಪದ್ಯದ ಸಾಲು ಕಾಶ್ಯಪ ಗೋತ್ರದ ಶಿವದೇವನನ್ನು ಕೀರ್ತಿಸುತ್ತದೆ ಹೊರತು ಬರೆದನು ಎಂದು ಉಲ್ಲೇಖಿಸುವುದಿಲ್ಲ.

ಮುಂದಿನ ಪದ್ಯದಲ್ಲಿ:

*ಸ್ವಸ್ತಿ ಶ್ರೀಮನ್ಮಹಾಗ್ರಹಾರ ಕುಕನೂರು ಸಾಸಿರ್ವ್ವರವರ*
*ಪುತ್ರ ನೆಚ್ಚಿನ ಕಮ್ಮಟದೊಡೆಯಂ ಚನ್ನೋಜನ ಮಗಂ*
*ದಾವೋಜಂ ಬೇಸಕೆಯ್ದು ಬರೆದ ಶಾಸನಮಂ*

ಎಂದಿರುವುದು.

ಎರೆ ಭೂಮಿ ೪೦೦ ಖಂಡುಗದ ಬೀಜವರಿ ಭೂಮಿಗೆ ಗೌಡರೇಯ ಪ್ರಭುತ್ವವನ್ನು ನೀಡಿದ ವಿಷಯ ಹಾಗೂ ಆ ಭೂಮಿಯ ಗಡಿಗಳನ್ನು ಬಹಳ ವಿವರವಾಗಿ ದೇವರಿಗೆ ಬಿಟ್ಟ ಕುರಿತು ಕವಿ ವರ್ಣಿಸುತ್ತಾ ಶಾಸನದ ಕೊನೆಯ ಭಾಗದಲ್ಲಿ

*'ಕ್ರಿಯಾಶಕ್ತಿಗುರು ನಿರೂಪದಿಂ ಶ್ರೀಧರ್ಮಮೂರ್ತಿ*
*ಹರಿಹರ ಮಹಾರಾಯರು ಕುಕನೂರ ಶ್ರೀ ಮಹಾಸ್ಥಾನದಾ*
*ಚಾರ್ಯರಾದ ಗಂಡಿನಭಟ್ಟಪ್ಪಗಳಿಗೆ ಕೊಟ್ಟ ತಾಮ್ರಶಾಸನ*
*ಹರಿಹರ ಮಹಾರಾಯರವಪ್ಪ ಶ್ರೀ ಮುದ್ದಣಾ*
*ಚಾರ್ಯಲಿಖಿತಂ'*

ಎಂದು ಕವಿ ಮುದ್ದಣಾಚಾರ್ಯರ ಉಲ್ಲೇಖವನ್ನು ಕಾಣುತ್ತೇವೆ*೧೫.

***ಕವಿ ಇನ್ದಯ್ಯ*** : ಕ್ರಿ. ಶ. ೯೯೭ನೇ ಶತಮಾನಕ್ಕೆ ಸೇರಿದ ಶಾಸವೊಂದು ಕೊಪ್ಪಳ. ತಾ. ಪಟ್ಟಣದ ಆಗ್ನೇಯ ದಿಕ್ಕಿನ ಕೋಟೆಗೆ ಸೇರಿಸಿದ್ದು ಈ ಶಾಸನದಲ್ಲಿ ತ್ರಿಕಾಳಯೋಗಿಭಟಾರಕನು ತನ್ನ ಅಂತ್ಯಕಾಲದಲ್ಲಿ ಕೊಪ್ಪಳದ ಜಿನಪಾದಗಳ ಬಳಿ ಕುಳಿತು ತಪಸ್ಸು ಮಾಡಿ ಮುಕ್ತಿಯನ್ನು ಸಾಧಿಸಿ ಬಗ್ಗೆ ಆತನ ಗುಣಗಳನ್ನು ಹೊಗಳಿದೆ. ಕೊನೆಗೆ ಮೋಕ್ಷವನ್ನು ಸಾಧಿಸಿದ ಈ ಮುನಿಗೆ **ತೇಜಬ್ಬೆಕಂತಿ** ಶಾಸನದಲ್ಲಿ ನಿಧಿಯನ್ನು ಮಂಡಿಸಿದಳು. 'ಇನ್ದಯ' ಎಂಬುವನು ಈ ಶಾಸನವನ್ನು ಬರೆದ ಎಂದು ಶಾಸನದಲ್ಲಿ 'ಇನ್ದಯ' ಕವಿಯ ಬಗ್ಗೆ ಉಲ್ಲೇಖ ಬರುತ್ತಿದ್ದು ಈ ರೀತಿ ಅಲ್ಪ ಮಾಹಿತಿ ಸಿಗುವ ಕವಿಗಳ ಕುರಿತು ಇನ್ನೂ ಹೆಚ್ಚಿನ ಸಂಶೋಧನೆಯನ್ನು ಮುಂದುವರೆಸಲಾಗುತ್ತಿದೆ*೧೬.

***ಕವಿ - ಬಿರುದರ ಪೆಂಡಿರಗಂಡ ಶೇಷಯ್ಯನು*** : ಅಹಮಲ್ಲಿನ ಸಾಮಂತನಾದ ಸೋಭನರಸನು ಆಳುತ್ತಿದ್ದ ಕಾಲಕ್ಕೆ ಸಂಬಂಧಿಸಿದ ಶಾಸನವು ಯಲಬುರ್ಗಾ ತಾಲೂಕಿನ ಬಳಗೇರಿ ಗ್ರಾಮದ ಬಳೇಶ್ವರ ದೇವಾಲಯದ ಹತ್ತಿರವಿದ್ದು ಅದರಲ್ಲಿ ಬಳಗೇರಿಯ ಬ್ರಹ್ಮಪುರಿ ಮೂರುನೂರು ಮಹಾಜನರ ಉಲ್ಲೇಖ. ಸೋಭನೇಶ್ವರಿ ದೇವಾಲಯದ ಉಲ್ಲೇಖ ಬರುತ್ತಿದ್ದು ಶಾಸನದ ಕೊನೆಯಲ್ಲಿ.

'ಬಿರುದರ ಪೆಣ್ಡರಗಣ್ಡ ಮರಳೋ (೦)..........
ಗೆಲ್ವ........... ಪಂಡಿತವಾಕ್ಯಂ ವರ ವೃದ್ಧಪುರದ
ಸಾಸಿರ್ವ್ವರು ಹೇಳೆ
ಮೋಜಾಳಿ ....... ಸೇಕಯ್ಯನ ಲಿಖಿತಂ ಮಂಗಳಂಶ್ರೀ
ಕವಿ ಬಿರುದರ ಪೆಂಡಿರಗಂಡ ಶೇಷಯ್ಯನು ವೃದ್ಧ'*೧೭

ಪುರದ ಸಾವಿರ ಜನರು ಹೇಳಲು ಬರೆದನೆಂದು ಬರುವ ಪ್ರಸ್ತಾಪದಲ್ಲಿ ಕವಿಯ ಹೆಸರನ್ನು ಕಾಣುತ್ತೇವೆ. ಈ ಕವಿಯ ಬಗ್ಗೆ ಶಾಸನದಲ್ಲಿ ವಿವರ ಸಿಕ್ಕಿರುವುದಿಲ್ಲ.

***ಕವಿ ಪಿಟ್ಟೋಜನ*** : ಕೊಪ್ಪಳ ತಾಲೂಕಿನ ಕೊಪ್ಪಳದ ಪಟ್ಟಣದ ಆಗ್ನೇಯ ದಿಕ್ಕಿನ ಕೋಟೆಗೆ ಸೇರಿದ ಕ್ರಿ.ಶ. ೧೦೨೮ರ ಕಾಲಾವಧಿಯದೆನ್ನಲಾದ ಶಾಸನವೊಂದು ಕವಿ ಪಿಟ್ಟೋಜನ ಕುರಿತು

'ಶ್ರೀಮತ್ಪದ್ಮನಿಸಿದ್ಧಾನ್ತ ದೇವರ
ನಿಸಿಧಿಗೆಯಂ ಮಾಚಬ್ಬೆಕನ್ತಿಯರ್
ನಿಶೆಸಿದರ್ ಪಿಟ್ಟೋಜನ ಲಿಖಿತಂ ಮಂಗಳಂ....'*೧೮

ಎಂದು ಶಾಸನವನ್ನು ಬರೆದ ಕವಿಯ ಕುರಿತು ಉಲ್ಲೇಖಿಸುತ್ತಿದ್ದು, ಕವಿ ಕುರಿತು ಶಾಸನದಲ್ಲಿ ವಿವರಣೆ ಕಂಡು ಬರುವುದಿಲ್ಲ. ಮುನಿಗಳ ಬಗ್ಗೆ ಶಾಸನದಲ್ಲಿ ವರ್ಣನೆ ವಿಶೇಷವಾಗಿ ಗಮನಿಸಬಹುದಾಗಿದೆ.

***ಸಮನ್ತ ಭದ್ರಬಮಿೂರ*** : ಅದೇ ಕೊಪ್ಪಳ ಪಟ್ಟಣದ ಆಗ್ನೇ ದಿಕ್ಕಿನ ಕೋಟೆಯಲ್ಲಿಯ ಕ್ರಿ.ಶ.೧೦೨೨ ಇನ್ನೊಂದು ಶಾಸನದಲ್ಲಿ:

'ಶ್ರೀ ಮನ್ನರೇನ್ದ್ರ ಸೇನಪಣ್ಡಿತರಗ್ರ
ಶಿಷ್ಯರ್ಸ್ಸಮನ್ತಭದ್ರ ಭಮಿೂರ್ಕ್ಕಲ್ಲೊಳಕ್ಕ
ರ ಮಂ ಬರೆದು ಕಲ್ಲನಿದೆಸಿದರ್....'*೧೯

ಎಂದು ಈ ಶಾಸನವನ್ನು ರಚಿಸಿದ ನರೇಂದ್ರಸೇನ ಪಂಡಿತನ ಶಿಷ್ಯ 'ಸಮನ್ತಭದ್ರ ಬಮಿೂರ್' ಎಂದು ಕವಿಯ ಕುರಿತು ಉಲ್ಲೇಖಿಸುವುದು.

**ಲಬ್ಬಟ್ಟೋಜನಲಿಖಿತಂ** : ಕೊಪ್ಪಳದ ಕ್ರಿ. ಶ. ೧೦೨೮ ಶಾಸನವೊಂದರಲ್ಲಿ ಜಿನಧರ್ಮವನ್ನು ಬೆಳಗುವ ಪದ್ಮನಂದಿ ಸಿದ್ಧಾನ್ತದೇವ ಮುನಿಯೂ ಬೆಳಗಿತ ಪ್ರತಿ ಶಾಸನಂ ಜೈನ ಶಾಸನಂ ಇದು,

'ಶ್ರೀ ಮತ್ಪದ್ಮನನ್ದಿ ಸಿದ್ಧಾನ್ತದೇವರ
ನಿಸಿದಿಗೆಯ ಮಾಚಕಬ್ಬೆಕನ್ತಿ
ಯರ್ ನಿರ್ಮಿಸಿದರ್ ಲಬ್ಬಣ್ಣೋಜನ
ಲಿಖಿತಂ ಮಂಗಳಂ'

ಎಂದು ಕವಿಲಬ್ಬಣ್ಣೋಜನ ಬಗ್ಗೆ ಉಲ್ಲೇಖಿಸುವುದು.

**ಮಲ್ಲಕವಿ** : ಕೊಪ್ಪಳ ತಾಲೂಕಿನ ಅಳವಂಡಿ ಗ್ರಾಮದಲ್ಲಿಯ ಶಾಸನವು ಕಲ್ಯಾಣ ಚಾಲುಕ್ಯರ ಅರಸರ ತ್ರೈಲೋಕ್ಯಮಲ್ಲದೇವನ ಕ್ರಿ. ಶ. ೧೦೬೧ರ ಕಾಲದ್ದೆನ್ನಲಾದ ಶಾಸನದಲ್ಲಿ ಮಲ್ಲಕವಿಯ ಉಲ್ಲೇಖ ಬರುತ್ತಿದ್ದು

*ರಾಮಬದ್ರ ಹರಚರಣ ಕಮಳಭಕ್ತ ಪರಮಾರ್ತ್ಥಂ*
*ಕರುವ ಗುಲುಗನಣಗಿರ ಪುತ್ರ ನಿರುತಂ ಕರುವರ*
*ಬಮ್ಮರ್ಂ ಬರೆಯಿಸಿದಂ ಬರೆದ ಮಲ್ಲನೀ ಶಾಸನಮಂ*
*ಗುಲಗಿಮಯ್ಯಂ ಸೋಮನಾಥ'*
*ದೇವನ ಖಣ್ಡರ*

ಎಂದಿರುವುದರಿಂದ ಈ ಶಾಸನವನ್ನು ಬರೆದ ಮಲ್ಲನು ಕವಿಯಾಗಿರಬೇಕೆಂದು ತಿಳಿದು ಬರುತ್ತದೆ. ಏಕೆಂದರೆ ಈ ಶಾಸನದಲ್ಲಿ ಉಲ್ಲೇಖ ಬರುವ ಕರುವರ ಬಮ್ಮರ್ನು ಅನೇಕ ದಾನ ದತ್ತಿಗಳನ್ನು ನೀಡಿದನೆಂದು ಹಾಗೂ ಆತನ ತಂದೆ ಮತ್ತು ಮಗನ ಕುರಿತು ಪ್ರಸ್ತಾಪ ಬಂದಿದೆ ಅಲ್ಲದೆ 'ಕರುವ ಬಮ್ಮರ್ಯ್ಯ ನಾಲ್ಕುರ್ವ್ವರ ದಾಸಿ ಪರನಾರಿಪುತ್ರಂ ಗೋತ್ರ ಪವಿತ್ರ ಸಿವನ ದಾಸಿಸುಪುತ್ರಂ ಕುಳದೀಪಕನೆನಿಸಿ ನೆಗಟ್ದಿಂ ಎಂದು ಆತನ ವರ್ಣನೆ, ಹಾಗೂ ಇನ್ನೊಂದು ಭಾಗದಲ್ಲಿ ನಾಲ್ಕೂರ್ವ್ವರ ದಾಸಿ **ಕರುವನ ಮಗಂ ಬರ್ಮಯ್ಯ** ಎಂದು ಆತನ ಕುರಿತು ಶಾಸನದಲ್ಲಿ ಉಲ್ಲೇಖ ಬರುತ್ತಿರುವುದರಿಂದ ಕರುವಬಮ್ಮರ್ಯ್ಯನ ತಂದೆ ಕರುವ ಗುಲ್ಲಿಮಯ್ಯನು ಅಳವಂಡಿ ಗ್ರಾಮದ ಮುಖ್ಯ ವ್ಯಕ್ತಿಯಾಗಿದ್ದು ಆತನ ಮಗನು ಆ ಊರಿನ ಮಠಕ್ಕೆ ತಂದೆಯ ಕಾರ್ಯಗಳನ್ನು ಮುಂದುವರಿಸಿ ವಸತಿ ಸತ್ರಕ್ಕೆ ೧೮ ಮತ್ತರು, ದೇವರಿಗೆ ೫ ಮತ್ತರು, ಮಠಕ್ಕೆ ಎರೆಮತ್ತರು ೫, ಹೀಗೆ ದಾನದತ್ತಿ ನೀಡಿದ ವಿಷಯುವನ್ನೊಳಗೊಂಡಂತೆ ಮಲ್ಲ ಕವಿಗೆ ಬರೆಯುಲು ಹೇಳಿರಬೇಕು. ಆತನ ಅದೇಶದನ್ವಯ ಈತನು ಶಾಸನವನ್ನು ರಚಿಸಿ ಬರೆದಿರಬೇಕು. ಅದನ್ನು ಸೋಮನಾಥನು ಕಲ್ಲಿನ ಮೇಲೆ ಕೆತ್ತಿರಬೇಕು ಅಥವಾ ಖಣ್ಡರಣೆ ಮಾಡಿರಬೇಕು ಎಂದು ತಿಳಿದು ಬರುವುದರಿಂದ ಶಾಸನವನ್ನು ಬರೆದ ಮಲ್ಲನೇ ಕವಿಯೂ ಮತ್ತು ಬರೆದವನು ಎರಡೂ ಆತನೇ ಅಗಿರಲು ಸಾಧ್ಯ ಎನ್ನಬಹುದಾಗಿದೆ. ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ತಾಲೂಕಿನ ಬೆಳತೂರ ಗ್ರಾಮದ ಮಹಾಸತಿ ಶಿಲಾಶಾಸನದಲ್ಲಿ ***ಮಮಿಪರಚಕ್ರ ದಿಂಧ್ವಿಜರೊಂತೆ ಮಲೆಯಲ್ಲ ನೀಪ ಕುಲೆಪಿನಾದಿತ್ಯಂ ಸಂದಲಿಕೆಯ ವಗಾದಮಲ್ಲಂ ಜಮಿಚದ ಕವಿರಾಜ ಬಾಂಧವಂ ಬರೆದನಿದಂ*** ಎಂದಿರುವುದು ಅನ್ಯಶಾಸನೋಕ್ತನಾದ ಮಲ್ಲಿಕವಿಯನ್ನು ಗಮನಿಸ ಬಹುದು. ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಚಿಕ್ಕ ಹಂಗೋಳ ಶಾಸನದಲ್ಲಿ **ದ್ರುಹಿಣ** ನೆಂಬ ಕವಿಯ ರಚನೆ ಯಂತೆಯೂ ಗದ್ಯ-ಸಂಸ್ಕೃತ ಕಾದಂಬರಿಕರ್ತೃವಾದ ಬಾಣಕವಿಯ ಗದ್ಯದಂತೆ ಮಿಗಿಲಾದುದೆಂದು ಹೇಳಿಕೊಂಡಿದ್ದಾನೆ. ಅಲ್ಲದೆ ತನ್ನನ್ನು **ಲಿಖಿತ ಪಿತಾಮಹ** ಎಂದು ಹೇಳಿಕೊಂಡಿರುವನು. ಬೆಳ್ಬಲವು ಕುಂತಲ ದೇಶದಲ್ಲಿ ಬರುವುದರಿಂದ ಕೊಪ್ಪಳ ಜಿಲ್ಲೆಯ ಶಾಸನದಲ್ಲಿ ಉಕ್ತನಾದ ಈ ಕವಿ ಮತ್ತು ಮೈಸೂರು ಧಾರವಾಡ ಜಿಲ್ಲೆಯ ಶಾಸನಗಳಲ್ಲಿ ಉಕ್ತನಾದ ಕವಿಯೂ ಒಬ್ಬನೆ ಆಗಿರಬೇಕೆಂದೆನಿಸುವುದು.

***ವಿರೇಶುಮೂರ್ಥ್ಥಿ ಕವಿ*** (ಕ್ರಿ.ಶ. ೧೧೦೮) : ಚಾಳುಕ್ಯ ಅರಸ ೬ನೇ ವಿಕ್ರಮಾದಿತ್ಯನು ಕ್ರಿ.ಶ. ೧೧೦೮ರ ತನ್ನ ಆಳ್ವಿಕೆಯ ಕಾಲದಲ್ಲಿ ಈತನ ದಂಡನಾಯಕನಾದ ಮಹಾದೇವ ದಂಡನಾಯಕನು ಇಟ್ಟಗಿಯಲ್ಲಿ ತನ್ನ ಹೆಸರಿನಿಂದ ಮಹಾದೇವ ದೇವಾಲಯ ಕಟ್ಟಿಸಿ ಅದರ ಅಂಗಭೋಗ, ವೇದೋಪನಿಷತ್ತುಗಳ ಅಧ್ಯಯನ, ಅಲ್ಲಿಯ ಮಹಾಜನರಿಗೆ, ಪೂಜೆ ಸತ್ರಾದಿಗಳಿಗೆ ವಿಕ್ರಮಾದಿತ್ಯ ಅರಸನು ಸರ್ವನಮಸ್ಯವಾಗಿ ದಾನದತ್ತಿ ನೀಡಿದನೆಂದು ಕ್ರಿ.ಶ. ೧೧೦೮ರ ಇಟ್ಟಗಿಯ ಶಾಸನ ವಿವರಿಸುವುದು. ಈ ಶಾಸನದಲ್ಲಿ ದೇವಾಲಯದ (ಅಗ್ರಹಾರ) ವರ್ಣನೆ, ವಿವಿಧ ನಾಡುಗಳಾದ ಕುಂತಳ, ಬೆಳ್ವಲ, ನರೆಯಂಗಲ್ಲು ಇಟ್ಟಗೆ ಬೆಣ್ಣೆಕಲ್ಲು ಉಲ್ಲೇಖ, ಚಾಳುಕ್ಯರ ವಂಶಾವಳಿ ಹಾಗೂ ಇತರ ವಿಷಯಗಳನ್ನು ವರ್ಣಿಸುವಲ್ಲಿ ಕವಿಯ ಕಾವ್ಯ ಮಯವಾದ ಶೈಲಿ, ಭಾಷಾ ಸಾಮರ್ಥ್ಯ ಆತನ ಪಾಂಡಿತ್ಯವನ್ನು ವಂಶವನ್ನು ಗುರ್ತಿಸಲು ಇಲ್ಲಿ ಗಮನಿಸಿ ಎಂಬ ಸಂಸ್ಕೃತ ಶ್ಲೋಕ ಶಾಸನದ ಕೊನೆಯಲ್ಲಿ ಈ ಹಾಗೂ ಸ್ವನಾಮೋಲ್ಲೇಖನಗಳನ್ನು ಸಂಸ್ಕೃತದಲ್ಲಿ ವಿವರಿಸುವುದನ್ನು ಕಾಣುತ್ತೇವೆ.

*ಮದ್ವಂಶಜಃಪ್ರಮಹೀ ಸತಿ ವಂಶಜಂವಾ*
*ವಾ ದಭಿಮತ ಮನ ಸಾಭುವಿ ಭೂಮಿಪಾಲ*
*ಯಃ ಸ್ವಾಲಯಂತೀಮಮಧರ್ಮಮಿದಂ ಸಮಸ್ತಂ*
*ತೇಕ್ಷಾ 'ಮಯಾವಿರಚಿತೋಂಜು ವೀರೇಶ ಮೂರ್ಥ್ಥಿ*[೨೦]*

ಎಂದು ಕವಿಯ ಹೆಸರನ್ನು ಸಹ ಸ್ಪಷ್ಟವಾಗಿ ಉಲ್ಲೇಖಿಸಿರುವುದನ್ನು ಗಮನಿಸಿಬಹುದು.

**ಉಪಸಂಹಾರ**

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖ ಬರುವ ಶಾಸನಕವಿಗಳ ಬಗ್ಗೆ ಹೆಚ್ಚಿನ ವಿಷಯ ಶಾಸನಗಳಿಂದ ಲಭ್ಯ ವಾಗದಿರುವುದು ನಿರಾಶದಾಯಕವಾಗಿದೆ. ಕೆಲವು ಕವಿಗಳ ಬಗ್ಗೆ ಮಾತ್ರ ಹೆಚ್ಚಿನ ಮಾಹಿತಿ ಸಿಕ್ಕಿರುವುದರಿಂದ ಅವರ ಕುರಿತು ವಿವರಿಸಲಾಗಿದೆ. ಈ ಶಾಸನ ಕವಿಗಳಿಗೆ ಹೆಚ್ಚಿನ ಸ್ವಾತಂತ್ರ್ಯವಿರದ ಕಾರಣದಿಂದ ಮತ್ತು ಅರಸರು ಹೇಳಿದಂತೆ ಬರೆಯಬೇಕಾಗಿ ರುವುದರಿಂದ ತಮ್ಮ ಜೀವನ ಕುರಿತು ಹೆಚ್ಚಿಗೆ ಹೇಳಲು ಬಯಸಿರಲಿಕ್ಕಿಲ್ಲ. ಏನೇ ಆದರೂ ಶಾಸನಗಳ ರಚನೆಗೆ ಅವರು

ಬಳಸಿದ ಭಾಷೆ - ಸಾಹಿತ್ಯ - ಗಮನಿಸಿದರೆ; ಕವಿಗಳ ಜ್ಞಾನ ಸಾಮರ್ಥ್ಯವನ್ನು ಸ್ಮರಿಸತಕ್ಕದ್ದು. ಇಂತಹ ಕವಿಗಳ ಕುರಿತು ಶಾಸನಗಳ ಆಧಾರಿತವಾಗಿ ಇನ್ನೂ ಹೆಚ್ಚಿನ ಸಂಶೋಧನ ನಡೆದರೆ ಸಮಗ್ರ ಕವಿಚರಿತೆ ತಿಳಿಯಲು ಸಾಧ್ಯವಾಗುವುದು.

ಶಾಸನಗಳನ್ನು ಅಧ್ಯಯನಿಸಿದಾಗ ಈ ಶಾಸನಗಳು ಕವಿ, ರೂವಾರಿ, ಲಿಪಿಕಾರ, ಇವರ ಸಂಯುಕ್ತದಿಂದ ಮಾತ್ರ ರಚನೆಯಾಗುತ್ತಿದ್ದವು. ಕೆಲವು ಬಾರಿ ಮೂವರೂ ಒಬ್ಬನೆ ಆಗಿರುವ ಸಾಧ್ಯತೆಗಳು ಉಂಟು ಎಂದು ಶಾಸನಗಳ ಸಮಗ್ರ ಪರಿಶೀಲನೆಯಿಂದ ತಿಳಿದುಬರುವುದು. ಕೆಲವು ಕವಿಗಳ ಕುರಿತು ನಾಡಿನ ಬೇರೆ ಬೇರೆ ಶಾಸನಗಳಲ್ಲಿ ಉಲ್ಲೇಖ ಬರುವುದರಿಂದ ಅಂತವರು ಆಗಿನ ಪ್ರಸಿದ್ಧ ಕವಿಗಳಾಗಿರಬೇಕೆಂದು ತಿಳಿಯುವುದು. ಒಟ್ಟಿನಲ್ಲಿ ಹೇಳಬೇಕೆಂದರೆ ಈ ಕನ್ನಡ ಶಾಸನ ಪ್ರಪಂಚಕ್ಕೆ ಸಾಹಿತ್ಯ ದೃಷ್ಟಿಯಿಂದ ಭಾರತೀಯ ಘನತೆಯನ್ನು ದೊರಕಿಸಿಕೊಟ್ಟವರು ಶಾಸನ ಕವಿಗಳೆಂದು ಹೇಳಬಹುದು. ಇಂಥ ಶಾಸನ ಕವಿಗಳ ಬಗ್ಗೆ ಸಮಗ್ರ ನಾಡಿನ ಶಾಸನಗಳ ಸಂಶೋಧನೆ ನಡೆದರೆ ಶಾಸನಕವಿಗಳ ಚರಿತ್ರೆ ಪರಿಪೂರ್ಣವಾಗುವುದರಲ್ಲಿ ಸಂಶಯವಿಲ್ಲ.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. **ಕರ್ನಾಟಕ ಜಿಲ್ಲಾ ಅಭಿವೃದ್ಧಿ ಅಧ್ಯಯನ ಮಾಲೆ** - ೧, ಕ. ವಿ. ವಿ. ಹಂಪಿ, ಪುಟ.೨೩, ಕೊಪ್ಪಳ ಜಿಲ್ಲೆ.
*೨. ಕನ್ನಡ ವಿ. ವಿದ್ಯಾಲಯ ಹಂಪಿ. ಶಾಸನ ಸಂಪುಟ ೨ (**ಕೊಪ್ಪಳ ಜಿಲ್ಲೆಯ ಶಾಸನಗಳು**).
*೩. **ಕೊಪ್ಪಳ ಜಿಲ್ಲೆಯ ಶಾಸನಗಳ** ಸಂಪುಟ, ಪುಟ ೨೧೪.
*೪. ಅಗಸ್ತ್ಯ ಕುಲದ ಪರಮಾ, ಸುತನು ಕವಿತೆ ಹೇಳಿ ಶಿವದೇವನಿಂದ ಕಲ್ಲಿನ ಮೇಲೆ ಬಣ್ಣದ ಬಳಪದಿಂದ ಬರೆಯಿಸಿರಬಹುದು. ದಾಮೋಜನು ಆ ಅಕ್ಷರಗಳ ರೇಖೆಯನ್ನು ಹಿಡಿದು ಕಣ್ಡರಿಸಿರಬಹುದು. ಈ ಮೂರು ಕರ್ಮಗಳನ್ನು ಬೇರೆ ಬೇರೆಯಾಗಿ ಬೇರೆ ಬೇರೆ ಜನರು ನಿರ್ವಹಿಸಿರಬೇಕೆಂದು ಸಂದೇಹಕ್ಕೆಡೆಮಾಡಿಕೊಡುವುದನ್ನು ಗಮನಿಸಬಹುದು.
*೫. ಮೇವುಂಡಿವಲ್ಲಾರಿಯವರು **ಶಾಸನಕವಿಗಳು** ಎಂಬ ಗ್ರಂಥದಲ್ಲಿ ಹೇಳಿರುವ ವಿಷಯ.
*೬. ಈ ಕವಿಯ ಹೆಸರು ಕವಿಚರಿತೆಯ ಮೂರೂ ಸಂಪುಟಗಳಲ್ಲಿಲ್ಲ.
*೭. **ಕೊಪ್ಪಳ ಜಿಲ್ಲೆಯ ಶಾಸನ ಸಂಪುಟ** - ೨, ಪುಟ.೯
*೮. **ಇತಿಹಾಸ ದರ್ಶನ** ಸಂ - ೧೩/೧೯೯೮, ಪು.೨೧೭-೧೮.
*೯. ಕೊಪ್ಪಳ ಜಿಲ್ಲೆಯ ಶಾಸನ ಸಂಪುಟ, ಅದೇ, ಪುಟ.೨೩೫.
*೧೦. ಕೊಪ್ಪಳ ಜಿಲ್ಲೆಯ ಶಾಸನ ಸಂಪುಟ, ಅದೇ, ಪುಟ.೨೭೨.
*೧೧. ಅದೇ, ಪುಟ.೨೯೦ - ೯೧.
*೧೨. ಕೊಪ್ಪಳ ಜಿಲ್ಲೆಯ ಶಾಸನ ಸಂಪುಟ - ೨, ಅದೇ, ಪು.೧೩೩
*೧೩. ಕೊ. ಜಿ. ಶಾ. ಸಂ. ೨, ಪುಟ.೧೫೮.
*೧೪. ಕೊ. ಜಿ. ಶಾ. ಸಂ. ೨, ಪುಟ.೩೨೫-೩೩೪
*೧೫. ಕೊಪ್ಪಳ ಜಿಲ್ಲೆ ಶಾಸನ ಸಂ- ೨, ಪುಟ.೨೨೧
*೧೬. ಅದೇ, ಪುಟ.೨೬
*೧೭. ಕೊಪ್ಪಳ ಜಿಲ್ಲೆ ಶಾಸನ ಸಂ - ೨, ಪುಟ.೧೯೬-೯೭
*೧೮. ಅದೇ, ಪುಟ.೮೫-೮೬
*೧೯. ಅದೇ, ಪುಟ.೮೧
*೨೦. ಡಾ. ವಿ. ಶಿವಾನಂದ, (೧೯೯೫), **ಹೈದ್ರಾಬಾದ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು**, ಬನಾರಸ ವಿ. ವಿ. ವಾರಣಾಸಿ, ಇಟ್ಟಗಿ ೨೪ ಕ್ರಿ.ಶ. ೧೧೦೮.

ಟಿ. ಹೆಚ್. ಎಂ. ವನ್ಯಾದೇವಿ*

# ಹೊಯ್ಸಳ-ವಿಜಯನಗರ ಕಾಲದ ಶಾಸನಗಳಲ್ಲಿ ಮೌಲ್ಯಗಳ ಪ್ರಸ್ತುತತೆ

ನಮ್ಮ ನಾಡಿನ ಧರ್ಮ, ಪರಂಪರೆ ಸಂಸ್ಕೃತಿಯನ್ನು ಬೆಳೆಸಲು ಹೊಯ್ಸಳ ವಿಜಯನಗರದ ಸಾಮ್ರಾಜ್ಯಗಳು ತಲೆ ಎತ್ತಿನಿಂತವು. ಅಂದಿನ ನಾಡ ವೀರರ ರಾಷ್ಟ್ರಪ್ರೇಮಿ ಹೋರಾಟದ ಕುರುಹಾಗಿ ವೀರಶಾಸನಗಳು ರಚಿಸಲ್ಪಟ್ಟವು. ಇವು ನಾಡಿನ ಭಾವಿ ಜನಾಂಗಕ್ಕೆ ಉಜ್ವಲ ರಾಷ್ಟ್ರೀಯ ಪ್ರಜ್ಞೆಯನ್ನು ಜಾಗೃತಗೊಳಿಸುವ ನಿದರ್ಶನಗಳಾಗಿವೆ, ನಾಡರಕ್ಷಣೆ, ಸ್ವಾಮಿನಿಷ್ಠೆ ಅನ್ನಕೊಟ್ಟ ದಣಿಯ ರಕ್ಷಣೆ ವನಿತೆಯರ ಮಾನರಕ್ಷಣೆಗಳಿಗೆ ಹೋರಾಡಿ ಮಡಿದ ವೀರರ ಭುಜಬಲ ಪರಾಕ್ರಮವನ್ನು ಗುರ್ತಿಸಿ ಸನ್ಮಾನಿಸಿ ದಾನದತ್ತಿಗಳ ಶಾಸನಗಳು ರಚಿತವಾದವು. ಉದಾ: ವೇಳೆವಾಳಿ, ಲೆಂಕವಾಳಿ ಜೋಳವಾಳಿ, ಗರುಡ ಶಾಸನಗಳು. ಆತ್ಮಾರ್ಪಣೆ ಮಾಡಿದ ವೀರನಾರಿಯರ ಶಾಸನಗಳು, ಊರಳಿವು ಪೆಣ್ಬುಯಲ್ ಮೊದಲಾದ ಶಾಸನಗಳು ಹೊಯ್ಸಳರ ಕಾಲದಲ್ಲಿ ಸರ್ವೇ ಸಾಮಾನ್ಯವಾಗಿದ್ದುವು. ಉದಾ: ಹೊಯ್ಸಳರ ಕುವರಲಕ್ಷ್ಮನ ಶಾಸನವು ಧನಮುಂ ಪ್ರಾಣಮುಮೆಂಬಿವಂ ಕುವರಲಕ್ಷ್ಮಂ *ವೀರಬಲ್ಲಾಳದೇವನ ದಾನೋನ್ನತಿಗಂ ಜಯೋನ್ನತಿಗಮೀಯಲ್ ಪೂಣ್ದು ಮುಂದಿಟ್ಟು ರಾಮನ ಬೀಡಿಂಗಣುವಂ ಯಮಾತ್ಮಜನ ಬೀಡಿಂಗರ್ಜ್ಜುನಂ ಚಂದ್ರಜೂಟನ ಬೀಡಿಂಗೆ ಕುಮಾರನಿಪ್ಪ ತೆಱದಿಂದಿರ್ದ್ದಪ್ಪನೇಂ ಧೀರನೋ॥* ವೀರನ ಪರಾಕ್ರಮ ಸಚ್ಚಾರಿತ್ರ್ಯ ಸಂಯಮಶೀಲತೆಯನ್ನು ಗುರ್ತಿಸಿ ವೀರಗಾಥೆಗಳನ್ನು ರಚಿಸಿ ಆರಾಧನಾದೈವವೆಂದು ಪೂಜಿಸುವ ಪದ್ಧತಿ ಇಂದು ನಮ್ಮ ಗ್ರಾಮೀಣ ಪ್ರದೇಶದಲ್ಲಿ ಈಗಲೂ ಪರಿಪಾಠವಿದೆ. ಉದಾ: ಕುಮಾರರಾಮನ ಲಾವಣಿ ಪದಗಳು ನೆತ್ತರು ಕೊಡುಗೆ, ಬಾಳ್ಗಚ್ಚು ಪ್ರಸ್ತಾಪವಿರುವ ಶಾಸನಗಳು ಹೊಯ್ಸಳ ಕಾಲದ ವೀರ ಶಾಸನಗಳು ದೊರೆತಿವೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಈ ಮೌಲ್ಯಗಳನ್ನೇ ಆಧರಿಸಿ ಇಂದು ನಾಡಿನ ರಕ್ಷಣೆಗಾಗಿ ಹೋರಾಡಿ ವೀರಸ್ವರ್ಗವೇರಿದ ವೀರರ ಸನ್ಮಾನವನ್ನು ಸರ್ಕಾರವು ನಾಡಿನ ಪರಂಪರೆಯಾಗಿ ಉಳಿಸಿ ಕೊಂಡು ಬೆಳೆಸಿಕೊಂಡು ಹೋಗೀದೆ. ಭಾರತ ಸರ್ಕಾರವು ನಾಡಿನ ರಕ್ಷಣೆಗಾಗಿ ಹೋರಾಡಿದ ವೀರರಿಗೆ ವೀರಚಕ್ರ ಪರಮವೀರಚಕ್ರ ಮತ್ತು ವಿಶಿಷ್ಟ ವೀರಚಕ್ರ ಪ್ರಶಸ್ತಿಗಳನ್ನಿಟ್ಟು ಗೌರವಿಸುವುದು ಅತಿಸ್ತುತ್ಯಾರ್ಹವಾಗಿದೆ.

ಆತ್ಮಾರ್ಪಣೆಯ ಶಾಸನಗಳು ತ್ಯಾಗಮಯಿ ಹೆಣ್ಣಿನ ಹಿರಿಮೆಯನ್ನು ಹಿಡಿದೆತ್ತಿ ಸಾರುವ ಬಲಿದಾನದ ಸಂಕೇತಗಳು. ಮಹಾಸತಿಕಲ್ಲುಗಳು ಸಹಸ್ರಾರು ದೊರತಿವೆ. ಅದರಲ್ಲಿ ದೇಕಬ್ಬೆ ಶಾಸನ ಒಂದು. ಮಗದೊಂದು ಶಾಸನವಾದ ಹರಿಯಕ್ಕನದು :

> *ಶ್ರೀ ಕ್ರೋಧನ ಸಉಲ್ಬರದ ಮಾಘ ಸು. ೧೫ ಸೋಮವಾರ ತಾಟಿಗವುಡನ ಮಗ ಮಾರಿಗವುಡನು ಸಲಿವವನವರ ಕೂಡೆ ಕಾರಿ ಸ್ವರ್ಗಸ್ತನಹ ಕಾಲದಲು ತಂದೆಯ ಕೂಡೆ ಕಾದುವರ ಕೂಡೆ ಹೊ...ಡಾದಾಡಿ ಹರಿಯಕ್ಕ ದೇವಲೋಕಕ್ಕೆ ಹೋದಡೆ ತಂಮ ಚಿಕ್ಕ ತಂದೆ ಚೆಂನನು ನಿಲ್ಲಿದ ಬೀರಗಲು ೧ ಕಂ। ಮಂಗಳ ಮಹಾಶ್ರೀ.*

ವಿಜಯನಗರ ಕಾಲದಲ್ಲಿ ಬೋಧನಾತ್ಮಕ ಶಾಸನಗಳು ಗಮನಾರ್ಹವಾಗಿವೆ. ತಾಯಿಯ ಹಿತವಚನವೇ ಸಾಕ್ಷಿಯಾಗಿ ಶ್ರೀ ರಕ್ಷೆಯಾಗಿ ಭವ್ಯ ಭವಿಷ್ಯಕ್ಕೆ ಹೊಂಬೆಳಕು ತೋರುವ ಶಾಸನ-ಲಕ್ಷ್ಮೀಧರನ ಶಾಸನ.

> *ಕೆಱೆಯಂ ಕಟ್ಟಿಸು ಭಾವಿಯಂ ಸವಸು ದೇವಾಗಾರಮಂ ಮಾಡಿಸಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಕೆಯಿ ನಂಬಿದರ್ಗ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯ್*

ಎಂದೆಲ್ಲ ಹಾಲೆರೆಯುತ್ತ ಹೇಳುತ್ತಿದ್ದ ಲಕ್ಷ್ಮೀಧರಾಮಾತ್ಯನಾ॥ ಮಾತೃಹೃದಯ ತಾಯಿಕರುಳ ತನ್ನ ಕುಡಿಯು ಮುಂದೆ ಜಗತ್ತಿಗೆ ಉಪಕಾರಿ ಜೀವಿಯಾಗಿ ಬಾಳಲೆಂಬ ಹಾರೈಕೆಯ ಚಿತ್ರ ಇಲ್ಲಿ ಎದ್ದು ಕಾಣುತ್ತದೆ.

ಸಚಿವವಂಶದ ಕುಮಾರನಾಗಿ ಕೆರೆಯನ್ನೂ. ಕಟ್ಟಿಸು, ಭಾವಿಯನ್ನು ತೋಡಿಸು, ದೇಗುಲಗಳನ್ನು ನಿರ್ಮಿಸು, ಕಷ್ಟದಲ್ಲಿ ಸಿಲುಕಿದ ಅನಾಥರನ್ನು ಕಾಪಾಡು, ಸ್ನೇಹಿತರಿಗೆ ನೆರವಾಗು, ನಂಬಿದವರನ್ನು ಕೈಬಿಡದಿರು, ಶಿಷ್ಟರನ್ನು ಸಂರಕ್ಷಿಸು ಎಂದು ಪ್ರತಿ ತೊಟ್ಟು ಹಾಲೆರೆಯುವಲ್ಲಿ ಲಕ್ಷೀಧರನ ತಾಯಿ ಸಿಂಗಾಬಿಕೆ ಅವನ ಕಿವಿಯಲ್ಲಿ ಹೇಳುತ್ತಿದ್ದಳಂತೆ. ಇದು ನಮ್ಮ ಸಾಂಸ್ಕೃತಿಕ ಮೌಲ್ಯ. ಶಾಸನ ಬಹು ಅರ್ಥಪೂರ್ಣವಾಗಿ ಇದನ್ನು ಮಂಡಿಸಿದೆ. ಇದು ನಮ್ಮ ವರ್ತಮಾನಕ್ಕೂ ಆದರ್ಶ ನಡೆಯೆ ಆಗಿದೆ.

ಧಾರ್ಮಿಕ ದೃಷ್ಟಿಯಲ್ಲಿ ಪರಮತ ಸಹಿಷ್ಣುತೆ ಬಿತ್ತರಿಸುವ ಶ್ರವಣಬೆಳಗೊಳದ 'ಬುಕ್ಕರಾಯನ ಶಾಸನ' ವಿಜಯನಗರ ಸಾಮ್ರಾಜ್ಯದ ಅರಸರ ವಿಶ್ವಬಾಂಧವ್ಯ ಸನಾತನ ಧರ್ಮದ ಮೌಲ್ಯಗಳ ಸಂಕೇತವಾಗಿದೆ. ಇಂದು ಕೂಡ ಸರ್ವಧರ್ಮಗಳಲ್ಲಿ ಬಾಂಧವ್ಯ ಬೆಸೆಯಲು ಸರ್ವಧರ್ಮ ಸಮ್ಮೇಳನಗಳು ನಡೆಯುತ್ತಿವೆ. ಹೀಗೆ ನಮ್ಮ ಹಿಂದಿನ ಶಾಸನಗಳು ಮಾನವೀಯ ಮೌಲ್ಯಗಳನ್ನು ಹಿಡಿದೆತ್ತಿ ಸಾರುತ್ತ ಸಮಷ್ಟಿ ದೃಷ್ಟಿಯನ್ನು ಸಾಧಿಸಿವೆ.



*ಉಪನ್ಯಾಸಕರು, ಬಸವೇಶ್ವರ ಜೂನಿಯರ್ ಕಾಲೇಜ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦.

ಡಾ| ಟಿ. ದಯಾನಂದ ಪಟೇಲ್*

# ಹೊಯ್ಸಳರ ಕಾಲದ ಹೂದೋಟಗಳು ಶಾಸನೋಕ್ತ ಅಧ್ಯಯನ

ಇದೊಂದು ವಿಶೇಷವಾದ ಹೊಯ್ಸಳರ ಕಾಲದ ಹೂದೋಟಗಳ ಬಗ್ಗೆ ಶಾಸನಗಳ ಒಂದು ಅಧ್ಯಯನ. ಕ್ರಿ.ಶ. ೧೧ನೇ ಶತಮಾನದಿಂದ ಪ್ರಾರಂಭವಾಗಿ ೧೪ನೇ ಶತಮಾನದ ಮಧ್ಯಭಾಗದವರೆಗಿನ ಹೊಯ್ಸಳರ ಕಾಲದ ಅನೇಕ ಶಾಸನಗಳು ಹೂದೋಟಗಳ ಬಗ್ಗೆ ವಿಶೇಷ ಮಾಹಿತಿಗಳನ್ನು ಒದಗಿಸುತ್ತವೆ.

ಆ ಕಾಲದ ಹಲವಾರು ಶಾಸನಗಳಲ್ಲಿ ಅನೇಕ ತರಹದ ಹೂದೋಟಗಳು ಹಾಗೂ ವನಗಳ ಬಗ್ಗೆ ಉಲ್ಲೇಖ ಬಂದಿದೆ. ಗುಂಡ್ಲುಪೇಟೆ ತಾಲೂಕು ಬಂಡೀಪುರದ ಶಾಸನವೊಂದರಲ್ಲಿ ಕೊಲ್ಲಗಮನ್ ಎಂಬುವನು ಹೂವಿನತೋಟ ಮತ್ತು ತಂಗುದಾಣವನ್ನು ನಿರ್ಮಿಸಿದನೆಂದು (ಪೂನ್ದೋಟ್ಟಮಮ್) ಉಲ್ಲೇಖವಿದೆ*[೧]. ಮಂಡ್ಯಜಿಲ್ಲೆಯ ಮದ್ದೂರು ತಾಲೂಕು ವೈದ್ಯನಾಥಪುರದ ಶಾಸನವೊಂದು (ವೃಂದಾವನ) ಹೂದೋಟ ನಿರ್ಮಾಣದ ಬಗ್ಗೆ ಉಲ್ಲೇಖಿಸಿದೆ*[೨]. ಇನ್ನೊಂದು ಮಂಡ್ಯಜಿಲ್ಲೆಯ ನಾಗಮಂಗಲ ತಾಲೂಕಿನ ಬೆಳ್ಳೂರು ಗ್ರಾಮದ ಶಾಸನದಲ್ಲಿ ಹೂದೋಟ ನಿರ್ಮಾಣದ ಬಗ್ಗೆ ಉಲ್ಲೇಖವಿದೆ*[೩]. ನಾಗಮಂಗಲದ ಇನ್ನೊಂದು ಶಾಸನವು ಬೇಲದಗಿಡ ಮತ್ತು ಪರಿಶುದ್ಧ ಪಾರಿಜಾತ ಪುಷ್ಪಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ*[೪]. ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕು ಕಾರ್ಯಗ್ರಾಮದ ಶಾಸನವು ಚಿರಿಗದ್ದೆ ಕೆಳಗಿರುವ ಹೂದೋಟವನ್ನು ಹೆಸರಿಸುತ್ತದೆ*[೫]. ಅದೇ ತಾಲೂಕಿನ ಹೆಡತಲೆಯ ಶಾಸನವೊಂದು ಹೂದೋಟದ ಮನೆಯನ್ನು ಉಲ್ಲೇಖಿಸುತ್ತದೆ*[೬]. ಅದೇ ತಾಲೂಕಿನ ದೊಡ್ಡಹೊಮ್ಮದ ಶಾಸನವು ಒಂದು ವಿಶೇಷತೆಯಿಂದ ಕೂಡಿದೆ. ಅಲ್ಲಿಯ ತೋಪು ಸೋವನ್ನ ಎಂಬ ಹೂ ಮಾರುವವನು, ತನ್ನ ತಾಯಿಯ ಹೆಸರಿನಲ್ಲಿ ಹೂದೋಟವನ್ನು ಮತ್ತು ಬಾವಿಯನ್ನು ತೆಗಿಸಿದ ಬಗ್ಗೆ ಆ ಶಾಸನ ಉಲ್ಲೇಖಿಸಿದೆ*[೭]. ಅದೇ ತಾಲೂಕಿನ ಹೆಡತಲೆಯ ಶಾಸನವು ಹೂದೋಟವನ್ನು ಗದ್ದೆಗಳಾಗಿ ಮಾರ್ಪಾಡು ಮಾಡಿದ ಬಗ್ಗೆ ತಿಳಿಸುತ್ತದೆ*[೮].

ಟಿ. ನರಸೀಪುರ ತಾಲೂಕಿನ ತಲಕಾಡಿನ ಕೀರ್ತಿನಾರಾಯಣ ದೇವಾಲಯದ ಪೂರ್ವದ್ವಾರದ ಬಲಗಡೆ ಕಂಬದ ಮೇಲಿರುವ ಶಾಸನವು ಕೀರ್ತಿನಾರಾಯಣ ದೇವರಿಗೆ ಪೂಜಾ ಕಾರ್ಯವನ್ನು ಮಾಡಲು ನಾಟ್ಯಗಾರ್ತಿ ಪೆರುಮಲ್ಲೈ ಎಂಬುವಳು ನಗರದ ಮಂಡಲಸ್ವಾಮಿಯಿಂದ ೨೦೦ ಕುಳಿ ಪ್ರದೇಶವನ್ನು ತೆಗೆದುಕೊಂಡು ಹೂದೋಟವನ್ನು ನಿರ್ಮಿಸಿದಳು ಎಂಬುದಾಗಿ ತಿಳಿಸುತ್ತದೆ*[೯]. ಮಂಡ್ಯಜಿಲ್ಲೆಯ ಪಾಂಡವಪುರ ತಾಲೂಕಿನ ತೊಣ್ಣೂರಿನ ಶಾಸನವು ತಿರುನಾರಾಯಣ ತಿರುನಂದವನಂ ಎಂಬ ಹೆಸರಿನ ಹೂದೋಟನ್ನು ಬಹು ಸುಂದರವಾಗಿ ಚಿತ್ರಿಸುತ್ತದೆ*[೧೦]. ಅದೇ ತಾಲೂಕಿನ ಮೇಲುಕೋಟೆಯ ಶಾಸನಗಳು ಹೂದೋಟಗಳು ತರಕಾರಿ ತೋಟಗಳು, ತೋಟಗಳ ಬಗ್ಗೆ ವಿವರಣೆಯನ್ನು ಕೊಡುತ್ತವೆ*[೧೧]. ಮೈಸೂರು ಜಿಲ್ಲೆಯ ಹುಣಸೂರು ತಾಲೂಕಿನ ರಾಮಪಟ್ಟಣದ ಶಾಸನವು ತಾವರೆಗೊಳ ಎಂಬ ಹೂದೋಟದ ಬಗ್ಗೆ ವಿವರಣೆ ನೀಡುತ್ತದೆ*[೧೨]. ಹಾಸನ ತಾಲೂಕಿನ ಎಲ್ಲೇಶ್ವರಗ್ರಾಮದ ಶಾಸನವು ಸುಗ್ಗನಕಟ್ಟದ ಕೆಳಗಿರುವ ಹೂದೋಟದ ಬಗ್ಗೆ ಉಲ್ಲೇಖಿಸುತ್ತದೆ*[೧೩]. ಹಾಸನದ ಅನೇಕನ್ನಾಂಬಾಡಿಯ ಶಾಸನವು ವಸಂತಮಾಸದಲ್ಲಿ ಬೆಳೆದ ಹೂಗಳ ಬಗ್ಗೆ ಮತ್ತು ಹೂದೋಟದ ಬಗ್ಗೆ ವರ್ಣಿಸುತ್ತದೆ*[೧೪]. ವಾಸಂತಿಕಾ ಪುಷ್ಪಗಳು ಮತ್ತು ಅವುಗಳ ಬೇರೆ ಬೇರೆ ಬಣ್ಣಗಳ ವರ್ಣನೆ ಬಹು ಸುಂದರವಾಗಿದೆ. ಮಂಡ್ಯ ಜಿಲ್ಲೆಯ ಬಸರಾಳುವಿನ ಶಾಸನವು ಹೂದೋಟ ಮತ್ತು ಮಾಲೆಗಾರನ ಬಗ್ಗೆ ಉಲ್ಲೇಖಿಸುತ್ತದೆ*[೧೫].

ಹಾಸನ ತಾಲೂಕಿನ ಮಾವನೂರು ಶಾಸನವು ಎರಡು ಹೂದೋಟಗಳನ್ನು ನೋಡಿಕೊಳ್ಳಲು ವರ್ಷಕ್ಕೆ ೧೦ ಗದ್ಯಾಣಗಳ ಕೊಡುವಿಕೆಯನ್ನು ಉಲ್ಲೇಖಿಸುತ್ತದೆ*[೧೬]. ಇನ್ನೊಂದು ಹಾಸನ ಜಿಲ್ಲೆಯ ಹೊಳೇನರಸಿಪುರದ ಶಾಸನವು ಹೂದೋಟಗಳಿಗೆ ತೆರಿಗೆಯನ್ನು (ಕೊತ್ತವನ) ವಿಧಿಸುವುದನ್ನು ನಿವೇದಿಸುತ್ತದೆ*[೧೭]. ಹಾಸನ ಜಿಲ್ಲೆಯ ಅರಕಲಗೂಡು ತಾಲೂಕಿನ ಮಳಲಕೆರೆ ಗ್ರಾಮದ ಹೊಯ್ಸಳರ ಅರಸನಾದ ಸೋಮೇಶ್ವರನ ಕಾಲಕ್ಕೆ ಅಂದರೆ ಕ್ರಿ.ಶ. ೧೨೫೦ಕ್ಕೆ ಸೇರಿದ ಇದೊಂದು ವಿಶೇಷವಾದ ಶಾಸನದಲ್ಲಿ*[೧೮] ಇವನ ದಂಡನಾಯಕ ಸಂಧಿವಿಗ್ರಹಿ ಬೊಮ್ಮಣ್ಣನ ಕೆಳಗೆ ಕೆಲಸ ಮಾಡುತ್ತಿದ್ದ ಕಶ್ಯಪ ಗೋತ್ರಕ್ಕೆ ಸೇರಿದ ವಾಮರಸನ ಮಗ ಕಲ್ಲಯ್ಯ ಕೊಟ್ಟ ಒಂದು ಹೂದೋಟದ ದಾನವನ್ನು ಈ ಶಾಸನ ಉಲ್ಲೇಖಿಸುತ್ತದೆ ಮತ್ತು ಈ ಕೆಳಕಂಡ ಅನೇಕ ವಿಚಾರಗಳನ್ನು ಬೆಳಕಿಗೆ ತರುತ್ತದೆ.

(ಅ) ಈ ಶಾಸನದಲ್ಲಿ ಹೂದೋಟವನ್ನು ಅಳೆಯಲು ನಿಖರವಾದ ಭೂಮಾಪನ ಅಳತೆ ಗೋಲಿನ ಉಲ್ಲೇಖವಿದ್ದು, ಅದು ಹದಿನಾರು ಮೆಟ್ಟಿನ (೧೬) ಅಳತೆಗೋಲಾಗಿದೆ.

*ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬.

(ಅ) **ಈ ಹೂದೋಟವು ದೀರ್ಘ ಚತುರಸ್ರಾಕಾರದ ಆಕ್ಕರೆ** ಅಂದರೆ ಉತ್ತರ ದಕ್ಷಿಣವಾಗಿ ಉದ್ದವಾಗಿಯೂ ಮತ್ತು ಪೂರ್ವ, ಪಶ್ಚಿಮ ಅಗಲವಾಗಿಯೂ ಇರತಕ್ಕಂತಹ ಹೂದೋಟ. ಇದರ ಒಟ್ಟು ವಿಸ್ತೀರ್ಣ ನೂರ ಐವತ್ತೆಂಟು (೧೫೮) ಅಳತೆಗೋಲು, ಉಳ್ಳದ್ದಾಗಿದ್ದು ಉತ್ತರದಿಂದ ದಕ್ಷಿಣದವರೆಗೆ ನಲವತ್ತೈದು ಅಳತೆಗೋಲಾಗಿದ್ದು, ಪೂರ್ವ ದಿಂದ ಪಶ್ಚಿಮಕ್ಕೆ ಮೂವತ್ನಾಲ್ಕು ಅಳತೆಗೋಲು ಉಳ್ಳದ್ದಾಗಿದೆ.

(ಇ) ಇದೇ ಶಾಸನದಲ್ಲಿ ಇದನ್ನು ಕಂಬಗಳಲ್ಲಿ ತೊಂಬತ್ತೈದು ಕಂಬಗಳ ಭೂಪ್ರದೇಶ ಉಳ್ಳದ್ದೆಂದೂ ಉಲ್ಲೇಖಿತ ವಾಗಿದ್ದು, ಅಳತೆಗೋಲಿನಿಂದ ಮತ್ತರ ಎಂಬ ಭೂ ಪ್ರಮಾಣದಲ್ಲಿಯೂ ಉಲ್ಲೇಖಿತವಾಗಿರುವುದೊಂದು ವಿಶೇಷ. ಈ ಮೇಲಿನ ಕಾರಣಗಳಿಂದ ಈ ಹೂದೋಟವು ಭೂಮಾಪನ ಅಳತೆಯಲ್ಲಿ ಒಂದು ವಿಶೇಷತೆಯನ್ನು ಪಡೆದಿದೆ ಎಂದು ಉಲ್ಲೇಖಿಸಬಹುದು.

ಈ ಮೇಲೆ ಹೇಳಿದ ಹೊಯ್ಸಳರ ಕಾಲದ ಶಾಸನಗಳು ಹೂದೋಟಗಳ ಬಗ್ಗೆ ವಿಶೇಷ ಮಾಹಿತಿಗಳನ್ನು ಒದಗಿಸುತ್ತವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ :

ಶಾಸನಗಳು ಹೂದೋಟಗಳ (ವೃಂದಾವನ) ನಿರ್ಮಾಣ ಬಗ್ಗೆ ಉಲ್ಲೇಖಿಸುತ್ತವೆ. ಹೂದೋಟಗಳಿಗೆ ತೆರಿಗೆಗಳನ್ನು ವಿಧಿಸುವುದನ್ನು ತಿಳಿಸುತ್ತವೆ ಮತ್ತು ಹೂದೋಟಗಳ ಅಳತೆಗಳನ್ನು ತಿಳಿಸುತ್ತವೆ. ಹೂದೋಟಗಳ ಮಾಲೆಗಾರರ ಬಗ್ಗೆ ಮಾಹಿತಿಗಳನ್ನು ಮಾಲಿಗಳು ಮತ್ತು ಹೂದೋಟಗಳನ್ನು ನೋಡಿಕೊಳ್ಳಲು ಕೊಡುವ ಹಣದ ಪಾವತಿಯ ಬಗ್ಗೆ ವಿವರಿಸುತ್ತವೆ. ಹೂದೋಟಗಳಲ್ಲಿ ಬೆಳೆಯುವ ಫಲ-ಪುಷ್ಪಗಳ ಬಗ್ಗೆ ವಿವರ ನೀಡುತ್ತವೆ ಮತ್ತು ಹೂದೋಟಗಳಲ್ಲಿ ಯಾವತರಹದ ಗಿಡಗಳನ್ನು ಬೆಳೆಸುವ ಬಗ್ಗೆ ವಿವರ ನೀಡುತ್ತವೆ. ಶಾಸನಗಳು ಅನೇಕ ಹೂದೋಟಗಳಿಗೆ ಬೇರೆ ಬೇರೆ ಸುಂದರವಾದ ಹೆಸರುಗಳನ್ನು ಇಟ್ಟಿರುವುದನ್ನು ತಿಳಿಸುತ್ತವೆ. ಹೊಯ್ಸಳ ಕಾಲದ ಹೂದೋಟಗಳ ಬಗ್ಗೆ ಸಾಕಷ್ಟು ಮಾಹಿತಿಗಳನ್ನು ಅನೇಕ ಶಾಸನಗಳ ವಿಶೇಷ ಅಧ್ಯಯನದಿಂದ ತಿಳಿದುಬರುತ್ತದೆ.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು


*೧. ಎ. ಕ. ಸಂ. III, ಗುಂ ೧೮೭ (ಪರಿಷ್ಕೃತ ಆವೃತ್ತಿ)
*೨. ಅದೇ, ಸಂ. VII, ಮದ್ದೂರು ೬೯ (ಪರಿಷ್ಕೃತ ಆವೃತ್ತಿ)
*೩. ಅದೇ, ಸಂ. VII ನಾಗಮಂಗಲ ೭೩ (ಪರಿಷ್ಕೃತ ಆವೃತ್ತಿ)
*೪. ಅದೇ, ಸಂ. VII - ೧ ಮತ್ತು ೭ (ಪರಿಷ್ಕೃತ ಆವೃತ್ತಿ)
*೫. ಅದೇ, ಸಂ. III, ನಂಜನಗೂಡು ೨೮೩ (ಪರಿಷ್ಕೃತ ಆವೃತ್ತಿ)
*೬. ಅದೇ, ಸಂ. III, ನಂಜನಗೂಡು ೩೪೦ (ಪರಿಷ್ಕೃತ ಆವೃತ್ತಿ)
*೭. ಅದೇ, ಸಂ. III, ನಂಜನಗೂಡು ೨೯೬ (ಪರಿಷ್ಕೃತ ಆವೃತ್ತಿ)
*೮. ಅದೇ, ಸಂ. III, ನಂಜನಗೂಡು ೩೪೭ (ಪರಿಷ್ಕೃತ ಆವೃತ್ತಿ)
*೯. ಅದೇ, ಸಂ.V, ಟಿ. ನರಸೀಪುರ ೧೫೭ (ಪರಿಷ್ಕೃತ ಆವೃತ್ತಿ)
*೧೦. ಅದೇ, ಸಂ.VI, ಪಾಂಡವಪುರ ೧೨೧ (ಪರಿಷ್ಕೃತ ಆವೃತ್ತಿ)
*೧೧. ಅದೇ, ಸಂ.VI, ಪಾಂಡವಪುರ ೧೨೫, ೧೨೮ (ಪರಿಷ್ಕೃತ ಆವೃತ್ತಿ)
*೧೨. ಅದೇ, ಸಂ.IV, ಹುಣಸೂರು ೧೬ (ಪರಿಷ್ಕೃತ ಆವೃತ್ತಿ)
*೧೩. ಅದೇ, ಸಂ.VIII, ಹಾಸನ ೭೧ (ಪರಿಷ್ಕೃತ ಆವೃತ್ತಿ)
*೧೪. ಅದೇ, ಸಂ.VI, ಪಾಂಡವಪುರ ೧೧೮ (ಪರಿಷ್ಕೃತ ಆವೃತ್ತಿ)
*೧೫. ಅದೇ, ಸಂ.VIII, ಮಂಡ್ಯ ೩೦ (ಪರಿಷ್ಕೃತ ಆವೃತ್ತಿ)
*೧೬. ಅದೇ, ಸಂ.VIII, ಹಾಸನ ೯೫ (ಪರಿಷ್ಕೃತ ಆವೃತ್ತಿ)
*೧೭. ಅದೇ, ಸಂ. ಹೊಳೆನರಸೀಪುರ ೪೨ (ಪರಿಷ್ಕೃತ ಆವೃತ್ತಿ)
*೧೮. ಅದೇ, ಸಂ. ಅರಕಲಗೂಡು ೧೫೭, ೪೬ (ಪರಿಷ್ಕೃತ ಆವೃತ್ತಿ)

ಡಾ|| ಜೆ. ವಿ. ಗಾಯತ್ರಿ*

# ಮೈಸೂರು ಅರಸರ ಸಂಕ್ಷಿಪ್ತ ದಾಖಲೆಗಳು ಒಂದು ಸಾಂಸ್ಕೃತಿಕ ನೋಟ

ಮೈಸೂರು ಸಂಸ್ಥಾನವನ್ನು ಆರು ಶತಮಾನಗಳು ಆಳಿದ ಇಪ್ಪತ್ತೈದು ಮಂದಿ ಅರಸರು ಮೈಸೂರಿನ ಸಾಮಾಜಿಕ - ಧಾರ್ಮಿಕ ಸಾಂಸ್ಕೃತಿಕ ಬೆಳವಣಿಗೆಗೆ ನೀಡಿದ ಕೊಡುಗೆ ಅಪಾರ. ಇವರ ಆಡಳಿತ ವೈಖರಿಯನ್ನು ಪ್ರತಿಬಿಂಬಿಸುವ ಸಹಸ್ರಾರು ಅರಮನೆ ದಾಖಲೆಗಳು ರಾಜಮನೆತನದ ಇತಿಹಾಸ, ಸಾಮಾಜಿಕ-ಆರ್ಥಿಕ ಬದಲಾವಣೆಗಳು, ರಾಜಕೀಯ ಘಟನೆಗಳು ಮತ್ತು ಆಡಳಿತ ಸುಧಾರಣೆಗಳಿಗೆ ಸಂಬಂಧಿಸಿದಂತೆ ಅತ್ಯಮೂಲ್ಯ ಮಾಹಿತಿ ಒದಗಿಸಬಲ್ಲ ವಿಶೇಷ ಸಂಶೋಧನ ಸಾಮಾಗ್ರಿಯಾಗಿವೆ. ಇಂತಹ ಸಹಸ್ರಾರು ಸಂಖ್ಯೆಯ (ಸುಮಾರು ೧೪,೦೦೦) ಬೃಹತ್ ಪ್ರಮಾಣದ ಮೂಲ ದಾಖಲೆಗಳ ಸಂಗ್ರಹ ಮೈಸೂರು ಅರಮನೆಯ ಪತ್ರಾಗಾರ ಇಲಾಖೆಗೆ ಸೇರಿದ ಶ್ರೀ ಗಾಯತ್ರಿ ದೇವಸ್ಥಾನದ ಸಂಕೀರ್ಣದಲ್ಲಿದೆ. ಈ ದಾಖಲೆಗಳು ಸುಮಾರು ೧೦೦ ವರ್ಷ ಅವಧಿಯ ಅಂದರೆ, ೧೮೬೮-೧೯೬೮ರ ವರೆಗೆ ಮೈಸೂರನ್ನು ಆಳಿದ ಅರಸರ ಬಗ್ಗೆ ವಿಶೇಷ ಉಪಯುಕ್ತ ಮಾಹಿತಿ ನೀಡುತ್ತವೆ. ಈ ದಾಖಲೆಗಳ ಸರಣಿಯು ಅರಮನೆ ಹುಜೂರ್ ಕಾರ್ಯದರ್ಶಿಯವರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ೩೯ ಇಲಾಖೆಗಳಿಗೆ ಸೇರಿದ ಕಾಗದ ಪತ್ರಗಳಾಗಿದ್ದು ಸರ್ಕಾರಿ ಸಚಿವಾಲಯದ ದಾಖಲೆಗಳಿಗಿಂತ ವಿಭಿನ್ನ ಸ್ವರೂಪದ ವಿಷಯಗಳನ್ನೊಳಗೊಂಡಿದ್ದು ಈ ದಾಖಲೆ ಪತ್ರಗಳಲ್ಲಿರುವ ಆಕರ ಸಾಮಗ್ರಿಯನ್ನು ಸಂಶೋಧಕರು ಬಳಸಿಕೊಳ್ಳಲೆಂಬ ಉದ್ದೇಶದಿಂದ ಈ ಲೇಖನದಲ್ಲಿ ಈ ಸಂಗ್ರಹ ಕುರಿತು ಕಿರುಪರಿಚಯವನ್ನು ಮಾಡಿಕೊಡಲಾಗಿದೆ.

***ಅರಮನೆ ಆಡಳಿತ ಕಛೇರಿಗಳ ಬಗ್ಗೆ ಹಿನ್ನೆಲೆ***

ಟಿಪ್ಪುಸುಲ್ತಾನನ ನಿಧನಾನಂತರ (ಮೇ ೪, ೧೭೯೯) ಬ್ರಿಟಿಷರು ಬಾಲಕ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರನ್ನು ಗದ್ದುಗೆಯ ಮೇಲೆ ಕುಳ್ಳಿರಿಸಿ ಪೂರ್ಣಯ್ಯನವರನ್ನು ದಿವಾನರನ್ನಾಗಿ ನೇಮಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ೧೮೧೧ರಲ್ಲಿ ಆಡಳಿತವನ್ನು ಪ್ರಾರಂಭಿಸಿದರೂ ತಲೆದೋರಿದ ಅಭಾವ, ಕ್ಷಾಮ ಮುಂತಾದ ಹದಗೆಟ್ಟ ಪರಿಸ್ಥಿತಿಗಳಿಗೆ ಅಕ್ಟೋಬರ್ ೧೯, ೧೮೩೧ ರಂದು ಬ್ರಿಟಿಷರು ಮೈಸೂರಿನ ಅಧಿಕಾರವನ್ನು ವಹಿಸಿಕೊಂಡರು; ೧೮೮೧ರ ವರೆಗೆ ಮೈಸೂರು ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟಿತು; ಆಗ ಆಡಳಿತ ವ್ಯವಸ್ಥಿತ ರೂಪ ಪಡೆಯಿತು.

ಆದರೂ ಮೈಸೂರು ಒಡೆಯರ್‌ರವರ ಆಳ್ವಿಕೆಯ ಪ್ರಾರಂಭದಿಂದಲೂ ಅರಮನೆಯ ದೈನಂದಿನ ಹಾಗೂ ವಿಶೇಷ ಆಡಳಿತ ವ್ಯವಹಾರಗಳನ್ನು ನೋಡಿಕೊಳ್ಳಲು ಪ್ರತ್ಯೇಕ ಅರಮನೆ ಇಲಾಖೆಗಳ ವ್ಯವಸ್ಥೆ ಇರುತ್ತಿತ್ತು. ರಾಜ ಒಡೆಯರ್ (ಕ್ರಿ. ಶ. ೧೫೭೮-೧೬೧೭) ಮತ್ತು ಚಿಕ್ಕದೇವರಾಜ ಒಡೆಯರ್ (ಕ್ರಿ. ಶ. ೧೬೭೩-೧೭೦೪) ರವರ ಕಾಲದಲ್ಲಿ, ಕ್ರಮವಾಗಿ ೨೩ ಮತ್ತು ೨೨ ಇಲಾಖೆಗಳು ಅರಮನೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಚಿಕ್ಕದೇವರಾಜ ಒಡೆಯರ್‌ರವರು ಮೈಸೂರು ರಾಜ್ಯದ ಸುವ್ಯವಸ್ಥಿತ ಆಡಳಿತ ರಚನೆಗಾಗಿ 'ಅಠಾರಾ ಕಛೇರಿ' ಎಂಬ ೧೮ ಕಛೇರಿಗಳನ್ನು ಸ್ಥಾಪಿಸಿದ್ದು, ಈ ಪೈಕಿ 'ಬೆಣ್ಣೆ ಚಾವಡಿ' ಮತ್ತು 'ಸಮುಖದ ಚಾವಡಿ' ಎಂಬ ಎರಡು ಕಛೇರಿಗಳು ಅರಮನೆಯ ಆಡಳಿತ ವ್ಯವಹಾರ ಕುರಿತ ಕಾರ್ಯ ಕೈಗೊಳ್ಳುತ್ತಿದ್ದವು.[*೧] ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರ ಅವಧಿಯನ್ನು ಹೊರತುಪಡಿಸಿ ಮೈಸೂರಿನಲ್ಲಿ ಒಡೆಯರ್‌ರವರ ಆಡಳಿತ ಅವಧಿಯಲ್ಲಿ ಹಳೆಯ ಕಛೇರಿ ಪದ್ಧತಿಯೇ ಮುಂದುವರೆದಿರುವುದು ಗಮನೀಯ ಅಂಶ. ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಆಡಳಿತ ಕಾಲದಲ್ಲಿಯೂ ಇಂತಹ ೧೮ ಕಛೇರಿಗಳಿದ್ದು[*೨] ಒಬ್ಬ ಮುಖ್ಯ ಅಧಿಕಾರಿಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಇಂತಹ ಅಧಿಕಾರಿ ಖುದ್ದಾಗಿ ಮಹಾರಾಜರಿಗೆ ವಿಷಯ ವರದಿ ಮಾಡುತ್ತಿದ್ದು ನೇರವಾಗಿ ಸೂಚನೆ ಮತ್ತು ಆದೇಶಗಳನ್ನು ಪಡೆಯುತ್ತಿದ್ದರು. ಇಂತಹ ಆದೇಶಗಳನ್ನು ದಿನಚರಿ ಪುಸ್ತಕವೊಂದರಲ್ಲಿ ಅಥವಾ ಷಹಅಿಮಾಲ್[*೩] ಪುಸ್ತಕದಲ್ಲಿ ದಾಖಲಿಸುತ್ತಿದ್ದುದು ಆಗ ಸರ್ವೇ ಸಾಮಾನ್ಯವಾದ ಕ್ರಮ.

ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ನಿಧನದ (೧೮೬೮) ನಂತರ ಅರಮನೆಯ ಆಡಳಿತ ಕಾರ್ಯ ವಹಿಸಿಕೊಂಡ ಮೇಜರ್ ಇಲಿಯಟ್‌ರವರು ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಚರ, ಸ್ಥಿರ, ಆಸ್ತಿ, ಆಭರಣ, ಬೊಕ್ಕಸ, ಜವಾಹರಿ, ಸಾಲ ಇತ್ಯಾದಿಗಳ ಬಗ್ಗೆ ವಿವರ ನೀಡುವ ಆಸ್ತಿ : ಋಣ ಪಟ್ಟಿಯನ್ನು ತಯಾರಿಸಿ ಬ್ರಿಟಿಷ್ ಸರ್ಕಾರಕ್ಕೆ ಸಲ್ಲಿಸಿದ್ದು ಇದರಂತೆ ಅರಮನೆ ಕಛೇರಿಗಳನ್ನು ೧೮೬೮ರಲ್ಲಿ ಸಂಪೂರ್ಣವಾಗಿ

*೨೨೧, ೩ನೇ ಮೇನು, ೮ನೇ ಕ್ರಾಸ್, ವಿವೇಕಾನಂದ ನಗರ, ಮೈಸೂರು - ೫೭೦ ೦೨೩.

ಪರಿಷ್ಕರಿಸಲಾಯಿತು.*[೪] ಈ ಅವಧಿಯಲ್ಲಿ ಅರಮನೆ ಕಛೇರಿಗಳಿಗೆ ಸ್ಪಷ್ಟರೂಪ ದೊರೆಯಿತೆಂದೇ ಹೇಳಬಹುದು. ಆಗಖಜಾಸಿ, ಮಿಲಿಟರಿ, ಸಂಬಳದ ಕಛೇರಿ, ಕೋಟೆ ಕಛೇರಿ, ಮರಾಮತ್ ಕಛೇರಿ, ಜನಾನಾ ಕಛೇರಿ ಇತ್ಯಾದಿ ೨೫ ವಿವಿಧ ಕಛೇರಿಗಳಿದ್ದು ೧೮೩೬ರಲ್ಲಿ ಈ ಕಛೇರಿಗಳಲ್ಲಿ ೬೨೨೪ ಮಂದಿ ಕೆಲಸ ಮಾಡುತ್ತಿದ್ದು ಮಾಹೆಯಾನ ಅವರ ಸಂಬಳದ ಖರ್ಚು ರೂ. ೩೩,೫೩೦ ಆಗುತ್ತಿತ್ತು; ಮುಂದೆ ೧೮೬೮ರಲ್ಲಿ ಇವುಗಳನ್ನು ೧೨ ಕಛೇರಿಗಳಾಗಿ ಮಾರ್ಪಡಿಸಿ*[೫] ೩೧೯೬ ಮಂದಿಯನ್ನು ಕೆಲಸಕ್ಕೆ ನೇಮಿಸಿಕೊಳ್ಳಲಾಗಿತ್ತು.*[೬]

ಹೀಗೆ ಪರಿಷ್ಕರಿಸಿದ ೧೨ ಕಛೇರಿಗಳ ಪೈಕಿ ಅರಮನೆ ದಫ್ತರ್ ಕಛೇರಿ, ಕಿಲ್ಲೇ ಕಛೇರಿ ಮತ್ತು ಜಿಲ್ಲೋ ಕಛೇರಿಗಳು ರಾಜ್ಯದ ಮತ್ತು ಅರಸರ ಪ್ರಮುಖ ವ್ಯವಹಾರಗಳಿಗೆ ಸಂಬಂಧಿಸಿದ್ದು ಅರಸರ ಸಮೀಪದ ರಾಜಬಂಧುಗಳು ಇದರ ಮುಖ್ಯ ಭಕ್ಷಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಅರಮನೆ ಕಛೇರಿಗಳ ಮುಖ್ಯಸ್ಥರನ್ನು *ಭಕ್ಷಿ, ಮೊಖ್ತೇಸರ್, ಮ್ಯಾನೇಜರ್, ಸೂಪರಿಂಟೆಂಡೆಂಟ್, ಇನ್ಸ್‌ಪೆಕ್ಟರ್* ಇತ್ಯಾದಿ ಪದನಾಮಗಳಿಂದ ಕರೆಯುತ್ತಿದ್ದು ಇವರ ಅಧೀನದ ಅಧಿಕಾರಿಗಳನ್ನು *'ಗುರಿಕಾರ್'* ಎಂದು, ಸಿಬ್ಬಂದಿ ವಿಭಾಗದ ಮುಖ್ಯಸ್ಥರನ್ನು 'ಶಿರಸ್ತೇದಾರ್' ಎಂದು ಕರೆಯುತ್ತಿದ್ದರು. ಅರಮನೆ ಸೇವೆಯಲ್ಲಿ ವಂಶ ಪಾರಂಪರ್ಯವಾಗಿ ಈ ಹುದ್ದೆಗಳ ನೇಮಕಾತಿಗಳು 'ಹಕ್ಕುದಾರಿ' ಪದ್ಧತಿಯಂತೆ ಅರಮನೆಯಲ್ಲಿ ಸೇವೆ ಸಲ್ಲಿಸಿದ ನಿವೃತ್ತ ಅಥವಾ ನಿಧನಗೊಂಡ ಅರಮನೆ ಅಧಿಕಾರಿ : ಸಿಬ್ಬಂದಿಯ ಜೇಷ್ಠ ಪುತ್ರನಿಗೆ ಮೀಸಲಾಗಿರಿಸಲಾಗುತ್ತಿತ್ತು.

ಅರಮನೆ ದಫ್ತರ್ ಕಛೇರಿಯು ಅರಸು ಮನೆತನದ ವಂಶಾವಳಿ, ರಾಜಬಂಧುಗಳು, ಅರಮನೆ ಆಸ್ತಿಪಾಸ್ತಿಗಳು ಇತ್ಯಾದಿ ಶಾಶ್ವತವಾಗಿ ಉಳಿಸಿಕೊಳ್ಳಬೇಕಾದ ಪ್ರಮುಖ ದಾಖಲೆಗಳನ್ನೊಳಗೊಂಡಿದ್ದು ೧೯೦೫ರಲ್ಲಿ ಅರಮನೆ ಕಂಟ್ರೋಲರ್ ಅಥವಾ ಅರಮನೆ ಕಛೇರಿಯೊಂದಿಗೆ ವಿಲೀನಗೊಂಡಿತು. ಅರಮನೆ ಕಂಟ್ರೋಲರ್ ಕಛೇರಿಯು ೧೯೧೮ರ ವರೆಗೆ ಚಾಲ್ತಿಯಲ್ಲಿದ್ದು ಮುಂದೆ 'ಅರಮನೆ ಕಛೇರಿ' ಎಂಬ ನಾಮ ಬದಲಾವಣೆಯೊಂದಿಗೆ ಹುಜೂರ್ ಕಾರ್ಯದರ್ಶಿಯವರ ಅಧೀನದಲ್ಲಿ ೧೯೬೦ರ ವರೆಗೆ ಕಾರ್ಯನಿರ್ವಹಿಸುತ್ತಾ ಮುಂದುವರೆಯಿತು. ಸಿ. ರಂಗಾ ಚಾರ್ಲುರವರು ೧೮೬೮ರಲ್ಲಿ ಪ್ರಥಮ ಅರಮನೆ ಕಂಟ್ರೋಲರ್‌ರಾಗಿ ನೇಮಕಗೊಂಡರು; ನಂತರ ಕೆ. ಶೇಷಾದ್ರಿ ಅಯ್ಯರ್, ಟಿ. ಆನಂದರಾವ್, ಇ. ಚಿದಂಬರ ಅಯ್ಯರ್, ಇ. ಆರ್. ಸುಬ್ರಾಯ ಅಯ್ಯರ್, ಡಿ. ಸೀತಾರಾಮರಾವ್, ವಿ. ಎನ್. ನರಸಿಂಹ ಅಯ್ಯಂಗಾರ್ ಮತ್ತು ಬಿ. ರಾಮಕೃಷ್ಣರಾವ್ ಅವರುಗಳು ಅರಮನೆಯ ಕಂಟ್ರೋಲರ್‌ಗಳಾಗಿ ಸೇವೆ ಸಲ್ಲಿಸಿದವರು. ಹೀಗೆ ಒಟ್ಟು ೩೯ ಇಲಾಖೆಗಳು ಅರಮನೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದವು.*[೭] ಈ ಪೈಕಿ ಕೆಲವು ಕಛೇರಿಗಳ ಬಗ್ಗೆ ಇಲ್ಲಿ ಉಲ್ಲೇಖಿಸಲಾಗಿದೆ. (ಅನುಬಂಧ ನೋಡಿ)

***ಅರಮನೆ ಕಛೇರಿಗಳು*** : ಅರಮನೆಯ ಅವಸರದ ಹೋಬ್ಳಿ ಇಲಾಖೆಯು ಹಿಂದಿನಿಂದಲೂ ಅರಮನೆಯ ದರ್ಬಾರು, ಅರಮನೆಯಲ್ಲಿ ಮನೋರಂಜನಾ ವ್ಯವಸ್ಥೆ, ವಿಶೇಷ ಆಹ್ವಾನಿತರಿಗೆ ದಸರಾ, ವರ್ಧಂತಿ ಮುಂತಾದ ಸಮಾರಂಭಗಳಲ್ಲಿ ನೀಡುತ್ತಿದ್ದ ಸತ್ಕಾರ, ವಿದ್ವಾಂಸರು ಮತ್ತು ಕಲಾವಿದರಿಗೆ ನೀಡುತ್ತಿದ್ದ ಪ್ರೋತ್ಸಾಹ, ಚಾಮುಂಡಿ ಬೆಟ್ಟದ ಮೇಲಿನ ರಾಜೇಂದ್ರ ವಿಲಾಸ ಅರಮನೆಯ ನಿರ್ವಹಣೆ, ಅರಸರಿಗೆ ಉಡುಪುಗಳನ್ನು ಹೊಲಿಯುವ ದರ್ಜಿಗಳ ಸೇವಾ ವಿವರಗಳಲ್ಲದೆ ರಾಜಲಾಂಛನ, ಚಿನ್ನದ ಅಂಬಾರಿ, ಪಲ್ಲಕ್ಕಿ ಮುಂತಾದವುಗಳ ಸುಪರ್ದುಗಳೊಂದಿಗೆ ಜವಾಬ್ದಾರಿ ಮತ್ತು ಜಾಗರೂಕತೆಗಳಿಂದ ಮಾಡುವ ಕೆಲಸಗಳನ್ನು ನಿರ್ವಹಿಸುತ್ತಿತ್ತು. ಮೈಸೂರಿನ ಸುಪ್ರಸಿದ್ಧ ಸಂಗೀತಕಾರರು ಮತ್ತು ವಾಗ್ಗೇಯಕಾರರುಗಳಾದ ವೀಣೆ ಸುಬ್ಬಣ್ಣ, ಶೇಷಣ್ಣ, ಬಿಡಾರಂ ಕೃಷ್ಣಪ್ಪ, ವಾಸುದೇವಾಚಾರ್ಯ ಮುಂತಾದವರಲ್ಲದೆ ನಾಟಕಕಾರರಾದ ಬಸಪ್ಪಶಾಸ್ತ್ರಿ, ಸೋಸಲೆ ಅಯ್ಯಾಶಾಸ್ತ್ರಿ, ಗಿರಿಭಟ್ಟರ ತಮ್ಮಯ್ಯರಂತಹ ಶ್ರೇಷ್ಠ ರಚನಕಾರರಲ್ಲದೆ ಅನೇಕ ತಾಫೆನೃತ್ಯಾಂಗಿನಿಯರು ಸಹ ಇಲ್ಲಿ ಸಂಬಳದ ಮೇರೆಗೆ ಕೆಲಸ ಮಾಡುವ ಸಿಬ್ಬಂದಿಗಳಾಗಿದ್ದರು. ಕಲಾವಿದರುಗಳು ಅರಸರಿಗೆ ಸಲ್ಲಿಸುತ್ತಿದ್ದ ಬೇಡಿಕೆಗಳು, ಮತ್ತು ಮನವಿಗಳಿಗೆ ಮನ್ನಣೆ ನೀಡಿ ಖಿಲ್ಲತ್ತು, ಗೌರವಧನ, ಛತ್ರಿ, ಚಾಮರ ಮುಂತಾದ ಮರ್ಯಾದೆಗಳನ್ನು ನೀಡಿ ಗೌರವಿಸುತ್ತಿದ್ದುದಲ್ಲದೆ, ಹೊರ ದೇಶಗಳಿಂದ ಸಂಗೀತಗಾರರು ಮತ್ತು ಕಲಾವಿದರನ್ನು ಬರಮಾಡಿಕೊಂಡು ಸಕಲ ಮರ್ಯಾದೆಗಳಿಂದ ಆದರಿಸಿ ಅವರ ಕಲೆಯನ್ನು ಆಹ್ಲಾದಿಸುತ್ತಿದ್ದುದು ಮೈಸೂರು ಅರಸರ ಕಲೋಪಾಸಕ ಮನೋಭಾವನೆಗೆ ಸಾಕ್ಷಿಯಾಗಿವೆ. ಇಂತಹ ಅವಸರದ ಹೋಬ್ಳಿ ದಾಖಲೆಗಳು ಮೈಸೂರು ಅರಸರು ಕಲೆ, ಸಂಸ್ಕೃತಿ ಮತ್ತು ಸಂಪ್ರದಾಯಗಳಿಗೆ ನೀಡುತ್ತಿದ್ದ ಪ್ರೋತ್ಸಾಹಕ್ಕೆ ಉದಾಹರಣೆಗಳಾಗಿ ಲಭ್ಯವಿವೆ.

ಮೈಸೂರಿನ ಮಹಾರಾಜ ೧೦ನೆಯ ಚಾಮರಾಜೇಂದ್ರ ಒಡೆಯರ್‌ರವರು ಕನ್ನಡ ಭಾಷೆ ಮತ್ತು ಅಭಿವೃದ್ಧಿಗೆ ನೀಡಿದ ಉತ್ತೇಜನ ಅಗಾಧವಾದುದು. ಇವರು ೧೮೮೧ರಲ್ಲಿ ಸಂಸ್ಥಾನದ ಆಳ್ವಿಕೆಯನ್ನು ಪ್ರಾರಂಭಿಸಿದ ಹೊಸತರಲ್ಲಿಯೇ ಕನ್ನಡ ಭಾಷಾಭಿವೃದ್ಧಿಗೆ ಶ್ರಮಿಸಿ ಕನ್ನಡದಲ್ಲಿ ನಾಟಕಗಳನ್ನು ಆಡಿಸುವ ಸಲುವಾಗಿ 'ಅರಮನೆ ನಾಟಕಶಾಲೆ' ಯೊಂದನ್ನು ***ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ*** ಎಂಬ ಹೆಸರಿನಲ್ಲಿ ಪ್ರಾರಂಭಿಸಿದರು. ಕಾಳಿದಾಸನ ಸಂಸ್ಕೃತ ಹಾಗೂ ಷೇಕ್ಸ್‌ಪಿಯರ್‌ನ ***ಒಥೆಲ್ಲೊ, 'ರೋಮಿಯೊ ಮತ್ತು ಜೂಲಿಯೆಟ್'*** ಮುಂತಾದ ಆಂಗ್ಲ ನಾಟಕಗಳನ್ನು ಆಧರಿಸಿದ ***'ಶೂರಸೇನ ಚರಿತ್ರೆ'*** ಮುಂತಾದ ಕನ್ನಡ ನಾಟಕಗಳನ್ನು ಅರಮನೆ ಕಲಾವಿದರಿಂದ ಅಭಿನಯ ಮಾಡಿಸಿ

ಶ್ರೀಸಾಮಾನ್ಯರ ಹೊಗಳಿಕೆಗೆ ಪಾತ್ರರಾದರು. ಈ ನಾಟಕ ಸಂಸ್ಥೆ ಮುಂದೆ ೧೯೧೬ರಲ್ಲಿ ಅಂತ್ಯಗೊಂಡು ಇಲ್ಲಿದ್ದ ನಾಟಕದ ಸೀನರಿ, ಉಡುಪುಗಳು, ವೇಷಭೂಷಣಗಳು ಮುಂತಾದ ಸಾಮಗ್ರಿಗಳೊಂದಿಗೆ ಮುಂದೆ ಪ್ರಾರಂಭವಾದ ವರದಾಚಾರ್‌ರವರ 'ರತ್ನಾವಳಿ ಥಿಯೇಟ್ರಿಕಲ್ ಕಂಪೆನಿ', 'ಶಕುಂತಲಾ ಕರ್ನಾಟಕ ಸಭಾ' ಮುಂತಾದ ಕಂಪೆನಿಗಳಿಗೆ ಉಚಿತವಾಗಿ ಅರಮನೆಯಿಂದ ನೀಡಲಾಯಿತು. ದೊಡ್ಡಾಟದ (ಯಕ್ಷಗಾನ) ಮತ್ತು ನಾಟಕ ಕಲಾವಿದರ ಆರ್ಥಿಕ ಸಾಮಾಜಿಕ ಪರಿಸ್ಥಿತಿಗಳು, ಕಲೆಗಾಗಿ ಎಷ್ಟೋ ಕಲಾವಿದರು ಮಾಡುತ್ತಿದ್ದ ನಿಸ್ವಾರ್ಥ ಸೇವೆಯ ಬಗ್ಗೆ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ ಕಛೇರಿಯ ಲಭ್ಯವಿರುವ ಕೆಲವೇ ದಾಖಲೆಗಳು ಮಾಹಿತಿ ನೀಡುವುದರೊಂದಿಗೆ ಕಲೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಪುಷ್ಠಿ ನೀಡುವ ಸಾಮಗ್ರಿಗಳಾಗಿವೆ.

ಚಾಮುಂಡಿತೊಟ್ಟಿ ಇಲಾಖೆಯು ಅರಮನೆಯಲ್ಲಿ ಜರುಗುತ್ತಿದ್ದ ಉಪಾಕರ್ಮ, ಉಪನಯನ, ವಿವಾಹ, ವರ್ಧಂತಿ, ನಾಮಕರಣ, ದಸರಾ ಮುಂತಾದ ಮಹೋತ್ಸವಗಳಲ್ಲಿ ಸಂತರ್ಪಣೆ, ದಾನ, ಧರ್ಮ, ಹವನ, ಹೋಮ ಇತ್ಯಾದಿ ಧಾರ್ಮಿಕ ಪ್ರಕ್ರಿಯೆಗಳನ್ನು ನಿರ್ವಹಿಸುವ ಜವಾಬ್ದಾರಿ ಹೊಂದಿತ್ತು. ಅರಮನೆಯ ದೇವಾಲಯಗಳಲ್ಲಿ ವಿಶೇಷ ಪೂಜಾ ಕೈಂಕರ್ಯ ಕೈಗೊಳ್ಳುವ ಸಂಸ್ಕೃತ ವಿದ್ವಾಂಸರು, ಋತ್ವಿಕ್‌ಗಳು, ಆಯುರ್ವೇದ ಪಂಡಿತರಿಗೆ ಸಂಬಂಧಿಸಿದ ಕಾಗದ ಪತ್ರಗಳನ್ನು ಈ ಕಛೇರಿಯ ದಾಖಲೆಗಳಲ್ಲಿ ನೋಡಬಹುದಾಗಿದ್ದು ಇವು ಅರಮನೆಯ ಸಂಪ್ರದಾಯ ಮತ್ತು ಧಾರ್ಮಿಕ ಆಚರಣೆಗಳಿಗೆ ಸಂಬಂಧಿಸಿದ ಮಾಹಿತಿ ನೀಡುತ್ತವೆ. ಇದಲ್ಲದೆ ಅರಮನೆಯ ಮುಜರಾಯಿ ದಾಖಲೆಗಳು ಚಾಮುಂಡಿ ಬೆಟ್ಟದ ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಸಂಸ್ಕೃತ ಪಾಠಶಾಲೆಗಳು, ಅನ್ನಛತ್ರಗಳು, ಮಠಮಾನ್ಯಗಳು - ಇತ್ಯಾದಿ ಧಾರ್ಮಿಕ ಸಂಸ್ಥೆಗಳಿಗೆ ಮಹಾರಾಜರು ನೀಡಿದ ದಾನ, ಪುರಸ್ಕಾರಗಳಿಗೆ ಸಂಬಂಧಿಸಿವೆ. ಅರಮನೆಯ ಎಲೆಕ್ಟ್ರಿಕಲ್ ಕಛೇರಿಯು ಅರಮನೆಯ ದೀಪಾಲಂಕಾರವಲ್ಲದೆ ಅರಮನೆಯಲ್ಲಿ ಉಪಯೋಗಿಸುತ್ತಿದ್ದ ವಿದ್ಯುಚ್ಛಕ್ತಿ ಪಂಕ, ಯಂತ್ರಗಳು ಮೊದಲಾದವುಗಳಿಗೆ ಸಂಬಂಧಿಸಿದ ಮಾಹಿತಿಯುಳ್ಳ ದಾಖಲೆಗಳನ್ನು ಹೊಂದಿದೆ.

ಅರಮನೆಯ ಚಿತ್ರಶಾಲಾ ಕಛೇರಿಯು ಪ್ರಖ್ಯಾತ ದೇಶೀಯ ಮತ್ತು ಐರೋಪ್ಯ ಕಲಾವಿದರು ಚಿತ್ರಿಸಿದ ಅಪರೂಪದ ಚಿತ್ರಗಳು ಮತ್ತು ಕಲಾಕೃತಿಗಳನ್ನು ೧೯೧೫ ರಿಂದ ಹೊಂದಿದ್ದು ಪ್ರಾರಂಭದಲ್ಲಿ ಲೋಕರಂಜನ ಮಹಲ್‌ನೊಂದಿಗೂ ನಂತರ ಅರಮನೆಯ ಪೀಠೋಪಕರಣ ಮತ್ತು ಒಳ ಅಲಂಕರಣಗಳ ನಿರ್ವಹಣೆ ಮಾಡುತ್ತಿದ್ದ 'ಫರಸ್‌ಖಾನಾ' ಕಛೇರಿ ಅಧೀನದಲ್ಲಿದ್ದು ಜಗನ್ ಮೋಹನ ಚಿತ್ರಶಾಲೆಯಲ್ಲಿ ಚಿತ್ರಗಳ ಜೋಡಣೆ, ಐರೋಪ್ಯ ಹಾಗೂ ದೇಶೀಯ ಕಲಾವಿದರುಗಳಾದ ರವಿವರ್ಮ, ವೈ. ನಾಗರಾಜು, ಸುಬ್ರಮಣ್ಯ ರಾಜು, ಕೇಶವಯ್ಯ ಮುಂತಾದವರ ಚಿತ್ರಗಳು ಮತ್ತು ಕಲಾವಿದರ ಬಗ್ಗೆ ಉಪಯುಕ್ತ ಮಾಹಿತಿ ನೀಡುವ ದಿನಚರಿ, ಪತ್ರ ಮುಂತಾದ ದಾಖಲೆಗಳನ್ನು ಹೊಂದಿದೆ.

ಅರಮನೆಯ 'ಖಾಂಗಿ ಕಛೇರಿ' ಸ್ವಚ್ಛತೆ ಮತ್ತು ಮನೋರಂಜನಾ ವ್ಯವಸ್ಥೆಗಳ ಜವಾಬ್ದಾರಿ ಹೊಂದಿದ್ದರೆ 'ಖಾಸಾ ಸಮುಖ' ಮತ್ತು 'ಜನಾನಾ ಸಮುಖ' ಕಛೇರಿಗಳು ಮಹಾರಾಜ ಮತ್ತು ರಾಣೀವಾಸದ ಸಹಾಯಕರು, ಸಖಿಯರು, ಕಟ್ಟೆಗೆ ಮುಂತಾದ ಸಿಬ್ಬಂದಿಗಳಿಗೆ ಸಂಬಂಧಿಸಿದ ಕಾಗದ ಪತ್ರಗಳು ಹಾಗೂ ರಾಣೀವಾಸದ ಆಭರಣ : ಜವಾಹಿರಿ ಮತ್ತು ಸಿಂಹಾಸನದ ಬಗ್ಗೆ ಮಾಹಿತಿ ನೀಡುವ ವಿಶೇಷ ದಾಖಲೆಗಳನ್ನೊಳಗೊಂಡಿದೆ.

ಮೋಟಾರು ವಾಹನ ಮತ್ತು ಉಗಿಬಂಡಿ ಬರುವ ಮುನ್ನ ಅರಮನೆಯ ಅಶ್ವ ಮತ್ತು ಗಜಶಾಲೆಗಳಲ್ಲಿದ್ದ ಕುದುರೆ ಮತ್ತು ಆನೆಗಳನ್ನು ಸಂಚಾರಿ ಗಾಡಿಗಳಿಗೆ ಬಳಸುತ್ತಿದ್ದರು; ಇಲ್ಲಿದ್ದ ಪಟ್ಟದ ಕುದುರೆ ಮತ್ತು ಪಟ್ಟದ ಆನೆ ಹಾಗೂ ಅಂಬಾರಿ ಆನೆಗಳನ್ನು ದಸರಾ ಮೆರವಣಿಗೆಗಾಗಿ ಹೊರ ರಾಜ್ಯಗಳಾದ ಕೇರಳ ಮತ್ತು ತಮಿಳುನಾಡುಗಳಿಂದ ಖರೀದಿಸಿ ತರಿಸಿ ಆಯ್ಕೆ ಮಾಡಲು ವಿಶೇಷ ವಿಧಿ ವಿಧಾನಗಳನ್ನು ಅನುಸರಿಸಲಾಗುತ್ತಿತ್ತು. ಆನೆಗಳನ್ನು 'ಖೆಡ್ಡಾ' ನಡೆಯುವಾಗ ಮತ್ತು ಶಿಕಾರಿಗೆ ಹೋಗುವಾಗ ಬಳಸಲಾಗುತ್ತಿತ್ತು. ಇಂತಹ ಅನೇಕ ಮಾಹಿತಿ ಒದಗಿಸುವ ಕಾಗದ ಪತ್ರ : ಛಾಯಾಚಿತ್ರಗಳನ್ನು ಅಶ್ವಶಾಲೆ ಮತ್ತು ಗಜಶಾಲಾ ದಾಖಲೆಗಳು ಹೊಂದಿವೆ. ಹೀಗೆಯೇ 'ಗೇಮ್ಸ್ ಎಂಡ್ ಟೈಗರ್ ಪ್ರಿಸರ್ವ್ಸ್' ಕಛೇರಿಯಲ್ಲಿ ಅರಣ್ಯಗಳಲ್ಲಿ ಮಹಾರಾಜರು ಮತ್ತು ಬ್ರಿಟಿಷ್ ಅಧಿಕಾರಿಗಳು, ವೈಸರಾಯಿಗಳು ಮುಂತಾದ ವಿಶೇಷ ವ್ಯಕ್ತಿಗಳು ಹುಲಿ, ಚಿರತೆ, ಕಾಡೆಮ್ಮೆ ಮುಂತಾದ ಕ್ರೂರ ಮೃಗಗಳನ್ನು ಬೇಟೆಯಾಡುತ್ತಿದ್ದ ವಿಧಾನ, ಆನೆಗಳನ್ನು 'ಖೆಡ್ಡಾ'ದಲ್ಲಿ ಪಳಗಿಸುತ್ತಿದ್ದ ಬಗೆ ಮುಂತಾದ ವಿಷಯಗಳನ್ನೊಳಗೊಂಡ ಅನೇಕ ಅರಣ್ಯ ಅಧಿಕಾರಿಗಳ ದಿನಚರಿ ಕಡತಗಳು ಲಭ್ಯವಿದೆ.

ಹೀಗೆಯೇ ೧೯೦೭ರಲ್ಲಿ ಮೈಸೂರಿಗೆ ಬಂದ ಎರಡು ಸೀಟಿನ ಫ್ರಾನ್ಸ್ ದೇಶದ 'ಪಜ್ಯೊ' ಕಾರು, ನಾಲ್ಕು ಸೀಟಿನ 'ಡಿ ಡಿಯಾನ್' ಕಾರು ಮುಂತಾದ ಅರಸರ ವಿಂಟೇಜ್ ಮೋಟಾರು ಕಾರುಗಳ ವಿನ್ಯಾಸ, ಬೆಲೆ, ಅವು ಉಗಿ ಹಾಗೂ ಇಂಧನಗಳಿಂದ ಓಡುತ್ತಿದ್ದ ರೀತಿ, ಅದರ ಯಂತ್ರ ಜೋಡಣೆ ಮುಂತಾದವುಗಳ ಇತಿಹಾಸವನ್ನು 'ಅರಮನೆ ಗ್ಯಾರೇಜ್' ದಾಖಲೆಗಳು ಕೊಡುತ್ತವೆ.

ಅರಮನೆ ಜಿಲ್ಲೋ ಕಛೇರಿ ದಾಖಲೆಗಳು ಅಂಗರಕ್ಷಕ ದಳ ಮತ್ತು ಪದಾತಿ ದಳಗಳು ಅರಸರ ಮತ್ತು ರಾಣೀವಾಸದ ಪಹರೆ, ಅಂಗರಕ್ಷಣೆ ನೀಡುತ್ತಿದ್ದ ಸಿಪಾಯಿಗಳು ಮತ್ತು ಸೈನಿಕರನ್ನೊಳಗೊಂಡಿದ್ದು ಅವರ ಸಮವಸ್ತ್ರ, ಕೋವಿ, ಬಂದೂಕುಗಳು,

ಕವಾಯತು ಮತ್ತಿತರ ಕರ್ತವ್ಯಗಳಿಗೆ ಸಂಬಂಧಿಸಿದ (ಇಂದಿನ ಪೋಲೀಸ್ ಕರ್ತವ್ಯಗಳಿಗೆ ಸರಿಹೋಲುವ) ಮಾಹಿತಿ ಒದಗಿಸುತ್ತವೆ.

ಇದಲ್ಲದೆ ಬೆಂಗಳೂರು ಅರಮನೆ, ಉದಕ ಮಂಡಲದಲ್ಲಿದ್ದ ಫರ್ನ್‌ಹಿಲ್ ಅರಮನೆ, ಮದ್ರಾಸ್‌ನಲ್ಲಿ ಮಹಾರಾಜರು ಖರೀದಿಸಿದ್ದ ಸ್ಥಿರ ಆಸ್ತಿಗಳಿಗೆ ಸಂಬಂಧಿಸಿದ 'ಬೆಂಗಳೂರು ಅರಮನೆ' ಮತ್ತು 'ಫರ್ನ್‌ಹಿಲ್ ಅರಮನೆ' ದಾಖಲೆಗಳಲ್ಲದೆ ಅರಮನೆಯ ಭೂಮಿ, ತೋಟ, ಹುಲ್ಲುಗಾವಲು ಮತ್ತು ಅಮೃತ್ ಮಹಲ್ ತಳಿಯ ಹಸುಗಳಿಗೆ ಸಂಬಂಧಿಸಿದಂತೆ 'ಅರಮನೆ ಎಸ್ಟೇಟ್ಸ್ ಎಂಡ್ ಗಾರ್ಡನ್ಸ್', 'ರಾಯನಕೆರೆ ಡೈರಿ ಫಾರಂ' ಹಾಗೂ 'ಕರೋಹಟ್ಟಿ' ಕಛೇರಿಯ ದಾಖಲೆಗಳಲ್ಲಿ ಮಾಹಿತಿ ಲಭ್ಯವಿದೆ.

ಮೈಸೂರು ಅರಸರು ಹೆಣ್ಣು ಮಕ್ಕಳ ವಿದ್ಯಾಪ್ರಗತಿಗೆ ನೀಡಿದ ಕೊಡುಗೆ ಅಪಾರ. ಅರಸುಗಳು ರಾಜಬಂಧುಗಳು ಮತ್ತು ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಪ್ರಾರಂಭಿಸಿದ 'ವಾಣಿವಿಲಾಸ ಗರ್ಲ್ಸ್ ಸ್ಕೂಲ್ (೧೯೧೩), ಚಾಮರಾಜೇಂದ್ರ ಅರಸು ಬೋರ್ಡಿಂಗ್ (೧೮೯೨) ಶಾಲೆಗಳಲ್ಲದೆ ಅರಸು ಪರಿವಾರದವರ ಶಿಕ್ಷಣಕ್ಕಾಗಿಯೇ ಮೀಸಲಾದ 'ರಾಯಲ್ ಸ್ಕೂಲ್' ಮುಂದೆ ಪ್ರಿನ್ಸ್ ಜಯಚಾಮರಾಜ ಒಡೆಯರ್ ಶಾಲೆಯಾಗಿ ಮಾರ್ಪಾಡಾಗಿ ಈ ಶಾಲೆಗಳಲ್ಲಿ ಬೋಧಿಸುತ್ತಿದ್ದ ಪಠ್ಯಕ್ರಮ, ದೇಶೀಯ ಮತ್ತು ಆಂಗ್ಲ ಬೋಧಕರ ಸೇವಾ ವಿವರಗಳು, ವಿದ್ಯಾರ್ಥಿ : ವಿದ್ಯಾರ್ಥಿನಿಯರಲ್ಲಿ ಅವರು ಮೂಡಿಸುತ್ತಿದ್ದ ಶಿಸ್ತು ಮತ್ತು ಉತ್ತೇಜನಕ್ಕೆ ಸಂಬಂಧಿಸಿದ ವಿವರವಾದ ಮಾಹಿತಿ ನೀಡುತ್ತವೆ.

ಅರಮನೆ ಖಜಾನೆಯ ದಾಖಲೆಗಳು ಸಿಬ್ಬಂದಿಯ ವೇತನ ಬಟವಾಡೆ, ಇತರ ಖರ್ಚುವೆಚ್ಚಗಳಲ್ಲದೆ ಅರಮನೆಯ ಬೆಲೆ ಬಾಳುವ ಆಭರಣಗಳಿಗೆ ಸಂಬಂಧಿಸಿದ ಮಾಹಿತಿ ಹೊಂದಿದ್ದರೆ ಮೋತೀಖಾನಾ ಕಛೇರಿ ಅರಮನೆಯ ದಿನಸಿ ಸರಬರಾಜಿನ ಬಗ್ಗೆಯೂ ಹಾಗೂ ಅರಮನೆ ವೈದ್ಯಶಾಲೆ ದಾಖಲೆಗಳು ಅರಮನೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಆಂಗ್ಲ ವೈದ್ಯರು, ಶುಶ್ರೂಕರು, ಕೈಗೊಳ್ಳುತ್ತಿದ್ದ ಚಿಕಿತ್ಸಾ ಕ್ರಮ, ರೋಗ ನಿವಾರಕ ಔಷಧಿಗಳು, ಚುಚ್ಚುಮದ್ದು ಮುಂತಾದವುಗಳಿಗೆ ಸಂಬಂಧಿಸಿದ ಮಾಹಿತಿ ಒದಗಿಸುತ್ತದೆ.

ಮರಾಮತ್ ದಾಖಲೆಗಳು ಅಧಿಕ ಪ್ರಮಾಣದಲ್ಲಿದ್ದು ನೂತನ ಅರಮನೆಯ ನಿರ್ಮಾಣ (೧೯೧೨), ಚಾಮುಂಡೇಶ್ವರಿ ದೇವಸ್ಥಾನದ ಕಟ್ಟಡದ ನಿರ್ವಹಣೆ, ದುರಸ್ತಿ, ಅರಸರ ಅರಮನೆಗಳಾದ ರಾಜೇಂದ್ರ ವಿಲಾಸ ಅರಮನೆ, ಲಲಿತ ಮಹಲ್ ಅರಮನೆ, (New Guests' Mansion 1930), ಜಯಲಕ್ಷ್ಮಿ ವಿಲಾಸ ಮ್ಯಾನ್ಷನ್, ಚೆಲುವಾಂಬ ಮ್ಯಾನ್ಷನ್ ಮುಂತಾದ ಬಂಗಲೆಗಳ ನಿರ್ಮಾಣ, ದುರಸ್ಥಿ, ನಿರ್ವಹಣೆ ಮುಂತಾದವುಗಳಿಗೆ ಸಂಬಂಧಿಸಿದಂತೆ ಅತ್ಯಂತ ಉಪಯುಕ್ತ ಮಾಹಿತಿ ನೀಡುವ ದಾಖಲೆಗಳು, ನೀಲಿನಕ್ಷೆಗಳು ಮತ್ತು ವಿನ್ಯಾಸಗಳನ್ನೊಳಗೊಂಡಿದೆ.

ಅತ್ಯಂತ ಅಧಿಕ ಪ್ರಮಾಣದಲ್ಲಿರುವ ಸುಮಾರು ೩,೫೦೦ ಅರಮನೆ ಕಛೇರಿ ದಾಖಲೆಗಳು (೧೯೧೮-೧೯೬೦) ಅರಸರು ಮೈಸೂರಿನ ಕೋಟೆಯೊಳಗಿದ್ದ ಕೆಲವು ನಾಗರೀಕರ ಮನೆಗಳನ್ನು ಕೆಡವಿ, ಹೊಸ ಅಗ್ರಹಾರಗಳನ್ನು ನಿರ್ಮಿಸಿ ನಿವೇಶನ ಮತ್ತು ಮನೆಗಳನ್ನು ಕಟ್ಟಿಸಿಕೊಟ್ಟಿದ್ದರ ಬಗ್ಗೆ, ನಗರಾಭಿವೃದ್ಧಿ ವಿಶ್ವಸ್ಥ ಮಂಡಲಿಯ ಸ್ಥಾಪನೆ (೧೯೧೪) ಬಗ್ಗೆ, ಹೊಸ ಬಡಾವಣೆಗಳನ್ನು ಪ್ರಾರಂಭಿಸಿದ್ದರ ಬಗ್ಗೆ, ನಗರಸಭೆ ಮತ್ತು ವಿಶ್ವಸ್ಥ ಮಂಡಲಿಯ ಕಾರ್ಯಗಳ ಬಗ್ಗೆ, ದಿವಾನರು ಕೈಗೊಳ್ಳುತ್ತಿದ್ದ ಮಾರುಕಟ್ಟೆ ಮತ್ತು ಆಸ್ಪತ್ರೆಗಳ ತಪಾಸಣೆ ಮುಂತಾದ ನಗರ ನಿರ್ಮಲೀಕರಣ ಕಾರ್ಯಗಳಿಗೆ ಸಂಬಂಧಿಸಿದ ವರದಿ, ಟಿಪ್ಪಣಿಗಳಲ್ಲದೆ ನಾಡ ಹಬ್ಬವಾದ ದಸರಾ ಮಹೋತ್ಸವದ ಆಚರಣೆ, ಧಾರ್ಮಿಕ ಹಾಗೂ ಇತರ ಸಂಘಸಂಸ್ಥೆಗಳಿಗೆ ಮಹಾರಾಜರು ಕೊಡುತ್ತಿದ್ದ ದಾನ : ಧನಸಹಾಯ ಮುಂತಾದವುಗಳ ಬಗ್ಗೆ ವಿವರವಾದ ಮಾಹಿತಿ ನೀಡುತ್ತವೆ.

ಮುಂದೆ ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ರವರು ರಾಜಪ್ರಮುಖರಾದ ಅವಧಿಯಲ್ಲಿ 'ಆಫೀಸ್ ಆಫ್ ದಿ ಸೆಕ್ರೆಟರಿ ಇನ್ ವೇಟಿಂಗ್' ಎಂಬ ಕಛೇರಿಯೊಂದಿದ್ದು ಇದು ಈ ಅವಧಿಯ ಅವರ ಅನೇಕ ಆಡಳಿತ ವ್ಯವಹಾರಗಳಿಗೆ ಸಂಬಂಧಿಸಿ ದುದಾಗಿದೆ.

ಹೀಗೆ ಮೈಸೂರು ಒಡೆಯರ್‌ರವರ ಆಳ್ವಿಕೆಯ ಕಾಲದ ರಾಜಮನೆತನದ ಸಾಂಪ್ರದಾಯಿಕ ಧಾರ್ಮಿಕ ಆಚರಣೆಗಳಾದ ದಸರಾ ನಾಡಹಬ್ಬ, ಮಹಾರಾಜರ ವರ್ಧಂತಿ, ವಿವಾಹ, ಉಪನಯನ, ನಾಮಕರಣಗಳು, ಹಬ್ಬದ ಆಚರಣೆಗಳಲ್ಲದೆ ಆಳಿದ ಅರಸು ಪರಿವಾರದ ದೈನಂದಿನ ದಿನಚರಿ, ವಿಶೇಷ ಮತ್ತು ಮಹತ್ವದ ಘಟನೆಗಳು, ಸಾಂಸ್ಕೃತಿಕ, ಸಾಮಾಜಿಕ ಮತ್ತು ಆಡಳಿತಾತ್ಮಕ ವಿಷಯಗಳ ಮೇಲೆ ಬೆಳಕನ್ನು ಚೆಲ್ಲುವ ಮೈಸೂರು ಅರಸರ ದಾಖಲೆಗಳ ಸಂಗ್ರಹ ಸಂಶೋಧನೆಗೆ ಅತ್ಯಂತ ಉಪಯುಕ್ತ ಆಕರ ಸಾಮಗ್ರಿಯಾಗಿವೆ.



**ಅರಮನೆ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ ೩೯ ಇಲಾಖೆಗಳು (೧೮೬೮-೧೯೬೦) ವಿವರ ಪಟ್ಟಿ**

೧. ಅವಸರದ ಹೋಬಳಿ (೧೮೭೯-೧೯೫೨), ೨. ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ (೧೯೧೪-೧೯೧೭), ೩. ಅರಮನೆ ಬ್ಯಾಂಡ್ (೧೯೦೪-೧೯೪೮), ೪. ಬೆಂಗಳೂರು ಪ್ಯಾಲೆಸ್ (೧೮೯೭-೧೯೬೦), ೫. ಬಾಡೀಗಾರ್ಡ್ (೧೯೧೭-೧೯೪೮), ೬. ಚಾಮುಂಡಿ ಜಮಖಾನಾ (೧೯೧೩-೧೯೪೯), ೭. ಚಾಮುಂಡಿ ತೋಟ (೧೮೭೯-೧೮೫೬), ೮. ಚಾಮರಾಜೇಂದ್ರ ಅರಸು ಬೋರ್ಡಿಂಗ್ ಸ್ಕೂಲ್ (೧೮೯೨-೧೯೪೮), ೯. ಚಾಮರಾಜೇಂದ್ರ ಜೂ ಗಾರ್ಡನ್ (೧೯೧೧-೧೯೪೯), ೧೦. ಚಿತ್ರಶಾಲಾ (೧೯೧೯-೧೯೬೦), ೧೧. ಡಿಸ್ಪೆನ್ಸರಿ (೧೯೦೨-೧೯೪೮), ೧೨. ಪ್ಯಾಲೆಸ್ ಎಲೆಕ್ಟ್ರಿಕಲ್ (೧೯೦೮-೧೯೪೮), ೧೩. ಎಸ್ಟೇಟ್ ಎಂಡ್ ಗಾರ್ಡನ್ಸ್ (೧೯೧೪-೧೯೬೦), ೧೪. ಫರಸ್‌ಖಾನಾ (೧೯೧೨೪-೧೯೫೩), ೧೫. ಫರ್ನ್‌ಹಿಲ್ ಪ್ಯಾಲೆಸ್ (೧೮೭೩-೧೯೬೦), ೧೬. ಗಜಶಾಲಾ (೧೯೧೮-೧೯೫೦), ೧೭. ಗೇಮ್ಸ್ ಎಂಡ್ ಟೈಗರ್ ಪ್ರಿಸರ್ವ್ಸ್ (೧೯೨೯-೧೯೫೨), ೧೮. ಗ್ಯಾರೇಜ್ (೧೯೦೯-೧೯೪೮), ೧೯. ಜನರಲ್ ಆಫೀಸ್ (೧೮೫೬-೧೮೯೭), ೨೦. ಕರೋಹಟ್ಟಿ (೧೯೦೭-೧೯೨೮), ೨೧. ಖಾಂಗಿ (೧೯೨೯-೧೯೫೨), ೨೨. ಖಾಸ್‌ಸಮುಖ (೧೯೦೮-೧೯೫೭), ೨೩. ಕಿಲ್ಲೇ ಕಛೇರಿ (೧೮೬೯-೧೯೪೨), ೨೪. ಹಿಸ್‌ಹೈನೆಸ್ ಮಹಾರಾಜಾಸ್ ಒನ್ ಇನ್‌ಫ್ಯಾಂಟ್ರಿ (೧೯೪೧-೧೯೪೯), ೨೫. ಲಕ್ಷ್ಮೀವಿಲಾಸ ಸನ್ನಿಧಾನ (೧೯೩೬-೧೯೫೩), ೨೬. ಲೋಕರಂಜನ್ ಮಹಲ್ (೧೯೧೭-೧೯೫೭), ೨೭. ಮರಾಮತ್ (೧೮೭೬-೧೯೫೮), ೨೮. ಮುಜರಾಯಿ (೧೮೬೯-೧೯೬೦), ೨೯. ಮೋತೀ ಖಾನ್ (೧೯೧೭-೧೯೫೬), ೩೦. ಆಫೀಸ್ ಆಫ್ ದಿ ಸೆಕ್ರಟರಿ ಇನ್ ವೇಟಿಂಗ್ (೧೯೫೫-೧೯೫೬), ೩೧. ಪ್ಯಾಲೆಸ್ ಕಂಟ್ರೋಲರ್ ಆಫೀಸ್ (೧೮೬೮-೧೯೧೮) ಮತ್ತು ಪ್ಯಾಲೆಸ್ ಆಫೀಸ್ (೧೯೧೮-೧೯೬೦), ೩೨. ಪ್ರಿನ್ಸ್ ಜಯಚಾಮರಾಜ ಒಡೆಯರ್ ಸ್ಕೂಲ್ (೧೯೨೭-೧೯೪೦), ೩೩. ರಾಯನಕೆರೆ ಡೈರಿ ಫಾರಂ (೧೯೨೧-೧೯೬೦), ೩೪. ಸರಸ್ವತಿ ಭಂಡಾರ (೧೯೨೮-೧೯೬೦), ೩೫. ಸ್ಟೇಬಲ್ಸ್ (೧೮೬೯-೧೯೫೨), ೩೬. ಟ್ರೆಜರಿ (೧೯೦೫-೧೯೫೯), ೩೭. ವಾಣಿ ವಿಲಾಸ ಅರಸು ಗರ್ಲ್ಸ್ ಸ್ಕೂಲ್ (೧೯೧೩-೧೯೪೯), ೩೮. ಜನಾನಾ ಸಮುಖ (೧೮೭೦-೧೯೫೫), ೩೯. ಜಿಲ್ಲೋ ಕಛೇರಿ (೧೮೬೯-೧೯೫೭).

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. *ಚಿಕ್ಕದೇವರಾಜ ಒಡೆಯರ್‌ರವರು ಏರ್ಪಡಿಸಿದ್ದ ೧೮ ಚಾವಡಿಗಳು ಯಾವುವೆಂದರೆ : ೧) ನಿರೂಪದ ಚಾವಡಿ ೨) ಆಯಕಟ್ಟಿನ ಚಾವಡಿ ೩) ಮೈಸೂರು ಹೋಬಳಿಯ ವಿಚಾರದ ಚಾವಡಿ ೪) ಪಟ್ಟಣದ ಹೋಬಳಿಯ ವಿಚಾರದ ಚಾವಡಿ ೫) ಸೀಮೆಯ ಕಂದಾಚಾರದ ಚಾವಡಿ ೬) ಬಾಗಿಲು ಕಂದಾಚಾರದ ಚಾವಡಿ ೭) ಸುಂಕದ ಚಾವಡಿ ೮) ಮೊಮ್ಮಿನ ಚಾವಡಿ ೯) ತೊಡಾಯದ ಚಾವಡಿ ೧೦) ಪಟ್ಟಣದ ಹೋಬಳಿ ಅಷ್ಟಗ್ರಾಮದ ಚಾವಡಿ ೧೧) ಮೈಸೂರು ಹೋಬಳಿ ಅಷ್ಟಗ್ರಾಮದ ಚಾವಡಿ ೧೨) ಬೆಣ್ಣೆಯ ಚಾವಡಿ ೧೩) ಪಟ್ಟಣದ ಚಾವಡಿ ೧೪) ಬೇಹಿನ ಚಾವಡಿ ೧೫) ಸಮುಖದ ಚಾವಡಿ ೧೬) ದೇವಸ್ಥಾನದ ಚಾವಡಿ ೧೭) ಕಬ್ಬಿಣದ ಚಾವಡಿ ೧೮) ಹೊಗೇಸೊಪ್ಪಿನ ಚಾವಡಿ.*

*೨. ಬಿ. ರಾಮಕೃಷ್ಣರಾವ್, **ಮೈಸೂರು ಅರಸರ ವಂಶಾವಳಿ**, ಭಾಗ ೧, ಪುಟಗಳು ೧೪೬-೧೫೦.

*೩. *ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಆಳ್ವಿಕೆಯಲ್ಲಿದ್ದ ೧೮ ಕಛೇರಿಗಳು : ೧) ದಿವಾನ್ ಕಛೇರಿ ೨) ಕಿಲ್ಲೇ ಕಛೇರಿ ೩) ಕಟ್ಟೇ ಕಛೇರಿ ೪) ಬಾರ್ಗೀರ್ ಕಛೇರಿ ೫) ಸಂದಲ್ ಕಛೇರಿ ೬) ಸವಾರ್ ಕಛೇರಿ ೭) ತೋಷೀಖಾನ್ ಕಛೇರಿ ೮) ಕಮಿಟಿ ಕಛೇರಿ ೯) ಫಿರ್ಯಾದು ಕಛೇರಿ ೧೦) ಮೋದೀಖಾನೆ ೧೧) ಕಂದಾಚಾರ್ ಕಛೇರಿ ೧೨) ಬಾರ್ ಕಛೇರಿ ೧೩) ಬಾರಿಗಾಟ್ ಕಛೇರಿ ೧೪) ದುಯ್ಯಂಬಾರ್ ಕಛೇರಿ ೧೫) ಜನಶಿ ಕಛೇರಿ ೧೬) ಅಂಚೆ ಅಮೃತ ಮಹಲ್ ಕಛೇರಿ ೧೭) ಪಾಗಿರ್ದ ಪೇಕ್ಷ ಕಛೇರಿ ೧೮) ಜಿಲ್ಲೋ ಕಛೇರಿ.*

*೪. ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲದ 'ಷಹ ಅಮಾಲ್‌ಗಳು' ಮಹಾರಾಜರ ಆದೇಶಗಳು, ಅರಮನೆಯ ಪ್ರತಿನಿತ್ಯದ ಪೂಜೆ, ಕಟ್ಟಳೆ ಹಾಗೂ ವಿಶೇಷ ಧಾರ್ಮಿಕ ವಿಧಿ ವಿಧಾನಗಳನ್ನೊಳಗೊಂಡ ದಾಖಲೆ : ಪುಸ್ತಕಗಳಾಗಿರುತ್ತಿತ್ತೆಂದು ತಿಳಿದುಬಂದಿದೆ.

*೫. Letter No. 51, dated Mysore, the 31st August 1868 from Major C. Ellot, Superintendent, Astagram Division, to L. B. Bowring, Commissioner for the Government of the Territories of H. H. the Maharaj of Mysore.

*೬. **೧೮೬೮ರಲ್ಲಿ ಮೇಜರ್ ಇಲಿಯಟ್ ಪರಿಷ್ಕರಿಸಿದ ೧೨ ಕಛೇರಿಗಳು ಹೀಗಿವೆ : ಅರಮನೆ ದಫರ್ ಕಛೇರಿ, ಕಿಲ್ಲೇ ಕಛೇರಿ ಮತ್ತು ಜಿಲ್ಲೋ ಕಛೇರಿ** - ಇವು ಮೂರು ಪ್ರಮುಖ ಕಛೇರಿಗಳಾಗಿದ್ದುದಲ್ಲದೆ, ೮ ಚಿಕ್ಕ ಇಲಾಖೆಗಳಾದ - *ಚಾಮುಂಡಿ ತೋಟ, ಅವಸರದ ಹೋಬಳಿ, ಖಾಸ್ ಸಮುಖದ ಊಳಿಗೈ, ಜನಾನಾ ಸಮುಖದ ಊಳಿಗೈ, ಅಶ್ವ ಮತ್ತು ಗಜಶಾಲಾ, ಕರೋಹಟ್ಟಿ, ಮರಾಮತ್, ಉದ್ಯಾನವನಗಳು* - ಇದಲ್ಲದೆ ಒಂದು ಜನರಲ್ ಆಫೀಸ್ (ಖಜಾನೆ, ತೋಷೀ ಖಾನೆ, ಮೋದಿಖಾನೆ, ಲೆಕ್ಕಪತ್ರ, ಸಾಮಗ್ರಿ ಸರಬರಾಜು ಇತ್ಯಾದಿಗಳನ್ನೊಳಗೊಂಡ) ಇರುತ್ತಿತ್ತು.

*೭. ಅದೇ ೩.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್*

# ಸಂತೇಬೆನ್ನೂರುನಾಯಕರು - ಶೃಂಗೇರಿಮಠದ ದಾಖಲೆಗಳು

ವಿಜಯನಗರದ ಅರಸರ ಅಧೀನರಾಗಿದ್ದ ಸಂತೇಬೆನ್ನೂರು ನಾಯಕರು ಅವರ ನಂತರ ಸ್ವತಂತ್ರರಾಗಿಯೂ, ಆನಂತರ ಬಿಜಾಪುರದ ಆದಿಲ್‌ಷಾಹಿ, ಕೆಳದಿ, ಚಿತ್ರದುರ್ಗ ನಾಯಕರು, ಮರಾಠ, ಹೈದರ್-ಟಿಪ್ಪು ಕೈಕೆಳಗೆ ಸಾಮಂತರಾಗಿಯೂ ಆಡಳಿತ ನಡೆಸಿದರು. ಮುಂದೆ ಬ್ರಿಟಿಷ್‌ರೊಂದಿಗೂ ಹೋರಾಡಿ, ಆ ಸಾಮ್ರಾಜ್ಯದ ಉದಯದೊಂದಿಗೆ ತಮ್ಮ ಅಸ್ತಿತ್ವವನ್ನು ಕಳೆದುಕೊಂಡರು. ಅವರು ಮೂರು ಶತಮಾನಗಳ ಕಾಲ ಈಗಿನ ದಾವಣಗೆರೆ, ಚಿತ್ರದುರ್ಗ, ಚಿಕ್ಕಮಗಳೂರು, ಶಿವಮೊಗ್ಗ, ತುಮಕೂರು, ಹಾಸನ, ಹಾವೇರಿ ಜಿಲ್ಲೆಗಳ ವ್ಯಾಪ್ತಿಯಲ್ಲಿ ಆಡಳಿತ ನಡೆಸುತ್ತಿದ್ದುದಾಗಿ ಶಾಸನಗಳಿಂದ ತಿಳಿದುಬರುತ್ತದೆ.

ಈ ಸಂತೇಬೆನ್ನೂರುನಾಯಕರು ರಾಜ್ಯದ ಪ್ರಮುಖ ಧಾರ್ಮಿಕ ಕೇಂದ್ರವಾದ ಶೃಂಗೇರಿಮಠಕ್ಕೆ ಬರೆಯಿಸಿ ಕೊಟ್ಟ ಅಪ್ರಕಟಿತ ಮೂರು ಶಾಸನಗಳ ಪ್ರತಿ ಮಾಡಿರುವ ದಾಖಲೆಗಳು ಆ ಮಠದ ಕಡತದಲ್ಲಿ ಇರುವುದನ್ನು ಡಾ।। ಎ. ಕೆ. ಶಾಸ್ತ್ರಿಯವರು, ಈಚೆಗೆ ಪತ್ತೆ ಮಾಡಿದ್ದಾರೆ. ಈ ಅಪ್ರಕಟಿತ ದಾಖಲೆಗಳು ಸಂತೇಬೆನ್ನೂರು ನಾಯಕರು ಮತ್ತು ಶೃಂಗೇರಿ ಮಠದ ಸಂಬಂಧದ ಬಗ್ಗೆ ಅನೇಕ ವಿಷಯಗಳನ್ನು ತಿಳಿಸುತ್ತಿದ್ದು ಅವುಗಳ ಬಗ್ಗೆ ವಿದ್ವಾಂಸರ ಗಮನ ಸೆಳೆಯುವುದು ಪ್ರಸ್ತುತ ಪ್ರಬಂಧದ ಉದ್ದೇಶ.

ಅಂತೇ 'ಸಂತೇಬೆನ್ನೂರುನಾಯಕರು ಮತ್ತು ಕೂಡಲಿ ಮಠಗಳು*೧ ಎಂಬ ನನ್ನ ಹಿಂದಿನ ಮಂಡಿತ ಪ್ರಬಂಧದಲ್ಲಿ ಶೃಂಗೇರಿ ಮತ್ತು ಕೂಡಲಿ ಶೃಂಗೇರಿಮಠಗಳ ಕುರಿತ ನಡೆದ ವಿವಾದದಲ್ಲಿ ಸಂತೇಬೆನ್ನೂರು ನಾಯಕರು ಕೂಡಲಿ ಶೃಂಗೇರಿಮಠದ ಪರವಾಗಿ ನಿಂತು ಕೆಲಸ ಮಾಡಿದರೆಂದೂ, ಅಲ್ಲದೆ ಈ ಶೃಂಗೇರಿಮಠಕ್ಕೆ ಮೊದಲು ಬಿಟ್ಟಿದ್ದು ಅನೇಕ ದತ್ತಿ-ದಾನಗಳನ್ನು ಕೂಡ್ಲಿ-ಶೃಂಗೇರಿ ಹೊಸ ಮಠಕ್ಕೆ ಬಿಡಿಸಿ ಕೊಟ್ಟಿದ್ದರೆಂದೂ, ಇದರಿಂದ ಈ ನಾಯಕರ ಬಗ್ಗೆ ಶೃಂಗೇರಿಮಠಕ್ಕೆ ತೀವ್ರ ಅಸಮಧಾನ ಇದ್ದ ವಿಚಾರ ಆ ಮಠದ 'ಗುರುವಂಶ ಕಾವ್ಯ'ದಲ್ಲಿ ವ್ಯಕ್ತವಾಗಿದ್ದು ಈ ನಾಯಕರೊಡನೆ ಮಧುರ ಸಂಬಂಧವಿಲ್ಲದಿದ್ದ ಬಗ್ಗೆಯೂ ತಿಳಿಸಿದೆ.

ಈ ಹೊಸ ದಾಖಲೆ ಶಾಸನಗಳನ್ನು ಪರಿಶೀಲಿಸಿದಾಗ ಸಂತೇಬೆನ್ನೂರುನಾಯಕರು ಮೂಲಶೃಂಗೇರಿಮಠದ ಗುರುಗಳಿಗೂ ದತ್ತಿ, ದಾನ ನೀಡಿ ಗೌರವ, ಪುರಸ್ಕಾರ ಕೊಡುತ್ತಿದ್ದರೆಂದು ಸಾಬೀತಾಗುತ್ತದೆ. ಶೃಂಗೇರಿ ಮಠದ ಪ್ರಕಟಿತ ಒಂದು ಶಾಸನ,*೨ *'ಶೃಂಗೇರಿ ಹಿರೇಮಠದ ಧರ್ಮಕ್ಕೆ ದೇಮಪುರ ಗ್ರಾಮವನ್ನು ಕೊಟ್ಟಿದ್ದಲ್ಲಿ ಹಿರೇಮಠಕ್ಕೆ ಆ ಗ್ರಾಮ ನಡೆಸದೆ ಪರಸ್ಪರವಾಗಿ ಆದೆಯಂತೆ ಹಾಗಾಗಬಾರದು, ಯರನಾಡ ಸೀಮೆ ಒಳಗಣ ದಂದೂರು ಗ್ರಾಮವನ್ನು ಶೃಂಗೇರಿಹಿರೇಮಠಕ್ಕೆ ಕೊಟ್ಟಿದ್ದೆವು. ಈಗ ಆ ಗ್ರಾಮ ಯಾವ ಮಠದ ಧರ್ಮಕ್ಕೆ ನಡೆಯುತ್ತದೆ. ಈ ದೇಮಾಪುರ ಗ್ರಾಮವೂ ಹಾಗೇ ನಡೆಯಬೇಕು'* ಎಂದು ಶಾ.ಶಕ. ೧೫೪೭ನೇ ಕ್ರೋದನ ಸಂ।।ದ ಮಾರ್ಗಶಿರ ಬಹುಳ ೧೩ರಲ್ಲಿ ಸಂತೇಬೆನ್ನೂರು ಹನುಮಪ್ಪನಾಯಕರು ಬರೆಯಿಸಿಕೊಟ್ಟ ಆ ನಿರೂಪ ತಿಳಿಸುತ್ತದೆ.

ಇದೇ ಸಂತೇಬೆನ್ನೂರು ಹನುಮಪ್ಪನಾಯಕ ಬರೆಯಿಸಿಕೊಟ್ಟ ಶುಕ್ಲ ಸಂ।।ದ ಒಂದು ಶಾಸನ*೩ 'ನಿಂಮ ಅತ್ಯಂತ ಪ್ರಿಯಭಕ್ತರಾದ' ಎಂದೇ ಉಲ್ಲೇಖಿಸುತ್ತದೆ ಹಾಗು ಮಠದ ಸ್ವಾಮಿಗಳ ಯೋಗಾನುಷ್ಠಾನಗಳಿಗೆ ಸಹಕಾರ, ಸಹಾಯ ನೀಡಿದ್ದಾಗಿ ತಿಳಿಸುತ್ತದೆ. ಸರಜಾಹನುಮಪ್ಪನಾಯಕ ಬರೆಯಿಸಿಕೊಟ್ಟ ಒಂದು ನಿರೂಪದಲ್ಲಿ*೪ ಈ ಮಠಕ್ಕೆ ಯಾರಾದರೂ, ಹರಕತು ಮಾಡಿದಲ್ಲಿ, ತಕ್ಕನಶಿಯತ್ತು ಮಾಡುವಲ್ಲಿ ಅಂತರವಿಲ್ಲ ಎಂದು ತಿಳಿಸುತ್ತಾರೆ.

ಕಡತ-೩*೫ ತಾಮ್ರಶಾಸನದ ಪ್ರತಿಯೊಂದರ ರೀತ್ಯಾ ತರೀಕೆರೆ ಹನುಮಪ್ಪನಾಯಕರು ಶಾರ್ವರಿ ಸಂ।।ದ ಕಾರ್ತೀಕ ಶುದ್ಧ ೧೨ರಲ್ಲಿ ಶೃಂಗೇರಿ ಸಚ್ಚಿದಾನಂದಭಾರತಿಸ್ವಾಮಿಗಳಿಗೆ ಶಿವನೆಸ್ಥಳದ ದಂದೂರು ಗ್ರಾಮವನ್ನು ಶ್ರೀ ಶಾರದಾಂಮನವರ ಸೇವಾರ್ಥ ಸಮರ್ಪಿಸಿದುದಾಗಿದೆ.

ಈವರೆಗೆ ದೊರೆತ ಈ ನಾಯಕರ ಶಾಸನಗಳಲ್ಲಿ ಎಲ್ಲಿಯೂ ತರೀಕೆರೆನಾಯಕರೆಂದು ಪ್ರಸ್ಥಾಪಿತವಾಗದೆ, ಈ ಕಡತದಲ್ಲಿ ದೊರೆತಿರುವ ತಾಮ್ರಶಾಸನದ ಪ್ರತಿಯಲ್ಲಿ ಮತ್ತು ಲೇಖನದಲ್ಲಿ*೬ ಮಾತ್ರ ತರೀಕೆರೆ ಹನುಮಪ್ಪನಾಯಕರೆಂದು ಪ್ರಸ್ತಾಪಿಸಲ್ಪಟ್ಟಿರುವುದು ಗಮನಾರ್ಹ.

ಈ ಕಡತದಲ್ಲಿ ಪ್ರಸ್ತಾವಿತವಾದ ದಂದೂರು ಗ್ರಾಮವನ್ನು ಕೂಡ್ಲಿ-ಶೃಂಗೇರಿ ಮಠದ ಲೇಖನ-೫೯*೭ರಂತೆ ಆ ಮಠಕ್ಕೆ ೧೬೮೫ರಲ್ಲಿ ಮರಳಿ ಕೊಡಿಸಿದ್ದು ಮುಂದೆ ಸಂತೇಬೆನ್ನೂರು ನಾಯಕರೊಂದಿಗೆ ಮೂಲ ಶೃಂಗೇರಿ ಮಠದ ಸಂಬಂಧ ಹಳಸಲು ಕಾರಣೀಭೂತವಾಯಿತೆಂಬುದು ಇಲ್ಲಿ ಗಮನಿಸಬೇಕಾದ ಅಂಶ. ಈ ಕಡತದ ದಾಖಲೆಯಂತೆ ಇನ್ನು ಎರಡು ಕಡತದ ದಾಖಲೆಗಳಲ್ಲಿ ಈ ತಾಮ್ರ ಶಾಸನದ ಪ್ರತಿ ಇರುವುದಾಗಿ ತಿಳಿದುಬರುತ್ತದೆ.

ಕಡತ-೧೦೨*೮ರಲ್ಲಿ ಈ ನಾಯಕರ ಅಧಿಕಾರಿಗಳಾದ

*ವರದಿಗಾರ, ಪ್ರಜಾವಾಣಿ ದೈನಿಕ, ಸಂತೇಬೆನ್ನೂರು - ೫೭೭೫೫೨, ದಾವಣಗೆರೆ ಜಿಲ್ಲೆ.

ಆಮೀಲ, ಕಿಲ್ಲೇದಾರ, ಸಿರಸ್ತಾರ್‍ರು, ಅಂಚೆ-ಮುತ್ಸದ್ದಿ, ಗಲುಡ, ಶ್ಯಾನಭೋಗ, ರಿಸಾಲದಾರ್‍ರು, ಹೋಬಳಿದಾರ್‍ರು ಮುಂತಾದ ಅಧಿಕಾರಿಗಳ ಹೆಸರಿಸಿದ್ದು ಆಗಿನ ಕಾಲದ ಕಂದಾಯ ಇಲಾಖೆಯ ಅಧಿಕಾರಿಗಳ ಬಗ್ಗೆ ಮಾಹಿತಿ ಒದಗಿಸುತ್ತದೆ.

ಈಗ ದೊರೆತಿರುವ ಈ ಮೂರು ಶಾಸನಗಳಲ್ಲಿ ಒಂದು ಶೃಂಗೇರಿಮಠಕ್ಕೆ ಕೊಡಲ್ಪಟ್ಟ ರಹದಾರಿ ಪತ್ರವಾಗಿದ್ದು, ಇನ್ನೊಂದು ತಾಮ್ರಶಾಸನದ ಪ್ರತಿಯಾಗಿದೆ. ಮತ್ತೊಂದು ಮಠದ ಸ್ವಾಮಿಗಳಿಗೆ ಬರೆದುಕೊಂಡ ಬಿನ್ನವತ್ತಳೆ ಪತ್ರವಾಗಿದೆ.

ಮೇಲಿನ ಮೂರು ಶಾಸನಗಳ ಪ್ರತಿ ಮಾಡಿದ ದಾಖಲೆಗಳು ಹಾಗು ಶೃಂಗೇರಿಮಠದ ದಾಖಲೆಗಳಲ್ಲಿ ಪ್ರಕಟವಾದ ಇನ್ನೊಂದು ಲೇಖನ ಸೇರಿ ಒಟ್ಟು ನಾಲ್ಕು ಶಾಸನಗಳಿಂದ ಸಂತೇಬೆನ್ನೂರು ನಾಯಕರ ಈವರೆವಿಗೆ ದೊರೆತ ಶಾಸನ ಸನ್ನದು ಲೇಖನಗಳ ಒಟ್ಟು ಸಂಖ್ಯೆ ೫೦ಕ್ಕೆ ಏರಲ್ಪಟ್ಟಿದೆ. ಸಂತೇಬೆನ್ನೂರುನಾಯಕರ ಬಗ್ಗೆ ಇನ್ನಷ್ಟು ವ್ಯಾಪಕ ಸಂಶೋಧನೆ ಮಾಡಿದಲ್ಲಿ, ಇತರ ಮಠದ ಕಡತಗಳಲ್ಲಿಯೂ ಅನೇಕ ಶಾಸನಗಳು ಅಥವಾ ಅವುಗಳ ಪ್ರತಿ ಸಿಗುವ ಸಂಭವವಿದೆ.

*ಕಡತ-ದಾಖಲೆ - ೧*

*ಪು. ೧೬೩ಕ. ೧೦೨, ದಾ. ೭೩*

೧ ಸಂತೆಬೆಂನೂರ ಸರಜಾ ಹನುಮಪ್ಪ ನಾ
೨ ಯಕರು ಬರಶಿಕೊಟ ರಹದಾರ್‍ರಿ ಪ್ರತ್ತಿ।
೩ ಶೃಗೇರಿ ಜಗದ್ಗುರ್‍ರು ಸ್ವಾಮಿಯವರ್‍ರ
೪ ಸಂಸ್ಥಾನದ ಬಗ್ಯೆ
೫ ಖರಸಂವತ್ಸರದ ಅಧಿಕ ವೈಶಾಖ ಬ ೧೪ ಲ್ಲು।
ಸಂತೆಬೆಂನೂರ್‍ರ ಸರಜಾ
೬ ಹನುಮಪ್ಪ ನಾಯಕರ್‍ರು ಯಿಕೆರ್‍ರಿ ಶಿಮೆ ಗಡ್ಡಿಗಳ ಆಮೀಲ।
೭ ಕಿಲ್ಲೆದಾರ್‍ರು ಸಿರಸ್ತಾರ್‍ರು। ಅಂಚೆ ಮುತ್ಸದ್ದಿ। ಗಲುಡ ಪ್ರಜೆಗಳು।
೮ ಶ್ಯಾನಭಾಗರ್‍ರು ರ್‍ರಿಸಾಲದಾರ್‍ರು ಹೊಬಳಿದಾರ್‍ರು ವಗೈರೆಗೆ।
೯ ಬರಶಿಕಳುಹಿಶಿದ ಕಉಲು ರಹದಾರ್‍ರಿ ನಿರೂಪ ಅದಾಗಿ।
೧೦ ಶ್ರೀ ಜಗದ್ಗುರ್‍ರು ಸ್ವಾಮಿಯವರ ಸಂಸ್ಥಾನ ಅಗ್ರಹಾರಗಳು
೧೧ ಸಂಸ್ಥಾನಕೆ ಸೆರ್‍ರಿದ ಗ್ರಾಮಗಳು। ಪೆಠೆ ಮುಂತ್ತಾದ ಕಡೆಗೆ। ನಂ
೧೨ ಮಲ್ಲಿಯವರು ವಬ್ಬರಾದ್ರೂ ಹೊಗಿ। ಹಂಗಾಮು
೧೩ ಮಾಡತಕ್ಕ ಕೆಲಸವಿಲ್ಲ। ನಾಲು ಕಉಲು ಕೊಟು ಯಿ

*ಪು. ೧೬೪*

೧ ರುವದರ್‍ರಿಂದ। ಯಾರಾದರ್‍ರು ಹಂಗಾಮು ಮಾಡ್ಡಿದಲ್ಲಿ।
೨ ತಕ್ಕ ನಶಿಯತು ಮಾಡುವಲ್ಲಿ ಅಂತ್ತರವಿಲ್ಲ। ತಿಳಿದು ಯಿ
೩ ರುವದು। ಸದರ್‍ರಿ ಬರದಿರುವ ಮ್ಯಾರೆಗೆ। ತಿಶತ್ತು ಆ
೪ ಸಂಸ್ಥಾನದ ಮೆಲಿ। ಯಾರಾದರ್‍ರು ಹರಕತು ಮಾಡ್ಡಿದಲ್ಲಿ।
೫ ತಕ್ಕ ನಶಿಯತ್ತು ಮಾಡುವಲ್ಲಿ ಅಂತ್ತರವಿಲ್ಲ। ಶ್ರೀಕಾರದ
೬ ಗುರುತ್ತು ಆಗಿಯಿದೆ।

*ಕಡತ ದಾಖಲೆ - ೨*

*ಪು. ೩ ಕ. ೧೨೨, ದಾ*

೧ ಯೀಬಗೆ।
೨ ತರಿಕೆರ್‍ರೆ ಹನು[ಮ]ಪ್ಪ ನಾಯಕರು
೩ ದಂದೂರ ಗ್ರಾಮಕ್ಕೆ ಸಮರ್ಪಿದಕೆ ತ್ತಾಂಬ್ರಶಾಸನ ಪ್ರತ್ತಿ।
೪ ಶ್ರೀ ಗಣಾಧಿಪತ್ತಯೆ ನಮಃ। ನಮಸ್ತುಂಗ ಶಿರಚ್ಚುಂಬಿ ಚಂದ್ರಚಾ
೫ ಮರಚಾರವೆ। ತ್ರೈಲೊಕ ನಗರಾರಂಭ। ಮೂಲಸ್ತಂಭಾಯ ಶಂ
೬ ಭಾಯ ಶಂಭವೆ। ಶ್ರೀ ಮಾನಾವಿವರ ಹೊಯಃ। ಶ್ರೀಯಂ ವಿ
೭ ಶತ್ತು ಭೂಯಸಿಂ। ಗಾಡಮಾಲಿಂಗತಾಯೆನ ಮಥಿನಿ ಮೊ
೮ ದಕೆ ಸದಾ। ದೊಡ ಬಿರುದಾವಳಿನಿಕ್ಕಿ। ಶ್ರುಂಗೆರಿ ಶ್ರೀಸಚ್ಚಿದಾ
೯ ನಂದ ಭಾರತ್ತಿ ಸ್ವಾಮಿಗಳವರ ದಿವ್ಯ ಶ್ರೀಪಾದ ಪದ್ಮಂಗಳಿಗೆ। ಶಾ
೧೦ ರ್ವರಿ ಸಂ। ಕಾರ್‍ತ್ತಿಕ ಶು ೧೨ಲು। ಶ್ರೀಮತ್ತು। ಸಂಥೆ ಬೆಂನೂರ
೧೧ ಹನುಮಪ್ಪ ನಾಯ್ಕಿರು। ಮಾಡು ಬಿಂನಹಾ ನಂಮ ಯರನಾಡ
೧೨ ಸಿಮೆಯೊಳಗಣ ಶಿವನೆ ಸ್ಥಳದ ದಂದೂರ ಗ್ರಾಮಉ। ಶ್ರೀ
೧೩ ಶಾರದಾಂಮನವರ ದೆವತ್ತಾ ಸೆವೆಗೆ। ರಾಯದತ್ತವಾಗಿ ಆದಿ
೧೪ ಆರಭ್ಯ।ವಾಗಿ ಸಲುವಂಥಾದು। ಅದೆ ರಿತ್ತಿ ದೆವತ್ತಾ ಸೆವೆಗೆ

*ಪು. ೪*

೧ ನಡವ ಹಾಗೆ ಮಾಡ್ಲಬೆಕ್ಕೆಂದು। ನಿಂಮ ಶಿಷ್ಯರು। ಕಳುಹಿ
೨ ಶ್ರುತ್ತ ಮಾಡ್ಡಸಲಾಗಿ। ನಂಮ ಅರಮನೆ ಹವಾಲಾಗಿದ ಆ
೩ ದಂದೂರ ಗ್ರಾಮವಂನು ಅದೆ ಪ್ರಕಾರದಲ್ಲಿ। ಶ್ರೀ ಶಾರದಾಂಮ
೪ ನವರ ಸೆವಾರ್ಥವಾಗಿ ಕಾರ್‍ತ್ತಿಕ ಶು ೧೨ ಪುಂಣ್ಯ ಕಾಲದಲ್ಲಿ
೫ ಧಾರಾಪೂರ್ವಕವಾಗಿ ಸಮರ್ಪಿಸ್ತೆಉ। ಯಿಗ್ರಾಮದ ಸರ್ವೊ
೬ ತ್ಪತ್ತಿಯಂನು। ಆ ಚಂದ್ರಾರ್ಕವಾಗಿ ದೆವತ್ತಾ ಸೆವೆಗೆ ನಡ್ಲಬೆಕಾ
೭ ಗಿ। ಸ್ವದತ್ತಂ ಎಂಬ ಗ್ರಂಥ ೧ ದಾನಪಾಲನಯೊರ್ಮಧ್ಯೆ।
೮ ಯಂಬ ಗ್ರಂಥಗ ಏಕೈವ ಭಗಿನಿ ಲೊಕ್ಕೆ ಸರ್ವಪಾವೆ ವ ಭೂ
೯ ಭುಜಾಂ। ನಭೊಜ್ಯ ನಕರಗ್ರಾಹ್ಯಂ। ವಿಪ್ರದತ್ತಾ ವಸುಂಧರಾ।
೧೦ ಶ್ರೀರಾಮ ಎಂದು ಕಂನಡದಲ್ಲಿ ವಪ್ಪ ಹಾಕ್ಕಿ ಅದೆ। ಯಥಾ ಪ್ರತ್ತಿ।

*ಟಿಪ್ಪಣಿ :* ಕಡತ ೫೨ ಮತ್ತು ೧೦೧ರಲ್ಲಿ, ಕ್ರಮವಾಗಿ, ನಮೂದಿತವಾದ ೨೮ ಮತ್ತು ೪೬ನೇ ದಾಖಲೆಗಳೂ ಕೂಡ ಮೇಲ್ಕಾಣಿಸಿದ ತಾಮ್ರಶಾಸನದ ಪ್ರತಿಗಳೇ ಆಗಿರುತ್ತವೆ.

*ಕಡತ ದಾಖಲೆ - ೩*

*ಪು. ೧೦೮ಕ. ೧೬೭, ದಾ. ೧೦೧*

೧ ಶುಕ್ಲ ಸಂ।ದ। ಶ್ರಾವಣ ಬ ೩೦ ಲು ಬಂದದು।
೨ ತ್ತರಿಕೆರೆ ಅರಸುಗಳು ಬರದ ಬಿಂನವತ್ತಳೆ ಪ್ರತ್ತಿ।
೩ ದೊಡ ಬಿರದಾವಳಿ ಬಿರದಾವಳಿ ಬರದು।
೪ ನಿಂಮ ಅತ್ಯಂತ್ತ ಪ್ರಿಯ ಭಕ್ತರಾದ। ಸಂತೆಬೆಂನೂರ।
ಹನುಮಪ್ಪ ನಾಯಕರು। ಸಾಷ್ಟಾಂ।
೫ ಗವಾಗಿ ನಮಸ್ಕಾರಸಿ ಮಾಡುವ ಬಿಂನಹಾ। ನಾಲು
ಪರಿಣಾಮದಲ್ಲಿ ಯಿದೆವೆ। ನಿಂಮು।

೬ ತಪಂ ಪ್ರಭಾವಳಿಗೆ ಬುದಿಗೆಲ್ಲಿ ಬರಸಿ ಕಳಹ ಚಿತ್ತೈಯಿಸುವ ಹಾಗ್ಯೆ। ಮಾಡಸಬೆಕ್ಕು।

೭ ಪೂರ್ವಾಭ್ಯದಿಂದಲೂ ಯೀ ಸಂಉಸ್ಥನದ ಶ್ರೆಯೊ ಲಾಭಗಳೆನಿದ್ದರೂ। ಸ್ವಾಮಿಯವ।

೮ ರನೆ ಕೂಡಿಯಿರುವಲ್ಲಿ। ನೂತ್ತನವಾಗಿ ಬರಸಿ ಕಳುಹಸಬೆಕೆಂಬದಿಲ್ಲವಷ್ಟೆ। ಸಾಂಪ್ರತ್ತ।

೯ ಸಂನಿದಿಗ್ಯ। ಅಭಿಶೆಖದ ಬಗೆಸ್ತೆ ತಾಉ ಸ್ವಾಮಿಯವರ ಯೊಗಾನುಷ್ಟಾನಗಳಿಗೆ।

೧೦ ವಮ್ರ ಚಂರ್ಮ ಸಹಾ ನಂಮ ರಾಮೆಲಿಂಗಾಶಾಸ್ತ್ರಿ ಹರೆಕಾರ ರಾಮನ ಸಂಗಡ। ಕಳು।

೧೧ ಹಿಸ್ತ ಯಿದಿತ್ತೆ ನಂನ ಮೆಲಣ ತಾತ್ಪರ್ಯಾತ್ರಿಶಯದಿಂದಲು। ಬರಮಾಡಿಸುವ ಹಾಗೆ ಮಾ।

೧೨ ಡುವದು। ಮೆಲೆಲ್ಲಾ। ಬಂದವರೂ ಅರಿಕೆ ಮಾಡಿದಲ್ಲಿ। ದಿವ್ಯಚಿತ್ತಕೆ ತ್ರಂದು। ಆ ವಿವ।

೧೩ ರಗಳಿಗೂ ತಂಮ ಯೊಗಾಭ್ಯುದಯಗಳಿಗೆ ಸಹಾ। ಅಗ್ಯ ಅಗ್ಯೆ ಬುದಿಗಲಿಸಿ।

೧೪ ಬರಸಿ ಕಳುಹ ಚಿತಯಿಸುವ ಹಾಗೆ ಮಾಡಸಬೆಕಾಗಿ। ಯಿಂತ್ರಿ ಬಿಂನಹಾ।

೧೫ ಯಂದು ಬರದ ಬಿಂನವತ್ತಳೆ ೧ ಬಂದಲ್ಲಿ। ತ್ರಿಂಮನ ಹಸ್ತ।



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಇತಿಹಾಸ ದರ್ಶನ, ಸಂಪುಟ ೧೫/೨೦೦೦, ಲೇಖನ ೫೩.
*೨. ಸೆಲೆಕ್ಷನ್ ಫ್ರಂ ದಿ ರೆಕಾರ್ಡ್ಸ್ ಆಫ್ ದಿ ಶೃಂಗೇರಿ ಮಠ್, ಸಂಪುಟ-೧ (೧೯೨೭) ಲೇಖನ-೩೦.
*೩. ಶೃಂಗೇರಿ ಮಠದ ಕಡತ-೧೬೭, ದಾಖಲೆ ೧೦೧.
*೪. ಅದೇ, ೧೦೨, ದಾಖಲೆ ೭೩.
*೫. ಅದೇ, ೧೨೨, ದಾಖಲೆ ೨.
*೬. ಅದೇ, ೧೨೨ ಮತ್ತು ೧೬೭.
*೭. ಶ್ರೀಕೂಡ್ಲೀ-ಶೃಂಗೇರೀ ಸಂಸ್ಥಾನದ ಪ್ರಾಚೀನ ಶಾಸನ ಲೇಖನ ಸಂಗ್ರಹ ಭಾಗ-೧ (೧೯೬೫).
*೮. ಶೃಂಗೇರಿ ಮಠದ ಕಡತಗಳು.

ಡಾ. ಚೆನ್ನಕ್ಕ ಪಾವಟೆ*

# ಕಿತ್ತೂರು ರಾಣಿ ಚೆನ್ನಮ್ಮ ಕಂಪನಿ ಸರಕಾರದ ಪತ್ರವ್ಯವಹಾರಗಳು

ಕಿತ್ತೂರು ಸಂಸ್ಥಾನದ ಪ್ರಾಚ್ಯ ಇತಿಹಾಸ ದಾಖಲೆಗಳಿಗೆ ಸಂಬಂಧಪಟ್ಟಂತೆ ೧೯೪೫-೪೭ರಲ್ಲಿ 'ಕಿತ್ತೂರು ರಾಣಿ ಚೆನ್ನಮ್ಮ ಇತಿಹಾಸ ಮಂಡಲ' ಕಾರ್ಯಪ್ರವೃತ್ತವಾಯಿತು. ಸಂಸ್ಥಾನದ ಆಡಳಿತಕ್ಕೆ ಸಂಬಂಧಪಟ್ಟಂತೆ ಕಾಗದ ಪತ್ರಗಳು, ಸನದು, ಕೈಫಿಯತ್ತು ತಾಮ್ರಪಟ, ನಾಣ್ಯ, ಶಿಲ್ಪ, ಚಿತ್ರ, ನಾಟಕ, ಪದ, ಪದ್ಯ ಲಾವಣಿ, ಸೋಬಾನಪದಗಳು, ಅವರ ಆಯುಧ, ಪೋಷಾಕು, ಇತರ ವಸ್ತು ಒಡವೆಗಳನ್ನು, ಐತಿಹಾಸಿಕ ಮಹತ್ವವುಳ್ಳ ವಿಭಿನ್ನ ದಾಖಲೆಗಳನ್ನು ಸಂಗ್ರಹಿಸುವ ಕಾರ್ಯ ಪ್ರಾರಂಭವಾಯಿತು. ಇತಿಹಾಸ ಮಂಡಲ ಪ್ರಾರಂಭವಾದ ಎರಡು ಮೂರುವರ್ಷಗಳಲ್ಲಿ ಸಂಸ್ಥಾನಕ್ಕೆ ಸಂಬಂಧಿಸಿ *'ಕಿತ್ತೂರು ಬಂಡಾಯಿ', 'ಮಲ್ಲಸರ್ಜ ಕಾವ್ಯ', 'ದೊರೆ ಮಲ್ಲಸರ್ಜ ದುಂದುಮಿ',* ಮತ್ತು *'ಫಾರ್ಸಿ ಕಾಗದ ಪತ್ರಗಳು'* ಎಂಬ ನಾಲ್ಕು ಸಂಶೋಧನಾತ್ಮಕ ಕೃತಿಗಳನ್ನು ಪ್ರಕಟಪಡಿಸಿತು. ಅಂದು ಇತಿಹಾಸ ಮಂಡಲ ಸಂಸ್ಥಾನದ ಪರವಾಗಿ ಸಂಗ್ರಹಿಸಿದ ಕಾಗದ ಪತ್ರ ದಾಖಲೆಗಳ ಸಂಖ್ಯೆ ಹತ್ತು ಸಾವಿರಕ್ಕೆ ಮಿಕ್ಕಿತ್ತು. ಅಂದು ಇತಿಹಾಸ ಮಂಡಲ ಪ್ರಕಟಪಡಿಸ ಬೇಕಿದ್ದ ಕೃತಿಗಳ ಮಾಲಿಕೆಯಲ್ಲಿ *'ಕಿತ್ತೂರು ರಾಣಿ ಚೆನ್ನಮ್ಮ ಕಂಪನಿ ಸರಕಾರದ ಪತ್ರವ್ಯವಹಾರಗಳು'* ಕೃತಿ ಅತ್ಯಲ್ಪಕಾಲದಲ್ಲಿ ವಿಸರ್ಜಿತಗೊಂಡ ಇತಿಹಾಸ ಮಂಡಲದಿಂದ ಪ್ರಕಟವಾಗದೇ ಹೋಯಿತು. ಮಲ್ಲಸರ್ಜಕಾಲ್ಲದ ಬೆನ್ನು ಪುಟದ ಮೇಲೆ ಅದು ಪ್ರಕಟನೆಯಲ್ಲಿರುವದಾಗಿ ಪ್ರಕಟಿತವೂ ಆಯಿತು. ಆದರೆ ಪ್ರಕಟವಾಗದೆ ಹೋಯಿತು. ಆಗ ಈ ಕೃತಿಗಾಗಿ ಸಂಗ್ರಹಿಸಿದ ಪತ್ರಗಳು ನಮಗೆ ದೊರಕಿದವು ಒಟ್ಟು ೪೫.

ಕಿತ್ತೂರು ಸಂಸ್ಥಾನದ ಇತಿಹಾಸದ ಸಂಗ್ರಹಕ್ಕಾಗಿ ನಾನು ಕ್ಷೇತ್ರ ಕಾರ್ಯ ಕೈಗೊಂಡ ಸಂದರ್ಭದಲ್ಲಿ ಅಂದು ಕಿತ್ತೂರು ಚೆನ್ನಮ್ಮ ಇತಿಹಾಸ ಮಂಡಲದ ಕಾರ್ಯಾಧ್ಯಕ್ಷರಾಗಿ ಕೆಲಕಾಲ ಮಹತ್ವದ ಕಾರ್ಯಕೈಕೊಂಡ ಶ್ರೀಯುತ ತಲ್ಲೂರು ರಾಯಿತಗೌಡರು ಸಂಗ್ರಹಿಸಿದ ಸಂಗ್ರಹದಲ್ಲಿ ಈ ಪತ್ರಗಳು ಲಭಿಸಿವೆ. ಈ ಸಂಗ್ರಹದಲ್ಲಿ ಕೆಲವು ಪತ್ರಗಳು ಮರಾಠಿ ಮಿಶ್ರಿತ ಪಾರ್ಸಿಭಾಷೆ ಮೋಡಿಲಿಪಿಯಲ್ಲಿದ್ದರೆ, ಇನ್ನು ಕೆಲವು ಮರಾಠಿ ಭಾಷೆ ಮೋಡಲಿಪಿಯಲ್ಲಿವೆ.

*ಕಿತ್ತೂರು ಸಂಸ್ಥಾನದ ಫಾರ್ಸಿ ಪತ್ರವ್ಯವಹಾರಗಳು*

ಕಿತ್ತೂರು ಸಂಸ್ಥಾನವು ೧೫೮೫ನೆಯ ಇಸ್ವಿಯಲ್ಲಿ ಹುಟ್ಟಿ ೧೮೨೪ನೆಯ ಇಸ್ವಿಯಲ್ಲಿ ಸಮೂಲನಾಶ ಹೊಂದಿತಷ್ಟೇ. ಮೊಗಲ ಬಾದಶಹ ಔರಂಗಜೇಬನು ೧೬೮೬ನೆಯ ಇಸ್ವಿಯಲ್ಲಿ ವಿಜಯಪುರದ ಬಾದಶಹನನ್ನು ಸೋಲಿಸಿ ಅವನ ರಾಜ್ಯವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನಂತರ ಕಿತ್ತೂರು ಸಂಸ್ಥಾನದ ಸಂಬಂಧವು ಪೇಶ್ವೆಯವರ ಕೂಡ ಹೆಚ್ಚಾಗಿ ಬೆಳೆಯಿತು. ೧೮೧೮ನೆಯ ಇಸ್ವಿಯಲ್ಲಿ ಪೇಶ್ವಾಯಿಯ ಆಡಳಿತ ಅಂತ್ಯವಾಗಲು ೧೮೨೪ನೆಯ ಇಸ್ವಿಯಲ್ಲಿ ಈಸ್ಟ ಇಂಡಿಯಾ ಕಂಪನಿ ಸರಕಾರದವರು ಕೊಟ್ಟ ಸನದಿನ ಪ್ರಕಾರ ಸಂಸ್ಥಾನವು ಕಂಪನಿಯ ವಶಕ್ಕೆ ಸೇರಿಸಲ್ಪಟ್ಟಿತು.

ಕಿತ್ತೂರು ಸಂಸ್ಥಾನ ಬ್ರಿಟೀಷರ ಕೈವಶವಾದ ತರುವಾಯ ಕಿತ್ತೂರು ಚೆನ್ನಮ್ಮ ಶಿವಲಿಂಗರುದ್ರಸರ್ಜನ ಮಡದಿ ವೀರಮ್ಮರನ್ನು ಬಂಧನದಲ್ಲಿರಿಸಿತಷ್ಟೇ. ಆಗ ಕಂಪನಿ ಸರಕಾರ ಇವರೀರ್ವರ ಜೀವನ ನಿರ್ವಹಣೆಗಾಗಿ ಪ್ರತಿ ತಿಂಗಳೂ ಸಾದಿಲವಾರ ಖರ್ಚಿನಂತೆ ಎರಡು ಸಾವಿರದ ಐದುನೂರು ರೂಪಾಯಿಗಳನ್ನು ನಿಯಮಿತವಾಗಿ ಕಳಿಸಿದ ದಾಖಲೆಗಳೇ ಈ ಪತ್ರಗಳು. ಕಿತ್ತೂರು ಸಂಸ್ಥಾನ ನಿರ್ನಾಮಹೊಂದಿ ಶಿವಲಿಂಗರುದ್ರಸರ್ಜನ ಮರಣಾನಂತರ ಅಂದರೆ ಈಗ ಅವನ ಮಡದಿ ವೀರಮ್ಮ ಕಿತ್ತೂರ ಸಂಸ್ಥಾನದ ಅಧಿಕಾರಿಣಿ. ಈ ನಾಲ್ವತ್ತೈದು ಪತ್ರಗಳಲ್ಲಿ ಚೆನ್ನಮ್ಮನನ್ನ ದ್ವಿತೀಯ ಸ್ಥಾನದಲ್ಲಿ ಹೆಸರಿಸಿದ್ದು ಗಮನಾರ್ಹ.

ಸಂಸ್ಥಾನದ ಜೊತೆ ಸಂಬಂಧವಿರಿಸಿಕೊಂಡ ಬ್ರಿಟಿಷ್ ಅಧಿಕಾರಿಗಳಲ್ಲಿ ಬೇಬರ್‌ಸಾಹೇಬ, ಹಲಟನ್, ನಿಸಬತ್, ಸಂಜಾನ ಮಾಲಕಮ್ ಇಲಿಯಟ್, ಬಾಲ್, ಫ್ರಿಜ್, ಸ್ಟಿವಿಂಗುಸನ್, ಮೆಸ್ತರ್‌ಜೋಷಿಯಾ, ಜೋಷಪ್ ಮುಂತಾದವರ ವಕ್ಕಣಿಕೆ ಪತ್ರಗಳಿದ್ದು ಇವರೆಲ್ಲ ತಮ್ಮನ್ನು ಬಹಾದ್ದೂರ, ಸರ್, ಕಲೆಕ್ಟರ್, ಅಸಿಸ್ಟೆಂಟ್ ಕಲೆಕ್ಟರ್, ಪೊಲಿಟಿಕಲ್ ಏಜೆಂಟ್, ಎಂದೆಲ್ಲ ಕರೆದು ಕೊಂಡಿರುವರು. ಇವರ ಪತ್ರ ಬರವಣಿಗೆಯೂ ಮಹತ್ವಪೂರ್ಣವಾಗಿವೆ. official ಪತ್ರಗಳು ಗಂಭೀರ ಭಾಷೆಯಲ್ಲಿ ಪ್ರಾರಂಭವಾಗಿ ಬ್ರಿಟಿಷ ಅಧಿಕಾರಿಗಳ ಹೆಸರು, ಅವರು ವಹಿಸಿದ್ದ ಅಧಿಕಾರದ ಸ್ಥಾನ ಹೆಸರಿಸಿ, ಹೇಳಲೇ ಬೇಕಾದ ವಿಷಯವನ್ನು ಗಂಭೀರವಾಗಿ ಬಿಚ್ಚುನುಡಿಯಲ್ಲಿ ಹೇಳಿದ ನಂತರ ಅಷ್ಟೇ ಆತ್ಮೀಯ ವಕ್ಕಣಿಕೆಯಿಂದ ಪತ್ರಗಳು ಮುಕ್ತಾಯಗೊಂಡಿವೆ. ಪ್ರತಿ ಪತ್ರದ

*ಪ್ರವಾಚಕರು, ಡಾ। ಆರ್. ಸಿ. ಹಿರೇಮಠ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩.

ಅಂತ್ಯದಲ್ಲಿ 'ತಮಗೆ ತಿಳಿದವರಿಗೆ ಹೆಚ್ಚಿಗೆ ಹೇಳಲಾಗದು', 'ಹಮೇಷಾ ಪತ್ರ ಕಳಿಸುತ್ತ ಮನಸ್ಸಿಗೆ ಸಂತೋಷ ನೀಡುತ್ತಿರಬೇಕು' ಎಂಬ ಪತ್ರದ ಫಲಶ್ರುತಿ ಬ್ರಿಟಿಷರ ವ್ಯವಹಾರ ಕುಶಲತೆಗೆ ಬಲವಾದ ಸಾಕ್ಷಿಗಳೆನಿಸಿವೆ.

ಬ್ರಿಟಿಷ್ ಅಧಿಕಾರಿಗಳ ಮತ್ತು ಕಿತ್ತೂರು ಸಂಸ್ಥಾನದ ಅಧಿಕಾರಿಗಳ ಮಧ್ಯದ ಹಣಕಾಸಿನ ವ್ಯವಹಾರದಲ್ಲಿ ಬೈಲಹೊಂಗಲ ಕೃಷ್ಣರಾವ್, ಜಮಾದಾರ, ಕಾರಕೂನ ಗೋವಪ್ಪ, ಗೋವಿಂದ ಶ್ರೀನಿವಾಸ ಇಟಗಿಕರ ಮುಂತಾದವರು ಭಾಗವಹಿಸಿರುವರು. ಬ್ರಿಟೀಷ್ ಸರಕಾರ ಸಂಸ್ಥಾನಿಕರಿಗೆ ಕೊಡಬೇಕಾದ ಪೋಟಗಿ ಹಣವನ್ನು ಕೆಲವು ಬಾರಿ ಮೇಲೆ ಉಲ್ಲೇಖಿಸಿದ ವ್ಯಕ್ತಿಗಳ ಮೂಲಕ ಕಳಿಸಿಕೊಟ್ಟದ್ದರೆ, ಇನ್ನು ಕೆಲವು ಬಾರಿ ಖಜಾನೆಗೆ ಜಮಾಮಾಡಿದ ಬಗ್ಗೆ ಸಂದೇಶ ಕಳಿಸಿರುವರು.

*ಸಂಸ್ಥಾನಿಕರಿಗೆ ಕೊಡಮಾಡಿದ ಸನದು*

ಕಂಪನಿ ಪತ್ರ ವ್ಯವಹಾರಗಳಲ್ಲಿ ಸುಮಾರು ೩೦ ಪತ್ರಗಳು ೨೫೦೦/-೦೦ ಸನದು ಕಳಿಸಿದ ಕುರಿತು ಬರೆದ ದಾಖಲೆಗಳಿವೆ - ಉಳಿದ ೨೫ ಪತ್ರಗಳು ಕಿತ್ತೂರು ಸಂಸ್ಥಾನ, ಕಂಪನಿ ಸರಕಾರದ ಆಡಳಿತದ ಮೇಲೆ ವಿಶೇಷಬೆಳಕು ಬೀರುವಂತಿವೆ.

ಮೊದಲನೆಯ ಪತ್ರ ಒಂಬತ್ತು ಜಾನುವಾರಗಳಿಗೆ ಸಂಬಂಧಿಸಿ ಬೇಬರ್ ಸಾಹೇಬ ಚೆನ್ನಪ್ಪ ಸರದೇಸಾಯಿಯವರಿಗೆ ಬರೆದುದು. ಸಂಸ್ಥಾನಿಕರಿಗೆ ಎರಡು ಸಾವಿರ ಶಹಪುರಿ ರೂಪಾಯಿ ಕಳಿಸಿಕೊಟ್ಟುದನ್ನು, ಎರಡನೆಯ ಪತ್ರ, ಜೂನ್ ತಿಂಗಳಲ್ಲಿ ಎರಡು ಸಾವಿರ ಐನೂರು ರೂಪಾಯಿ ಕಳಿಸಿದ್ದನ್ನು, ಮೂರನೆಯ ಪತ್ರ ತಿಳಿಸಿದರೆ, ನಾಲ್ಕನೆಯ ಪತ್ರ ಅಸಿಸ್ಟೆಂಟ್ ಕಲೆಕ್ಟರ್ ಹಲಟನ್ ಸಾಹೇಬರದಿದ್ದು, ಮತೇವಾಂ ಕುರಣ ಕೊಡುವ ಬಗ್ಗೆ ಸಂಪಗಾಂವ ಮೂಮಲೇದಾರರಿಗೆ ಹುಕುಂ ನೀಡಿದ ಬಗ್ಗೆ ಆಕರವಿದೆ. ಐದನೆಯ ಪತ್ರ ಮಾನಿನೀಯ ವೀರವ್ವ ಮತ್ತು ಚೆನ್ನವ್ವ ಸರದೇಸಾಯಿಣಿ ರಾಣಿಯರಿಗೆ ಬರೆದಿದ್ದು ಬೇಬರಸಾಹೇಬರು ಗೋವಪ್ಪ ಎಂಬವರ ಮೂಲಕ ಕಳಿಸಿದ ಪತ್ರ ಮುಟ್ಟಿದೆ. ಆಯಾ ತಿಂಗಳಿನ ಒಂಬತ್ತು ಖಜಾನೆಗೆ ಕಳಿಸಲಾಗಿದೆ. ತೊಲಗಿ ಬಸಪ್ಪನು ಕೋಟೆಯಲ್ಲಿ ಪ್ರವೇಶ ಮಾಡುವ ಬಗ್ಗೆ ಪರವಾನಿಗೆ ಇರಬೇಕೆಂದು, ಆತ ಕೇಳಿದ ಮುಂಗಡ ಕೊಡುವ ಪದ್ಧತಿ ಕಂಪನಿ ಸರಕಾರದಲ್ಲಿ ಇಲ್ಲ ಎಂಬುದರ ಬಗ್ಗೆ ಸೂಚಿಸುತ್ತ, ಸುಗ್ಗಿ ಕಾಲದಲ್ಲಿ ಕಾರ್ಯನಿರ್ವಹಿಸಲು ಅನುಕೂಲ ವಾಗಲೆಂದು ಅವನು ಹೊಂಗಲಕ್ಕೆ ಬಂದಾಗ ಹುಕುಂ ಮಾಡುವ ಬಗ್ಗೆ ಪ್ರಸ್ತಾಪ ಮಾಡಿರುವರು. ಹೊಂಗಲದ ಬಾಬೂರಾವ ತೊನಸಿಹಾಳ ಇವರ ಜಮೀನು ಚೌಕಾಸಿಯಾಗಿ ಕಾಯ್ದೆ ಪ್ರಕಾರ ಹುಕುಂ ಕೊಡುವ ಪ್ರಸ್ತಾಪ ಬೇಬರಸಾಹೇಬನ ಹದಿಮೂರನೆಯ ಪತ್ರದಲ್ಲಿದ್ದರೆ, ಸ್ಪಿವಿಂಗಸನ್ ಸಾಹೇಬನ ಪತ್ರ ಉಭಯಕುಶಲವನ್ನು ವಿಚಾರಿಸುತ್ತ, ಮನೆಯಲ್ಲಿ ಸಂತೋಷವಾಗಿದ್ದು ತಮಗೆ ಹಣ್ಣು ಹಂಪಲ ಕಳಿಸಲಾಗಿದೆ. ಉಳಿದ ಮಜಕೂರ ವೀರಪ್ಪ ಈತ ನಿಮಗೆ ತಿಳಿಸುವನು ಇಲ್ಲವಾದರೆ ತಪ್ಪಾಗುವದು' ಎಂದಿದ್ದು ಹದಿನೇಳನೆಯ ಪತ್ರದ ಫಲಶ್ರುತಿಯಾಗಿದೆ.

ಇವೆಲ್ಲಕ್ಕಿಂತ ಹೆಚ್ಚಿನ ಕುತೂಹಲಕಾರಿ ಅಂಶಗಳನ್ನು ಒಳಗೊಂಡ ಕೆಲವು ಅಪರೂಪದ ಐತಿಹಾಸಿಕ ಮೌಲ್ಯವನ್ನೊಳಗೊಂಡ ಪತ್ರಗಳಿವೆ. ಅದರಲ್ಲಿ ಒಂದು, ಬೈಲಹೊಂಗಲದ ಗುರುಸಿದ್ಧಯ್ಯ ಕಲ್ಮಠ ಅವರಿಗೆ ಕಂಪನಿ ಸರಕಾರದವರು ಹುಕುಂ ಮಾಡಿರುವರು. ವೀರಮ್ಮ ಮತ್ತು ಚೆನ್ನಮ್ಮ ದೇಸಾಯಿಯರ ಕಡೆಗೆ ಹೋಗ ಬೇಡಿರೆಂದು ಕೃಷ್ಣರಾವ ಮುಕ್ಕಾಂಬೈಲಹೊಂಗಲ ಇವರ ಹೆಸರಿನಿಂದ ಹುಕುಂ ಕೊಡಲಾಗಿದ್ದರೂ ಈ ಬಗ್ಗೆ ದೇಸಾಯಿಯರು ಶ್ರಾವಣಮಾಸದ ಪಾದಪೂಜೆಯ ಬಗ್ಗೆ ನಿಮ್ಮನ್ನು ಕರೆಕಳಿಸಲು ಪಾದಪೂಜೆಯ ಕಾರ್ಯವನ್ನು ಮಧ್ಯಕ್ಕೆ ಬಿಡಬೇಕಿದೆ. ಈ ಬಗ್ಗೆ ಗೋವಿಂದರಾವ್ ಶ್ರೀನಿವಾಸ ಕಾರಕೂನ ನಿಸಬತ ದೇಸಾಯಿ ಯವರ ಕಡೆಗೆ ಹೋಗಿ ಹೇಳಿ ಬರಲು ಅಪೇಕ್ಷೆ ಇಲ್ಲದ್ದು. ಸದರಿ ರೀತಿಯ ಜಾಹೀರ ಮಾಡಿದ್ದರಿಂದ ಗುರುಸಿದ್ಧಯ್ಯ ಕಲ್ಮಠರು ದೇಸಾಯಿಯರು ಪೂಜೆಗೆ ಬರಲು ತಿಳಿಸಿದ್ದರ ಮೇರೆಗೆ ಕಾರ್ಯದ ಮಟ್ಟಿಗೆ ಮಾತ್ರ ಹೋಗಬೇಕು. ಅದರ ಹೊರತು ಬೇರೆಯಾವುದೇ ದುರಾಲೋಚನೆ ಮತ್ತು ಸಲಹೆ ಕೊಟ್ಟರೆ ನಿಮಗೆ ಮೂಲ, ನಿಮ್ಮನ್ನು ಹೊರಗೆ ಕಳಿಸಲಾಗುವದು', ಎಂಬ ಸಂಶಯಪ್ರವೃತ್ತ ಬೇಬರ ಸಾಹೇಬನ ಪತ್ರ ತಾ। ಆಗಸ್ಟ್ ೧೮೨೭ ಇದ್ದುದನ್ನು ಗಮನಿಸಿದರೆ, ಕಿತ್ತೂರು ರಾಣಿಯರು ಕಂಪನಿ ಸರಕಾರದ ಕೈದುನಲ್ಲಿಯೂ ಕಿತ್ತೂರು ಸ್ವಾತಂತ್ರ್ಯದ ಕ್ಷಕಿರಣ ಕಾಣಲು ತವಕ ಪಡುತ್ತಿರುವ ಸೂಕ್ಷ್ಮ ಅಂಶ ವಿದಿತವಾಗುವದು.

ಕಂಪನಿ ಸರಕಾರದ ೨೩,೨೪ ಪತ್ರಗಳಲ್ಲಿ ಕೈವಶ ಪಡಿಸಿಕೊಂಡ ಕಿತ್ತೂರು ಸಂಸ್ಥಾನದ ಮೇಲೆ ಅಧಿಕಾರ ನಡೆಸಲು ಪ್ರಯತ್ನಿಸುವ ಮಹತ್ವದ ಅಂಶವಿದ್ದರೆ, ಕಳೆದು ಹೋದ ಸಂಸ್ಥಾನವನ್ನು ಮರಳಿ ಪಡೆವ ಯತ್ನ ಮಾಡುವಲ್ಲಿ ವೀರಮ್ಮ ಚೆನ್ನಮ್ಮರು ತಮ್ಮ ಅಧಿಕಾರವನ್ನು ಪುನಃ ಸ್ಥಾಪಿಸುವ ಕನಸು ಕಟ್ಟಿಕೊಂಡ ಅಂಶ ಇಲ್ಲಿದೆ. ಶ್ರೀಮಂತ ಮಹಾರಾಜ ಛತ್ರಪತಿಸಾಹೇಬ ರಾಜಮಂಡಲ ಕರವೀರ ಇವರ ಕಡೆಯಿಂದ ಜೇಜೂರಿಗೆ ಜಾತ್ರೆಗೆ ಹೋಗುವ ಜನರು ಹೊಂಗಲಕ್ಕೆ ಬರುತ್ತಾರೆ. ಅವರಿಂದ ದೇವನೂರ ಮೇಲಿಂದ ಪಾಶ್ಚಾಪುರಕ್ಕೆ ತಲುಪಿಸಬೇಕಿದ್ದು ಇದಕ್ಕೆ ಮಾರ್ಗದರ್ಶನದ ಪರವಾನಿಗೆ ನೀಡಲು ಬೇಬರ್‌ಸಾಹೇಬ 'ಮುದ್ದಾಂ' ಪತ್ರ ಬರೆದಿರುವರು.

ಇನ್ನು ಕೆಲವು ಪತ್ರಗಳಲ್ಲಿ ಪ್ರತಿ ತಿಂಗಳು ಕೊಡಬೇಕಾದ ಬಾಬತ್ತು ಕೆಲ ತಿಂಗಳಿಂದ ಸ್ಥಗಿತಗೊಂಡಿರಲು ಆಗಸ್ಟ್‌ನಿಂದ ಜನವರಿವರೆಗಿನ ಆರು ತಿಂಗಳಲ್ಲಿ ಎರಡುಸಾವಿರ ಐನೂರರಂತೆ ಹದಿನೈದು ಸಾವಿರ ರೂಪಾಯಿ ಪೈಕಿ ಹತ್ತು ಸಾವಿರ ರೂಪಾಯಿಗಳನ್ನು ಗೋವಪ್ಪ ಎಂಬವರ ಕೂಡ ಕಳಿಸಿಕೊಟ್ಟಿದ್ದು ಅದನ್ನು ಮತ್ತೆ ಮುಂದುವರೆಸುವಂತೆ ಖಜಾನೆಗೆ ಹುಕುಂ

ಕೊಟ್ಟಿರುವರು. ಈಗ ಕಳಿಸಿದ ಹಣದ ಬಗ್ಗೆ ಪಾವತಿ ಕಳಿಸಬೇಕೆಂದು ಜೋಷಿಯಾ ಕಲೆಕ್ಟರ್ ಪತ್ರ ಬರೆದಿರುವರು. ಇದರಿಂದ ಕಿತ್ತೂರು ಸಂಸ್ಥಾನ ರಾಣಿವರ್ಗದವರಿಗೆ ಪ್ರತಿ ತಿಂಗಳೂ ಕೊಡುವ ಸನದಿನಲ್ಲಿಯೂ ನಿಯಮಿತತೆ ಇಲ್ಲದುದು ಇಪ್ಪತ್ತೇಳನೆಯ ಪತ್ರದಿಂದ ತಿಳಿದು ಬರುವದು.

*ಉಭಯ ಮನಸ್ತಾಪದ ದಾಖಲೆಗಳು*

ಕಿತ್ತೂರು ಸಂಸ್ಥಾನಕ್ಕೆ ಸಂಬಂಧಿಸಿ ದೊರೆತ ಮೂವತ್ತು ಮೂವತ್ತೆರಡು ನಂಬರಿನ ಪತ್ರಗಳಲ್ಲಿ ಐತಿಹಾಸಿಕ ಮಹತ್ವದ ಅಂಶಗಳಿವೆ. ಇಲಿಯೆಟ್ ಮತ್ತು ಸ್ಪೀಚ್ ಎಂಬ ಅಧಿಕಾರಿಗಳು ಬರೆದ ಪತ್ರ ಇವಾಗಿದ್ದು ಕಿತ್ತೂರು ಸಂಸ್ಥಾನದ ವೀರಮ್ಮ ಮತ್ತು ಜಾನಕಿಬಾಯಿ ಯವರಿಗೆ ಚೆನ್ನಮ್ಮರಾಣಿ ಮರಣ ಹೊಂದಿದ ದುಃಖದ ವಿಷಯ ವ್ಯಕ್ತಪಡಿಸಿರುವರು. ಮುಂದಿನ ಪತ್ರದಲ್ಲಿ ಜೀವಿಸಿದ್ದ ಉಭಯ ದೇಸಾಯಣಿಯರಲ್ಲಿ ವೈಮನಸ್ಸು ಪ್ರಾರಂಭವಾಗಿದ್ದು. ಅವರು ಬೇರೆ ಬೇರೆ ಊಟ ಮಾಡುವದನ್ನು ಬಿಟ್ಟು ಒಂದಾಗಿರಬೇಕೆಂದು ಕಿವಿಮಾತು ವ್ಯಕ್ತಪಡಿಸಿದ್ದು ಕಂಪನಿ ಸರಕಾರದ ಕುಹಕತೆ. ಈ ಉಭಯ ಮನಸ್ತಾಪವೇ ಅಳಿದು ಹೋದ ಸಂಸ್ಥಾನ ಮರಳಿ ಕೈಗೂಡದೇ ಹೋದುದು ಗಮನಿಸಬೇಕಾದ ಸಂಗತಿ.

ಚೆನ್ನಮ್ಮ ವೀರಮ್ಮ ಅತ್ತೆ ಸೊಸೆಯರಲ್ಲಿ ವೈರತ್ವಹುಟ್ಟಿಸಿ ಲಾಭ ಪಡೆದ ಕಂಪನಿ ಸರಕಾರ ಚೆನ್ನಮ್ಮನ ಸೊಸೆ ಜಾನಕಿಬಾಯಿ, ಸಂಜಾನ ಮಾಲಕಿಯ ಸಾಹೇಬರಿಗೆ ಫಲ ಮಿಠಾಯಿಗಳನ್ನು ಕಳಿಸಿ ಆತ್ಮೀಯವಾಗಿ ವಿಚಾರಿಸಿಕೊಂಡ ಬಗ್ಗೆ ಪತ್ರವಿದ್ದು ಫಲಮಿಠಾಯಿಗಳು ಸಕಾಲಕ್ಕೆ ದೊರಕಿದ ಬಗ್ಗೆ ಸಂಜಾನ್ ಮಾಲಿಕಯರ ವಿಚಾರವೂ ಒಂದು ಪತ್ರದಲ್ಲಿದೆ. ಸಂಸ್ಥಾನದ ಒಡಕನ್ನರಿತ ಮಹಿಳೆಯರು ಅದರ ದುಷ್ಪರಿಣಾಮ ಗಮನಿಸದೇ ಕಂಪನಿ ಅಧಿಕಾರಿಗಳಿಗೆ ಹಣ್ಣು ಹಂಪಲ ಸಿಹಿ ಮಿಠಾಯಿ ಕಳಿಸಿ ಬ್ರಿಟೀಷ್ ಅಧಿಕಾರಿಗಳ ಆತ್ಮೀಯತೆ ಸಂಪಾದಿಸುವ ಪ್ರಯತ್ನವನ್ನು ಇಲ್ಲಿ ಅಲ್ಲಗಳೆಯುವಂತಿಲ್ಲ.

ಸಂಸ್ಥಾನದ ಜಾನಕಿಬಾಯಿ ಮತ್ತು ಚೆನ್ನಮ್ಮರು ಜಾಸಿಯ ಮತ್ತು ಜೋನೆಫ ಕಲೆಕ್ಟರರಿಗೆ ಪತ್ರ ಬರೆದು ಫೆಬ್ರವರಿ ೨ರಂದು 'ಏನೂ ಇಲ್ಲದ್ದ'ರಿಂದ ಹತ್ತು ಸಾವಿರ ರೂಪಾಯಿ ಕೇಳಿದರೆ ಕಂಪನಿ ಸರಕಾರದವರು ಅವರಿಗೆ ಐದು ಸಾವಿರ ರೂ ಕೊಡಲಾಗುವ ಬಗ್ಗೆ ಪತ್ರಬರೆದಿರುವರು. ಕಿತ್ತೂರಲ್ಲಿ ಸುಗ್ಗಿಯ ಕಾಲದ ಬಗೆಗಿನ ಪ್ರಸ್ತಾಪ ನಾಲ್ವತ್ನಾಲ್ಕನೆಯ ಪತ್ರದಲ್ಲಿದ್ದರೆ, ಪ್ರತಿಯೊಂದು ವಸ್ತುವನ್ನು ಒಂದು ವರ್ಷದ ಉಪಯೋಗಕ್ಕಾಗಿ ಮುಂಚಿತವಾಗಿ ಸಂಗ್ರಹಿಸಿ ಕೊಳ್ಳಬೇಕಾಗುತ್ತದೆ ಅದಕ್ಕಾಗಿ ಆರುಸಾವಿರ ರೂಪಾಯಿ ಕಳಿಸಲಾಗಿದ್ದು ಅದರ ನಕಲನ್ನು ಪುಣೆಯ ಮೇಸ್ತರ ಜನರಲ್ ಚಾಪಲಿನ್ ಸಾಹೇಬ ಕಮೀಷನರ ಅವರಿಗೆ ಕಳಿಸಿಕೊಡುವ ಬಗ್ಗೆ ಬರೆದಿರುವುದು.

ಒಟ್ಟಿನಲ್ಲಿ ಕಿತ್ತೂರು ಸಂಸ್ಥಾನದ ದೇಸಾಯಿರನ್ನು ಬಂಧನ ದಲ್ಲಿಟ್ಟಿದ್ದರು. ಕಟ್ಟುನಿಟ್ಟಿನಿಂದ ಅವರೊಂದಿಗೆ ಪತ್ರವ್ಯವಹಾರ ಮುಂದುವರೆಸಿದುದು ಇದರಿಂದ ತಿಳಿದು ಬರುವ ಅಂಶ. ಪ್ರತಿಪತ್ರದ ಕೊನೆಯ ಸಾಲಿನಲ್ಲಿ 'ಹಮೇಷಾ ಪತ್ರ ಕಳಿಸುತ್ತ ಮನಸ್ಸಿಗೆ ಸಂತೋಷ ನೀಡುತ್ತಿರಬೇಕು' ಎಂಬ ಮೊಸಳೆ ಕಣ್ಣೀರು ಕಂಪನಿ ಸರಕಾರದವರ ವ್ಯವಹಾರ ಕುಶಲತೆಗೆ ಸೂಚನೆ ಎನಿಸಿದೆ. ದೊರೆತ ಒಟ್ಟು ನಾಲ್ವತ್ತೈದು ಮರಾಠಿ ಮಿಶ್ರಿತ ಫಾರ್ಸಿಕಾಗದ ಪತ್ರಗಳು ಕಿತ್ತೂರು ಸಂಸ್ಥಾನ ಮತ್ತು ಕಂಪನಿ ಸರಕಾರದ ಐತಿಹಾಸಿಕ ಪ್ರಮುಖ ಆಯಾಮಗಳನ್ನೊಳಗೊಂಡಿದ್ದು ಸಂಶೋಧಕರಿಗೆ ಇನ್ನು ಆಳವಾದ ಅಧ್ಯಯನ ಕೈಕೊಳ್ಳುವಲ್ಲಿ ಪ್ರೇರಕ ಆಕರಗಳೆನಿಸಿವೆ.



ಎಂ. ನಿತ್ಯಾನಂದ ಪೈ*

# ಗೋವಾ ಕದಂಬರ ಚಿನ್ನದ ಗದ್ಯಾಣಗಳು

ಕರ್ನಾಟಕವನ್ನು ಆಳಿದ ಪ್ರಮುಖ ರಾಜಮನೆತನಗಳಲ್ಲಿ ಗೋವಾ ಕದಂಬರು ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ಸುಮಾರು ಮೂರು ಶತಮಾನಗಳಷ್ಟು ಕಾಲ (೧೦-೧೩ನೇ ಶತಮಾನ) ಆಳಿದ ಇವರಿಗೆ; ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಚರಿತ್ರೆಗಳ ದೃಷ್ಟಿಯಿಂದ ಕರ್ನಾಟಕಕ್ಕೆ ಹಿರಿಯ ಸ್ಥಾನವನ್ನು ಗಳಿಸಿಕೊಟ್ಟ ಕೀರ್ತಿ ಸಲ್ಲುತ್ತದೆ. ಇವರು 'ಬನವಾಸಿ ಪುರವರಾಧೀಶ್ವರ'ರೆಂದು ಕರೆಸಿಕೊಂಡಿದ್ದಾರೆ. ಸಿಂಹ ಲಾಂಛನವನ್ನೂ, ವಾನರ ಮಹಾಧ್ವಜವನ್ನು ಹೊಂದಿದ್ದ ಇವರು ಗೋವೆಯ ಶ್ರೀ ಸಪ್ತಕೋಟೇಶ್ವರನ ಆರಾಧಕರಾಗಿದ್ದರು. ಇವರ ನಾಣ್ಯಗಳಲ್ಲಿ ಮುದ್ರಿತವಾದ 'ಶ್ರೀಸಪ್ತಕೋಟೇಶ್ವರ ಲಬ್ಧವರ ವೀರ.......' ಎಂಬ ಬರಹದಿಂದ ಇದು ದೃಢಗೊಳ್ಳುತ್ತದೆ. ಇವರು *'ಶ್ರೀಮಲೆಗೆಭೈರವ'* ಮತ್ತು *'ಶ್ರೀಮಲಹರಮಾರಿ'* ಎಂದು ನಾಣ್ಯಗಳಲ್ಲಿ ಉಲ್ಲೇಖಿತರಾಗಿದ್ದಾರೆ.

ಇದುವರೆಗೆ ಬಹಳ ಅಲ್ಪ ಪ್ರಮಾಣದಲ್ಲಿ ಇವರ ನಾಣ್ಯಗಳು ದೊರೆಕಿವೆ. ಗೋವಾ ಕದಂಬರಲ್ಲಿ ಒಂದನೆಯ ಜಯಕೇಶಿ (ಕ್ರಿ. ಶ. ೧೦೫೦-೧೦೭೮), ಎರಡನೆಯ ಜಯಕೇಶಿ (ಕ್ರಿ. ಶ. ೧೧೨೬-೧೧೪೭) ಶಿವಚಿತ್ತ ಪೆರ್ಮಾಡಿ (ಕ್ರಿ. ಶ. ೧೧೪೭-೧೧೮೭) ಮತ್ತು ತ್ರಿಭುವನಮಲ್ಲ ಸೋಯಿದೇವ (ಕ್ರಿ. ಶ. ೧೨೨೬-೧೨೪೬) ಪ್ರಮುಖರು.

ಸದ್ಯ ಪ್ರಸ್ತುತಪಡಿಸಿರುವ ೩ ಚಿನ್ನದ ಗದ್ಯಾಣಗಳು- ಒಂದನೇಯ ಜಯಕೇಶಿ, ಶಿವಚಿತ್ತ ಪೆರ್ಮಾಡಿ, ಮೂರನೇಯ ಜಯಕೇಶಿ ಇವರಿಗೆ ಸೇರುತ್ತವೆ.

*i.* ***೧ನೇ ಜಯಕೇಶಿಯ (೧೦೫೦-೧೦೭೮) ಚಿನ್ನದ ಗದ್ಯಾಣ***

**ಆಕಾರ** : ವೃತ್ತ, ತೂಕ ೩.೮ಗ್ರಾಂ; ವ್ಯಾಸ : ೧.೫ ಸೆಂ.ಮೀ.

**ಮುಂಬದಿ** : ಆನೆಯ ಮುಖವನ್ನು ಸಿಂಹದ ದೇಹವನ್ನೂ ಹೊಂದಿದ 'ಗಜಶಾರ್ದೂಲ'ವು ಬಲಬದಿಗೆ ಮುಖಮಾಡಿ ಬಾಲವನ್ನು ಬೆನ್ನಿನ ಮೇಲೆ ಎತ್ತಿಹಿಡಿದು ನಿಂತಿದೆ.



ಹಿಂಬದಿ : ಸ್ವಲ್ಪ ಸವೆದುಹೋದರೂ, ಶ್ರೀ ಸೂರ್ಯ ಚಂದ್ರ ಮತ್ತು ಗುಣಾಕಾರ × ಚಿಹ್ನೆಗಳಿವೆ.

ಈ ನಾಣ್ಯದಲ್ಲಿ ಯಾವ ಬರಹ ಇಲ್ಲದಿರುವದರಿಂದ ಯಾರಿಗೆ ಸೇರಿದ್ದೆಂದು ಹೇಳಲು ಕಷ್ಟವಾಗುತ್ತದೆ. ಆದರೆ ಈಗಾಗಲೇ ಪ್ರಕಟಿಸಲ್ಪಟ್ಟ[1] ಗಜಶಾರ್ದೂಲದ ಚಿತ್ರವಿರುವ ನಾಣ್ಯದ ಹಿಂಭಾಗದಲ್ಲಿ *ಶ್ರೀಮಲೆಗೆಭೈರವ* ವೆಂಬ ಬರಹವಿದೆ. ಪಣಜಿಯಲ್ಲಿ ಲಭಿಸಿರುವ ಒಂದನೇಯ ಜಯಕೇಶಿಯ ತಾಮ್ರ ಶಾಸನದಲ್ಲಿರುವ ಮುದ್ರೆಯಲ್ಲಿ[2] 'ಶ್ರೀಮಲೆಗೆಭೈರವ' ಎಂಬ ಕನ್ನಡ ಲಿಪಿ ಇರುವುದರಿಂದ ಈ ನಾಣ್ಯವು ಒಂದನೆಯ ಜಯಕೇಶಿಗೆ ಸೇರಿದ್ದೆಂದು ಹೇಳಬಹುದು. ಗೋವಾ ಕದಂಬರನ್ನು ಬಿಟ್ಟು ಕರ್ನಾಟಕವನ್ನು ಆಳಿದ ಯಾವ ರಾಜಮನೆತನಗಳ ಚಿನ್ನದ ನಾಣ್ಯಗಳಲ್ಲಿ *ಗಜಶಾರ್ದೂಲ* ಚಿತ್ರವಿರುವುದು ಕಂಡುಬರುವುದಿಲ್ಲ.

*ii.* ***ಶಿವಚಿತ್ತ ಪೆರ್ಮಾಡಿ (೧೧೪೭-೧೧೮೭)ಯ ಚಿನ್ನದ ಗದ್ಯಾಣ***

**ಆಕಾರ** : ವೃತ್ತ, ತೂಕ ೪.೪೫ ಗ್ರಾಂ, ವ್ಯಾಸ : ೨.೧೨ ಸೆಂ.ಮೀ.

**ಮುಂಬದಿ** : ಚುಕ್ಕೆಗಳಿಂದ ಆವೃತವಾದ ವೃತ್ತಾಕಾರದ ಗೆರೆಯೊಳಗೆ ಎಡಗಡೆಗೆ ಬಾಯಿ ತೆರೆದು ಕಾಲನ್ನು ಎತ್ತಿ ಹಿಡಿದ ಸಿಂಹದ ಚಿತ್ರವಿದ್ದು ಇದರ ಬಾಲವು ಬೆನ್ನಿನ ಮೇಲೆ ಸುರುಳಿಯಾಗಿ ನಿಂತಿದೆ. ತಲೆಯ ಬದಿಯಲ್ಲಿ ಸೂರ್ಯ ಚಂದ್ರರ ಚಿತ್ರವಿದ್ದು, ಸಿಂಹದ ಬಲಕಡೆಗೆ 'ವಿಳಂಬಿ' ಎಂಬ ಸಂವತ್ಸರದ ನಾಗರೀ ಬರಹ ಇದೆ.

**ಹಿಂಬದಿ** : ಚುಕ್ಕೆಗಳಿಂದ ಆವೃತವಾದ ವೃತ್ತಾಕಾರದ ಗೆರೆಯೊಳಗೆ ೫ ಸಾಲಿನ ಬರಹವಿದ್ದು ಶಿವಚಿತ್ತನ ಹೆಸರನ್ನು ನಾಗರೀ ಮತ್ತು ಹಳೇ ಕನ್ನಡದಲ್ಲಿ ಪರ್ಯಾಯವಾಗಿ ಮುದ್ರಿಸಿದ್ದಾರೆ. ೨ನೇ ಮತ್ತು ೪ನೇ ಸಾಲು ಕನ್ನಡದಾಗಿದ್ದು



*ಗಣೇಶ ಎಂಟರ್‌ಪ್ರೈಸಸ್, ಬಸ್‌ಸ್ಟ್ಯಾಂಡ್ ಬಳಿ, ಮೂಡಬಿದಿರೆ - ೫೭೪ ೨೨೭.

೪ನೇಯ ಸಾಲಿನ ಕನ್ನಡದ ಬರಹದ ಎದುರು 'ಶಂಖ'ದ ಗುರುತಿದೆ.

ಇದು ಬಹಳ ಅಪರೂಪದ ನಾಣ್ಯವಾಗಿದ್ದು ಬಹುಶಃ ಸ್ಮರಣಾರ್ಥವಾಗಿ (Commemorative) ಮಾಡಿದ ನಾಣ್ಯವಾಗಿರ ಬಹುದು. ಇದುವರೆಗೆ ಇಂತಹ ೨ ನಾಣ್ಯಗಳು ಮಾತ್ರ ಪ್ರಕಟಗೊಂಡಿವೆ. 'ಪ್ಲವ' ಸಂವತ್ಸರದ ಹೆಸರಿರುವ ಒಂದು ನಾಣ್ಯವು ಇಂಡಿಯನ್ ಹಿಸ್ಟಾರಿಕಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನಲ್ಲಿದೆ.*[3] 'ಶುಭಕೃತು' ಸಂವತ್ಸರದ (ಕ್ರಿ. ಶ. ೧೧೭೮), ಪ್ಲವ (ಕ್ರಿ. ಶ. ೧೧೮೧) ಮತ್ತು 'ಶುಭಕೃತು', (ಕ್ರಿ. ಶ. ೧೧೮೨) ಸಂವತ್ಸರದಂತೆ ಶಿವಚಿತ್ತ ಪೆರ್ಮಾಡಿಯ ಆಳ್ವಿಕೆಗೆ (ಕ್ರಿ. ಶ. ೧೧೪೭-೧೧೮೭) ಸರಿ ಹೊಂದುತ್ತದೆ. ಈ ನಾಣ್ಯಗಳಲ್ಲಿ ನಾಗರೀಯೊಂದಿಗೆ ಕನ್ನಡ ಲಿಪಿ ಇರುವುದರಿಂದ ಗೋವಾ ಕದಂಬರು ಕನ್ನಡಕ್ಕೆ ಕೊಟ್ಟ ಮಾನ್ಯತೆಯನ್ನು ತಿಳಿಸುತ್ತದೆ.

***iii.*** ***ಮೂರನೇಯ ಜಯಕೇಶಿ (೧೧೮೭- ೧೨೨೬)ಯ ಸುವರ್ಣ ಗದ್ಯಾಣ***

**ಆಕಾರ** : ವೃತ್ತ, ತೂಕ ೪.೩೫ ಗ್ರಾಂ; ವ್ಯಾಸ : ೨.೧೧ ಸೆಂ.ಮೀ.

**ಮುಂಬದಿ** : ಚುಕ್ಕೆಗಳಿಂದ ಆವೃತವಾದ ವೃತ್ತಾಕಾರದ ಗೆರೆಯೊಳಗೆ ಕಾಲನ್ನು ಎತ್ತಿಹಿಡಿದು ಎದುರು ಮುಖ ಮಾಡಿರುವ ಸಿಂಹದ ಚಿತ್ರವಿದ್ದು ಬಾಲವು ಬೆನ್ನಿನ ಮೇಲೆ ಸುರುಳಿಯಾಗಿ ನಿಂತಿದೆ. ಸಿಂಹದ ಎಡಬದಿಗೆ ಸೂರ್ಯ ಚಂದ್ರರಿದ್ದು, ಅದರ ಕೆಳಗೆ ಸ್ವಸ್ತಿಕ (卐) ಚಿಹ್ನೆ ಇರುವುದು ಬಹಳ ವಿಶೇಷವಾಗಿದೆ. ಸಿಂಹದ ಬಲಬದಿಗೆ 'ದುಂದುಭಿ' ಎಂಬ ಸಂವತ್ಸರದ ಹೆಸರು ನಾಗರೀ ಲಿಪಿಯಲ್ಲಿದೆ.



**ಹಿಂಬದಿ** : ಚುಕ್ಕೆಗಳಿಂದ ಆವೃತವಾಗಿರುವ ವರ್ತುಲದೊಳಗೆ *'ಶ್ರೀ ಸಪ್ತಕೋಟೀಶ್ವರ ಲಬ್ದವರ ವೀರ ಜಯಕೇಶಿ ದೇವ ಮಲಹರ ಮಾರಿ'* ಎಂಬ ೫ ಸಾಲಿನ ನಾಗರೀ ಲಿಪಿ ಇದೆ.

ಇದುವರೆಗೆ ಪ್ರಕಟಿಸಲ್ಪಟ್ಟ ನಾಣ್ಯಗಳಲ್ಲಿ ಒಂದನೆಯ ಜಯಕೇಶಿಯ 'ವಿಜಯ' ಸಂವತ್ಸರ (ಕ್ರಿ. ಶ. ೧೧೧೩) ಎರಡನೇ ಅಥವಾ ಮೂರನೇ ಜಯಕೇಶಿಯ 'ದುರ್ಮತಿ' ಸಂವತ್ಸರ (ಕ್ರಿ. ಶ. ೧೧೪೧ ಮತ್ತು ಕ್ರಿ. ಶ. ೧೨೦೧ ಕ್ಕೆ ಸರಿ ಹೊಂದುತ್ತದೆ), ಶಿವಚಿತ್ತನ 'ಜಯಸಂವತ್ಸರ' (ಕ್ರಿ. ಶ. ೧೧೭೩), 'ವಿಷು ಸಂವತ್ಸರ' (ಕ್ರಿ.ಶ. ೧೧೬೧), 'ಈಶ್ವರ ಸಂವತ್ಸರ' (೧೧೫೭), 'ಬಹುಧಾನ್ಯ ಸಂವತ್ಸರ' (ಕ್ರಿ. ಶ. ೧೧೫೮), 'ಕೀಲಕ ಸಂವತ್ಸರ' (ಕ್ರಿ. ಶ. ೧೧೮೭), ಮೂರನೆಯ ಜಯಕೇಶಿಯ ಆಳ್ವಿಕೆಯ 'ಅಂಗೀರಸ ಸಂವತ್ಸರ' (ಕ್ರಿ. ಶ. ೧೨೧೨)ದ ನಾಣ್ಯಗಳು ಸೇರಿವೆ. ಆದರೆ ಪ್ರಸ್ತುತ 'ದುಂದುಭಿ' ನಾಮ ಸಂವತ್ಸರವು ಗೋವಾಕದಂಬರ ಆಳ್ವಿಕೆಯ ಸಮಯದಲ್ಲಿ ೩ ಸಲ ಬಂದಿದ್ದು (ಕ್ರಿ. ಶ. ೧೦೮೨, ೧೧೪೨, ೧೨೦೨) ಕ್ರಿ. ಶ. ೧೨೦೨ ಮೂರನೆಯ ಜಯಕೇಶಿಯ ಆಳ್ವಿಕೆಯ ಸಮಯಕ್ಕೆ ಸರಿ ಹೊಂದುತ್ತದೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*1. Dr. A. V. Narasimha Murthy : ***Coins and Currency System in Karnataka***, page 182-197.

*2. G. M. Moraes : ***The Kadamba Kula***, p. 394.

*3. ***S.I.S.I.C*** Vol VIII 1998.

ಸಂಗನಗೌಡ ಜಿ. ಧವಳಗಿ*

# ಮೊಘಲರ ಕಾಲದ ಬೆಳ್ಳಿಯ ನಾಣ್ಯಗಳು

ಮುಸ್ಲಿಮರು ಬರುವದಕ್ಕಿಂತ ಮೊದಲಿನ ಇತಿಹಾಸವನ್ನು ಗ್ರಂಥ, ಶಾಸನ, ನಾಣ್ಯ, ಶಿಲ್ಪ, ವರ್ಣಚಿತ್ರ ಮೊದಲಾದವುಗಳಲ್ಲಿ ಅಲ್ಲಲ್ಲಿ ಸಿಗುವ ಸಂಗತಿಗಳ ಸಹಾಯದಿಂದ ಕೂಲಂಕಷವಾಗಿ ವಿಚಾರಿಸಿ ರಚಿಸಬೇಕಾಗುತ್ತದೆ. ಇಂಥ ಕಾರ್ಯದಲ್ಲಿ ನಾಣ್ಯಗಳ ಪಾತ್ರ ಅಷ್ಟಿಷ್ಟಲ್ಲ. ನಾಣ್ಯಗಳು ದೊರೆಯದಿದ್ದರೆ ಭಾರತ ಮತ್ತು ಬ್ಯಾಕ್ಟ್ರಿಯಾದ ಗ್ರೀಕರ ನಡುವಿನ ಸಂಬಂಧದ ವಿಷಯವಾಗಿ ತಿಳಿಯುತ್ತಲೇ ಇರಲಿಲ್ಲ. ಅಲ್ಲದೇ ನಾಣ್ಯಗಳ ಆಧಾರದ ಮೇಲಿಂದ ಯಾವ ಅರಸನ ತರುವಾಯ ಯಾವ ಅರಸನು ಆಳ್ವಿಕೆ ನಡೆಸಿದ ಎಂಬುದನ್ನು ಗೊತ್ತುಪಡಿಸಲೂ ಬರುತ್ತದೆ.

ಮೊಘಲ್ ಸಾಮ್ರಾಟರದು ಸುಮಾರು ೩೦೦ ವರ್ಷಗಳ ಕಾಲ ಬಂಗಾರ ಮತ್ತು ಬೆಳ್ಳಿಯ ನಾಣ್ಯಗಳ ಶ್ರೇಷ್ಠವಾದ ಗುಣಮಟ್ಟವನ್ನು ಕಾಯ್ದುಕೊಂಡು ಬಂದ ಏಕೈಕ ಮನೆತನವಾಗಿದೆ. ಅಲ್ಲದೆ ಅವುಗಳ ಪ್ರಕಾರಗಳು, ಅಚ್ಚಾದ ಸ್ಥಳಗಳು. ಹಲವಾರು ನಾಣ್ಯಗಳ ರಚನಾಕ್ರಮ, ಬರವಣಿಗೆಯ ಶೈಲಿ ಮುಂತಾದವು ಅವರ ಪ್ರಭುತ್ವದ ಸಾಕ್ಷಿಯಾಗಿವೆ. ಇವರು ಟಂಕಿಸಿದ ದಾಮ್, ಫುಲಾಸ್, ನಿಷಾರ್, ರೂಪಾಯಿ ಎಂಬ ನಾಣ್ಯಗಳಲ್ಲಿ ರೂಪಾಯಿ ಇಂದಿಗೂ ಪ್ರಸ್ತುತ. ಸಿ. ಜಿ. ಬ್ರೌನ್ನರ ಪ್ರಕಾರ 'ಮೊಘಲ್ ನಾಣ್ಯ ಪದ್ಧತಿ ನಿಜವಾಗಿಯೂ ಪ್ರಪಂಚದ ನಾಣ್ಯ ವೈವಿಧ್ಯತೆಯಲ್ಲಿ ಶ್ರೇಷ್ಠ ಮಟ್ಟದ ಖ್ಯಾತಿಯನ್ನು ಪಡೆದಿತ್ತು'.

ಮರ್ಚೆಂಟ್ಸ್ ಆಫ್ ಲಂಡನ್ ಟ್ರೇಡಿಂಗ್ ಇಂಟು ಇಂಡೀಜ ಎಂಬ ಕಂಪನಿಯೊಂದಿಗೆ ವ್ಯಾಪಾರಕ್ಕೆಂದು ಬಂದ ಬ್ರಿಟಿಷರು ಮುಂದಿನ ದಿನಗಳಲ್ಲಿ ರಾಜಕೀಯಕ್ಕೆ ಕೈಹಾಕಿದರು. ಇದರಿಂದಾಗಿ ಮೊಘಲ್ ಮತ್ತು ಇನ್ನಿತರ ಸಂಸ್ಥಾನಗಳ ಜೊತೆಯಲ್ಲಿ ವೈಮನಸ್ಸುಗಳುಂಟಾದವು. ಕಂಪನಿಯು ತನ್ನ ಸ್ವಂತ ಟಂಕಸಾಲೆಗಳನ್ನು ಹೊಂದಿದ್ದರೂ ಅದು ಬಂಗಾರ ಮತ್ತು ಬೆಳ್ಳಿಯ ಗಟ್ಟಿಯನ್ನು ಕೊಟ್ಟು ಮೊಘಲ್ ಆಡಳಿತಗಾರರ ಟಂಕಸಾಲೆಗಳಲ್ಲಿ ಮುದ್ರಿಸಿಕೊಳ್ಳಬೇಕಾಗಿತ್ತು. ಅಥವಾ ತತ್ಕಾಲೀನ ಮೊಘಲ್ ಅರಸರ ನಾಣ್ಯಗಳನ್ನು ಅನುಸರಿಸಿದ ನಾಣ್ಯಗಳನ್ನು ಹೊರಡಿಸಬೇಕಾಯಿತು. ಹಲವು ಪ್ರಯತ್ನಗಳ ಮಧ್ಯೆ ಕ್ರಿ. ಶ. ೧೭೧೭ರಲ್ಲಿ ಫರುಕಶಿಯರನು ಮುಂಬಯಿ ನಡುಗಡ್ಡೆಯಲ್ಲಿಯ ಟಂಕಸಾಲೆಯಲ್ಲಿ ನಾಣ್ಯಗಳನ್ನು ಮುದ್ರಿಸಿಕೊಳ್ಳಲು ಕಂಪನಿಗೆ ಒಪ್ಪಿಗೆ ಕೊಟ್ಟನು. ಅದೇ ರೀತಿ ಮದ್ರಾಸಿನಲ್ಲಿಯ ತನ್ನ ಟಂಕಸಾಲೆಯಲ್ಲಿ ಅರ್ಕಾಟ ಟಂಕಸಾಲೆಯ ಹೆಸರಿನಲ್ಲಿ ಮೊಘಲ್ ನಾಣ್ಯಗಳನ್ನು ಮುದ್ರಿಸಲು ಕಂಪನಿಗೆ ಪರವಾನಿಗೆ ದೊರೆಯಿತು. ಕ್ರಿ. ಶ. ೧೭೬೫ರಲ್ಲಿ ಕಂಪನಿಯು ಬಂಗಾಲದ ಆಡಳಿತೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡ ಕೂಡಲೇ ಅದು ನಾಣ್ಯ ಹೊರಡಿಸುವ ಹಕ್ಕನ್ನು ಚಲಾಯಿಸಿತು. ಆಗ ಅದು ಕಲ್ಕತ್ತಾದಲ್ಲಿದ್ದ ತನ್ನ ಸ್ವಂತ ಟಂಕಸಾಲೆಯಿಂದ ಮೊಘಲ್ ಸಾರ್ವಭೌಮನ ಹೆಸರಿನಲ್ಲಿ ನಾಣ್ಯಗಳನ್ನು ಹೊರಡಿಸಿತು. ಮತ್ತು ಆ ನಾಣ್ಯಗಳ ಮೇಲೆ ಮುರ್ಶಿದಾಬಾದ ಎಂಬ ಟಂಕಸಾಲೆಯ ಹೆಸರನ್ನು ಹಾಕಿತು. ಕ್ರಿ. ಶ. ೧೮೦೦ನೇ ವರ್ಷದಲ್ಲಿ ಒಂದು ನಿಶ್ಚಿತ ನಾಣ್ಯ ಪದ್ಧತಿಯನ್ನು ಅನುಸರಿಸಬೇಕೆಂದು ಬ್ರಿಟಿಷ್ ಸರಕಾರಕ್ಕೆ ನಿಶ್ಚಯಿಸಲಾಯಿತು. ಅಂದಿನಿಂದ ಆ ನಾಣ್ಯಗಳು ಯಾವ ಕಾಲದಲ್ಲಿ ಹೊರಟಿದ್ದರೂ ಅವುಗಳ ಮೇಲೆ ಎರಡನೆಯ ಶಾಹ ಅಲಮ್‌ನ ಆಳ್ವಿಕೆಯ ೪೬ನೆಯ ವರ್ಷವನ್ನು ಹಾಕಬೇಕೆಂದೂ ಮತ್ತು ಹಿಜ್ರಿ ಅಥವಾ ಬೇರೆ ವರ್ಷವನ್ನು ಹಾಕಕೂಡದೆಂದೂ ನಿರ್ಣಯಿಸಲಾಯಿತು. ಆದ್ದರಿಂದ ಇವುಗಳ ಮೇಲೆ ಬರೆಯಲ್ಪಟ್ಟ ಕ್ರಿ. ಶ. ೧೮೧೯ನೇ ವರ್ಷ (ಇಂಗ್ಲೀಷಿನಲ್ಲಿ)ವು ಮಹಮ್ಮದ ಶಹನ (ಕ್ರಿ. ಶ. ೧೮೦೬-೧೮೩೭) ಅನ್ವಯಿಸಿದರೂ ನಾಣ್ಯಗಳನ್ನು ಮಾತ್ರ ಎರಡನೆಯ ಶಾಹ ಅಲಮ್‌ನ (ಕ್ರಿ. ಶ. ೧೭೫೯-೧೮೦೬) ಹೆಸರಿನಲ್ಲಿ ಹೊರಡಿಸಲಾಯಿತು.

ಪ್ರಸ್ತುತ ದೊರೆತಿರುವ ಹನ್ನೊಂದು ಬೆಳ್ಳಿಯ ನಾಣ್ಯಗಳು ಬಾಗಲಕೋಟ ಜಿಲ್ಲೆಯ ಹುನಗುಂದದ ಮನೆಯೊಂದರಲ್ಲಿ ಪೂಜೆಗೆಂದು ತೆಗೆದಿರಿಸಿದ್ದು, ಅಧ್ಯಯನಕ್ಕಾಗಿ ದೊರಕಿಸಿ ಕೊಳ್ಳಲಾಗಿದೆ.



*ಸಂಶೋಧನ ವಿದ್ಯಾರ್ಥಿ, ಇತಿಹಾಸ ಮತ್ತು ಪ್ರಾಚ್ಯವಸ್ತು ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ನಾಣ್ಯದ ಮುಂಭಾಗದಲ್ಲಿ ಸಿಕ್ಕಾ ಮುಬಾರಕೆ ಬಾದಶಾಹ್ ಘಾಜಿ (ಶಾಹ ಅಲಮ್) ಇಂಗ್ಲೀಷಿನಲ್ಲಿ ೧೮೮೯, ಹಿಂಭಾಗದಲ್ಲಿ ಜುಲುಸ್-ಇ-ಮೈಮನತ್-ಇ-ಮಾನುಸ್ ಜರ್ಬ (ಸುರತ್) ಎಂದಿದೆ. ಶಾಹ ಅಲಮ್‌ನು ಶುದ್ಧವಾದ ನಾಣ್ಯಗಳನ್ನು ಮುದ್ರಿಸಿದನು. ಅವು ಈ ಟಂಕಸಾಲೆಯಿಂದ ಮುದ್ರಿತವಾಗಿವೆ.

ಈ ನಾಣ್ಯಗಳೆಲ್ಲ ಒಂದು ರೂಪಾಯಿ ಮೌಲ್ಯವನ್ನು ಹೊಂದಿದ್ದು ೬.೭, ೬.೮, ಸೆಂ.ಮೀ. ಸುತ್ತಳತೆ, ೧೮೦ ಗ್ರೇನ್ಸ್ ತೂಕವನ್ನು ಹೊಂದಿವೆ. ಪರ್ಷಿಯನ್ ಭಾಷೆಯಲ್ಲಿ ಬರೆಯಲಾಗಿದ್ದು ಸೂರತ್ (ಉತ್ತರ ಪ್ರದೇಶ)ನಲ್ಲಿ ಟಂಕಿಸಿದ ನಾಣ್ಯಗಳಾಗಿವೆ.

ಬ್ರಿಟಿಷರ ಆಳ್ವಿಕೆಯಿಂದಾಗಿ ಭಾರತಾದ್ಯಂತ ಚಲಾವಣೆಯಲ್ಲಿದ್ದ ಈ ನಾಣ್ಯಗಳು ಇಲ್ಲಿ ದೊರೆತಿದ್ದು ಸಹಜವೆ. ಮೊಘಲರ ನಾಣ್ಯಗಳ ಕುರಿತ ಅಧ್ಯಯನಕ್ಕೆ ಈ ನಾಣ್ಯಗಳು ಹೆಚ್ಚಿನ ಪುಷ್ಟಿಯನ್ನೊದಗಿಸುತ್ತವೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ಸರಕಾರ್ ಡಿ. ಸಿ., ಸ್ಟಡೀಜ ಇನ್ ಇಂಡಿಯನ್ ಕ್ವಾಯನ್ಸ.

*೨. ಗುಪ್ತಾ ಪಿ. ಎಲ್., ಕ್ವಾಯನ್ಸ.

*೩. ಬ್ರೌನ್ಸ್ ಸಿ. ಜೆ., ಕ್ವಾಯನ್ಸ ಆಫ್ ಇಂಡಿಯಾ.

*೪. ರೋಡ್ಜರಸ ಸಿ. ಜೆ., ಕ್ವಾಯನ್ಸ ಆಫ್ ದಿ ಮೊಘಲ್ ಎಂಪರರ್ ಆಫ್ ಇಂಡಿಯಾ.

*೫. ನೆಲಸನ್ ರೈಟ್ ಎಚ್., ಕ್ವಾಯನ್ಸ ಆಫ್ ದಿ ಮೊಘಲ್ ಎಂಪರರ್ಸ್ ಆಫ್ ಇಂಡಿಯಾ.

*೬. ಅಣ್ಣಿಗೇರಿ ಎ. ಎಂ., ಭಾರತದ ಪ್ರಾಚೀನ ನಾಣ್ಯಗಳು.

ಎ. ಆರ್. ಗುರು*

# ಬಿಳಗಲಿ ಸುತ್ತಮುತ್ತಲಿನ ಕೆಲವು ಶಿಲ್ಪಗಳು ಮತ್ತು ಒಂದು ಶಾಸನ



ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲೂಕಿನ ಬಿಳಗಲಿ, ಮಾಳಿಗನಾಡು, ಇಡಕಣಿ ಮತ್ತು ಮರಸಣಿಗೆ ಗ್ರಾಮಗಳಲ್ಲಿ ದೊರೆತ ಶಿಲ್ಪಗಳು ಮತ್ತು ಒಂದು ಅಪ್ರಕಟಿತ ಶಾಸನದ ಬಗ್ಗೆ ತಿಳಿಸಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ. ಈ ಗ್ರಾಮಗಳು ಕಳಸ ಕೊಟ್ಟಿಗೆಹಾರ ಹಾದಿಯಲ್ಲಿ ಕಳಸದಿಂದ ಕೆಲವೇ ಕಿ.ಮೀ.ಗಳ ದೂರದಲ್ಲಿವೆ.

೧. ಬಿಳಗಲಿ ಗ್ರಾಮದಲ್ಲಿ ಕಾಫಿ ಬೆಳೆಗಾರರಾದ ಶ್ರೀ ಬಿ. ಆರ್. ಲಕ್ಷ್ಮಣಗೌಡ ಮತ್ತು ಅವರ ಸಹೋದರ ಶ್ರೀ ಸದಾಶಿವ ಗೌಡರ ಅಡಿಕೆ ತೋಟದಲ್ಲಿ ರೇಖಾಚಿತ್ರಗಳಿರುವ ಎರಡು ಗ್ರಾನೈಟ್ ಶಿಲ್ಪಗಳು ದೊರೆತಿವೆ. ಇವುಗಳ ಎತ್ತರ ಹಾಗೂ ಅಗಲ ೮೬.೩ಸೆಂ.ಮೀ.x೩೬ ಸೆಂ.ಮೀ. ಮತ್ತು ೭೮.೭ ಸೆಂ.ಮೀ.x೩೧.೭ ಸೆಂ.ಮೀ. ಆಗಿವೆ ದೊಡ್ಡ ಶಿಲ್ಪದಲ್ಲಿ ಶಂಖ, ಚಕ್ರ, ಹಿಂದೂ ಅರಾಬಿಕ್ ಅಂಕೆಯ ಎಂಟು ಆಕಾರ ಅಲ್ಲದೆ ಇತರ ರೇಖೆಗಳು ಹಾಗೂ ಚಿಕ್ಕ ಶಿಲ್ಪದಲ್ಲಿ ಮನುಷ್ಯನ ವಿಚಿತ್ರಾಕೃತಿ (anthropomorphous) ಇತ್ಯಾದಿ ರೇಖೆಗಳಿವೆ. ಅಲ್ಲದೆ ಎರಡೂ ಶಿಲ್ಪಗಳಲ್ಲಿ ಸೂರ್ಯ, ಚಂದ್ರ, ತ್ರಿಶೂಲಗಳು, ಬಿಲ್ಲುಬಾಣಗಳು ಮತ್ತು ರೇಖಾಸಹಿತವಾದ ಬೀಜಾಕ್ಷರಗಳ ಯಂತ್ರದ ಕಲ್ಲುಗಳು ಇವೆ. ಇವು ಸಾಮಾನ್ಯವಾಗಿ ಊರಿನ ಪ್ರವೇಶ ಭಾಗದಲ್ಲಿರುತ್ತವೆ. ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲೂಕು ಹೆಬ್ಬಟ ಎಂಬ ಗ್ರಾಮದಲ್ಲಿರುವ ಯಂತ್ರದ ಕಲ್ಲಿನಲ್ಲಿ ಶ್ಲೋಕವಿದೆ. ಇವನ್ನು ಗೋಕಲ್ಲು, ಗೊಡ್ಡುಕಲ್ಲು ಎಂದೂ ಕರೆಯುತ್ತಾರೆ. ದನಗಳಿಗೆ ಖಾಯಿಲೆ ಬಂದಾಗ ನಿವಾರಣೆಗಾಗಿ ಅಥವಾ ಖಾಯಿಲೆ ಬರದಂತೆ ತಡೆಯಲು ಇಂತಹ ಕಲ್ಲುಗಳಿಗೆ ಹರಸಿಕೊಂಡು ಪೂಜೆ ಸಲ್ಲಿಸುವ ವಾಡಿಕೆಯಿದೆ. ಪ್ರಸ್ತುತ ಕಲ್ಲುಗಳಿಗೆ ಇಂತಹ ಯಾವ ಆಚರಣೆಯೂ ಇಲ್ಲ. ಇವುಗಳ ಕಾಲವನ್ನು ತಿಳಿಯಲು ಸಾಧ್ಯವಾಗಿಲ್ಲ.

ಬಿಳಗಲಿ ಕುಟುಂಬಕ್ಕೆ ಸಂಬಂಧಪಟ್ಟ ರುದ್ರಭೂಮಿಯಲ್ಲಿ ಗ್ರಾನೈಟ್‌ನಲ್ಲಿ ಕೊರೆದ ನಾಲ್ಕು ಹಂತದ ವೀರ-ಮಾಸ್ತಿ ಶಿಲ್ಪವಿದೆ. ಕೆಳಹಂತದ ತಳಭಾಗದಲ್ಲಿ ಎರಡು ಚಕ್ರ, ಎರಡು ಪದ್ಮಗಳ ಚಿತ್ರಣವಿದೆ (ಒಂದು ಪದ್ಮ ಮಾತ್ರ ಕಾಣುತ್ತಿದೆ). ಕೆಳಹಂತದಲ್ಲಿ ಒಂದು ಕುದುರೆ, ಹಾಗೂ ಆಯುಧಗಳನ್ನು ಹಿಡಿದ ಯೋಧರಿದ್ದಾರೆ. ಮಧ್ಯದಲ್ಲಿರುವ ಪುರುಷನು ಮಾತ್ರ ಖಡ್ಗ ಮತ್ತು ಗುರಾಣಿಯನ್ನು ಹಿಡಿದಿದ್ದಾನೆ. ಈತನೇ ಪ್ರಸ್ತುತ ಶಿಲ್ಪದ ವೀರನೆಂದು ತೋರುತ್ತದೆ. ಎರಡನೆಯ ಹಂತದಲ್ಲಿ ಆತನಿಗೆ ಛತ್ರಿ ಹಿಡಿದಿದ್ದಾರೆ, ಮತ್ತು ಆತನ ಎಡಭಾಗದಲ್ಲಿ ಫಲ ಮತ್ತು ಕನ್ನಡಿಯನ್ನು ಹಿಡಿದಿರುವ ಸ್ತ್ರೀ ಹಾಗೂ ಆಕೆಯ ಎಡಭಾಗದಲ್ಲಿ ಗಿಂಡಿಯನ್ನು ಹಿಡಿದಿರುವ ಸ್ತ್ರೀ ಇದ್ದಾರೆ. ಈ ಇಬ್ಬರೂ ಆತನ ಪತ್ನಿಯರು ಯಾ ಸತಿಯಾಗಿದ್ದಾರೆ ಎಂದು ಊಹಿಸಬಹುದು. ಮೂರನೆಯ ಹಂತದಲ್ಲಿ ನಾಲ್ವರು ಪುರುಷರಿದ್ದಾರೆ. ಕೊನೆಯ ಹಂತದಲ್ಲಿ ಸ್ವರ್ಗಸ್ಥನಾದ ವೀರನು ಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದಾನೆ. ೨೧೮.೪ ಸೆಂ.ಮೀ. ಎತ್ತರ, ೧೧೬.೮ ಸೆಂ.ಮೀ. ಅಗಲವಿರುವ ಈ ಶಿಲ್ಪದ ಕಾಲವು ಕ್ರಿ. ಶ. ಸುಮಾರು ೧೬-೧೭ನೆಯ ಶತಮಾನ ಎಂದು ತೋರುತ್ತದೆ.

ಇದೇ ಗ್ರಾಮದ ಹಾಡ್ಯದಲ್ಲಿ ಕಪ್ಪು ಬಣ್ಣದ ಮೆದುಕಲ್ಲಿನಲ್ಲಿ ಸುಂದರವಾಗಿ ಕಡೆದ ವೀರಗಲ್ಲಿದೆ. ಇತ್ತೀಚಿನವರೆಗೂ ಬಿಳಗಲಿ ಮನೆತನದವರು ಈ ಕಲ್ಲಿಗೆ ವರ್ಷಕ್ಕೊಮ್ಮೆ ಪೂಜೆ ಸಲ್ಲಿಸುತ್ತಿದ್ದರಂತೆ.

*೭೮, ಬಿ.ಎಚ್.ಇ.ಎಲ್., ಓ.ಎಚ್.ಸಿ. ಸೊಸೈಟಿ, ನಂದಿನಿ ಲೇಔಟ್, ಬೆಂಗಳೂರು – ೫೬೦ ೦೯೬.



ಎಂಬ ಸಂದೇಹ ಬರುತ್ತದೆ (*'ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತ ವಿಚಾರ'* ಪುಟ ೫೬-೫೮, ಡಾ|| ಎಂ. ಚಿದಾನಂದ ಮೂರ್ತಿ, ಬೆಂ.ವಿ.ವಿ. ೧೯೮೪). ಡಾ|| ಚೂಡಾಮಣಿ ನಂದಗೋಪಾಲ ಅವರು ತಿಳಿಸಿದಂತೆ ನೃತ್ಯಿಸುತ್ತಿರುವ ಸ್ತ್ರೀ ಮೃದಂಗದ ನುಡಿಗೆ ತಕ್ಕಂತೆ ಬಲಗೈ ಎತ್ತಿದ್ದಾಳೆ, ಆಕೆಯ ಬಲಗೈ ಅಲಪಲ್ಲಗ ಮತ್ತು ಎಡಗೈ ಲತಾಹಸ್ತ ಭಂಗಿಯಲ್ಲಿವೆ. ಅವರೇ ತಿಳಿಸಿದಂತೆ ಈ ಭಂಗಿಯ ನಾಟ್ಯವನ್ನು ಬೇಲೂರು ಮತ್ತು ಹಳೇಬೀಡುಗಳಲ್ಲಿರುವ ಲಕ್ಷ್ಮೀ ಮತ್ತು ಸರಸ್ವತಿ ಶಿಲ್ಪಗಳಲ್ಲಿ ಕಾಣಬಹುದು. ಈ ಶಿಲ್ಪದ ಕಾಲವನ್ನು ಕ್ರಿ. ಶ. ಸುಮಾರು ೧೨-೧೩ನೆಯ ಶತಮಾನ ಎನ್ನಬಹುದು.



ಕಲ್ಲಿನ ಎತ್ತರ ೧೪೦ ಸೆಂ.ಮೀ, ಅಗಲ ೬೬ ಸೆಂ.ಮೀ. ಐದು ಹಂತಗಳ ಈ ವೀರಗಲ್ಲಿನ ಕೆಳಹಂತದಲ್ಲಿ ಒಂದೇ ಪಕ್ಷದ ಮೂವರು ಯೋಧರು ಹೋರಾಟಕ್ಕೆ ಸಜ್ಜಾಗುತ್ತಿದ್ದಾರೆ. ಎರಡನೆಯ ಹಂತದಲ್ಲಿ ಮಧ್ಯದಲ್ಲಿರುವ ಯೋಧನನ್ನು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಈತನೇ ವೀರನೆಂದೂ ಈ ಶಿಲ್ಪವು ಆತನ ಸ್ಮಾರಕವೆಂದೂ ತಿಳಿಯಬಹುದು. ಮೂರನೆಯ ಹಂತದಲ್ಲಿ ವೀರನ ಇಕ್ಕೆಲಗಳಲ್ಲಿ ಪೇಟ ಧರಿಸಿರುವ ಇಬ್ಬಿಬ್ಬರು ನಗ್ನಯತಿಗಳಿದ್ದಾರೆ. ಐವರೂ ಸಮಾನ ಎತ್ತರದ ಪೀಠಗಳ ಮೇಲೆ ಕುಳಿತಿದ್ದಾರೆ. ನಾಲ್ಕನೆಯ ಹಂತದಲ್ಲಿ ಒಬ್ಬ ಸ್ತ್ರೀ ಮತ್ತು ಆರು ಪುರುಷರ ನೃತ್ಯ-ವಾದನದ ಚಿತ್ರಣವಿದೆ. ಇಬ್ಬರು ಪುರುಷರು ತಾಳವನ್ನೂ ಇನ್ನಿಬ್ಬರು ಮೃದಂಗವನ್ನೂ ನುಡಿಸುತ್ತಿದ್ದಾರೆ. ಶಿಲ್ಪದ ಎಡತುದಿಯಲ್ಲಿರುವ ವ್ಯಕ್ತಿಯ ಕೈಯಲ್ಲಿರುವ ಕೊಳಲಿನಂತೆ ಕಾಣುವ ವಾದಕವು 'ಗಣೆ' ಎಂದು ತೋರುತ್ತದೆ (ಆಧಾರ : ರಾಮನಗರದ 'ಜನಪದ ಲೋಕ'ದಲ್ಲಿರುವ ಒಂದು ಛಾಯಾಚಿತ್ರ). ಮಧ್ಯದಲ್ಲಿರುವ ವ್ಯಕ್ತಿ ಆಸನಾರೂಢನಂತೆ ಕಾಣುತ್ತಿದ್ದು, ಸ್ವರ್ಗಸ್ಥನಾದ ವೀರನಿರಬಹುದು. ಈತನ ಕೈಗಳಲ್ಲಿರುವ ವಾದಕವು 'ಆವುಜ'ವೇ?

ಮೇಲೆ ತಿಳಿಸಿದ ವೀರಗಲ್ಲಿನ ಸಮೀಪದಲ್ಲಿ ೨೫ ಸೆಂ.ಮೀ ರಿಂದ ೬೨.೫ ಸೆಂ.ಮೀ" ಎತ್ತರದ ಗ್ರಾನೈಟ್‌ನ ನಾಲ್ಕು ನಾಗರ ಶಿಲ್ಪಗಳಿವೆ. ಎರಡು ಶಿಲ್ಪಗಳಲ್ಲಿರುವ ನಾಗರಗಳು ಬನವಾಸಿಯ ನಾಗಶಿಲ್ಪದಂತೆ ಸುತ್ತಿಕೊಂಡಿವೆ. ಹಾವಿನ ಹೆಡೆಯ ಬದಲು ವ್ಯಕ್ತಿಯ (ಪುರುಷನೋ? ಸ್ತ್ರೀಯೋ?) ಕೆತ್ತನೆಯಿದೆ. ಆ ವ್ಯಕ್ತಿಗೆ ಐದು ಹೆಡೆಗಳಿವೆ. ಈ ಎರಡು ಶಿಲ್ಪಗಳ ಪೈಕಿ ಒಂದು ಶಿಲ್ಪದಲ್ಲಿ ಆ ವ್ಯಕ್ತಿಯ ಇಕ್ಕೆಲಗಳಲ್ಲಿ ಒಬ್ಬೊಬ್ಬ ವ್ಯಕ್ತಿಗಳಿದ್ದಾರೆ ಮತ್ತು ಇನ್ನೊಂದರಲ್ಲಿ ನಾಗರಗಳಿವೆ. ನಾಲ್ಕು ಶಿಲ್ಪಗಳ ಪೈಕಿ ಎರಡರಲ್ಲಿ ಅಂಡಾಕೃತಿಯ ಕೆತ್ತನೆಗಳಿವೆ. ಈ ಅಂಡಗಳು ನಾಗನಿಗೂ ಸಂತಾನ ಪ್ರಾಪ್ತಿಗೂ ಸಂಬಂಧ ಕಲ್ಪಿಸುತ್ತಿವೆಯೇ? ಈ ಶಿಲ್ಪಗಳು ೧೭-೧೮ನೇ ಶತಮಾನಕ್ಕೆ ಸೇರಿದವು ಎಂದು ಊಹಿಸಲಾಗಿದೆ.

೨. **ಬಿಳಗಲಿಗೆ** ಹೊಂದಿಕೊಂಡಿರುವ ಮಾಳಿಗನಾಡು ಗ್ರಾಮದ ತಂಬಿನಕೊಡಿಗೆ ಊರಿನ ಗುಡ್ಡದ ಮೇಲಿರುವ ಗ್ರಾನೈಟ್‌ನ ಮೂರು ಹಂತದ ವೀರ-ಮಾಸ್ತಿ ಕಲ್ಲಿನ ಎತ್ತರ ೧೩.೨ ಸೆಂ.ಮೀ. ಅಗಲ ೬೧ ಸೆಂ.ಮೀ. ಈ ಕಲ್ಲಿನ ಕೆಳಹಂತದಲ್ಲಿ ಇಬ್ಬರು ಹೋರಾಡುವ ಚಿತ್ರಣವಿದೆ. ಮಧ್ಯದ ಹಂತದಲ್ಲಿ ಮಂಡಿಯೂರಿ ಕುಳಿತವನೇ ಮಡಿದ ಯೋಧ ಎನ್ನಬಹುದು. ಆತನ ಎಡಕ್ಕೆ ಆತನ ಸತೀಪತ್ನಿಯ ಚಿತ್ರಣವಿದೆ. ಆತನ ಬಲಕ್ಕೆ ಛತ್ರಿಯನ್ನು ಹಿಡಿಸಿಕೊಂಡ ಸ್ತ್ರೀ ನಿಂತಿದ್ದಾಳೆ. ಆಕೆ ಊರಗಾವುಂಡಿ. ಆಕೆಯ ರಕ್ಷಣೆಗಾಗಿ ಈತನು ಮಡಿದಿದ್ದಾನೆ ಎಂದು ಊಹಿಸಬಹುದು. ಮೂರನೆಯ ಹಂತದಲ್ಲಿ ವೀರನು ಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದಾನೆ. ಮೇಲ್ತುದಿಯಲ್ಲಿ ಸಿಂಹಮುಖವನ್ನು ಕೆತ್ತಲಾಗಿದೆ. ಈ ಶಿಲ್ಪದ ಕಾಲ ಸುಮಾರು ಕ್ರಿ. ಶ. ೧೭ನೆಯ ಶತಮಾನವಿರಬಹುದು.

ಮೇಲಿನ ಕಲ್ಲಿನಿಂದ ಸುಮಾರು ೪೫ ಮೀ. ದೂರದಲ್ಲಿ ಲಂಬಕೋನ ತ್ರಿಭುಜಾಕೃತಿಯ (right-angle triangle) ಮರಳುಗಲ್ಲಿನ ಎರಡು ಹಂತದ ಸವೆದ ಶಿಲ್ಪವಿದೆ. ಶಿಲ್ಪದ ಕೆಳಹಂತದಲ್ಲಿ ಮೂವರು ನೃತ್ಯಿಸುತ್ತಿರುವಂತೆ ಕಾಣುತ್ತದೆ. ಇನ್ನೂ ಅಸ್ಪಷ್ಟವಿರುವ ಮೇಲಿನ ಹಂತದಲ್ಲಿ ಇಬ್ಬರು ವ್ಯಕ್ತಿಗಳು ಪೀಠದ ಮೇಲೆ ಕುಳಿತಿರುವಂತೆ ಕಾಣುತ್ತದೆ. ಈ ಶಿಲ್ಪದ ಒಂದೆರಡು ಹಂತಗಳು ನೆಲದಲ್ಲಿ ಹೂತು ಹೋಗಿದ್ದರೆ, ಈಗ ಕಾಣಿಸುತ್ತಿರುವ ಕೆಳಹಂತದಲ್ಲಿ ಬಹುಶಃ ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ ಎಂದರೆ ಮೇಲಿನ ಹಂತ ದೇವಲೋಕವಿರಬಹುದು. ೧೦೦ ಸೆಂ.ಮೀ. ಎತ್ತರ, ತಳಭಾಗದಲ್ಲಿ ೬೮.೫ ಸೆಂ.ಮೀ. ಅಗಲವಿರುವ ಈ ಶಿಲ್ಪವು ಎಲ್ಲಿಯೂ ಭಿನ್ನವಾದಂತೆ ತೋರುತ್ತಿಲ್ಲ. ಇದೊಂದು ತೀರ ಸಾಧಾರಣವಾದ ಅಥವಾ ತುಂಬಾ ಹಳೆಯ ವೀರಗಲ್ಲು ಎನ್ನಬಹುದು. ಇದರ ಕಾಲವನ್ನು ಗ್ರಹಿಸಲು ಸಾಧ್ಯವಾಗಿಲ್ಲ.

ಇದೇ ಊರಿನ ಭತ್ತದ ಗದ್ದೆಯಲ್ಲಿ ೧.೫ ಮೀ. ಎತ್ತರ ೧.೨೭ ಮೀ. ಅಗಲದ ಗ್ರಾನೈಟ್‌ನ ವೀರಗಲ್ಲಿದೆ. ನಾಲ್ಕು ಹಂತಗಳು ಮಾತ್ರಾ ಕಾಣುತ್ತಿದ್ದು ಇನ್ನೊಂದು ಹಂತವು ಹೂತುಹೋಗಿರುವುದು ಸ್ಪಷ್ಟವಾಗಿ ಕಾಣುತ್ತದೆ. ಈಗ ಕಾಣುತ್ತಿರುವ ಕೆಳಹಂತದಲ್ಲಿ ಮೂವರು ಆಯುಧಧಾರಿಗಳಾದ ಯೋಧರಿದ್ದು ಅವರಲ್ಲಿ ಒಬ್ಬ ಅಶ್ವಾರೋಹಿಯಾಗಿದ್ದಾನೆ. ಎರಡನೆಯ ಹಂತದಲ್ಲಿ ಎಲ್ಲಾ ನಾಲ್ವರೂ ನೆಲದ ಮೇಲೆ ನಿಂತಿದ್ದಾರೆ. ಮೂರನೆಯ ಹಂತವು ಎರಡನೆಯ ಹಂತದಂತೆಯೇ ಇದ್ದು, ಆಯುಧಗಳನ್ನು ಹಿಡಿದಿರುವ ಭಂಗಿಯಲ್ಲಿ ಅಲ್ಪಸ್ವಲ್ಪ ಬದಲಾವಣೆ ಇದೆ. ಮೇಲಿನ ಹಂತದಲ್ಲಿ ಲಿಂಗಕ್ಕೆ ಅಭಿಷೇಕ ಮಾಡುತ್ತಿರುವ ವೀರ ಇತ್ಯಾದಿ ಚಿತ್ರಗಳಿವೆ. ಈ ಕಲ್ಲು ಕೆಳಹಂತದಲ್ಲಿ ತೋರಿಸಿರುವ ಅಶ್ವಾರೋಹಿ ಯೋಧನ ಸ್ಮಾರಕವಿರಬಹುದು. ಶಿಲ್ಪದ ಕಾಲ ಕ್ರಿ. ಶ. ಸುಮಾರು ೧೬ನೆಯ ಶತಮಾನ ಎಂದು ಊಹಿಸಲಾಗಿದೆ.

ಇದೇ ಗ್ರಾಮದ ಕಾಫಿತೋಟ ಒಂದರ ಮಧ್ಯೆ ಎರಡು ಹಂತದ ೧೩೦ ಸೆಂ.ಮೀ. ಎತ್ತರ, ೭೧.೫ ಸೆಂ.ಮೀ. ಅಗಲದ ಗ್ರಾನೈಟ್‌ನ ಮಾಸ್ತಿಕಲ್ಲಿದೆ. ಕೆಳಹಂತದಲ್ಲಿ ಸತಿ-ತೋಳಿನ ಚಿಹ್ನೆ, ಅದರ ಎಡಕ್ಕೆ ಸತಿ, ಆಯುಧಗಳನ್ನು ಹಿಡಿದ ಗಡ್ಡಧಾರಿ ಪುರುಷ ಹಾಗೂ ಆತನ ಎಡಕ್ಕೆ ಕೈಮುಗಿದು ನಿಂತಿರುವ ಸ್ತ್ರೀ ಶಿಲ್ಪವಿದೆ. ಪುರುಷನ ಪಾದಗಳ ಕೆಳಗೆ ಹುಲಿಯಂತೆ ತೋರುವ ಪ್ರಾಣಿಯ ಕೆತ್ತನೆಯಿದೆ. ಮೇಲಿನ ಹಂತದಲ್ಲಿ ಲಿಂಗಕ್ಕೆ ಅಭಿಷೇಕ ಮಾಡುತ್ತಿರುವ ಪುರುಷ ಮತ್ತು ಇತರೆ ಚಿತ್ರಗಳಿವೆ. ಶಿಲ್ಪದಲ್ಲಿರುವ ಪುರುಷ ಆ ಪ್ರಾಣಿಯಿಂದ ಮೃತನಾಗಿರಬಹುದು. ಆದರೆ ಹೋರಾಟದಿಂದಲ್ಲ ಎಂದು ತೋರುತ್ತದೆ. ಆತನ ಎಡಕ್ಕಿರುವ ಸ್ತ್ರೀ ಯಾರೆಂದು ತೋರುತ್ತಿಲ್ಲ. ಶಿಲ್ಪದ ಕಾಲ ಕ್ರಿ. ಶ. ೧೭ನೆಯ ಶತಮಾನವಿರಬಹುದು.

೩. ಬಿಳಗಲಿಯ ಪಕ್ಕದ ಇನ್ನೊಂದು **ಗ್ರಾಮ ಇಡಕಣಿ.** ಈ ಗ್ರಾಮದ ರಾಮನ ಕೊಡಿಗೆ ಎಂಬ ಊರಿನಲ್ಲಿ ಭಾರಿಗಾತ್ರದ ಎಂದರೆ ೧.೭ ಮೀ. ಎತ್ತರ ೧.೧ ಮೀ. ಅಗಲದ ಗ್ರಾನೈಟ್‌ನ ವೀರಗಲ್ಲಿದೆ. ಕೆಳಹಂತದಲ್ಲಿ ನಾಲ್ವರು ಪುರುಷರಿದ್ದು ಅವರಲ್ಲಿ ಮೂವರು ಆಯುಧಧಾರಿಗಳಾಗಿದ್ದಾರೆ. ನಾಲ್ಕನೆಯವನಿಗೆ ತಲೆ ಹೊರೆಯಿದ್ದು ಇಳಿಬಿಟ್ಟ ಬಲಗೈಯಲ್ಲಿ ಏನೋ ವಸ್ತುವನ್ನು ಹಿಡಿದಿದ್ದಾನೆ. ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ಆತನು ಯತಿಗಳೊಂದಿಗೆ ಆಸೀನರೂಢನಾಗಿದ್ದಾನೆ. ನಂತರದ ಹಂತದಲ್ಲಿ ಗೊರವ ಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದಾನೆ. ಒಟ್ಟಿನಲ್ಲಿ ಕೆಳಹಂತದಲ್ಲಿರುವ ಯಾವ ಯೋಧನ ಸಲುವಾಗಿ ಈ ವೀರಗಲ್ಲನ್ನು ನೆಡಿಸಿದ್ದಾರೋ ತಿಳಿಯುತ್ತಿಲ್ಲ. ತಲೆ ಹೊರೆಯ ವ್ಯಕ್ತಿ ಇರುವುದರಿಂದ, ಇದು ವ್ಯಾಪಾರಕ್ಕಾಗಿ ಪ್ರಯಾಣಿಸುತ್ತಿದ್ದಾಗ ಕಳ್ಳಕಾಕರೊಡನೆ ಹೋರಾಡಿ ಮಡಿದವನ ಸ್ಮಾರಕವೇ ಎಂಬ ಊಹೆ ಸಹಜವಾಗಿ ಬರುತ್ತದೆ. ಅಂತೂ, ಈ ವೀರಗಲ್ಲಿನ ಕಾಲ ಸುಮಾರು ಕ್ರಿ. ಶ. ೧೬-೧೭ನೆಯ ಶತಮಾನ ಎಂದು ತೋರುತ್ತದೆ.

ಮೇಲಿನ ವೀರಗಲ್ಲಿನಿಂದ ಸುಮಾರು ೩೦ ಮೀ. ದೂರದಲ್ಲಿ ಎಡಕ್ಕೆ ಮಗುಚಿ ಬಿದ್ದಿರುವ ವೀರಗಲ್ಲಿದೆ. ಪೂರ್ಣವಾಗಿ ಇದರ ಉದ್ದ ೨.೬೨ ಮೀ. ಅಗಲ ೧ ಮೀ. ಎಲ್ಲ ಹಂತಗಳ ವಿವರ ಮೇಲಿನ ವೀರಗಲ್ಲಿನಂತೆಯೇ ಇದೆ. ಅದರ ಕಾಲದ್ದೇ ಎನ್ನಬಹುದಾದ ಈ ವೀರಗಲ್ಲು, ಅದೇ ಘಟನೆಗೆ ಸಂಬಂಧಿಸಿದ ಇನ್ನೊಬ್ಬ ವ್ಯಕ್ತಿಯ ಸ್ಮಾರಕ ಎನ್ನಬಹುದು.

೪. ಬಿಳಗಲಿ ಸಮೀಪದ **ಮರಸಣಿಗೆ ಗ್ರಾಮದ** ಬಸ್ತಿಹಡ್ಲು ಊರಿನ ಶ್ರೀ ನೇಮಿರಾಜಯ್ಯನವರ ಮನೆಯ ಬಳಿ ಸುಮಾರು ೫೨ ಸಾಲುಗಳುಳ್ಳ ಅಪ್ರಕಟಿತ ಶಾಸನವೊಂದು ದೊರೆತಿದೆ. ಇತ್ತೀಚೆಗೆ ಪ್ರಕಟವಾದ ಮೈಸೂರು ವಿಶ್ವವಿದ್ಯಾಲಯದ **ಎಪಿಗ್ರಾಫಿಯ ಕರ್ನಾಟಿಕಾ** - ಹನ್ನೊಂದನೆಯ ಸಂಪುಟದಲ್ಲಿ (ಚಿಕ್ಕಮಗಳೂರು ಜಿಲ್ಲೆ - ಚಿಕ್ಕಮಗಳೂರು, ಮೂಡಿಗೆರೆ ಮತ್ತು ಶೃಂಗೇರಿ ತಾಲೂಕುಗಳು) ಇದರ ಪ್ರಸ್ತಾಪವಿಲ್ಲ. ಪೂರ್ಣವಾಗಿ ೧೬೭.೫ ಸೆಂ.ಮೀ. ಎತ್ತರ, ೭೩ ಸೆಂ.ಮೀ. ಅಗಲದ ಈ ಶಾಸನದ ಕಲ್ಲು ಗ್ರಾನೈಟ್‌ನದಾಗಿದೆ. ಶಾಸನ ಪಾಠದ ಮೇಲೆ ಒಂದು ಹಂತದ ಶಿಲ್ಪವಿದ್ದು ಅದರಲ್ಲಿ ಲಿಂಗ ಇತ್ಯಾದಿಗಳ ಚಿತ್ರಣವಿದೆ. ಪಡಿಯಚ್ಚು ಮತ್ತು ಕಣ್ಣಕಲುಗಳ ಆಧಾರದ ಮೇಲೆ ಪಾಠವನ್ನು ಈ ಕೆಳಕಂಡಂತೆ ಓದಲಾಯಿತು :

**ಶಾಸನ ಪಾಠ**

೧ ....... ಚಂದ್ರ ಚಾ .....
೨ ಯೂ
೩ ..............................
೪ ಯರ ....................
೫ ನಬೂ............ ನಾನೇ
೬ .... ರ ಬಾಳಿ.....ಯ
೭ ................ ಬಾಗಿನಬ್ಮಲರ್ಗೆ .....
೮ ................ ರಾಜಕೃಷ್ಣಪಕ್ಷ .....
೯ ........... ನಬೋವೇರಿಗೆಕೊಟ್ಟಕ್ರಮ ....
೧೦ ............. ಮೂಲಕ ಸಲುವವರು ಗೋ
೧೧ ............. ಮೂಲಕಸಲುವನಸಳರೂ ಭೂ
೧೨ ......... ಮೆಸ . . ಸೂನಿವಗೆಕ್ರಯದಾನವಾಗಿಕೊಟ್ಟ .....
೧೩ .... ದು ಯದಲುರಬೊಂಮರಸಬಾಗ. ಯಂನಾಂ ಮೂ
೧೪ ..... ಸಲುವಚತುಸೀಮೆ (ದಾನ)ವಾಗಿ ನಾನೂ ನಿಮ
೧೫ ...ಸಲುವಿತ್ತುಕಾರಮೂಗಮಗಳುಯಿಬ್ಬರೂ ಒಂದಾಗಿ ಭಾ
೧೬ ರದ್ವಾಜಗೋತ್ರದ ರುಕು ಶಾಖೆಯ ಕಾರಕಳದ ಪಂಡರೀ ದೇವಗೆ ... ವರಮಕ್ಕಳು ಸೂಂ
೧೭ ... ದಾನ ಮೂಲಕ್ಕೆ ಸಲುವ ಉತ್ತುಕಾರ ಗ್ರಾಮದ ಸೂಸಿ ಮೂಕಸಂ
೧೮ ... ಉದಕದಾನ ದಾರಾಪೂರ್ವಕವಾಗಿ ಧಾರೆಯನೆರೆದು ಕೊಟ್ಟಂ ಲ ಆಗ್ರಾಮದ ಚತು
೧೯ ಸೀಮೆಯಮೂಡಲು . ಡಬರಕೋಡಗಾರಣಾಳಿಯದ. ಲೂನದವಾದಿ
೨೦ ... ಯಸಲುವಲು ... **ಬೀರೊಕ್ಕಳ** ಬನದಸಿರಿಯಿರಕಲನಿದ
೨೧ ಯ ಂದರ ಪಡವಲುಸೀವೆಯರಿ..ಬೀರೊಕ್ಕಳ ಬನದಸಿರಿಯಿರ ಕಲನಿದ
೨೨ ... ದಾಗಿರಿಸಿಸಲುವ . ರಯರಕಲಲಿ ನೆಟ್ಟ ಧರ್ಮ
೨೩ .... ಮೇಜಳಸಳ ನಿಧಿನಿಕ್ಷೇಪ ಜಲಪಾಸಾಣ ....
೨೪ .... ಸಾಂವ್ಯವನೂ ನಿಂಮ
೨೫ ... ದಮರಸಣಿಗೆಯ ನಾಗಪ್ಪ ....
೨೬ ... ಂಸಲೂರ ಬಸರೂರ ಬೈರಸವಡೆಯರು ಮಾಡಿಕೊ
೨೭ ........................ ಯನೆಯರಂಸರ್ಜ ...
೨೮ ಯರು ಮಾಡಿದ .. ಯರ.... ಕಳಶೇಶ್ವರ ದೇವರಿಗೆ ಸಲುದುಸಬಸಿಗೆ ಒಸಗೆ ನಾಲ್ಕುಮು
೨೯ ... ಪಾನಸರದಿ ... ಬಲುದು ... ಯ.ಲದಯೀ ಗ್ರಾಮಕ್ಕೆ
೩೦ ... ಕಲಸಿಯ ............ ರಸನಾಪೇಯ .....
೩೧ ........................ ಯರಸಪಾದಿ ....
೩೨ ಪ್ಪ ನಿಯ ।ಕನ್ದಗರ ಗಡಿಯ
೩೩ ................................ ಬ
೩೪ ರಿಂದ
೪೪ } ಅಕ್ಷರಗಳು ತೀರ ಅಸ್ಪಷ್ಟ ಓದಲು ಆಗಲಿಲ್ಲ
೪೫ ..... ಪಿ .... ಡ ..... ಪ .... ಕ ....
೪೭ .... ಯನಿ ..... ದ। ಜೂಮ..ದಿ....

೪೭ ರಿಂದ ಮುಂದೆ ಐದು ಸಾಲುಗಳಿದ್ದು ಅಕ್ಷರಗಳು ತೀರ ಅಸ್ಪಷ್ಟ. ಓದಲು ಆಗಿಲ್ಲ.

ಈ ಮೇಲೆ ತಿಳಿಸಿದಂತೆ ಶಾಸನಶಿಲ್ಪದ ಮೇಲ್ಭಾಗದಲ್ಲಿ ಲಿಂಗದ ಚಿತ್ರಣವಿದೆ. ಅಲ್ಲದೆ ಶಾಸನ ಪಾಠದ ಮೊದಲ ಸಾಲಿನಲ್ಲಿ 'ಚಂದ್ರ ಚಾ' (ನಮಸ್ತುಂಗ ಶಿರಶ್ಚುಂಬಿ...) ಎಂದಿದೆ. ೧೨ ಮತ್ತು ೧೮ನೇ ಸಾಲಿನಲ್ಲಿ ದಾನದ ವಿಷಯವಿದೆ. ಅಲ್ಲದೆ ಈ ಶಾಸನದಲ್ಲಿ 'ಬೊಂಮರಸ', 'ಉತ್ತುಗಾರಗ್ರಾಮ', 'ಭಾರದ್ವಾಜಗೋತ್ರದ ರುಕುಶಾಖೆಯ ಕಾರಕಳದ ಪಂಡರೀದೇವ....', 'ಬೀರೊಕ್ಕಳವನ', 'ಮರಸಣಿಗೆಯ ನಾಗಪ್ಪ', 'ಭೈರಸವಡೆಯ' ಇತ್ಯಾದಿಗಳ ಉಲ್ಲೇಖವಿದೆ. ಇವುಗಳನ್ನು ಮೇಲಿನ ಎ.ಕ. ಸಂಪುಟ ೧೧ ಪುಟ xxxiii ಹಾಗೂ ಮೂಡಿಗೆರೆ ತಾಲೂಕಿನ ಶಾಸನ ಸಂಖ್ಯೆ ೪೮, ೪೯, ೧೦೪, ೧೦೫ ಮತ್ತು ೧೦೯ ಗಳೊಡನೆ ಹೋಲಿಸಿದಾಗ, ಈಗ ದೊರೆತ ಶಾಸನವನ್ನು ಕೆಳಕಂಡಂತೆ ವಿಶ್ಲೇಷಿಸಬಹುದು.

ಅ) ಇದೊಂದು ಶೈವಪರ ಶಾಸನ.

ಆ) ಶಾಸನದ ಉದ್ದೇಶ ದಾನ.

ಇ) ಇದು ಕಳಸ-ಕಾರ್ಕಳವನ್ನು ವಿಜಯನಗರದ ಅರಸರ ಸಾಮಂತನಾಗಿ ಆಳುತ್ತಿದ್ದ ಇಮ್ಮಡಿ ಭೈರರಸ ಒಡೆಯರ ಕಾಲದ ಶಾಸನ.

ಈ) ಇದರ ಕಾಲ ಕ್ರಿ. ಶ. ಸುಮಾರು ೧೫೧೬.

ಈ ಗ್ರಾಮಗಳಲ್ಲಿ ಇನ್ನೂ ಹಲವು ಶಿಲ್ಪಗಳು ಇರುವ ವಿಷಯ ನಂತರ ತಿಳಿದುಬಂದಿ**ದೆ.***



(ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಬಿಳಗಲಿ ಕುಟುಂಬದವರಿಗೆ, ಮರಸಣಿಗೆಯ ಶ್ರೀ ಎ. ವಿಜಯಕುಮಾರ್ ಹಾಗೂ ಮೇಲೆ ತಿಳಿಸಿದ ಊರುಗಳ ಎಲ್ಲಾ ಗ್ರಾಮಸ್ಥರಿಗೂ ಕೃತಜ್ಞನಾಗಿದ್ದೇನೆ. ಈ ಸಂದರ್ಭದಲ್ಲಿ ಸದಾ ನನ್ನೊಡನಿದ್ದ ಚಿ।। ಬಿ. ಎಲ್. ಸಂದೀಪ್ ಮತ್ತು ಚಿ।। ಎ. ಆರ್. ಗೌತಮ್ ಇವರ ಸಹಾಯವನ್ನು ಮರೆಯುವಂತಿಲ್ಲ. ಲೇಖನವನ್ನು ಸಿದ್ಧಪಡಿಸಲು ಸಹಾಯ ಮಾಡಿದ ಕು।। ಬಿ. ಆರ್. ಭಾರತೀ, ಡಾ।। ಎಚ್. ಎಸ್. ಗೋಪಾಲರಾವ್ ಮತ್ತು ಶ್ರೀ ಜಿ. ಕೆ. ದೇವರಾಜಸ್ವಾಮಿಯವರಿಗೆ ಆಭಾರಿಯಾಗಿದ್ದೇನೆ.)

ಡಾ। ಎಚ್. ಎಸ್. ಉಷಾರಾಣಿ*

# ಶಾಸನೋಕ್ತ ಶಿಲಾಕರ್ಮಿ ಸಂಭಾವನೆ - ಒಂದು ಆರ್ಥಿಕ ವಿಶ್ಲೇಷಣೆ

ಕುಶಲಕರ್ಮಿ ವರ್ಗಕ್ಕೆ ಸೇರಿದ ವಿಶ್ವಕರ್ಮ, ಪಂಚಾಲರು ಮತ್ತು ವೀರಪಂಚಾಲರು ಈಗಾಗಲೇ ವಿದ್ವಾಂಸರ ಗಮನ ಸೆಳೆದಿದ್ದಾರೆ. ಈ ದಿಸೆಯಲ್ಲಿ ಜಾನ್ ಬೋವರ್, ಕೆಲಸನ್ ಕೊಲಿಯರ್, ಡಾ. ಕೆ. ಎಸ್. ಕುಮಾರಸ್ವಾಮಿ ಮೊದಲಾದವರು ಸಾಕಷ್ಟು ಚಿಂತನ ಮಂಥನ ನಡೆಸಿ ಕುಶಲಕರ್ಮಿಗಳ ಆರ್ಥಿಕ ಸ್ಥಿತಿ ತೃಪ್ತಿಕರವಾಗಿತ್ತೆಂಬ ಅಭಿಮತ ವ್ಯಕ್ತಪಡಿಸಿದ್ದಾರೆ. ಭೂಮಿ ಹಾಗು ಹಣದ ರೂಪದಲ್ಲಿ ವೇತನ ಪಡೆಯುತ್ತಿದ್ದ ವಾಸ್ತುಶಿಲ್ಪಿಗಳಿಗೆ ಆದಾಯದ ದೃಷ್ಟಿಯಿಂದ ೧೨ ನೇ ಶತಮಾನ ಸುವರ್ಣಯುಗ ಎಂದು ಗುರುತಿಸಲಾಗಿದೆ. ಕಾರಣ ಅಂದು ಬೃಹತ್ ಉದ್ಯಮಗಳೆಂದರೆ - ಕೆರೆ ಕಟ್ಟೆ ಕಾಲುವೆ ಮತ್ತು ದೇವಾಲಯ ನಿರ್ಮಾಣ ಅಧಿಕ ಸಂಖ್ಯೆಯಲ್ಲಿ ಉದ್ಯೋಗಕ್ಕೆ ಅವಕಾಶ ಕಲ್ಪಿಸಿ, ಕಾರ್ಮಿಕರ ಬೇಡಿಕೆಯನ್ನು ಹೆಚ್ಚಿಸಿತ್ತು. ಪ್ರಸ್ತುತ ಲೇಖನ ೧೨ನೇ ಶತಮಾನದ ಬಳ್ಳಾರಿ ಜಿಲ್ಲೆಯ ಶಾಸನವನ್ನಾಧರಿಸಿದೆ. ಹಾಗೂ ದೇವಾಲಯ ನಿರ್ಮಾಣದ ವೆಚ್ಚವನ್ನು ತಿಳಿಯುವ ಕುತೂಹಲವುಳ್ಳದ್ದಾಗಿದೆ.

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಹೊಳಲು ಗ್ರಾಮದ ಅಮೃತೇಶ್ವರ ದೇವಾಲಯದ ನವರಂಗ ಮಂಟಪದಲ್ಲಿನ ಕಂಬದಲ್ಲಿ ನಾಲ್ಕು ಪಂಕ್ತಿಯ, ಶಾಸನವಿದೆ. ಈ ಶಾಸನ ನವರಂಗ ಮಂಟಪದ ಕಂಬ ರಚಿಸಿದ ಶ್ರೀಕರನಾಗ ಎಂಬ ಶಿಲ್ಪಿ ಪಡೆದ ಸಂಭಾವನೆ ೯೦ ಗದ್ಯಾಣವೆಂದು ದಾಖಲಿಸಿದೆ. ಕಂಬವೊಂದಕ್ಕೆ ೨೦ ಗದ್ಯಾಣದಂತೆ ನಾಲ್ಕು ಕಂಬಕ್ಕೆ ೯೦ ಗದ್ಯಾಣ ಪಡೆದನೆಂದು ಹೇಳಲಾಗಿದೆ. ಪ್ರಾಯಶಃ ಕಂಬವೊಂದರಲ್ಲಿ ಹೆಚ್ಚು ಕುಸುರಿ ಕೆಲಸ ಮಾಡಿದ್ದಕ್ಕಾಗಿ ಅಥವಾ ಆತನ ಗುಣಮಟ್ಟಕ್ಕೆ ಹತ್ತು ಗದ್ಯಾಣ ಹೆಚ್ಚು ದೊರಕಿರಬಹುದು. ಅದೇನೇ ಇದ್ದರೂ ಆತ ಕೇವಲ ಕಂಬ ರಚನೆಕಾರನಲ್ಲ.

ಉಲ್ಲೇಖಿತ ಶಾಸನದಲ್ಲಿ ಶ್ರೀಕರನಾಗನನ್ನು ಈ ರೀತಿ ವರ್ಣಿಸಲಾಗಿದೆ: *'ಕಲಿಯುಗ ವಿಶ್ವಕರ್ಮ ಚೌಷಷ್ಟಿ ಕಳಾವಿದ ಪ್ರವೀಣ, ಚೌಷಷ್ಟಿ ಪ್ರಾಸಾದ ವಿಶಾರದ, ನಾಗರ ಕಳಿಂಗಾಂಧ್ರ ದ್ರಾವಿಳ ವೇಸರ ಚತುರ್ಜಾತಿ ಪ್ರಾಸಾದ ನಿರ್ಮಿತ ಸೂತ್ರಧಾರಿ'* ಈ ಶಿಲಾಕರ್ಮಿ ನಿರ್ಮಿಸಿದ ದೇವಾಲಯಗಳನ್ನೇ ಹೆಸರಿಸಿಲ್ಲ. ಬದಲಿಗೆ ದೇವಾಲಯದ ಒಂದು ಭಾಗಕ್ಕೆ ತಗುಲಿದ ಭಾಗಶಃ ಖರ್ಚನ್ನು ತಿಳಿಯಪಡಿಸುವುದರ ಮೂಲಕ ಮತ್ತಷ್ಟು ದಾಖಲೆಗಳ ಶೋಧಕ್ಕೆ ಆಸಕ್ತಿ ಬೆಳೆಸುತ್ತದೆ. ಏಕೆಂದರೆ ದೇವಾಲಯ ನಿರ್ಮಾಣ ಹಂತದಲ್ಲಿ ಶಿಲಾಕರ್ಮಿಗಳು ಪಡೆದ ಸಂಭಾವನೆಯ ಕುರಿತು ಶಾಸನಗಳು ಮಾಹಿತಿ ನಿಡುವುದಿಲ್ಲ.

ದೇವಾಲಯ ನಿರ್ವಹಣೆಯ ಸಂದರ್ಭದಲ್ಲಿ ಕುಶಲ ಕರ್ಮಿಗಳಿಗೆ ನೀಡಬೇಕಾದ ನಗದು ಸ್ವರೂಪದ ವಾರ್ಷಿಕ ಸಂಭಾವನೆ ೧೨ ಗದ್ಯಾಣಕ್ಕಿಂತ ಹೆಚ್ಚಿನದ್ದಾಗಿಲ್ಲ. ಸಾಮಾನ್ಯವಾಗಿ ೪ ಗದ್ಯಾಣವೆಂದೇ ಹೆಚ್ಚಿನ ದಾಖಲೆಗಳಿವೆ.

ಸರ್ಕಾರ ಕುಶಲಕರ್ಮಿಗಳಿಂದ ಉಚಿತ ಸೇವೆ ಅಥವಾ ಬಿಟ್ಟಿಯನ್ನು ನಿರೀಕ್ಷಿಸುತ್ತಿತ್ತು. ಉಚಿತ ಸೇವೆ ಸಲ್ಲಿಸದವರು ಬಿಟ್ಟಿ ತೆರಿಗೆ ತೆರಬೇಕಾಗಿತ್ತು.

ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಕೆರೆ ಕಟ್ಟೆ ಕಾಲುವೆ ನಿರ್ಮಾಣ ಕಾರ್ಯ ಭರದಿಂದ ಸಾಗಿತ್ತು. ಅಲ್ಲದೆ ಈ ಕಾರ್ಯನ್ನು ಪುಣ್ಯಕಾರ್ಯವೆಂದು ಭಾವಿಸಲಾಗಿದ್ದರೂ ಅದಕ್ಕೆ ತಗುಲುತ್ತಿದ್ದ ವೆಚ್ಚವನ್ನೂ ದಾಖಲಿಸಲಾಗಿದೆ. ಉದಾಹರಣೆಗೆ ೩೦೦ ಹೊನ್, ೫೦೦ ಗದ್ಯಾಣ ಇತ್ಯಾದಿ. ಅಧಿಕಾರಿಗಳು ಸ್ಥಳೀಯ ಸಂಸ್ಥೆಗಳು ಹಾಗೂ ಖಾಸಗಿ ವ್ಯಕ್ತಿಗಳು ಈ ಕಾರ್ಯದಲ್ಲಿ ತಮ್ಮನ್ನೇ ತೊಡಗಿಸಿಕೊಂಡಿದ್ದರು.

ದೇವಾಲಯಗಳು ಬ್ಯಾಂಕ್‌ಗಳಂತೆ ಕಾರ್ಯ ನಿರ್ವಹಿಸುತ್ತಿದ್ದು ಆರ್ಥಿಕ ಚಟುವಟಿಕೆಗಳ ಪ್ರಮುಖ ಕೇಂದ್ರವಾಗಿದ್ದವು, ಮತ್ತೊಂದೆಡೆ ಬೃಹತ್ ಕೈಗಾರಿಕೆಯಂತಿದ್ದು ನಿರ್ಮಾಣ ಹಾಗೂ ನಿರ್ವಹಣೆಯ ಸಂದರ್ಭದಲ್ಲಿ ಉದ್ಯೋಗಕ್ಕೆ ಅವಕಾಶ ಕಲ್ಪಿಸುತ್ತಿತ್ತು.

*ಒಟ್ಟಿನಲ್ಲಿ ಉಲ್ಲೇಖಿತ ಶಾಸನ ಆರ್ಥಿಕ ವಿಶ್ಲೇಷಣೆಗೆ ಅಪೂರ್ವ ದಾಖಲೆಯಂತಿದ್ದರೂ, ಅಪೂರ್ಣವೆನಿಸುತ್ತದೆ. ಆರ್ಥಿಕ ಚಟುವಟಿಕೆಗಳು ವಿಸ್ತರಿಸಿ ಹಣದ ಚಲಾವಣೆ ಹೆಚ್ಚುತ್ತಿದ್ದಾಗ್ಯೂ ಬಿಟ್ಟಿ ಅಥವಾ ಉಚಿತ ಸೇವೆ ಹಾಗೂ ಭೂದಾನ, ಪ್ರಾಮುಖ್ಯತೆ* ಗಳಿಸಿದುವೆಂಬುದು ಮನದಟ್ಟಾಗುತ್ತದೆ.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

೧. ಡಾ. ಕೆ. ಎಸ್. ಕುಮಾರಸ್ವಾಮಿ., (೧೯೯೬), **ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು**, ಬೆಂಗಳೂರು ಪುಟ. ೧೦೦.
೨. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧** - ಬಳ್ಳಾರಿ ಜಿಲ್ಲೆ, ಹಡಗಲಿ ತಾಲೂಕು, ಶಾಸನ ಸಂಖ್ಯೆ ೪೧.

*ಆಯ್ಕೆ ಶ್ರೇಣಿ ಇತಿಹಾಸ ಉಪನ್ಯಾಸಕರು, ವಿದ್ಯೋದಯ ಕಲಾ ಮತ್ತು ವಾಣಿಜ್ಯ ಕಾಲೇಜು, ಟಿ. ನರಸೀಪುರ - ೫೭೧ ೧೨೪.

ಪ್ರೊ. ಲಕ್ಷ್ಮಣ್ ತೆಲಗಾವಿ*

# ಆಯಿತೋಳಿನ ಕರೇಉಡುಸಲವ್ವನ ಸ್ಮಾರಕಶಿಲ್ಪ

ಆದಿಪುರ ಎಂಬ ಪ್ರಾಚೀನನಾಮ ಸಹಿತವಾದ ಆಯಿತೋಳು ಚಿತ್ರದುರ್ಗ ತಾಲೂಕಿನಲ್ಲಿರುವ ಪುಟ್ಟ ಗ್ರಾಮ. ಚಿತ್ರದುರ್ಗದಿಂದ ಉತ್ತರಕ್ಕೆ ೮ ಕಿ.ಮೀ. ದೂರದಲ್ಲಿದೆ; ಚಿತ್ರದುರ್ಗದಿಂದ ಲಿಂಗದಹಳ್ಳಿ ಸುಲ್ತಾನಿಪುರ - ಸೂರನಹಳ್ಳಿ - ಜಗಲೂರುಗಳಿಗೆ ಹೋಗುವ ಮಾರ್ಗದಲ್ಲಿ ನೆಲೆಗೊಂಡಿದೆ. ಪ್ರಸಿದ್ಧ ಪ್ರಾಕ್ಚಾರಿತ್ರಿಕ ಎಡೆ ತಮಟಕಲ್ಲನ್ನು ದಾಟಿದ ನಂತರ ಸಿಕ್ಕುವ ಊರೇ ಇದು. ಈ ಮಾರ್ಗವನ್ನು ಕಣಕುಪ್ಪೆರಸ್ತೆಯೆಂತಲೂ ಕರೆದಿರುವುದುಂಟು. ಹಳೆಯ ನಕ್ಷೆಗಳು ಚಿತ್ರದುರ್ಗದಿಂದ ಬಿಜಾಪುರ (ಡಿಳ್ಳಿ?) ದತ್ತ ಸಾಗುವ ಮಾರ್ಗ ಕಣಕುಪ್ಪೆ, ಬಿಳಿಚೋಡುಗಳ ಮೂಲಕ ಹಾದು ಹೋಗುತ್ತಿದ್ದಿತೆಂಬುದನ್ನು ಗುರುತಿಸುತ್ತವೆ.*[೧] ಈ ಮಾರ್ಗವನ್ನು 'ದಂಡಿನ ಮಾರ್ಗ' ವೆಂತಲೂ ಗುರುತಿಸಲಾಗುತ್ತದೆ. ಹಿಂದೆ ಡಿಳ್ಳಿ(ಬಿಜಾಪುರ?) ಯಿಂದ ಬೆಂಗಳೂರು(?) ದಿಕ್ಕಿಗೆ ಚಲಿಸುತ್ತಿದ್ದ ದಂಡು ಇದೇ ಮಾರ್ಗದಲ್ಲಿ ಸಾಗುತ್ತಿದ್ದಿತಂತೆ. ವಾಡಿಕೆಯಲ್ಲಿ ಬಿಜಾಪುರವನ್ನೇ ಡಿಳ್ಳಿಯೆಂದು ಕರೆಯಲಾಗುತ್ತದೆಂಬ ಅಭಿಪ್ರಾಯ ವಿದೆ. ಈ ದಂಡಿನಮಾರ್ಗವನ್ನು 'ಪಾಳೆಯಗಾರರ ಮಾರ್ಗ' ವೆಂತಲೂ ಕರೆದಿರುವಂತೆ ಕಾಣುತ್ತದೆ.

### *ಆಯಿತೋಳು ಗ್ರಾಮ*

ಆಯಿತೋಳಿನ ಪ್ರಾಚೀನ ಗ್ರಾಮದ ಸುತ್ತಲೂ ಹಿಂದೊಮ್ಮೆ ಕೋಟೆಯಿದ್ದಿತೆಂಬುದಕ್ಕೆ ಈಗ ಉಳಿದಿರುವ ಬುರುಜಿನ ಅವಶೇಷವೇ ಸಾಕ್ಷಿ. ಊರಿನ ಹೊರವಲಯದಲ್ಲಿ, ಅಂದರೆ ಮುಂಭಾಗದಲ್ಲಿ ಕಂಡುಬರುವ ಏರಿಯ ಅವಶೇಷಗಳು ಇಲ್ಲಿ ಕೆರೆಯಿದ್ದಿತೆಂಬುದನ್ನು ಸಾಬೀತುಪಡಿಸುತ್ತವೆ. ಇದನ್ನು 'ನಿಲ್ಲುಗೆರೆ' (ಸ್ಥಳೀಯರ ಪ್ರಕಾರ 'ನೀರು ನಿಲ್ಲುವ ಕೆರೆ') ಎನ್ನಲಾಗುತ್ತಿದ್ದಿತು. ಚಿತ್ರದುರ್ಗದ ಅರಸ ಮದಕರಿನಾಯಕ ಗೊಲ್ಲರ ಹವಾಲ್ದಾರ್ ಕಾಟಪ್ಪನ ವಂಶಸ್ಥರಿಗೆ ಈ ಕೆರೆಯನ್ನು ಉಂಬಳಿಯಾಗಿ ಬಿಟ್ಟಿದ್ದನೆಂದು ಹೇಳಲಾಗುತ್ತದೆ. ಈಗ ಕೆರೆಯ ಏರಿ ಗುರುತಿಸಲಾಗದಷ್ಟು ಹಾಳಾಗಿದ್ದು, ಕೆರೆಯ ಅಂಗಳದಲ್ಲಿ ಉಳುಮೆ ಮಾಡಲಾಗುತ್ತಿದೆ. ಕೆರೆಯ ಸ್ವರೂಪವನ್ನು ನಿರ್ಧರಿಸುವುದು ಕಷ್ಟ.

ಈ ನಿಲ್ಲುಗೆರೆಯ ಹಿಂಭಾಗದಲ್ಲಿರುವ ಎರಡು ದೇವಾಲಯಗಳ ಪೈಕಿ ಕರಿಯಮ್ಮನದು ಊರಿಗೆ ಹೊಂದಿಕೊಂಡಂತಿದ್ದರೆ, ಕೊಲ್ಲಾಪುರದಮ್ಮನ ಗುಡಿ ಊರ ಹೊರಗಿದೆ. ಈಶ್ವರ, ಅಂಜನೇಯಸ್ವಾಮಿ, ಗೊಂದೇಹಳ್ಳಿ ದೇವರು, ವದ್ದೀಕೆರೆ ಸಿದ್ದಪ್ಪ - ಇವು ಊರಿನಲ್ಲಿರುವ ಕೆಲವು ಹಳೆಯ ದೇವಾಲಯಗಳು. ಕರಿಯಮ್ಮ ಅಯಿತೋಳಿನ ಗ್ರಾಮದೇವತೆ.

ಭೂಮಿದಾನಕ್ಕೆ ಸಂಬಂಧಿಸಿದ ಕಲ್ಬರಹಗಳು ಸಹಾ ಆಯಿತೋಳು ಪರಿಸರದಲ್ಲಿ ಬೆಳಕಿಗೆ ಬಂದಿವೆ. ಗಮನಾರ್ಹ ಸಂಗತಿಯೆಂದರೆ, ಚಿತ್ರದುರ್ಗ ಬುರುಜನಹಟ್ಟಿಯ ಸಿದ್ಧರಾಮೇಶ್ವರ ಮಠಕ್ಕೆ ಈ ಗ್ರಾಮದಲ್ಲಿ ಭೂದತ್ತಿ ನೀಡಿರುವುದು. ಬುರಜನಹಟ್ಟಿ ಶ್ರೀ ಸಿದ್ಧರಾಮೇಶ್ವರ ದೇವಾಲಯ ಆವರಣದಲ್ಲಿರುವ ೧೯ನೇ ಶತಮಾನದ ಲಿಂಗಮುದ್ರೆ ಕಲ್ಲಿನಲ್ಲಿ *'ಶ್ರೀ ಸಿಧರಾಮಪನವರ ಮಠದ ।ಆ।।ಜಂ।।ಗೊಲ್ಲಳರು'* ಎಂದಿದ್ದು, ಈ ದೇವಾಲಯವನ್ನು ಮಠವೆಂತಲೂ ಕರೆಯಲಾಗಿದೆ. ಆಯಿತೋಳಿನ ನೈಋತ್ಯದಲ್ಲಿರುವ ಹೊಲವೊಂದರಲ್ಲಿ*[೨] 'ಚಿತ್ರದುರ್ಗದ ಶ್ರೀ ಸಿದ್ಧರಾಮೇಶ್ವರ ದೀಪಾರಾಧನೆ ಹೊಲ'ವೆಂಬ ಐದುಸಾಲಿನ ಬರಹವುಳ್ಳ ಲಿಂಗಮುದ್ರೆಕಲ್ಲು ಕಂಡುಬಂದಿರುವುದು ವಿಶೇಷ. (ಇದೇ ಲಿಂಗಮುದ್ರೆಕಲ್ಲಿನ ತಳಭಾಗದಲ್ಲಿ ಇದಕ್ಕೂ ಪೂರ್ವದ ಮೂರುಸಾಲಿನ ಬರಹವೂ ಇದೆ). ಚಿತ್ರದುರ್ಗದ ಸಿದ್ಧರಾಮೇಶ್ವರ ಮಠಕ್ಕೆ ಇಲ್ಲಿ ಏಳು ಎಕರೆ ಜಮೀನು ಬಿಡಲಾಗಿದ್ದಿತೆಂಬ ಅಂಶ ಸ್ಥಳೀಯರಿಂದ ವ್ಯಕ್ತಪಡುತ್ತದೆ.

### *ಕರಿಯಮ್ಮನ ಗುಡಿ*

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಕರೇ ಉಡುಸಲವ್ವನ ಶಿಲ್ಪವಿರುವುದು ಗ್ರಾಮದೇವತೆ ಕರಿಯಮ್ಮನ ಗುಡಿಯಲ್ಲಿ. ಈಗ ಕರಿಯಮ್ಮನ ಹಳೆಯ ಗುಡಿಯ ಜಾಗದಲ್ಲಿ ಪುಟ್ಟದಾದ ಹೊಸ ಕಟ್ಟಡ ಎದ್ದಿದೆ. ಹಿಂದೆ ಕರಿಯಮ್ಮ ದೇವತೆಯ ಮುಂದೆ ಬಲಬದಿಯಲ್ಲಿ ಸ್ಥಾಪಿತವಾಗಿದ್ದ ಕರೇ ಉಡುಸಲವ್ವನ ವಿಗ್ರಹ ಈಗ ಸ್ಥಾನಪಲ್ಲಟವಾಗಿದ್ದು, ಹೊಸ ಗುಡಿಯಲ್ಲಿ ಹೊಸ ನೆಲೆ ಕಂಡು ಕೊಳ್ಳಬೇಕಿದೆ. ಕರಿಯಮ್ಮನನ್ನು ಆದಿಪುರದ ಕರಿಯಮ್ಮ ದೇವರೆಂದು ಕರೆದಿರುವುದುಂಟು. ಹವಾಲ್ದಾರ್ ಕಾಟಪ್ಪನ ವಂಶಸ್ಥರಾದ ಪಟೇಲ್ ನಾಗಪ್ಪನವರ ವಶದಲ್ಲಿರುವ ದಾಖಲೆಯ ಪ್ರಕಾರ,*[೩] ಚಿತ್ರದುರ್ಗದ ಶ್ರೀ ಬೃಹನ್ಮಠದಲ್ಲಿದ್ದ ಕರಿಯಮ್ಮದೇವರ ಮೂಲದಾಖಲೆಗಳನ್ನು ಆಯಿತೋಳಿನ ಕೆಲವರು ಸ್ವತಃ ಪರಾಮರ್ಶಿಸಿದ್ದರು. ಮಡ್ಡಿನಾಗಪ್ಪ, ಪಟೇಲ್ ನಾಗಪ್ಪ, ಪಟೇಲ್ ಕರಿಯಪ್ಪ, ಸಂಣ್ಣೀರಪ್ಪ, ರಿಕಾರ್ಡ್‌ದಾರ ಶಿದ್ದಪ್ಪ, ಯಂಜಪ್ಪ, ಶೇರ್ವೆಗಾರ ಕೆಂಜಡಿಯಪ್ಪ, ಶೇರ್ವೆಗಾರ ದಾಸಪ್ಪ ಅವರು ಚಿತ್ರದುರ್ಗ ಬೃಹನ್ಮಠದ ಅಂದಿನ ಜಗದ್ಗುರುಗಳನ್ನು (ಶ್ರೀ ಜಯವಿಭವ ಸ್ವಾಮಿಗಳನ್ನು) ಕಂಡು, "ಶ್ರೀ ಕರಿಯಮ್ಮ ದೇವಿಯು ಈಗಿನ

*ಮುಖ್ಯಸ್ಥ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.



ಕೆಲವು ಶತಮಾನಗಳ ಹಿಂದೆ ತಮ್ಮ ವೀರಶೈವರ ಅಧಿದೇವತೆಯಾಗಿದ್ದಿತೆಂದು, ಆ ನಂತರ ಅವರು ನಮ್ಮ ಅವಲ್ದಾರ್ ಕಾಟಪ್ಪನ ಸಂತತಿಯವರ ಸ್ವಾನುಭವ ಅಧಿಕಾರಕ್ಕೊಳ ಪಡಿಸಿದರೆಂದು, ಆ ರೀತಿ ತಮ್ಮ ಸಂಸ್ಥಾನದಲ್ಲಿ ದಾಖಲಿರುವುದೆಂದು ತಮ್ಮಲ್ಲಿನ ರಿಕಾರ್ಡ್ ತಪಶೀಲನ್ನು ಸಮರ್ಪಿಸಿ, ದೇವಿಯ ಸಕಲ ಮೂಲ ವಿಷಯವನ್ನು ಗ್ರಹಿಸಿಕೊಂಡರು." ಅಲ್ಲದೆ, "ಮಹಾಸ್ವಾಮಿಗಳಿಂದ ಪಟ್ಟಾಭಿಷೇಕಕ್ಕೆ ೧೯೫೪ನೆ ಮೇ ೧೩ನೆ ಗುರುವಾರ ಜಯನಾಮ ಸಂವತ್ಸರದ, ಏಕಾದಶಿ ತಿಥಿ ವೈಶಾಖಶುದ್ದದ ಉತ್ತರಾ ನಕ್ಷತ್ರ ೨೮-೨೩ ಘ ೩.೨ ಘಳದ ಶುಭಮುಹೂರ್ತವನ್ನು ಪ್ರಾರ್ಥಿಸಿ ಅನುಗ್ರಹಿಸಿಕೊಂಡರು. ಮತ್ತು ಕರಲಹಟ್ಟಿ (ಕರ್ಲಟ್ಟಿ) ತಮ್ಮ ಶಿಷ್ಯ ರಾಚೋಟಯ್ಯನವರ ದ್ವಿತೀಯ ಪುತ್ರ ಶ್ರೀಮಾನ್ ಬಸಯ್ಯನವರಿಗೆ ಶ್ರೀದೇವಿಯ ಅಪ್ಪಣೆಯಾದ ಸ್ಥಳದಲ್ಲಿ ಈ ಶುಭಮುಹೂರ್ತವನ್ನು ಪೂರಯಿಸಬೇಕೆಂದು ಆಜ್ಞಾಪಿಸಿ ಅನುಗ್ರಹಿಸಿದರು."

ಈ ದಾಖಲೆ ಮುಂದುವರೆದು ಹೇಳುವಂತೆ, ಸದರಿ ಪಟ್ಟದ ಪೂಜಾರಿ ಕಾಟಪ್ಪನ ದ್ವಿತೀಯ ಪುತ್ರ ಈರಪ್ಪ ಎಂಬಾತನಿಗೆ ಚಿತ್ರದುರ್ಗ ಗುಡ್ಡಸಾಲಿನಲ್ಲಿ (ಗಂಜಿಗಟ್ಟೆ ಪರಿಸರದಲ್ಲಿ) ಬರುವ ಅಕ್ಕಳೇರಿಯಮ್ಮ (ಅಕ್ಲೇರಮ್ಮ)ನ ಪುಣ್ಯಕ್ಷೇತ್ರದಲ್ಲಿ 'ಮಂಗಳ ಪಟ್ಟಾಭಿಷೇಕವನ್ನು' ಸುಗಮವಾಗಿ ನೆರವೇರಿಸಲಾಯಿತು. ಒಟ್ಟಿನಲ್ಲಿ ಈ ದಾಖಲೆ ಹೇಳುವಂತೆ, ಆಯಿತೋಳಿನ ಗ್ರಾಮದೇವತೆ ಕರಿಯಮ್ಮ ಮೂಲತಃ ವೀರಶೈವರಿಗೆ ಸೇರಿದುದು. ಈ ದೇವತೆಯ ಪೂಜಾರಿಕೆ ಪಟ್ಟಾಭಿಷೇಕ ಮಾಡಿದ ಬಸವಯ್ಯ ಸಹಾ ವೀರಶೈವರು.

ಕರಿಯಮ್ಮನ ಮೂಲ ಮತ್ತು ಜಾತ್ರೆ ಕುರಿತು ಮೇಲಿನ ದಾಖಲೆ ಸಾಕಷ್ಟು ವಿವರಗಳನ್ನು ಒದಗಿಸುತ್ತದೆ. ಕರಿಯಮ್ಮ ದೇವತೆ ಡಿಳ್ಳಿಯಿಂದ ಬಂದದ್ದು, ಆದಿಪುರದಲ್ಲಿ (ಆಯಿತೋಳಿನಲ್ಲಿ) ಹುಟ್ಟಿಕೊಂಡದ್ದು, ದೇವತೆಯ ಜಾತ್ರೆ ನಡೆಸಲು ಸಿದ್ಧತೆ ಮಾಡಿಕೊಂಡದ್ದು, ವೀರಶೈವನಾದ ಗೌಡ ಬಸಪ್ಪ ಈ ದೇವತೆಯ ಭಕ್ತ ಗೊಲ್ಲವಂಶದ ಚಂದ್ರವಳ್ಳಿ ವೀರಪಂಜಣ್ಣನಿಗೆ ದೇವತೆಯನ್ನು ಒಪ್ಪಿಸಿದ್ದು, ಕರೆಯಮ್ಮದೇವರ ಸಿಡಿ ಆಡಲು ನಡೆಸಿದ ಪೂರ್ವಭಾವಿ ವ್ಯವಸ್ಥೆ, ಮದೇಹಳ್ಳಿ ತಿಪ್ಪಯ್ಯನ ತೋಟದಲ್ಲಿದ್ದ ದೊಡ್ಡ ಹಲಸಿನಮರವನ್ನು ಆತನ ಒಪ್ಪಿಗೆ ಪಡೆದು ಕತ್ತರಿಸಿ ಸಿಡಿಮರ ಮಾಡಿಕೊಂಡದ್ದು, ಈ ಆಚರಣೆ ಸಂಬಂಧದಲ್ಲಿ ಒದಗಿಸಿ ಕೊಳ್ಳಲಾದ ಪೂಜಾಸಾಮಗ್ರಿ, ಅನುಸರಿಸಿದ ನೇಮ - ನಿಷ್ಠೆ, ದೇವತೆಯ ಸೂಚನೆಯಂತೆ ಶುಭ ನಕ್ಷತ್ರದಲ್ಲಿ ಕರುವಿನಕಟ್ಟೆ ಕಲ್ಲಣ್ಣ, ಬಸಣ್ಣರೆಂಬವರು ಸಿಡಿಮರವನ್ನು ಕೆತ್ತಿ ಸರಿಮಾಡಿದ್ದು, ಜಾತ್ರೆಗೆ ಮುನ್ನಮಾಡಲಾದ ಶಾಸ್ತ್ರಗಳು, ಸಿಡಿಬಂಡಿಗೆ ಪಂಜಯ್ಯನ ಹಟ್ಟಿ ಪಿಳ್ಳಣ್ಣನ ಎರಡು ಕರಿಯ ಎತ್ತುಗಳನ್ನು ಹೂಡಿದ್ದು, ಸಿಡಿಬಂಡಿಯನ್ನು ಹೊಡೆಯುವ ಸಮಯದಲ್ಲಿ ಕರೇ ಉಡುಸಲವ್ವ ಎಂಬ ಐದು ವರುಷದ ಮಗು ಗಾಲಿಬಾಯಿಗೆ ಬಿದ್ದದ್ದು, ಅಲ್ಲಿಯೇ ಮಗುವಿನ ಸಮಾಧಿ ಮಾಡಿ ಪ್ರತಿಮೆಯನ್ನು ಸ್ಥಾಪಿಸಿದ್ದು, ಸಿಡಿ ನಂತರದ ಆಚರಣೆಗಳು, ಇತ್ಯಾದಿಯನ್ನು ಪ್ರಸ್ತುತ ದಾಖಲೆಯಿಂದ ಸಂಗ್ರಹಿಸಬಹುದು. ಮುಖ್ಯವಾಗಿ, ಪ್ರಸ್ತುತ ಪ್ರಬಂಧಕ್ಕೆ ಸಂಬಂಧಿಸಿದ ಕರೇ ಉಡುಸಲವ್ವನ ವೃತ್ತಾಂತವನ್ನೂ ಇದು ಒಳಗೊಂಡಿರುವುದು ವಿಶೇಷ.

*ಕರೇ ಉಡುಸಲವ್ವನ ವೃತ್ತಾಂತ*

ಬಂಡಿಸಿಡಿಯ ಗಾಲಿಗೆ ಬಿದ್ದು ಮೃತಾಳದ ಕರೇ ಉಡುಸಲವ್ವನ ಪ್ರಕರಣಕ್ಕೆ ಸಂಬಂಧಿಸಿದಂತೆ ಲಿಖಿತ ದಾಖಲೆಯೊಡನೆ ಜನಪದ ಹಾಡು ಸಹಾ ಲಭ್ಯವಿದೆ. ಈಗಲೂ ಇರುವ ಈಕೆಗೆ ಸಂಬಂಧಿಸಿದ ಮನೆತನದವರಿಂದ ಈಕೆಯ ವಿವರಗಳು ದೊರಕುತ್ತವೆ. ಹೀಗೆ ಲಿಖಿತ ಮತ್ತು ಮೌಖಿಕ ಆಕರಗಳು ಲಭ್ಯವಿರುವುದು ಗಮನಾರ್ಹ. ದಾಖಲೆ ಸೂಚಿಸುವಂತೆ, " (ಈ ಸಿಡಿ) ಬಂಡಿ ಹೊಡಿಯುವ ಸಮಯದಲ್ಲಿ ಕರಿಯಪ್ಪನ (?) ಮಗಳು ಐದು ವರುಷದ ಮಗುವು ಗಾಲೆಬಾಯಿಗೆ ಬೀಳಲು ಆಗ್ಯೆ ಅಲ್ಲೆ ಸಮಾಧಿಯಾದಲ್ಲ ಅವಳಿಗೆ ಗರ್ಭದ ಗುಡಿಗೆ ಪ್ರತಿಮೆ ಮಾಡಿ ನೇಮಿಸಲು ಆಗ್ಗೆ...ಲು ಸಿಡಿಯು ಆದನಂತ್ರ ಗಾವು ಮಾಡಿದರು ಮತ್ತು ವೊಕಳಿಬಂಡಿ ಪೂಜೆ ಮಾಡಿದರು.." ಅವಳಿಗೆ ವರ್ಗಕರೇ ಉಡುಸಲವ್ವನ ಸಾವು ಸಂಭವಿಸಿದುದು

ಕರೆಯಮ್ಮ ದೇವತೆಯ ಸಿಡಿ ಆಚರಣೆ ಸಂದರ್ಭದಲ್ಲಿ ಎಂಬುದು ಇದರಿಂದ ಸ್ಪಷ್ಟಪಡುತ್ತದೆ.

ಈ ಲಿಖಿತ ದಾಖಲೆಯಲ್ಲಿ ಕರೇ ಉಡುಸಲವ್ವ 'ಗಾಲಿಬಾಯಿಗೆ ಬೀಳಲು' ಎಂದಿರುವುದರಿಂದ, ಇಲ್ಲಿ ಎದುರಾಗುವ ಪ್ರಶ್ನೆ - ಕರೇ ಉಡುಸಲವ್ವನದು 'ಆತ್ಮಬಲಿ' ಪ್ರಕರಣವೇ ಅಥವಾ ಆಕಸ್ಮಿಕ ಘಟನೆಯೇ? ಎಂಬುದು. ಈಕೆಯ ಮನೆತನದವರ ಹೇಳಿಕೆಯಂತೆ, 'ಸಿಡಿಬಂಡಿಗೆ ನಿನ್ನನ್ನು ಆಹುತಿ ಕೊಡುತ್ತೇವೆಂದು ಹರಕೆ ಹೊತ್ತಿದ್ದರಂತೆ' ಕರೇ ಉಡುಸಲವ್ವನ ಸಂಬಂಧಿಕರು. ಆದರೆ ಸಿಡಿಗಾಲಿಗೆ ಬಿದ್ದು ಪ್ರಾಣಾರ್ಪಣೆ ಮಾಡಿರುವುದು ಕೇವಲ ಐದು ವರುಷದ ಪುಟ್ಟ ಬಾಲೆಯೆಂಬುದನ್ನು ಗಮನಿಸಿದರೆ, ಇಂಥಾ ಘಟನೆ ನಡೆದ ಬಗೆಗೆ ಶಂಕೆ ಮೂಡದಿರದು. ಸಂಬಂಧಿಸಿದವರಿಗೆ ತಮ್ಮ ಬಾಲೆಯನ್ನು ಸಿಡಿಬಂಡಿಗೆ ಆಹುತಿ ಕೊಡುವ ಪ್ರಮೇಯವೇನಿದ್ದೀತು? ಇಂಥಾ ಕ್ರೌರ್ಯವನ್ನು ಪ್ರದರ್ಶಿಸುವಷ್ಟು ಕಠಿಣಹೃದಯಿಗಳಾಗಿದ್ದರೆ ಅವರು? ಈ ಕುರಿತು ದಾಖಲೆಯಲ್ಲಾಗಲಿ, ಮೌಖಿಕ ಸಾಹಿತ್ಯದಲ್ಲಾಗಲಿ ಯಾವುದೇ ಸೂಚನೆಯಿಲ್ಲ.

***ಮನೆತನದವರು***

ಮೊದಲಿಗೆ, ಕರೇ ಉಡುಸಲವ್ವನ ಮನೆತನದವರು ನೆಲೆಸಿದ್ದುದು ಚಿತ್ರದುರ್ಗ ತಾಲ್ಲೂಕು ಕೊಮಾರನಹಳ್ಳಿಯಲ್ಲಿ. ಈಗಿನ ಆಯಿತೋಳಿಗೆ ಬಂದು ನೆಲಸಿ ಸುಮಾರು ೩೦೦ ವರುಷಗಳಾಗಿವೆ. ಆಯಿತೋಳು ಗ್ರಾಮದಷ್ಟೆ ಹಳೆಯ ಮನೆತನ ಇದು. ಕರೇ ಬಿಳುಗಜ್ಜ ಎಂಬಾತ ಈ ಮನೆತನದ ಮೂಲಪುರುಷ. ಇವರ ಮನೆದೇವರು ಆಯಿತೋಳಿನ ಕರಿಯಮ್ಮ. ಉಡುಸಲವ್ವ ಎಂಬ ಹೆಸರು ಸಮೀಪದ ತಮಟಕಲ್ಲಿನಲ್ಲಿರುವ ಅದೇ ಹೆಸರಿನ ದೇವತೆಯದು. ಈ ಮನೆತನದವರು ಈ ದೇವತೆಗೂ ಭಕ್ತರಾಗಿದ್ದಿರಬೇಕು. ತಮಟಕಲ್ಲಿನ ಉಡುಸಲವ್ವನಿಗೆ ಆ ಗ್ರಾಮಸ್ಥರೆಲ್ಲರೂ ನಡೆದುಕೊಳ್ಳುತ್ತಾರೆ.

ಆಯಿತೋಳು ಕರಿಯಮ್ಮನ ಗುಡಿಯಲ್ಲಿರುವ ಕರೇ ಉಡುಸಲವ್ವನ ವಿಗ್ರಹವನ್ನು 'ಆಕೆಯ ಮನೆತನದ ಅಜ್ಜಂದಿರೇ' ಕೆತ್ತಿಸಿರುವುದು ಗಮನಾರ್ಹ. ಉಡುಸಲವ್ವ ಸಿಡಿಗಾಲಿಗೆ ಬಿದ್ದ ಸಂದರ್ಭವನ್ನು ವಿವರಿಸುವಲ್ಲಿ ಈ ಮನೆತನದವರಲ್ಲಿ ಗೊಂದಲವಿರುವುದು ಸ್ಪಷ್ಟ. 'ಸಿಡಿ ಬಂಡಿಗೆ (ಸಿಡಿಗಾಲಿಗೆ) ನಿನ್ನನ್ನು ಆಹುತಿ ಕೊಡುತ್ತೇವೆಂದು ಹರಕೆ ಹೊತ್ತಿದ್ದರಂತೆ' ಎಂಬ ಹೇಳಿಕೆಯೊಡನೆ 'ನಮ್ಮವರೇ ಸಿಡಿ ಆಡಿ ಬಿದ್ದಿದ್ದಾರೆ' ಎಂತಲೂ ವ್ಯಕ್ತಪಡಿಸುವುದುಂಟು. ಐದುವರುಷದ ಮಗು 'ಸಿಡಿ ಆಡಿ ಗಾಲಿಗೆ ಬಿದ್ದಿರುವುದು' ಎಂಬ ಅವರ ಹೇಳಿಕೆಯೂ ಇಲ್ಲಿ ಮುಖ್ಯವಾಗುತ್ತದೆ. ಇದೊಂದು 'ಆಹುತಿ ಪ್ರಕರಣ'ವೂ ಆಗಿದ್ದಿರಬಹುದು. ಈ ಕಾರಣಕ್ಕಾಗಿಯೇ ಇದು ಮಹತ್ವದ ಘಟನೆಯೆಂದು ಭಾವಿಸಿದ ಈ ಮನೆತನದವರು ಕರೇ ಉಡುಸಲವ್ವನನ್ನು ದೈವತ್ವಕ್ಕೇರಿಸಿ ಗೌರವಿಸಿದುದು ಸಹಜ.

ಕರೇ ಉಡುಸಲವ್ವನ 'ಆಹುತಿ ಪ್ರಕರಣ'ದ ತರುವಾಯ ಈಕೆಯ ಮನೆತನದವರು ಕರಿಯಮ್ಮ ದೇವರಿಗೆ ಸಿಡಿ ಆಡುವುದನ್ನೇ ಬಿಟ್ಟರು. ತಮ್ಮ ಕುಟುಂಬದ ಎಳೆಯ ಬಾಲೆಯ ಸಾವು ಉಂಟುಮಾಡಿದ ಪರಿಣಾಮದ ನೆಲೆಯಲ್ಲಿ ಇವರು ಇಂಥಾ 'ನಿಷೇಧ'ವನ್ನು ತಮಗೇ ವಿಧಿಸಿಕೊಂಡಿದ್ದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಬೇರೆಯವರು ಸಿಡಿ ಆಡುವುದಕ್ಕೆ ನಿರ್ಬಂಧವೇನಿಲ್ಲ. ಒಂದು ವೇಳೆ ಬೇರೆ ಯಾರಾದರೂ ಸಿಡಿ ಆಡದಿದ್ದಲ್ಲಿ, ಈ ಮನೆತನದವರೇ ಈ ಆಚರಣೆಯನ್ನು ನೆರವೇರಿಸಬೇಕೆಂಬ ಒಪ್ಪಂದವಿರುವುದು ಗಮನಾರ್ಹ.

ತಮ್ಮ ಮನೆದೇವರಾದ ಕರಿಯಮ್ಮನ ಗುಡಿಯಲ್ಲಿ ಈ ಬಾಲೆಯ ಮೂರ್ತಿಯನ್ನು (ಸ್ಮಾರಕಶಿಲೆಯನ್ನು) ಮಾಡಿಸಿ ಸ್ಥಾಪಿಸಿದ ಈಕೆಯ ಮನೆತನದವರು, ಆ ನಂತರ ಈಕೆಗೆ ನಡೆದುಕೊಳ್ಳಲಾರಂಭಿಸಿದರು; ಹರಕೆ ಹೊರತೊಡಗಿದರು. ಅವರು ಈಕೆಯ ಶಿಲ್ಪದೊಡನೆ ಗಾಢವಾದ ಭಕ್ತಿಭಾವದ ಸಂಬಂಧ ಹೊಂದಿರುವರೆಂಬುದಕ್ಕೆ ಅವರು ಅನುಸರಿಸುವ ಆಚರಣೆಗಳೇ ಸಾಕ್ಷಿ. ಈಕೆಯ ಮೂರ್ತಿಯನ್ನು ಪೂಜಿಸುವುದು ಪುಣ್ಯದ ಕೆಲಸವೆಂಬುದು ಅವರ ಭಾವನೆ. ತಮಗೆ ಒದಗಿದ ಕಷ್ಟ - ಅಡಚಣೆಗಳ ನಿವಾರಣೆಗಾಗಿ ಹರಕೆ ಹೊರುವವರಲ್ಲಿ ಈ ಮನೆತನದವರೇ ಪ್ರಮುಖರು. ವಾಸ್ತವದಲ್ಲಿ, ಈ ಮನೆತನದವರು ಮಾತ್ರವೇ ಈ 'ದೇವತೆ'ಗೆ ನಡೆದುಕೊಳ್ಳುವುದು ಮತ್ತು ಹರಕೆ ಹೊರುವುದೆಂದಾದರೂ ಇತರರೂ ಭಕ್ತಿ - ಗೌರವಗಳಿಂದ ನಡೆದುಕೊಳ್ಳುವುದುಂಟು. ಈಕೆಯ ವಿಗ್ರಹವನ್ನು ಪೂಜಿಸಿದರೆ ಮಕ್ಕಳಾಗುತ್ತವೆಂಬ ನಂಬಿಕೆಯಿಂದಲೇ ಮಕ್ಕಳಿಲ್ಲದ ಇತರ ವರ್ಗಗಳವರು ಈಕೆಯನ್ನು ಪೂಜಿಸುವುದು ಕಂಡುಬರುತ್ತದೆ. ಈ ಕಾರಣಕ್ಕಾಗಿಯೇ ಕರೇ ಉಡುಸಲವ್ವ ಜನರಿಂದ 'ಸಂತಾನ ದೇವತೆ'ಯೆಂದು ಕರೆಸಿಕೊಂಡಿದ್ದಾಳೆ.

ತನ್ನ ಮನೆತನದವರಿಗೆ 'ಕುಟುಂಬ ದೇವತೆ'ಯಾಗಿರುವ ಕರೇ ಉಡುಸಲವ್ವ 'ಪಿಳ್ಳಮ್ಮ' ಎಂಬ ಹೆಸರಿನಿಂದಲೂ ಗುರುತಿಸಲ್ಪಡುತ್ತಾಳೆ. ಜನರು ಸರಿಯಾಗಿ ತಿಳಿದುಕೊಳ್ಳದೆ ಪಿಳ್ಳಮ್ಮನೆಂಬ ಹೆಸರಿನಿಂದಲೂ ಈಕೆಯನ್ನು ಕರೆಯುವುದರ ಬಗೆಗೆ ಆಕ್ಷೇಪಿಸಲಾಗುತ್ತದೆ. ಬಂಡಿಸಿಡಿ ಸಂದರ್ಭದಲ್ಲಿ ಅದರ ಗಾಲಿಗೆ ಬಿದ್ದು 'ಆಹುತಿಯಾದ' ಎಳೆಯ ಬಾಲೆ ಕರೇ ಉಡುಸಲವ್ವಳ ಬಗೆಗೆ ಜನರಲ್ಲಿರುವ ಮರುಕ ಸಹಿತವಾದ ಪ್ರೀತಿಯ ದ್ಯೋತಕವಾಗಿಯೂ ಆ ಹೆಸರು ಬಳಕೆಗೆ ಬಂದಿರಬಹುದು. ಆ ಹೆಸರನ್ನು ಆಕೆಗೆ ಆರೋಪಿಸಿದುದಕ್ಕೆ ನಿರ್ದಿಷ್ಟ ಕಾರಣವಂತೂ ತಿಳಿಯುವುದಿಲ್ಲ.

ಕರೇ ಉಡುಸಲವ್ವಳ ಈಗಿನ ಪೀಳಿಗೆಯವರಲ್ಲಿ ಕರೇ ಬಿಳುಗಜ್ಜರ ಕರಿಯಪ್ಪ ಮತ್ತು ಕುಟುಂಬದವರು ಆಯಿತೋಳಿನಲ್ಲೆ ನೆಲಸಿದ್ದಾರೆ. ಒಕ್ಕಲುತನ ಇವರ ಮೂಲವೃತ್ತಿ. ಕರೇ ಉಡುಸಲವ್ವ ತಮ್ಮ ಮನೆತನದ ಹೆಣ್ಣುಮಗಳೆಂಬುದು ಇವರಿಗೆ ತಿಳಿದಿದೆ. ಆಕೆಯ

ಜೀವಕ್ಕೆ ಒದಗಿದ ದುರಂತಾಂತ್ಯದ ಬಗೆಗೆ ಅರಿವಿದೆ. ಆದರೆ ಸಂದರ್ಭದ ಒತ್ತಡಗಳಿಂದಾಗಿ ಅಂಥಾ ನೆನಪು ಹಿಂದಿನಷ್ಟು ಗಾಢವಾಗಿಲ್ಲ. ಕರೇ ಉಡುಸಲವ್ವಳ ಬಗೆಗೆ ಅನುಕಂಪ, ಅಭಿಮಾನಗಳ ಸಂವೇದನೆ ಈಗ ಅಷ್ಟಾಗಿ ಗೋಚರಿಸುವುದಿಲ್ಲ.

ಎಳೆಯ ಬಾಲೆಯರು ಆತ್ಮಾರ್ಪಣೆ ಮಾಡಿದ ಕೆಲವು ಅಪರೂಪದ ಉಲ್ಲೇಖಗಳು ಗಮನಕ್ಕೆ ಬರುತ್ತವೆ. ಇವು ಮುಖ್ಯವಾಗಿ ಬಾಲ್ಯ ವಿವಾಹ ಮತ್ತು ಬಾಲ್ಯ ಸಹಗಮನಕ್ಕೆ ಸಂಬಂಧಿಸಿದುವು. ಆರುವರುಷದ ವಡ್ಡಗೆರೆ ನಾಗಮ್ಮ, ಏಳು ವರುಷದ ಮಾಚನಹಳ್ಳಿ ಮಾಸ್ತಮ್ಮ (ಮಾಯಮ್ಮ) ಎಳೆಯ ಬಾಲೆ ವುಲಿಕುಂಟೆ ಕಾಟವ್ವ - ಇವು ಕೆಲವು ಉದಾಹರಣೆಗಳು.*೪ ಬಾಲ್ಯ ವಿವಾಹದ ಕಾರಣಕ್ಕಾಗಿ ತನ್ನ ಗಂಡ ಸತ್ತೊಡನೆ ಆತನೊಡನೆ ಸಹಗಮನ ಮಾಡಿದ ಹಸುಳೆ ವಡ್ಡಗೆರೆ ನಾಗಮ್ಮನಾದರೆ, ತನಗೆ ಎಳೆಯ ಕಂದನಿದ್ದರೂ ಚಿತೆಯೇರುತ್ತಾಳೆ ಮಾಚನಹಳ್ಳಿ ಮಾಸ್ತಮ್ಮ. ಇದೇ ರೀತಿ ತನ್ನ ಎದೆ ಕುಡಿಯುವ ಮಗು ಸಿರಿಯಣ್ಣನನ್ನು ಬಿಟ್ಟು ಚಿತೆಯೇರುತ್ತಾಳೆ ವುಲಿಕುಂಟೆ ಕಾಟವ್ವ. ಇವರಿಗೆ ಹೋಲಿಸಿದರೆ ಕರೇ ಉಡುಸಲವ್ವನದು ಬೇರೆಯೇ ತೆರನಾದ ಉದಾಹರಣೆ. ಇವರೆಲ್ಲರಿಗಿಂತ ಈಕೆ ಒಂದೆರಡು ವರುಷ ಚಿಕ್ಕವಳು; ಕೇವಲ ಐದುವರುಷದ ಹಸುಗೂಸು. ಸಾಮಾಜಿಕ ಕಾರಣಕ್ಕಾಗಿ ಇತರರ ಬಲಿದಾನವಾದರೆ, ಧಾರ್ಮಿಕ ಕಾರಣಕ್ಕಾಗಿ ಈಕೆ ಪ್ರಾಣ ತೆತ್ತಂತೆ ವ್ಯಕ್ತಪಡುತ್ತದೆ. ಆದರೆ ಹರಕೆಗಳ ಈಡೇರಿಕೆಗಾಗಿ ಈಕೆಯನ್ನು ಪೂಜಿಸುವುದನ್ನು ಗಮನಿಸಿದರೆ, ಇತರ ಮಾಸ್ತಿಯರಿಗೂ ಈಕೆಗೂ ವ್ಯತ್ಯಾಸವಿರುವಂತೆ ಕಾಣುವುದಿಲ್ಲ. ವಡ್ಡಗೆರೆ ನಾಗಮ್ಮನನ್ನು ಪೂಜಿಸುವ ಜನ ಮಕ್ಕಳನ್ನು ಕರುಣಿಸು ವಂತೆಯೂ ಮಕ್ಕಳಿಗೆ ಆಕೆಯ ಹೆಸರನ್ನು ಇಡುತ್ತೇವೆಂತಲೂ ಆಕೆಯನ್ನು ಪ್ರಾರ್ಥಿಸುವುದು ಇದಕ್ಕೊಂದು ಉದಾಹರಣೆ.*೫

***ಕರೇ ಉಡುಸಲವ್ವನ ಶಿಲ್ಪ***

ದಾಖಲೆಯ ಆಧಾರ ಮತ್ತು ಕರೇ ಉಡುಸಲವ್ವಳ ಮನೆತನದವರ ಹೇಳಿಕೆಗಳ ಪ್ರಕಾರ ಈ 'ಆತ್ಮಬಲಿ ಪ್ರಕರಣ' ನಡೆದುದು ಇಲ್ಲಿಗೆ ೩೦೦ ವರುಷಗಳ ಹಿಂದೆ, ಅಂದರೆ ೧೮ನೇ ಶತಮಾನದಲ್ಲಿ. ಈಕೆಯ ಶಿಲ್ಪಲಕ್ಷಣಗಳೂ ತಕ್ಕಮಟ್ಟಿಗೆ ಈ ಕಾಲಮಾನವನ್ನು ಸಮರ್ಥಿಸುವಂತಿವೆ. ಈ ಸ್ಮಾರಕ ಶಿಲ್ಪವನ್ನು ಕಡೆದಿರುವುದು ಕರಿಯಕಲ್ಲಿನಲ್ಲಿ. ಇದರ ಪ್ರಮಾಣ ೬೦×೬೦ ಸೆಂಟಿಮೀಟರ್. ಪ್ರಭಾವಳಿಯಂತೆ ತೋರುವ, ಪುಷ್ಪಮಾಲೆಯ ತೆರನಲ್ಲಿ ಕಲ್ಲುಸುತ್ತಲಿನ ಅಂಚನ್ನು (ಬಾರ್ಡರ್) ಬಿಡಿಸಲಾಗಿದೆ. ಶಿಲ್ಪದಲ್ಲಿ ಪ್ರಧಾನವಾಗಿ ಮೂಡಿಸಿರುವುದೆಂದರೆ ಕರೇ ಉಡುಸಲವ್ವಳ ಆಕೃತಿ ಮತ್ತು ಹಿನ್ನೆಲೆಯಲ್ಲಿ ಜೋಡಿ ಎತ್ತುಗಳ ಸಹಿತವಿರುವ ಬಂಡಿಸಿಡಿ.೬ ಸೂಕ್ಷ್ಮ ಕೆತ್ತನೆಯೊಡನೆ ಸಾಕಷ್ಟು ವಿವರಗಳಿರುವಂತೆ ಶಿಲ್ಪವನ್ನು ರೂಪಿಸಲಾಗಿದೆ.

ಸರ್ವಾಲಂಕಾರಭೂಷಿತೆ ಕರೇ ಉಡುಸಲವ್ವ ಕೈಮುಗಿದು



ಕೊಂಡು - ಅಂಜಲೀ ಮುದ್ರೆಯಲ್ಲಿ ವಿನೀತಭಾವದಿಂದ ನಿಂತಿದ್ದಾಳೆ. ದೇವರಪೂಜೆಗೆಂಬಂತೆ ಸಮರ್ಪಣ ಭಾವದಿಂದ ಕೈಯಲ್ಲಿ ಹೂವನ್ನು*೬ ಹಿಡಿದುಕೊಂಡಿದ್ದಾಳೆ. ಪೀಠದಲ್ಲಿ, ಅಂದರೆ ಆಕೆಯ ಪಾದಗಳ ಅಡಿಯಲ್ಲಿ ಪುಷ್ಪವನ್ನು ಮೂಡಿಸಲಾಗಿದೆ. ಅದನ್ನು ಆಕೆಯ ಗೌರವಾರ್ಥ ಪಾದಗಳಿಗೆ ಅರ್ಪಿಸಿದಂತೆ ತೋರುತ್ತದೆ. ಆಕೆಯ ಹಿಂದೆ ಇರುವುದು ಅಲಂಕೃತ ಜೋಡಿ ಎತ್ತುಗಳನ್ನು ಹೂಡಿರುವ ಬಂಡಿಸಿಡಿ. ಬಂಡಿ ಮತ್ತು ಸಿಡಿಕಂಬಗಳು ಅಲಂಕರಿಸಲ್ಪಟ್ಟಿವೆ. ಬಂಡಿಯ ಗಾಲಿಗಳು ಸಾಮಾನ್ಯ ಬಂಡಿಗಾಲಿಗಳಂತಿರದೆ ಆಕರ್ಷಕ ಕುಸುರಿ ಕೆಲಸದಿಂದ ಕೂಡಿದ ರಥದ ಗಾಲಿಗಳಂತಿರುವುದು ವಿಶೇಷ. ಸಿಡಿಕಂಬ ನೇರವಾಗಿ ಕರೇ ಉಡುಸಲವ್ವನ ತಲೆಯ ಮೇಲೆ ಬಾಗಿರುವಂತೆ ಚಿತ್ರಿಸಲಾಗಿದೆ. ಈ ಘಟನೆಗೆ ಸಾಕ್ಷಿಗಳಂತೆ ತೋರುವ ಸೂರ್ಯನನ್ನು ಶಿಲ್ಪದ ಎಡಬದಿಯಲ್ಲಿ ಹಾಗೂ ಚಂದ್ರನನ್ನು ಬಲಬದಿಯಲ್ಲಿ ಮೂಡಿಸಿದೆ. ಅಲಂಕಾರಿಕವಾಗಿ ಬಿಡಿಸಲಾದ ಹಂಸ ಮತ್ತು ಗಿಳಿಗಳ ಪೈಕಿ ತನ್ನ ಕೊಕ್ಕಿನಲ್ಲಿ ತಾವರೆದಂಟನ್ನು ಕಚ್ಚಿಕೊಂಡಿರುವ ಹಂಸಪಕ್ಷಿ ಕರೇ ಉಡುಸಲವ್ವನ ತಲೆಯ ಮೇಲುಬದಿಯಲ್ಲಿರುವಂತೆ ಚಿತ್ರಿತ ವಾಗಿದ್ದರೆ, ಗಿಳಿ ಆಕೆಯ ಬಲ ಮೊಳಕೈ ಸಮೀಪ ಬಂಡಿಯ ಮೇಲೆ ಕುಳಿತಿರುವಂತೆ ಚಿತ್ರಿತವಾಗಿದೆ. ಹೆಡೆ ಬಿಚ್ಚಿರುವ ಉದ್ದನೆಯ ನಾಗಸರ್ಪ ಆಕೆಯ ಎಡಬದಿಯಲ್ಲಿದೆ. ಕರೇ ಉಡುಸಲವ್ವನನ್ನು

‘ಸಂತಾನದೇವತೆ’ಯೆಂದು ಕರೆದಿರುವ ಹಿನ್ನೆಲೆಯಲ್ಲಿ ಈ ನಾಗಕ್ಕೆ ಮಹತ್ವವಿರುವುದು ಸ್ಪಷ್ಟ. ಮಕ್ಕಳಿಲ್ಲದವರು ನಾಗರಶಿಲ್ಪಕ್ಕೆ ಪೂಜೆ ಸಲ್ಲಿಸುವುದು ರೂಢಿ. ಈ ಹಿನ್ನೆಲೆಯಲ್ಲಿ, ಈ ಶಿಲ್ಪ ಸಂತಾನ ಹೀನರಿಂದ ಪೂಜಿಸಿಕೊಳ್ಳುವುದು ಸಹಜವೇ. ಈ ಶಿಲ್ಪದಲ್ಲಿ ಕಂಡುಬರುವ ಹೂವಿನ ಚಿತ್ರಗಳು ಅಲಂಕಾರಿಕ ಉದ್ದೇಶಕ್ಕಾಗಿಯಷ್ಟೆ ಬಿಡಿಸಿದುವಾಗಿರಬೇಕು.

***ಕರಿಯಮ್ಮ-ಕರೇಉಡುಸಲವ್ವ***

ಆಯಿತೋಳು ಕರಿಯಮ್ಮ ಗೊಲ್ಲರು ಪೂಜಿಸುವ ದೇವತೆಯಾದರೆ, ಕರೇ ಉಡುಸಲವ್ವ ಗೊಲ್ಲರ ಬಾಲೆ. ಈ ದೃಷ್ಟಿಯಿಂದ, ಕರೇ ಉಡುಸಲವ್ವ ಸ್ಮಾರಕಶಿಲ್ಪ ಕರಿಯಮ್ಮನ ದೇವಾಲಯದಲ್ಲಿ ನೆಲೆ ಕಂಡುಕೊಂಡಿರುವುದು ಸಹಜವೇ. ಕರಿಯಮ್ಮನಿಗೆ ಪೂಜೆ-ಮಗಳಾರತಿ ಸಲ್ಲಿಸುವವರು ಕರೇ ಉಡುಸಲವ್ವನಿಗೂ ಗೌರವ ಸಲ್ಲಿಸುತ್ತಾರೆ. ಹಬ್ಬ-ಜಾತ್ರೆಗಳಂಥ ಸಂದರ್ಭಗಳಲ್ಲಿ ಈ ಶಿಲ್ಪಕ್ಕೂ ಇಂಥಾ ಗೌರವ ಪ್ರಾಪ್ತವಾಗುತ್ತದೆ. ಕರಿಯಮ್ಮನಿಗೆ ಸಾವಿರ ಒಕ್ಕಲು. ಚಿತ್ರದುರ್ಗ, ಹೊಳಲ್ಕೆರೆ, ಜಗಲೂರು ಮತ್ತು ದಾವಣಗೆರೆ-ಈ ನಾಲ್ಕು ತಾಲ್ಲೂಕುಗಳಲ್ಲಿ ಈಕೆಯ ಭಕ್ತರು ಬಹು ಸಂಖ್ಯೆಯಲ್ಲಿದ್ದಾರೆ. ಕರಿಯಮ್ಮ ಊರು ದೇವತೆಯೂ ಆಗಿರುವುದರಿಂದ ಈಕೆಗೆ ಹೆಚ್ಚಿನ ಪ್ರಮಾಣದಲ್ಲಿ ಪೂಜೆ ಸಲ್ಲುತ್ತದೆ. ಮೊದಲಿಗೆ ಕರಿಯಮ್ಮನ ಜಾತ್ರೆ ಹೋಳಿ ಹುಣ್ಣಿಮೆಯಂದು ನಡೆಯುತ್ತಿದ್ದಿತು. ಈಗ ಯುಗಾದಿಯ ನಂತರ ಮೂರು ದಿವಸಗಳ ಮೇಲೆ ಏರ್ಪಡುತ್ತದೆ. ಆದರೆ ಈಚೆಗೆ ವಿವಾದದ ನಿಮಿತ್ತ ೬೦ ವರುಷಗಳಿಂದಲೂ ಕರಿಯಮ್ಮನ ಜಾತ್ರೆ ನಡೆದಿಲ್ಲವೆಂಬುದು ಗಮನಾರ್ಹ. ೧೯೮೭ರಲ್ಲಿ ಜಾತ್ರೆ ಏರ್ಪಟ್ಟರೂ ಸಿಡಿಮರ (ಸಿಡಿಕಂಬ) ಮುರಿದುಹೋದುದರಿಂದ ಅಲ್ಲಿಂದೀಚೆಗೆ ಜಾತ್ರೆ ನಿಂತೇ ಹೋದಂತಾಗಿದೆ. ಈಗ ಕರಿಯಮ್ಮನ ಹಳೆಯ ಗುಡಿಯ ಜಾಗದಲ್ಲಿ ಹೊಸ ಮಂದಿರ ನಿರ್ಮಾಣ ಗೊಂಡಿದೆ.

***ಜನಪದ ಗೀತೆ***

ಕರೇ ಉಡುಸಲವ್ವನನ್ನು ಕುರಿತ ಪದವನ್ನು ಹಾಡುವವರು ಹೆಂಗಸರು. ಈ ಜನಪದಗೀತೆಯಲ್ಲಿ ಕರೇ ಉಡುಸಲವ್ವನನ್ನು ಭಕ್ತಿಭಾವದಿಂದ ಸ್ತುತಿಸಲಾಗಿದೆ; ಆಕೆಯ ವರ್ಣನೆ ಮಾಡಲಾಗಿದೆ. (ಈ ಕುರಿತು ಪ್ರತ್ಯೇಕವಾಗಿ ಗಮನಿಸಲಾಗಿದೆ).

ಈ ಮೇಲಿನ ವಿವರಗಳು ಸಂಗ್ರಹಗೊಂಡಿರುವುದು ಕರೇ ಉಡುಸಲವ್ವನನ್ನು ಕುರಿತ ದಾಖಲೆ, ಜನಪದ ಗೀತೆ ಮತ್ತು ಮನೆತನದವರ ಹೇಳಿಕೆಗಳ ಹಿನ್ನೆಲೆಯಲ್ಲಿ. ಈವರೆಗಿನ ಚರ್ಚೆಯ ನೆಲೆಯಲ್ಲಿ ಈ ಮುಂದಿನಂತೆ ಕೆಲವು ವಿಚಾರಗಳನ್ನು ಮಂಡಿಸ ಬಹುದು:

೧. ಸಿಡಿಕಂಬ ಹೊತ್ತ ಬಂಡಿಯ ಗಾಲಿಗೆ ಕರೇ ಉಡುಸಲವ್ವ ಬಿದ್ದುದನ್ನು ಲಿಖಿತ ಹಾಗೂ ಮೌಖಿಕ ಆಕರಗಳು ಅನುಮೋದಿಸುತ್ತವೆ; ಆದರೆ ಆಕೆ ಗಾಲಿಗೆ ಬಿದ್ದ ಕಾರಣ ಗಳನ್ನು ಸೂಚಿಸುವಾಗ ಗೊಂದಲ ಸೃಷ್ಟಿಸುತ್ತವೆ.

೨. ಕರೇ ಉಡುಸಲವ್ವನದು ಆಕಸ್ಮಿಕ ಮರಣವೇ? ಆತ್ಮಬಲಿ ಪ್ರಕರಣವೇ? ಅಥವಾ ಹೆತ್ತವರು ಕರಿಯಮ್ಮನಿಗೆ ಹರಕೆ ಹೊತ್ತಿದ್ದಲ್ಲಿ ತಮ್ಮ ಬಾಲೆಯನ್ನು ಸಿಡಿಗಾಲಿಗೆ ಆಹುತಿ ಕೊಟ್ಟ ದುರಂತ ಗಾಥೆಯೇ? - ಇಂಥಾ ಗೊಂದಲಗಳಿಗೆ ಸಮರ್ಪಕ ಪರಿಹಾರ ಕಂಡುಬರುವುದಿಲ್ಲ.

೩. ಕರೇ ಉಡುಸಲವ್ವನ ಶಿಲ್ಪ ಆಕೆ ಬಂಡಿಸಿಡಿ ಆಡಿದುದನ್ನು ದೃಢಪಡಿಸುವಂತೆಯೇ, ಆ ಕಾರಣಕ್ಕಾಗಿಯೇ ಆಕೆ ತನ್ನ ಪ್ರಾಣ ತೆತ್ತುದನ್ನೂ ಪರೋಕ್ಷವಾಗಿ ವ್ಯಕ್ತಪಡಿಸುತ್ತದೆ.

೪. ಅಸಾಮಾನ್ಯ ತೆರನಲ್ಲಿ ಜೀವತೆತ್ತ ಕರೇ ಉಡುಸಲವ್ವನನ್ನು ದೈವತ್ವಕ್ಕೇರಿಸಿದ ಆಕೆಯ ಮನೆತನದವರು ಮತ್ತು ಜನಸಾಮಾನ್ಯರು ಆಕೆಯನ್ನು ಕುರಿತು ಪದಕಟ್ಟಿ ಹಾಡಿ ಕೊಂಡಾಡುತ್ತಾ ಬಂದಿರುವುದು ಸಹಜವಾದರೂ, ಅಮಾನವೀಯ ಕೃತ್ಯವೊಂದು ಜರುಗಿ ಹೋದ ಬಗೆಗೆ ಪ್ರತಿಭಟನೆಯ ಸೊಲ್ಲು ಎತ್ತಿದಂತೆ ಕಾಣುವುದಿಲ್ಲ.

೫. ‘ಸಂತಾನ ಕರುಣಿಸುವ ದೇವತೆ’ಯೆಂದು ಬಿಂಬಿಸಲ್ಪಡುವ ಕರೇ ಉಡುಸಲವ್ವ ತನ್ನ ಕೌಮಾರ್ಯವನ್ನೂ ಮೀರದ ಪುಟ್ಟ ಬಾಲೆಯೆಂಬುದನ್ನು ಗಮನಿಸಿದರೆ, ಜನರು ಅಂಥಾ ಬಾಲೆಯಿಂದಲೂ ಸಂತಾನಭಿಕ್ಷೆ ಬೇಡುವ ಸ್ವಾರ್ಥಪರ ಮನೋಧರ್ಮ ಬೆಳೆಸಿಕೊಂಡಿರುವುದು ಮರುಕ ಹುಟ್ಟಿಸುತ್ತದೆ.

೬. ಕಾಲಧರ್ಮಕ್ಕನುಗುಣವಾಗಿ, ಜನಸಾಮಾನ್ಯರು ಮಾತ್ರ ವಲ್ಲದೆ ಸ್ವತಃ ತನ್ನ ಮನೆತನದವರ ನೆನಪಿನಿಂದಲೂ ಕರಗಿಹೋಗುತ್ತಿರುವ ಕರೇ ಉಡುಸಲವ್ವನ ವೃತ್ತಾಂತ ಇನ್ನಷ್ಟು ಅಧಿಕೃತಗೊಳ್ಳುವುದಾದಲ್ಲಿ, ಆಕೆಯ ನೆನಪು ಇನ್ನಷ್ಟು ಕಾಲ ಉಳಿದುಕೊಳ್ಳಬಹುದು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಉದಾ:- Medows Taylor, 1989, *Historical and Descriptive Memoir*, A E S, New Delhi - ನಕ್ಷೆ : Dharwar & Mysore

*೨. ಯಮ್ಮೆತಿರುಮಲಪುರದ ಜಡೆಯಪ್ಪನ ಕುಟುಂಬದವರಿಗೆ ಈಗ ಸೇರಿರುವ ಹೊಲ.

*೩. 'ಶ್ರೀ ಕರಿಯಮ್ಮದೇವಿಯ ಪೂಜಾರಿಗೆ ಪಟ್ಟಾಭಿಷೇಕ ಮಾಡಿದ ರಿಕಾರ್ಡ್', ಪು.೬೬-೭೧

*೪. ಬಸವರಾಜ ಕಲ್ಗುಡಿ, ೧೯೮೫, **ಮಹಾಸತಿ ಆಚರಣೆ: ಒಂದು ಅಧ್ಯಯನ**, ಬೆಂಗಳೂರು ವಿಶ್ವವಿದ್ಯಾಲಯ, ಪು.೮೬-೮೭

*೫. ಕಂದನ ಕೊಡಮ್ಮ ನನಗೊಂದ ನಾಗಮ್ಮ
ವಪ್ಪುಳ ಹೆಸರ ಕರೆದೇವೊ, ನಾಗಮ್ಮ
ನಿನಗೆ ವೊಕ್ಕಲು ಆದೇವೊ

ಪುತ್ತುರನ ಕೊಡಮ್ಮ ನಮಗೊಂದು ನಾಗಮ್ಮ
ನಿನ್ನ ಚೆಲುವ್ಹೆಸರ ನಾವು ಕರದೇವು
ನಾಗಣ್ಣನೆಂದು ಕರದೇವು ನಾಗವ್ವ
ನಾಗಮ್ಮನೆಂದು ಕರೆದೇವು (ಅದೇ)

*೬. ಬಂಡಿಸಿಡಿಯೆಂಬುದು ಎರಡು ಜೊತೆ ಎತ್ತುಗಳನ್ನು (ಕೆಲವೊಮ್ಮೆ ಒಂದೇ ಜೊತೆ ಎತ್ತುಗಳನ್ನು) ಹೂಡಿದ 'ಎತ್ತಿನ ಬಂಡಿ'ಯ ಮೇಲೆ ಸಿಡಿಕಂಬವನ್ನು ನಿಲ್ಲಿಸಿ ನಡೆಸುವ ಆಚರಣೆ. ನೆಲದ ಮೇಲೆ ಸ್ಥಿರವಾಗಿ ನಿಲ್ಲಿಸಿದ ಸಿಡಿಕಂಬಕ್ಕೆ ಮನುಷ್ಯರನ್ನು (ಹರಕೆ ಹೊತ್ತವರನ್ನು) ಕಟ್ಟುವಂತೆಯೇ, ಬಂಡಿಯ ಮೇಲೆ ನಿಲ್ಲಿಸಲಾದ ಸಿಡಿಕಂಬಕ್ಕೂ ಕಟ್ಟಲಾಗುತ್ತದೆ. ಆದರೆ ನೆಲದ ಮೇಲಿನ ಸಿಡಿ ಇದ್ದಲ್ಲಿಯೇ ಭಕ್ತರನ್ನು ಹೊತ್ತು ಪ್ರದಕ್ಷಿಣೆ ಹಾಕಿದರೆ, ಬಂಡಿಸಿಡಿ ಸಂಬಂಧಿಸಿದ ದೇವಸ್ಥಾನ ಅಥವಾ ಊರಿನ ಸುತ್ತ ಮೂರುಬಾರಿ ಪ್ರದಕ್ಷಿಣೆ ಹಾಕುತ್ತದೆ. ಕೆಲವೆಡೆ ಈ ಬಗೆಯ ಆಚರಣೆಯಲ್ಲಿ ಸ್ಥಳೀಯ ವೈಶಿಷ್ಟ್ಯಗಳೂ ಬದಲಾವಣೆಗಳೂ ಇರಬಹುದು. ಬಂಡಿಸಿಡಿ ತಿರುಗಣೆಸಹಿತವಿದ್ದು, ಸುತ್ತು ಹಾಕುವಂತೆಯೂ ಅದನ್ನು ರೂಪಿಸಲಾಗಿರುತ್ತದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕು(ತುಮಕೂರು) ನಡವನಹಳ್ಳಿಯ ಕೋಡಿಲಕ್ಕಮ್ಮ, ಚನ್ನಗಿರಿ ತಾಲ್ಲೂಕು (ದಾವಣಗೆರೆ) ಕುಕ್ಕನೂರು ಮತ್ತು ಅದೇ ತಾಲ್ಲೂಕು ಕೊಂಡದಹಳ್ಳಿಯ ಕುಕ್ಕವಾಡಮ್ಮ, ಹೊಳಲ್ಕೆರೆ ತಾಲ್ಲೂಕು(ಚಿತ್ರದುರ್ಗ) ಬಿ.ದುರ್ಗದ ಏಕನಾಥೇಶ್ವರಿ, ಹಿರಿಯೂರು ತಾಲ್ಲೂಕು(ಚಿತ್ರದುರ್ಗ) ಯರಬಳ್ಳಿಯ ಮಾರಕ್ಕ, ಚಿತ್ರದುರ್ಗ ತಾಲ್ಲೂಕು ಇಂಗಳದಹಾಳು ಮಾರಮ್ಮ - ಈ ದೇವತೆಗಳ ಉತ್ಸವ ಸಂದರ್ಭಗಳಲ್ಲಿ ಬಂಡಿಸಿಡಿ ಆಚರಣೆಯಲ್ಲಿದ್ದುದು ವ್ಯಕ್ತಪಡುತ್ತದೆ. ಇವು ಕೆಲವು ಉದಾಹರಣೆಗಳು ಮಾತ್ರ. ಪ್ರಾಯಶಃ ಇಂಗಳದಹಾಳು ಮಾರಮ್ಮನ ಬಂಡಿಸಿಡಿಯ ಪ್ರತೀಕವೆನ್ನಬಹುದಾದ ರೇಖಾಕೃತಿಯೊಂದು(ಕೊರೆ ಚಿತ್ರ) ಸನಿಹದ ಕುಂಚಿಗನಹಾಳು ಗ್ರಾಮದ ಪಕ್ಕದ ಗುಡ್ಡದಲ್ಲಿ (ಸಣ್ಣಮರಡಿ) ಬಂಡೆಯ ಮೇಲೆ ಇರುವುದನ್ನು ಈಚೆಗೆ ಪತ್ತೆಹಚ್ಚಲಾಗಿದೆ.

(ಕೃತಜ್ಞತೆಗಳು : ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಸರ್ವಶ್ರೀ ಲ.ನಾಗರಾಜ ಹೊಯ್ಸಳ, ಭೀ.ಉಮೇಶ್, ಹೆಚ್.ಎನ್. ಉಮೇಶ್, ನಾ.ವೆಂಕಟೇಶಭಟ್, ಎಸ್.ಆರ್.ಗುರುನಾಥ್, ಪಿ.ನಾಗಶಯನ, ಡಾ.ಆರ್.ಶೇಷಶಾಸ್ತ್ರಿ, ಪಟೇಲ್ ಜಿ.ನಾಗಪ್ಪ, ಜಿ.ಎನ್.ವಿರೂಪಾಕ್ಷಪ್ಪ, ಜಿ.ಎನ್.ಚಂದ್ರಪ್ಪ, ಜಗನ್ನಾಥ ಪೂಜಾರಿ ಹಾಗೂ ಆಯಿತೋಳು ಗ್ರಾಮಸ್ಥರಿಗೆ - ಲೇಖಕ.)

ಡಾ। ಚನ್ನಬಸಪ್ಪ ಎಸ್. ಪಾಟೀಲ*

# ಪಂಚತಂತ್ರದ ಎರಡು ಅಪರೂಪದ ಶಿಲ್ಪಗಳು



ಪಂಚತಂತ್ರ ಕಥೆಗಳನ್ನು ನಿರೂಪಿಸುವ ಅನೇಕ ಶಿಲ್ಪಗಳು ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಕರ್ನಾಟಕದಲ್ಲಿ, ಇತ್ತೀಚಿನ ವರ್ಷಗಳಲ್ಲಿ ಪತ್ತೆಯಾಗಿವೆ. ಇನ್ನೂ ಅನೇಕ ಶಿಲ್ಪಗಳು ಕರ್ನಾಟಕದಲ್ಲಿ ಬೆಳಕಿಗೆ ಬರುತ್ತಿವೆ. 'ಬೆತ್ತಲೆಯಾದ ಒಕ್ಕಲು ಹೆಣ್ಣಿನ ಕಥೆ' ಭಾರತದಲ್ಲಿ ಮೊದಲ ಬಾರಿಗೆ ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲೂಕಿನ ಕುಕನೂರಿನಲ್ಲಿಯ ನವಲಿಂಗ ದೇವಾಲಯದಲ್ಲಿ ಪತ್ತೆಯಾಗಿದೆ. ಅದೇ ರೀತಿ 'ನಾರಾಯಣಭಟ್ಟನ ಕಥೆ'ಯ ಶಿಲ್ಪವು ಕರ್ನಾಟಕದಲ್ಲಿ ಮೊದಲಬಾರಿಗೆ ಗುಲಬರ್ಗ ಜಿಲ್ಲೆಯ ಚಿಂಚೋಳಿ ತಾಲೂಕಿನ ನಿಡುಗುಂದಿಯಲ್ಲಿಯ ಕಾಳಿಕಾ ದೇವಾಲಯದಲ್ಲಿ ಪತ್ತೆಯಾಗಿದೆ. 'ಬೆತ್ತಲೆಯಾದ ಒಕ್ಕಲು ಹೆಣ್ಣಿನ ಕಥೆ'ಯ ಶಿಲ್ಪವು ಇಂಡೋನೇಶಿಯಾದ ಜಾವಾದಲ್ಲಿಯ ಸೋಜಿವಾನದಲ್ಲಿದೆ*[೧]. ಕುಕನೂರಿನ ನವಲಿಂಗ ದೇವಾಲಯದಲ್ಲಿ ಪಂಚತಂತ್ರದ ವಿವಿಧ ಕಥೆಗಳನ್ನು ನಿರೂಪಿಸುವ ಹದಿನೇಳು ಶಿಲ್ಪಗಳಿವೆ*[೨]. ನಿಡುಗುಂಡಿ ಕಾಳಿಕಾ ದೇವಾಲಯದಲ್ಲಿ 'ಸಿಂಹ ಮತ್ತು ಮೊಲ', 'ಕೀಲನುಚ್ಚಿದ ಕಪಿ' ಮತ್ತು 'ನಾರಾಯಣಭಟ್ಟಕಥೆ'ಗಳನ್ನು ನಿರೂಪಿಸುವ ಶಿಲ್ಪಗಳಿವೆ*[೩]. ನಾರಾಯಣಭಟ್ಟನ ಕಥೆಯನ್ನು ನಿರೂಪಿಸುವ ಶಿಲ್ಪಗಳು ಆಂಧ್ರಪ್ರದೇಶದ ಮಹಬೂಬನಗರ ಜಿಲ್ಲೆಯ ಆಲಂಪುರದಲ್ಲಿರುವ ಸ್ವರ್ಗಬ್ರಹ್ಮ ದೇವಾಲಯದಲ್ಲಿ ಮತ್ತು ಅದೇ ಊರಿನಲ್ಲಿಯ ಪುರಾತತ್ವ ಸಂಗ್ರಹಾಲಯದಲ್ಲಿ ಇವೆ*[೪].

### ಬೆತ್ತಲೆಯಾದ ಒಕ್ಕಲು ಹೆಣ್ಣಿನ ಕಥೆ

ವಿಷ್ಣುಶರ್ಮನ ಪಂಚತಂತ್ರದಲ್ಲಿ 'ಬೆತ್ತಲೆಯಾದ ಒಕ್ಕಲು ಹೆಣ್ಣಿನ ಕಥೆ' ಈ ರೀತಿಯಿದೆ : ಒಂದೂರಿನಲ್ಲಿ ಒಕ್ಕಲಿಗ ದಂಪತಿಗಳು ವಾಸವಾಗಿದ್ದರು. ಗಂಡನು ಮುದುಕನಾದುದರಿಂದ ಹೆಂಡತಿ ಪರಪುರುಷರಲ್ಲಿ ಆಸಕ್ತಳಾಗಿ, ಅವರ ಅನ್ವೇಷಣೆಯಲ್ಲಿ ಕಾಲಕಳೆಯುತ್ತ ಮನೆಯಲ್ಲಿರುತ್ತಿರಲಿಲ್ಲ. ಒಮ್ಮೆ ಪರರ ಧನವನ್ನು ಅಪಹರಿಸುವ ಆಸಕ್ತಿಯುಳ್ಳ ಒಬ್ಬ ಧೂರ್ತನು ಅವಳನ್ನು ನೋಡಿ ತನ್ನ ಹೆಂಡತಿ ಸತ್ತಿರುವಳೆಂದು ತಿಳಿಸಿ ತನಗೆ ರತಿಸುಖವನ್ನು ಕೊಡಬೇಕೆಂದು ಕೇಳಿದನು. ಅದಕ್ಕೆ ಅವಳು ತನ್ನ ಗಂಡನ ಹತ್ತಿರ ತುಂಬ ಹಣವಿದೆ. ಅವನು ಮುದುಕನಾಗಿರುವುದರಿಂದ ಓಡಾಡಲು ಕೂಡ ಅಸಮರ್ಥನಾಗಿದ್ದಾನೆ. ತಾನು ಅವನ ಹಣವನ್ನು ತೆಗೆದುಕೊಂಡು ಬಂದು, ಧೂರ್ತನೊಂದಿಗೆ ಬೇರೆಲ್ಲಿಗಾದರೂ ಹೋಗಿ ಅಲ್ಲಿ ಮನಸ್ವೇಚ್ಛೆಯಾಗಿ ರತಿಸುಖಾನುಭವ ಪಡೆಯುತ್ತೇನೆಂದು ಹೇಳಿದಳು. ಧೂರ್ತನು ಅದು ತನಗೂ ಇಷ್ಟ, ಬೆಳಗಾಗುವುದಕ್ಕಿಂತ ಮುಂಚೆ ಅಲ್ಲಿಗೆ ಬಂದರೆ ಯಾವುದಾದರೊಂದು ಪಟ್ಟಣ ಸೇರಿ ಅವಳೊಡನೆ ಸುಖವಾಗಿರುವುದಾಗಿ ಹೇಳಿದನು. ಅದಕ್ಕೆ ಒಪ್ಪಿದ ಹೆಂಗಸು ಮನೆಗೆ ಹೋದಳು.

ಗಂಡನು ನಿದ್ರೆಯಲ್ಲಿದ್ದಾಗ ಎಲ್ಲ ಹಣವನ್ನು ತೆಗೆದುಕೊಂಡು ಧೂರ್ತನಿದ್ದಲ್ಲಿಗೆ ಬಂದು ಅವನೊಡನೆ ಪರಾರಿಯಾದಳು. ದಾರಿಯಲ್ಲಿ ಒಂದು ನದಿ ಅಡ್ಡ ಬಂದಿತು. ಅದನ್ನು ನೋಡಿದ ಧೂರ್ತನು ಮಧ್ಯವಯಸ್ಸಿನ ಈ ಹೆಂಗಸನ್ನು ಕಟ್ಟಿಕೊಂಡು ತಾನೇನು ಮಾಡಬೇಕು, ಯಾರಾದರೂ ಬೆನ್ನು ಹತ್ತಿ ಬಂದರೆ ತನಗೆ ತೊಂದರೆಯಾಗುತ್ತದೆ. ಆದುದರಿಂದ ಅವಳ ಹಣವನ್ನು ಮಾತ್ರ ತೆಗೆದುಕೊಂಡು ಹೋಗಬೇಕೆಂದು ಯೋಚಿಸಿದನು. ನದಿ ದೊಡ್ಡದಾಗಿರುವುದರಿಂದ ಮೊದಲು ಹಣವನ್ನು ಮಾತ್ರ ಹೊತ್ತು ಸಾಗಿಸಿ ಮರಳಿ ಬಂದು ಅವಳನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು

*ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹಂಪಿ, ಕಮಲಾಪುರ, ಬಳ್ಳಾರಿ ಜಿಲ್ಲೆ.

ದಾಟುವುದಾಗಿ ಹೇಳಿದನು. ಅದಕ್ಕೆ ಒಪ್ಪಿದ ಹೆಂಗಸು ಹಣವನ್ನು ಅವನಿಗೆ ಕೊಟ್ಟಳು. ಉಟ್ಟಸೀರೆ ತೊಟ್ಟ ರವಿಕೆಯನ್ನು ಬಿಚ್ಚಿ ಕೊಟ್ಟರೆ ನದಿಯನ್ನು ನಿರ್ಭಯವಾಗಿ ದಾಟಬಹುದೆಂದು ಅವನು ಹೇಳಿದಾಗ ಬಟ್ಟೆಯನ್ನು ಬಿಚ್ಚಿಕೊಟ್ಟಳು. ಹಣ ಮತ್ತು ವಸ್ತ್ರಗಳನ್ನು ತೆಗೆದುಕೊಂಡ ಧೂರ್ತ ತನಗೆ ಇಷ್ಟವಾದ ಕಡೆಗೆ ಹೋಗಿ ಬಿಟ್ಟನು.

ಚಿಂತಾಕ್ರಾಂತಳಾದ ಹೆಂಗಸು ತಲೆಯ ಮೇಲೆ ಕೈಹೊತ್ತು ನದಿಯ ಮರಳ ರಾಶಿಯ ಮೇಲೆ ಕುಳಿತಿದ್ದಾಗ ಒಂದು ಹೆಣ್ಣು ನರಿ ಬಾಯಲ್ಲಿ ಮಾಂಸದ ತುಂಡನ್ನು ಕಚ್ಚಿಕೊಂಡು ಅಲ್ಲಿಗೆ ಬಂದಿತು. ಅಷ್ಟರಲ್ಲಿ ಅದರ ಹತ್ತಿರ ಒಂದು ಮೀನು ನೀರಿನಿಂದ ಮೇಲೆ ಬಂದುದನ್ನು ನೋಡಿ, ಬಾಯಿಯಲ್ಲಿಯ ಮಾಂಸದ ತುಂಡನ್ನು ಅಲ್ಲಿಯೇ ಬಿಟ್ಟು ಮೀನನ್ನು ಹಿಡಿಯಲು ಓಡಿತು. ಆಗ ಒಂದು ಹದ್ದು ಬಂದು ಮಾಂಸದ ತುಂಡನ್ನು ಕಚ್ಚಿಕೊಂಡು ಆಕಾಶಕ್ಕೆ ಹಾರಿತು. ನರಿಯು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿದ ಮೀನು ನೀರಿಗೆ ಬಿದ್ದಿತು. ತನ್ನ ಯತ್ನದಲ್ಲಿ ವಿಫಲವಾಗಿ ನಿಂತ ನರಿಯನ್ನು ಕಂಡು ಹೆಂಗಸು ವಿಸ್ಮಿತಳಾಗಿ.

ಸಂಸ್ಕೃತ : ಗೃಧ್ರೇಣಾಪಹೃತಂ ಮಾಸಂ ಮತ್ಸ್ಯೋಽಪಿ ಸಲಿಲಂ ಗತಃ।
ಮತ್ಸ್ಯಮಾಂಸ ಪರಿಭ್ರಷ್ಟೇ ಕಿಂ ನಿರೀಕ್ಷಸಿ ಜಂಬುಕೆ॥

ಕನ್ನಡ : *ಹದ್ದು ಮಾಂಸವನೊಯ್ದಿದೆ ಮೀನು ನೀರಿಗೆ ನುಸುಳಿದೆ*
*ಮಾಂಸ ಮತ್ಸ್ಯಪರಿಭ್ರಷ್ಟೆ ಏನನೀಕ್ಷಿಪೆ ಜಂಬುಕೆ*

ಎಂದಳು. ಅದನ್ನು ಕೇಳಿದ ನರಿ ವ್ಯಂಗ್ಯವಾಗಿ :

ಸಂಸ್ಕೃತ : ಯಾದೃಶಂ ಮಮ ಪಾಂಡಿತ್ಯಂ ತಾದೃಶಂದ್ವಿಗುಣಂ ತವ।
ನಾಭುಜ್ಜಾರೋ ನ ಭರ್ತಾ ಚ ಕಿಂ ನಿರೀಕ್ಷಸಿ ನಗ್ನಿಕೆ॥

ಕನ್ನಡ : *ನನಗಿರುವ ಪಾಂಡಿತ್ಯದೆರಡರಷ್ಟಿದೆ ನಿನಗೆ*
*ಜಾರನಿಲ್ಲದೆ ಗಂಡನಿಲ್ಲದೆ ಏನನೀಕ್ಷಿಪೆ ನಗ್ನಿಕೆ*

ಎಂದಿತು*[೫].

ನವಲಿಂಗ ದೇವಾಲಯದಲ್ಲಿಯ ಉತ್ತರ ದಿಕ್ಕಿನ ಮಧ್ಯದ ಗರ್ಭಗೃಹದ ಉತ್ತರ ದಿಕ್ಕಿನ ಗೋಡೆಯ ಮೇಲೆ ಈ ಕಥೆಯನ್ನು ನಿರೂಪಿಸುವ ಶಿಲ್ಪವಿದೆ. ಬಲಭಾಗದಲ್ಲಿ ನದಿಯಿದೆ. ಮಧ್ಯದಲ್ಲಿ ಮನುಷ್ಯನು ಹೆಗಲಮೇಲೆ ಬಟ್ಟೆಗಳನ್ನು ಹೊತ್ತು ನಿಂತಿದ್ದಾನೆ. ಕೆಳಗೆ ನದಿಯ ಕಡೆ ಮುಖಮಾಡಿಕೊಂಡು ನಿಂತ ನರಿಯಿದೆ. ಎಡ ಭಾಗದಲ್ಲಿ ಹೆಂಗಸು ಮರಳಿನ ಮೇಲೆ ಕುಳಿತಿದ್ದಾಳೆ. ಅವಳು ಬಲಗಾಲನ್ನು ನೀಳವಾಗಿ ಚಾಚಿ, ಮಡಚಿದ ಎಡಕಾಲಿನ ಮೊಳಕಾಲನ್ನು ಮೇಲೆತ್ತಿ. ಬಲಗೈಯನ್ನು ನೆಲದ ಮೇಲೆ ಊರಿ, ಮೊಳಕಾಲ ಮೇಲೆ ಎಡಗೈಯ ಮೊಳಕೈಯನ್ನೂರಿ ಅಂಗೈಯಿಂದ ಕಪೋಲವನ್ನು ಹಿಡಿದು, ನದಿಯ ಕಡೆ ಮುಖಮಾಡಿ ಕುಳಿತಿದ್ದಾಳೆ. ಅವಳ ಕೂದಲು ಕೆದರಿದೆ. ಅವಳು ಬೆತ್ತಲೆಯಾಗಿ ಕುಳಿತಿದ್ದಾಳೆ. ಮೇಲ್ಭಾಗದಲ್ಲಿ ಹದ್ದು ಮಾಂಸದ ತುಂಡನ್ನು ಕಚ್ಚಿಕೊಂಡು ಹಾರುತ್ತಿದೆ. ಶಿಲ್ಪ ಹಾಳಾಗಿರುವುದರಿಂದ ಹದ್ದಿನ ಕೊಕ್ಕು ಮತ್ತು ಮಾಂಸದ ತುಂಡು ಮಾತ್ರ ಕಾಣುತ್ತವೆ.

**ನಾರಾಯಣಭಟ್ಟನ ಕಥೆ**

ದುರ್ಗಸಿಂಹನ ಪಂಚತಂತ್ರದಲ್ಲಿ ನಾರಾಯಣಭಟ್ಟನ ಕಥೆಯು ಹೀಗಿದೆ*[೬]: ನಾರಾಯಣಭಟ್ಟನೆಂಬ ಬ್ರಾಹ್ಮಣನೊಬ್ಬನು ನಂಬಿ ನಾರಾಯಣವೆಂಬ ಅಗ್ರಹಾರದಲ್ಲಿ ವಾಸಿಸುತ್ತಿದ್ದನು. ಅವನು ಗಂಗಾನದಿಯಲ್ಲಿ ಪುಣ್ಯಸ್ನಾನ ಮಾಡಿ, ಕುರುಕ್ಷೇತ್ರದಲ್ಲಿ ದಾನಧರ್ಮ ಮಾಡಿಬರಬೇಕೆಂದು ಯೋಚಿಸಿದನು. ತನ್ನ ಹತ್ತಿರವಿರುವ ಚಿನ್ನವನ್ನು ಯಾರೂ ನೋಡಬಾರದೆಂದು ಒಂದು ಬಿದಿರಿನ ಕೋಲಿನ ರಂಧ್ರದಲ್ಲಿ ತುಂಬಿಕೊಂಡು ಒಂದು ಮಧ್ಯರಾತ್ರಿ ಮನೆಯಿಂದ ಹೊರಡುತ್ತಾನೆ. ಹೀಗೆ ಹೋಗುತ್ತಿರುವಾಗ ಮಧ್ಯದಲ್ಲಿ ಧೂರ್ತ ಶಿಖಾಮಣಿಯೊಬ್ಬನು ನಾರಾಯಣಭಟ್ಟನನ್ನು ನೋಡಿ, ಅವನ ಹತ್ತಿರ ಹಣ ಅಥವ ಚಿನ್ನವೇನಾದರೂ ಇರಬಹುದೆಂದು ಊಹಿಸಿ, ಎಲ್ಲಿಗೆ ಹೋಗುತ್ತಿರುವಯೆಂದು ಕೇಳುತ್ತಾನೆ. ಅದಕ್ಕೆ ನಾರಾಯಣ ಭಟ್ಟನು, ತಾನು ಗಂಗಾನದಿಯಲ್ಲಿ ಸ್ನಾನ ಮಾಡಲು ಹೊರಟಿರುವುದಾಗಿ ಹೇಳಲು ಆ ಧೂರ್ತ ಶಿಖಾಮಣಿಯು ತಾನೂ ಅವನ ಜೊತೆಗೆ ಹೋಗುವುದಾಗಿ ಹೇಳುತ್ತಾನೆ. ನಂತರ ಇಬ್ಬರೂ ಸೇರಿ ಪ್ರಯಾಣ ಮಾಡಿ ಅನೇಕ ಪ್ರಾಂತ್ಯಗಳನ್ನು ದಾಟಿ, ಚಂಪಾನಗರವೆಂಬ ಪಟ್ಟಣಕ್ಕೆ ಬರುತ್ತಾರೆ. ಅಲ್ಲಿ ಊಟ ಮಾಡಿ ವಿಶ್ರಾಂತಿ ಪಡೆಯಲು ಒಬ್ಬ ಬ್ರಾಹ್ಮಣನ ಮನೆಗೆ ಹೋಗಿ ಕುಳಿತುಕೊಳ್ಳುತ್ತಾರೆ. ಆಗ ಆ ಮನೆಯ ಒಡೆಯನ ಪತ್ನಿಯು ತನ್ನ ಕಣ್ಣುಗಳಿಗೆ ಒಂದು ಬಟ್ಟೆಯ ತುಂಡನ್ನು ಕಟ್ಟಿಕೊಂಡು ತನ್ನ ಮಗುವಿಗೆ ಎದೆ ಹಾಲನ್ನು ಕುಡಿಸುತ್ತಿರುತ್ತಾಳೆ. ಈ ವಿಚಿತ್ರ ಸನ್ನಿವೇಶವನ್ನು ಕಂಡು ನಾರಾಯಣಭಟ್ಟನು ಮನೆಯ ಒಡೆಯನನ್ನು ಅದಕ್ಕೆ ಕಾರಣವೇನೆಂದು ಕೇಳುತ್ತಾನೆ. ಅದಕ್ಕೆ ಅವನು ತನ್ನ ಪತ್ನಿಯು ಮಹಾಪತಿವ್ರತೆ, ಬೇರೆ ಪುರುಷರ ಮುಖವನ್ನು ಸಹ ನೋಡುವುದಿಲ್ಲ. ಮಗು ಗಂಡು ಕೂಸಾಗಿರುವುದರಿಂದ ಅದರ ಮುಖವನ್ನು ನೋಡಬಾರದೆಂದು ಹಾಗೆ ಕಣ್ಣುಮುಚ್ಚಿಕೊಂಡಿರುವಳೆಂದು ಹೇಳುತ್ತಾನೆ. ಇದನ್ನು ನೋಡಿ ಕುತೂಹಲಗೊಂಡು ಅವರ ಚಲನವಲನಗಳನ್ನು ಗಮನಿಸಲು ಅವರು ಅಲ್ಲಿಯೇ ಉಳಿಯುತ್ತಾರೆ. ಮನೆಯ ಒಡೆಯನು ಏನೋ ಕೆಲಸದ ನಿಮಿತ್ತ ಅರಮನೆಗೆ ಹೋಗುತ್ತಾನೆ. ಅವನು ಬೇಗನೆ ಹಿಂದಿರುಗುವುದಿಲ್ಲ. ಆ ಸಮಯದಲ್ಲಿ ಪತಿವ್ರತೆಯಂತೆ ನಟಿಸುತ್ತಿದ್ದ ಅವನ ಪತ್ನಿಯು ತನ್ನ ಮನೆಯಲ್ಲಿಯೇ ಹಸುಗಳನ್ನು ನೋಡಿಕೊಳ್ಳುತ್ತಿರುವ ಸೇವಕನೊಡನೆ ಕಾಮಕೇಳಿಯಲ್ಲಿ ತೊಡಗುತ್ತಾಳೆ. ಅವಳ ತೋರಿಕೆಯ ಪಾತಿವ್ರತ್ಯವನ್ನು ಕಂಡು ಆಶ್ಚರ್ಯಪಟ್ಟ ನಾರಾಯಣ ಭಟ್ಟನು ಮರುದಿನ ತನ್ನ ಪ್ರಯಾಣವನ್ನು ಮುಂದುವರಿಸುತ್ತಾನೆ.

ಹೀಗೆ ಪ್ರಯಾಣ ಮಾಡುತ್ತಿರುವಾಗ ದಾರಿಯಲ್ಲಿ ನರ್ಮದಾ ನದಿಯು ಸಿಗುತ್ತದೆ. ಆ ನದಿಯಲ್ಲಿ ಸ್ನಾನ ಮಾಡಬೇಕೆಂದು ಸ್ವಲ್ಪ ವೇಳೆ ಅಲ್ಲಿಯೇ ಇರುತ್ತಾನೆ. ಆಗ ಅವನ ಜೊತೆಯಲ್ಲಿದ್ದ ಧೂರ್ತಶಿಖಾಮಣಿಯು ನಾರಾಯಣಭಟ್ಟನನ್ನು ನಂಬಿಸಿ ಮೋಸಗೊಳಿಸಲು ಒಂದು ತಂತ್ರವನ್ನು ಹೂಡುತ್ತಾನೆ. ತನ್ನ ಮೈಗೆ

ಅಂಟಿಕೊಂಡಿದ್ದ ಒಂದು ಹುಲ್ಲು ಕಡ್ಡಿಯನ್ನು ತೋರಿಸಿ, ಅದು ಬೇರೆಯವರಿಗೆ ಸೇರಿದ ವಸ್ತು, ಅದನ್ನು ತನ್ನ ಜೊತೆಗೆ ಕೊಂಡೊಯ್ದರೆ ಬೇರೆಯವರ ಸಂಪತ್ತನ್ನು ಅಪಹರಿಸಿದ ಪಾಪ ಬರುತ್ತದೆ. ಆದ್ದರಿಂದ ಅದನ್ನು ಹಿಂದಿರುಗಿಸಿ ಬರುವುದಾಗಿ ಹೇಳಿ, ನಾರಾಯಣಭಟ್ಟನಿಗೆ ಮುಂದಿನ ಗ್ರಾಮಕ್ಕೆ ಹೋಗಿ ತನಗಾಗಿ ಕಾಯಬೇಕೆಂದು ಹೇಳಿ, ಸ್ವಲ್ಪ ದೂರ ಹಿಂದೆ ಹೋಗಿ, ಸ್ವಲ್ಪ ಸಮಯದವರೆಗೆ ಅಲ್ಲಿಯೇ ನಿಂತು ಹುಲ್ಲು ಕಡ್ಡಿಯನ್ನು ಎಸೆದು ಬರುತ್ತಾನೆ. ನಂತರ ನಾರಾಯಣಭಟ್ಟನ ಹತ್ತಿರ ಬಂದು ಬಹಳ ದೂರ ನಡೆದುಬಂದದ್ದರಿಂದ ಹಸಿವೆಯಾಗಿದೆಯೆಂದು ಹೇಳುತ್ತಾನೆ. ಆಗ ನಾರಾಯಣಭಟ್ಟನು ಹತ್ತಿರವಿರುವ ಗ್ರಾಮಕ್ಕೆ ಹೋಗಿ ಭಿಕ್ಷೆ ಬೇಡಿಕೊಂಡು ಬರಲು ಹೇಳುತ್ತಾನೆ. ಅದಕ್ಕೆ ಧೂರ್ತ ಶಿಖಾಮಣಿಯು ಅಲ್ಲಿ ನಾಯಿಗಳಿರುವುದರಿಂದ ಅಲ್ಲಿಗೆ ಹೋಗಲು ಹೇಗೆ ಸಾಧ್ಯವೆಂದು ಕೇಳಲು, ನಾರಾಯಣಭಟ್ಟನು ಅವನನ್ನು ನಂಬಿ, ಚಿನ್ನವನ್ನು ತುಂಬಿದ ತನ್ನ ಕೋಲನ್ನು ಕೊಡುತ್ತಾನೆ, ಕೋಲನ್ನು ಪಡೆದ ಧೂರ್ತಶಿಖಾಮಣಿಯು ತನ್ನ ಆಸೆ ಈಡೇರಿದ್ದಕ್ಕೆ ಸಂತೋಷಪಟ್ಟು ಅಲ್ಲಿಂದ ಪರಾರಿಯಾಗುತ್ತಾನೆ. ನಾರಾಯಣ ಭಟ್ಟನು ಆ ದಿನ ರಾತ್ರಿಯೆಲ್ಲ ಧೂರ್ತಶಿಖಾಮಣಿಯ ನಿರೀಕ್ಷೆಯಲ್ಲಿದ್ದು, ಮರುದಿನ ತನ್ನ ಪ್ರಯಾಣ ಮುಂದುವರೆಸುತ್ತಾನೆ.

ನಾರಾಯಣಭಟ್ಟನು ಪ್ರಯಾಣ ಮಾಡುತ್ತ ಅರಣ್ಯದಲ್ಲಿ ಒಂದು ಸರೋವರದ ಹತ್ತಿರ ಬರುತ್ತಾನೆ. ಅಲ್ಲಿ ಒಂದು ಬಕ ಪಕ್ಷಿಯು ಅನೇಕ ಪಕ್ಷಿ, ಮೀನು ಮತ್ತು ಇತರ ಜಲಚರಗಳಿಗೆ ಧಾರ್ಮಿಕ ಬೋಧನೆಯನ್ನು ಮಾಡುತ್ತಿರುತ್ತದೆ. ನಾರಾಯಣಭಟ್ಟನು ಒಂದು ಮರದ ಹಿಂದೆ ಅವಿತುಕೊಂಡು ಆ ವಿಚಿತ್ರ ಸಭೆಯನ್ನು ನೋಡುತ್ತಾನೆ. ಸಭೆ ಮುಗಿದ ನಂತರ ಎಲ್ಲ ಪಕ್ಷಿಗಳು, ಮೀನುಗಳು ತಮ್ಮ ತಮ್ಮ ಸ್ಥಳಗಳಿಗೆ ಹೊರಡುತ್ತವೆ. ಆಗ ಧರ್ಮವನ್ನು ಉಪದೇಶಿಸಿದ ಬಕವು ಹಿಂದೆ ಉಳಿದ ಮೀನುಗಳನ್ನು ಒಂದೊಂದಾಗಿ ತಿನ್ನುತ್ತದೆ. ಈ ದೃಶ್ಯವನ್ನು ನೋಡಿ ಆಶ್ಚರ್ಯಪಟ್ಟು ನಾರಾಯಣಭಟ್ಟನು ತನ್ನ ಪ್ರಯಾಣವನ್ನು ಮುಂದುವರಿಸುತ್ತಾನೆ.

ಕೆಲವು ದಿನಗಳ ನಂತರ ಅವನು ಉಜ್ಜಯಿನಿ ಪಟ್ಟಣವನ್ನು ಸೇರುತ್ತಾನೆ. ಪಟ್ಟಣದ ಹೊರವಲಯದಲ್ಲಿದ್ದ ಒಂದು ಉದ್ಯಾನವನದಲ್ಲಿ ಒಬ್ಬ ಮನುಷ್ಯನು ಮುನಿಯ ವೇಷ ಹಾಕಿ ತನ್ನ ಸುತ್ತಲೂ ಬೆಂಕಿಯನ್ನು ಹಾಕಿಕೊಂಡು ಸುಡುತ್ತಿರುವ ಸೂರ್ಯನಿಗೆದುರಾಗಿ ನಿಂತು ತಪಸ್ಸು ಮಾಡುತ್ತಿರುತ್ತಾನೆ. ನಾರಾಯಣಭಟ್ಟನು ಈ ವಿಚಿತ್ರವನ್ನು ಕಂಡು ಮುಂದೆ ಏನು ನಡೆಯುತ್ತದೆಯೋ ನೋಡಬೇಕೆಂದು ಅಲ್ಲಿಯೇ ಕಾದು ಕುಳಿತುಕೊಳ್ಳುತ್ತಾನೆ. ಸಾಯಂಕಾಲವಾಗುತ್ತಿದ್ದಂತೆಯೇ ಮುನಿಯ ವೇಷದ ಮನುಷ್ಯನು ತನ್ನ ತಪಸ್ಸನ್ನು ತೊರೆದು ಆಚೆ ಬರಲು, ಇನ್ನೊಬ್ಬ ಮನುಷ್ಯನು ಅಲ್ಲಿಗೆ ಬಂದು ಅವನಿಗೆ ತೊಡಲು ಬೇರೆ ಬಟ್ಟೆಗಳನ್ನು ಕೊಡುತ್ತಾನೆ. ನಂತರ ಇಬ್ಬರೂ ಸೇರಿ ಅರಮನೆಗೆ ಹೋಗಿ ಕಳ್ಳತನ ಮಾಡಿ ನಗ ನಾಣ್ಯಗಳನ್ನು ತರುತ್ತಿರುವಾಗ ಶಬ್ದವಾಗಿ ಕಾವಲುಗಾರನಿಗೆ ಎಚ್ಚರವಾಗುತ್ತದೆ. ಕಾವಲುಗಾರ ಬೆನ್ನಟ್ಟಿ ಬರಲು ಕಳ್ಳರಿಗೆ ತಪ್ಪಿಸಿಕೊಳ್ಳಲು ಬೇರೆ ಮಾರ್ಗ ಕಾಣದೆ ತಾವು ಮೊದಲು ಇದ್ದ ವನಕ್ಕೆ ಬರುತ್ತಾರೆ. ಅಲ್ಲಿ ಕಪಟ ಸನ್ಯಾಸಿಯು ನಾರಾಯಣಭಟ್ಟನ ಮುಂದೆ ಕಳ್ಳತನ ಮಾಡಿ ತಂದಿದ್ದ ಪೆಟ್ಟಿಗೆ ಮತ್ತು ಕಳವು ಮಾಡಲು ಉಪಯೋಗಿಸಿದ್ದ ಉಪಕರಣಗಳನ್ನಿಟ್ಟು ತಾನು ಮೊದಲು ಧರಿಸಿದ್ದ ಸನ್ಯಾಸಿಯ ವೇಷವನ್ನು ತೊಟ್ಟು ತಪಸ್ಸು ಮಾಡುತ್ತ ನಿಲ್ಲುತ್ತಾನೆ. ಬೆನ್ನಟ್ಟಿ ಬಂದ ಕಾವಲುಗಾರರು ಈ ಸನ್ಯಾಸಿಯನ್ನೇ ಕಳ್ಳನ ಬಗ್ಗೆ ವಿಚಾರಿಸಲು, ಅವನು ನಾರಾಯಣಭಟ್ಟನ ಕಡೆಗೆ ತೋರಿಸುತ್ತಾನೆ. ಆಗ ಕಾವಲುಗಾರರು ನಾರಾಯಣಭಟ್ಟನ ಎದುರಿಗೆ ಕಳ್ಳತನ ಮಾಡಿ ತಂದಿದ್ದ ಪೆಟ್ಟಿಗೆ ಮತ್ತು ಕದಿಯಲು ಉಪಯೋಗಿಸದ ಉಪಕರಣಗಳನ್ನು ನೋಡಿ ಅವನೇ ಕಳ್ಳನಿರಬೇಕೆಂದು ತಿಳಿದು ಅವನನ್ನು ಬಂಧಿಸಿ ಅರಮನೆಗೆ ಎಳೆದೊಯ್ಯುತ್ತಾರೆ. ರಾಜನು ಸಹ ನಾರಾಯಣಭಟ್ಟನೇ ಕಳ್ಳನೆಂದು ತೀರ್ಮಾನಿಸಿ ಆಜ್ಞೆ ಮಾಡುತ್ತಾನೆ. ಆಗ ನಾರಾಯಣಭಟ್ಟನು ಈ ರೀತಿ ಹೇಳುತ್ತಾನೆ.

ಸಂಸ್ಕೃತ : ಬಾಲಚುಂಬಿತ ನಾರೀ ಚ ತೃಣಚೋರಶ್ಚ ಬ್ರಾಹ್ಮಣಃ।
ಧರ್ಮಂ ಕರೋತಿ ಶಕುನಿಃ ತಾಪಸೋ ನಾಸ್ತಿ ಸಂಶಯಃ॥

ಕನ್ನಡ : *ಹಾಲುಣಿಸುತ್ತಿರುವ ಹೆಂಗಸು, ಹುಲ್ಲು ಕಡ್ಡಿಯನ್ನು ಕದ್ದ ಬ್ರಾಹ್ಮಣ, ಧರ್ಮೋಪದೇಶ ಮಾಡುವ ಬಕ, ತಪಸ್ವಿ ಎನ್ನುವದರಲ್ಲಿ ಸಂಶಯವಿಲ್ಲ.*

ಆಗ ಅರಸನು ಅದೇನೆಂದು ಕೇಳಿದಾಗ ತಾನು ಯಾತ್ರೆಗೆಂದು ಮನೆಯಿಂದ ಹೊರಟ ನಂತರ ದಾರಿಯಲ್ಲಿ ಕಂಡ ವಿಚಿತ್ರ ಘಟನೆಗಳಾದ ಬ್ರಾಹ್ಮಣನ ಹೆಂಡತಿಯು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಮಗುವಿಗೆ ಹಾಲು ಕುಡಿಸುತ್ತಿದ್ದುದು, ಧೂರ್ತ ಶಿಖಾಮಣಿಯ ಹುಲ್ಲು ಕಡ್ಡಿಯನ್ನು ಕದಿಯದವನಂತೆ ನಟಿಸಿ ತನ್ನ ಕೋಲನ್ನು ಕದ್ದು ಪರಾರಿಯಾದದ್ದು, ಬಕವು ಧರ್ಮವನ್ನು ಬೋಧಿಸಿ ತಾನೇ ಮೀನುಗಳನ್ನು ತಿಂದದ್ದು, ಕಪಟ ಸನ್ಯಾಸಿಯು ಅರಮನೆಯ ಒಡವೆಗಳನ್ನು ಕದ್ದು ತನ್ನ ಮೇಲೆ ಸುಳ್ಳು ಅಪವಾದ ಹೊರಿಸಿದುದನ್ನು ಅರಸನಿಗೆ ಹೇಳುತ್ತಾನೆ. ಆಗ ಅರಸನು ನಿಜವಾದ ಕಳ್ಳನ ಗುಹೆಯನ್ನು ಶೋಧಿಸಿ ಬಚ್ಚಿಟ್ಟ ವಸ್ತುಗಳನ್ನೆಲ್ಲಾ ತರಿಸಿ ನೋಡಲು ಸನ್ಯಾಸಿಯೇ ನಿಜವಾದ ಕಳ್ಳನೆಂದು ಗೊತ್ತಾಗುತ್ತದೆ. ಕಳ್ಳನಿಗೆ ಸರಿಯಾದ ಶಿಕ್ಷೆಯನ್ನು ಕೊಟ್ಟು ನಾರಾಯಣಭಟ್ಟನಿಗೆ ಅಪಾರವಾದ ಧನವನ್ನು ಕೊಟ್ಟು ಸತ್ಕರಿಸುತ್ತಾನೆ.

ಈ ಕಥೆಯ ನಾಲ್ಕು ಪ್ರಮುಖ ಸನ್ನಿವೇಶಗಳ ನಾಲ್ಕು ದೃಶ್ಯಗಳನ್ನು ಆಲಂಪುರದ ಶಿಲ್ಪಗಳಲ್ಲಿ ನೋಡಬಹುದು. ಆದರೆ ನಿಡುಗುಂದಿಯ ಕಾಳಿಕಾ ದೇವಾಲಯದ ಕಂಬದ ಮೇಲಿನ ಶಿಲ್ಪದಲ್ಲಿ ಮೊದಲ ಎರಡು ಸನ್ನಿವೇಶಗಳ ಎರಡು ದೃಶ್ಯಗಳನ್ನು ಮಾತ್ರ ಕೆತ್ತಲಾಗಿದೆ. ಎಡಭಾಗದಲ್ಲಿರುವ ಮೊದಲ ದೃಶ್ಯದಲ್ಲಿ ಕಣ್ಣಿಗೆ ಬಟ್ಟೆಯನ್ನು ಕಟ್ಟಿಕೊಂಡ ಹೆಂಗಸು ಮಗುವನ್ನು ತೊಡೆಯ ಮೇಲೆ

ಕುಳ್ಳಿರಿಸಿಕೊಂಡಿದ್ದಾಳೆ. ಬಲಭಾಗದಲ್ಲಿರುವ ಎರಡನೇ ದೃಶ್ಯದಲ್ಲಿ ನಾರಾಯಣಭಟ್ಟ ಮತ್ತು ಧೂರ್ತಶಿಖಾಮಣಿ ನಿಂತಿದ್ದಾರೆ. ಮುಂದೆ ಗಡ್ಡಧಾರಿ ನಾರಾಯಣಭಟ್ಟನ ಕೈಯಲ್ಲಿ ಉದ್ದವಾದ ಕೋಲು ಇದೆ. ಅವನ ಹಿಂದೆ ನಿಂತಿರುವ ಧೂರ್ತಶಿಖಾಮಣಿಯ ಕೈಯಲ್ಲಿ ಹುಲ್ಲು ಇದೆ. ಈ ಎರಡೂ ದೃಶ್ಯಗಳ ಶಿಲ್ಪಗಳು ಆಲಂಪುರದಲ್ಲಿರುವ ಶಿಲ್ಪಗಳಂತೆ ಇವೆ.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. Klokke Marijke J., (1993), *The Tantri reliefs on ancient Javanese candi*, pp. 195-196

*೨. ಪಾಟೀಲ ಚನ್ನಬಸಪ್ಪ ಎಸ್., (೧೯೯೪), **ಕರ್ನಾಟಕ ಶಿಲ್ಪಗಳಲ್ಲಿ ಪಂಚತಂತ್ರ**, ಪು. ೧೧;
Patil Channabasappa . S., 'Panchatantra Sculptures; in Navalinga temple at Kukanur' in *A Sundara Felicitation Volume*, (Fourthcoming)

*೩. ಡಾ। ರು. ಮ. ಷಡಾಕ್ಷರಯ್ಯನವರು ಈ ದೇವಾಲಯದಲ್ಲಿಯ 'ದೃಶ್ಯಗಳು ಪಂಚತಂತ್ರ, ರಾಮಾಯಣ, ಇನ್ನಿತರ ಕಥೆಗಳಿಗೆ ಸೇರಿವೆ' ಎನ್ನುತ್ತಾರೆ. ಆದರೆ ಪಂಚತಂತ್ರ ಕಥೆಗಳನ್ನು ಸ್ಪಷ್ಟವಾಗಿ ಗುರುತಿಸಿಲ್ಲ. ಕೀಲನುಚ್ಚಿದ ಕಪಿಯ ಕಥೆಯನ್ನು ನಿರೂಪಿಸುವ ಶಿಲ್ಪಗಳನ್ನು 'ತಲಾ ಒಂದರ ಹಾರದಲ್ಲಿ ಮಂಗ ಮತ್ತು ಮಂಗ ತಾನು ಸೀಳಿದ ಬಡ್ಡಿಯಲ್ಲಿ ಸಿಗಿಸಿಕೊಂಡು ಭಾಗವನ್ನು ಬಿಡಿಸಿಕೊಳ್ಳಲು ಒದ್ದಾಡುತ್ತಿದೆ' ಎಂದು ವಿವರಿಸುತ್ತಾರೆ, 'ಸಿಂಹ ಮತ್ತು ಮೊಲ'ದ ಕಥೆಯನ್ನು ನಿರೂಪಿಸುವ ಶಿಲ್ಪಗಳನ್ನು 'ತಲಾ ಒಂದರ ಹಾರದಲ್ಲಿ ನಾಯಿ ಮತ್ತು ನರಿಗಳು ಅರ್ಧ ವೃತ್ತಾಕಾರದ ಪೀಠದ ಮೇಲೆ ನಿಂತಿವೆ' ಎಂದು ವಿವರಿಸುತ್ತಾರೆ. 'ನಾರಾಯಣಭಟ್ಟನ ಕಥೆ'ಯನ್ನು ನಿರೂಪಿಸುವ ಶಿಲ್ಪಗಳನ್ನು 'ಮಿಥುನ ಭಂಗಿಯಲ್ಲಿರುವ ಪ್ರೇಮಿಗಳನ್ನು ಇಬ್ಬರು ವೀಕ್ಷಿಸುತ್ತಿರುವುದು, ತಲಾ ಒಂದರ ಹಾರದಲ್ಲಿವೆ' ಎಂದು ವಿವರಿಸುತ್ತಾರೆ. ರು. ಮ. ಷಡಕ್ಷರಯ್ಯ, (೧೯೯೯), 'ಗುಲ್ಬರ್ಗಾ ಪ್ರದೇಶದ ಹೆಚ್ಚಿನ ಪುರಾತತ್ವ ಶೋಧನೆಗಳು,' **ಇತಿಹಾಸ ದರ್ಶನ**, ಸಂಪುಟ ೧೪/೧೯೯೯, ಪು, ೧೧೯. ಶ್ರೀ ರಾಜೇಂದ್ರಪ್ಪನವರು 'ಸಿಂಹ ಮತ್ತು ಮೊಲ'ದ ಕಥೆಯನ್ನು 'ನರಿ-ಸಿಂಹ' ಎಂದು ಗುರುತಿಸಿದ್ದಾರೆ. ಅವರು 'ಮಂಗ-ಬೆಣೆಯ' ಕತೆಯನ್ನು ಸಹ ಗುರುತಿಸಿದ್ದಾರೆ. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಗುಲ್ಬರ್ಗಾ ಜಿಲ್ಲೆ (ಕಲಬುರಗಿ ಜಿಲ್ಲೆ), ೧೯೯೭, ಪು. ೭೩೯.

*೪. ಪಾಟೀಲ ಚನ್ನಬಸಪ್ಪ ಎಸ್. ಪೂರ್ವೋಕ್ತ, ಪು. ೪೦-೪೨.

*೫. ನರಸಿಂಹ ಶಾಸ್ತ್ರಿ, ಕ., (೧೯೭೮), **ಕನ್ನಡ ಪಂಚತಂತ್ರ**, ಪು. ೨೬೭-೨೬೯;
Parab Kasinath Panduranga and Vasudev Laxman Sastri Pansikar, 1914, *The Panchatantra of Vishnusarman*, pp. 202-203.

*೬. ಅನಂತರಂಗಾಚಾರ್ ಎನ್., (ಸಂ.) **ದುರ್ಗಸಿಂಹ ವಿರಚಿತಂ ಕರ್ಣಾಟಕ ಪಂಚತಂತ್ರಂ**, ಶಾರದಾ ಮಂದಿರ, ಮೈಸೂರು, ಪು. ೧೬೮-೧೭೧.

ಎಂ. ಎಚ್. ಅಗಸಿಬಾಗಲವರ*

# ಸಂಡ ಮತ್ತು ಹಿರೇಮಾಗನೂರಿನಲ್ಲಿ ಪಂಚತಂತ್ರ ಶಿಲ್ಪಗಳು

ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲೂಕಿನ ಸಂಡ ಗ್ರಾಮದಲ್ಲಿ ಹಂಸ ಮತ್ತು ಆಮೆ ಹಾಗೂ ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲೂಕಿನ ಹಿರೇಮಾಗನೂರಿನಲ್ಲಿ ಬ್ರಾಹ್ಮಣ ಏಡಿ ಮತ್ತು ಕಾಗೆಯ ಪಂಚತಂತ್ರ ಶಿಲ್ಪಗಳಿರುವುದು ಪತ್ತೆಯಾಗಿವೆ.

*ಸಂಡದಲ್ಲಿನ ಪಂಚತಂತ್ರ ಶಿಲ್ಪ* : ಸಂಡ ಗ್ರಾಮದ ಸೂರ್ಯನಾರಾಯಣ ದೇವರ ಗುಡಿಯ ಹತ್ತಿರ ಆರು ಗೋಸಾಸ ಕಲ್ಲುಗಳಿವೆ. ಒಂದು ಗೋಸಾಸಕಲ್ಲನ್ನು ಗುಡಿಯ ಪ್ರವೇಶ ದ್ವಾರದ ಬಲ ಪಕ್ಕದಲ್ಲಿ ಇಡಲಾಗಿದೆ. ಎದುರಿಗೆ ಇನ್ನೊಂದು ಗೋಸಾಸ ಕಲ್ಲು ಇದೆ. ಇದರಲ್ಲಿ ಎರಡು ಸಾಲಿನ ಸಂಸ್ಕೃತ ಶಾಸನವಿದೆ. ಉಳಿದ ನಾಲ್ಕು ಗೋಸಾಸಕಲ್ಲುಗಳು ಮಠದ ಜಾಗವೆಂದು ಕರೆಯುತ್ತಿರುವಲ್ಲಿ ಇವೆ. ಎರಡನೆಯ ಗೋಸಾಸಕಲ್ಲಿನಲ್ಲಿ ಪಶ್ಚಿಮ ದಿಕ್ಕಿನಲ್ಲಿ ನಾಲ್ಕು ಸಾಲಿನ ಕನ್ನಡ ಶಾಸನವನ್ನು ಕಂಡರಿಸಲಾಗಿದೆ. ಗೋಸಾಸಗಳ ಹಿಂಭಾಗದಲ್ಲಿ ಪೂರ್ಣಕುಂಭದ ಉಬ್ಬು ಶಿಲ್ಪವಿದೆ. ಶಾಸನವು ಲಿಪಿಯ ದೃಷ್ಟಿಯಿಂದ ೯ ಮತ್ತು ೧೦ ನೆಯ ಶತಮಾನಕ್ಕೆ ಸೇರುತ್ತದೆ. ಮೂರನೆಯ ಗೋಸಾಸ ಕಲ್ಲಿನಲ್ಲಿ ಪೂರ್ವಕ್ಕೆ ಮುಖಮಾಡಿರುವ ಭಾಗದಲ್ಲಿ ಪಂಚತಂತ್ರ ಶಿಲ್ಪವಿದೆ.

ಅದರಲ್ಲಿ ಹಂಸ ಮತ್ತು ಆಮೆಯ ಕತೆಯನ್ನು* ಒಂದು ದೃಶ್ಯದಲ್ಲಿ ಕೆತ್ತಲಾಗಿದೆ. ಸರೋವರವನ್ನು ವೃತ್ತಾಕಾರದಲ್ಲಿ ತೋರಿಸಲಾಗಿದ್ದು ಅದರ ನಾಲ್ಕು ಮೀನು ಮೂರು ದಪ್ಪತಲೆ ಮತ್ತು ಉದ್ದ ಬಾಲದ ಇನ್ನೊಂದು ಜಾತಿಯ ಮೀನುಗಳನ್ನು ತೋರಿಸಲಾಗಿದೆ. ಆಮೆಯನ್ನು ಸಹ ಉಬ್ಬುಶಿಲ್ಪದಲ್ಲಿ ಕೆತ್ತಲಾಗಿದೆ. ಒಂದು ತಾವರೆಯನ್ನು ರೇಖಾ ಚಿತ್ರದಲ್ಲಿ ಕೆತ್ತಲಾಗಿದೆ. ಶಿಲ್ಪದ ಮೆಲ್ಭಾಗದಲ್ಲಿ ಎರಡು ಹಂಸಗಳು ಇದಿರು ಬದಿರಾಗಿ ಬಾಯಿಯಲ್ಲಿ ಒಂದು ಕಡ್ಡಿಯನ್ನು ಹಿಡಿದುಕೊಂಡಿವೆ. ಆಮೆಯು ಕಡ್ಡಿಯ ಮಧ್ಯಭಾಗವನ್ನು ಬಾಯಿಯಲ್ಲಿ ಕಚ್ಚಿ ಹಿಡಿದು ನೇತಾಡುತ್ತಿದೆ. ಹಂಸಗಳು ಒಂದು ಕಾಲನ್ನು ಸರೋವರದ ದಂಡೆಯಮೇಲೆ ಇನ್ನೊಂದು ಕಾಲನ್ನು ಮೇಲೆ ಎತ್ತಿ ಹಿಡಿದು ಹಾರಲು ಸಿದ್ಧವಾಗಿರುವಂತೆ ಕೆತ್ತಲಾಗಿದೆ. ಸರೋವರದ ದಂಡೆಯ ಮೇಲೆ ನರಿಯೊಂದು ಹಂಸ ಮತ್ತು ಆಮೆಗಳ ಕಡೆಗೆ ನಿಂತಿದೆ.



* **ಹಂಸ ಮತ್ತು ಆಮೆ** : ಒಂದು ಸರೋವರದಲ್ಲಿ ಆಮೆ ಮತ್ತು ಎರಡು ಹಂಸಗಳು ವಾಸಿಸುತ್ತಿದ್ದವು. ಒಮ್ಮೆ ಬರಗಾಲ ಬಿದ್ದು ಸರೋವರದಲ್ಲಿನ ನೀರು ಬತ್ತಿಹೋಗಿ ಹಂಸಗಳು ನೀರುಳ್ಳ ಬೇರೊಂದು ಸರೋವರವನ್ನು ಹುಡುಕಿಕೊಂಡು ಹೋಗಬೇಕೆಂದು ಯೋಚಿಸಿ ಆಮೆಗೆ ವಿಷಯ ತಿಳಿಸಲು ಹೋದವು. ಆಮೆಯು ತಾನು ನೀರಿಲ್ಲದೆ ಬದುಕುವುದಿಲ್ಲವೆಂದೂ ತನ್ನನ್ನೂ ಕೂಡ ಕರೆದುಕೊಂಡು ಹೋಗಬೇಕೆಂದು ಬೇಡಿಕೊಂಡಿತು. ಹಂಸಗಳು ತಾವು ರೆಕ್ಕೆಗಳುಳ್ಳ ಪಕ್ಷಿಗಳು, ಆಮೆಯು ತಮ್ಮೊಂದಿಗೆ ಹೇಗೆ ಬರುವುದೆಂದು ಕೇಳಿದವು. ಆಮೆಯ ಹಂಸಗಳಿಗೆ ಒಂದು ಕಡ್ಡಿಯನ್ನು ತಂದು ಅವು ಕಡ್ಡಿಯನ್ನು ಬಾಯಿಯಲ್ಲಿ ಹಿಡಿದುಕೊಂಡು ಹಾರುವುದಾದರೆ ತಾನು ಕಡ್ಡಿಯನ್ನು ಕಚ್ಚಿಕೊಂಡು ಬರುತ್ತೇನೆಂದು ಹೇಳಿತು. ಹಂಸಗಳು ಆಮೆಯು ದಾರಿಯಲ್ಲಿ ಮಾತನಾಡುವುದಿಲ್ಲವೆಂದು ಪ್ರಮಾಣ ಮಾಡಿದರೆ ಮಾತ್ರ ಆಮೆಯ ಮಾತಿಗೆ ಒಪ್ಪುವುದಾಗಿ ತಿಳಿಸಿದವು. ಅದರಂತೆ ಹಂಸ ಮತ್ತು ಆಮೆಯು ಆಕಾಶದಲ್ಲಿ ಹಾರಿ ಹೋಗುತ್ತಿರುವಾಗ, ಪಟ್ಟಣದ ಮೇಲೆ ಬಂದಾಗ ಜನರು ಆಮೆಯು ಹಾರಿಹೋಗುತ್ತಿರವುದನ್ನು ಕಂಡು ನಗುತ್ತಾರೆ. ಇದನ್ನು ಕಂಡು ಆಮೆಯು ಹಂಸಗಳಿಗೆ ಜನರು ಏನನ್ನು ಮಾತಾನಾಡುತ್ತಿದ್ದಾರೆಂದು ಕೇಳಲು ಬಾಯಿ ತೆರೆಯುತ್ತದೆ. ಬಾಯಿ ತೆರದ ತಕ್ಷಣ ಕಡ್ಡಿಯ ಮೇಲಿನ ಹಿಡಿತ ತಪ್ಪಿ ಕೆಳಗೆ ಬಿದ್ದು ಸತ್ತುಹೋಗುತ್ತದೆ.

*ಸಾರಾಂಶ* : 'ಹಿತೈಷಿಯಾದ ಸ್ನೇಹಿತರ ಮಾತನ್ನು ಕೇಳದು ಇರವವನು ದುಷ್ಟ ಆಮೆಯು ಕೋಲಿನಿಂದ ಬಿದ್ದು ಸತ್ತಂತೆ ಸಾಯುತ್ತಾನೆ.'

*ನಂ. ೭೭, ಮೊದಲನೆಯ ಕ್ರಾಸ್, ಹೊಸಮನೆ, ಬಡಾವಣೆ, ಶಿವಮೊಗ್ಗ-೫೭೭ ೨೦೧.

ವಿಷ್ಣುಶರ್ಮನ ಪಂಚತಂತ್ರದಲ್ಲಿ ಆಮೆಯ ಮಾತನಾಡಲು ಹೋಗಿ ಬಾಯಿಬಿಟ್ಟು ಕೆಳಗೆ ಬಿದ್ದು ಸತ್ತುಹೋಗುತ್ತದೆ. ದುರ್ಗಸಿಂಹನ ಪಂಚತಂತ್ರದಲ್ಲಿ ಆಮೆಯು ಮಾತನಾಡಲು ಹೋಗಿ ಕೆಳಗೆ ಬಿದ್ದ ನಂತರ ಅದನ್ನು ಮಾಂಸಾಹಾರಿಗಳು ಕೊಂದು ತಿನ್ನುತ್ತಾರೆ. ಸಂಸ್ಕೃತ ತಂತ್ರೋಪಾಖ್ಯಾನ, ತಮಿಳು ತಂತ್ರೋಪಾಖ್ಯಾನ ಮತ್ತು ತಂತ್ರಗಳಲ್ಲಿ ನರಿಗಳ ಪ್ರಸ್ತಾಪ ಬರುತ್ತದೆ. ಇಲ್ಲಿ ಆಮೆಯು ಹಂಸಗಳ ಜೊತೆ ಹೊಗುತ್ತಿರುವುದನ್ನು ಕಂಡು ನರಿಗಳು ನಗುತ್ತವೆ. ಆಗ ಆಮೆಯು ಅವುಗಳನ್ನು ಬಯ್ಯಲು ಹೋಗಿ ಬಾಯಿ ತೆಗೆದು ಕೆಳಗೆ ಬಿದ್ದು ಸತ್ತು ಹೋಗುತ್ತದೆ. ನರಿಗಳು ಆಮೆಯ ಮಾಂಸವನ್ನು ತಿನ್ನುತ್ತವೆ. ನರಿಯನ್ನು ಒಳಗೊಂಡ ಶಿಲ್ಪಗಳು ಸಂಸ್ಕೃತ ತಂತ್ರೋಪಾಖ್ಯಾನ ಆಧಾರಿತ. ಉಳಿದವು ಇಂತಹುದೇ ಸಾಹಿತ್ಯ ಆಧಾರಿತ ಎಂದು ಹೇಳಲು ಬರುವುದಿಲ್ಲ. ಪಂಚತಂತ್ರ ಎಂದು ಮಾತ್ರ ಹೇಳಬಹುದು.

ಗೋಸಾಸ ಕಲ್ಲಿನ ಮೇಲೆ ಪಂಚತಂತ್ರದ ಶಿಲ್ಪವನ್ನು ಎರಡನೇಯ ಬಾರಿ ಕಾಣುತ್ತಿದ್ದೇವೆ. ಈ ಮೊದಲು ಸಿರ್ಸಿ ತಾಲೂಕಿನ ಯಸಳೆ ಗೋಸಾಸಕಲ್ಲಿನ ಮೇಲೆ ಪತ್ತೆಯಾಗಿದೆ. ಕರ್ನಾಟಕದಲ್ಲಿ ಇದುವರೆಗೆ ಪತ್ತೆಯಾದ ಹಂಸ ಮತ್ತು ಆಮೆಯ ಶಿಲ್ಪಗಳು ಹೀಗಿವೆ :

**ಕನ್ನಡ ಶಾಸನದ ಪಾಠ ಹೀಗಿದೆ**

೧. ಯ್ಯ ಸರ್ವಗುಣಸ [ಂ]* ಪ [ನ್ನ ಸ ]*
೨. ರ್‍ವಜ್ಜರಪ್ಪ ಸಣ್ಣ
೩. ಜನಕ್ಕೆ ಸುವ
೪. ನಿತ್ತು ಗೋ [ಸಾಸ]

ಬಲಭಾಗದಲ್ಲಿನ ಕಲ್ಲು ಒಡೆದುಹೋಗಿರುವುದರಿಂದ ಕಂಸದಲ್ಲಿರುವ ಪಾಠವನ್ನು ಊಹಿಸಲಾಗಿದೆ. ಇದೇ ಸೂರ್ಯನಾರಾಯಣ ಗುಡಿಯ ಹತ್ತಿರ ಇರುವ ಜಿನ ವಿಗ್ರಹವು ಶೇಖರಪ್ಪ ಕೋಲಗುಣಸಿಯವರ ಮನೆಯ ಹತ್ತಿರ ಪಾಯತೆಗೆಯುವಾಗ ೫/೬ ಅಡಿ ಆಳದಲ್ಲಿ ಸಿಕ್ಕಿದ್ದು, ವಿಗ್ರಹದ ಕೈಗಳು ತುಂಡಾಗಿದೆ.

***೧೩ನೇ ಶತಮಾನದ ಶಾಸನ ಪಾಠ***

೧. ಶ್ರೀ ಮೂಲ ಸಂಘೇನುತ್ ಮೂಲ ವಂಶೇ ಕ್ರಾಣೂರ್ಗ್ಗಣೇ ಗಚ್ಚ ಸುತಿಂತ್ರಣೀಕೆ.
೨. ಶ್ರೀ ಕೊಣ್ಡ ಕುಂದೆ ಮುನಿಚಂದ್ರ ಸೂರಿ: ತಸ್ಯಾಗ್ರ (ಶಿಷ್ಯಭಾ)ನು ಕೀರ್ತಿ:

ಶಿವಪ್ಪ ಜಂಬೂರ ಇವರ ಮನೆ ಹಿತ್ತಿಲಿನಲ್ಲಿ ಗದ್ದೆ ಮಟ್ಟಮಾಡುವಾಗ ಶಾಸನವೊಂದು ದೊರಕಿದ್ದು ಕೆಳಭಾಗ ಮತ್ತು

| ತಾಲೂಕು | ಗ್ರಾಮ | ದೇವಾಲಯ | ಶಿಲ್ಪ/ದೃಶ್ಯಗಳು | ಕತೆ |
|---|---|---|---|---|
| ಬಾದಾಮಿ | ಐಹೊಳೆ | ದುರ್ಗಾದೇವಾಲಯ | ೩ | - |
| ಯಲ್ಬರ್ಗ | ಕುಕನೂರು | ನವಲಿಂಗ ದೇವಾಲಯ | ೨ | ಸಂಸ್ಕೃತ ತಂತ್ರೋಪಾಖ್ಯಾನ |
| ಶಹಾಪುರ | ಸಿರಿವಾಳ | ಬಾವಿ ೧ | ೩ | - |
| ಶಹಾಪುರ | ಸಿರಿವಾಳ | ಕದಂಬೇಶ್ವರ ದೇವಾಲಯ | ೧ | - |
| ಶಹಾಪುರ | ಸಿರಿವಾಳ | ನಾದಯ್ಯ ದೇವಾಲಯ | | |
| ಬೆಂಗಳೂರು | ಬೇಗೂರು | ನಾಗೇಶ್ವರ ದೇವಾಲಯ | ೧ | - |
| ಚಾಮರಾಜನಗರ | ನರಸಮಂಗಲ | ರಾಮೇಶ್ವರ ದೇವಾಲಯ | ೧ | ಸಂಸ್ಕೃತ ತಂತ್ರೋಪಾಖ್ಯಾನ |
| ಕೋಲಾರ | ಕೋಲಾರ | ಕೋಲಾರಮ್ಮ ದೇವಾಲಯ | ೧ | ಸಂಸ್ಕೃತ ತಂತ್ರೋಪಾಖ್ಯಾನ |
| ಸಿರ್ಸಿ | ಯಸಳೆ | ಗೋಸಾಸ | ೧ | ಸಂಸ್ಕೃತ ತಂತ್ರೋಪಾಖ್ಯಾನ |
| ಶಿಕಾರಿಪುರ | ಬಳ್ಳಿಗಾವೆ | ತ್ರಿಪುರಾಂತೇಶ್ವರ | ೪ | ಸಂಸ್ಕೃತ ತಂತ್ರೋಪಾಖ್ಯಾನ |
| ಬೇಲೂರು | ಬೇಲೂರು | ಚನ್ನಕೇಶವ ದೇವಾಲಯ | ೧ | - |
| ಶಿಕಾರಿಪುರ | ಸಂಡ | ಗೋಸಾಸ | ೧ | ಸಂಸ್ಕೃತ ತಂತ್ರೋಪಾಖ್ಯಾನ |

**ಗೋಸಾಸ ಕಲ್ಲಿನ ಮೇಲಿರುವ ಸಂಸ್ಕೃತ ಶಾಸನದ ಪಾಠ :**

*೧ ಮಾಯ ಕ್ಷೀಣಂ ದಿನೇ ದಿನೇ ಯಮಸ್ಯ ಕರು*
*೨ .................. ತಾ ಗತಂ*

ಬಲ ಭಾಗ ಒಡೆದು ಹೋಗಿದೆ. ಕ್ರಿ. ಶ. ೧೦೯೪ಕ್ಕೆ ಸರಿಯೊಂದುವ ಶಾಸನದ ಪಾಠ ಹೀಗಿದೆ.

೧ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥುವೀ.....
೨ ಮಹಾರಾಜಾಧಿರಾಜ ಪರಮೇಶ್ವರಂಪರಮ ಭ...

೩ ಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀ.....
೪ ತ್ರಿಭುವನಮಲ್ಲ ದೇವರ ವಿಜೆಯರಾಜ್ಯಮುತ್ತರೋತ್ತರಾ....
೫ ವೃದ್ಧಿ ಪ್ರವರ್ಧಮಾನಮಾಚಂದ್ರರ್ಕ ತಾರಂಬ ರಂಸಲುತ್ತಮಿರೆ.....
೬ ದ ಪದ್ಮೋಪಜೀವಿ ಸುಮಧಿಗತ ಪಂಚಮಹಾಶಬ್ಧ ಮಹಾಮಣ್ಣ......
೭ ಶ್ವರಂ ದ್ವಾರಾವತೀ ಪುರವರಾಧೀಶ್ವರಂ ಯಾದವ ಕುಳಾಂಬರದ್ಯುಮಣಿ.......
೮ ಮ್ಯಕ್ತಚೂಡಾಮಣಿ ಮಲೆಪರೊಳ್ಗಗ್ಡ ಅನೇಕ ನಾಮಾವಳಿ........
೯ ಖ್ಯರಪ್ಪ ಶ್ರೀಮನ್ಮಹಾಮಣ್ಡಳೇಶ್ವರಂ ಹೊಯ್ಸಳರಸರು ಬನವಸೆನಾಡ.....
೧೦ ರಂಕ್ಷಣ್ಣ ಮಂದುಷ್ಟನಿಗ್ರಹಿಸಿಶಿಷ್ಟ ಪ್ರತಿಪಾಳ ನದಿಂದಾಳ್ವಾರಸುಗೆಯ್ಯುತ್ತ.....
೧೧ ಶ್ರೀಮತ್ ಚಾಳುಕ್ಯ ವಿಕ್ರಮಕಾಲದ ೧೮ನೆಯ ಶ್ರೀಮುಖ ಸಂವತ್ಸರ....



೧೨ [ಯಾ] ದಿವಾರಂ ವ್ಯತಿಪಾತಸೂರ್ಯಗ್ರಹಣದನ್ದು॥......
೧೩ ಧ್ಯಾನಧಾರಣವೆ ಮೊನಾನುಷ್ಟಣಪರಾಯ.... .......
೧೪ ದಗ್ರಹಾರಂ ಷಣ್ಡದ ಮಹಾ [ಜನ]
೧೫ ........ ಮಯ್ಯನ ಪುತ್ರಂ ..........

ಎ. ಕ. ಆರಲ್ಲಿ ನಂ. ೩೦೧ ರಿಂದ ೩೦೯ವರೆಗೆ ಸಂಡದ ೯ ಶಾಸನಗಳಿವೆ, ಅಲ್ಲದೆ ಮೈಸೂರು ಆರ್ಕಿಯಾಲಜಿಕಲ್

*ಕರ್ನಾಟಕದಲ್ಲಿ ವರದಿಯಾಗಿರುವ ಬ್ರಾಹ್ಮಣ ಏಡಿ ಮತ್ತು ಕಾಗೆ ಶಿಲ್ಪಗಳು*

| ತಾಲೂಕು | ಗ್ರಾಮ | ದೇವಾಲಯ | ಶಿಲ್ಪ/ದೃಶ್ಯಗಳು | ಕತೆ |
|---|---|---|---|---|
| ಯಲ್ಬುರ್ಗ | ಮುಧೋಳ | ಸಿದ್ದೇಶ್ವರ ದೇವಾಲಯ | ೨ | ದುರ್ಗಸಿಂಹ |
| ಶಹಾಪುರ | ಸಿರಿವಾಳ | ಈಶ್ವರ ದೇವಾಲಯ | ೨ | ದುರ್ಗಸಿಂಹ |
| ಶಿಕಾರಿಪುರ | ಬಳ್ಳಿಗಾವೆ | ತ್ರಿಪುರಾಂತಕೇಶ್ವರ | ೧ | ದುರ್ಗಸಿಂಹ |
| ಬೇಲೂರು | ಹಳೇಬೀಡು | ಹೊಯ್ಸಳೇಶ್ವರ ದೇವಾಲಯ | - | ದುರ್ಗಸಿಂಹ |
| ಹೊಸನಗರ | ಹುಂಚ | ಕಮಠೇಶ್ವರ ದೇವಾಲಯ | ೧ | ದುರ್ಗಸಿಂಹ |
| ರಾಣೇಬೆನ್ನೂರು | ಹಿರೇಮಾಗನೂರು | ಕಲ್ಲೇಶೇವರ ದೇವಾಲಯ | ೧ | ದುರ್ಗಸಿಂಹ |

* **ಬ್ರಾಹ್ಮಣ, ಎಡಿ, ಮತ್ತು ಕಾಗೆ** : ಒಮ್ಮೆ ಬ್ರಾಹ್ಮಣನೊಬ್ಬನು ತೀರ್ಥಯಾತ್ರೆಗೆ ಹೊರಡುತ್ತಾನೆ. ದಾರಿಯಲ್ಲಿ ಬತ್ತಿದ ಸರೋವರವೊಂದರಲ್ಲಿ ಒಂದು ಏಡಿಯು ನೀರಿಲ್ಲದೆ ಒದ್ದಾಡುತ್ತಿರುತ್ತದೆ. ಬ್ರಾಹ್ಮಣನು ಅದರ ಬಗ್ಗೆ ಕನಿಕರಪಟ್ಟು ತನ್ನ ನೀರಿನ ಪಾತ್ರೆಯಲ್ಲಿ ಹಾಕಿಕೊಳ್ಳುತ್ತಾನೆ. ಮಾರ್ಗದ ಮಧ್ಯದಲ್ಲಿ ಆಯಾಸವಾಗಿ ದಣಿವಾರಿಸಿಕೊಳ್ಳಲು ಒಂದು ಮರದ ಕೆಳಗೆ ಮಲಗುತ್ತಾನೆ. ಅದೇ ಮರದಲ್ಲಿ ಕಾಗೆ ಮತ್ತು ಹಾವು ವಾಸವಾಗಿದ್ದುವು. ಕಾಗೆಗೆ ಬ್ರಾಹ್ಮಣನ ಕಣ್ಣುಗಳನ್ನು ತಿನ್ನಬೇಕೆಂದು ಆಸೆಯಾಗಿ ಹಾವಿನ ಸಹಾಯವನ್ನು ಬೇಡುತ್ತದೆ. ಹಾವು ಬ್ರಾಹ್ಮಣನನ್ನು ಕಚ್ಚುತ್ತದೆ. ಆಗ ಬ್ರಾಹ್ಮಣನು ವಿಷವೇರಿ ಸಾಯುತ್ತಾನೆ. ಅದನ್ನು ಕಂಡು ಎಡಿಯು ಬಹಳ ದುಃಖಪಡುತ್ತದೆ. ಕಾಗೆ ಕಣ್ಣುಗಳನ್ನು ತಿನ್ನುವ ಆಸೆಯಿಂದ ಮರದಿಂದ ಹಾರುತ್ತದೆ. ಆಗ ನೀರಿನ ಪಾತ್ರೆಯನ್ನು ಕಂಡು ಚಂಚಲ ಬುದ್ಧಿಯುಳ್ಳ ಕಾಗೆಯು ಬ್ರಾಹ್ಮಣನ ಕಣ್ಣನ್ನು ಆಮೇಲೆ ತಿಂದರಾಯಿತು, ಮೊದಲು ನೀರನ್ನು ಕುಡಿಯಬೇಕೆಂದು ಪಾತ್ರೆಯ ಮೇಲೆ ಕುಳಿತು ನೀರನ್ನು ಕುಡಿಯಲು ಕತ್ತನ್ನು ಒಳಗೆ ಇಳಿಯಬಿಡುತ್ತದೆ. ಆಗ ಎಡಿಯು ತಕ್ಷಣ ತನ್ನ ಕೊಂಡಿಯಿಂದ ಕಾಗೆಯ ಕತ್ತನ್ನು ಹಿಡಿಯುತ್ತದೆ. ಕಾಗೆಯು ಇದರಿಂದ ತಪ್ಪಿಸಿಕೊಳ್ಳಲಾಗದೆ ಕೂಗಲು, ಹಾವು ತನ್ನ ಸ್ನೇಹಿತನಗೆ ಆಪತ್ತು ಬಂದಿದೆಯೆಂದು ತಿಳಿದು ನೀರಿನ ಪಾತ್ರೆಯ ಹತ್ತಿರ ಬಂದು ನೋಡಿ, ಏಡಿಯನ್ನು ಏನು ಮಾಡುತ್ತಿರುವೆಯೆಂದು ಕೇಳಿತು. ಏಡಿಯು ತನ್ನ ಒಡೆಯನನ್ನು ಕೊಂದಿರುವ ಹಾವು ವಿಷವನ್ನು ಹಿಂದಕ್ಕೆ ಪಡೆಯುವುದಾದರೆ ಮಾತ್ರ ಕಾಗೆಯನ್ನು ಬಿಡುವುದಾಗಿ ಹೇಳುತ್ತದೆ. ಹಾವು ತನ್ನ ಸ್ನೇಹಿತನನ್ನು ಉಳಿಸಿಕೊಳ್ಳಲು ವಿಷವನ್ನು ಹೀರಿಕೊಳ್ಳುತ್ತದೆ. ಬ್ರಾಹ್ಮಣನು ಕೂಡಲೇ ಜೀವ ಪಡೆಯುತ್ತಾನೆ. ಆ ಕ್ಷಣವೇ ಏಡಿಯು ಕಾಗೆಯ ಕತ್ತನ್ನು ಬಿಡುತ್ತದೆ. **ಸಾರಾಂಶ** : *'ಒಬ್ಬನೇ ಪುರುಷನು ಎಲ್ಲಿಗೂ ಹೋಗಬಾರದು. ಕಾಗೆಯ ದೆಸೆಯಿಂದ ಬ್ರಾಹ್ಮಣನನ್ನು ಹಾವು ಕಚ್ಚಲು ಏಡಿಯ ಅನುಗ್ರಹದಿಂದ ಬದುಕಿದನು.*

ರಿಪೋರ್ಟ್‌ವರ್ಷ ೧೯೨೭, ನಂ`೧೩೯ ರಿಂದ ೧೪೩ವರೆಗೆ ಸಂಡದ ೫ ಶಾಸನಗಳಿವೆ. ಅವುಗಳಲ್ಲಿ ಈ ಶಾಸನಗಳಿಲ್ಲ.

***ಹಿರೆಮಾಗನೂರು ಪಂಚತಂತ್ರ ಶಿಲ್ಪ***: ಹಿರೇಮಾಗನೂರು ಕುಮದ್ವತಿ ನದಿಯ ದಡದ ಮೇಲಿದ್ದು, ಇಲ್ಲಿ ದ್ವಿಕೂಟ ಮಾದರಿ ಕಲ್ಲೇಶ್ವರ ದೇವಾಲಯವಿದೆ. ಹೊರ ಗೋಡೆಯು ಬಿದ್ದು ಹೋಗಿದ್ದು, ಈಗ ಇಟ್ಟಿಗೆ ಮತ್ತು ಪಂಚತಂತ್ರದ ಬ್ರಾಹ್ಮಣ ಏಡಿ ಮತ್ತು ಕಾಗೆಯ ಶಿಲ್ಪವಿದೆ. (*ಹಿಂದಿನ ಪುಟದ ಅಡಿಟಿಪ್ಪಣಿ ಕತೆ ನೋಡಿ). ಶಿಲ್ಪವನ್ನು ಒಂದೆ ದೃಶ್ಯದಲ್ಲಿ ಕೆತ್ತಲಾಗಿದೆ. ಬ್ರಾಹ್ಮಣನು ಮರದ ಕೆಳಗೆ ಬಲಮಗ್ಗುಲಾಗಿ, ಬಲಗೈಯನ್ನು ತಲೆಗೆ ಆಸರೆಯಾಗಿಟ್ಟು ಕೊಂಡು ಬಲಗಾಲನ್ನು ಮಡಚಿ ಎಡಗಾಲನ್ನು ನೀಳವಾಗಿಟ್ಟು ಮಲಗಿಕೊಂಡಿದ್ದಾನೆ. ಮಲಗಿರುವ ಬ್ರಾಹ್ಮಣನ ಪಕ್ಕದಲ್ಲಿ ಒಂದು ಪಾತ್ರೆಯಿದ್ದು, ಮೇಲೆ ಪೂರ್ಣ ಏಡಿ ಇದ್ದು, ಏಡಿಯ ಕೊಂಡಿಯಲ್ಲಿ ಕಾಗೆಯ ಕುತ್ತಿಗೆಯನ್ನು ಹಿಡಿದಿದೆ. ಕಾಗೆಯ ರೆಕ್ಕೆಗಳು ಬಿಚ್ಚಿಕೊಂಡಿವೆ. ಬ್ರಾಹ್ಮಣನ ಬಲಗೈಯನ್ನು ತಲೆಗೆ ಆಸರೆಯಾಗಿಟ್ಟುಕೊಂಡು ಬಲಗಾಲನ್ನು ಮಡಚಿ ಎಡಗಾಲನ್ನು ನೀಳವಾಗಿಟ್ಟುಕೊಂಡು ಮಲಗಿದ್ದಾನೆ. ಮಲಗಿರುವ ಬ್ರಾಹ್ಮಣನ ಪಕ್ಕದಲ್ಲಿ ಒಂದು ಪಾತ್ರೆ ಇದ್ದು ಮೇಲೆ ವಾಡಿ ಇದೆ. ಏಡಿಯು ಕೊಂಡಿಯಲ್ಲಿ ಕಾಗೆಯ ಕುತ್ತಿಗೆಯನ್ನು ಹಿಡಿದಿದೆ. ಕಾಗೆಯ ರೆಕ್ಕೆಗಳು ಬಿಚ್ಚಿಕೊಂಡಿವೆ. ಬಲಗೈ ಕೆಳಗೆ ಹಾವು ಬಂದು ಏಡಿಯ ಹತ್ತಿರ ಮುಖ ಮಾಡಿರುವಂತೆ ಕೆತ್ತಲಾಗಿದೆ. ಬಲಭಾಗದಲ್ಲಿ ಬ್ರಾಹ್ಮಣನು ಎದ್ದು ಕುಳಿತಿರುವುದನ್ನು ತೋರಿಸಲಾಗಿದೆ. ಮರವನ್ನು ಅಸ್ಪಷ್ಟವಾಗಿ ತೋರಿಸಲಾಗಿದೆ.

ಸಿರಿವಾಳ ಮತ್ತು ಹುಂಚದಲ್ಲಿ ಮಾತ್ರ ಏಡಿಯನ್ನು ಶಿಲ್ಪದಲ್ಲಿ ಕಾಣುತ್ತೇವೆ. ಹಿರೇಮಾಗನೂರಿನ ಶಿಲ್ಪವು ಏಡಿಯನ್ನು ತೋರಿಸುವ ಮೂರನೆಯ ಶಿಲ್ಪವಾಗಿದೆ.

ಇಲ್ಲಿನ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ರಾಷ್ಟ್ರಕೂಟ ಎರಡನೇ ಇಂದ್ರನ ಕ್ರಿ. ಶ. ೯೧೨ರ ಶಾಸನ ಮತ್ತು ಮೂರು ಸಾಲಿನಲ್ಲಿ ಮೂರು ಗೋಸಾಸಗಳಂತೆ ಒಂಬತ್ತು ಗೋಸಾಸಕಲ್ಲುಗಳಿವೆ. ಒಂದರಲ್ಲಿ ಶಾಸನವಿದೆ. ಹಿರೇಮಾಗನೂರು ಮತ್ತು ಕುಪ್ಪೇಲೂರಿನ ಗಡಿಯಲ್ಲಿ ಎರಡು ವಾಮನ ಮುದ್ರೆ ಕಲ್ಲುಗಳಿವೆ. ಒಂದು ಕಲ್ಲಿನಲ್ಲಿ ಶಾಸನವಿದ್ದು ಇದು 'ತುಫಲಂ ಇರಬಹುದೆಂದು ಬಿ. ಆರ್. ಗೋಪಾಲ್ ಅಭಿಪ್ರಾಯ ಪಟ್ಟಿದ್ದಾರೆ.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. ಸಂಡ ಗ್ರಾಮದಲ್ಲಿ ಸಹಕರಿಸಿದ ಶ್ರೀ ಎಸ್. ಎನ್. ರಾಮರಾವ್, ವಕೀಲರಾದ ಶ್ರೀ ಶಶಿಧರ, ಶ್ರೀ ಹೆಚ್. ಸಿ. ಗುತ್ತೆಪ್ಪ. ಇವರಿಗೆ ಮತ್ತು ಹಿರೇಮಾಗನೂರಿನಲ್ಲಿ ಸಹಕರಿಸಿದ ಶ್ರೀ ವೇಮರೆಡ್ಡಿ ಅಗಸಿಬಾಗಲವರ ಇವರಿಗೆ ನನ್ನ ಕೃತಜ್ಞತೆಗಳು.

*೨. ಈ ಎರಡೂ ಶಿಲ್ಪಗಳ ಫೋಟೊ, ಸ್ಲೈಡುಗಳು ಮತ್ತು ಈ ಬಗ್ಗೆ ಪ್ರಬಂಧ ಮಂಡಿಸಲು ಸೂಕ್ತ ಮತ್ತು ಮಾರ್ಗದರ್ಶನ ನೀಡಿದ ಡಾ॥ ಸಿ. ಎಸ್. ಪಾಟೀಲ್, ಉಪನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಮೈಸೂರು ಇವರಿಗೆ ನನ್ನ ಕೃತಜ್ಞತೆಗಳು. ಶಾಸನದ ಮೂಲ ಪಾಠ ನೀಡಿದ ಡಾ। ಶ್ರೀನಿವಾಸ ರಿತ್ತಿಯವರಿಗೆ ನನ್ನ ಕೃತಜ್ಞತೆಗಳು.

*೩. ಡಾ. ಸಿ. ಎಸ್. ಪಾಟೀಲ್, **ಕರ್ನಾಟಕದ ಶಿಲ್ಪಗಳಲ್ಲಿ ಪಂಚತಂತ್ರ**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೪.

*೪. ಸಂಡ ಗ್ರಾಮದ ಪಂಚತಂತ್ರದ ಶಿಲ್ಪದ ಫೋಟೋ ಪ್ರಕಟಿಸಿದ ಶಿಕಾರಿಪುರ ತಾಲೂಕು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯ ಸಂಪಾದಕರಾದ ಡಾ. ಬಿ. ವಿ. ವಸಂತಕುಮಾರ್ ಇವರಿಗೆ ನನ್ನ ಕೃತಜ್ಞತೆಗಳು.

ಪ್ರೊ। ಕ. ವೆಂ. ರಾಜಗೋಪಾಲ*

# ಮಣ್ಣೆಯ ಅಹರ್ಪ್ರತಿ ಮಂದಿರ, ಕಪಿಲ, ಸೂರ್ಯ



### ಭಾಗ - ಒಂದು

ಬೆಂಗಳೂರಿಂದ ಮಣ್ಣೆಗೆ ಸುಮಾರು ಒಂದು+ಅರ್ಧ ಗಂಟೆಯ ಕಾರು ಪ್ರಯಾಣ. ಮಧ್ಯೆ ನೆಲಮಂಗಲದಿಂದ ತ್ಯಾಮಗೊಂಡಲು-ನಂತರ ಮಣ್ಣೆ(ಶಾಸನದಲ್ಲಿ ಮಂಣೆ ಎಂದೂ ಇದೆ.) ಅಂದರೆ ಹಳೆಯ ಮಾನ್ಯಪುರ ಆದೀತು. ಆದರೆ ಮಂಣೆ ಮತ್ತು ಮಣ್ಣೆ-ಎಂಬ ಹೆಸರುಗಳು ಸುಮಾರು ಕ್ರಿ.ಶ. ಎಂಟುನೂರು-ಕಾಲದವಾಗಿವೆ. ಇದು ಆಗ ಗಂಗರಿಗೆ ಸೇರಿದ್ದು ತುಂಬ ಪ್ರಸಿದ್ಧವಾಗಿದ್ದ ನಗರಗಳಲ್ಲಿ ಒಂದೆಂದು ತಿಳಿದು ಬರುತ್ತದೆ. ಹೊರಗಿನಿಂದ ಬಂದ ವರ್ತಕರೆ ಮುಖ್ಯವಾಗಿ ಇಲ್ಲಿ ನೆಲೆಸಿದ್ದವರೆಂದರೆ ತಪ್ಪಾಗಲಾರದು. ಇವರನ್ನು ಪರದರು -ಎನ್ನಲಾಗಿದೆ. ಏನೇನು ವ್ಯಾಪಾರ ಮಾಡುತ್ತಿದ್ದಿರಬಹುದು -ಸ್ಪಷ್ಟವಿಲ್ಲ. ಆಗ ದವಸಧಾನ್ಯಗಳು ಸಾಮಾನ್ಯವಾಗಿ ಅದಲು-ಬದಲಿ ವ್ಯಾಪಾರಕ್ಕೆ ದೊರಕುತ್ತಿದ್ದಿರಬಹುದು. ಆದರೆ ಕೋಲಾರದ ಚಿನ್ನಕ್ಕೆ ಆಗಲೂ ಪ್ರಸಿದ್ಧಿ ಇದ್ದಿರುವಂತಿದೆ. ದೇಶ ವಿದೇಶಗಳ ಸಂಬಂಧವಿದ್ದಲ್ಲಿ ಇಂಥದೇ ಇರಬಹುದು. ಅಲ್ಲದೆ ರಾಷ್ಟ್ರಕೂಟರಿಗೆ ಈ ನಗರವು ಮಾನ್ಯವಾಗಿದ್ದು, ಅವರ ನಿಜರಾಜಧಾನಿಯಾಗಿದ್ದ ಮಾನ್ಯಖೇಟ!ದ ಹಾಗೆಯೇ ಮಣ್ಣೆಯು ದಕ್ಷಿಣದ ರಾಜಧಾನಿಯಾಗಿದ್ದಿರಬಹುದು. ಇದನ್ನು ಅಂದಿನ ಗಂಗರಾಜಧಾನಿಯೆಂದು ವಿದ್ವಾಂಸರು ಹೇಳುವುದುಂಟು. ಈ ವೇಳೆಗೆ ಪ್ರಸಿದ್ಧವಾದ ಕೋಲಾರವಿರುವುದರಿಂದ ಇದನ್ನು ಹಾಗೆ ಗುರುತಿಸಬೇಕಾಗುವುದಿಲ್ಲ.

ಮಣ್ಣೆಯ ಬಳಿ ಪೂರ್ವಕ್ಕೆ ಎರಡು ದೊಡ್ಡ ಕೆರೆಗಳು ಸಿಗುತ್ತವೆ. ಇವುಗಳ(ಲ್ಲದೆ) ಗದ್ದೆಯ ಬಯಲು ಇಂದಿಗೂ ಫಲವತ್ತಾಗಿದೆ. ಭತ್ತದ ಬೆಳೆ ಮುಖ್ಯವಾಗಿದ್ದಂತಿದೆ. ಅದರ ಜೊತೆಗೆ ಕಿರಾಣಿ ಬೆಳೆಯೂ ಇದ್ದೀತು. ಇಂಥ ಬಯಲಿನ ಎರಡನೆಯ ಕೆರೆಯ ಏರಿಯ ಮೇಲೆ ಸುಪ್ರಸಿದ್ಧ ಕಪಿಲೇಶ್ವರ ಮತ್ತು ಸೋಮೇಶ್ವರ ದೇಗುಲಗಳಿವೆ. ಏರಿಯ ಕೆಳಕ್ಕೆ ಅಕ್ಕ ತಂಗಿಯರ ದೇಗುಲಗಳೂ ಇವೆ. ಕೆರೆಯು ಏರಿಯ ಮೇಲೆ ಅಂದಿನ ಒಂದು ಸೂರ್ಯ ಪ್ರತಿಮೆಯನ್ನು (ತಂದು) ನಿಲ್ಲಿಸಿದ್ದಾರೆ; ಕೆಲವು ವೀರಗಲ್ಲುಗಳಿವೆ. ಒಂದೆರಡು ಸಪ್ತಮಾತೃಕೆಯರ ಮುರುಕು (ಭಿನ್ನವಾದ) ಪ್ರತಿಮೆಗಳೂ ಇವೆ. ಕಪಿಲೇಶ್ವರ ದೇಗುಲ (ಮಂಟಪದಂತೆ) ದಲ್ಲಿ ದೇವರಿಲ್ಲ. ದೇಗುಲದ ಕಟ್ಟಡ ಮಾತ್ರ ನಿಂತಿದೆ. ಸುತ್ತಲೂ ಲಾಂಟಾನ ಬೆಳೆದಿದೆ. ಆದರೂ ಅದರ ಹಳೆಯ ಚಹರೆಯು ಅಚ್ಚುಕಟ್ಟಾಗಿದೆ; ಸದ್ಯಕ್ಕೆ ಈ ದೇಗುಲಗಳಲ್ಲಿ (ಅಕ್ಕತಂಗಿಯರ ಗುಡಿಗಳೂ ಸೇರಿ) ಶಾಸನಗಳಿಲ್ಲ.

ಮಣ್ಣೆಯ ಊರಿನಲ್ಲಿ (ಸೂರ್ಯನಿಂದಸು. ಎರಡು ಕಿಲೋ ಮಿಟರ್ ಅಂತರ) ಒಂದು ಸುಮಾರು ೫೦ ಅಡಿಗಳ ಚೌಕಟ್ಟಿನಲ್ಲಿ ಬಹುದೊಡ್ಡ ಕಲ್ಲಿನ ಸ್ತಂಭಗಳು ಮತ್ತು ತೊಲೆಗಳಿಂದ ನಿರ್ಮಿಸಿದ (ನಿಲ್ಲಿಸಿದ) ಒಂದು ಜೈನ ಬಸತಿ ಅಥವಾ ವಿಹಾರವಿದೆ. ಈಗ ಊರು ಚಿಕ್ಕದು. ದೊಡ್ಡ ಮನೆಗಳೇನೂ ಇದ್ದಂತಿಲ್ಲ. ಊರಿಗೆ ಸರಿಯಾಗಿ ಹಾದಿಗಳೂ ಇಲ್ಲ. ಇಂಥ ಇತಿಹಾಸ ಮತ್ತು ಸ್ಥಿತಿಗತಿ ಈ 'ಮಂಣೆಗೆ' ಇದೆ.

ಕೆರೆಯ ಏರಿಯ ಮೇಲೆ ಏಳೆಂಟು ಅಡಿ ಎತ್ತರಕ್ಕೇರಿಸಿದ ಕಲ್ಲಿನ ಗೋಡೆಗಳಿವೆ. ಇದರ ಚಚ್ಚೌಕದ ಆಕಾರ ಮತ್ತು ಹಿಂದಕ್ಕೆ ಮಾತ್ರ ಒಂದು ೫ ಅಡಿಗಳ ಚೌಕಕ್ಕೆ ಕೋಣೆ. ಅದಕ್ಕೆ ಅಂಟಿದಂತೆ ಮುಖ್ಯವಾಗಿ ಒಂದು 'ನವರಂಗ'ವಿದೆ. ದ್ವಾರವು ಪೂರ್ವಕ್ಕೆ ತೆರೆದಿದ್ದು ಹತ್ತು ಅಡಿಗಳಷ್ಟು ಎತ್ತರವಿರಬಹುದು. ಬಾಗಿಲ ಮೇಲಿನ ಭಾಗವೂ ಸೇರಿದಂತೆ ಮೂರು ಅಡಿ ಅಗಲದ ಹೊಸ್ತಿಲ ಪಕ್ಕಗಳಲ್ಲಿ ನಾಲ್ಕಡಿಯ (ಎರಡು) ದ್ವಾರಪಾಲಕರರಿದ್ದಾರೆ. ಬಾಗಿಲು ನವರಂಗಕ್ಕೆ ನೇರ ತೆರೆದುಕೊಳ್ಳುತ್ತಿದೆ. ಬಾಗಿಲು ಈಗ ಇಲ್ಲ. ಇರುವುದು ಬರಿಯ ಬಾಗಿಲುವಾಡ ಮಾತ್ರ. ರಾಷ್ಟ್ರಕೂಟ ಮೂರನೇ ಗೋವಿಂದನ ಕಾಲದ ಗಂಗರ ಶಾಸನಗಳು (ಸಂಸ್ಕೃತ-ಕನ್ನಡ) ತಾಮ್ರಪಟಗಳು ಇಲ್ಲಿ ದೊರಕುತ್ತಿವೆ. ಅಂಥವು ಮೂರು ಈ ಊರಿನ ಸೂರ್ಯನ (-ರ) ಬಗ್ಗೆ ಬೆಳಕು ಚೆಲ್ಲುತ್ತಿವೆ. ಈತನದನ್ನು **ಅಹರ್ಪ್ರತಿ ಮಂದಿರ** ಎಂದು ಶಾಸನಗಳು ಹೇಳುತ್ತಿವೆ.

*ನೆಲಮಂಗಲ ತಾಲೂಕಿನ ೩ ತಾಮ್ರಪಟಗಳು ಮಣ್ಣೆ: ೧ನೇ ಶಾಸನ: ಶಾಸನಸಂಖ್ಯೆ ೯೦: ಪೂರ್ವ ಹಳೆಗನ್ನಡದಕ್ಷರ-೭ ಪತ್ರಗಳು ಆನೆ ಮುದ್ರೆ.*

*ಎಂ.ಐ.ಜಿ. ೪೧, ೮೦ ಅಡಿರಸ್ತೆ, ಕೆಂಗೇರಿ ಉಪನಗರ, ೨ನೇ ಹಂತ, ಬೆಂಗಳೂರು - ೫೬೦ ೦೬೦.

-೧ ಸ್ವಸ್ತಿ ಜಿತಂ ಭಗವತಾಗತ ಘನಗಗನಾಭೇನ ಪದ್ಮನಾಭೇನ ಶ್ರೀಮಜ್ಜಾಹ್ನವೇಯ ಕುಲಾಮಲ

ಎಂದು ಪ್ರಾರಂಭವಾಗುತ್ತದೆ. ಕೊಂಗುಣಿವರ್ಮನಿಂದ ಮೊದಲಾಗುವ ವಂಶವೃಕ್ಷವು ೧೧೧ಂ ಪಂಕ್ತಿಗಳನ್ನು ದಾಟುವಲ್ಲಿ

೧೧೧ಂ ಯತ್ಸ್ವಕೀರ್ತ್ಯಾ ಭಾಂ ಯೋನೇ ಕಾಂ ವಸತಿಂ ಪ್ರಭುಃ ಸಾಮಾನ್ಯ ನಗರೇ ಶ್ರೀ ಮಾ[ನ್] ವಿಜಯೋಕಾರಯ

೧೧೧೧ ಚ್ಚು ಭಂ ಜಿನೇನ್ದ್ರ ಭವನಂ ತುಂಗಂ ನಿರ್ಮ್ಮಳಂ ಸ್ವಮಹಸ್ಸ ಮಂತಸ್ಯಚ ಪ್ರಸಾದಿತಾ ಶೇಷ ಸಾ

೧೧೧೨ ಮನ್ತ ಚಕ್ರಸ್ಯ. ಶ್ರೀಮಾರ ಸಿಂಹಸ್ಯಾನುಜ್ಞಯಾ ಶ್ರೀವಿಜಯೋ ಮಹಾನುಭಾವಃ ಕಿಱುವೆಕ್ಕೂರ ಗ್ರಾ

೧೧೧೩ ಮ ಮಾದಾಯ ಮಾನ್ಯಪುರ ವಿನಿರ್ಮ್ಮಿ ತಾಯ ಭಗವದರ್ಹ ದಾಯತನಾಯ ಅದಾದಿತಿತಸ್ಯಚ

೧೧೧೪ ಗ್ರಾಮಸ್ಯ ಪೂರ್ವ್ವಸ್ಯಾನ್ದಿಶಿ ಪೂಲಿ ತಟಾಕಂ

...........................................

೧೨೩ ತಚ್ಛಿ] ಷ್ಯಶ್ಚ ಪ್ರಭಾಚನ್ದ್ರಃ ತಸ್ಯೇಯಂ ವಪತಿಃ ಕ್ರತೋಃ ಪೆರ್ಜ್ಜಡಿಯ ಕೆಱೆಯ ಕೆಱಗೆ ಮೂಗಣ್ಣು.........

೧೨೪ ಗಂ ಕಜನಿಮತ್ತಂ..........

೧೨೭ ಇದಱ ಶಕವರ್ಷಂ ಎಟ್ನೊಱುಪಾಪತ್ತೊಮ್ಬತ್ತು ವರ್ಷಮುಂ ಮೂಱುತಿಂಗಳಂ ಅಷಾಡ ಶುಕ್ಲ ಪ

೧೨೮ ಕ್ಷದಾ ಪೞಮಿಯುಂ ಉತ್ತರಾಭಾದ್ರ ಪತೆಯುಂ ಸೋಮವಾರ ಮುಂ ಸಾಶವನಿರ್ಗತ॥ ಅಸ್ಯದಾನಸ್ಯಸಾಕ್ಷಿ

- ಹೀಗೆ ಇದು ಶ್ರೀ ವಿಜಯನು ಕಟ್ಟಿಸಿದ ಜಿನೇನ್ದ್ರ ಭವನಂ'. ಇದರ ಕಾಲ ಶಕವರ್ಷ ೭೧೯ ಅಂದರೆ ಕ್ರಿ. ಶ. ೭೯೭ ಆಗುತ್ತದೆಯಷ್ಟೆ. ಈ ಶಾಸನವನ್ನು 'ಲಿಖಿತಂ' ಮಾಡಿದವನು ಅದೇ ೧೩೬ ಸರ್ವ್ವಕಲಾಧಾರಭೂತ ಚಿತ್ರಕಲಾಭಿಜ್ಞೇಯ ವಿಶ್ವಕರ್ಮಾ ಚಾರ್ಯೇ ೧೩೭ ಣೇದಂ ಶಾಸನಂ ಲಿಖಿತಂ.....

ಇಲ್ಲಿ ಗಮನಿಸಬೇಕಾದ ಮುಖ್ಯಾಂಶಗಳಿವೆ.

i. ಸರ್ವ್ವ ಕಲಾಧಾರ ಭೂತವಾದ... ಚಿತ್ರಕಲೆಯನ್ನು ಅರಿತವನೂ ಆಗಿದ್ದಾನೆ.
ii. ದೇಗುಲಗಳನ್ನೂ ಕಟ್ಟಬಲ್ಲವನು
iii. ಚಿತ್ರ ಕಲೆಯಲ್ಲಿ ಬೇರೆಯ ಕಲೆಗಳನ್ನು ರೂಪಿಸಬಲ್ಲವನು.

ಇಂಥ ಕಲಾವಿದನು ತಾಮ್ರಪಟವನ್ನು (ಗಳನ್ನು) ರಚಿಸಿದವನು ಮತ್ತೆ ಮುಂದಿನ ಎರಡು ಪಟಗಳನ್ನು ಈತನೇ ಬರೆದಿರುವಂತಿದೆ. ಏಕೆಂದರೆ ಮುಖ್ಯವಾಗಿ ಈ ಹಳೆಗನ್ನಡ ಲಿಪಿಯು ಸಂಸ್ಕೃತ ಭೂಯಿಷ್ಠವಾದ ಶೈಲಿಯಲ್ಲಿ ಸಾತತ್ಯ ಪಡೆದಂತಿದೆ.

*ಶಾಸನ ೨ (ತಾಮ್ರ ಪಟ- ನೆಲಮಂಗಲ ತಾಲ್ಲೂಕು)*

ಶಾಸನಸಂಖ್ಯೆ ೬೧

*ಪೂರ್ವದ ಹಳಗನ್ನಡ, ೪ ಪತ್ರಗಳು; ಶಿವ ವಿಗ್ರಹದ ಮುದ್ರೆ ೫ನೇ ಪತ್ರದ ಮುಂಭಾಗದಲ್ಲಿ:*

೬೫ ........... ಶ್ರೀ ವಿಜಯ ರಾಜೇನ ನಿರ್ಮಾಪಿತಾ

೬೬ ಯ ಜಿನ ಭವನಾಯ ಮಾನ್ಯಪುರೀ ಪಶ್ಚಿಮಾದಿಗಂಗನಾ ಲಲಾಮ ಭೂತಾಯ ಚತುರ್ವ್ವಿಂಶ ತ್ಯುತ್ತ

೬೭ ರೇಷು ಸಪ್ತ ಶತೇಷು ಶಕವರ್ಷೇಷು ಸಮತೀತೇಷ್ವಾತ್ಮನಃ ಪ್ರವರ್ಧಮಾನ ವಿಜಯಸಂವತ್ಸರೇ ಮಾನ್ಯಪುರ

೬೮ ಮಧಿವಸತಿ ವಿಜಯ ಸ್ಕನ್ಧಾವಾರೇ ಸೋಮಗ್ರಹಣೇ ಪುಷ್ಯ ನಕ್ಷತ್ರೇಶು ಲಗ್ನೇ ವಾರವಿಲಾಸಿ

೬೯ ನೀ ವಿರಚಿತ ನೃತ್ಯ ಗೀತ ಬಾದ್ಯ ಬಲಿ ವಿಲೇಪನ ದೇವ ಪೂಜಾ ನವ ಕರ್ಮ್ಮಾ ಪ್ರವರ್ತ್ಥನಾರ್ಥಂ ಎದೆದಿಙ್ಞೆ ವಿಷ

೭೦ ಯ ಮಧ್ಯವತ್ತಿ ಪೆರ್ವಡಿಯುನ್ನಾಮ ಗ್ರಾಮಂ.......

೭೧-೭೨ ........... ಕಿಱುವಡಿಯೂ ರ ಪಾಲನೂರ ಪೇ ರೊಟ್ಟಿ

೭೩ ಮಾ ನ್ತರಂ ಸಮಾಪ್ತಃ।

i. ಇದರ ಕಾಲವನ್ನು ಶಕವರ್ಷ ೭೨೪ಕ್ರಿ. ಶ. ೮೦೨- ಎಂದು ಗುರುತಿಸಿದೆ.
ii. ಶ್ರೀ ವಿಜಯನಿಂದ ನಿರ್ಮಿತವಾದ ಈ ಜಿನ ಭವನ ಗಮನಾರ್ಹವಾಗಿದೆ.

**ಶಾಸನ ೩**

ಇದೇ ಸೂರ್ಯ ದೇವನನ್ನು ಕುರಿತದ್ದು:

*೧೯೮೫ Copper plate Inscriptions from Karnataka Recent Discoveries (Ed). Dr. M. S. N. Rao and Dr. K. V. Ramesh*

**ಶಾಸನ ೪**

ಇದರ ಒಕ್ಕಣೆಯು ಮೇಲಿನ ಎರಡು ಶಾಸನಗಳ ಮಧ್ಯಕ್ಕೆ ಸೇರುವಂಥದು. ಅಂದರೆ ಯುವರಾಜ ಮಾರಸಿಂಹನಿಗೆ ಸೇರಿದುದು. ಕಾಲ: ಶಕ ೭೨೩=ಕ್ರಿ.ಶ. ೮೦೧. ಇದರಲ್ಲಿ ೭ ಪತ್ರಗಳಿವೆ. ಇಲ್ಲಿ ಮಣ್ಣೆ ವಿಷಯದ ವಾವತ್ತೂರು ಗ್ರಾಮವನ್ನು ಮಾನ್ಯಪುರದಲ್ಲಿ ಕಟ್ಟಿದ **ಅಹರ್ಪ್ಪತಿ ದೇಗುಲಕ್ಕೆ** ದತ್ತಿ ಬಿಟ್ಟುದಾಗಿದೆ. ಇದನ್ನು ಮಾನ್ಯಪುರದ ವಣಿಜವೃಂದವು ಸಾಧ್ಯ ಮಾಡಿದೆ. 'ವಾರವಿಲಾಸಿನೀ ವಿರಚಿತ ಗೀತ - ವಾದ್ಯ - ಬಲಿ - ವಿಲೇಪನ-ದೇವಪೂಜಾ ನವಕಮಾರ್ಥಂ' - ಅನುಕೂಲಗಳನ್ನು ಕಲ್ಪಿಸಲಾಗಿದೆ.

ಉಳಿದ ಮಣ್ಣೆ 'ಪಟಗಳಂತೆ' ಇದರಲ್ಲಿಯೂ ಗಂಗವಂಶದ ಒಕ್ಕಣೆ ಕ್ರಮಬದ್ಧವಾಗಿ ದೊರಕುತ್ತದೆ.

*ಪದ್ಯಗಳು ೧೩, ೧೪ ಮತ್ತು ೧೫ ಕ್ರಮವಾಗಿ ವಿಷ್ಣುಕುಂಡಿನಿಯ ಭೂಪತಿ ಮಾಧವ ಭಟಾರನ ಮಗನಾದ ಇಂದ್ರ ಭಟಾರನ ಕಾಲದ ಅದೇ ಪರಂಪರೆಯ ದೊರೆಯಾದ ಶ್ರೀಧರ* ***ಭೂಪತಿಗೆ ಬಾಲಾದಿತ್ಯ ಎಂಬ ಮಗನು ಹುಟ್ಟಿದಾಗ ಈ*** *ಸೂರ್ಯದೇಗುಲವು ರಚಿತವಾಯಿತೆಂಬುದು ವಿದಿತವಾಗುತ್ತದೆ.*

ಈ ಹಿನ್ನೆಲೆಯಲ್ಲಿ ಮಾನ್ಯಪುರದ ವರ್ತಕರು ಸೂರ್ಯ ದೇಗುಲವನ್ನು ಕಟ್ಟಿಸಿದರೆಂಬುದು ಬಾಲಾದಿತ್ಯನು ಯುವರಾಜ



ಮಾರಸಿಂಹನನ್ನು ದೇಗುಲದಲ್ಲಿ ಪೂಜಾ ಸೇವೆ ಜರುಗುವಂತೆ ಅನುಕೂಲ ಮಾಡಿಕೊಡುವಂತೆ ಬೇಡಿಕೊಂಡಂತೆ ತಿಳಿದುಬರುತ್ತದೆ. (ಶಾಸನದಲ್ಲಿ ೧೨೬ ರಿಂದ ೧೪೯ರವರೆಗೆ) ಕಾಲವನ್ನು

೧೩೦ ಪ್ರವರ್ಧಮಾನ ವಿಜಯ ಸಂವತ್ಸರೇಷು
ಪಂಚನುಪಮತಿತೇಷು ಕಾರ್ತಿಕಾ ಮಾ
೧೩೧ ಸ ಶುಕ್ಲಪಕ್ಷೇ ಸೋಮವಾರೇ ಪಂಚಮ್ಯಾಂ ರೋಹಿಣೀ
ನಕ್ಷತ್ರೇ ಸಂಕ್ರಾಂತ್ಯಂ ಮಾನ್ಯವಿಷಯೇ ..........
೧೪೫ ಸರ್ವ್ವ ಕಲಾಧಾರ ಭೂತ **ಚಿತ್ರಕಲಾಭಿಜ್ಞೇನ**
ವಿಶ್ವಕರ್ಮ್ಮಾಚಾರ್ಯೇನ ವದಂ ಶಾಸನ
೧೪೬ ಲಿಖಿತಂ॥.........

ಇಲ್ಲಿಯ ಒಪ್ಪವನ್ನು ಗಮನಿಸಬೇಕು. ವಿಶ್ವಕರ್ಮ್ಮಾಚಾರ್ಯನು ಸಕಲ ಕಲಾವಿದನೂ ಚಿತ್ರಕಲಾ ಪ್ರವೀಣನೂ, ಎಂದಿರುವುದನ್ನು ಈ ಮೂರು ಶಾಸನಗಳು ಸಮೀಪಕಾಲದವಾಗಿರುವುದರಿಂದ ಈ ಆಚಾರ್ಯನು ಜಿನಮಂದಿರದ ಶಿಲ್ಪಿಯೂ ಆಗಿರುವುದು ಸಂಭವನೀಯವಾಗಿದೆ. ಅಹರ್ಪ್ಪತಿ=ಸೂರ್ಯ ದೇಗುಲವಲ್ಲದೆ ಮಿಥುನ ಶಿಲ್ಪ ಹಾಗೂ ಸೂರ್ಯನನ್ನು ಕೆತ್ತಿದ ಶಿಲ್ಪಿ=ಆಚಾರ್ಯನೂ ಅಗಿರುವಂತಿದೆ.

## ಭಾಗ - ಎರಡು

**ಅಹರ್ಪ್ಪತಿ ಮಂದಿರ ಅಥವಾ ಸೂರ್ಯ ದೇಗುಲ :-** ಈ ಮಂದಿರವನ್ನು ಮಣ್ಣಿ ಅವಶೇಷಗಳಲ್ಲಿ ಗುರುತಿಸಬೇಕಾಗಿದೆ ಯಷ್ಟೇ. ಸಾಮಾನ್ಯವಾಗಿ ಕರೆಯುತ್ತಿರುವ ಕಪಿಲೇಶ್ವರ ದೇವಾಲಯವು ಅದರಲ್ಲಿ ಶಾಸನಗಳಿಲ್ಲದಿದ್ದರೂ, ಮೇಲಿನ ವಿವರಗಳಿಂದ ಅಂದರೆ ರಚನೆಯಲ್ಲಿರುವ ದ್ವಾರಪಾಲಕರು ಮತ್ತು ನವರಂಗವಲ್ಲದೆ ಗರ್ಭಗುಡಿಗೆ ಅಂತರಾಳವಿಲ್ಲದಿರುವುದೂ ಮಿಥುನ ಶಿಲ್ಪವಿರುವುದೂ (ಹೊರಕಿಂಡಿಯಂತೆ ಗೋಡೆಗೆ ಆಗ್ನೇಯಕ್ಕೆ ಜೋಡಿಸಿರುವುದು) ಅಧಾರವಾಗುತ್ತವೆ. ಇತ್ಯಾದಿ.

೧. ಈ ದೇಗುಲವು ನೆಲಮಟ್ಟದಿಂದ ಸುಮಾರು ೧೫ ಅಡಿಗಳ ಎತ್ತರದಲ್ಲಿ ನಿರ್ಮಿತವಾಗಿದೆ.
೨. ನವರಂಗವು ಸುಮಾರು ೨೪ ಚದುರಡಿಗಳಲ್ಲಿದ್ದು ಮಧ್ಯೆ 'ರಂಗ'ವಿದೆ ಇದಕ್ಕೆ ರಂಗಪೀಠವಿರುವುದು (ಕಮಲದ ಭೂಮಿಕೆ) ವಿಶೇಷ ಅಂದರೆ ನೃತ್ಯಕ್ಕಾಗಿ - ಬಳಕೆಯಾಗುವ ಚಾಲುಕ್ಯ ಮತ್ತು ಹೊಯ್ಸಳ ದೇಗುಲಗಳನ್ನು ನೆನಪಿಸುತ್ತದೆ.
೩. ಈ ನವರಂಗಕ್ಕೆ ಹತ್ತಿದಂತೆ ಹಿದಕ್ಕೆ ಗರ್ಭಗುಡಿಯೆಂಬಂತೆ ಒಂದು ಚೌಕಟ್ಟು-ಸು. ೬ ಅಡಿಗಳ ರಚನೆಯಾಗಿದೆ. ಅಲ್ಲದೆ ಇದರ ಹಿಂದಕ್ಕೆ ಕೆರೆಯಕಡೆಗೆ ಒಂದು ಬಾಗಿಲಿನಂತೆ ತೆರವಾಗಿದೆ.
೪. ಈ ನವರಂಗದ ದಕ್ಷಿಣೋತ್ತರ ಹೊರ ಮೈಯಲ್ಲಿ ರಂಗದ ನಿರ್ಮಾಣಾಂತರದಲ್ಲಿನ ಕಿಟಕಿ (ಕಕ್ಷ!) ಯಂಥ ಗವಾಕ್ಷಗಳಲ್ಲಿ ನೃತ್ಯದಲ್ಲಿ ತೊಡಗಿರುವುದಲ್ಲದೆ ಮಿಥುನ ಪ್ರೇರಣೆಯ ರಚನೆಗಳು ಕಲಾತ್ಮಕವಾಗಿ ಜೋಡಣೆಯಾಗಿವೆ. ಇವುಗಳನ್ನು ಪ್ರದಕ್ಷಿಣಾ ಪಥದಲ್ಲಿ ಬರುವಾಗ ಕಾಣುತ್ತೇವೆ. ರಂಗ ಪೀಠದ ಕಂಭಗಳು ತೀರ ಸರಳ ರೂಪಗಳಾಗಿವೆ. ಆದರೆ ಭುವನೇಶ್ವರಿಯಲ್ಲಿ ಕೆತ್ತನೆಯ ಅಥವಾ ಶಿಲ್ಪಗಳಿಲ್ಲವಾದ ಕಾರಣ ಚಿತ್ರಗಳಿದ್ದಿರಬೇಕೆಂದು (ವಿಶ್ವಕರ್ಮಾಚಾರ್ಯನ ಬಿರುದಿನಿಂದ) ಊಹಿಸಲು ಅವಕಾಶವಿದೆ.
೫. ಗರ್ಭಗುಡಿ (?)ಯಲ್ಲಿ ಈಗ ಒಂದು ಭಾಗ (ಪೀಠ) ಮಾತ್ರ ಬಿದ್ದಿವೆ. ಸೂರ್ಯ ಪ್ರತಿಮೆಯಿಲ್ಲ.
೬. ದೇಗುಲದ ಪ್ರವೇಶದ್ವಾರದಲ್ಲಿ ಪದ್ಮಗಳ ಅಲಂಕಾರವಿದ್ದು ಕೆಳಗಿಂದ ಮೇಲಿನ ಕಡೆಗೆ ಜೋಡಿಸಿರುವಂತೆ ಕಂಡು ಬರುತ್ತದೆ. ದ್ವಾರದ ಎರಡೂ ಬದಿಯಲ್ಲಿ ಪದ್ಮನಿಧಿ ಮತ್ತು

*ಶಂಖನಿಧಿಗಳು* ಗದಾಧಾರಿಗಳಾಗಿ ನಿಂತಿದ್ದಾರೆ - ಈ ಗದೆಗಳಿಗೆ ಸರ್ಪದ ಜೋಡಣೆಯಿರುವುದು ಒಂದು ವಿಶೇಷವೇ ಆಗಿದೆ. (ಇಂಥ ಸಂಬಂಧವನ್ನು ಶಾಕ್ತ ಎನ್ನುವುದುರೂಢಿ) ಅಲ್ಲದೆ ಇದು ಶೃಂಗೇರಿಯ ವಿದ್ಯಾಶಂಕರ ದೇಗುಲದ ದ್ವಾರಪಾಲಕರ ನೆನಪು ತರುತ್ತದೆ.

೬. ಅಂತರಾಳವಿಲ್ಲದೆ ಕೇವಲ ನವರಂಗವೊಂದು ಮುಖಮಂಟಪವಾಗಿ ಪೂರ್ವ ಪಶ್ಚಿಮದಿಕ್ಕುಗಳಿಗೆ ತೆರೆದ ಬಾಗಿಲುವಾಡಗಳಿರುವುದರಿಂದ ಸೂರ್ಯನ ಉದಯಾಸ್ತಗಳಲ್ಲಿ ನೇರ ಮತ್ತು ಸರಿಯಾದ ಗುರುತುಗಳನ್ನು ಅರಿಯಲು ಅನುಕೂಲ ಮಾಡಿದಂತಿದೆ.

೭. ಒಟ್ಟು ಸುಮಾರು ೧೫ ಅಡಿಗಳ ಎತ್ತರವನ್ನು ಕೆರೆಯ ಏರಿಯ ಮೇಲುಗಡೆಗೂ ಹೆಚ್ಚಿಸಿರುವಲ್ಲಿ ಮೆಟ್ಟಲುಗಳ ಎರಡು ಹಂತವನ್ನು ಮಾಡಿರುವುದರಿಂದ ಪ್ರದಕ್ಷಿಣಾ ಪಥವನ್ನು ಖಚಿತವಾಗಿ ಗುರುತಿಸುವಲ್ಲಿ ಅನುಕೂಲವಾಗಿದೆ.

೮. ಇಂಥ ರಚನೆಗಳನ್ನು ಸೂರ್ಯದೇಗುಲಗಳಿಗೆ ಸಂಬಂಧಿಸಿದಂತೆ ಭೋಗಮಂದಿರಗಳೆಂದೂ ಕೋನಾರ್ಕ್ ಮಂದಿರದಲ್ಲಿ ಕೂಡ ಕರೆಯಲಾಗುತ್ತಿದೆ. (ಶಾಸನದಲ್ಲಿ ಮಂದಿರ ಎಂಬ ಪದವನ್ನು ಬಳಸಿರುವುದನ್ನು ಇಲ್ಲಿ ನೆನೆಯಬಹುದು) ಇತ್ತೀಚಿಗೆ ಐಹೊಳೆಯ ಲಾಡ್‌ಖಾನ್, ದುರ್ಗಿಗುಡಿ ಮತ್ತು ಪರಿಸರಗಳನ್ನು ಗಮನಿಸಿದಾಗ ಈ ಬಗೆಯ ಅರಿವಿಗೆ ಆಧಾರ ದೊರಕಿದಂತಾಗಿದೆ. ಅವುಗಳಲ್ಲಿನ ಮೇಗುಟಿಗಳು (ಶೃಂಗೇರಿಯಲ್ಲಿ ಸಹ) ಸೂರ್ಯನ ಅರಾಧನೆಗೆ ಮೀಸಲಾಗಿದ್ದಂತೆ ಕಂಡು ಬರುತ್ತದೆಯಲ್ಲದೆ ನವರಂಗ ಸೇರಿದಂತೆ ಭೋಗಮಂದಿರಗಳಾಗಿದ್ದಿರಬೇಕೆಂಬ ಊಹೆಗೆ ಸದವಕಾಶವಿದೆ. ಆದುದರಿಂದ ಕಪಿಲೇಶ್ವರ ದೇಗುಲವು (ಮಂದಿರ) ಮೊದಲಿಗೆ ಸೂರ್ಯದೇಗುಲವೇ ಆಗಿದ್ದಿರ ಬೇಕೆಂಬುದಕ್ಕೆ ಸಂಶಯವಿರಬೇಕಿಲ್ಲ.

## ಭಾಗ - ಮೂರು

### *'ಕಪಿಲ' ಎಂಬುದರ ವಿಶೇಷ ಟಿಪ್ಪಣಿಗಳು*

ವರಾಹ ಮಿಹಿರನು ತನ್ನ ಬೃಹತ್ ಸಂಹಿತೆಯಲ್ಲಿ 'ಕಪಿಲ' ನನ್ನು ನೆನೆಯುತ್ತಾನೆ ಈತನು 'ಸಾಂಖ್ಯಸಿದ್ಧಾಂತಿ' ಎಂದು ನೆನೆಯುತ್ತಾನೆಯಲ್ಲದೆ ದೇಗುಲ ನಿರ್ಮಾಣ ಮತ್ತು ಚಿತ್ರಕಲೆಯ ವಿಷಯದಲ್ಲಿ 'ನಗ್ನಜಿತ್' ನನ್ನೂ ಹೆಸರಿಸುತ್ತಾನೆ. ಇದೇ ನಗ್ನಜಿತ್ ನೇಪಾಳದ ರಾಜನಾಗಿದ್ದುದಲ್ಲದೆ ಬೌದ್ಧಮತೀಯನೂ ಅಂದಿನ ಚಿತ್ರ ಶಿಲ್ಪ ಕಲೆಗಳಿಗೆ ಅಧಿಕೃತವಾದ ವ್ಯಾಖ್ಯಾನ ಪೂರ್ವಕ ಗ್ರಂಥರಚನೆ ಯನ್ನು ಮಾಡಿದವನೂ ಆಗಿದ್ದಾನೆ. ಆದುದರಿಂದ ಮಣ್ಣೆಯ ವಿಶ್ವಕರ್ಮ್ಮಾಚಾರ್ಯನ ಒಕ್ಕಣೆಗೆ ಸೇರುವ



ಗುಣವಾಚಕಗಳು ಸಾರ್ಥಕವೂ, ಹಳೆಯ ಸಂಪ್ರದಾಯವನ್ನು ಕುರಿತವೂ ಆಗಿದ್ದು ವರಾಹಮಿಹಿರನು ಪ್ರತಿಪಾದಿಸುವ ಸೂರ್ಯ ಸಿದ್ಧಾಂತವು ಕೂಡಿದಂತೆ ಬೃಹತ್‌ಜಾತಕ (ಭಾಸ್ಕರಾಚಾರ್ಯಕೃತ)ದ ಸಂಪ್ರದಾಯಕ್ಕೆ ಕಪಿಲನನ್ನೂ ವಿಶ್ವಕರ್ಮ್ಮಾಚಾರ್ಯನನ್ನೂ ಸೇರಿಸುವಂತಾಗಿದೆ.

ಆದುದರಿಂದ ಕಪಿಲೇಶ್ವರ ಮಂದಿರವು ರಚನೆಯ ರೀತಿ ನೀತಿಯಿಂದ ಕಾಲಗಣನೆಯ ಪ್ರಯೋಗಶಾಲೆಯೂ ಆಗಿದ್ದಂತೆ ಭೋಗದ ಗೋಷ್ಠಿಗಳಿಗೆ ಅನುಕೂಲವಾಗಿದ್ದಿತೆಂದರೆ ತಪ್ಪಾಗಲಾರದು ('ಪಂಪ ಕೂಡ' ಚಾಗದ ಭೋಗದಕ್ಕರದ ಗೇಯದ ಗೊಟ್ಟಿಗಳನ್ನು ತನ್ನ ವಿಕ್ರಮಾರ್ಜುನ ವಿಜಯಂ ಕಾವ್ಯದಲ್ಲಿ ಹೇಳಿರುವುದನ್ನು ಸ್ಮರಿಸಬಹುದಾಗಿದೆ). ಇದಕ್ಕೆಲ್ಲಾ ಬನವಾಸಿ ದೇಶವು ಒಂದು ಅವಕಾಶವಾಗಿದ್ದಿತೆಂಬುದನ್ನು ನೆನೆಯ ಬೇಕಾಗುತ್ತದೆ - ಇವು ಬೌದ್ಧಯುಗದಲ್ಲಿ ಸಾಧುವಾಗಿದ್ದುವೆಂಬುದಕ್ಕೆ ಇತಿಹಾಸದಲ್ಲಿ ವಿವರಗಳಿವೆ. ಹತ್ತನೆಯ ಶತಮಾನದ ಮಧ್ಯಕಾಲದಲ್ಲಿದ್ದವನಾಗಿ ಪಂಪನು ತನ್ನ ಕಾವ್ಯದ ಪ್ರಾರಂಭದಲ್ಲಿ ಸೂರ್ಯನ ಪ್ರಾಥನೆಯನ್ನು ತನ್ನ ಒಡೆಯನ ನೆಪದಲ್ಲಿ ಪ್ರಾರ್ಥಿಸಿರುವುದಂತೂ ಅರ್ಥಪೂರ್ಣವಾಗಿದೆ.

**ಮಣ್ಣೆಯ ಸೂರ್ಯಪ್ರತಿಮೆ**

ಮಣ್ಣೆಯ ಕೆರೆಯ ಏರಿಯ ಮೇಲೆ ಇಂದಿಗೂ ನಿಂತಿದೆ. ಇದರ ಸ್ವರೂಪದಲ್ಲಿ ಬೋಧಿಸತ್ವನ ಪ್ರಭಾವಳಿಯಿಂದ ಕೂಡಿ ಇನ್ನೂ ಅರಳದಿರುವ ಕಮಲಗಳಿಂದ ಮತ್ತು ಹಲವು ಮೂಲೆಗಳನ್ನು (ವಕ್ಷಸ್ಥಲದಲ್ಲಿ) ಧರಿಸಿದಂತೆ ಭುಜಕೀರ್ತಿಯಿಂದ ಅಲಂಕೃತ ವಾಗಿದೆ, ಆಭರಣಗಳಲ್ಲಿ ಸೌಂದರ್ಯವಿರುವಂತೆ! ಕುದುರೆಗಳು (ಸಪ್ತಾಶ್ವಗಳು) ಪಾದ ಪೀಠದಲ್ಲಿರಬೇಕು! ಈ ಕಾಲದ ಸೂರ್ಯ ಪ್ರತಿಮೆಗಳಿಗೆ ಪಾದಪೀಠದಲ್ಲಿ ಸಪ್ತಾಶ್ವಗಳನ್ನು ಅರುಣಸಮೇತ ಸೇರಿಸಲಾಗುತ್ತಿತ್ತು. ಅಂದರೆ ಸೂರ್ಯನ ಪ್ರತಿಮೆಯನ್ನು ಪೀಠದಿಂದ ಬೇರ್ಪಡಿಸಲು ಅವಕಾಶವಿದ್ದಂತೆ ಸದ್ಯದ ಸೂರ್ಯ ಪ್ರತಿಮೆ ಮಾತ್ರ ಕೆರೆಯ ಏರಿಯ ಮೇಲೆ ನಿಲ್ಲಿಸಲಾಗಿದೆ - ಪೀಠ ಭಾಗವನ್ನು ಗರ್ಭಗುಡಿಯಲ್ಲಿಯೂ ಕಾದಿರಿಸಿಲ್ಲ. ಅಲ್ಲಿ ಕೇವಲ ಅದರ ನಾಳವನ್ನು ಮಾತ್ರ ಕಾಣುತ್ತೇವೆ. ಅಂದರೆ ಪೀಠಭಾಗವನ್ನು ಬೇರೆಡೆಗೆ ಸಾಗಿಸಿರುವಂತಿದೆ (ಇಂತಹ ಪೀಠಗಳನ್ನು ಡಂಬಳದ ದೊಡ್ಡಬಸವಣ್ಣನ ಗುಡಿ ಹಾಗೂ ಗದಗಿನ ಹಳೆಯ ಶೈವ ದೇವಸ್ಥಾನದಲ್ಲಿ ಕಾಣಬಹುದಾಗಿದೆ. ಹಂಪಿಯಲ್ಲಿ ಇಂಥ ಸಪ್ತಾಶ್ವಗಳಿಂದ ಕೂಡಿದ ಪೀಠದಲ್ಲಿ ಮತ್ತೊಂದು ಪ್ರತಿಮೆಯನ್ನೇ ಕೂಡಿಸಲಾಗಿದೆ.)

ಈ ಸೂರ್ಯನು ಕಪಿಲೇಶ್ವರ ಕೂಡ ಆಗಿದ್ದಿರಬಹುದು. ಭೋಗಕ್ಕೆ ನೃತ್ಯಸಂಗೀತಗಳ ಬಗೆಯಿಂದ ಆರಾಧನೆಗೆ (ಸೂರ್ಯಾರಾಧನೆಯಲ್ಲಿ - ಸಂತಾನ ಪ್ರಾಪ್ತಿಗೆ, ವಿಜಯೋತ್ಸವಕ್ಕೆ ಹಲವು ರೋಗಗಳ ಪರಿಹಾರಕ್ಕೆ ವೈದ್ಯಕ್ಕೆ ಇತ್ಯಾದಿ ನಾಗರಾಧನೆ ಹಾಗೂ ವೀರರ ಶಾಸನಗಳಿಗೆ ಅಲ್ಲದೆ ಕಾಲಗಣನೆಗೆ) ಈತನು ಅಧಿದೈವದಂತೆ ಪರಿಗಣಿತವಾದ ದೈವ. ಕಾಲಕ್ರಮೇಣ ಇದರ ಅತಿರೇಕಗಳು ಮತ್ತು ತಾತ್ವಿಕಸಿದ್ಧಾಂತಗಳು, ಈ ದೈವದ ಆರಾಧನೆಯನ್ನು ನೇರವಾಗಿ ಜರುಗದಂತೆ ಮಾಡಿರುವಂತಿದೆ.

**ಉಪಸಂಹಾರ :**

*೧. ಮಿಥುನ ಶಿಲ್ಪಗಳು ಯಾವುದೇ ದೇಗುಲದಲ್ಲಿ ಕಂಡುಬಂದರೂ ಅದರ ಒಳಗಿನ ಚೌಕಟ್ಟಿನಲ್ಲಿ ನವರಂಗವಿರುತ್ತವೆ.*

*೨. ನವರಂಗದ ಎಂದರೆ ನೃತ್ಯಸೇವೆ (ರಂಗಸೇವೆ)ಯು ದೇಗುಲದ ಪರಿಪಾಠದಲ್ಲಿ ಸೇರಿಹೋದಂತೆ ಅಂಗಭೋಗ ಮತ್ತು ರಂಗಭೋಗ ಎಂಬ ಪ್ರಯೋಗಗಳನ್ನು ಕನ್ನಡ ಶಾಸನಗಳಲ್ಲಿ ಕಾಣುತ್ತೇವೆ.*

*೩. ನವರಂಗಕ್ಕೂ ಶೈವ ದೇವಾಲಯಕ್ಕೂ ಯಾವುದೇ ತಾಂತ್ರಿಕ ಅಥವಾ ಆಚರಣೆಯ ಸಂಬಂಧವಿರುವುದಿಲ್ಲ. ಸಾಮಾನ್ಯವಾಗಿ ಗರ್ಭಗೃಹದಲ್ಲಿ ಶಿವಲಿಂಗವಿರುವುದಾದರೆ ಇಂಥ ನವರಂಗವನ್ನು ಮಾರ್ಪಡಿಸುವಲ್ಲಿ ಬಸವನಿರುತ್ತಾನೆ.*

*೪. ವೈಷ್ಣವ ಹಾಗೂ ಜೈನ ಬಸತಿಗಳಲ್ಲಿ ರಂಗಮಂಟಪಗಳಿದ್ದರೆ ಅಲ್ಲೆಲ್ಲಾ ನೃತ್ಯಸೇವೆಗೆ ಅವಕಾಶವಿರುತ್ತದೆ. ಬೇಲೂರು ಚೆನ್ನಕೇಶವ ದೇಗುಲ ಇದಕ್ಕೆ ಒಳ್ಳೆಯ ಉದಾಹರಣೆ ಆಗಿದೆ. ಈಗ ನೃತ್ಯ ಸೇವೆಯನ್ನು ಷೋಡಶೋಪಚಾರದಲ್ಲಿ ಸೇರಿಸಲಾಗಿದೆ. ಇಂಥ ಹಳೆಯ ದೇಗುಲಗಳು ಮೂಲತಹ ಸೂರ್ಯರಾಧನೆಗೆ ರಚಿತವಾಗಿದ್ದಿರಬಹುದಾಗಿದೆ.*

*೫. ಕಲ್ಯಾಣ ಚಾಲುಕ್ಯರ ಕಾಲದ ಪ್ರಸಿದ್ಧ ಕೇಂದ್ರಗಳು ಪರಿಶೀಲಿಸಿದಾಗಲೂ ಸೂರ್ಯರಾಧನೆಯು ಕುರುಹುಗಳು ಯಥೇಚ್ಛವಾಗಿ ಕಂಡು ಬರುತ್ತಿವೆ. ಇದರಲ್ಲಿ ಕಪಿಲೇಶ್ವರ ದೇವಾಲಯವು ವಿಶೇಷವಾದುದು ಮತ್ತು ನಿಶ್ಚಿತವಾದ ಕಾಲವನ್ನು ಹೊಂದಿದೆ ಕ್ರಿ. ಶ. ಸುಮಾರು ೮೦೧.*

*೬. ಕ್ರಿ.ಶ. ೮ನೆಯ ಶತಮಾನದ ಸೂರ್ಯ ದೇಗುಲಗಳನ್ನು ಭೋಗಮಂದಿರಗಳಾಗಿದ್ದಿರಬಹುದಾದ ಸಾಧ್ಯತೆಗಳೇ ಹೆಚ್ಚು. ಇಂಥವಕ್ಕೆ ರಾಷ್ಟ್ರಕೂಟರ ಸಂಪರ್ಕವಿದ್ದಿರಬೇಕೆಂಬುದನ್ನು ಗುರುತಿಸಬಹುದಾಗಿದೆ. ಇಂದಿಗೂ ಬುಡಕಟ್ಟು ಜನಾಂಗಕ್ಕೆ ಸಂಬಂಧಿಸಿದಂತೆ ಸೂರ್ಯ ಪ್ರತಿಮೆಗಳು ಉಳಿದಿರಬಹುದಾಗಿದೆ. ಕೆಲವು ಇಂಥ ದೇಗುಲಗಳು ಪ್ರತ್ಯೇಕವಾಗಿಯೇ ಉಳಿದು ಬಂದಿವೆ.*

*೭. ಸಿದ್ಧಕ್ಷೇತ್ರಗಳಲ್ಲಿ ಸೂರ್ಯಪ್ರತಿಮೆಗಳು ಕಂಡುಬರುತ್ತಿವೆ. ಕೆಲವೆಡೆ ಇಂಥವನ್ನು ಭಾಸ್ಕರ ಕ್ಷೇತ್ರಗಳೆಂದ ಕರೆಯಲಾಗುತ್ತಿದೆ. ವಣಿಜರು, ವಾರನಾರಿಯರು ರಾಜಮಹಾರಾಜರು ಈ ಸೂರ್ಯ ಪ್ರತಿಮೆಗಳನ್ನು ಆರಾಧಿಸುತ್ತಿದ್ದರೆಂಬುದಕ್ಕೂ ಅದಕ್ಕಾಗಿ ಪ್ರತಿಮೆಗಳನ್ನು ದೇಗುಲಗಳನ್ನು ಸ್ಥಾಪಿಸುವಲ್ಲಿ ರಂಗಮಂಟಪದಿಂದ ಕೂಡಿದ ದೇಗುಲದ ರಚನೆಯನ್ನು ವಿಶೇಷಗೊಳಿಸಲು ಸಾಕಷ್ಟು ಉತ್ತೇಜನ ನೀಡಿರುವುದನ್ನು ಶಾಸನಗಳಿಂದ ಆಧರಿಸಬಹುದಾಗಿದೆ. ಇದು ವಾಸ್ತು ವಿಶೇಷ.*

*೮ ಕಲ್ಯಾಣ ಚಾಲುಕ್ಯರ - ಬಿಜ್ಜಳನಕಾಲದಲ್ಲಿ ಸೂರ್ಯನಿಗೆ ಶುಕ್ರದಶೆಯಾಗಿದ್ದಿರಬಹುದು.*



ಪ್ರೊ. ಕೆ. ಸಿ. ಮಲ್ಲಿಗವಾಡ*

# ಉಮಚಗಿ ಗ್ರಾಮದ ಪ್ರಾಚ್ಯಾವಶೇಷಗಳು

ಧಾರವಾಡ ಜಿಲ್ಲೆ ಉತ್ತರ ಮೈದಾನ ಪ್ರದೇಶಕ್ಕೆ ಸೇರಿದ ಯರೇಸಿಮೆಯ ತಾಣವೆಂದೇ ಪ್ರಸಿದ್ಧವಾದ ಹುಬ್ಬಳ್ಳಿ ತಾಲ್ಲೂಕಿನ ಪೂರ್ವಭಾಗ ಹಾಗೂ ಕೊನೇರುಹಳ್ಳಿಯೇ 'ಉಮಚಗಿ'. ಇದು ಪ್ರಾಚೀನತೆಯ ಮಹತ್ವವನ್ನು ಹೊತ್ತು ನಿಂತು ಅಂದಿನ ಪ್ರಾಚೀನತೆಯನ್ನು ಹೊತ್ತು ಸಾರುವ ಪ್ರಾಚ್ಯಾವಶೇಷಗಳನ್ನು ತನ್ನ ಒಡಲಾಳದಲ್ಲಿ ಹುದುಗಿಸಿಕೊಂಡು ಸ್ವಗ್ರಾಮಕ್ಕೆ ತಾಲ್ಲೂಕು ಜಿಲ್ಲೆಗೂ ಕೀರ್ತಿಯನ್ನು ತಂದ ಕೀರ್ತಿ ಉಮಚಗಿಗೆ ಸಲ್ಲುತ್ತದೆ. ಉಮಚಗಿಯ ಮೊದಲ ಹೆಸರು ಎಮಚಗಿ. ಉಮಾಪೂರ ಉಮ್ಮಚಗಿ, ಅಮಚಗಿ, ಉಮ್ಮಹಸಿಚಗಿ, ಎಂಬುದಾಗಿ ಕರೆಯಲ್ಪಡುತ್ತವೆ. ಅಂದರೆ ಪೌರಾಣಿಕವಾಗಿ ಉಮಾ+ಅಚಗಿ, ಉಮಾ, ಪಾರ್ವತಿ, ಅಚಗಿಶ್ರಮ (ಕಠಿಣ)=ಉಮಚಗಿ, ಪಾರ್ವತಿದೇವಿಯ ಶ್ರಮವಹಿಸಿ ತಪಸ್ಸನ್ನಾಚರಿಸಿದ ತಪೋಭೂಮಿಯಾಗಿತ್ತು ಉಮಾಪುರ. ಉಮಾ+ಪುರ, ಉಮಾಮಹೇಶ್ವರಿ ವಾಸಿಸುತ್ತಿದ್ದ ಪುರವೆಂದರೆ ಊರು ಅಂದರೆ ಉಮಾದೇವಿಯ ಊರಾಗಿತ್ತೆಂದು ತಿಳಿದು ಬರುತ್ತಿದೆ. ಅಮಚ+ಅಚಗಿ=ಅಮಚಗಿ. ಅಮಚಗಿ ಎಂದರೆ ಸೇರಿಸು ಜೋಡಿಸು ಉಂಟುಮಾಡು ಎಂದರ್ಥ. ಅಚಗಿ=ಗ್ರಾಮ ಅಂದರೆ ಇತಿಹಾಸದ ಅರ್ಥದಲ್ಲಿ ಇಂದೊಂದು ಮಧ್ಯವರ್ತಿ ಸ್ಥಳವಾಗಿತ್ತು. ಸುತ್ತಲಿನ ಗ್ರಾಮಗಳಾದ ಸವದತ್ತಿ, ರಟ್ಟರ ಆಳ್ವಿಕೆಯ ಕೊನೆ ಊರು ರೊಟ್ಟಿಗವಾಡ, ಕಲ್ಯಾಣ ಚಾಲುಕ್ಯರ ಆಳಿಕೆಗೊಳಗಾದ ಬೆಳ್ವಲ ೩೦೦ (ಗದಗ) ಮತ್ತು ಬೆಳ್ಳೊಲ ೨೦೦-ಲಕ್ಷ್ಮೇಶ್ವರಗಳ ಗಡಿರೇಖೆ ಇವುಗಳನ್ನು ಸಂಧಿಸುವ ಊರು ಇದಾಗಿದೆ. ಈ ಗ್ರಾಮಕ್ಕೆ ಅಮಚಗಿ-ಅಮಚಣಗಿ ಎಂದರೆ ಗಡಿರೇಖೆಗಳನ್ನು ಜೋಡಿಸುವ ಮಹತ್ವದ ಪುರ ಇದಾಗಿದೆ. ಅಂದರೆ ಪೂರ್ವಕ್ಕೆ ಕೋಳಿವಾಡ. ಪಶ್ಚಿಮಕ್ಕೆ ಬಂಡಿವಾಡ ಉತ್ತರಕ್ಕೆ ನುವಡಿ ದಕ್ಷಿಣಕ್ಕೆ ರೊಟ್ಟಿಗವಾಡಿ ಇವೆಲ್ಲವುಗಳ ಮಧ್ಯ ಕೇಂದ್ರ ಬಿಂದು ಸ್ಥಳ ಇದಾಗಿದ್ದರಿದ ಇದನ್ನು ***ಆಮಚಾಗಿ*** ಎಂದು ನಂತರ ಗ್ರಾಮ ಭಾಷೆಯಲ್ಲಿ ***ಅಚಗಿ*** ಪರಿವರ್ತನೆಯಾಗಿರುವ ಸಾಧ್ಯತೆಗಳಿವೆ. ಸುಮಾರು ೩೫೦೦ ಜನಸಂಖ್ಯೆಯನ್ನು ಹೊಂದಿ ವಿಶಾಲ ವಿಸ್ತೀರ್ಣವಿದ್ದು ಒಟ್ಟು ೩೦೦ ಮನೆಗಳನ್ನು ಹೊಂದಿದ ಗ್ರಾಮ ಉಮಚಗಿಯಾಗಿದೆ. ಒಟ್ಟಿನಲ್ಲಿ ಇದೊಂದು ಮಧ್ಯವರ್ತಿ ಕೇಂದ್ರಸ್ಥಳವಾದ ಕಾರಣ ಪ್ರಾಚೀನ ಕಾಲದಿಂದಲೂ ರಾಜಮಹಾರಾಜರು ಸಹ ಮೊದಲ್ಗೊಂಡು ತಮ್ಮ ಇರುವಿಕೆಯ ಕುರುಹುಗಳನ್ನು ನಿರ್ಮಿಸಿದ್ದರಿಂದ ಇದೊಂದು ಪ್ರಾಚೀನ ಗ್ರಾಮವಾಗಿದೆ.

ಉಮಚಗಿ ಗದಗ ತಾಲ್ಲೂಕು ಕೋಡಾ ಉಮಚಗಿ ಗ್ರಾಮಗಳ ಅವಶೇಷಗಳು ಸಮಕಾಲೀನವಾಗಿದ್ದು ಈ ಪ್ರಸ್ತುತ ಉಮಚಗಿಯು ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಇಲ್ಲಿರುವ ವೀರಗಲ್ಲುಗಳು ಮಹಾಸತಿ ಕಲ್ಲುಗಳು ಶ್ರೀನಾರಾಯಣ ದೇವರ ವಿಗ್ರಹಗಳು ಇತಿಹಾಸ ರಚನೆಗೆ ಸಹಾಯಕವಾದ ಅಂಶಗಳಾಗಿವೆ. ಜೊತೆಗೆ ಗ್ರಾಮದಲ್ಲಿ ಶ್ರೀಹನುಮಂತದೇವರಗುಡಿ ಶ್ರೀಈಶ್ವರಲಿಂಗಗುಡಿ, ಸಿದ್ದಪ್ಪಜ್ಜ ಗುಡಿ, ದುರ್ಗಾದೇವಿ ಗುಡಿ, ಮೊದಲಾದ ಭಾವೈಕ್ಯತೆ ಸಾರುವ ಕುರುಹುಗಳಿದ್ದು ಇವೆಲ್ಲವುಗಳು ಮಹತ್ವದ ಸ್ಥಾನ ಪಡೆದವುಗಳಾಗಿವೆ.

**(ವಿಷ್ಣು)-ಶ್ರೀ ನಾರಾಯಣ ದೇವರ ಗುಡಿ** : ಇದೊಂದು ಪ್ರಾಚೀನ ದೇವಾಲಯವಾಗಿದೆ. ಸುಮಾರು ೧೦-೧೨ನೇ ಶತಮಾನಕ್ಕೆ ಸಂಬಂಧಿಸಿದ ಕುರುಹುಗಳನ್ನು ಒಳಗೊಂಡಿದೆ. ದೇವಾಲಯವು ವಿಶಾಲವಾಗಿದ್ದು ಪ್ರಾಚೀನ ಕೆರೆಯದಂಡೆಯ ಮೇಲೆ ನೆಲೆಗೊಂಡಿದೆ. ಇದು ಪೂರ್ವಾಭಿಮುಖವಾಗಿದ್ದು ಪ್ರತ್ಯೇಕ ಪ್ರವೇಶದ್ವಾರ ಹಾಗೂ ಗರ್ಭಗೃಹಗಳಿವೆ. ವೇದಶಾಲೆಯು ಹಾಳು ಬಿದ್ದಿದ್ದು ಅದರ ಸುತ್ತಲಿನ ಗೋಡೆಗಳು ಹಾಗೇ ಇವೆ. ಇದರಲ್ಲಿದ್ದ ವಿವಿಧ ವಿಗ್ರಹಗಳು ಸ್ತಂಭಗಳು ತ್ರುಟಿತಗೊಂಡು ಅಲ್ಲಲ್ಲಿ ಚದುರಿದಂತೆ ಬಿದ್ದಿವೆ. ಪ್ರಸ್ತುತವಿರುವ ಗರ್ಭಗೃಹಕ್ಕೆ ಸುಂದರವಾದ ಕಟ್ಟಿಗೆಯ ಬಾಗಿಲು ಇದೆ. ಇದರ ಚೌಕಟ್ಟುಗಳು ಸುರಳಿಗೆತ್ತನೆಯ ಜಾಗೃತೆಯನ್ನು ಹೊಂದಿವೆ. ಎಡಬಲಗಳಲ್ಲಿ ಗುಂಡುಸಾಲು ಲತಾ ಸುರಳಿ ಮಕರ ತೋರಣಗಳಿದ್ದು ಮೇಲಿನ ಹಣೆಪಟ್ಟಿಯಲ್ಲಿ ಲಕ್ಷ್ಮಿ ವಿಗ್ರಹವಿದೆ. ಇಲ್ಲಿಯೂ ನಂದಿ ಈಶ್ವರನ ಕೆತ್ತನೆಗಳನ್ನು ಕಟ್ಟಿಗೆಯ ಕಲಾಕೃತಿಯಲ್ಲಿ ಕೆತ್ತಲಾಗಿದೆ.

ಒಳ ಪ್ರವೇಶಿಸಿದರೆ ಸುಂದರವಾದ ಶ್ರೀಮನ್ನಾರಾಯಣ ದೇವರ ವಿಗ್ರಹವು ಕಂಗೊಳಿಸುತ್ತಿದೆ. ಇದು ಏಕಶಿಲಾ ವಿಗ್ರಹಕಣವಾಗಿದ್ದ ವಿಗ್ರಹದ ತಳಭಾಗದಲ್ಲಿ ಅಭಿಷೇಕದ ನೀರು ಹೋಗಲು ಜಲಹರಿಯನ್ನು ನಿರ್ಮಿಸಲಾಗಿದೆ. ಚತುರ್ಭುಜಗಳನ್ನು ಹೊಂದಿ ಎಡಗೈಯಲ್ಲಿ ಗದೆ, ಚಕ್ರ, ಬಲಗೈಯಲ್ಲಿ ಖಡ್ಗ (ಇದ್ದಿರಬಹುದು ತ್ರುಟಿತಗೊಂಡಿದೆ) ಧರಿಸಿ ನಿಂತ ಭಂಗಿಯಲ್ಲಿದೆ. ೫ ಅಡಿ ಎತ್ತರವಿರುವ ಪ್ರಭಾವಳಿಯ ಮಧ್ಯದಲ್ಲಿ ನಾರಾಯಣನ ವಿವಿಧ ಅವತಾರಗಳನ್ನು ಪ್ರಭಾವಳಿಯ ಎಡ ಬಲಗಳಲ್ಲಿ ಕಲಾತ್ಮಕವಾಗಿ ಬಿಡಿಸಿದೆ. ಪ್ರಭಾವಳಿಯುದ್ದಕ್ಕೂ ಎಡ ಬಲಗಳಲ್ಲಿ ಕೆಳಭಾಗದಲ್ಲಿ ಸೇವಕಿಯರು ಚಾಮರ ಹಿಡಿದು ಗಾಳಿ ಹಾಕುವಂತೆ

*ಜಿ.ಇ.ಸಿ. ಸಂ.ಹ.ಪು. ಕಾಲೇಜು, ರೊಟ್ಟಿಗವಾಡ, ತಾ|| ಕುಂದಗೋಳ, ಜಿ|| ಧಾರವಾಡ.



ನಿರತರಾಗಿದ್ದಾರೆ. ಮೇಲಿನ ಪಟ್ಟಿ ಅರ್ಧವೃತ್ತಾಕಾರವಾಗಿದ್ದು ಮಕರ ತೋರಣ ಕೆತ್ತನೆಯಿದೆ. ದೂರದಿಂದ ನೋಡಿದರೆ ಇವು ಪುಷ್ಪ ಲತಾ ಗುಚ್ಛಗಳಂತೆ ಕಂಗೊಳಿಸುತ್ತವೆ. ಆದರೆ ಕೂಲಂಕಷವಾಗಿ ಪರಿಶೀಲಿಸಿದರೆ ವಿಷ್ಣು (ನಾರಾಯಣ)ವಿನ ವಿವಿಧ ಅವತಾರಗಳನ್ನು ಅಂದರೆ ಬಾಲ್ಯ, ವೈವಾಹಿಕ ದಾಂಪತ್ಯ ಜೀವನದ ಸರಸ ಸಲ್ಲಾಪಗತಿ ಚಿತ್ರಗಳ ವಿವಿಧ ಭಂಗಿಗಳನ್ನು ಕಾಣಬಹುದು. ಹಿಂದಿನ ಸಾಲಿನಲ್ಲಿ ಪ್ರಕೃತಿ ಸೌಂದರ್ಯದ ಚಿತ್ತಾರಗಳನ್ನು ವಿವಿಧ ಭಂಗಿಗಳಲ್ಲಿ ಕೆತ್ತಲಾಗಿದೆ. ವಿಗ್ರಹವು ಸಂಪೂರ್ಣ ಆಭರಣಗಳಿಂದ ಅಲಂಕಾರಗೊಂಡಿದ್ದು ಕಾಲುಗಳು ಪಾದಗಳು ಜೋಡಿಸಿಟ್ಟಿದ್ದು ಜನಿದಾರ ನಡಪಟ್ಟಿ ಧೋತರದ ನೆರಿಗೆ ಅಲಂಕಾರಿಕ ಪಟ್ಟೆಯ ಉಡುಪುಗಳನ್ನು ಧರಿಸಿದ್ದು ಕೊರಳಲ್ಲಿ ಹಾರ. ನೆಕ್ಲೆಸ್‌ಗಳ ಅಲಂಕಾರಿಕ ಭುಜಪಟ್ಟಿ ಹಾಗೂ ತಲೆಯ ಮೇಲೆ ಮಣಿಮುಕುಟ ಕಿರೀಟ ಜಟೆಯಂತಿರುವ ಕೇಶರಾಶಿಗಳನ್ನು ಅಲ್ಲೇ ಸೂಕ್ಷ್ಮವಾಗಿ ಕೆತ್ತಲಾಗಿದೆ. ಮುಖದ ಭಾಗವು ಸ್ವಲ್ಪ ತುಟಿತಗೊಂಡಿದೆ. ಹರವಾದ ಹಣೆ, ನೀಳವಾದ ನಾಸಿಕ, ಹೊಳಪುಳ್ಳ ಕಣ್ಣುಗಳು ಅಳತೆಗೆ ತಕ್ಕಂತೆ ಬಾಯಿ-ತುಟಿ ಗದ್ದಗಳನ್ನು ನಿರ್ಮಿಸಿ ಸಾರ್ವಜನಿಕರ ಪೂಜೆಗೆ ಅಣಿಮಾಡಲಾಗಿದೆ. ಇಂತಹ ವಿಗ್ರಹ ಉಮಚಗಿಯ ಕೆಲವು ಐತಿಹ್ಯದ ಸ್ಮಾರಕಗಳು, ಉಮಚಗಿಯ ಪ್ರಾಚ್ಯಅವಶೇಷಗಳ ಶೋಧ ನೆರೆ ಗ್ರಾಮ ಕೋಳಿವಾಡ ಯರಗುಪ್ಪಿ ಗ್ರಾಮಗಳಲ್ಲಿಯೂ ಸಹ ಕಂಡು ಬರುತ್ತದೆ. ಶೈವ ಸಂಪ್ರದಾಯದ ಪೂಜೆ ಇಲ್ಲಿ ನಡೆಯುತ್ತದೆ. ಈ ವಿಗ್ರಹ ೧೧ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿರುವ ಸಾಧ್ಯತೆಗಳು ಹೆಚ್ಚು ಕಂಡು ಬರುತ್ತದೆ. ಅಂದರೆ ಕಲ್ಯಾಣಿ ಚಾಲುಕ್ಯರ ಆಡಳಿತ ಅದಿರಬಹುದು.

**ವೀರ ಮಹಾಸತಿ ಕಲ್ಲು** : ಉಮಚಗಿ ಗ್ರಾಮದ ಪ್ರಮುಖ ಆಕರ್ಷಣೆಯಾದ ಇದು ವೀರನಗೌಡ ಥ್ಯಾವನಗೌಡ ಪಾಟೀಲ ಇವರ ಹಿತ್ತಲದಲ್ಲಿದೆ. ಪೂರ್ವಾಭಿಮುಖವಾಗಿದ್ದು ೨೪ ಅಂಗುಲ ಎತ್ತರ ೩೪ ಅಂಗಲ, ಅಗಲವಾಗಿರುವ ಚೌಕಾಕಾರದ ಕಲ್ಲಿನಲ್ಲಿ ಕೆತ್ತಲಾಗಿದೆ. ಜೋಡಿ ದಂಪತಿಗಳಂತೆ ಕಂಡರೂ ಮಹಿಳೆಯೆ ನೆಲವಡಿ ರಸ್ತೆಗೆ ಹೊಂದಿಕೊಂಡಿದ್ದು ನಿಲ್ಲಿಸಿರುವ ಈ ಕಲ್ಲನ್ನು ಸ್ಥಳೀಯರು ಮಾಸ್ತೆವ್ವನ ಕಲ್ಲುಗಳೆಂದು ಕರೆಯುತ್ತಾರೆ. ಆದರೆ ಇವು ಸ್ತ್ರೀಯರ ಹೋಲಿಕೆಯನ್ನು ಕಲ್ಲುಗಳಲ್ಲಿ ವೀರಾವೇಶದಿಂದ ಹೋರಾಡುವ ಭಂಗಿಯನ್ನು ಹೋಲುತ್ತವೆ. ಪ್ರತ್ಯೇಕವಾಗಿ ನಿಲ್ಲಿಸಿರುವ ೪ ವೀರಗಲ್ಲುಗಳು ಸ್ಥಳೀಯವಾಗಿ ಚಿಂಚಲಿ ಕಲ್ಲು ಗುಡ್ಡದಲ್ಲಿ ಸಿಗುವ ಬೆಣಚು ಮಿಶ್ರಿತ ಕಪ್ಪುಕಲ್ಲಿನಲ್ಲಿ ನಿರ್ಮಾಣವಾಗಿವೆ. ನೆಲದಿಂದ ಸಮಾನವಾದ ಎತ್ತರದಲ್ಲಿ ನಿಲ್ಲಿಸಲಾಗಿದೆ. ವೀರಗಲ್ಲುಗಳು ವಿಭಿನ್ನ ರೀತಿಯಲ್ಲಿ ಅಲಂಕಾರಗೊಂಡಿವೆ. ಎಡದಿಂದ ಬಲಕ್ಕೆ ೧ನೇ ಕಲ್ಲು ಬಲಗೈಯಲ್ಲಿ ಕಠಾರಿ ಖಡ್ಗ ಹಿಡಿದು ಎಡಗೈಯಲ್ಲಿ ಡಾಲನ್ನು ಎದೆಗೆ ಅವಚಿ ಹಿಡಿದಿದೆ. ಇಂತಹ ಬಿರುಸು ಕಲ್ಲಿನಲ್ಲಿಯೂ ಸಹ ನಯ ನಾಜೂಕಿನಿಂದ ಕೆಲಸ ಮಾಡಿರುವುದು ಕಂಡುಬರುತ್ತದೆ. ಮೈಮೇಲೆ ತೆಳುವಾದ ಬಟ್ಟೆಯನ್ನು ಧರಿಸಿ ಕೈಗಡಗ ಮರ್ಮಾಂಗ ಕವಚ, ಕಾಲಿನಲ್ಲಿ ಕಾಲ್ಕಡಗಳನ್ನು ಧರಿಸಿದ್ದಾಳೆ. ತಲೆಯ ಮೇಲೆ ಕಿರೀಟವಿದ್ದು ಕಿವಿಯಲ್ಲಿ ಕಿವದೆಲೆಗಳೂ ಸಹ ಜೋತು ಬಿದ್ದಿರುವುದು ಗಮನಾರ್ಹವಾದ ವಿಷಯವಾಗಿದೆ. ವಿಗ್ರಹದ ಸುತ್ತಲೂ ಕಲ್ಲನ್ನು



ಕೆತ್ತಿ ಕಮಾನಿನಾಕಾರವಾಗಿ ಮಾಡಿದ್ದಾರೆ. ಇವೆಲ್ಲ ಉಬ್ಬು ಚಿತ್ರ ಕೆತ್ತನೆಗಳಾಗಿವೆ. ವೀರಗಲ್ಲಿನಲ್ಲಿ ಮೇಲ್ಭಾಗದಲ್ಲಿನ ಎಡಬಲಗಳಲ್ಲಿ ಸೂರ್ಯ ಚಂದ್ರರನ್ನು ಕೆತ್ತಲಾಗಿದೆ. ನಾಲ್ಕು ಕಲ್ಲುಗಳಲ್ಲಿ ಇದೊಂದು ಆತ್ಮಾಕರ್ಷಕವಾದ ವೀರಗಲ್ಲಾಗಿದೆ.

ಎರಡನೇ ವೀರಗಲ್ಲು ಮೊದಲಿನ ಕಲ್ಲಿನಂತೆಯೇ ವೀರ ಡಾಲು, ಕತ್ತಿಗಳನ್ನು ಹಿಡಿದ್ದಿದ್ದಾನೆ. ಇದೂ ಸಹ ಕಮಾನಿನಾಕಾರದ ಕೆತ್ತನೆಯ ಗೂಡಿನಲ್ಲಿದೆ. ಪ್ರತ್ಯೇಕವಾದ ಒಂದೇ ವಿಗ್ರಹವಿದ್ದು ಮನಾಕರ್ಷವಾಗಿದೆ. ೩ನೇ ವೀರಗಲ್ಲು ಅಳತೆಯಲ್ಲಿ ಚಿಕ್ಕದಾಗಿದೆ. ಆದರೆ ನಿಲ್ಲಿಸಿದಲ್ಲಿ ಎಲ್ಲ ಕಲ್ಲಿಗಿಂತ ಎತ್ತರವಾಗಿದೆ. ವೀರನು ಅವಸರದಲ್ಲಿರುವಂತಿದೆ. ಬಲಗೈಯಲ್ಲಿರುವ, ಕಠಾರಿಯು ತಲೆಯ ಮೇಲ್ಭಾದಲ್ಲಿಡಿದಿದ್ದು ಎಡಗೈಯಲ್ಲಿನ ಡಾಲು ಸೊಂಟದ ಮೇಲಿದೆ. ಉಳಿದ ಆಭರಣಗಳು ಎಲ್ಲ ವೀರರು ಧರಿಸಿದಂತೆ ಕಂಡುಬರುತ್ತದೆ. ಆದರೆ ತ್ರಿಕೋನಾಕೃತಿಯ ಕಮಾನು ಬಿಲ್ಲಿನಂತೆ ಕಂಡು ಬರುತ್ತದೆ.

ನಾಲ್ಕನೆಯ ವೀರನ ಚಿತ್ರಣವು ಬೇರೆ ಭಂಗಿಯಲ್ಲಿದೆ. ವೀರನು ಬಲಗೈಯಲ್ಲಿ ಕಠಾರಿಯನ್ನು ಮೇಲ್ಭಾಗಕ್ಕೆ ಹಿಡಿದಿದ್ದಾನೆ. ಖಡ್ಗದ ತುದಿ ಆಕಾಶದತ್ತ ಇದೆ. ಎಡಗೈಯಲ್ಲಿಯ ಡಾಲನ್ನು ಎದೆಗೆವಚ್ಚಿಕೊಂಡು ಹಿಡಿದಿದ್ದಾನೆ. ಉಳಿದಂತೆ ಕಂಠಹಾರ, ಕಡಗಗಳನ್ನು ವೀರ, ಧರಿಸಿದ್ದಾನೆ. ಆದರೆ ವೀರನ ಸುತ್ತಲೂ ಚೌಕಾಕಾರದ ಗೂಡು ಇದ್ದು ಪಾದದ ಕೆಳಗೆ ಚಿಕ್ಕದಾದ ಪೀಠವಿದ್ದು ಅದರ ಮೇಲೆ ನಿಂತಿದ್ದಾನೆ. ಎತ್ತರವಾದ ನಿಲುವಿನಲ್ಲಿದ್ದು ಆದರ ತುದಿಯಲ್ಲಿ ಯುದ್ಧಕ್ಕೆ ಹೊರಟ ಅವನ ನಿಲುವು ಆಕರ್ಷಣೀಯವಾಗಿದೆ. ಕೈಯಲ್ಲಿ ಹರಿತವಾದ ಖಡ್ಗ ಹಿಡಿದು ಎಡಗೈಯಲ್ಲಿ ಆಯುಧ ಇದ್ದು ತ್ರುಟಿತಗೊಂಡಿದೆ. ಇದರ ಭಂಗಿ ನೋಡಿದರೆ ರಣಾಂಗಣದಲ್ಲಿ ಹೋರಾಡಿದ ವೀರ ಸ್ವರ್ಗವನ್ನು ಸೇರುವಲ್ಲಿ ಅವನೊಡನೆ ಹೋದ ಮಹಿಳೆಯ ಚಿತ್ರವನ್ನು ಕಾಣಬಹುದು, ಎಡ ಭಾಗದಲ್ಲಿ ಮಹಿಳೆಯ ಚಿತ್ರವಿದೆ.

ವೀರನು ಬಲಗೈಯಲ್ಲಿ ಖಡ್ಗ ಹಿಡಿದು ವೈರಿಗಳನ್ನು ಎದುರಿಸುವ ರೀತಿಯಲ್ಲಿ ನಿಂತಿದ್ದು ಕೊರಳಲ್ಲಿ ಮಾಲೆಧರಿಸಿ ತಲೆಮೇಲೆ ಜಟಾಮುಕುಟವಿದ್ದು ಎಡಮುಂಗೈ ತ್ರುಟಿತಗೊಂಡಿದ್ದು ನಡವಿನ ಮೇಲೆ ಇಟ್ಟಂತೆ ಎದ್ದು ಕಾಣುತ್ತದೆ. ಕಂಠಹಾರ ನಡಪಟ್ಟಿ ಕೈಕಡಗಗಳನ್ನು ಹೊಂದಿದ್ದು ಹರವಾದ ಎದೆ ಅಳತೆಗೆ ತಕ್ಕಂತೆ ಎತ್ತರವನ್ನಿಟ್ಟು ಇಲ್ಲಿ ಕಲ್ಲನ್ನು ಶಿಲ್ಪಿ ಕಂಡರಿಸಿದ್ದಾನೆ. ಕೊರಳಲ್ಲಿ ಹಾರ ದಪ್ಪವಾಗಿದ್ದು ಹಾವಿನಂತೆ ಕಂಡರೂ ಇದು ಕೊರಳ ಹಾರವಾಗಿದೆ. ಕಾಲಿನ ಭಾಗವು ವಿಶಾಲವಾಗಿದ್ದು ಗದ್ದಿಗೆಯ ಮೇಲೆ ಪಾದಗಳನ್ನು ಇಟ್ಟಿದ್ದಾನೆ. ಬಲಕಾಲಿನ ಉಗುರುಗಳೂ ಸಹ ಸ್ಪಷ್ಟವಾಗಿ ಕಾಣುವಂತಿದೆ. ಎಡಗಾಲು ದಪ್ಪವಾಗಿದ್ದು ತ್ರುಟಿತಗೊಂಡಿದೆ. ಪ್ರತ್ಯೇಕವಾದ ಕಲ್ಲಿನಲ್ಲಿ ಕೇವಲ ೩ ಚಿತ್ರಗಳನ್ನು ಕೆತ್ತಿ ನಯಗೊಳಿಸಿದ್ದಾರೆ. ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಎಡಭಾಗದ ಮಹಾಸತಿಯ ಚಿತ್ರವು ಕೆಳಭಾಗದಲ್ಲಿದ್ದು ಎಡಗೈಯಲ್ಲಿ ಹೂಬುಟ್ಟಿ ಹಿಡಿದು ಕೈ ಬಳೆ ಧರಿಸಿದ್ದಾಳೆ. ಬಲಗೈಯನ್ನು ಮೇಲೆತ್ತಿರಿಸಿ ಹಿಡಿದು ಮೈತುಂಬ ವಸ್ತ್ರಧರಿಸಿ ಸೀರೆ, ರವಿಕೆ ತೊಟ್ಟಿದ್ದಾಳೆ. ಕೈಬಳೆ ಕಂಠಹಾರ ಮೂಗಿನಲ್ಲಿ ಮೂಗುತಿ ಮುಂತಾದ ಆಭರಣಗಳನ್ನು ಧರಿಸಿ ನಿಂತಿದ್ದಾಳೆ. ತಲೆಯ ಮೇಲೆ ಕೇಶರಾಶಿ ಇದ್ದು ತಲೆಯ ಹಿಂಭಾಗದಲ್ಲಿ ತುರುಬನ್ನು ಕಟ್ಟಿದ್ದಾಳೆ. ಈ ಮಹಾಸತಿ ಗಂಡನ ಮರಣವಾರ್ತೆ ಕೇಳಿ ಸತಿ ಹೋಗಲು ಆತುರಳಾದಂತಿರುವುದು, ಇದರಿಂದ ಈ ಗ್ರಾಮದಲ್ಲಿ ವೀರ ಮಹಿಳೆಯೊಬ್ಬಳು ಸತಿಯ ಸ್ಥಾನಕ್ಕೆ ಮೆಚ್ಚಿ ತಾನೂ ಸಹ ಪ್ರಾಣಾರ್ಪಣೆ ಮಾಡಿದ ಸ್ಮರಣ ಈ ಕಲ್ಲನ್ನು ಹಾಕಿಸಲಾಗಿದೆ. ಹೀಗೆಯೇ ಹಲವಾರು ಅವಶೇಷಗಳು ಕಂಡುಬರುತ್ತವೆ. ಈ ಮಹಾಸತಿ ಕಲ್ಲು, ಸ್ಥಳೀಯವಾಗಿ ಲಭ್ಯವಾಗುವ ಕರಿಯ ಕಲ್ಲಿನ ಪ್ರಾಚೀನಶ್ರೇಷ್ಠ ವೀರಗಲ್ಲುಗಳು : ಇವು ಇಲ್ಲಿನ ಪ್ರಮುಖ - ಆಕರ್ಷಣೆಯ ಅವಶೇಷಗಳಾಗಿವೆ; ಉಮಚಗಿಯ ಹೊರಭಾಗದ ಆಗಸೆ ಪ್ರವೇಶ ಭಾಗದಲ್ಲಿವೆ.

ಈ ಗ್ರಾಮದ ೪ ವೀರಗಲ್ಲುಗಳನ್ನು ನಾವು ಪರಿಶೀಲಿಸಿದರೆ ಯುದ್ಧದಲ್ಲಿ ಹೋರಾಡಿ ಮರಣವನ್ನು ಅಪ್ಪಿರಬಹುದಾದ ಈ ವೀರರ ಕಲ್ಲುಗಳು ಇಂದಿಗೂ ಆಕರ್ಷಣೀಯವಾಗಿದ್ದು ಪ್ರೇಕ್ಷಕರನ್ನು ಕೈಮಾಡಿ ಕರೆಯುವಂತೆ ತಮ್ಮ ಆತ್ಮಕಥನವನ್ನು ಹೇಳುತ್ತಾ ನಿಂತಿವೆ. ಈ ಗ್ರಾಮದ ಶ್ರೀ ವೀರನಗೌಡ ಪಾಟೀಲ ಅವರ ಹಿತ್ತಲದಲ್ಲಿ ತುಂಡುಗಳಾಗಿ ಮಹಾಸತಿ ಕಲ್ಲುಗಳೂ ಬಿದ್ದಿರುವುದು ನಮಗೆ ಕಂಡು ಬರುತ್ತದೆ. ಇವೆಲ್ಲವುಗಳು ೧೦-೧೧ನೇ ಶತಮಾನಕ್ಕೆ ಸೇರಿದವುಗಳಾಗಿದದ್ದು ಅಂದಿನ ಅರಸ ಆರನೇ ವಿಕ್ರಮಾದಿತ್ಯನ ಆಳಿಕೆಗೆ ಸಂಬಂಧಿಸಿರುವಂಥ ಸಾಧ್ಯತೆಗಳು ತೋರುತ್ತವೆ.

ಈ ಗ್ರಾಮದ ಮಧ್ಯಭಾಗದಲ್ಲಿ ನೆಡಲಾಗಿರುವ ಚತುರ್ಬದಿ ಕಲ್ಲುಗಳು ಇದ್ದು, ಶಿವನ ವಿವಿಧ ಅವತಾರಗಳನ್ನು ಹೊಂದಿದ್ದಲ್ಲದೆ ದಿಕ್ಕುಗಳನ್ನು ತೋರಿಸುವ ಚಿಹ್ನೆಗಳಾಗಿರಬಹುದು. ಅಲ್ಲದೇ ಪ್ರಾಚೀನ ಪ್ರಸಿದ್ಧಿ ಪಡೆದ ಶ್ರೀ ಹನುಮಂತ ದೇವರ ಗುಡಿ ೫-೬ ಅಡಿ ಎತ್ತರವಾದ ಜಗಲಿಯ ಮೇಲೆ ನಿರ್ಮಾಣವಾಗಿದೆ. ಇದು ದಕ್ಷಿಣಾಭಿಮುಖವಾಗಿರುತ್ತದೆ. ಪೂರ್ವಮುಖ ಶ್ರೀ ಮಾರುತಿ ದೇವರು ವಿಗ್ರಹವಿದ್ದು ರೇಖಾಚಿತ್ರವಾಗಿದೆ. ಎಡಗೈಯಲ್ಲಿ ಗಿಡ್ಡ ಹಿಡಿದಿದ್ದಾನೆ. ಬಲಗೈ ಅಭಯಹಸ್ತವಾಗಿದೆ. ಈ ದೇವಾಲಯವು ೨ ಪ್ರತ್ಯೇಕ ಗರ್ಭಗೃಹ ಹೊಂದಿದ್ದು ಇನ್ನೊಂದರಲ್ಲಿ ಶ್ರೀ ಈಶ್ವರ ಲಿಂಗ ಪ್ರತಿಷ್ಠಾಪಿಸಲಾಗಿದೆ. ಎದುರಿಗೆ ವಿಶಾಲವಾದ ಸುಖನಾಸಿ ಇದ್ದು ಇದರ ಮುಂದೆ ಸಂಪೂರ್ಣವಾಗಿ ಮಣ್ಣಿನಗೋಡೆ ನಿರ್ಮಿಸಲಾಗಿದೆ. ಎರಡು ಪ್ರತ್ಯೇಕವಾದ ಗರ್ಭಗೃಹಗಳಿದ್ದು ಮೇಲ್ಭಾವಣಿ ಶಿಖರವಿದ್ದು ಕಳಸ ಪ್ರಖರವಾಗಿದೆ.

***ಬಸವಣ್ಣ ದೇವರ ಗುಡಿ*** : ಹೊರಭಾಗದಲ್ಲಿರುವ ದಕ್ಷಿಣಾಭಿಮುಖ ದೇಗುಲದಲ್ಲಿ ಶ್ರೀ ಬಸವೇಶ್ವರ ವಿಗ್ರಹವಿದ್ದು

ದೇವಾಲಯಯವನ್ನು ಈಗ ನೂತನವಾಗಿ ಜೀರ್ಣೋದ್ಧಾರ ಮಾಡಲಾಗಿದೆ. ಮೊದಲಿಗೆ ಗರ್ಭಗೃಹ ಪ್ರವೇಶ ದ್ವಾರ, ವೇದಶಾಲೆಗಳಿದ್ದವು. ಪ್ರತ್ಯೇಕವಾದ ಪ್ರದಕ್ಷಿಣಾಪಥವಿತ್ತು. ಈಗ ಸಿಮೆಂಟ್ ಕಟ್ಟಡ ನಿರ್ಮಾಣವಾಗುತ್ತಿದೆ.

***ಸಿದ್ದಪ್ಪಜ್ಜನ ಗುಡಿ :*** ಇದು ಊರ ಮುಂದಿನ ಕೆರೆಯ ದಂಡೆಯ ಮೇಲೆ ಪೂರ್ವಮುಖಿ ಗುಡಿ. ಶರಣ ಸಿದ್ದಪ್ಪಜ್ಜನ ತಪೋಭೂಮಿಯಾಗಿದ್ದು ತನ್ನ ಜಪತಪಗೈದ ತಾಣ ಇದಾಗಿದ್ದು ಭಕ್ತರು ಭಕ್ತಿ ವಿಶ್ವಾಸದಿಂದ ದೇವಾಲಯ ನಿರ್ಮಿಸಿ ಇಲ್ಲಿ ಸಿದ್ದಪ್ಪಜ್ಜನ ಗದ್ದುಗೆಯನ್ನು ಕಟ್ಟಿ ಪೂಜಿಸುತ್ತಿದ್ದಾರೆ. ತಪೋನಿಧಿ ಶ್ರೀ ಸಿದ್ದಪ್ಪಜ್ಜನ ಗದ್ದಿಗೆ ಮೇಲೆ ಈಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

***ಶ್ರೀಗ್ರಾಮದೇವತಾ ಮಂದಿರ ದ್ಯಾಮವ್ವನ ಗುಡಿ :*** ಪ್ರಾಚೀನ ಪ್ರಸಿದ್ಧವಾದ ಈ ದ್ಯಾಮವ್ವನ ದೇವಾಲಯವು ಗ್ರಾಮದ ಪಶ್ಚಿಮ ಭಾಗದಲ್ಲಿ ಇದೆ. ಪೂರ್ವಾಭಿಮುಖವಾಗಿದ್ದು ವಿಶಾಲವಾದ ಬಯಲು ಜಾಗೆಯಲ್ಲಿ ಚೌಕಾಕಾರವಾಗಿ ನಿರ್ಮಾಣ ಗೊಂಡಿದ್ದು ಬೃಹತ್ ಪ್ರಮಾಣದ ಸುಖನಾಸಿ, ನಂತರ ಗರ್ಭ ಗೃಹವಿದೆ. ಗರ್ಭಗೃಹದಲ್ಲಿ ಮಹಿಷಾಸುರ ಮರ್ದಿನಿ ಎಂದು ಪ್ರಸಿದ್ಧಳಾದ ಆದಿಶಕ್ತಿಯ ಉದ್ಭವವೆನ್ನಲಾದ ವಿಗ್ರಹವಿದೆ. ೨ ಅಡಿ ಎತ್ತರವಾದ ಜಗುಲಿಯು ಮೇಲೆ ವಿಗ್ರಹಕ್ಕೆ ಸೀರೆಯುನ್ನು ಉಡಿಸಿ ಅಲಂಕರಿಸಿರುತ್ತಾರೆ. ಗರ್ಭಗೃಹದ ಸುತ್ತಲೂ ತ್ರುಟಿತವಾದ ವಿಗ್ರಹಗಳಿದ್ದು ಅವು ದೇವಾಲಯಕ್ಕೆ ಸಂಬಂಧಿಸಿದವುಗಳಾಗಿವೆ. ದೇವಾಲಯವನ್ನು ನವೀನವಾಗಿ ನಿರ್ಮಿಸಲಾಗಿದ್ದು ವಿಗ್ರಹ ಮಾತ್ರ ಪ್ರಾಚೀನತೆಯ ಸೊಬಗನ್ನು ಹೊರಸೂಸುತ್ತದೆ. ಗ್ರಾಮದೇವಿಗೆ ಪ್ರತಿ ಶುಕ್ರವಾರ ಮಂಗಳವಾರ ವಿಶೇಷ ಪೂಜೆ ನೆರವೇರುತ್ತದೆ. ಪ್ರತಿ ಮಹಾನವಮಿ ಹಬ್ಬದಲ್ಲಿ ಬನ್ನಿ ಮುಡಿಯುವ ಉಡಿತುಂಬುವ ಕಾರ್ಯನಡೆಯುತ್ತದೆ.

***ದುರ್ಗಾ ದೇವಾಲಯ :*** ಈ ದೇವಾಲಯವು ಪೂರ್ವಾಭಿಮುಖಿ. ಗರ್ಭಗೃಹದಲ್ಲಿ ದೇವಿಯ ವಿಗ್ರಹ ಖಡ್ಗಧಾರಿ, ಕಠಾರಿ, ಕತ್ತಿ, ಡಾಲುಗಳಾಗಿವೆ. ಹಿಂದೆ ಗ್ರಾಮ ರಕ್ಷಿಸಲು ವೀರರು ಮಹಾಸತಿಯರು ಹೋರಾಡಿದಾಗ ತಾವು ಉಪಯೋಗಿಸಿದ ಆಯುಧಗಳನ್ನು ಶ್ರೀಮಾತೆಯ ದೇವಾಲಯದಲ್ಲಿ ಶೇಖರಿಸಿಡಲಾಗಿದೆ. ಕೊನೆಯ ದಿನ ಅನ್ನ ಸಂತರ್ಪಣೆ ಕಾರ್ಯ ಜರುಗುತ್ತದೆ. ದೇಗುಲದ ಗರ್ಭಗೃಹಕ್ಕೆ ಮಾತ್ರ ಬಾಗಿಲು ಇದೆ. ಪ್ರತ್ಯೇಕ ಉಗ್ರಾಣವಿದೆ.

ಗ್ರಾಮದಲ್ಲಿ ಶ್ರೀ ಮೈಲಾರಲಿಂಗದೇವರ ದೇವಾಲಯ ಹಾಗೂ ತ್ರಿಶೂಲ ಕಟ್ಟೆ ಇರುತ್ತದೆ. ಪೂರ್ವಕ್ಕೆ ಮುಖಮಾಡಿ ಪ್ರತಿಷ್ಠಾಪಿಸಲಾಗಿದೆ. ೧೦' ವಿಶಾಲವಾದ ಕಟ್ಟಡ. ಇದು ೪-೫' ಎತ್ತರವಾದ ಜಗುಲಿಹೊಂದಿದೆ. ಇಲ್ಲಿ ಪುರಾತನವಾದ ವರಳು ಕಲ್ಲು ಇದ್ದು ಶ್ರೀ ಸ್ವಾಮಿಯ ಕಾರ್ಯಕ್ಕೆ ಇದು ಉಪಯೋಗ ವಾಗುತ್ತಿರುವದು ಕಂಡುಬರುತ್ತದೆ. ಕೋಮು ಸೌಹಾರ್ದತೆಯ ಸಂಕೇತವಾಗಿ ಮಸೀದಿಯೂ ಇದೆ.

***ಕಿರು ವಿಗ್ರಹ ವಿಷ್ಣು :*** ಶ್ರೀ ನಾರಾಯಣ ದೇವರ ಗರ್ಭಗೃಹದಲ್ಲಿಯೇ ಗೋಚರಿಸುವ ಕಲಾತ್ಮಕ ಶಿಲ್ಪವಾಗಿದೆ. ಚತುರ್ಭುಜಗಳನ್ನು ಹೊಂದಿದ್ದು ಮೇಲಿನ ಕೈಗಳಲ್ಲಿ ಶಂಖ, ಚಕ್ರ, ಒಂದು ಕೈಯಲ್ಲಿ ಗದೆ ಮತ್ತೊಂದು ಅಭಯಹಸ್ತ ತೋರಿದೆ. ಎಡಬಲಗಳಲ್ಲಿ ಮೊದಲಿನ ವಿಗ್ರಹದಂತೆ ಸೇವಕಿಯರು ಚಾಮರ ಬೀಸುತ್ತಿರುವದು ವಿಗ್ರಹದ ಕೊರಳಲ್ಲಿ ಹಾರ ಉದರಪಟ್ಟಿ ಕರ್ಣಾಭರಣ ಮೇಲೆ ಕಿರೀಟ ಧರಿಸಿದ್ದು ವಿಗ್ರಹದ ನಾಸಿಕ ನೇರವಾಗಿದ್ದು ಹೊಳಪುಳ್ಳ ಕಣ್ಣುಗಳು ತಿದ್ದಿ ತೀಡಿದ ಮುಖವನ್ನು ಶಿಲ್ಪಿ ಮೃದುವಾದ ಬಳಪದಕಲ್ಲಿನಲ್ಲಿ ಕೆತ್ತಿದ್ದಾನೆ. ಕರಿಯ ಶಿಲೆಯಾದ್ದರಿಂದ ವಿಗ್ರಹಕ್ಕೆ ವಿಶೇಷ ಕಳೆ ಬಂದಿರುತ್ತದೆ.

***ವಿಘ್ನೇಶ್ವರ :*** ತ್ರುಟಿತಗೊಂಡಿರುವ ಶ್ರೀ ಗಜಾನನ ವಿಗ್ರಹವು ನಾರಾಯಣ ದೇವರ ಗರ್ಭಗೃಹದಲ್ಲಿ ಗೋಚರಿಸುತ್ತಿದೆ.

ವಿಗ್ರಹವನ್ನು ಬೇರೆ ಎಲ್ಲಿಂದಲೋ ತಂದು ಪ್ರತಿಷ್ಠಿಸಿರ ಬಹುದು. ಇದಕ್ಕೆ ಶಿಲ್ಪಿಯು ಕಪ್ಪು ಶಿಲೆಯನ್ನು ಬಳಸಿ ಕೆತ್ತಿದ್ದಾನೆ. ಸುಖಾಸೀನದಲ್ಲಿ ಕುಳಿತ ವಿಘ್ನೇಶನಿಗೆ ಚತುರ್ಭುಜಗಳಿದ್ದು ತ್ರಿಶೂಲ, ಕಳಶ, ಶುಭಾಶೀರ್ವಾದ ಹಸ್ತ, ಅಂಕುಶವನ್ನು ಹೊಂದಿದ್ದಾನೆ.

ಈ ಮೇಲಿನ ಎಲ್ಲ ಐತಿಹ್ಯಗಳ ಆಧಾರವನ್ನು ಪರಿಗಣಿಸಿದರೆ ಉಮಚಗಿ ಗ್ರಾಮವು ಕ್ರಿ. ಶ. ೧೧ನೇ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರ ಅರಸ ಆರನೆ ವಿಕ್ರಮಾದಿತ್ಯನ ಆಡಳಿತಕ್ಕೆ ಒಳಪಟ್ಟಿತ್ತು ಹಾಗೂ ಇದೊಂದು ವೈಷ್ಣವ ಧರ್ಮದ ಜಾಗೃತ ಕೇಂದ್ರವಾಗಿತ್ತೆನ್ನಬಹುದು. ಶಿವ, ವಿಷ್ಣುವಿನ ವಿಗ್ರಹಗಳು ಹಾಗು ಇತ್ತೀಚಿನ ಧಾರ್ಮಿಕ ವಸ್ತುಗಳು ಲಭ್ಯವಾಗಿದ್ದರಿಂದಲೂ ಮತ್ತು ಈ ಊರಿನ ಪ್ರಮುಖ ಇತಿಹಾಸ ಪರಿಶೀಲಿಸಿದರೆ ಕಲ್ಯಾಣದ ಚಾಲುಕ್ಯರ ಪ್ರಸಿದ್ಧ ಸ್ಥಳ ಇದಾಗಿತ್ತೆಂದು ತಿಳಿಯುತ್ತದೆ. ಅವರ ಮಾಂಡಲಿಕರು ಇದನ್ನು ಆಳುತ್ತಿದ್ದು ಅವರ ಪ್ರಮುಖ ಸಾಂಸ್ಕೃತಿಕ ಪರಂಪರೆಯ ಸಂಕೇತದ ಕುರುಹುಗಳನ್ನು ಈ ಗ್ರಾಮದಲ್ಲಿ ನೆಲೆಗೊಳಿಸಿರುವ ಸಾಧ್ಯತೆಗಳಿವೆ.



(ಸಂಶೋಧನೆ ಕಾರ್ಯ ಕೈಗೊಳ್ಳಲು ಸರ್ವ ಶ್ರೀ ಶಿವಯೋಗಿ ಅರಳಿ, ಎಸ್. ಇ. ಇಂಗಳಹಳ್ಳಿ, ಗೊಜನೂರ, ಮಾಕಣ್ಣವರ, ಜಗದೀಶ ಮಲ್ಲಿಗವಾಡ ಹಾಗೂ ಸಹಕರಿಸಿದ ಪ್ರಾಚಾರ್ಯ ಎ. ಎಲ್. ಪೋಲಿಸ್ ಪಾಟೀಲರಿಗೆ ಕೃತಜ್ಞತೆಗಳನ್ನು ಅರ್ಪಿಸದಿರಲಾರೆ. ಛಾಯಾಚಿತ್ರ ಗ್ರಾಹಕ ಶ್ರೀ ವೀರೇಶ್ ಮಳಿಮಠ ಇವರಿಗೂ ಕೃತಜ್ಞತೆಗಳು)

ಅಶೋಕ್ ಕೆ. ಕಂದಗಲ್ಲ*

# ಬೇವೂರಿನಲ್ಲಿ ದೊರೆತ ಕಾರ್ತಿಕೇಯನ ಕಂಚಿನ ವಿಗ್ರಹ

ಶಾಸನೋಕ್ತ ಪ್ರಾಚೀನ ಕಿರಿಯಬೇಹೂರು ಗ್ರಾಮ ಇಂದು ಬಾಗಲಕೋಟೆಯಿಂದ ೨೫ ಕಿ.ಮೀ. ದೂರದಲ್ಲಿರುವ ಬೇವೂರು ಎನಿಸಿದೆ. ಈ ಗ್ರಾಮ ೨ ಶಾಸನಹೊಂದಿರುವಲ್ಲಿ ಮೊದಲನೆಯದು ಕಲ್ಯಾಣಿ ಚಾಲುಕ್ಯ ದೊರೆ ಮೊದಲನೇ ಸೋಮೇಶ್ವರನ ಕಾಲದ್ದು. ಇದರಲ್ಲಿ ಮಹಾಮಂಡಳೇಶ್ವರ ನೊಳಂಬಾಧಿರಾಜನಿಂದ ಕಿರಿಯಬೇಹೂರು ದೇವಾಲಯಕ್ಕೆ ಭೂಮಿಗಳನ್ನು ದಾನ ಬಿಟ್ಟ ವಿಷಯವಿದೆ.*[೧] ಎರಡನೆಯದು ವೀರಗಲ್ಲು ಶಾಸನವಾಗಿದ್ದು, ಲಿಪಿಗಳ ಆಧಾರದ ಮೇಲೆ ಕ್ರಿ. ಶ. ೧೪ನೇ ಶತಮಾನದ್ದಾಗಿದ್ದು ಇದರಲ್ಲಿ ನಾರಣ್ಣನ ಮರಣ ಮತ್ತು ಅವನ ಸ್ಮರಣಾರ್ಥವಾಗಿ ನಿಲ್ಲಿಸಿದ ಸ್ಮಾರಕ ಶಿಲೆಯಾಗಿದೆ.*[೨]

ಈ ಗ್ರಾಮದ ಪೂರ್ವಕ್ಕೆ ಸುಮಾರು ೩ ಕಿ.ಮೀ. ದೂರದಲ್ಲಿರುವ ಶ್ರೀಯುತ ಸುರೇಶ ಸಂ. ಆದಾಪೂರವರ ಹೊಲದಲ್ಲಿನ ಈ ವಿಗ್ರಹವು ಕಾರ್ತಿಕೇಯನದಾಗಿದೆ. ಶಿವನ ಪರಿವಾರದಲ್ಲಿ ಅವನ ಮಗನೆಂದು ಹೆಸರಾದ ಕಾರ್ತಿಕೇಯ ದೇವತೆಗೆ ಮುರುಗ, ಷಣ್ಮುಖ, ಸುಬ್ರಮಣ್ಯ, ಕುಮಾರ, ಬಾಲಸ್ವಾಮಿ, ಕಾರ್ತಿಕೇಯ ಇತ್ಯಾದಿ ಹೆಸರುಗಳಿವೆ. ಶಿವನ ಮುಖಗಳಿಂದ ಹೊರಹೊಮ್ಮಿದ ಆರು ಕಳೆಗಳ ತೇಜಸ್ಸನ್ನು ಅಗ್ನಿಯೂ ವಾಯುವೂ ಒಯ್ದು ಶರವಣ ಸರೋವರದಲ್ಲಿ ಇರಿಸಿದರಂತೆ; ಅಂತಾಗಿ ಶರವಣಭವನಾದ. ಅಲ್ಲಿ ಆರು ಕೃತ್ತಿಕೆಯರು ಅದನ್ನು ಬೆಳೆಸಿದರು; ಕಾರ್ತಿಕೇಯನಾದ.*[೩]

ಸದ್ಯ ದೊರೆತಿರುವ ಈ ಕಾರ್ತಿಕೇಯನು ನವಿಲಿನ ಮೇಲೆ ಕುಳಿತಿದ್ದು, ಹಿಂದಿನ ಎಡಗೈಯಲ್ಲಿ ವಜ್ರಾಯುಧ, ಬಲಗೈಯಲ್ಲಿ ಶಕ್ತ್ಯಾಯುಧ ಹೊಂದಿದ್ದಾನೆ. ಮುಂದಿನ ಬಲಗೈ ಅಭಯ ಮುದ್ರೆ, ಎಡಗೈ ವರದ ಮುದ್ರೆಯಲ್ಲಿದೆ. ಬೃಹತ್ಸಂಹಿತೆಯು ಇವನನ್ನು 'ಬರ್ಹಿಕೇತು' ಎಂದರೆ ನವಿಲಿನ ಧ್ವಜವುಳ್ಳವನು ಎಂದು ಬಣ್ಣಿಸಿದೆ. ನವಿಲನ್ನೇರಿ ಕುಳಿತಂತೆ, ನವಿಲ ಬಳಿ ನಿಂತಂತೆ ಈ ದೇವತೆಯಿದ್ದಾಗ 'ಶಿಖಿವಾಹನ' ಎನಿಸಿಕೊಳ್ಳುತ್ತಾನೆ. ಸ್ಥಾನಕಭಂಗಿಯಲ್ಲಿ ಒಂಟಿಯಾಗಿದ್ದು ಚತುರ್ಭುಜಗಳಿದ್ದಾಗ ಅದು ಸುಬ್ರಮಣ್ಯನ ರಾಜಸಿಕ ಮೂರ್ತಿಯೆಂದು ಕರೆಯುತ್ತಾರೆ. ಈ ಕಾರ್ತಿಕೇಯನು ಕಿರೀಟ ಮುಕುಟನಾಗಿದ್ದು, ಕಿರೀಟದಲ್ಲಿ ಶಿಖಾಮಣಿ, ರತ್ನಪಟ್ಟಿ, ಕಿವಿಯಲ್ಲಿ ಪತ್ರಕುಂಡಲ, ಮಕರಕುಂಡಲದ ಅಲಂಕರಣೆಯಿದೆ. ಎದೆಯ ಮೇಲೆ ಕಂಠಿ, ಹಾರ, ಯಜ್ಞೋಪವೀತ ಮುಂತಾದ ಅಲಂಕಾರಿಕ ವಸ್ತುಗಳಿವೆ. ಈ ಕಾರ್ತಿಕೇಯ ಆಸೀನ ನವಿಲಿನ ರೆಕ್ಕೆಗಳು ಸಮಭಂಗಿಯಲ್ಲಿದ್ದು, ಗರಿ ಬಿಡಿಸದೆ ಇಳಿಬಿಟ್ಟಿದೆ. ಈ ನವಿಲು ಎರಡೂ ಕಾಲುಗಳನ್ನು ಹಿಂದೆ-ಮುಂದೆ ಇಟ್ಟಿದ್ದು ಕಾಲುಗಳು ಭಗ್ನಗೊಂಡಿವೆ. ನವಿಲಿನ ಮೂಗಿನಲ್ಲಿ ಮೂಗುದಾರದ ರಚನೆಯಿದ್ದು ಅದು ಕೂಡಾ ಭಗ್ನವಾಗಿದೆ.

ಈ ಗ್ರಾಮದ ಪರ್ವತಪ್ಪನ ದೇವಾಲಯ, ಸಂಗಮೇಶ್ವರ ದೇವಾಲಯ ಮತ್ತು ಕಾಳಮ್ಮನ ದೇವಾಲಯಗಳು ಸುಸ್ಥಿತಿಯಲ್ಲಿದೆ. ಇವುಗಳು ಬಾದಾಮಿ ಚಾಲುಕ್ಯರ ಕೊನೆಯ ಕಾಲಾವಧಿಯ ಲಕ್ಷಣಗಳನ್ನಲ್ಲದೆ ಕಲ್ಯಾಣಿ ಚಾಲುಕ್ಯರ ದೇವಾಲಯಗಳ ಕಾಲದ ಲಕ್ಷಣವನ್ನು ಕೂಡಾ ಹೊಂದಿವೆ. ಈ ದೇವಾಲಯಗಳು



*ಅಂಚೆ/ವಸತಿ ಸುತಗುಂಡಾರ, ತಾ/ಜಿ. ಬಾಗಲಕೋಟೆ - ೫೮೭ ೨೦೩.

ಶೈವಧರ್ಮಕ್ಕೆ ಸಂಬಂಧಿಸಿರುವದರಿಂದ, ಕಾರ್ತಿಕೇಯನು ಕೂಡಾ ಶಿವನ ಪರಿವಾರದವನಾಗಿರುವದರಿಂದ ಈ ಸ್ಥಳ ಒಂದು ಶೈವ ಕೇಂದ್ರವಾಗಿತ್ತೆಂದು ಹೇಳಬಹುದು.

ಈ ವಿಗ್ರಹವು ಸುಮಾರು ೧೬ನೇ ಶತಮಾನಕ್ಕೆ ಸೇರಿದ್ದೆನ್ನ ಬಹುದು. ಈ ವಿಗ್ರಹಕ್ಕೆ ಕರಂಡ ಮುಕುಟವಿದೆ. ವಿಜಯನಗರ ಕಾಲದ ಮೂರ್ತಿಗಳಲ್ಲಿ ಕರಂಡ ಮುಕುಟದ ಬಳಕೆ ವ್ಯಾಪಕವಾಗಿದ್ದು, ಇದು ಕೂಡಾ ವಿಜಯನಗರ ಕಾಲಕ್ಕೆ ಸಂಬಂಧಿಸಿದ್ದೆಂದು ಹೇಳಬಹುದು. ಹಂಪೆಯ ವಿರುಪಾಕ್ಷ ದೇವಾಲಯದ ನವರಂಗದ ಎಡಗಡೆಯ ಗೋಡೆಯ ಮೇಲೆ ಕೋಷ್ಠವಿದ್ದು, ಆ ಕೋಷ್ಠದಲ್ಲಿ ಕಾರ್ತಿಕೇಯನ ವಿಗ್ರಹವಿದೆ. ನಮಗೆ ದೊರೆತಿರುವ ಕಾರ್ತಿಕೇಯನಿಗೂ ಈ ಕೋಷ್ಠದಲ್ಲಿರುವ ಕಾರ್ತಿಕೇಯನಿಗೂ ಸಾಮ್ಯತೆ ಇರುವದರಿಂದ ಇದು ವಿಜಯನಗರದ ಕಾಲಕ್ಕೆ ಸೇರಿದ್ದೆಂದು ನಿಖರವಾಗಿ ಹೇಳಬಹುದಾಗಿದೆ. ಒಟ್ಟಿನಲ್ಲಿ ಈ ವಿಗ್ರಹವು ಶಿವನ ಪರಿವಾರದವನಾದ ಕಾರ್ತಿಕೇಯನು ವಿಶ್ವಪರ್ಯಟನೆಗಾಗಿ ನವಿಲಿನ ಮೇಲೆ ಹೊರಟ ಪೌರಾಣಿಕ ದೃಶ್ಯವನ್ನು ನೆನಪಿಸುತ್ತದೆ.



(ನನ್ನ ಸಂಶೋಧನೆಗೆ ನೆರವಾಗಿರುವ ಸರ್ವ ಶ್ರೀ ಎಚ್. ಬಿ. ಸುಂಕದ, ಶ್ರೀಮತಿ ಡಾ।। ಚೆನ್ನಕ್ಕ ಪಾವಟೆ, ಎಸ್. ರಾಜೇಂದ್ರಪ್ಪ, ಶ್ರೀ ಭಟ್ಟಸೂರಿಯವರಿಗೆ ಮತ್ತು ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಸುರೇಶ ಆದಾಪೂರ ಮತ್ತು ಆರ್. ಆಯ್. ಗೌಡರ ಮತ್ತು ಮಹೇಶಕುಮಾರ ಪಾಟೀಲರಿಗೆ ನನ್ನ ಕೃತಜ್ಞತೆಗಳು.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. **ಸೌಥ್ ಇಂಡಿಯನ್ ಇನ್ಸಕ್ರಿಪ್ಷನ್ಸ್**, ಸಂಪುಟ XI-i, ಪುಟ ೧೦೫.
*೨. ಅದೇ, ಸಂಪುಟ XV, ಪುಟ ೬೫೪.
*೩. ಎಸ್. ಕೆ. ರಾಮಚಂದ್ರರಾವ್, **ಮೂರ್ತಿಶಿಲ್ಪ ನೆಲೆ-ಹಿನ್ನೆಲೆ.**
*೪. **ವಿಜಾಪೂರ ಜಿಲ್ಲಾ ಗ್ಯಾಜೆಟಿಯರ್.**

ಡಾ. ಕೆಳದಿ ವೆಂಕಟೇಶ ಜೋಯಿಸ್*

# ಕೆಳದಿ ವೀರಮ್ಮಾಜಿ ಕಾಲದ ಶೃಂಗೇರಿ ಸ್ಪಟಿಕ ಲಿಂಗ

ಕ್ರಿ. ಶ. ೧೬ನೆಯ ಶತಮಾನದಲ್ಲಿ ಉದಯಗೊಂಡ ಕೆಳದಿ ಸಂಸ್ಥಾನ ವಿಜಯನಗರದ ನಂತರದಲ್ಲಿಯೂ ಪ್ರಮುಖ ಸ್ಥಾನವನ್ನು ಪಡೆದಿದೆ. ವಿಜಯನಗರದ ಮಗುವಿನೋಪಾದಿಯಲ್ಲಿ ರೂಪುಗೊಂಡ ಕೆಳದಿ ಕ್ರಿ. ಶ. ೧೫೬೫ರ ತಾಳೀಕೋಟೆಯುದ್ದದ ನಂತರ ಸ್ವಾಯತ್ತತೆಯನ್ನು ಪಡೆಯಿತು. ಹಾಗಿದ್ದು ಇದು ವಿಜಯನಗರವನ್ನು ಯಾವ ರೀತಿಯಿಂದಲೂ ಅಲಕ್ಷಿಸದೆ ಅವರಂತೆಯೇ ಧಾರ್ಮಿಕ ಕಟ್ಟುಪಾಡುಗಳಲ್ಲಿ ಆ ಸಾಮ್ರಾಜ್ಯದ ಪರಂಪರೆಯಲ್ಲಿ ತನ್ನದೇ ಆದ ನೀತಿ ನಡತೆಗಳನ್ನು ಚಾಚೂತಪ್ಪದೆ ಅನೂಚಾನವಾಗಿ ಪಾಲಿಸಿ ಕಾಯ್ದುಕೊಂಡು ಬಂದಿರುವುದನ್ನು ಇತಿಹಾಸದುದ್ದಕ್ಕೂ ಗಮನಿಸಬಹುದಾಗಿದೆ. ಅಲ್ಲದೆ ಕೆಳದಿ ಅರಸರು ಧಾರ್ಮಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಗಳಲ್ಲಿ ಹಿರಿದಾದ ಸ್ಥಾನ ಗಳಿಸಿಕೊಂಡಿದ್ದರೆನ್ನಬಹುದು.

**ಶಿವತತ್ವರತ್ನಾಕರದಲ್ಲಿ:**

ರಣೇ ವನೇ ಜಲೇ ಶೈಲೇ ಸುಪ್ತಂ ಮತ್ತಂ ಚ ದೇಹಿನಮ್
ಪುರಾಕೃತಾನಿ ಪುಣ್ಯಾನಿ ರಕ್ಷಂತೀತಿ ನ ವಾರ್ಜಮೃಷಾ॥

- ಎಂದಿರುವಂತೆ ದೈವದತ್ತವಾಗಿ ಕೆಲವು ವಿಶೇಷ ಸಂಗತಿಗಳು ಕೆಳದಿ ಅರಸರ ಕಾಲದಲ್ಲಿ ಸಂಭವಿಸಿದವು. ಈ ಹಿನ್ನೆಲೆಯಲ್ಲಿ ಕೆಳದಿ ಅರಸರಿಂದ ಶೃಂಗೇರಿ ಮಠವು ವಿಶೇಷ ಮಾನ್ಯತೆ ಪಡೆದಿತ್ತು. ಮಠಕ್ಕೆ ಕೆಳದಿ ಸದಾಶಿವನಾಯಕ ಮೊದಲುಗೊಂಡು ವೀರಮ್ಮಾಜಿಯವರೆಗೆ ಪ್ರತಿಯೊಬ್ಬರ ಅವಧಿಯಲ್ಲಿಯೂ ವಿಶೇಷ ಮಾನ್ಯತೆ ದೊರಕಿರುವುದನ್ನು ಗಮನಿಸಬಹುದು. ಪ್ರಸ್ತುತ ಇಲ್ಲಿ ಕೆಳದಿ ವೀರಮ್ಮಾಜಿ ಕಾಲದ 'ಶೃಂಗೇರಿ ಸ್ಪಟಿಕಲಿಂಗ' ಕ್ಕೆ ಸಂಬಂಧಿಸಿದಂತೆ ಚರ್ಚಿಸಲು ಪ್ರಯತ್ನಿಸಲಾಗಿದೆ.

***ಆಕರಗಳು***

ಕೆಳದಿ-ಶೃಂಗೇರಿಗೆ ಸಂಬಂಧಿಸಿದಂತೆ ತಾಮ್ರಶಾಸನಗಳು ಕಡತಗಳು ನಿರೂಪಗಳು ಕೆಳದಿ-ಶೃಂಗೇರಿ ಸಂಬಂಧವನ್ನು ಸೋದಾಹರಣವಾಗಿ ವಿವರಿಸುತ್ತವೆ. ಗುರುವಂಶ ಕಾವ್ಯ, ಕೆಳದಿ ನೃಪವಿಜಯ, ಬಸವರಾಜಕೃತ ಶಿವತತ್ವರತ್ನಾಕರ ಮೊದಲಾದ ಗ್ರಂಥಗಳಲ್ಲಿಯೂ ಐತಿಹಾಸಿಕ ದಾಖಲೆಗಳಲ್ಲಿಯೂ ಕೆಳದಿ-ಶೃಂಗೇರಿ ಕುರಿತ ಮಾಹಿತಿ ದೊರೆಯುತ್ತದೆ. ಕೆಳದಿ ವೀರಮ್ಮಾಜಿಯು ಅಭಿನವ ಸಚ್ಚಿದಾನಂದ ಭಾರತಿ ಸ್ವಾಮಿಗಳವರನ್ನು ಕೆಳದಿ ರಾಜಧಾನಿಗೆ ಕರೆಸಿ ಗೌರವಿಸಿರುವುದನ್ನು ಕೆಳದಿ ನೃಪವಿಜಯವು

*...... ಸದ್ಧರ್ಮದಿಂ ರಾಜಪ್ರತಿಪಾಲನಗೆಯ್ಯುತ್ತಾಮಿರ್ದು ಶೃಂಗಪುರದ ಧರ್ಮಸಂಸ್ಥಾನದ ಸ್ವಾಮಿಗಳ ಮಠಕ್ಕೆ ಬಹಳ ಋಣಭಾರಮಾಗಿರ್ಪುದೆಂಬ ವರ್ತಮಾನಮಂ ಕೇಳ್ದಲ್ಲಿಗೆ ಚಿನ್ನ ಭಂಡಾರದ ಪುರುಷೋತ್ತಮಯ್ಯನ ಮಗ ಹೂವಯ್ಯನಂ ಕಳುಪಿ ಅಭಿನವ ಸಚ್ಚಿದಾನಂದ ಸ್ವಾಮಿಯವರಂ ವೇಣುಪುರಕ್ಕೆ ಬಿಜಯ ಮಾಡಿಸಿದಳ್*[೧]

ಅಂದರೆ ವೀರಮ್ಮಾಜಿಯು ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದಾಗ ಶೃಂಗೇರಿಯ ಧರ್ಮಸಂಸ್ಥಾನಕ್ಕೆ ಹಾಗೂ ಸ್ವಾಮಿಗಳ ಮಠಕ್ಕೆ ಬಹಳವಾಗಿ ಸಾಲವಾಗಿದೆ ಎಂಬುದಾಗಿ ವರ್ತಮಾನವು ಬಂದಿತು. ಅದನ್ನು ಕೇಳಿ ತಿಳಿದ ರಾಣಿಯು ಅಲ್ಲಿಗೆ ಚಿನ್ನಭಂಡಾರದ ಪುರುಷೋತ್ತಮಯ್ಯನ ಮಗ ಹೂವಯ್ಯನನ್ನು ಕಳುಹಿಸಿ ಅಭಿನವ ಸಚ್ಚಿದಾನಂದ ಭಾರತಿ ಸ್ವಾಮಿಗಳನ್ನು ವೇಣುಪುರಕ್ಕೆ ಬರಮಾಡಿಕೊಂಡಳು.*[೨]

ಕಂ॥ ಭಾವಿಸೆ ಬರ್ಪಾ ನಾಮದ
ಚಾವಡಿಗೈತಂದು ನಿರದು ಕರದೊಯ್ದೊಲವಿಂ
ದಾ ವಿಲಸಿತವಹ ಬಣ್ಣದ
ಚಾವಡಿಯೊಳ್ ಭೇಟಿಗೊಂಡು ಪರಮೋತ್ಸವದಿಂ

ನೆರೆಯುಚಿತಮಾದ ಮಿಗಿಲುಡು
ಗೊರೆಗಳನಿತ್ತವರನ್ನೆದೆ ಸನ್ಮಾನಿಸಿಯಾ
ದರಿಸಿ ಬೀಳ್ಕೊಟ್ಟು ಬಳಿಕಂ
ವರವೃಷವನದೆಡೆಯನ್ನೆದೆ ಶೃಂಗರಿಸುತ್ತುಂ

ನೆರೆರಮ್ಯಮಾಗಿ ಸತತಂ
ಮಿರುಪಾ ಸ್ಥಳ ಕಾ ಯತೀಂದ್ರನಂ ಕರದೊಯ್ದಾ
ದರದಿಂ ಭಿಕ್ಷವನಾಗಿಸಿ
ಪಿರಿದೆನೆ ಸಂತುಷ್ಟಿಪಡಿಸಿ ಕಳುಪಿ ಬಳಿಕ್ಕಂ॥

ಪುರದೊಳ್ ಪ್ರತಿದಿನಗಳೊಳಂ
ಗುರಿಕಾರರಿನೆಸೆವ ಪರದರಿಂದಂ ಹೆಜ್ಜ
ಬರಿಸುರುಭಿಕ್ಷವನಾಗಿಸಿ
ನೆರೆ ಸಂತಸವಡಿಸಿದಳ್ ದಲಾ ಯತಿವರನಂ.

*ವ॥ ಮತ್ತ ಮದಲ್ಲದಾ ತರುವಾಯಿಯೊಳಾ ಸ್ವಾಮಿಗಳ್ಗತ್ಯಂತ ದಿವ್ಯಮಾದ ಸ್ಪಟಿಕ ಲಿಂಗಮುಮಂ ಅನರ್ಘ್ಯರತ್ನ ಖಚಿತಗೋಪಾಲ ಕೃಷ್ಣ ಮೂರ್ತಿಯುಮಂ ಪದಕ ತಾಳಿ ಸರವಣಿ ಸಹಿತಂ ಶಿವಾರ್ಪಿತಮಾಗಿ ಧಾರೆಯನೆರೆದು ಮತ್ತ ಮಾದೇವರ್ಗೆಪ್ಪತ್ತು ನಾಲ್ಕು*

*ಕೆಳದಿ ಮ್ಯೂಸಿಯಂ, ಕೆಳದಿ - ೫೭೭ ೪೦೧.

ವರಹದ ಭೂಸ್ವಾಸ್ಥೆಯಂ ನಿರೂಪಮಂ ಬರೆಸಿತ್ತು ಮತ್ತಮಂತುಮಲ್ಲದೆ ಶೃಂಗಪುರದ ಮಠಕ್ಕೋಸುಗಂ ತನ್ನ ಭಕ್ತಿಯಿಂ ಬೇರೆ ಮುನ್ನೂರು ವರಹದ ಭೂಸ್ವಾಸ್ಥೆಯಂ ಶಿವಾರ್ಪಿತಮಾಗಿ ಉತ್ತಾರಮಂ ಮಾಡಿಸಿ ಅಕಾಲ ಚಕ್ರದೊಳ್ ಕೊಳುತ್ತಿರ್ದುತ್ತಾರ ಪಗುದಿಯಂ ಬಿಡಿಸಿ ಆ ಮಠದ ಋಣಭಾರಕ್ಕೆ ಉಚಿತವರಿತು ಖಂಡಿತ ಕಾಯಕಂಗಳಂ ಮಾಡಿಸಿಕೊಟ್ಟು ಮೇಲೆ ನಿಪ್ಪುಡುಗೊರೆಯುಚಿತ ಮುಂತಾದು ಪಚಾರಂಗಳಿಂ ಪಿರಿದು ಸನ್ಮಾನಿಸಿ ಸಂತಸಂಬಡಿಸಿ ತೆರಳ್ಚಿ ಕಳುಪಿದ ಳಂತು ಮಲ್ಲದೆಯುಂ.....

.....ಸ್ವಾಮಿಗಳು ಬರುತ್ತಿದ್ದಾಗ ಆ ನಾಮದ ಚಾವಡಿಗೆ ಬಂದು ನಿಂತು ಅಲ್ಲಿಂದ ಪ್ರೀತಿಯಿಂದ ಕರೆದೊಯ್ದು ಮೆರೆಯುತ್ತಿರುವ ಬಣ್ಣದ ಚಾವಡಿಯಲ್ಲಿ ಹೆಚ್ಚಿನ ಉತ್ಸಾಹದಿಂದ ಸಂದರ್ಶನ ಮಾಡಿ ಉಚಿತವಾದ ಹಾಗೂ ಶ್ರೇಷ್ಠನಾದ ಉಡುಗೊರೆಗಳನ್ನು ಕೊಟ್ಟು ಅವರನ್ನು ಸನ್ಮಾನಿಸಿ ಆದರಿಸಿದಳು. ಶ್ರೇಷ್ಠವಾದ ವೃಷವನದ ಪ್ರದೇಶವನ್ನು ಚೆನ್ನಾಗಿ ಅಲಂಕರಿಸಿ ಸುಂದರವಾಗಿ ಶೋಭಿಸುವ ಆ ಸ್ಥಳಕ್ಕೆ ಯತೀಂದ್ರರನ್ನು ಕರೆದುಕೊಂಡು ಹೋಗಿ ಆದರದಿಂದ ಅವರಿಗೆ ಭಿಕ್ಷವನ್ನು ಮಾಡಿಸಿ ಹೆಚ್ಚು ಸಂತೋಷಪಡಿಸಿ ಕಳುಹಿಸಿ ಕೊಟ್ಟಳು. ತನ್ನ ಪಟ್ಟಣದಲ್ಲಿ ಪ್ರತಿದಿನವೂ ಗುರಿಕಾರರುಗಳಿಂದಲೂ ರತ್ನ ವ್ಯಾಪಾರಿಗಳಿಂದಲೂ ಗಣ್ಯರುಗಳಿಂದಲೂ ಭಿಕ್ಷವನ್ನು ಮಾಡಿಸಿ ಆ ಯತಿಶ್ರೇಷ್ಠರನ್ನು ಸಂತೋಷಗೊಳಿಸಿದಳು. ಮತ್ತು ಅದಲ್ಲದೆ ಸ್ವಾಮಿಗಳಿಗೆ ದಿವ್ಯವಾದ ಸ್ಫಟಿಕಲಿಂಗವನ್ನು ಅನರ್ಘ್ಯವಾದ ರತ್ನ ಖಚಿತ ಗೋಪಾಲಕೃಷ್ಣಮೂರ್ತಿಯನ್ನು ಪದಕ, ತಾಳಿ ಹಾಗೂ ಸರಪಳಿ ಸಹಿತವಾಗಿ ಶಿವಾರ್ಪಣೆಯೆಂದು ಧಾರೆಯನ್ನೆರೆದಳು. ಮತ್ತು ಆ ದೇವರಿಗೆ ಎಪ್ಪತ್ತನಾಲ್ಕು ವರಹದ ಭೂಸ್ವಾಸ್ಥೆಗೆ ನಿರೂಪವನ್ನು ಬರೆಸಿದಳು. ಇದೂ ಅಲ್ಲದೆ ಶೃಂಗೇರಿಯ ಮಠಕ್ಕೋಸ್ಕರ ತನ್ನ ಭಕ್ತಿಯನ್ನು ಪ್ರದರ್ಶಿಸಿ ಬೇರೆ ಮುನ್ನೂರು ವರಹ ಬೆಲೆ ಬಾಳುವ ಭೂಸ್ವಾಸ್ಥೆಯನ್ನು ಶಿವಾರ್ಪಿತವಾಗಿ ಉಂಬಳಿಯನ್ನಿತ್ತಳು. ಸಮಯವಲ್ಲದೆ ಅಕ್ರಮವಾಗಿ ಸಲ್ಲಿಸುತ್ತಿದ್ದ ಉತ್ತಾರವನ್ನು ಪಗುದಿಯನ್ನು ತಪ್ಪಿಸಿದಳು. ಮಠಕ್ಕೆ ಆಗಿದ್ದ ಸಾಲವನ್ನು ತೀರಿಸಿ ಉಚಿತವರಿತು ಜೀವನಾಂಶವನ್ನು ಒದಗಿಸಿಕೊಟ್ಟು ಶ್ರೇಷ್ಠವಾದ ಉಡುಗೊರೆ ಮತ್ತು ಉಚಿತ ಉಪಚಾರಗಳಿಂದ ಹೆಚ್ಚಾಗಿ ಸನ್ಮಾನಿಸಿ ಸಂತೋಷಪಡಿಸಿ ಕಳುಹಿಸಿ ಕೊಟ್ಟಳು......*೩

**ಶೃಂಗೇರಿ ಕಡತದಲ್ಲಿ ದಾಖಲಾಗಿರುವುದು**

ಈಶ್ವರ ಸಂವತ್ಸರದಲ್ಲಿ ಸೋಮಶೇಖರನಾಯಕರು ಸಿದ್ದಪ್ಪನಾಯಕರ ಮುಖಾಂತರ ಬರೆಸಿ ಕಳಿಸಿದ ಪತ್ರ ಗಮನ ಸೆಳೆಯುತ್ತದೆ. ಇದರಲ್ಲಿ ಸೋಮಶೇಖರನಾಯಕರು, ಅವರ ತಾಯಿ ವೀರಮ್ಮಾಜಿಯು ಕೊಟ್ಟ *ಸ್ಫಟಿಕದ ಚಂನವಿರ ರಾಜೇಶ್ವರದೇವರು*. ರತ್ನಮಯ ವೇಣುಗೋಪಾಲಕೃಷ್ಣ ದೇವರಿಗೆ ಬಿಟ್ಟ ಅಮೃತ ಪಡಿ, ನಂದಾದಿಪ್ತಿ ಮುಂತಾದ ದೇವತಾ ಸೇವೆ ಬಗ್ಗೆ ಉತ್ತಾರ ಕೊಟ್ಟ ಬಗ್ಗೆ ದಾಖಲೆ ತಿಳಿಸುತ್ತದೆ.

**ಶಾಸನದ ಪಾಠ ಈ ರೀತಿ ಇದೆ**

KRASM II K. 17.

೧ ಯೀಶ್ವರ ಸಂವತ್ಸರದ ಮಾಘ ಶು. ೧೨ಲ್ಲು ಶ್ರೀಮತ್ಕೆಳದಿ (ಸೋಮ)ಶೆ(ಖರನಾಯಕ)ರೂ।
೨ ಸಿದ್ದಪ್ಪ ನಾಯಕರಿಗೆ ಬರಸಿಕಳುಹಿದ ಪ್ರಯೋಜನ (ಶೃಂಗೆರಿ ಶ್ರಿಮದಭಿನವ
೩ ಸಚಿದಾನಂದ ಭಾರತಿ ಸ್ವಾಮಿಗಳವರಿಗೆ ಬಿದರೂರಿಗೆ ಬಂದಾಗ ನಂಮ ಮಾತ್ರುಗ
೪ ಳಾದ ವೀರಮ್ಮಾಜಿ ಅಮನವರು ಕೊಟ್ಟ ಸ್ಪಟಿಕದ ಚಂನ ವಿರರಾಜೇಶ್ವರ ದೆವರು
೫ ರತ್ನಮಯ ವೆಣುಗೊಪಾಲಕೃಷ್ಣ ದೆವರಿಗೆ ಸಹ ಅಮ್ರುತ ಪಡಿನಂದಾದಿಪ್ತಿ ಮುಂತಾದ ದೆ
೬ (ವ) ತಾ ಸೆವೆ ಬಗ್ಯೆ ಉತ್ತಾರ ಕೊಟ್ಟುದವ ಆ ಮುಖಾಂತ್ರ ××××
೭ ×× ಬಾಹ ಮೋಲುವಾಸಿ ಸಿಸ್ತಿನಿಂದ ಗ ೩೨೦ ೩॥೦ ಯಿಂಗ ಹೆಚ್ಚಿದು ಪಗುಡಿಯಿಂದ ಗ೧ಕ್ಕೆ ೧।೦
೮ ಗಳಂ॥೦ ಉಭಯಂ ××××× ವಿವರ ಚಂನವಿರ ರಾಜೆಶ್ವರ ದೆವರ ಅಮ್ರುತ
೯ (ಪ)ಡಿ ನಂದಾದಿಪ ಮುಂತ್ತಾದ ದೆವತಾ ಸೆವೆ ಬಗ್ಯೆ ಗ ೩೩೬ ೪ ರತ್ನಮಯ ವೇಣುಗೊಪಾಲ
೧೦ ಕೃಷ್ಣದೇವರ ಅಮ್ಮುತಪಡಿ ನಂದಾದಿಪ್ತಿ ಬಗ್ಯೆಗ ೨೪ ಉಭಯಂ ಗ ೩೬೦ ೪ ಮುಂನೂರ ಅ
೧೧ ರವತ್ತು ವರಹಾನು ನಾಲ್ಕು ಹಣವಿನ ಸ್ವಾಸ್ತಿಯನು ಶಿವಾರ್ಪಿತವಾಗಿ ಉತ್ತಾರವ ಕೊ
೧೨ ಟ್ಟದೆವೆ ಪ್ರಮಾಣ ಭೂಮಿ ವಿಂಗಡಿಕೊಟ್ಟು ಯಿ ಕಾಗದವ ಸೇನಬಾವರ ಕಡಿತಕ್ಕೆ ಬರ್‍ಸಿ
೧೩ ತಿರಿಗಿ ಕೊಡುವ ಹಾಗೆ ಕಟ್ಟು (ಮಾಡುವದಾಗಿ)....*೪

ಮುದ್ರೆ ಇದೆ.

ಈ ದಾಖಲೆಯು ತಾಯಿ ವೀರಮ್ಮಾಜಿ ಜೊತೆ ಆಡಳಿತ ನಡೆಸಿದ ಮೂರನೇ ಸೋಮಶೇಖರ ನಾಯಕನ ಕಾಲದ್ದಾಗಿದ್ದು ಇದರಿಂದ ಕೆಳದಿ ನೃಪವಿಜಯದಲ್ಲಿ ದಾಖಲಿಸಿರುವವಂತೆ ಸ್ಫಟಿಕಲಿಂಗ ಮತ್ತು ರತ್ನಮಯ ಗೋಪಾಲಕೃಷ್ಣ ವಿಗ್ರಹವನ್ನು ಶೃಂಗೇರಿ ಮಠಕ್ಕೆ ವೀರಮ್ಮಾಜಿಯು ದಾನವಾಗಿ ನೀಡಿದುದನ್ನು ಪ್ರತಿಪಾದಿಸುತ್ತದೆ.

ಶೃಂಗೇರಿಯ ಮಠದಲ್ಲಿ ಇಂದಿಗೂ ಸಹ ಈ ಸ್ಫಟಿಕಲಿಂಗ ಹಾಗೂ ರತ್ನಮಯ ಗೋಪಾಲಕೃಷ್ಣ ವಿಗ್ರಹಗಳಿದ್ದು ಅವುಗಳಿಗೆ ಗುರುಗಳಿಂದ ಪ್ರತಿನಿತ್ಯ ಪೂಜೆ ನಡೆಯುವುದನ್ನು ನೋಡ ಬಹುದಾಗಿದೆ*.

ಕೆಳದಿ ಸೋಮಶೇಖರ ನಾಯಕನ ಇನ್ನೊಂದು ದಾಖಲೆಯೂ ಗಮನ ಸೆಳೆಯುತ್ತದೆ : ವಿವರ ಹೀಗಿದೆ....

*ನಂ. ೧೪೬ (ಕಾಟು ಹೊಡೆದಿದೆ)*

× ಳಂಗೆ ವೆಂಕಟರಮಣ ದೆವರು ಅರ್ಚಕ ಶ್ರೀ ವೈಷ್ಣವ ತ್ರಿಂಮಣಾಚಾರ್ರು ಫವತಿ ಮಗ ಶ್ರೀನಿವಾಸಾ ಚಾರ್ರು ಹಲ್ಲಿ ಪೂಜೆ ಮಾಡುತ್ತಾನೆ.

ಶಿವಲ್ಲಿ ಪುರಗ್ರಾಮದಲ್ಲಿ.........

ರುಧಿರೊದ್ಗಾರಿ ಸಂ॥ದ ಕಾರ್ತಿಕ ಸುಧ ೧೦ಯಲ್ಲೂ ಬಿಕರ್ರ ರಾಮರಾಯರ್ರು ×ದಾಖ್ಲು ಮಾಡಿದ್ದಾ ಪ್ರಕಾರ್ರ ಸಾಬಕ್ಕು ರಾಕ್ಷಸ ಸಂ॥ ದಮಾಗ ಸುಧ ೧೦ಯೆಲ್ಲೂ ಸೋಮಶೆಖರ ನಾಯ್ಕರ್ರನಿರುಪ್ಪ ಪ್ರಕಾರ್ರ ಹೈದರ್ರಿ ೬೦ ⌊೦ ಶಿಸ್ತು.....

ಈ ದಾಖಲೆಯು ಕೆಳದಿ ಕಾಲದ ಧಾರ್ಮಿಕ ಸ್ಥಿತಿಯನ್ನು ಪ್ರತಿಪಾದಿಸುತ್ತದೆ. ಇಂತಹ ಹಲವಾರು ದಾಖಲೆಗಳು ಕಡತಗಳಲ್ಲಿ ಕಂಡುಬರುತ್ತವೆ.

*ಉಪಸಂಹಾರ*

ಈಗ ದೊರೆತಿರುವ ಶೃಂಗೇರಿ ಮಠದ ದಾಖಲೆ - ಅಂತೆಯೇ ಮಠದಲ್ಲಿ ಬಳಸುತ್ತಿರುವ ದೇವತಾವಸ್ತುಗಳು ಕೆಳದಿ ಅರಸರ ಸಮನ್ವಯ ದೃಷ್ಟಿಯನ್ನು ತೋರಿಸುತ್ತವೆ. ಇಂತಹ ದಾಖಲೆಗಳು ಇನ್ನೂ ಸಾಕಷ್ಟು ದೊರೆತಿದ್ದು ಅವುಗಳ ಕುರಿತು ಶೋಧನೆ ನಡೆದಿದೆ.



(ಈ ಪ್ರಬಂಧ ರಚನೆಗೆ ನೆರವು ಮಾರ್ಗದರ್ಶನ ನೀಡಿದ ಶ್ರೀ ಕೆಳದಿ ಗುಂಡಾ ಜೋಯಿಸ್, ಪ್ರೊ. ಎ. ಕೆ. ಶಾಸ್ತ್ರಿ, ಪೂಜ್ಯ ಶ್ರೀ ಶ್ರೀಗಳು, ಶ್ರೀ ಗೌರಿಶಂಕರ, ಆಡಳಿತಾಧಿಕಾರಿಗಳು ಶ್ರೀ ಹೆಚ್. ಅಶೋಕ ಅವರುಗಳನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಕೆನ್ಯವಿ ಕಸಾಪ ೧೯೭೭ ಪು. ೩೦೨.

*೨. ಎಂ.ಜಿ.ವಿ.ಪಿ. ೧೧೭೯ ರ ಶಾಸನದ ಅನ್ವಯ ನರಸಿಂಹಭಾರತಿ ಸ್ವಾಮಿಗಳವರು ಕ್ರಿ. ಶ. ೧೭೫೪ರಲ್ಲಿ ಜಗದ್ಗುರುಗಳಾಗಿದ್ದರು. ಶೃಂಗೇರಿ ಮಠದ ಪಟ್ಟಿಯಲ್ಲಿ ಕ್ರಿ. ಶ. ೧೭೬೭ರಲ್ಲಿ ಅಭಿನವ ಸಚ್ಚಿದಾನಂದ ಭಾರತಿ ಸ್ವಾಮಿಗಳು ಜಗದ್ಗುರುಗಳಾಗಿದ್ದ ಬಗ್ಗೆ ತಿಳಿಯುತ್ತದೆ. ಎಂ.ಜಿ.ಓ. ೩೦೭ರ ಪ್ರಕಾರ ಕ್ರಿ. ಶ. ೧೭೬೭ರಲ್ಲಿ ನರಸಿಂಹ ಭಾರತಿಗಳು ಜಗದ್ಗುರುಗಳೆಂದು ತಿಳಿಯುತ್ತದೆ. ಶಾಸನ ಮತ್ತು ಮಠದ ದಾಖಲೆಗಳು ತಿಳಿಸುವ ವಿವರಗಳು ತದ್ವಿರುದ್ಧವಾಗಿವೆ. (**A History of Sringeri**., Dr. A. K. Shastry, Prasaranga, Karnataka University, Dharwad 1982. p. 27-34).

*೩. ಕೆನ್ಯವಿ ಕಸಾಪ ಬೆಂಗಳೂರು ೧೯೭೭ ಪು. ೩೦೬-೩೦೭. ಬಾಳೆಹೊನ್ನೂರು ಶಾಸನದಲ್ಲಿ ಸ್ಪಟಿಕ ಲಿಂಗದ ಉಲ್ಲೇಖ ಕಂಡುಬರುತ್ತದೆ.

*೪. ಶೃಂಗೇರಿ ಮಠದ ಕಡತದ ಈ ದಾಖಲೆಯನ್ನು ಸಂಶೋಧನೆಯಲ್ಲಿ ಬಳಸಿಕೊಳ್ಳಲು ಒದಗಿಸಿದ ಹಿರಿಯ ಸಂಶೋಧಕರಾದ ಡಾ. ಎ. ಕೆ. ಶಾಸ್ತ್ರೀ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ. ಅಲ್ಲದೆ ಈ ದಾಖಲೆಯಲ್ಲಿ ಉಲ್ಲೇಖಿಸಿರುವ ಗೋಪಾಲಕೃಷ್ಣ, ಸ್ಪಟಿಕ ಲಿಂಗಗಳನ್ನು ತೋರಿಸಿ ಉಪಕರಿಸಿದ ಪೂಜ್ಯ ಜಗದ್ಗುರುಗಳಿಗೂ, ಆಡಳಿತಾಧಿಕಾರಿ ಶ್ರೀ ಗೌರಿಶಂಕರ ಅವರಿಗೂ ಕೃತಜ್ಞತೆ ಸಲ್ಲುತ್ತದೆ.

| Kd. No. | Doc. No. | Kd. No. | Doc. No. |
|---|---|---|---|
| 13 | 36, 37, 39 40 | 101 | 3, 51, 52 |
| 19 | 42 | 113 | 1, 116, 117 |
| 20 | 66, 76, 81, 83 | 134 | 8, 13 |
| 25 | 45, 52, 55, 83 | 134 | 8-13 |
| 27 | 43 | 141 | 27, 28 |
| 45 | 53, 105, 116 | 147 | 12, 20, 22, 57, 58, 59 |
| 47 | 12-13 | 155 | 4 |
| 50 | 5, 79 | 160 | 4 |
| 53 | 20 | 167 | 102 |
| 66 | 3, 4, 61, 63 | 184 | 55 |
| 72 | 47 | 189 | 26 |
| 89 | 27 | 198 | 34 |

ಎಂ. ಎಸ್. ಪ್ರಭಾಕರ್*

# ದೇವಾಲಯಗಳಲ್ಲಿ ಪಾದವರ್ಗ

ದೇವಾಲಯ ರಚನೆಯಲ್ಲಿ ಪಾದವು ದ್ವಿತೀಯಾಂಗವೆನಿಸಿದ್ದು ಪಾದಸಂಬಂಧೀ ಪರ್ಯಾಯ ಪದಗಳನ್ನು ಹಲವಾರು ವಾಸ್ತು ಗ್ರಂಥಗಳು ಗುರುತಿಸಿವೆ.

*ಜಂಘಾ ಚರಣಂ ಚೈವ ಸ್ತಲೀ ಸ್ತಂಭಮಂಘ್ರಿಕಂ*
*ಸ್ಥಾಣು ಸ್ಥೂಣ ಪಾದಂ ಚ ಸ್ಕಂಭಮಾರಣ ಭಾರಕಂ*
*ಧಾರಣಂ ದ್ವಾದಶನಾಮ ಪಾರಾಯೋಕ್ತಂ ಪುರಾತನೈಃ*

ಸ್ತಂಭಭಾಗದಲ್ಲಿ ಭಿತ್ತಿ, ತೋರಣ, ಜಾಲಂದ್ರ, ಕಕ್ಷಾಸನ ಇತ್ಯಾದಿಗಳು ಪರ್ಯಾಯವಾಗಿ ನಿಂತಿವೆ. ದೇವಾಲಯಗಳ ಬಹುಪಾಲು ರಚನೆಗಳಲ್ಲಿ ಭಿತ್ತಿಯು ವ್ಯಾಪಕವಾಗಿ ಗುರುತಿಸಲ್ಪಟ್ಟಿದ್ದು ಈ ಭಾಗವನ್ನೂ ಪಾದವರ್ಗ ಎಂದೇ ಹೆಸರಿಸಲಾಗುತ್ತದೆ. ಮಂಡಪ ರಚನೆಯು ತ್ರಿವರ್ಗಗಳನ್ನು ಹೊಂದಿದ್ದು, ಅಧಿಷ್ಠಾನ ಪಾದ ಪ್ರಸ್ತರಗಳೆಂದು ಗುರುತಿಸಲಾಗಿದೆ. ತ್ರಿವರ್ಗ ರಚನೆಯು ದೇವಾಲಯಗಳಿಗೆ ಮೂಲವೆನಿಸಿದೆ. ಔತ್ತರೇಯ ಗ್ರಂಥಗಳಲ್ಲಿ ದ್ವಿತೀಯಾಂಗದವು ಜಂಘಾ ಎಂದು ಗುರುತಿಸಲ್ಪಟ್ಟಿದ್ದು, **ಮಂಡೋವರ** ಎಂದು ಕರೆಯಲ್ಪಡುತ್ತದೆ. ದಾಕ್ಷಿಣಾತ್ಯ ಗ್ರಂಥಗಳಲ್ಲಿ ಸ್ತಂಭವನ್ನು ವಿವರಿಸುವಾಗ 'ಕುಂಭ ಮಂಡಾದಿ ಸಹಿತಂ' ಎಂಬ ಉಲ್ಲೇಖವಿದ್ದು, ಕುಂಭ ಹಾಗೂ ಮಂಡ ರಚನೆಯು ಸ್ತಂಭದ ಅಲಂಕಾರಿಕ ಭಾಗಗಳು.

ಸ್ತಂಭಗಳಲ್ಲಿ ಪ್ರಮುಖವಾಗಿ ಎರಡು ಪ್ರಭೇದಗಳು. ಪ್ರತಿಸ್ತಂಭ ಅಥವಾ ವಿಶಾಲಸ್ತಂಭ ಮತ್ತು ನಿಖಾತಸ್ತಂಭ ಅಥವಾ ನೆಡುಸ್ತಂಭ.

*ಪ್ರತೇರುತ್ತರ ಸೀಮಾಂತೇ ವಿಶಾಲಸ್ತಂಭ ಉಚ್ಯತೇ*
*ಉಪನಾದುತ್ತರಾಂತಸ್ತೋ ನಿಖತಾಂಘ್ರಿಸ್ತದುಚ್ಯತೇ*

ಈ ವಿವರಣೆಯಲ್ಲಿ ಸ್ತಂಭ ಹಾಗೂ ಅಧಿಷ್ಠಾನಗಳ ನಡುವಣ ಸಂಬಂಧಗಳು ವ್ಯಕ್ತವಾಗಿವೆ. ಅಧಿಷ್ಠಾನದ ಪ್ರತಿಸ್ತರದಿಂದ ಪ್ರಸ್ತರದ 'ಉತ್ತರ'ದವರೆಗೆ ನಿಲ್ಲಿಸಿರುವುದು ವಿಶಾಲಸ್ತಂಭ. ಈ ಸ್ತಂಭದ ಕೆಳಭಾಗವು ಕೊಂಚ ವಿಶಾಲವಾಗಿದ್ದು ನಿಲುವಿಕೆಯಲ್ಲಿ ಸಹಕರಿಸುತ್ತದೆ. ಅಧಿಷ್ಠಾನದ ಉಪಾನಸ್ತರದಿಂದ ಪ್ರಸ್ತರದವರೆಗೆ ನಿಂತದ್ದು ನಿಖಾತಸ್ತಂಭ, ಅಧಿಷ್ಠಾನದ ಮೊದಲ ಸ್ತರ ಉಪಾನ. ಉಪಾನದೊಡನೆ ನಿಲ್ಲಿಸುವಾಗ ಅಧಿಷ್ಠಾನದಲ್ಲಿ ನೆಡಬೇಕು. ಆದ್ದರಿಂದ ನೆಡುಸ್ತಂಭವೆಂದು ಹೆಸರು. ಅಧಿಷ್ಠಾನದ ಪ್ರತಿಬಂಧ ಮತ್ತು ಪಾದಬಂಧ ರಚನೆಗಳೂ ಈ ವಿವರಣೆಯನ್ನು ಅವಲಂಬಿಸಿವೆ.

ಕಾಮಿಕಾಗಮವು ಸ್ತಂಭ ಪ್ರಭೇದಗಳನ್ನು ಪ್ರತಿಸ್ತಂಭ ಮತ್ತು ಹೋಮಸ್ತಂಭ ಎಂದು ವಿವರಿಸುತ್ತದೆ.

*ಪಾದಶ್ಚ ದ್ವಿವಿಧೋ ಹೋಮಸ್ತಂಭ ಸ್ಯಾತ್ ಪ್ರತಿಪಾದಕಃ*
*ಅಧಿಷ್ಠಾನೋಪಗೂಢಸ್ತು ನಿರ್ಖಾತಸ್ತಂಭ ಇಷ್ಯತೇ*
*ಪ್ರತಿಸ್ತಂಭ ಪ್ರತೇರೋರ್ಧ್ವೇ ಚೋತ್ತರಾಂತ ಸಮಾಯತಿ॥*

ಮಯಮತವು **ಝಷಾಲಸ್ತಂಭ** ಎಂಬ ಮತ್ತೊಂದು ಪ್ರಭೇದವನ್ನು ಹೆಸರಿಸಿದೆ.

*ಅಧಿಷ್ಠಾನೋತ್ತರಾಂತಸ್ಥೋ ಝಷಾಲಸ್ತಂಭ ಉಚ್ಯತೇ*

ಸ್ತಂಭದ ನಿಲುವಿಕೆಯಲ್ಲಿ ಇದು ಪ್ರತಿಸ್ತಂಭವನ್ನು ಅನುಕರಿಸುತ್ತದೆ. ಝಷಾಲಸ್ತಂಭದ ಉಲ್ಲೇಖ ಇನ್ನೆಲ್ಲಿಯೂ ಕಂಡುಬಂದಿಲ್ಲ. ಝಷಾಲಸ್ತಂಭ ರಚನೆಯನ್ನು ತೋರಣಗಳಲ್ಲಿ ಕಾಣಬಹುದು. ಸ್ತಂಭತೋರಣ ರಚನೆಯಲ್ಲಿ ತೋರಣಭಾಗಕ್ಕೆ ಝಷವೆನ್ನುವ ಹೆಸರು. ಈ ಭಾಗದಲ್ಲಿ ಪಂಜರವಿದಲ್ಲಿ ಝಷಪಂಜರವೆನ್ನುತ್ತಾರೆ. ಈ ವಿವರಣೆಯನ್ನು ಅನುಸರಿಸಿ ಸ್ತಂಭತೋರಣಗಳ ಸ್ತಂಭರಚನೆಯನ್ನು ಝಷಸ್ತಂಭವೆಂದು ಗುರುತಿಸಬಹುದು.

ಹೋಮಸ್ತಂಭ ಅಥವಾ ನೆಡುಸ್ತಂಭ ರಚನೆಗೆ ಮಾನ ಸ್ತಂಭಗಳು ಉದಾಹರಣೆಗಳು. ಮಂಡ್ಯ ಜಿಲ್ಲೆಯ ಕಂಬದ ಹಳ್ಳಿಯಲ್ಲಿರುವ ಮಾನಸ್ತಂಭ ಹಾಗೂ ಶ್ರವಣಬೆಳಗೊಳದ ಚಿಕ್ಕಬೆಟ್ಟದ ಬಸದಿಗಳ ಸಂಕೀರ್ಣದಲ್ಲಿರುವ ಹಲವು ಮಾನಸ್ತಂಭಗಳನ್ನು ನೆಡುಸ್ತಂಭಗಳಿಗೆ ಉದಾಹರಿಸಬಹುದು. ದೇವಾಲಯಗಳಲ್ಲಿ ಪ್ರತಿಸ್ತಂಭ ಅಥವಾ ವಿಶಾಲಸ್ತಂಭಗಳನ್ನು ಕಾಣಬಹುದೇ ಹೊರತು ನೆಡುಸ್ತಂಭಗಳಿಲ್ಲ.

ವಾಸ್ತುವಿನ ಮೂಲಸ್ವರೂಪವನ್ನು ಪ್ರಪಾರಚನೆಯೊಂದಿಗೆ ಕಾಣಬಹುದಾಗಿದ್ದು, ಕಂಭ ಮತ್ತು ಛಾವಣಿಯೇ ಇದರ ಅಂಗಗಳು. ಕಂಭವು ನೇರವಾಗಿ ನೆಲದಲ್ಲಿ ಹುದುಗಿದ್ದು, ಛಾವಣಿಯನ್ನು ಮೇಲ್ಗಡೆ ಹೊದಿಸಲಾಗಿದೆ. ಆದ್ದರಿಂದ ಸ್ತಂಭಗಳ ಮೂಲ ರಚನೆಯೂ ನೆಡುಸ್ತಂಭಗಳಿಂದ ಆರಂಭವೆಂದು ಗಮನಿಸಬಹುದು. ಛಾವಣಿಗೆ ಆಧಾರವಾಗಿ ನಿಂತ ಸ್ತಂಭಗಳ ಮೇಲ್ತುದಿಯಲ್ಲಿ ಬೋದಿಗೆಗಳು ಕಾಣಿಸಿಕೊಂಡವು. ಅಲಂಕಾರವಿಲ್ಲದ ಬೋದಿಗೆಯುಳ್ಳ ಸ್ತಂಭಗಳನ್ನು ಬಾದಾಮಿ ಚಾಲುಕ್ಯರ ಕಾಲದಲ್ಲಿ

* 'ಪದ್ಮಪ್ರಭಾ' ನಂ. ೬೨, ಬ್ಲಾಕ್ ೧೭, ಶ್ರೀರಾಂಪುರ ೨ನೇ ಹಂತ, ಮೈಸೂರು - ೫೭೦ ೦೨೩.

ಕಾಣಬಹುದು. ಸ್ತಂಭಗಳ ಕೆಳತುದಿಯಲ್ಲಿ ಪೀಠರಚನೆ ಕಾಣಿಸಿಕೊಂಡು, ಪೀಠ ದಂಡ ಮತ್ತು ಬೋದಿಗೆಗಳು ಸ್ತಂಭಗಳ ಭಾಗಗಳೆನಿಸಿದವು. ಬೋದಿಗೆಯ ಕೆಳಗಡೆ ಮತ್ತು ದಂಡಭಾಗದ ಮೇಲ್ಭಾಗದಲ್ಲಿ ಫಲಕ, ಪದ್ಮ, ಕಂಭ ಮುಂತಾದ ಹಲವು ಸ್ತರಗಳು ಗೋಚರಿಸಿದವು.

ಸ್ತಂಭದ ಹಲವು ವಿವರಣೆಗಳ ಪ್ರಕಾರ, ಪಾದಮೂಲ, ಪಾದ (ಮಧ್ಯ) ಪಾದಾಗ್ರ ಎಂದು ಮೂರು ಭಾಗಗಳು. ಪಾದಮೂಲವೆಂದಲ್ಲಿ ಸ್ತಂಭದ ಪೀಠರಚನೆ, ಪಾದಮಧ್ಯದಲ್ಲಿ ಸಿಂಹ, ಗಜ ವ್ಯಾಳಿಯೊಂದಿಗೆ ದಂಡವು ಚತುರಶ್ರ, ಅಷ್ಟಾಶ್ರ ವೃತಾಕಾರಗಳನ್ನೊಳಗೊಂಡಿದೆ. ಪಾದಾಗ್ರ ರಚನೆಯು ಸ್ತಂಭದ ಅಲಂಕಾರಿಕ ಭಾಗ. ಮಾಲಾಸ್ಥಾನದಿಂದ ಆರಂಭಗೊಂಡು ಬೋದಿಗೆಯೊಡನೆ ಅಂತ್ಯಗೊಳ್ಳುತ್ತದೆ. ಇವಿಷ್ಟೂ ದಾಕ್ಷಿಣಾತ್ಯ ಗ್ರಂಥಗಳು ಗುರುತಿಸುವ ಭಾಗಗಳು.

ಔತ್ತರೇಯ ಗ್ರಂಥಗಳ ಪ್ರಕಾರ, ಕುಂಭೀ, ಸ್ತಂಭ, ಭರಣಿ ಮತ್ತು ಸ್ತಂಭಶೀರ್ಷ ಇವು ಸ್ತಂಭಾಂಗಗಳು. ಪಾದಮೂಲವನ್ನು ಕುಂಭೀ ಎಂದು ಗುರುತಿಸಬಹುದು. ಸ್ತಂಭವೆನ್ನುವುದು ದಂಡಭಾಗ. ಭರಣಿಯ ಮಂಡ (ಫಲಕ ಮತ್ತು ಪದ್ಮ) ರಚನೆಗೆ ಸಮನಾದುದು. ಸ್ತಂಭ ಶೀರ್ಷವು ಬೋದಿಗೆಯ ಭಾಗವೆನಿಸಿದೆ. ಕೋಲಾರದ ಕೋಲಾರಮ್ಮನ ದೇವಸ್ಥಾನ, ಶ್ರವಣಬೆಳಗೊಳದ ಗುಳಕಾಯಜ್ಜಿ ಮಂಟಪ ಮುಂತಾದವು ದಾಕ್ಷಿಣಾತ್ಮ ರಚನೆಗಳೆನಿಸಿದರೂ ಸ್ತಂಭರಚನೆಗಳನ್ನು ವಿಶ್ಲೇಷಿಸಿದಾಗ, ಕುಂಭೀ, ಸ್ತಂಭ ಭರಣಿ, ಸ್ತಂಭಶೀರ್ಷ ಎಂದು ಗುರುತಿಸಲು ಸಾಧ್ಯವಿದೆ. ಇವು ಅಧ್ಯಯನದಲ್ಲಿ ಗಮನಿಸಬಹುದಾದ ಸಮಾನ ಅಂಶಗಳು. ಕಲ್ಯಾಣಿ ಚಾಲುಕ್ಯ ಹಾಗೂ ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಈ ವಿವರಣೆಗಳು ಹಾಗೂ ಅಂಗರಚನೆಯು ಹೆಚ್ಚು ಸ್ಪಷ್ಟವಾಗುತ್ತವೆ.

ಸ್ತಂಭವು ಹಲವು ಆಕಾರವನ್ನು ಹೊಂದಿದ್ದು ಚತುರಶ್ರ, ಅಷ್ಟಾಶ್ರ ಮತ್ತು ವೃತ್ತಾಕಾರವು ಸಾಮಾನ್ಯವೆನಿಸಿದೆ*. ಇತರ ರಚನೆಗಳನ್ನೂ ಗ್ರಂಥಗಳು ಗುರುತಿಸಿದ್ದು, ಈ ವಿವರಗಳು ಗ್ರಂಥದಿಂದ ಗ್ರಂಥಕ್ಕೆ ವ್ಯತ್ಯಾಸಗೊಂಡಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದಾಗಿದೆ.

*ಚತುರಶ್ರಂ ಬ್ರಹ್ಮಕಾಂತಂ ಸ್ಯಾದಷ್ಟಾಶ್ರಂ ವಿಷ್ಣುಕಾಂತಕಂ*
*ಷೋಡಶಾಶ್ರಂ ತು ವೃತ್ತಂ ವಾ ರುದ್ರಕಾಂತಮಿತಿಸ್ಮೃತಂ*
*ಪಂಚಾಶ್ರಂ ಶಿವಾಕಾಂತಂ ಸ್ಯಾದ್ ಷಡಶ್ರಂ ಸ್ಕಂದಕಾಂತಕಂ*
*(ಮಾನಸಾರ)*

*ಮೂಲಾದಗ್ರಂ ಯುಗಾಶ್ರಂ ತು ಕುಂಭಮಂಡಾದಿ ಸಂಯುತಂ*
*ಬ್ರಹ್ಮಕಾಂತಮಿತಿಖ್ಯಾತಂ ವಸ್ವಶ್ರಂ ವಿಷ್ಣುಕಾಂತಂ*
*ರಸಾಶ್ರಮಿಂದ್ರಕಾಂತಂ ಸ್ಯಾಚ್ಚಂದ್ರಕಾಂತಂ ಕಲಾಶ್ರಂ*
*ಕಂಠಮಾನೇನ ತನ್ನಲಂ ತಥೈವಾಗ್ರಂ ತು ಕಲ್ಪಯೇತ್*
*(ಕಾಶ್ಯಪಶಿಲ್ಪ)*

ಕೆಲವು ಸ್ತಂಭಗಳು ಸ್ತಂಭಮೂಲದಲ್ಲಿ ಚತುರಶ್ರ, ಮಧ್ಯ ಭಾಗದಲ್ಲಿ ವಸ್ವಶ್ರ, ಸ್ತಂಭಾಗ್ರದಲ್ಲಿ ವೃತ್ತಾಕಾರವನ್ನು ಪ್ರದರ್ಶಿವೆ.

*ಸ್ತಂಭಾಗ್ರೇ ಚೈವ ತನ್ಮಾನೇ ಚತುರಶ್ರಂ ಸಮನ್ವಿತಂ*
*ತಯೋರ್ಮಧ್ಯೇಪಿ ವಸ್ವಶ್ರಂ ಷೋಡಶ್ರಮಥಾಪಿ ವಾ*
*ವೃತ್ತಾಕಾರಂ ತು ವಾ ವಪ್ರಂ ಕುಂಭಮಂಡಾದಿ ಸಂಯುತಂ*

ಮಾನಸಾರ ಗ್ರಂಥವು ಸ್ತಂಭ ಪ್ರಭೇದಗಳಲ್ಲಿ ಚಿತ್ರಸ್ಕಂಭವನ್ನು ಮೊದಲಿಗೆ ಗುರುತಿಸಿದೆ.

*ಮೂಲೇ ವಿನಾಸನಾ ಸ್ತಂಭಂ ಚಿತ್ರಕ (ಸ್ಕಂ) ಭಮದೀರಿತಂ*

ಆಸನವಿಲ್ಲದ ಅಥವಾಸ್ತಂಭಮೂಲವಿಲ್ಲದ ರಚನೆಗಳು ವಿರಳ. ವಿಶಾಲವಾದ ಮಂಡಪ ರಚನೆಗಳಲ್ಲಿ ಈ ಸ್ತಂಭಗಳ ಇರುವಿಕೆ ಸಾಧ್ಯ. ವಿಜಯನಗರದ ಅರಸರ ಕಾಲದ ರಚನೆಗಳಲ್ಲಿ ಕೆಲವಡೆ ಕಾಣಬಹುದಾಗಿದೆ. ಸಾಮಾನ್ಯವಾಗಿ ಸ್ತಂಭಮೂಲದಲ್ಲಿ ಪೀಠ ಅಥವಾ ಆಸನವಿದ್ದು, ಪದ್ಮಾಸನ ಎಂದು ಗುರುತಿಸಲಾಗಿದೆ.

*ದಂಡಂ ಸಾರ್ಧದಂಡಂ ವಾ ಮೂಲೇ ಪದ್ಮಾಸನೋದಯಂ*
*ದ್ವಿಗುಣಂ ಪತ್ರವಿಸ್ತಾರಂ ಪದ್ಮಾಕಾರಂ ತು ಕಾರಯೇತ್*

ಪದ್ಮಾಸನದ ನಂತರ ಸಿಂಹ, ಆನೆ, ಯಾಳಿ ರಚನೆಗಳಿದ್ದು ಸ್ತಂಭದ ದಂಡಭಾಗವೆನಿಸಿದೆ. ಸಮೂರ್ತಾರ್ಚನಾಧಿಕರಣವು ಸಾಶ್ರಯ ಮತ್ತು ನಿರಾಶ್ರಯ ಪ್ರಭೇದಗಳನ್ನು ಹೆಸರಿಸಿದ್ದು ಸಾಶ್ರಯವೆಂದಲ್ಲಿ ಸಿಂಹ, ಹಂಸ, ಗಜಾದಿಗಳನ್ನೊಳಗೊಂಡಿದೆ.

*ಪಾದಾಶ್ಚ ವಿವಿಧಾಪ್ರೋಕ್ತಾ ಸಾಶ್ರಯ ನಿರಾಶ್ರಯಾಃ ಶುಭಾಃ*
*ಹಂಸಮಾಲಾ ಕವೇರುಕ್ತಾಃ ಹರೇಃ ಸಿಂಹಾಶ್ರಯಾಃಶುಭಾಃ*
*ಗಜಾಶ್ರಯ ಸಮಾಖ್ಯಾತಾ ದೇವಸೇನಾಪತೇಸ್ತಥಾ*

ಸಿಂಹ ವ್ಯಾಳಾದಿ ರಚನೆಗಳ ನಂತರ ಸ್ತಂಭಗಳಲ್ಲಿ ಅಲಂಕಾರ ರಚನೆಯನ್ನು ಕಾಣಬಹುದು. ಇವನ್ನು ಸ್ತಂಭಭೂಷಣವೆಂದೂ ವಿಷ್ಕಂಭವೆಂದು ಗ್ರಂಥಗಳು ಗುರುತಿಸಿವೆ. ಪಾಶ್ಚಾತ್ಯ ವಿದ್ವಾಂಸರು ಈ ಭಾಗವನ್ನು Members of the Pillar Capital ಎಂದು ಈ ಸ್ತರಗಳನ್ನು ಗುರುತಿಸುತ್ತಾರೆ. ಈ ಸ್ತರಗಳು ಕಾಲಾನುಕಾಲಕ್ಕೆ ವ್ಯತ್ಯಯಗೊಂಡರೂ ಮೂಲಸ್ವರೂಪದಲ್ಲಿ ಹೆಚ್ಚಿನ ಬದಲಾವಣೆಗಳಿಲ್ಲ. ಕೆಲವು ಗ್ರಂಥಗಳು ಆರೋಹಣ ಕ್ರಮವನ್ನು ಅನುಸರಿಸಿದರೆ, ಇನ್ನಿತರ ಗ್ರಂಥಗಳು ಅವರೋಹಣ ಕ್ರಮದಲ್ಲಿ ವಿವರಿಸಿವೆ. ಬೋದಿಗೆ, ವೀರಕಂಠ, ಮಂಡಿ, ಕುಂಭ, ಸ್ಕಂಧ, ಪದ್ಮಬಂಧ ಮಾಲಾಸ್ಥಾನ ಇವು ಸಾಮಾನ್ಯವಾಗಿ ಕಂಡುಬರುವ ಸ್ತರಗಳು.

*ಪೋತಿಕಾ ಖಂಡ ಮಂಡೀನಿ ಕುಂಭಂ ಸ್ಕಂದಂ ಪದ್ಮಕಂ*
*ಮಾಲಾಸ್ಥಾನಂ ಕ್ರಮೇಣೈವ ಸ್ತಂಭಾಗ್ರಾತ್ ಪರಿಕಲ್ಪಯೇತ್*

ಬೋದಿಗಳು ಒಂದು ಕಾಲಕ್ಕೆ ದಂಡದ ಭಾಗವೆನಿಸಿತ್ತು.

ದಂಡ ಹಾಗೂ ಬೋದಿಗೆಗಳು ಕೂಡಿಕೊಂಡಿರುವ ರಚನೆಗಳು ಇಂದು ಅಲಭ್ಯ. ಬೋದಿಗೆಯ ಅಳತೆಯನ್ನು ಕುರಿತು ಗ್ರಂಥದ ಉಲ್ಲೇಖದಲ್ಲಿ ಇದರ ಸೂಚನೆಯಿದೆ.

*ಕನೀಯಸಾ ಬೋಧೀಕಾಖ್ಯಾತಂ ಅಂಘ್ರಿಯೋ ರ್ಭೋದಿಕಾನ್ವಿತಂ*

ಛಾಯಾ ಮತ್ತು ಕ್ಷೇಪಣ ಸ್ತರಗಳನ್ನು ಸರಳರಚನೆಯ ಬೋದಿಗೆಯು ಒಳಗೊಂಡಿದೆ. ಪ್ರಸ್ತರದ ಕೆಳಭಾಗದಲ್ಲಿ ಕ್ಷೇಪಣ, ನಂತರ ಬಾಗಿದ ಛಾಯಾಕಾರವಿದೆ. ಬೋದಿಗೆಯ ಅಲಂಕಾರವನ್ನು ಕಾಶ್ಯಪಶಿಲ್ಪ ಗ್ರಂಥವು ಚಿತ್ರ, ಪತ್ರ ಮತ್ತು ತರಂಗಬೋದಿಗೆಗಳೆಂದು ವಿವರಿಸಿದೆ.

*ನಾನಾಚಿತ್ರೈರಲಂಕೃತ್ಯ ಬೋದಿಕಾ ಚಿತ್ರಬೋದಿಕಾ*
*ಪತ್ರೈರ್ವಿಚಿತ್ರಿತಾ ಪತ್ರಬೋದಿಕಾ ತು ಪ್ರಕೀರ್ತಿತಾ*
*ಮಹಾರ್ಣವ ತರಂಗಾಭಸ್ತರಂಗಸ್ತು ಪ್ರಕಲ್ಪಯೇತ್*

ಕಾಮಿಕಾಗಮ ಗ್ರಂಥವು ನಾಗವೃತ್ತ ಪತ್ರಚಿತ್ರ ಮತ್ತು ಸಮುದ್ರೋರ್ಮಿ ಎಂದು ಬೋದಿಗೆಯ ಪ್ರಭೇದಗಳನ್ನು ಹೆಸರಿಸಿದೆ.

ನಾಗವೃತ್ತಾ ಪತ್ರಚಿತ್ರಾ ಸಮುದ್ರೋರ್ಮಿರಿತಿ ತ್ರಿಧಾ

ಮೊದಲನೆಯ ಪ್ರಭೇದವು ಬಹುಶಃ ಅತ್ಯಂತ ಸರಳರಚನೆ; ಕ್ಷೇಪಣ ಮತ್ತು ಛಾಯಾಭಾಗಗಳಿವೆ. ಹೆಚ್ಚಿನ ವಿವರಗಳಿಲ್ಲ. ಇನ್ನಿತರ ಗ್ರಂಥಗಳಲ್ಲಿ ಮುಷ್ಟಿಬಂಧವೆಂಬ ಬೋದಿಗೆಯ ವಿವರವಿದೆ. ಮುಷ್ಟಿ ಬಂಧವು ನಾಗವೃತ್ತ ಪದಕ್ಕೆ ಪರ್ಯಾಯವೇ? ಖಚಿತವಾಗಿ ತಿಳಿದಿಲ್ಲ.

ಛಾಯಾ ಕ್ಷೇಪಣ ಸಂಯುಕ್ತಾ ನಾಗವೃತ್ತೇತಿ ಕೀರ್ತಿತಾ

ಇದರೊಂದಿಗೆ ಪತ್ರಾಲಂಕಾರವೂ ಸೇರಿದ್ದಲ್ಲಿ ಪತ್ರಚಿತ್ರ ಪ್ರಭೇದವೆನ್ನಿಸಿದೆ.

ಛಾಯಾ ಕ್ಷೇಪಣ ಪತ್ರೈಶ್ಚಯುಕ್ತಾ ಪತ್ರವಿಚಿತ್ರಿತಾ

ಬೋದಿಗೆಯ ಛಾಯಾಭಾಗದ ಅಗಲವನ್ನು ನಾಲ್ಕು ಅಥವಾ ಮೂರು ಭಾಗಮಾಡಿ ಮಧ್ಯದ ಎರಡು ಅಥವಾ ಒಂದು ಭಾಗವನ್ನು ಮಧ್ಯಪಟ್ಟ ಎಂದು ಹೆಸರಿಸಲಾಗುತ್ತದೆ. ಇದರ ಪಾರ್ಶ್ವಗಳನ್ನು ತರಂಗಸ್ಥಾನವೆಂದು ಗುರುತಿಸಿದ್ದು ಅಲೆ ಅಲೆಯಾಕಾರವನ್ನು ಹೊಂದಿದೆ. ಇದನ್ನು ತರಂಗ ಬೋದಿಗಿ ಅಥವಾ ಸಮುದ್ರೋರ್ಮಿ ಎನ್ನಲಾಗಿದೆ.

ದೇವಾಲಯಗಳಲ್ಲಿ ಈ ಪ್ರಭೇದಗಳಲ್ಲದೆ, ಮುಷ್ಟಿಬಂಧ ಮತ್ತು ಪದ್ಮಮುಕುಳಾಕಾರ ಬೋದಿಗೆಗಳನ್ನೂ ಗಮನಿಸಬಹುದು. ಇವುಗಳ ವಿವರಣೆ ಹೆಚ್ಚು ಸ್ಪಷ್ಟವಿಲ್ಲ. ಮುಷ್ಟಿಬಂಧದಲ್ಲಿ ಕ್ಷೇಪಣದ ಮುಂಭಾಗವು ಸುರುಳಿಯಾಕಾರವನ್ನು ಹೊಂದಿದ್ದು ಸರಳವಾಗಿ ಹಿಂದಕ್ಕೆ ಬಾಗಿದೆ. ಇದರೊಂದಿಗೆ ಮಕರ, ವ್ಯಾಳಿ ಮುಂತಾದ ರಚನೆಗಳಿವೆ. ಕಾಶ್ಯಪಶಿಲ್ಪ ಗ್ರಂಥದಲ್ಲಿ ಈ ವಿವರಣೆ ಕೆಳಕಂಡಂತಿದೆ.

*ಪಾರ್ಶ್ವಯೋರ್ಮುಷ್ಟಿ ಬಂಧಾಗ್ರ ವ್ಯಾಳಯಾ(ಳ್ಯಾ)ದಿ ಕಲ್ಪಿತಂ*
*ಭುಜೇ ವಾ ಮಕರೈರ್ವಾಳೈಃ ಪಟ್ಟಕಾದ್ಯೈರ್ವಿಭೂಷಿತಂ*

ಮಯಮತ ಗ್ರಂಥದಲ್ಲಿರುವ ವಿವರಣೆ ಕೆಳಕಂಡಂತಿದೆ.

*ಮುಷ್ಟಿ ಬಂಧೋಪರಿಕ್ಷಿಪ್ತ ವ್ಯಾಳಸಂಹೃತಿ ರೂಪವತ್*
*ಸನಾಲೀಕಂ ಸಮತಲಂ ಸನಾಟಕಮಥಾಪಿ ವಾ*
*ಭೂತೇಭ ಮಕರೈರ್ವ್ಯಾಲ ಸಂಯುಕ್ತ ಚಾಗ್ರಮಂಡನಂ*

ಪದ್ಮಮುಕುಳಾಕಾರ ಬೋದಿಗೆಯನ್ನು ಕಾಶ್ಯಪಶಿಲ್ಪ ಗ್ರಂಥವು ವರ್ಣಿಸಿದೆ. ಈ ವಿವರಣೆಯಂತೆ ಮೇಲ್ಭಾಗದಲ್ಲಿ ಪಟ್ಟಿಕೆಯಿದ್ದು, ಛಾಯಾಭಾಗದಲ್ಲಿ ಊರ್ಧ್ವಪದ್ಮ ಮತ್ತು ಅಧೊಪದ್ಮ ರಚನೆಗಳಿವೆ. ಊರ್ಧ್ವಪದ್ಮವು ಕಂಠಭಾಗದಿಂದ ಹೊರಟು ಮೇಲ್ಮುಖವಾಗಿದೆ. ಅಧೋಪದ್ಮವು ಕಂಠದ ಕೆಳಭಾಗದಿಂದ ಹೊರಟು ಊರ್ಧ್ವಪದ್ಮವನ್ನು ಬಳಸಿ ಮುಂಭಾಗದಲ್ಲಿ ಕೆಳಮುಖವಾಗಿ ಬಾಗಿದೆ. ಪದ್ಮಮುಕುಳಾಕಾರ ಬೋದಿಗೆಯನ್ನು ವಿಜಯನಗರದ ಅರಸರ ಕಾಲದಿಂದ ವ್ಯಾಪಕವಾಗಿ ಕಾಣಬಹುದು.

*ಅನ್ಯದ್ ಬೋಧಂ ಷಡಂಶಾಂಶಂ ಕೃತ್ವಾ ಊರ್ಧ್ವಂ ಪಟ್ಟಿಕಾನ್ವಿತಂ*
*ಊರ್ಧ್ವಪದ್ಮಂ ಅಥಾಂಶೇನ ಕಂಠಮಧ್ಯೇನ ಕಾರಯೇತ್*
*ಅಧೋಪದ್ಮಂ ದ್ವಿಭಾಗೇನ ಚೋರ್ಧ್ವಂ ಪಟ್ಟಾಂಶಮುಚ್ಯತೇ*
*ಅಧಸ್ತು ಅಂಬುಜಮಧ್ಯಾಂಶಂ ಕಲ್ಪಯೇತ್ತು ಕ್ರಮೇಣತು*
*ಪದ್ಮಸ್ಯ ಮುಕುಲಾಕಾರಂ ಅಗ್ರಾತ್ ಅಧೋಗತಂ ಕುರು*

ಔತ್ತರೇಯ ಸಂಪ್ರದಾಯದ ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಬೋದಿಗೆಗೆ ಪರ್ಯಾಯವಾಗಿ ಹೀರಕ ಎಂದು ಬಳಸಲಾಗಿದೆ. ಹೀರಕ ರಚನೆಯ ಬಗ್ಗೆ ಮಾಹಿತಿ ಇಲ್ಲ. ಬೋದಿಗೆಯ ಕೆಳಗಿನ ಸ್ತರವೇ ವೀರಕಂಠ. ಇದಕ್ಕೆ ಪರ್ಯಾಯವಾಗಿ ವೀರಗಂಡ, ಗಂಡ ಎಂದೂ ಪ್ರಯೋಗಗಳಿವೆ. ಕಾಶ್ಯಪಶಿಲ್ಪವು *'ಸರ್ವೇಷಾಮಪಿ ಪಾದಾನಂ ವೀರಕಂಠಂ ಯುಗಾಶ್ರಂ'* ಎಂದು ವಿವರಿಸಿದೆ.

ಸ್ತಂಭವನ್ನು 'ಕುಂಭಮಂಡಾದಿ ಸಂಯುತಂ' ಎಂದು ಗುರುತಿಸಿದ್ದು ಕುಂಭ ಮತ್ತು ಮಂಡರಚನೆಗಳು ಸಂಯುಕ್ತ ಸ್ತರಗಳೆನಿಸಿವೆ. ಮಂಡರಚನೆಯು ವೀರಕಂಠದ ನಂತರ ಫಲಕ ಹಾಗೂ ಪದ್ಮಸ್ತರಗಳನ್ನೊಳಗೊಂಡಿದೆ. ಇವರೆಡರ ಮಧ್ಯದಲ್ಲಿ ವೇತ್ರವೆಂಬ ಸ್ತರವಿದೆ. ಇದನ್ನು ಕೆಲವು ಗ್ರಂಥಗಳು ಮಾತ್ರ ಗುರುತಿಸಿವೆ. ಮಂಡೀ ರಚನೆಯಲ್ಲಿ ಕಾಮಿಕಾಗಮವು ಮೂರು ಪ್ರಭೇದಗಳನ್ನು ಹೆಸರಿಸಿದೆ.

*ಪಾಲಿಕಾಭಾ ಪದ್ಮಾಗ್ರ ನಾಗತಲಾಕೃತಿಃ*

ಪಾಲಿಕಾ ರಚನೆಯನ್ನು ಹೊಯ್ಸಳರ ಕಾಲದ ಕೆಲವು ದೇವಾಲಯಗಳಲ್ಲಿ ಕಾಣಬಹುದು. ಫಲಕ ಹಾಗೂ ಪದ್ಮ ಸ್ತರವುಳ್ಳ ರಚನೆಯನ್ನು ಪದ್ಮಾಗ್ರ ಎಂದು ಗ್ರಹಿಸಲಾಗಿದೆ. ನಾಗತಲಾ ಕೃತಿಯನ್ನು ಗುರುತಿಸಲು ಸಾಧ್ಯವಾಗಿಲ್ಲ. ಸಮರಾಂಗಣ ಸೂತ್ರಧಾರ

ಗ್ರಂಥವು 'ದ್ವಿಸ್ತರಂ ಫಲಕ ಕುರ್ಯಾತ್ ಪದ್ಮಪತ್ರಸಮನ್ವಿತಂ' ಎಂದೂ 'ಉಜ್ವಾಲಂ ಪೂರ್ವಮಾನೇನ ಪದ್ಮಪತ್ರಯುತಂ ತತಃ' ಎಂದು ಗುರುತಿಸಿದೆ. ಆದರೆ ಈ ಒಟ್ಟು ಸ್ತರಗಳನ್ನು ಭರಣೆ ಎಂದು ಗುರುತಿಸುವ ಔಚಿತ್ಯ ಅರ್ಥವಾಗದು.

ಮಂಡ ರಚನೆಯ ಕೆಳಗೆ ಕುಂಭ ರಚನೆಯಿದೆ. ಕುಂಭದೊಂದಿಗೆ ಕೆಳಗಿನ ಸ್ತರಗಳೂ ಸೇರುತ್ತವೆ. ಕುಂಭರಚನೆಯ ಅಳತೆಯನ್ನು ಅನುಸರಿಸಿ, ಶ್ರೀಕಾಂತ, ಬ್ರಹ್ಮಕಾಂತ, ಚಂದ್ರಕಾಂತ ಮತ್ತು ಭಾನುಕಾಂತ ಎಂದು ನಾಲ್ಕು ಪ್ರಭೇದಗಳನ್ನು ಕಾಮಿಕಾಗಮ ಗ್ರಂಥವು ಗುರುತಿಸಿದೆ.

*ಕುಂಭಶ್ಚತುರ್ವಿಧಃ ಪ್ರೋಕ್ತಃ ಸಪಾದ ಸಾರ್ಧಏವಚ।*
*ಪಾದೋನ ದ್ವಿಗುಣಶ್ಚೈವ ದ್ವಿಗುಣಸ್ತುನ್ನತಿಕ್ರಮಾತ್*
*ಶ್ರೀಕಾಂತ ಬ್ರಹ್ಮಕಾಂತಾದಿ ಚಂದ್ರಕಾಂತಃ ಪ್ರಕೀರ್ತಿತಾಃ*
*ಭಾನುಕಾಂತ ಇತಿ ಪ್ರೋಕ್ತಾ ತದುಚ್ಯತೇ ನವಾಂಶಕೇ*

ಕಾಶ್ಯಪಶಿಲ್ಪವೂ ನಾಲ್ಕು ಪ್ರಭೇದಗಳನ್ನು ಗುರುತಿಸಿದ್ದು ಇವು ತುಸು ಭಿನ್ನವೆನಿಸಿವೆ.

ಪ್ರಿಯದರ್ಶನಂ ಸೌಮ್ಯಂ ಚಂದ್ರಕಾಂತಂ ಚ ಶ್ರೀಕರಂ

ಕುಂಭವು ಸಂಯುಕ್ತಸ್ತರವೆನಿಸಿದ್ದು, ಒಟ್ಟು ಎತ್ತರವನ್ನು ಒಂಬತ್ತು ಭಾಗಗಳಾಗಿ ವಿಭಾಗಿಸಿ ಸ್ತರಗಳನ್ನು ಹೆಸರಿಸಲಾಗಿದೆ.

*ಅಂಶೇನ ದೃಕ್ ಚತುರ್ಭಾಗಃ ಕಲಶಃ ಕಂಠ ಏಕತಃ*
*ಅಸ್ಯಮಂಶಮಥಾಂಶೇನ ಪದ್ಮಮರ್ಧೇನ ವೃತ್ತಕಂ*
*ಅರ್ಧೇನ ಹೀನಕೌ ಕಾರ್ಯೌ ಸ್ತಂಭಾದ್ವಿಗುಣಮಾನತಃ*

ದೃಕ್ (ಮಧ್ಯಮೂಲ)-೧, ಕಲಶ (ಕುಂಭ)-೪ ಕಂಠ (ಸ್ಕಂದ), ಆಸ್ಯ-೧, ಪದ್ಮ(ಪದ್ಮಬಂಧ)-೧, ವೃತ್ತಕ-ಅರ್ಧ, ಹೀನಕ-ಅರ್ಧ,ಇವೇ ಕುಂಭದ ಸ್ತರಗಳು. ಕಾಶ್ಯಪಶಿಲ್ಪ ಗ್ರಂಥವು ಬೋದಿಗೆಯಿಂದ ಹೀನಕದ ವರೆಗಿನ ಸ್ತರಗಳನ್ನು ವಿಷ್ಕಂಭವೆಂದಿದ್ದು ಈ ಸ್ತರಗಳ ಒಟ್ಟು ಸ್ವರೂಪ ಕೆಳಕಂಡಂತಿದೆ.

*ಊರ್ಧ್ವಭಾಗಂ ತು ಸಂಗ್ರಾಹ್ಯಂ ದ್ವಾವಿಂಶಕಂ ವಿಭಜೇತ್*
*ಯುಗಾಂಶಂ ಬೋದಿಕೋತ್ಸೇಧಂ ವೀರಕಂಠಂ ತತ್ಸಮಂ*
*ಭೂತಾಂಶಂ ಫಲಕೋತ್ಸೇಧಂ ಮಧ್ಯಮೂಲಂ ಶಿವಾಂಶಕಂ*
*ಕುಂಭೋತ್ಸೇಧಂ ವೇದಾಂಶಂ ಕಂಠಮಾನಕಂ*
*ತದಾಸ್ಯೋದಯಮೇಕಾಂಶಂ ಪದ್ಮಮೇಕೇನ ಕಾರಯೇತ್*
*ವೃತ್ತಮರ್ಧೇನ ಕರ್ತವ್ಯಂ ಹೀನಂ ತತ್ಸಮಮುಚ್ಯತೇ*
*ಲಶುನಾಬ್ಜಲತಾಯುಕ್ತಂ ಮಾಲಮಾನಾದಿ ಪೂರ್ವವತ್*

ಇನ್ನಿತರ ಗ್ರಂಥಗಳಲ್ಲಿ ಈ ಸ್ತರಗಳ ಜೋಡಣೆಯಲ್ಲಿ ಕೊಂಚ ವ್ಯತ್ಯಾಸಗಳಿವೆ. ಸ್ತರಗಳ ಗುರುತಿಸುವಿಕೆಯಲ್ಲಿ ಕೊಂಚ ಗಲಿಬಿಲಿ ಗೊಳ್ಳುವುದು ಸಹಜ. ಮಾನಸಾರ ಗ್ರಂಥವು ಚಿತ್ರಸ್ಕಂಭ ಪಾಲಿಕಾಸ್ತಂಭ, ಕುಂಭಸ್ತಂಭ, ಕೋಷ್ಠಸ್ತಂಭ, ಸಂಯೋಗಸ್ತಂಭ ಎಂಬ ಪ್ರಭೇದಗಳನ್ನು ಹೆಸರಿಸಿದೆ.

ಪೀಠವಿಲ್ಲದ ರಚನೆಯನ್ನು ಚಿತ್ರಸ್ಕಂಭ ಎಂದು ಮೊದಲಿಗೆ ಗುರುತಿಸಲಾಗಿದೆ. ಪೀಠಭಾಗದಲ್ಲಿ ಪಾಲಿಕೆಯುಳ್ಳ ರಚನೆಯನ್ನು ಪಾಲಿಕಾಸ್ತಂಭ ಎನ್ನಲಾಗಿದೆ. ಕುಂಭಸ್ತಂಭ ರಚನೆಯಲ್ಲಿ ಪೀಠಭಾಗದಲ್ಲಿ ಪಾಲಿಕೆ,ನಂತರ ಕುಂಭ ರಚನೆ, ಸ್ತಂಭಾಗ್ರದಲ್ಲಿ ಕೂಟ ಅಥವಾ ಪಂಜರ, ಇದು ಕುಂಭಸ್ತಂಭವೆನಿಸಿದೆ.

*ಪಾದಮೂಲೈಕ ದಂಡೇನ ಪಾಲಿಕೋನ್ನತಮಿಶ್ರತೇ*
*ತದ್ವಿಸ್ತಾರಂ ದ್ವಿದಂಡಂ ಕುಂಭತುಂಗಂ ದ್ವಿದಂಡಕಂ*
*ತತ್ಪಾದಸ್ಯಾಗ್ರಕೇ ಕುರ್ಯಾನ್ನಾಸಿಕಾ ಪಂಜರಾನ್ವಿತಂ*

ಕುಂಭಸ್ತಂಭ ರಚನೆಯನ್ನು ಭಿತ್ತಿಯ ಅಲಂಕಾರದಲ್ಲಿ ಕಾಣಬಹುದು. ಕೋಷ್ಠ ಹಾಗೂ ಕೋಷ್ಠಸ್ತಂಭಗಳು ಭಿತ್ತಿಯನ್ನು ಆಧರಿಸಿ ಬೆಳೆದ ಅಲಂಕಾರವೆನಿಸಿದೆ. ಸಂಯೋಗಸ್ತಂಭಗಳು ವಿಶಾಲವಾಗಿ ಮಂಡಪಗಳು ಬೆಳೆದಂತೆ ಬಳಸಲಾಗಿದ್ದು ವಿಜಯ ನಗರದ ಅರಸರ ಕಾಲದಲ್ಲಿ ಹೆಚ್ಚಾಗಿ ಪ್ರದರ್ಶಿಸಲ್ಪಟ್ಟವು.

ಸಂಯೋಗಸ್ತಂಭದಲ್ಲಿ ಪೂರ್ವಪಾದಕ್ಕೆ ಹೊಂದಿಕೊಂಡಂತೆ ಉಪಪಾದಗಳಿದ್ದು ಒಂದು, ಎರಡು, ನಾಲ್ಕು, ಐದು, ಆರು, ಎಂಟು ಉಪಪಾದಗಳನ್ನು ಮಾನಸಾರವು ವಿವರಿಸಿದೆ. ಪೂರ್ವ ಪಾದದ ಪಾದಮೂಲದಲ್ಲಿ ಪಾಲಿಕೆ ಹಾಗೂ ಪದ್ಮಾಸನ ರಚನೆ ಇದೆ.

*ಉಪಪಾದಾನಿ ಸರ್ವೇಷಾಂ ಪೂರ್ವಪಾದೇತು ಯೋಜಯೇತ್*
*ಏಕೋಪಪಾದ ಸಂಯುಕ್ತಂ ದ್ವಿತ್ಯುಪಪಾದೇನ ಸಂಯುತಂ*
*ವೇದೋಪಪಾದ ಸಂಯುಕ್ತಂ ಬ್ರಹ್ಮಕಾಂತಮೀರಿತಂ*
*ಷಡೋಪಪಾದ ಸಂಯುಕ್ತಂ ಸ್ಕಂದಕಾಂತಮಿತಿಸ್ಮೃತಂ*
*ಅಷ್ಟೋಪಪಾದ ಸಂಯುಕ್ತಂ ವಿಷ್ಣುಕಾಂತಮುದೀರಿತಂ*
*ಸರ್ವೇಷಾಂ ಪಾದಮೂಲೇತು ಪಾಲಿಕಾಂಚೋಪಪೀಠವತ್*
*ಕುರ್ಯಾತ್ ಸಿಂಹಸ್ಯರೂಪಂ ವಾ ಪಾದಂ ಪತ್ರಾದಿಭೂಷಿತಂ*

ನಾಲ್ಕು , ಐದು ಆರು, ಎಂಟು ಉಪಪಾದಗಳುಳ್ಳ ಸಂಯೋಗಸ್ತಂಭ ರಚನೆಗಳನ್ನು ಕ್ರಮವಾಗಿ ಬ್ರಹ್ಮಕಾಂತ, ಶಿವಕಾಂತ, ಸ್ಕಂದಕಾಂತ, ವಿಷ್ಣುಕಾಂತ ಎಂದು ಗುರುತಿಸಲಾಗಿದೆ. ಉಪಪಾದ ರಚನೆಯೊಂದಿಗೆ ಯಾಳಿ, ಸಿಂಹ ಮೊದಲಾದ ರಚನೆಗಳಿಗೂ ಅವಕಾಶಗಳಿವೆ. ಇವಿಷ್ಟೂ ಸರಳವಾಗಿ ಗುರುತಿಸಲ್ಪಡುವ ಸ್ತಂಭ ಭಾಗದ ಲಕ್ಷಣಗಳು.



ಡಾ। ಗುರುಪಾದ ಮರಿಗುದ್ದಿ*

# ಶಿವಪುರದ ರಾಮಲಿಂಗ ದೇವಾಲಯ

ಕರ್ನಾಟಕದಲ್ಲಿ ಒಂದು ಕಾಲಕ್ಕೆ ಪಾಶುಪತ, ಕಾಳಾಮುಖ, ಕಾಪಾಲಿಕ ಇತ್ಯಾದಿ ಪಂಥಗಳು ಅಸ್ತಿತ್ವದಲ್ಲಿದ್ದವು. ಅನೇಕ ಸಾಧಕರು ಯೋಗಿಗಳು ಕಾಲಕಾಲಕ್ಕೆ ಅಲ್ಲಲ್ಲಿ ನೆಲೆಸಿ ಸಾಧನೆಯಲ್ಲಿ ತೊಡಗಿದುದನ್ನು ಕಾವ್ಯ, ಇತಿಹಾಸ ಶಾಸನಗಳು ಸಮರ್ಥಿಸುತ್ತವೆ. ನಾಥಪಂಥವೂ ಒಂದು ಕಾಲಕ್ಕೆ ಕರ್ನಾಟಕದಲ್ಲಿ ವ್ಯಾಪಕವಾಗಿತ್ತು. ನಾಥಪಂಥದ ಹರಿಕಾರನೆಂದು ಗುರುತಿಸಲಾಗುವ ಗೋರಖ ನಾಥನು ಕರ್ನಾಟಕದವನೆಂದೂ, ಅವನು ಅಲ್ಲಮಪ್ರಭುವನ್ನು ಸಂಧಿಸಿದ್ದನೆಂದೂ ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ[*೧].

ಪ್ರಸ್ತುತ ಕರ್ನಾಟಕದ ಉತ್ತರ ಪಶ್ಚಿಮದ ಗಡಿಯ ಭಾಗದ ಒಂದು ಪುಟ್ಟ ಹಳ್ಳಿ ಶಿವಪುರ[*೨], ಪೂರ್ವಕಾಲಕ್ಕೆ ನಾಥ ಸಂಪ್ರದಾಯದ ಬಹುದೊಡ್ಡ ಕೇಂದ್ರವಾಗಿತ್ತು ಎಂಬ ವಿಚಾರ ಗಮನಾರ್ಹ. ಶಿವಪುರವು ಪೂನಾ- ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿ ನಿಪ್ಪಾಣಿ ನಗರಕ್ಕೆ ಆರೇಳು ಕಿ.ಮೀ. ಅಂತರದಲ್ಲಿದೆ. ಗ್ರಾಮದಿಂದ ಪೂರ್ವಕ್ಕೆ ತುಸು ದೂರದ ಬೆಟ್ಟದ ಇಳಿಜಾರದಲ್ಲಿ ಹಳೆಗಾಲದ ರಾಮಲಿಂಗೇಶ್ವರ ದೇವಾಲಯವಿದೆ. ದೇವಾಲಯವು ವಾಸ್ತುಶೈಲಿಯಿಂದ ೧೧-೧೨ನೇ ಶ.ದ ಕಲ್ಯಾಣಿ ಚಾಲುಕ್ಯ ಸ್ವರೂಪ ಹೊಂದಿದೆ. ಗರ್ಭಗೃಹ, ಕಿರಿಯ ಸುಕನಾಸಿ, ನವರಂಗ, ಮುಖಮಂಟಪಗಳನ್ನು ದೇವಾಲಯ ಹೊಂದಿದ್ದು, ಚಾಲುಕ್ಯ ಮಾದರಿಯ ಕಂಬ ಬೋದಿಗೆಗಳು ಅಲ್ಲಿವೆ. ಕಾಲಾಂತರದಲ್ಲಿ ಮೂಲ ಕಟ್ಟಡ ಶಿಥಿಲವಾದಂತೆ, ಅದನ್ನು ರಕ್ಷಿಸಲು ನಡೆಸಿದ ಪ್ರಯತ್ನದ ಫಲವಾಗಿ ಹಳೆಯ ಸ್ವರೂಪ ಅಲ್ಲಲ್ಲಿ ಮರೆಯಾಗಿ ಹೋಗಿದೆ.

ಶ್ರೀ ರಾಮ ಸ್ಥಾಪಿತ ಲಿಂಗವೆಂದು ನಂಬಲಾಗುವುದರಿಂದ, ರಾಮಲಿಂಗೇಶ್ವರ ಲಿಂಗವೆನಿಸಿದೆ. ರಾಮಚಂದ್ರನು ಸೀತಾ ದೇವಿಯನ್ನು ಹುಡುಕುತ್ತಾ ದಕ್ಷಿಣಕ್ಕೆ ಬಂದಾಗ, ಇಲ್ಲಿಗೆ ಬಂದು ತಂಗಿದ ತನ್ನ ಬಾಣದಿಂದ ಒಂದೆಡೆಗೆ ನೆಲಕ್ಕೆ ಹೊಡೆದು ನೀರು ಬರಿಸಿದ. ಲಿಂಗವನ್ನು ಸ್ಥಾಪಿಸಿದ ಎಂದೂ ಸ್ಥಳಕತೆ ಇದೆ. ದೇವಾಲಯದ ಮಗ್ಗುಲಲ್ಲಿರುವ ನೀರಿನ ತೀರ್ಥವೇ ತಮಗೆ ಆಧಾರವೆಂದುಕೊಂಡಿದ್ದಾರೆ.

ಶಿವಪುರವು ಕೊಲ್ಲಾಪುರ, ಬೆಳಗಾವಿ ಜಿಲ್ಲೆಯ ಕೆಲವು ನಾಥಕೇಂದ್ರಗಳಲ್ಲಿ ಒಂದಾಗಿದ್ದು, ನಾಥಯೋಗಿಗಳಿಗೆ ಆಶ್ರಯ ಒದಗಿಸಿತ್ತು. ಕನ್ಹೇರಿ, ಬೆಡರಹಾಳ, ನಿಪ್ಪಾಣಿ, ಸೋಮನಗರ, ಹಂದಿಬಡಗನಾಥಗಳಂತೆ, ಶಿವಪುರವು ಇಂತಹ ಸಾಧನೆಗೆ ಒಂದು ಮಹತ್ವದ ಸ್ಥಳವಾಗಿ ಸುಮಾರು ಹನ್ನೆರಡನೆಯ ಶತಮಾನದಿಂದಲೂ ಪ್ರಸಿದ್ಧವಾಗಿತ್ತು. ಪ್ರಸಿದ್ಧ ಸಂಶೋಧಕರಾದ ಪ್ರೊ. ಕೆ. ಜಿ. ಕುಂದಣಗಾರರು ಬೆಳಗಾವಿ ಜಿಲ್ಲೆಯಲ್ಲಿ ರಾಮನಾಥ, ರವಳನಾಥ, ಕಪಿಲನಾಥ, ವಿಠ್ಠಲನಾಥ, ವೈಜನಾಥ ಹೆಸರಿನ ಹಲವು ದೇವಾಲಯಗಳಿರುವ ವಿಚಾರ ತಿಳಿಸಿ ಈ ಭಾಗದಲ್ಲಿ ನಾಥಪಂಥೀಯರು ಪ್ರಬಲವಿದ್ದುದನ್ನು ಎತ್ತಿ ತೋರಿಸಿದ್ದಾರೆ[*೩]. ಡಾ. ಎಂ. ಬಿ. ನೇಗಿನಹಾಳರು ಕೂಡ ಇನ್ನೊಂದೆಡೆಗೆ ಈ ಭಾಗದಲ್ಲಿ ನಾಥಪರಂಪರೆ ಬಹುಕಾಲದವರೆಗೆ ಪ್ರಭಾವಿ ಯಾಗಿತ್ತೆಂದು ತಿಳಿಸುತ್ತಾರೆ[*೪].

ಶಿವಪುರ ದೇವಾಲಯದ ಒಳಹೊರಗಿನ ಸಮಾಧಿಗಳು ಕೆಲ ವಿಗ್ರಹಗಳು, ಸುತ್ತಲಿನ ಪರಿಸರಗಳೆಲ್ಲ ಇಲ್ಲಿ ಹಿಂದೆ ನಡೆದಿರ ಬಹುದಾದ ನಾಥಸಂಪ್ರದಾಯದ ಚಟುವಟಿಕೆಗಳನ್ನು ಸ್ಥೂಲವಾಗಿ ಬಿಂಬಿಸುತ್ತವೆ. ಗರ್ಭಗೃಹದ ಹೊರಭಾಗದ ನವರಂಗದಲ್ಲಿ ಹದಿನಾಲ್ಕು ಕಲ್ಲಿನ ಕಂಬಗಳಿವೆ. ಒಳಸುತ್ತಿನ ಕಂಬಗಳ ಕೆಳಗೆ ಬಲಭಾಗದಲ್ಲಿರುವ ಮೂರ್ತಿಯು ಕುತೂಹಲಕಾರಿಯಾಗಿದೆ.



*ಕನ್ನಡ ಅಧ್ಯಾಪಕರು, ಕಲಾ-ವಿಜ್ಞಾನ ಮಹಾವಿದ್ಯಾಲಯ, ಸಂಕೇಶ್ವರ - ೫೯೧ ೩೧೩, ಜಿ: ಬೆಳಗಾವಿ.



ಒಂದೂವರೆ ಅಡಿ ಅಗಲ ಮತ್ತು ಎರಡೂವರೆ ಅಡಿ ಎತ್ತರವಿರುವ ಶಿಲಾಫಲಕದ ಮೇಲೆ ಕೆತ್ತಲಾದ ಈ ಮೂರ್ತಿಯು ಧ್ಯಾನಸ್ಥ ಭಂಗಿಯಲ್ಲಿ ಕೂತ ಯೋಗಿಯದಾಗಿದೆ. ತಲೆಗೆ ಕತ್ತರಿಯಾಕಾರದಲ್ಲಿ ಪೇಟವನ್ನು ಸುತ್ತಿ ನೀಳದ ಗಡ್ಡವಿರುವ, ಕೈ-ತೋಳು-ಕತ್ತಿಗೆ ರುದ್ರಾಕ್ಷಿ ಧರಿಸಿದ ಕೆತ್ತನೆಯಿದೆ. ಕಿವಿಗಳಲ್ಲಿ ದೊಡ್ಡ ಲೋಲಾಕು (ಕುಂಡಲ)ಗಳಿವೆ. ಇದೊಂದು ನಾಥಯೋಗಿಯ ಧ್ಯಾನ ಸಾಧನೆಯ ಪ್ರತಿಮೆಯಾಗಿದ್ದು, ಹಿಂದೆ ಆ ಯೋಗಿ ಇದೇ ದೇವಾಲಯದಲ್ಲಿ ನೆಲೆನಿಂತು ಸಾಧನೆ ಕೈಗೊಂಡು ಪ್ರಸಿದ್ಧನಾಗಿದ್ದನೆಂದು ತೋರುತ್ತದೆ. ಈ ಮೂರ್ತಿಯನ್ನು ಸ್ಥಳೀಯರು 'ಸಪ್ತರ್ಷಿ' ಎಂದು ಕರೆದು, ಭಾದ್ರಪದದ ಋಷಿಸಪ್ತಮಿಯಲ್ಲಿ ಪೂಜೆ ಸಲ್ಲಿಸುತ್ತಾರೆ; ಸ್ತ್ರೀಯರು ಪ್ರಧಾನವಾಗಿ ಇದಕ್ಕೆ ಪೂಜೆ, ಹರಕೆ ವ್ರತ ಸಲ್ಲಿಸುವುದುಂಟು*[7]. ಎರಡಬದಿಯ ಕಂಬದ ಕೆಳಗೆ ಇದೇ ಪ್ರಮಾಣದಲ್ಲಿರುವ 'ಭೈರವಿ' ಮೂರ್ತಿಯನ್ನು ಕೆತ್ತಲಾಗಿದೆ. ದೇವಾಲಯದ ಮುಖಮಂಟಪದ ಎದುರಿನ ಪ್ರಾಂಗಣದಲ್ಲಿ ಗರ್ಭಗೃಹಕ್ಕೆ ಅಭಿಮುಖವಾಗಿ ನಿಲ್ಲಿಸಿರುವ ಎರಡು ಶಿಲಾವಿಗ್ರಹಗಳು ಕೂಡ ನಾಥಯೋಗಿಗಳ ಸ್ಮರಣೆಗಾಗಿ ನಿಲ್ಲಿಸಿದಂತಿವೆ. ಇವು ಸುಮಾರು ನಾಲ್ಕು ಅಡಿ ಎತ್ತರದ ಶಿಲೆಯಲ್ಲಿ ಕೆತ್ತನೆಗೊಂಡಿವೆ. ಉಬ್ಬುಶಿಲ್ಪಕ್ಕಿಂತ ತುಸು ಚೆನ್ನಾಗಿ ಕೆತ್ತಲಾದ, ಆದರೆ ಪೂರ್ಣರೂಪ ಪಡೆಯದ ಈ ಕೆತ್ತನೆಯಲ್ಲಿಯ ಯೋಗಿಗಳು ಧ್ಯಾನಕ್ಕೆ ನಿಂತಿದ್ದಾರೆ. ಕೈಜೋಡಿಸಿ ಸಮಭಂಗಿಯಲ್ಲಿ ನಿಲ್ಲಲಾದ ಈ ಮೂರ್ತಿಗಳ ಕಿವಿಗಳಲ್ಲಿಯೂ ಲೋಲಾಕುಗಳಿವೆ. ಮುಂಗೈ. ತೋಳು ಕುತ್ತಿಗೆಗಳಲ್ಲಿ ರುದ್ರಾಕ್ಷಿಗಳಿವೆ. ವಿಶೇಷ ಎಂದರೆ ನಿಂತಿರುವ *ಈ ಯೋಗಿಗಳ ಶಿಖೆಯ ಮೇಲೆ ಲಿಂಗವಿರುವುದು, ಪೀಠದ ಮೇಲಿನ ಲಿಂಗ, ನೆತ್ತಿಯ ಮೇಲಿರುವುದು ಸ್ಫುಟವಾಗಿ ಕಾಣುತ್ತವೆ*. ಬಲದಯೋಗಿಯು ಹಟಯೋಗದಲ್ಲಿರುವುದನ್ನು ಶರೀರಸ್ಥಿತಿ ತೋರುತ್ತದೆ. ಸೊಂಟದ ಬಟ್ಟೆ ಬಿಟ್ಟರೆ ಮೈಮೇಲೆ ಬಟ್ಟೆಗಳಿಲ್ಲ.

ಯೋಗಿಗಳ ಮೂರ್ತಿಗಳನ್ನು ಬಿಟ್ಟರೆ, ಇಲ್ಲಿ ಕಾಣಿಸುವ ಸಮಾಧಿಗಳು ಈ ದಿಸೆಯಲ್ಲಿ ಪ್ರಬಲ ಆಧಾರಗಳಾಗುತ್ತವೆ. ಗರ್ಭಗುಡಿಯ ಹತ್ತಿರದಲ್ಲಿ, ಎಂದರೆ ನವರಂಗದ ಬಲಬದಿಯಲ್ಲಿ ಈಗಲೂ ಪೂಜೆಗೊಳ್ಳುತ್ತಿರುವ ಸಮಾಧಿ ದೇವಾಲಯದ ಒಳಗೆ ಬರುವುದು ಕುತೂಹಲಕರವಾದುದು. ಇದು ಹಳೆಗಾಲದ ಯೋಗಿಗಳೊಬ್ಬರ ಸಮಾಧಿ ಎಂಬುದು ಸ್ಥಳೀಯರ ಹೇಳಿಕೆ ಯಾಗಿದ್ದು. ನಿರ್ದಿಷ್ಟವಾಗಿ ಯಾರದೆಂಬುದು ತಿಳಿಯದು. ಹಿಂದೊಮ್ಮೆ ಇದೇ ದೇವಾಲಯದಲ್ಲಿ ನೆಲೆನಿಂತು, ಧ್ಯಾನಾದಿಗಳನ್ನು ಮಾಡುತ್ತ ಬಾಳಿದ್ದ ನಾಥಯೋಗಿಯ ಸಮಾಧಿ ಆಗಿರಬಹುದಾಗಿದೆ. ತುಂಬ ಪ್ರಭಾವಿಯೂ, ಜನಪ್ರಿಯನೂ ಆಗಿದ್ದ ಕಾರಣ, ದೇವರಿಗೆ ಪೂಜೆ ಸಲ್ಲಿಸುವಾಗಲೆಲ್ಲ ಈ ಸಮಾಧಿಗೂ ಪೂಜೆ ಸಲ್ಲುತ್ತ ಬಂದಿರಬೇಕೆಂದು ತಿಳಿಯಲು ಸಾಧ್ಯವಾಗುತ್ತದೆ.

ದೇವಾಲಯದ ದಕ್ಷಿಣಭಾಗಕ್ಕೆ ತುಸು ದೂರದಲ್ಲಿ ಎರಡು ಸಮಾಧಿಗಳಿದ್ದು, ನಿತ್ಯ ಪೂಜೆಗೊಳ್ಳುತ್ತವೆ. ಅದರಂತೆ ಪೂರ್ವದಿಕ್ಕಿಗೆ ಕೂಡ ಎರಡು ಸಮಾಧಿಗಳಿವೆ. ಇವೆಲ್ಲ ಮೊದಲು ದೇವಾಲಯದಲ್ಲಿದ್ದು ತಮ್ಮಷ್ಟಕ್ಕೆ ತಾವೇ ಸಾಧನೆ ಮಾಡುತ್ತಿದ್ದ ಯೋಗಿಗಳ ಸಮಾಧಿಗಳಾಗಿವೆ ಎಂದು ಊರಿನ ಹಿರಿಯರು ತಿಳಿಸುತ್ತಾರೆ*೫. ಇದು ನಾಥ ಆರಾಧನೆಯ ಸಾಧನೆಯ ಕೇಂದ್ರ ವಾಗಿರುತ್ತೆಂಬುದಕ್ಕೆ ಬಹುಮುಖ್ಯ ಕಾರಣವೊಂದಿದೆ. ಅದು ಹಿಂದಿನ ಕಾಲದಿಂದಲೂ ಇಂದಿನವರೆಗೂ ಸದಾ ಸಜೀವನಾಗಿ ಜ್ವಲಿಸುತ್ತ ಬಂದಿರುವ 'ಧುನಿ' ದೇವಾಲಯದ ಪ್ರಾಂಗಣದಲ್ಲಿ ಬಲಮೂಲೆ ಯಲ್ಲಿ ಅಗ್ನಿ ಕುಂಡವಿದ್ದು, ಅದರಲ್ಲಿ ಮೂರು 'ಲಾಕುಳ'ಗಳನ್ನು ನಿಲ್ಲಿಸಲಾಗಿದೆ. ಬದಿಯಲ್ಲಿ ಕೃಷ್ಣಾಜಿನ ಹಾಸಿದ್ದು, ಅದರ ಮೇಲೆ ನವನಾಥರ ಭಾವಚಿತ್ರವಿದೆ. ಬೆಂಕಿ ಆರದಂತೆ ನೋಡಿಕೊಳ್ಳ ಲಾಗುತ್ತದೆ. ಹಿಂದೆ ಇಲ್ಲಿಯೇ ನಾಥಯೋಗಿಗಳು ಕೂತು ಅಗ್ನಿಯನ್ನು ಪೂಜಿಸುತ್ತಿದ್ದಿರಬೇಕು.

ದೇವಾಲಯದ ಒಳಗಿನ ನವರಂಗದ ಬಲಭಿತ್ತಿಯಲ್ಲಿ ನವಗ್ರಹಗಳನ್ನು ಕೆತ್ತಲಾಗಿದ್ದು, ದೇವಾಲಯದ ಹೊರಗೆ ಬಲದ ಪಾರ್ಶ್ವದಲ್ಲಿ ಪ್ರತ್ಯೇಕವಾಗಿ ವೀರಭದ್ರಮೂರ್ತಿಯಿದೆ. ಇದು ಚತುರ್ಭುಜ ವೀರಭದ್ರನ ಮೂರ್ತಿಯಾಗಿದ್ದು ಸು. ಐದು ಅಡಿ ಎತ್ತರವಾಗಿದೆ. ಕೆಳಗೆ ಎಡಮೂಲೆಯಲ್ಲಿ ಕೈಜೋಡಿಸಿನಿಂತ ದಕ್ಷನ ಚಿಕ್ಕಮೂರ್ತಿಯೂ ಇದೆ.

ದೇವಾಲಯದ ಒಳಹೊರಗಿನ ಮೂರ್ತಿ, ಸಮಾಧಿ ಅಗ್ನಿಕುಂಡಗಳನ್ನು ಮತ್ತು ಸುತ್ತಮುತ್ತಲಿನ ಪ್ರದೇಶವನ್ನು ಚೆನ್ನಾಗಿ ಗಮನಿಸಿದರೆ ಈ ವಿಚಾರಗಳು ತಿಳಿದುಬರುತ್ತವೆ.

*೧. ಕಾಡಿನ ನಡುವೆ ನಿಸರ್ಗರಮ್ಯ ಮತ್ತು ಶಾಂತ ಪರಿಸರದಲ್ಲಿ ದೇವಾಲಯ ರಚನೆಗೊಂಡಿದೆ. ಇಲ್ಲಿಯ ನೀರು, ನೆಲ, ಪರಿಸರ ಗಳನ್ನು ಕಂಡು ಸುಮಾರು ಹನ್ನೆರಡು ಹದಿಮೂರನೆಯ ಶತಮಾನದಲ್ಲಿ ಸಿದ್ದರು, ಯೋಗಿಗಳು ಇಲ್ಲಿನ ನೈಸರ್ಗಿಕ ಗುಹೆಗಳಲ್ಲಿ ತಮ್ಮ ಸಾಧನೆ ಮಾಡುತ್ತ, ಈ ದೇವಾಲಯವನ್ನು ವಾಸಕ್ಕೆ ಬಳಿಸುತ್ತಿದ್ದರು. ಇದರಲ್ಲಿ ನಾಥಯೋಗಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರು.*

*೨. ಇಲ್ಲಿರುವ ಸಮಾಧಿಗಳು, ಯೋಗಿಗಳ ಮೂರ್ತಿಗಳು ಮತ್ತು ಸದಾ ಉರಿಯುವ ಧುನಿಗಳಿಂದಾಗಿ ಐದಾರು ನೂರು ವರ್ಷಗಳ ಕಾಲ ಇದು ನಾಥಪಂಥದ ಚಟುವಟಿಕೆಗಳಿಗೆ ದೊಡ್ಡ ಕೇಂದ್ರವಾಗಿತ್ತೆಂಬ ವಿಚಾರ ತಿಳಿಯುತ್ತದೆ. ಬಹುಶಃ ಸಮಾಧಿಯನ್ನು ಹೊಂದಿದ ಪ್ರಮುಖ ಯೋಗಿಗಳ ಸ್ಮರಣೆಯಲ್ಲಿ ಅವರ ಮೂರ್ತಿ ಕೆತ್ತಿಸಿ ಸಮಾಧಿಯ ಹತ್ತಿರ ನಿಲ್ಲಿಸುವ ರೂಢಿ ಇರಬಹುದು.*

*೩. ಶಿವಪುರದಿಂದ ದಕ್ಷಿಣಕ್ಕೆ ಇಪ್ಪತ್ತು ಕಿ.ಮೀ. ದೂರದಲ್ಲಿ ಬೆಟ್ಟದ ಇಳಿಜಾರಿನಲ್ಲಿ 'ಕಾಳಭೈರವನಾಥ' ದೇವಾಲಯವಿದೆ ಅರವತ್ತು ಕಿ.ಮೀ. ದೂರದಲ್ಲಿ ಪ್ರಸಿದ್ಧ ನಾಥಕೇಂದ್ರವಾದ ಹಂದಿ ಬಡಗನಾಥವಿದೆ. ಪೂರ್ವಕ್ಕೆ ನಾಲ್ವತ್ತು ಕಿ.ಮೀ. ದೂರದಲ್ಲಿ ಇನ್ನೊಂದು ನಾಥಕೇಂದ್ರವಾಗಿದ್ದ 'ಕನ್ಹೇರಿ' ಮಠವಿದೆ*೭. ಇಪ್ಪತ್ತೈದು ಕಿ.ಮೀ. ಉತ್ತರದಲ್ಲಿ ಬೆಡಕಹಾಳೆ ಎಂಬ ಇಂತಹುದೇ ತಾಣವಿದೆ. ಇವೆಲ್ಲ ಮೊನ್ನೆ ಮೊನ್ನೆಯವರೆಗೂ ನಾಥಪಂಥದ ಸಾಧು-ಸನ್ಯಾಸಿಗಳ ಸಾಧನೆಗೆ ತವರುನೆಲವಾಗಿದ್ದವು.*

*೪. ಶಿವಪುರವು 'ಕನ್ಹೇರಿಯಿಂದ' 'ಕದ್ರಿ' ವರೆಗೆ ಸಂಚರಿಸುತ್ತಿದ್ದ ನಾಥಯೋಗಿಗಳ ಪ್ರವಾಸಪಥದಲ್ಲಿ ವಿಶ್ರಾಂತಿಯ ತಾಣವೂ ಆಗಿತ್ತು.*



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

- *೧. ಸಿದ್ಧ ಸಾಹಿತ್ಯ - ಮ. ಸು. ಕೃಷ್ಣಮೂರ್ತಿ, ಪು. ೧೭೪.
- *೨. ಈ ಗ್ರಾಮವನ್ನು ಜನರು ಈಗ 'ಶಿಪ್ಪೂರು' ಎಂದೇ ಕರೆಯುತ್ತಾರೆ.
- *೩. ಡಾ. ಸದಾನಂದ ಬಿಳ್ಳೂರ., ಕೆ. ಜಿ. ಕುಂದಣಗಾರ ಒಂದು ಅಧ್ಯಯನ ಪು. ೨೬೧
- *೪. ಡಾ। ಎಂ. ಬಿ. ನೇಗಿನಹಾಳ., ಪ್ರಭಾಂಕಲಿ, ಪು. ೮೪.
- *೫. ಈ ವಿಚಾರವನ್ನು ದೇವಾಲಯದ ಪೂಜಾರಿಗಳಾದ ರಾಜರಾಮ ಗುರುವ ತಿಳಿಸಿದ್ದಾರೆ.
- *೬. ದಿ. ೧೬.೯.೨೦೦೦ ರಂದು ನಡೆಸಿದ ಕ್ಷೇತ್ರಕಾರ್ಯ ಆಧರಿಸಿದ್ದು.
- *೭. 'ಕನ್ಹೇರಿ' ಎಂಬುದು ನಾಥರ ಚೇರಾಸಿ ಯೋಗಿಗಳ ಹೆಸರಿನಲ್ಲಿ ಒಂದು.

ಡಾ|| ಬೆಂ. ಶಾ. ಶ್ಯಾಮಲಾ ರತ್ನಕುಮಾರಿ*

# ಉಪ್ಪಾರಪೇಟೆಯ ಸೆಟ್ಟೀಶ್ವರ ದೇವಾಲಯ

ಉಪ್ಪಾರಪೇಟೆಯು ಕೋಲಾರ ಜಿಲ್ಲೆಯ ಚಿಂತಾಮಣಿ ತಾಲೂಕಿನ ಅಂಬಾಜಿದುರ್ಗ ಹೋಬಳಿಗೆ ಸೇರಿದ್ದು ಚಿಂತಾಮಣಿ - ಶಿಡ್ಲಘಟ್ಟ ರಸ್ತೆಯ ಎಡಬದಿಗೆ ಚಿಂತಾಮಣಿಯಿಂದ ೮ ಕಿ.ಮೀ ದೂರದಲ್ಲಿದೆ. ಈ ಹಿಂದೆ ಉಪ್ಪಾರಪೇಟೆಯಲ್ಲಿ ಉಪ್ಪಾರರು ನೆಲಸಿದ್ದರಾದರೂ ಈಗ ಮುಸಲ್ಮಾನರೇ ಶೇಕಡ ೮೦ರಷ್ಟು ಇರುವುದನ್ನು ಕಾಣಬಹುದಾಗಿದೆ. ಮುಸಲ್ಮಾನರ ಮನೆಗಳ ನಡುವೆಯೇ ಇದೆ, ಈ ಸೆಟ್ಟೀಶ್ವರ/ಶೃಷ್ಟೀಶ್ವರ ದೇವಾಲಯ.

ಹತ್ತು ವರ್ಷಗಳಷ್ಟು ಹಿಂದೆಯೇ ಈ ದೇವಾಲಯಕ್ಕೆ ಹೋಗಿದ್ದಾಗ ನನ್ನ ಗಮನ ಸೆಳೆದದ್ದೇ ದೇವಾಲಯದ ಮುಂದುಗಡೆ ಹಾಗೂ ಆವರಣದಲ್ಲಿದ್ದ 'ಶೃಷ್ಟೀಶ್ವರ' ದೇವಾಲಯ ಎಂಬ ನಾಮಫಲಕ ಹಾಗೂ ದೇವಾಲಯದ ತಳಪಾದಿಯಲ್ಲಿ ಮೂರೂ ಕಡೆಗೆ (ಎಂದರೆ ದಕ್ಷಿಣ, ಪಶ್ಚಿಮ, ಉತ್ತರದಲ್ಲಿದ್ದ) ನಾಲ್ಕೈದು ಸಾಲುಗಳಲ್ಲಿನ ತಮಿಳು ಗ್ರಂಥಲಿಪಿಯ ಶಾಸನಗಳು. ಅದು ಲೂಯಿಸ್ ರೈಸರ ಎಪಿಗ್ರಾಫಿಯಾ ಕರ್ನಾಟಿಕಾದ ೧೦ನೇ ಸಂಪುಟದಲ್ಲಿ ಪ್ರಕಟವಾಗಿರುವುದೆಂದು ತಿಳಿದುಬಂದಿತು. ಆದರೆ ಈ ದೇವಾಲಯದ ಬಗ್ಗೆ ಈವರೆಗೆ ವಿವರಗಳು ದಾಖಲು ಗೊಂಡಿಲ್ಲವೆಂದು ಒಮ್ಮೆ ಎಂ.ಎ.ಆರ್. ಸಂಪುಟಗಳನ್ನೂ ಓದಿದಾಗ ಖಚಿತವಾಯಿತು. ಅದಾಗಿ ಪ್ರಸ್ತುತ ಲೇಖನ.

*ದೇವಾಲಯದ ಬಗ್ಗೆ ಶಾಸನೋಕ್ತ ವಿವರಗಳು*

ಈ ದೇವಾಲಯದಲ್ಲಿ ಮೂರು ತಮಿಳು-ಗ್ರಂಥಲಿಪಿಯಲ್ಲಿರುವ ತಮಿಳು ಶಾಸನಗಳೂ ಮತ್ತು ಕನ್ನಡ ಲಿಪಿಯಲ್ಲಿರುವ ಸಂಸ್ಕೃತ ಶಾಪಾಶಯ ಶ್ಲೋಕವಿರುವ ಒಂದು ಶಾಸನವೂ ಕಾಣಸಿಗುತ್ತವೆ. ದೇವಾಲಯದ ಅಧಿಷ್ಠಾನದ ಶಾಸನದಿಂದ*[೧] ತಿಳಿದುಬರುವ ವಿಷಯವೆಂದರೆ ಕೈವಾರನಾಡಿನ ಪ್ರಭುವಾದ ಕೌಂಡಿನ್ಯಗೋತ್ರದ ಬ್ರಾಹ್ಮಣನಾದ ಮಹಾನಾಯಕ ಅಂಗೈಮುಗಿಲ್-ಅಮುದನ್ನ್‌ನ ಮಗನಾದ 'ದುಷ್ಟರಾದಿತ್ತ' ಮತ್ತು 'ದುರ್ಕುಲನಕುಲ' ಎಂಬ ಬಿರುದಾಂಕಿತನಾದ ಪಿರಮಾಡಿ ರಾಯಸೆಟ್ಟಿದೇವನು ನಾನಾವಿಧವಾದ ಹೂಗಿಡಗಳಿಂದಾವೃತವಾಗಿದ್ದ 'ವಿದಿರಚ್ಚಿತ್ತು'(ಉಪ್ಪಾರಪೇಟೆ) ಎಂಬಲ್ಲಿ ಈ ಕಲ್ಲಿನ ದೇವಾಲಯವನ್ನೂ ದಕ್ಷಿಣಾಭಿಮುಖವಾದ ದ್ವಾರ ಮಂಟಪವನ್ನು ಕಟ್ಟಿಸಿ ಪಶುಪತಿಯ ಪೂಜೆಗಾಗಿ ಕೌಶಿಕ ಗೋತ್ರೀಯ ಬ್ರಾಹ್ಮಣನಾದ ರಾಜರಾಜಭಟ್ಟನಿಗೆ ಕರಮುಕ್ತವಾಗಿ ಭೂದಾನವನ್ನು ನೀಡಿದನೆಂದು ಶಾಸನ ಹಾಕಿಸಿದನು. ಅಲ್ಲದೆ ಕೊಂಗರ್ ಕೋಡಿಮಂಗಲದ ತಿಲ್ಲೈಪ್ಪಿರಾನ್ ಅರಿವಾಡತ್ತಾ ಯಾಂಡಾರರ್ ಎಂಬುವನಿಗೆ ದೇವಾಲಯದ ಮಾಡಪಟ್ಟಿಯಂ ಅನ್ನು ನೀಡಿದನು; ಸಂಗೀತವಾದ್ಯ ಸೇವೆಗಾಗಿ ಭೂದಾನ ನೀಡಿದನು; ೫ ಕಳಂಜು ತೂಕವುಳ್ಳ ಚಿನ್ನದ ತಟ್ಟೆಯನ್ನೂ ಘಂಟಾಲೋಹದಿಂದ ಮಾಡಿದ ನೂರು ಪಲಂ ತೂಕದ ಪಾತ್ರೆಗಳನ್ನೂ, ಪ್ರತಿದಿನವೂ ಮೂರು ಬಾರಿ ದಶದೀಪಗಳನ್ನು ಬೆಳಗಿಸಲು ಎರಡು ಗಾಣಗಳ ಎಣ್ಣೆಯನ್ನೂ ದಾನ ನೀಡಿದನು. ಈ ಶಾಸನವನ್ನು ಬರೆದವನು ಮೂರು ವಿಧವಾದ ತಮಿಳಿನಲ್ಲಿ ಪಾಂಡಿತ್ಯವನ್ನು ಹೊಂದಿದ್ದ ನಂಬೆರುಮಾಳ್ ಅಲಿಯಾಸ್ ಅಳವಿಳಿ ಅರಿನಾನ್. ಪಿರಮಾಡಿರಾಯನ್ ಸೆಟ್ಟಿಯು ಹರನ ಪ್ರತಿಮೆಯನ್ನು (ಲಿಂಗ) ಮಾಡಿದ ಶಂಕರನಿಗೆ ಪೂಜ್ಯಜನರ ಅನುಮತಿಯನ್ನು ಪಡೆದು 'ಇರಾಯಾಚಾರಿ' ಎಂಬ ಬಿರುದನ್ನು ದಯಪಾಲಿಸಿ, ಭೂಮಿಯನ್ನು ನೀಡಿದನು. ಈ ದಾನವು ಆಚಂದ್ರಾರ್ಕವಾಗಿ ನಿಲ್ಲತಕ್ಕದ್ದು. ಇನ್ನೊಂದು ಶಾಸನವು*[೨] ದ್ವಾರಮಂಟಪದ ಭಾಗದಲ್ಲಿ ದ್ವಾರದ ಎಡಪಾರ್ಶ್ವದ ಗೋಡೆಯ ಮೇಲೆ ಬರೆಯಲ್ಪಟ್ಟಿದೆ. ಈ ಶಾಸನದ ಕಾಲ ಹೊಯ್ಸಳ ದೊರೆ ವೀರರಾಮನಾಥದೇವರ ಮೂವತ್ತಾರನೆಯ ಆಳ್ವಿಕೆಯ ವರ್ಷ ಎಂದರೆ ಕ್ರಿ.ಶ.೧೨೯೦ ಆಗಿದೆ. ಶಾಸನೋಕ್ತ ವಿಷಯವೆಂದರೆ ಅವನಿಯನಾಡಿನ ಮಾಂಡಳಿಕನ ಮಗನಾದ 'ಸಿತಗರಗಂಡ' ಎಂಬ ಬಿರುದನ್ನು ಪಡೆದಿದ್ದ ಮಲ್ಲಯ ನಾಯಕನು ಈ ದೇವಾಲಯದ ಸೆಟ್ಟೀಶ್ವರಂ ಉಡೈಯ ನಾಯನಾರರಿಗೆ ದೇವರಿಗೆ ಭೂಮಿಯನ್ನು ದೇವದಾನವಾಗಿ ನೀಡಿದನು. ಈ ದೇವಮಾನ್ಯ ಭೂಮಿಯ ಮೇಲೆ ಶಾಸನೋಕ್ತ ತೆರಿಗೆಯನ್ನು ವಿಧಿಸುವವನಿಗೆ ಮಾತೃಗಮನ ಪಾತಕವುಂಟಾಗುವುದು ಎಂದು ಹೇಳಿದೆ.

ಅದೇ ದೇವಾಲಯದ ದಕ್ಷಿಣ ಪಾರ್ಶ್ವದ ಗೋಡೆಯಲ್ಲಿ ಮತ್ತೊಂದು ಶಾಸನವಿದ್ದು*[೩] ಅದರ ಕಾಲ ಸು. ೧೨೩೦ ಎಂದು ತಿಳಿದುಬರುತ್ತದೆ. ಇದರಲ್ಲಿ ವಾಯಿರಿಸಿಯನ್ನನ ಮಗ ಸನಂದೈ ಈಶ್ವರ ದೇವರನ್ನು ಪ್ರತಿಷ್ಠೆ ಮಾಡಿದನೆಂದೂ ಈಶ್ವರನ ಮೂರ್ತಿ(ಲಿಂಗ)ಯನ್ನು ಇರಸಚಾರಿಯ ಮೊಮ್ಮಗನಾದ ಪೆರುಮಾಪ್ಪಿಳ್ಳೈ ನಿರ್ಮಿಸಿದನೆಂದೂ ಹೇಳಿದೆ.

ಈ ಮೇಲಿನ ಶಾಸನದ ಸಮೀಪವೇ ಕನ್ನಡ ಲಿಪಿಯಲ್ಲಿ

*ಮುಖ್ಯಸ್ಥರು, ಇತಿಹಾಸ ವಿಭಾಗ, ಬಸವೇಶ್ವರ ಪ್ರಥಮ ದರ್ಜೆ ಮಹಾವಿದ್ಯಾಲಯ, ರಾಜಾಜಿನಗರ, ಬೆಂಗಳೂರು-೫೬೦ ೦೧೦.



ಉಪ್ಪಾರಪೇಟೆ ಸೆಟ್ಟೇಶ್ವರ ದೇವಾಲಯದ ತಳವಿನ್ಯಾಸ, ಅಧಿಷ್ಠಾನ, ಭಿತ್ತಿ ಕಂಬ, ಪ್ರಸ್ತರ ಭಾಗಗಳು

ಸಂಸ್ಕೃತ ಭಾಷೆಯ 'ಸ್ವದತ್ತಾಂಪರದತ್ತಾಂ ವಾಯೋ ಹರೇತಿ' ಎಂಬ ಶಾಪಾಶಯದ ಶ್ಲೋಕವನ್ನುಳ್ಳ ಶಾಸನ*ವಿದೆ. ಈ ಶಾಸನದಲ್ಲಿರುವ ಪ್ರಮುಖ ವಿಷಯವೆಂದರೆ ನಂದನ ಸಂವತ್ಸರ ಕಾರ್ತಿಕ ಸು.. ದಂದು ಶ್ರೀಮುಖ ಅಂಬಡಕ್ಕೆನಾಡ ಪ್ರಭು ಚಿಕ್ಕ ಪತಯ್ಯನ ಮಗ ಬಯಚಯನು ಬಸವೆನಾಯಕ್ಕನ ಮಗ ಯೆಲ್ಲಪ್ಪನು ಯಿಂಮಡಿ ಬಯಿಚಪ್ಪ ಒಡೆಯರು ಎಂಬ ಪ್ರಸ್ತಾಪ ಬಂದಿದ್ದು ದಾನದ ಭಾಗ ಸ್ಪಷ್ಟವಿಲ್ಲ.

ಈ ಎಲ್ಲ ಶಾಸನಗಳಲ್ಲಿನ ವಿವರಗಳನ್ನು ಅಧ್ಯಯನ ಮಾಡಿದಾಗ ಸ್ಪಷ್ಟವಾಗಿ ತಿಳಿದು ಬರುವ ಐತಿಹಾಸಿಕ ಅಂಶಗಳೆಂದರೆ:

೧. ದೇವಾಲಯದ ನಿರ್ಮಾಣದ ಕಾಲ - ೧೨ನೇ ಶ.ದ ಉತ್ತರಾರ್ಧ(ಕ್ರಿ.ಶ.೧೧೭೯)

೨. ಈ ದೇವಾಲಯವನ್ನು ನಿರ್ಮಿಸಿದವನು - ಕೈವಾರನಾಡಿನ ಪ್ರಭು ಮಹಾನಾಯಕ ಅಂಗೈಮುಗಿಲ್ ಅಮುದನ್ನನ ಮಗ ಪಿರಮಡಿರಾಯ ಸೆಟ್ಟಿದೇವ.

೩. ಸೆಟ್ಟಿದೇವನು ನಿರ್ಮಿಸಿದ ದೇವಾಲಯ (ನಿರ್ಮಾಪಕನ ಹೆಸರನ್ನು ಹೊಂದಿದೆ) - ಸೆಟ್ಟೀಶ್ವರ ದೇವಾಲಯ

ಇಂದು ದೇವಾಲಯದಲ್ಲಿರುವ ನಾಮಫಲಕ ಶೃಷ್ಟೀಶ್ವರ ದೇವಾಲಯ - ಸೆ(ಶೆ)ಟ್ಟೀಶ್ವರ ಎಂಬುದರ ರೂಪಾಂತರವೇ ಆಗಿದೆ.

೪. ದೇವಾಲಯವಿರುವ ಇಂದಿನ ಉಪ್ಪಾರಪೇಟೆಯ ಮೂಲನಾಮ ವಿದಿರಚ್ಚೆತ್ತು ಎಂದು ಇದ್ದಿತು.

೫. ಕ್ರಿ.ಶ.೧೨೩೦ರಲ್ಲಿ ದೇವಾಲಯ ಪ್ರಾಯಶಃ ಜೀರ್ಣೋದ್ಧಾರಗೊಂಡು ಇರಸಚಾರಿಯ ಮೊಮ್ಮಗನಾದ ಪೆರುಮಾಪಿಳ್ಳೆ ಎಂಬುವನಿಂದ ನಿರ್ಮಿತವಾದ ಈಶ್ವರ ಲಿಂಗನನ್ನು ವಾಯಿರಿಸಿಯನ್ನನ ಮಗ ಸನಂದ್ಯೆ ಎಂಬುವನ ಪ್ರತಿಷ್ಠೆ ಮಾಡಿಸಿದನು.

೬. ಉಪ್ಪಾರಪೇಟೆಯು ಇಂದಿನ ಚಿಂತಾಮಣಿ ತಾಲ್ಲೂಕಿನ ಅಂಬಾಜಿದುರ್ಗ ಹೋಬಳಿಗೆ ಸೇರಿದೆ. ಈ ಅಂಬಾಜಿದುರ್ಗವು ಶಾಸನದಲ್ಲಿ ಅಂಬಡಕ್ಕೆನಾಡು ಎಂದು ಉಲ್ಲೇಖಗೊಂಡಿದೆ. ಚೋಳರ ಆಳ್ವಿಕೆ ಈ ಪ್ರದೇಶದಲ್ಲಿ ನಡೆದಿದ್ದಾಗ ಉಪ್ಪಾರಪೇಟೆ ಅಥವಾ ವಿದಿರಚ್ಚೆತ್ತು ಕೈವಾರ ನಾಡಿಗೂ ಹೊಯ್ಸಳರ ಆಳ್ವಿಕೆಯಲ್ಲಿ ಆವನಿನಾಡಿಗೂ ಆನಂತರದ ಕಾಲದಲ್ಲಿ ಎಂದರೆ ವಿಜಯ ನಗರೋತ್ತರ ಕಾಲದಲ್ಲಿ ಅಂಬಡಕ್ಕನಾಡಿಗೆ ಸೇರಿದ್ದಿತು ಎಂದು ಹೇಳಬಹುದೇನೋ ?

೭. ಚೋಳರ ಕಾಲದಲ್ಲಿ ದೇವಾಲಯ ನಿರ್ವಹಣಾಧಿ ಕಾರವನ್ನು 'ಮಾದಪಟ್ಟಿ' ಎಂದು ಕರೆಯಲಾಗುತ್ತಿದ್ದಿತು. ಮಾದಪಟ್ಟಿ ಎಂಬುದು 'ಮಠಪತಿ' ಎಂಬುದರ ಪರ್ಯಾಯರೂಪ ವಿದ್ದಂತಿದೆ.

೮. ಚಿನ್ನದ ತೂಕವನ್ನು 'ಕಟಂಜು' ಎಂದೂ, ಇತರ ಲೋಹಗಳ ತೂಕವನ್ನು 'ಪಲಂ' ಎಂದು ಪದಪ್ರಯೋಗಿಸುತ್ತಿದ್ದರು.

*ದೇವಾಲಯದ ವಿವರಗಳು:*

ಈ ದೇವಾಲಯದ ತಳವಿನ್ಯಾಸವು ದೀರ್ಘಚತುರ ಸ್ರಾಕಾರವಾಗಿದ್ದು, ಸರಳವಾದ ಚೋಳವಾಸ್ತು ಶೈಲಿಯಲ್ಲಿ ಕಣಶಿಲೆಯನ್ನು ಪ್ರಯೋಗಿಸಿ ಕಟ್ಟಿರುವ ದೇವಾಲಯವಾಗಿದೆ. ತಿರ್ಯಙ್ಮುಖಕ್ರಮವಾಗಿ ಈ ದೇವಾಲಯದಲ್ಲಿ ಗೋಪುರವಿಲ್ಲದ ಸಮತಟ್ಟಾದ ಛಾವಣಿ, ಗರ್ಭಗೃಹ, ಅಂತರಾಳ ಅರ್ಧಮಂಟಪ ಮತ್ತು ನಾಲ್ಕು ಕಂಬಗಳುಳ್ಳ ನವರಂಗ ಹಾಗೂ ದಕ್ಷಿಣಾ ಭಿಮುಖವಾದ ದ್ವಾರಮಂಟಪಗಳು ಕಂಡುಬರುತ್ತವೆ. ದ್ವಾರ ಮಂಟಪಕ್ಕೆ ಪ್ರವೇಶಿಸಲು ಪೂರ್ವ ಮತ್ತು ಪಶ್ಚಿಮದ ಕಡೆಗೆ ಮೂರು ಮೆಟ್ಟಿಲುಗಳು, ಮೆಟ್ಟಿಲುಗಳ ಪಾರ್ಶ್ವದಲ್ಲಿ ಆನೆಯೂ ಸೊಂಡಿಲಿನ ಕೆಳಗೆ ಅರಳಿದ ಪದ್ಮ ಅಥವಾ ಚಕ್ರದ ಕೆತ್ತನೆಯೂ ಇವೆ. ದ್ವಾರಪಾಲಕರಿಲ್ಲ, ದ್ವಾರಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ದ್ವಾರಶಾಖೆಗಳಲ್ಲಿ ಪುಷ್ಪದಳ, ಕಂಬ, ವಜ್ರಗಳ ಸಾಲುಪಟ್ಟಿಕೆಗಳಿವೆ. ದ್ವಾರಮಂಟಪದಿಂದ ಒಳಹೊಕ್ಕರೆ ನಾಲ್ಕು ಕಂಬಗಳಿಂದ ಕೂಡಿದ ನವರಂಗವಿದೆ. ನವರಂಗದ ಕಂಬಗಳು ಹೊಯ್ಸಳ ಶೈಲಿಯ ಅಲಂಕರಣವನ್ನು ಹೊಂದಿದೆ. ಕಂಬದ ಪೀಠವು ಚೌಕಾ ಕಾರವಾಗಿದ್ದು ಯಾವ ಶಿಲ್ಪ ಅಥವಾ ಕೆತ್ತನೆಯನ್ನೂ ಹೊಂದದೆ ಸರಳವಾಗಿದೆ. ಪೀಠದ ಮೇಲಿನ ಕಾಂಡಭಾಗದಲ್ಲಿ ದುಂಡಾದ ಭಾಗ; ಅಷ್ಟಕೋನ ಭಾಗ ಹಾಗೂ ಅಗಲವಾದ ಘಂಟೆಯಾಕಾರದ ಭಾಗಗಳಿದ್ದು ಈ ಎಲ್ಲ ಭಾಗಗಳಲ್ಲೂ ವಜ್ರಪಟ್ಟಿಕೆ ಪುಷ್ಪ ಪಟ್ಟಿಕೆಗಳೂ ಹಾಗೂ ಮಧ್ಯದಲ್ಲಿ ಹಾರ ಪದಕಗಳ ಆಲಂಕಾರಿಕ ಕೆತ್ತನೆಗಳಿವೆ. ಒಂದೆರಡು ಕಂಬಗಳ ಮೇಲ್ಭಾಗದಲ್ಲಿ ಕಲ್ಲಿನ ಚಕ್ಕೆಗಳೆದ್ದು ಹೋಗಿದೆ. ಕಂಬದ ಮೇಲ್ಭಾಗದಲ್ಲಿ ದುಂಡಗಿನ ಬೋದುಗೆ ಹಾಗೂ ಚೌಕಾಕಾರದ ಹೊದಿಕೆಯ ಕಲ್ಲು, ಅದರ ಮೇಲ್ಭಾಗದಲ್ಲಿ ಗೂಟದ ಕಲ್ಲನ್ನು ಅಳವಡಿಸಲಾಗಿದೆ. ನಾಲ್ಕು ಕಂಬಗಳ ಮಧ್ಯದ ಭುವನೇಶ್ವರಿಯಲ್ಲಿ ಎರಡು ಚೌಕಗಳನ್ನು ಬಿಡಿಸಿದ್ದು ಮಧ್ಯ ದೊಡ್ಡದಾದ ಅರಳಿದ ಕಮಲದ ಮೊಗ್ಗಿನ ಕೆತ್ತನೆ ಹಾಗೂ ಅದರ ಸುತ್ತಲೂ ಮತ್ತು ಚೌಕಗಳ ಮೂಲೆಗಳಲ್ಲೂ ಪುಷ್ಪಾಲಂಕಾರ ಕೆತ್ತನೆಯಿದೆ.

ಕಂಬಗಳ ಮುಂಭಾಗದಲ್ಲಿ ಪಶ್ಚಿಮಾಭಿಮುಖವಾಗಿರುವ ನಂದಿ ವಿಗ್ರಹವಿದೆ. ನಂದಿಯ ಘಂಟೆ ಹಾಗೂ ಗೆಜ್ಜೆಸರಗಳಿಂದ ಅಲಂಕೃತವಾಗಿದ್ದು ಸುಂದರವಾಗಿದೆ. ನಂದಿಯ ಮುಂಭಾಗದಲ್ಲಿ ಒಂದು ಅರ್ಧಮಂಟಪವಿದ್ದು ಅದರಲ್ಲಿ ಎಲ್ಲಿಂದಲೋ ತಂದಿರಿಸಿದ ಚಿಕ್ಕದಾದ ದೇವಿ ವಿಗ್ರಹವಿದೆ, ಮಣ್ಣಿನ ಮುರಳಿಕೃಷ್ಣನ ಬೊಂಬೆಯೂ ಇದೆ. ಅದರ ಮುಂಭಾಗದಲ್ಲಿನ ಅಂತರಾಳದಲ್ಲಿ ಪಂಚಾಯತ ನರೆನಿಸಿದ ವಿಷ್ಣು, ಆದಿತ್ಯ ಅಂಬಿಕೆ ಗಣೇಶನ ವಿಗ್ರಹಗಳಿವೆ. ಗರ್ಭಗುಡಿಯಲ್ಲಿ ಪೂರ್ವಾಭಿಮುಖವಾಗಿ ಭವ್ಯವಾದ ದೊಡ್ಡ ಶಿವಲಿಂಗವಿದೆ. ಶಿವಲಿಂಗಕ್ಕೆ ನಾಗಹೆಡೆಯನ್ನುಳ್ಳ ಮುಖಕವಚವೂ ಇದೆ. ಈ ಶಿವಲಿಂಗವನ್ನು ಶಾಸನದಲ್ಲಿ ಸೆಟ್ಟೀಶ್ವರ ಉಡೈಯ ನಾಯನಾರ್ ಎಂದು ಉಲ್ಲೇಖಿಸಲಾಗಿದೆ.



ಸಟ್ಟೇಶ್ವರ ದೇವಾಲಯದ ಪಾರ್ಶ್ವ ನೋಟ



ಹಸ್ತಿಹಸ್ತ



ದ್ವಾರಪಟ್ಟಕೆ



ಭುವನೇಶ್ವರಿ



ಸಟ್ಟೇಶ್ವರ ಲಿಂಗ



ನವರಂಗ ಸ್ತಂಭ

ಊರ್ಧ್ವಕ್ರಮದಲ್ಲಿ ದೇವಾಲಯದ ಹೊರಭಾಗದ ವಿವರಗಳು ಇಂತಿವೆ. ಷಡ್ವರ್ಗಗಳಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರ ಎಂಬ ತ್ರಿವರ್ಗಗಳು ಮಾತ್ರ ಇವೆ. ಶಿಖರ, ಗ್ರೀವ, ಸ್ತೂಪಿ ಭಾಗಗಳಿಲ್ಲ. ಅಧಿಷ್ಠಾನವು ಉಪಪೀಠವನ್ನೂ ಹೊಂದಿದ್ದು ಅದರ ಮೇಲೆ ನಾಲ್ಕು ಸಾಲುಗಳ ಶಾಸನವಿದೆ. ಅಧಿಷ್ಠಾನವು ಮಂಚಬಂಧ ರೀತಿಯಲ್ಲಿದೆ.

ಭಿತ್ತಿ ಭಾಗದಲ್ಲಿ ಕೋಷ್ಠಗಳೂ, ಕೋಷ್ಠಸ್ತಂಭಗಳೂ, ಅರ್ಧಗಂಬಗಳೂ, ಭಿತ್ತಿಮೂಲೆಗಳಲ್ಲಿ ಕುಡ್ಯಸ್ತಂಭಗಳೂ ಕಂಡುಬರುತ್ತವೆ. ಭಿತ್ತಿಮೂಲೆಯ ಸ್ತಂಭದ ಕಾಂಡಭಾಗದಲ್ಲಿ ಪುಷ್ಪ ಮತ್ತು ಹಾರಗಳ ಅಲಂಕರಣವಿದೆ. ಉತ್ತರದ ಕಡೆಯ ಭಿತ್ತಿಯಲ್ಲಿ ಪ್ರಣಾಳ ಮತ್ತು ತೀರ್ಥದ ತೊಟ್ಟಿಯಿದೆ. ಪೂರ್ವದ ಕಡೆಯ ಭಿತ್ತಿಯಲ್ಲಿ ಶಿವಲಿಂಗದ ಮೇಲೆ ಸೂರ್ಯಕಿರಣಗಳು ಬೀಳುವಂತೆ ಐದು ವಜ್ರಾಕೃತಿಯ ರಂಧ್ರಗಳನ್ನುಳ್ಳ (ನಾಲ್ಕು ಮೂಲೆಗಳಲ್ಲಿ ಒಂದೊಂದು, ಮಧ್ಯದಲ್ಲಿ ಒಂದು) ಜಾಲಂಧ್ರವನ್ನಳವಡಿಸಲಾಗಿದೆ. ಜಾಲಂಧ್ರದ ಮುಂಭಾಗದಲ್ಲಿ ಎತ್ತರದ ಪೀಠದ ಮೇಲೆ ಧ್ವಜ ಸ್ತಂಭವನ್ನು ನಿಲ್ಲಿಸಲಾಗಿದೆ. ಧ್ವಜ ಪೀಠ ಒಡೆದಿದೆ. ಸೀಮೆಂಟಿನಲ್ಲಿ ಅದನ್ನು ಸರಿಪಡಿಸಿದ್ದರೂ ಒಂದೆರಡು ಕಡೆ ಸೀಳು ಬಿಟ್ಟಿದೆ. ದೇವಾಲಯದ ಆವರಣದಲ್ಲಿ ಅರ್ಚಕರ ಮನೆ, ಮೇಲುಕಟ್ಟಡವಿರುವ ಬಾವಿ, ಹೂದೋಟಗಳಿವೆ. ಎಲ್ಲಿಂದಲೋ ತಂದು ಶಂಖ, ನಾಮ, ಚಕ್ರಗಳ ಕಲ್ಲನ್ನೂ ದೇವಾಲಯದ ಆವರಣದಲ್ಲಿ ಇತ್ತೀಚೆಗೆ ಇರಿಸಿದ್ದಾರೆ. ದೇವಾಲಯದ ಆವರಣವನ್ನು ಪ್ರವೇಶಿಸಲು ಚಿಕ್ಕದಾದ ಕಬ್ಬಿಣದ ಗೇಟಿದೆ. ಗೇಟಿನ ಬಳಿ ಹಾಗೂ ದೇವಾಲಯದ ಬಳಿ ಸೃಷ್ಟೀಶ್ವರ ದೇವಾಲಯ ಎಂಬ ಎರಡು ನಾಮಫಲಕಗಳು ಕಂಡುಬರುತ್ತವೆ.

೧೯೮೦ರ ದಶಕದಲ್ಲಿ ದೇವಾಲಯವು ಜೀರ್ಣೋದ್ಧಾರಗೊಂಡಿದೆ. ದೇವಾಲಯದ ನಿರ್ವಹಣೆಯನ್ನು ಸುತ್ತಲ ಗ್ರಾಮಗಳ ಮುಖ್ಯಸ್ಥರ ಒಂದು ಸಮಿತಿವಹಿಸಿಕೊಂಡಿದೆ. ಈ ದೇವಾಲಯಕ್ಕೆ ಬರುವವರು ಸುತ್ತಲ ಗ್ರಾಮದ ಭಕ್ತಾದಿಗಳೇ, ಅದೂ ವಿಶೇಷ ದಿನಗಳಲ್ಲಿ ಮಾತ್ರ. ಉಪ್ಪಾರಪೇಟೆಯ ಈ ದೇವಾಲಯದ ಸುತ್ತ ಹಾಗೂ ಊರಿನಲ್ಲಿ ಮುಸಲ್ಮಾನರು ಹೆಚ್ಚಾಗಿರುವುದರಿಂದ ಜನಸಂದಣಿ ಇರುವುದಿಲ್ಲ. ಅರ್ಚಕರು ಬಡಗನಾಡು ಬ್ರಾಹ್ಮಣರು. ಅರ್ಚಕರ ವೇತನವೂ ಕಡಿಮೆಯಿರುವುದರಿಂದ ಅರ್ಚಕರೂ ಪದೇ ಪದೇ ಬದಲಾಗುತ್ತಿದ್ದರೆಂದೂ, ಈಗಿರುವ ಅರ್ಚಕರು ನಾಲ್ಕು ವರ್ಷಗಳಿಂದ ಇರುವರೆಂದೂ ತಿಳಿದುಬಂದಿದೆ. ದೇವಾಲಯದ ನಿರ್ವಹಣೆಯೂ ಅಷ್ಟು ಸಮರ್ಪಕವಾಗಿಲ್ಲ. ಈ ಕೊರತೆಗಳನ್ನು ನೀಗಿದರೆ ಈ ದೇವಾಲಯವು ಹೆಚ್ಚು ಪ್ರಸಿದ್ಧಿಗೆ ಬರಬಹುದಾಗಿದೆ. ಒಟ್ಟಿನಲ್ಲಿ ಈ ಸೃಷ್ಟೀಶ್ವರ ಅಥವಾ ಸೆಟ್ಟೀಶ್ವರ ದೇವಾಲಯವು ಚಿಕ್ಕ ಹಾಗೂ ಚೊಕ್ಕ ಸರಳ ಚೋಳ-ಹೊಯ್ಸಳ ಶೈಲಿಯ ದೇವಾಲಯದ ಒಂದು ಉತ್ತಮ ಉದಾಹರಣೆಯೆನ್ನಬಹುದಾಗಿದೆ.



(ಕ್ಷೇತ್ರಕಾರ್ಯ ಮತ್ತು ಲೇಖನವನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ನೆರವಾದ ಚಿಂತಾಮಣಿ ಸರ್ಕಾರಿ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀವೆಂಕಟಶಿವಾರೆಡ್ಡಿ ಅವರಿಗೆ, ವಿದ್ಯಾರ್ಥಿ ಮಿತ್ರರಾದ ವಿಜಯ್, ಲೋಕೇಶ್ ಹಾಗೂ ಬಂಧುಗಳಾದ ಶ್ರೀರಮೇಶ್ ಅವರಿಗೆ ಮತ್ತು ಕ್ಷೇತ್ರಕಾರ್ಯದಲ್ಲಿ ನನ್ನೊಡನಿದ್ದು ದೇವಾಲಯದ ತಳವಿನ್ಯಾಸವನ್ನು ಸಿದ್ಧಪಡಿಸಿಕೊಟ್ಟ ನನ್ನ ಗುರುಗಳಾದ ಡಾ॥ ಪಿ.ವಿ. ಕೃಷ್ಣಮೂರ್ತಿ ಹಾಗೂ ಡಾ॥ ಕೆ.ಆರ್. ಗಣೇಶ ಅವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಎ.ಕ. X, ಚಿಂತಾಮಣಿ ೮೩ ಕ್ರಿ.ಶ. ೧೧೭೯.
*೨. ಅದೇ, ಚಿಂತಾಮಣಿ ೮೪ ಕ್ರಿ.ಶ. ೧೨೯೦.
*೩. ಅದೇ, ಚಿಂತಾಮಣಿ ೮೫ ಸು.ಕ್ರಿ.ಶ. ೧೨೩೦.
*೪. ಅದೇ, ಚಿಂತಾಮಣಿ ೮೫ಎ

ಎಚ್. ಜಯಮ್ಮ ಕರಿಯಣ್ಣ*

# ಕರ್ನಾಟಕದ ಪ್ರಾಚೀನ ಮೈಲಾರ ದೇವಾಲಯಗಳು ಮತ್ತು ನೊಳಂಬರು

ಕರ್ನಾಟಕದಲ್ಲಿ ಉಳಿದಿರುವ ಪ್ರಮುಖವಾದ ಪ್ರಾಚೀನ ಸಂಪ್ರದಾಯಗಳಲ್ಲಿ ಒಂದು ಎಲ್ಲಮ್ಮನ ಸಂಪ್ರದಾಯ ಮತ್ತೊಂದು ಮೈಲಾರನ ಸಂಪ್ರದಾಯಗಳಾಗಿವೆ. ಹಾಗೂ ಈ ಎರಡೂ ವಿಶಿಷ್ಟ ಆಚರಣೆಗಳುಳ್ಳ ಪೂಜಾ ಸಂಪ್ರದಾಯಗಳಾಗಿವೆ.

ಅನೇಕ ಕನ್ನಡ ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ಮೈಲಾರ ದೇವರ ಉಲ್ಲೇಖ ಬಂದಿದೆ. ಈ ಪ್ರಬಂಧದಲ್ಲಿ ಮೈಲಾರನ ಸಂಪ್ರದಾಯ ನಡೆದು ಬಂದಿರುವ ಹಾದಿಯನ್ನಾಗಲಿ ಅಥವಾ ಜಾನಪದೀಯವಾಗಿ ಪ್ರಚಲಿತವಿರುವ ವಿಷಯಕ್ಕಾಗಲಿ ಒತ್ತು ಕೊಡದೆ ನೇರವಾಗಿ ಮೈಲಾರ ದೇವಾಲಯಗಳ ಪ್ರಾಚೀನತೆ ಮತ್ತು ಉಗಮದ ಬಗ್ಗೆ ಮಾತ್ರ ಪ್ರಸ್ತಾಪ ಮಾಡಲಾಗಿದೆ.

ಡಾ|| ಎಂ. ಚಿದಾನಂದಮೂರ್ತಿಯವರು "ಕನ್ನಡ ಕಾವ್ಯ ಶಾಸನಗಳಲ್ಲಿ ಮೈಲಾರ-ಮಾಳಚಿ" (ಸಂಶೋಧನಾ ತರಂಗ) ಎಂಬ ಲೇಖನದಲ್ಲಿ ಚರ್ಚಿಸುತ್ತ, ಮೈಲಾರನನ್ನು ಕುರಿತ ಕ್ರಿ. ಶ. ೧೧೧೨ ರಲ್ಲಿ ನಯಸೇನನ ಧರ್ಮಾಮೃತದಲ್ಲಿ ಬರುವ ಉಲ್ಲೇಖವೇ ಪ್ರಾಚೀನವಾದುದು ಮತ್ತು ಮೈಲ ಎಂಬ ಹೆಸರು ಕ್ರಿ. ಶ. ೧೦೩೨ರಲ್ಲಿ ಉಲ್ಲೇಖಿತವಾಗಿದೆ ಎಂದಿದ್ದಾರೆ. ಡಾ|| ನೇಗಿನಹಾಳರು "ಮೈಲಾರಲಿಂಗ-ಖಂಡೋಬಾ" ಕೃತಿಯಲ್ಲಿ ಕರ್ನಾಟಕದಲ್ಲಿ ಸುಮಾರು ಮೈಲಾರನ ಹದಿನಾಲ್ಕು ದೇವಾಲಯಗಳನ್ನು ಗುರುತಿಸಿ ಅವುಗಳ ಬಗ್ಗೆ ವಿಸ್ತೃತವಾದ ಚರ್ಚೆ ನಡೆಸಿದ್ದಾರೆ. ಅವರು ಹೂವಿನಹಡಗಲಿ ತಾಲೂಕಿನ ಹಿರೇ ಮೈಲಾರ; ರಾಣಿಬೆನ್ನೂರು ತಾಲೂಕಿನ ದೇವರಗುಡ್ಡ; ಸೌದತ್ತಿ ತಾಲೂಕಿನ ಬೀಳಗಿ; ಗುಲ್ಬರ್ಗಾ ತಾಲೂಕಿನ ಯಾತಗಿರಿ ಅಥವಾ ಯಾದಗಿರಿ; ಶಿರಹಟ್ಟಿ ತಾಲೂಕಿನ ಕಪ್ಪತಗುಡ್ಡ; ಹೊಸಪೇಟೆ ತಾಲೂಕಿನ ಆನೆಗೊಂದಿ, ನಾಗಮಂಗಲ ತಾಲೂಕಿನ ಮೈಲಾರ ಪಟ್ಟಣ; ಮೈಸೂರು ಬಳಿಯ ಮುಡುಕುತೊರೆ; ಕನಕಪುರದ ಹೊನ್ನಾಗರ; ಹಾಸನದ ಸಿದ್ಧೇಶ್ವರ ಮುಂತಾದ ಕ್ಷೇತ್ರಗಳು ಮೇಲಾರನ ಕ್ಷೇತ್ರಗಳೆಂದು ಗುರುತಿಸಿದ್ದಾರೆ.

ಇನ್ನು ಹಿರೇಮೈಲಾರದ ಸುತ್ತಲಿನ ೮-೧೦ ತಾಲೂಕುಗಳಲ್ಲಿ ಚಿಕ್ಕಪುಟ್ಟ ದೇವಾಲಯಗಳು ಸಾಕಷ್ಟಿವೆ. ಹೀಗೆ ಕರ್ನಾಟಕದಲ್ಲಿ ಈ ಸಂಪ್ರದಾಯಕ್ಕೆ ಸೇರಿದ ೩೦೦ಕ್ಕೂ ಹೆಚ್ಚು ಸಣ್ಣ, ದೊಡ್ಡ ದೇವಾಲಯಗಳಿವೆ. ಮೈಲಾರನ ಸಂಪ್ರದಾಯ ಕರ್ನಾಟಕಕ್ಕೆ ಮಾತ್ರ ಸೀಮಿತವಾಗದೆ ಮುಂದೆ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಿಗೂ ವಿಸ್ತರಿಸಿತು.

ಮಹಾರಾಷ್ಟ್ರದಲ್ಲಿ ಪಾಲಿ, ನಳದುರ್ಗ, ಜೇಜೂರಿ, ಮಾಲೆಗಾಂವ, ಆರೂಢಮಲ್ಲ, ಧಾಮಣಟೇಕ, ನೇವಾಸೆ, ಔರಂಗಬಾದ್ ಜಿಲ್ಲೆಯ ಸಾತಾರ ಮೊದಲಾದ ಊರುಗಳಲ್ಲಿ ದೇವಸ್ಥಾನಗಳೂ, ಸ್ವಯಂಭೂ ಲಿಂಗಗಳೂ ಇವೆ. ಇಲ್ಲಿಯೂ ಸುಮಾರು ೨೫೦ಕ್ಕೂ ಹೆಚ್ಚು ದೇವಾಲಯಗಳಿವೆ. ಆಂಧ್ರದ ರಂಗಾರೆಡ್ಡಿ ಜಿಲ್ಲೆಯ ವೆಲುಪಗೊಂಡದ ಕ್ರಿ. ಶ. ೧೦೯೯ನೆಯ ಶಾಸನದಲ್ಲಿ ಅಲ್ಲೊಂದು ಮೈಲಾರ ದೇವಾಲಯವಿದ್ದ ಉಲ್ಲೇಖವಿದೆ. ವಾರಂಗಲ್ ಜಿಲ್ಲೆಯ ಐನವೋಲು ದೇವಾಲಯ ೧೧ನೇ ಶತಮಾನದ್ದೆಂದು ಆಂಧ್ರಪ್ರಭ ಪತ್ರಿಕೆ (೨೩.೨.೧೯೮೬) ಯಲ್ಲಿ ವರದಿಯಾಗಿದೆ. ಆಂಧ್ರದಲ್ಲಿ ಮೀನಗೊಂದಿ ಮತ್ತು ಐನವೋಲು ದೇವಾಲಯಗಳಲ್ಲದೆ ಅದಿಲಾಬಾದ್ ಜಿಲ್ಲೆಯ ಮೈಲಾರಂ, ಕೋಮರಾಳಿ ಮುಂತಾದ ಊರುಗಳಲ್ಲಿ ಮೈಲಾರ ದೇವಾಲಯಗಳಿವೆಯೆಂದು ತಿಳಿದುಬರುತ್ತದೆ.

ಕರ್ನಾಟಕದಲ್ಲಿ ಅತಿ ಪ್ರಾಚೀನವೂ ಹಾಗೂ ಪ್ರಮುಖ ವಾಗಿರುವ ಮೈಲಾರ ದೇವಾಲಯಗಳಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿನಲ್ಲಿರುವ ಹಿರೇಮೈಲಾರ ಕ್ಷೇತ್ರವು ಒಂದಾಗಿದೆ. ತುಂಗಭದ್ರಾ ನದಿ ಇದನ್ನು ಸುತ್ತು ಹಾಕಿದೆ. ಈ ಮೈಲಾರಕ್ಷೇತ್ರದ ಮೂರು ದಿಕ್ಕುಗಳಲ್ಲಿ ನದಿ ಹರಿಯುತ್ತಿದ್ದು ಮತ್ತೊಂದು ದಿಕ್ಕಿನಲ್ಲಿ ಗುಡ್ಡದ ಸಾಲು ಇದ್ದು ಅದು ನದಿ ಉಂಗುರದ ಆಕಾರವನ್ನು ಹೋಲುತ್ತದೆ. ಈ ಕ್ಷೇತ್ರವನ್ನು ಗುಂಗುರಾಲ, ಉಂಗ್ಲಾರ ಕ್ಷೇತ್ರವೆಂದು ಶಾಸನಗಳಲ್ಲಿ ಕರೆಯಲಾಗಿದೆ. ಈ ನದಿಯ ದಡದಲ್ಲಿ ಕುರವತ್ತಿ, ಐರಣಿ, ಹೊನ್ನತ್ತಿ, ಚೌಡದಾಸನಪುರ, ಹೊಳಲ, ಗುತ್ತಲ, ಹಾವನೂರು ಮುಂತಾದ ಇತಿಹಾಸ ಪ್ರಸಿದ್ಧ ಊರುಗಳಿವೆ.

ಹಿರೇಮೈಲಾರಕ್ಷೇತ್ರದ ಮುಖ್ಯ ದೇವಾಲಯದ ರಂಗ ಮಂಟಪದ ಎಡದ ಕಂಬದ ಮೇಲೆ ಕ್ರಿ. ಶ. ೧೪೩೬ನೇ ವರ್ಷದ ಶಾಸನದಲ್ಲಿ "ಉಂಗುಲಾಲದ ಶ್ರೀಮನ್ಮಹಾಮಯಿಲಾರ ದೇವರ" ಎಂಬ ಉಲ್ಲೇಖವಿದೆ.

ಅದೇ ದೇವಸ್ಥಾನದ ಸುತ್ತ ಚತುಷ್ಕೋಣಾಕಾರದ ಪೌಳಿ ಗೋಡೆ ಇದೆ. ಪೂರ್ವ, ದಕ್ಷಿಣ ಮತ್ತು ಉತ್ತರದಲ್ಲಿ ಪ್ರವೇಶ ದ್ವಾರಗಳಿವೆ. ಪೂರ್ವದ್ವಾರವು ಕಲ್ಯಾಣಿಚಾಲುಕ್ಯರ ಕಾಲದ ರಚನೆ ಯಾಗಿದೆ. ದೇವಾಲಯ ಸಾಕಷ್ಟು ದೊಡ್ಡದಾಗಿದೆ. ವಿಸ್ತೃತವಾದ ಗರ್ಭಗೃಹ, ಸುಖನಾಸಿ ಮತ್ತು ರಂಗಮಂಟಪದ ಭಾಗಗಳೂ

*ಆಶೀರ್ವಾದ, ನಂ. ೨೯೩೩, ೧೩ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦೦೪೦.

ಪ್ರಾಚೀನಕಾಲದ ರಚನೆಗಳಾಗಿವೆ. ಮೈಲಾರ ದೇವಾಲಯದ ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದೆ. ಲಿಂಗ ಸಹಜವಾಗಿದ್ದು ಬುಡದಲ್ಲಿರುವ ಒಂದು ದೊಡ್ಡ ಬಂಡೆಗಲ್ಲಿನಿಂದ ಮೇಲೆದ್ದಿದೆ. ಇದರ ಸುತ್ತ ಕೂಡಿಸಿರುವ ಪಾಣಿಪೀಠ ಅಷ್ಟೇನೂ ದೊಡ್ಡದಾಗಿಲ್ಲ. ಈ ಸ್ವಯಂಭೂ ಲಿಂಗದ ಹಿಂಭಾಗದ ಗೋಡೆಯಲ್ಲಿ ಸುಮಾರು ೨೫೦ ಸೆಂ.ಮೀ. ಎತ್ತರದ ಕಮಾನು ಕೊರೆಯಲಾಗಿದೆ. ಈ ಕಮಾನಿನಲ್ಲಿ ಮೈಲಾರಲಿಂಗನ ಮೃಣ್ಮಯ ಮೂರ್ತಿ ಇದೆ. ಮೂರ್ತಿ ೧೮೩ ಸೆಂ.ಮೀ. ಎತ್ತರ ೧೮೩ ಸೆಂ.ಮೀ. ಅಗಲವಾಗಿದೆ. ಚತುರ್ಭುಜ ಹೊಂದಿದ್ದು ನಾಲ್ಕು ಹಸ್ತಗಳಲ್ಲಿ ಖಡ್ಗ, ತ್ರಿಶೂಲ, ಡಮರು ಮತ್ತು ಬಟ್ಟಲುಗಳಿವೆ. ಖಡ್ಗವೊಂದನ್ನು ಬಿಟ್ಟು ಉಳಿದೆಲ್ಲವೂ ಮೃಣ್ಮಯ ಮೂರ್ತಿಯ ತಲೆಯ ಮೇಲೆ ಸುತ್ತಿ ಕಟ್ಟಿದ ಜಟೆಯೂ ಇಳಿಬಿದ್ದ ಗಡ್ಡ ಮತ್ತು ಮೀಸೆಗಳೂ ಇವೆ. ಮೂರ್ತಿಯ ಎರಡೂ ಬದಿಯಲ್ಲಿ ಚಾಮರಧಾರಿಗಳನ್ನೂ, ಪಾದದಡಿಯಲ್ಲಿ ಎರಡೂ ಪಕ್ಕದಲ್ಲಿ **ಎರಡು ರುಂಡ**ಗಳನ್ನು ಬಿಡಿಸಲಾಗಿದೆ. ಮೂರ್ತಿ ರೌದ್ರ-ಶಾಂತಗಳ ವಿಶಿಷ್ಟ ಭಾವವನ್ನು ಏಕಕಾಲದಲ್ಲಿ ಹೊರಸೂಸುವ ಕಲಾಕೃತಿಯಾಗಿದೆ. ಇವೆಲ್ಲವನ್ನು ಮಣ್ಣಿನಿಂದಲೇ ಮಾಡಿರುವುದರಿಂದ ಇದು ಮಣ್-ಮೈಲಾರ ಕ್ಷೇತ್ರವೆಂದೇ ಪ್ರಖ್ಯಾತವಾಗಿದೆ. ಅಲ್ಲದೆ ಇದನ್ನು ಮಣ್-ಮೈಲಾರಲಿಂಗ, ಮಾರ್ತಾಂಡ ಭೈರವ, **ಮಲ್ಲಯ್ಯ**ನೆಂದು ಕರೆಯುತ್ತಾರೆ. ಶಿವನು ಕೈಲಾಸದಿಂದ ರಾಕ್ಷಸ ನಿಗ್ರಹಕ್ಕಾಗಿ ಮೈಲಾರ ಕ್ಷೇತ್ರದಲ್ಲಿ ಸ್ವಯಂಭೂಲಿಂಗ ರೂಪದಿಂದ ಹುತ್ತದಲ್ಲಿ ಒಡಮೂಡಿದ್ದನ್ನು ಅರಿತ ಕಪಿಲಮುನಿ ಮೀನಗೊಂದಿಯಿಂದ ಇಲ್ಲಿಗೆ ಬಂದು ಹುತ್ತವನ್ನು ಒಡೆದು ಒಳಗಿದ್ದ ಈ ಸ್ವಯಂಭೂ ಲಿಂಗವನ್ನು ಭಂಡಾರ ಮುಂತಾದ ಪವಿತ್ರ ದ್ರವ್ಯಗಳಿಂದ ಪೂಜಿಸಿ ಲೋಕಕ್ಕೆ ಪೂಜಾ ವಿಧಾನವನ್ನು ತಿಳಿಸಿಕೊಟ್ಟನೆಂದು ಪರಂಪರೆಯಿಂದ ನಂಬಿಕೆ ಹರಿದುಬಂದಿದೆ.

ಈ ಕ್ಷೇತ್ರವನ್ನು ಹಿರೇಮೈಲಾರ, ಆದಿಮೈಲಾರ, ಮಣ್ ಮೈಲಾರ ಅಥವಾ ಉಂಗ್ಲಾರಕ್ಷೇತ್ರವೆಂದೂ ಕರೆಯುತ್ತಾರೆ. ಸಾಮಾನ್ಯವಾಗಿ ಕರ್ನಾಟಕ ತುಂಬೆಲ್ಲಾ ವ್ಯಾಪಿಸಿರುವ ಈ ದೇವರ ಕ್ಷೇತ್ರಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದ ಮತ್ತು ಮೂಲ ಮೈಲಾರ ಎಂಬ ನಂಬಿಕೆ ಕರ್ನಾಟಕದ ಉದ್ದಗಲಕ್ಕೂ ಹರಡಿದೆ.

ರಾಣೆಬೆನ್ನೂರಿನ ದೇವರಗುಡ್ಡ ಎರಡನೇ ಅತಿ ಮಹತ್ವದ ದೇವಾಲಯ. ಇದನ್ನು ಶ್ರೀಕ್ಷೇತ್ರಗುಡ್ಡ, ಗುಡ್ಡಾಪುರ ಎಂದು ಕರೆಯುವುದು ವಾಡಿಕೆ. ಇದು ಹಿರೇಮೈಲಾರದಿಂದ ನೇರ ಪಶ್ಚಿಮಕ್ಕೆ ಸುಮಾರು ೯ ಮೈಲಿ ದೂರದಲ್ಲಿದೆ. ಮುಖ್ಯ ದೇವಸ್ಥಾನ ನೈಋತ್ಯ-ಈಶಾನ್ಯ ದಿಕ್ಕುಗಳಲ್ಲಿ ಸುಮಾರು ೧.೫ ಕಿ.ಮೀ. ಉದ್ದಕ್ಕೆ ಹರಡಿರುವ ಗುಡ್ಡದ ದಕ್ಷಿಣ ತುದಿಗೆ ಅತ್ಯಂತ ಎತ್ತರವಾದ ಶಿಖರವೊಂದರ ಮೇಲೆ ಪೂರ್ವಾಭಿಮುಖವಾಗಿದೆ. ಪ್ರಸ್ತುತ ದೇವಾಲಯ ಗರ್ಭಗೃಹ, ಅದಕ್ಕೆ ಹೊಂದಿಕೊಂಡಂತೆ ಹೊರ ಗರ್ಭಗೃಹ, ಸುಖನಾಸಿಯ ಭಾಗ, ರಂಗಮಂಟಪ, ವಿಸ್ತಾರವಾದ ಮುಖಮಂಟಪವಿದೆ. ಪೂರ್ವ-ಪಶ್ಚಿಮ ಮತ್ತು ಉತ್ತರ ದಿಕ್ಕುಗಳಿಂದ ಪ್ರವೇಶ ದ್ವಾರಗಳಿವೆ. ಒಳ ಗರ್ಭಗೃಹದಲ್ಲಿ ಸ್ವಯಂಭೂಲಿಂಗವಿದೆ. ಹಿಂಬದಿಯಲ್ಲಿ ಸುಮಾರು ೧ ಮೀಟರ್ ಎತ್ತರದ ಪೀಠದ ಮೇಲೆ ಮೈಲಾರಲಿಂಗನ ಚತುರ್ಭುಜ ಮೂರ್ತಿಯನ್ನು ಕೂಡಿಸಿದೆ. ನಾಲ್ಕು ಕೈಗಳಲ್ಲಿ ಕ್ರಮವಾಗಿ ಖಡ್ಗ, ತ್ರಿಶೂಲ, ಡಮರು ಮತ್ತು ಬಟ್ಟಲುಗಳಿವೆ. ಮೂರ್ತಿ ಆನಂದಾಸನದಲ್ಲಿದ್ದು ಹಣೆಯಲ್ಲಿ ಉರಿಗಣ್ಣು ತೋರಿಸಲಾಗಿದೆ. ಮೂರ್ತಿ ಶಿಲ್ಪದಿಂದ ಪ್ರತ್ಯೇಕವಾದ ದೊಡ್ಡ ಗಾತ್ರದ ಕಟ್ಟಿಗೆಯ ಖಡ್ಗವೂ ಹಲವು ನಮೂನೆಯ ೫-೬ ಬಾಣಗಳೂ ಎಡಬದಿಯಲ್ಲಿವೆ. ಬದಿಯಲ್ಲಿ ಪಂಚಲೋಹ ದಿಂದಾದ ಪೀಠಸ್ಥ ಚತುರ್ಭುಜ ಹೊಂದಿರುವ **'ಖಂಡೇರಾಯ'** ನೆಂದು ಕರೆಯಲಾಗುವ ಮೂರ್ತಿಯೊಂದಿದೆ. ಇದೂ ಮೈಲಾರ ಲಿಂಗನ ಮೂರ್ತಿಯೆ.

ಸವದತ್ತಿ ತಾಲೂಕಿನ ಮುರಗೋಡಿನಿಂದ ದಕ್ಷಿಣಕ್ಕೆ ೪ ಕಿ.ಮೀ. ಅಂತರದಲ್ಲಿ ಕಾರೀಮನಿ ಇದೆ. ಊರಿನ ಉತ್ತರ, ಪೂರ್ವ ಮತ್ತು ದಕ್ಷಿಣದಲ್ಲಿ ಸೋಗಲಗುಡ್ಡದ ಸಾಲುಗಳು ಹಬ್ಬಿದ್ದು ಇದು ಒಂದು ಕಿ.ಮೀ. ಅಂತರದಲ್ಲಿ ಸಂಧಿಸಿದೆ. ಈ ಸಂಧಿಸಿದ ಭಾಗದ ಇಳಿಜಾರಿನಲ್ಲಿ ಮೈಲಾರಲಿಂಗನ ಕ್ಷೇತ್ರವಿದೆ. ಬೆಳಗಾವಿ ಜಿಲ್ಲೆಯ ಭಕ್ತರು ಈ ದೇವರನ್ನು **'ಮಲ್ಲಯ್ಯ' 'ಮಲ್ಲಿಕಾರ್ಜುನ'** ಎಂದು ಕರೆಯುತ್ತಾರೆ.

ಮುಖ್ಯ ದೇವಾಲಯದ ದಕ್ಷಿಣ ಭಾಗದ ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದೆ. ಇದು ೧೫-೨೦ ಸೆಂ.ಮೀ.ಗಳಷ್ಟು ಎತ್ತರವಾಗಿದ್ದು ಸುಮಾರು ೨೫ ಸೆಂ.ಮೀ.ಗಳಷ್ಟು ವ್ಯಾಸ ಉಳ್ಳದ್ದಾಗಿದೆ. ಇದರ ಸುತ್ತಲೂ ಪಾಣಿಪೀಠವನ್ನು ಕೂಡಿಸಿರುವುದಿಲ್ಲ. ನೈಸರ್ಗಿಕವಾದ ಬಂಡೆಗಲ್ಲು ಹೊರಗೆ ಸ್ಪಷ್ಟವಾಗಿ ಕಾಣುತ್ತದೆ. ಈ ಬಂಡೆಗಲ್ಲಿನ ಮೇಲೆ ಕೊಂಬಿನಂತೆ ಸ್ವಯಂಭೂ ಲಿಂಗ ಮೂಡಿದೆ. ಇದರ ಹಿಂಭಾಗದಲ್ಲಿ ಒಂದು ಶಿಲಾಫಲಕ ಸ್ಥಾಪಿಸಲಾಗಿದ್ದು ಅದರ ಮೇಲೆ ಅಶ್ವಾರೋಹಿಯಾದ ಮೈಲಾರನ ಉಬ್ಬುಶಿಲ್ಪ ಕೆತ್ತಲಾಗಿದೆ. ಈ ಶಿಲಾಫಲಕದ ಎತ್ತರ ಸುಮಾರು ೬೨ ಸೆಂ.ಮೀ. ಈ ದೇವಾಲಯಗಳ ಸಮುದಾಯದ ಹೊರ ಬದಿಯ ಉತ್ತರ ಗೋಡೆಗೆ ಹೊಂದಿದಂತೆ ಮೈಲಾರ ದೇವರ ಉಲ್ಲೇಖವಿರುವ ಕ್ರಿ. ಶ. ೧೫೭೩ರ ಶಿಲಾ ಶಾಸನವೊಂದಿದೆ.*

ಗುಡೂರು ಹುಲ್ಲಪ್ಪನ ದೇವಾಲಯ ಬಾದಾಮಿಯಿಂದ ಹುನಗುಂದಕ್ಕೆ ಹೋಗುವ ದಾರಿಯಲ್ಲಿ ಸುಮಾರು ೩೫ ಕಿ.ಮೀ. ಅಂತರದಲ್ಲಿದೆ. ಈ ದೇವಾಲಯದ ಬಾಗಿಲಿಗೆ ಹೊಂದಿದಂತೆ

---

* ಈ ಶಾಸನ ಅಪ್ರಕಟಿತವೆಂದು ಡಾ|| ನೇಗಿನಹಾಳ ಅವರು ಹೇಳಿದ್ದಾರೆ.

ಪೂರ್ವಬದಿಯಲ್ಲಿ ಅಶ್ವಾರೋಹಿಯಾದ ಮೈಲಾರಲಿಂಗನ ಉಬ್ಬು ಮೂರ್ತಿಯೊಂದಿದೆ. ಈ ದೇವರ ಉತ್ಸವದ ವೇಳೆಯಲ್ಲಿ ಕಂಚವೀರರು ವಡಬು ಹೇಳುವಾಗ ಮೈಲಾರ ದೇವರು ಮೈಲಾರದಿಂದ ಇಲ್ಲಿಗೆ ಬಂದನೆಂದು ಹೇಳುತ್ತಾರೆ.

ಹಿಪ್ಪರಿಗಿಯ ಮಲ್ಲಯ್ಯನನ್ನು ದೇವರಹಿಪ್ಪರಗಿ ಎಂದು ಜನ ಸಾಮಾನ್ಯರು ಗುರುತಿಸುತ್ತಾರೆ. ಧಾರವಾಡ ಜಿಲ್ಲೆಯ ಗೆಜಿಟಿಯರ್‌ನಲ್ಲಿ ಸಹ ಇಲ್ಲಿಯ ದೇವರನ್ನು **ಮಾರ್ತಂಡ** ಎಂದು ಕರೆಯಲಾಗಿದೆ. ಯಾತಗಿರಿ ಮಲ್ಲಯ್ಯ, ಪ್ರೇಮಪುರ ಮೈಲಾರ; ಪಾಲಿ ಪೇಂಬರನ ಖಂಡೋಬಾ; ಜೆಜೂರಿ ಖಂಡೋಬಾ; ಮಂಗಸೂಳಿ ಮಲ್ಲಯ್ಯ - ಹೀಗೆ ಮೈಲಾರ ಇರುವ ಸ್ಥಳ ಮತ್ತು ಹೆಸರುಗಳ ಬಗ್ಗೆ ಅನೇಕ ಹೇಳಿಕೆಗಳಿವೆ.

ಮಯಿಲಾರು-ಮೈಲಾರ ಎಂದು ಕರೆಯುವ ಈ ದೇವರ ಹೆಸರು ಹೇಗೆ ಬಂದಿರಬಹುದು? ಊಹಿಸಿದಾಗ ಈ ಪದವು ಎರಡು ಪದಗಳ ಸಂಯುಕ್ತ ಪದವಾಗಿದ್ದು ಮಯಿಲ+ಆರ ಎಂದಿದೆ. ಮಯಿಲ ಎಂದರೆ ದ್ರಾವಿಡ ಭಾಷೆಯಲ್ಲಿ ಊದಾ ಅಥವಾ ನೀಲ ವರ್ಣವೆಂದರ್ಥ. ಬಹುಶಃ ಕಾಳಾಮುಖರು ಪೂಜಿಸುತ್ತಿದ್ದ ದೇವರು ಎಂದರ್ಥವಿರಬಹುದೆ? 'ಆರ' ಶಬ್ದದ ಅರ್ಥ ಸ್ಪಷ್ಟವಿಲ್ಲ. ಇನ್ನೊಂದು ಅರ್ಥ ಮೈಲಾರ-ಭೈರವನ ರೂಪದಲ್ಲಿದ್ದು ಭೈರವನಿಗೆ ಮಯಿಲ ಎಂದು ದ್ರಾವಿಡ ಭಾಷೆಯಲ್ಲಿ ಕರೆಯುತ್ತಿದ್ದರೆ? ಈ ದೇವರ ಗೊರವರು ಇಂದಿಗೂ ಕರಿ ಕಂಬಳಿ ಹೆಗಲಮೇಲೆ ಹಾಕಿಕೊಳ್ಳುವರು. ಇದರಿಂದ ಈ ಹೆಸರು ಬಂದಿರಬಹುದೆ? (ಮೈಲ=ನೀಲಿ ಅಥವಾ ಕಪ್ಪು ಮತ್ತು ಮಯಿಲ ಎಂಬುದು ಪ್ರಾಕೃತ ಶಬ್ದ ಎಂದು ಕನ್ನಡ ನಿಘಂಟಿನಲ್ಲಿ ಹೇಳಿದೆ).

ಈ ಹಿನ್ನೆಲೆಯಲ್ಲಿ ಮೈಲಾರ ದೇವಾಲಯದ ಪ್ರಾಚೀನತೆ ಯಾದರೂ ಏನು!

ಮಡಕಶಿರಾ ತಾಲೂಕಿನ ಹೇಮಾವತಿ ನೊಳಂಬರ ರಾಜಧಾನಿಯಾಗಿತ್ತು. ನೊಳಂಬರ ಆರಾಧ್ಯ ದೈವ ಸಿದ್ಧೇಶ್ವರ. ಸಿದ್ಧೇಶ್ವರನನ್ನು ಅಲ್ಲಿಯ ಸ್ಥಳೀಯರು ಹೆಂಜೇರಪ್ಪ, ಹೆಂಜೇರು ಸಿದ್ಧಪ್ಪನೆಂದೇ ಕರೆಯುತ್ತಾರೆ. ರಾಜಕೀಯ ಸ್ಥಿತ್ಯಂತರದಿಂದ ಮುಂದೆ ನೊಳಂಬರು ತಮ್ಮ ರಾಜಧಾನಿ ಹೇಮಾವತಿಯಿಂದ ಉತ್ತರದ ಕಂಪ್ಲಿಗೆ ಸ್ಥಲಾಂತರಿಸಿದರು. ಆಗ ತಮ್ಮ ಇಷ್ಟ ದೈವವನ್ನು ತಮ್ಮ ಜೊತೆಯಲ್ಲಿ ತೆಗೆದುಕೊಂಡು ಬಂದರು. ಕಂಪ್ಲಿಯಲ್ಲಿ ಅವರು ಕಟ್ಟಿಸಿದ ದೇವಾಲಯದ ಕುರುಹಾಗಿ ಸೋಮೇಶ್ವರ ದೇವಸ್ಥಾನವಿದೆ. ಈ ದೇವರನ್ನು ಸೋಮೇಶ್ವರ ಎಂದು ಕರೆದರೂ ಅದು ಭೈರವನ ಬಿಂಬ. ಈ ಭೈರವನ ಪೀಠದಲ್ಲಿ ಕುದುರೆಯನ್ನು ಬಿಡಿಸಿದ್ದಾರೆ. ಇದು ಭೈರವನ ಅರ್ಥಾತ್ ಮೈಲಾರ ಬಿಂಬ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಶಾಸನೋಕ್ತ ಆಧಾರವಿಲ್ಲ, ಆದರೆ ದೇವಾಲಯದ ರಚನಾದೃಷ್ಟಿಯಿಂದ ಕ್ರಿ. ಶ. ೧೦ನೇ ಶತಮಾನದ ಉತ್ತರಾರ್ಧಕ್ಕೆ ಹಾಕಬಹುದಾಗಿದೆ.

ಇದೇ ಕಂಪ್ಲಿಯ ಸಮೀಪದ ತೆಕ್ಕಲುಕೋಟೆಯ ಬಳಿ ಇರುವ ಹರವಿನ ಮಲ್ಲಯ್ಯನ ಗುಡ್ಡದಲ್ಲಿ ದೊರೆತಿರುವ ಶಾಸನವು ಮೈಲಾರನ ಆರಾಧನೆಯ ಬಗ್ಗೆ ಮಹತ್ವದ ಸುಳಿವೊಂದನ್ನು ನೀಡುತ್ತದೆ. ಕ್ರಿ. ಶ. ೧೧೧೭ರಲ್ಲಿ ನೊಳಂಬ ಅರಸ ಜಗದೇಕಮಲ್ಲ ಉದಯಾದಿತ್ಯನ ಕಾಲದಲ್ಲಿ ಈಗಿನ ಮಲ್ಲಯ್ಯನ ಗುಡ್ಡದಲ್ಲಿ ಮೈಲಾರ ದೇವಾಲಯವನ್ನು ಕಟ್ಟಿಸಿ ಅದಕ್ಕೆ ಹಗರಿನದಿಯ ದಡದಲ್ಲಿದ್ದ ಸಿರಿಯನೂರು ಎಂಬ ಒಂದು ಗ್ರಾಮವನ್ನು ದಾನ ನೀಡಿದಂತೆ ಶಾಸನದಲ್ಲಿ ಉಲ್ಲೇಖವಿದೆ.

*ಶಾಸನ ಪಾಠ*

*ಸ್ವಸ್ತಿ ಸಮಸ್ತ ಭುವನಾಶ್ರಯ ಪ್ರಥುವಿ ವಲ್ಲಭ ಮಹಾರಾಜಾಧಿ ರಾಜ ಪರಮೇಶ್ವರ ಪರಮ ಭಟ್ಟಾರಕಂ ಸತ್ಯಾಶ್ರಯ ಕುಳ ತಿಳಕ ಚಾಳುಕ್ಯಾಭರಣಂ ಶ್ರೀ ಮಜ್ಜಗದೇಕಮಲ್ಲದೇವರ ರಾಜ್ಯ ಮುತ್ತರೂತ್ತರಾಬಿವೃದ್ಧಿ ಸಲುತ್ತಿರೆ ಸಮಧಿಗತ ಪಂಚಮಹಾಶಬ್ದ ಪಲ್ಲವಾನ್ವಯ ಶ್ರೀ ಪ್ರಥುವಿ ವಲ್ಲಭ ಪಲ್ಲವ ಕುಳ ತಿಳಕನಮೋಘನೇಕವಾಕ್ಯ ಕಾಂಚಿ ಪುರವರೇಶ್ವರ ಶ್ರೀ ಮಜ್ಜಗದೇಕ ಮಲ್ಲ ನೊಱಂಬ ಪಲ್ಲವ ಪೆರ್ಮ್ಮಾನಡಿಗಳ್ ನೊಱಂಬವಾಡಿ ಮೂವತ್ತಿರ್ಚ್ಛಿರಿ ಚಾಸಿರಮುಮಂ ಕದಂಬಳಿಕೆ ಸಾಯಿರಮುಮಂ ಕೋಗಳಿ ಐನೂಱುಮಂ ಬಲ್ಲಕುಂದೆ ಮೂನೂಱುಮಂ ಕುದಿಯಪರವಿಯಪ್ಪತ್ತುಮಂ ಕರಿವಿಡಿ ಮೂವತ್ತುಮಂ ದುಷ್ಟ ನಿಗ್ರಹ ವಿಶಿಷ್ಟ ಪ್ರತಿಪಾಳನಂ ಗೆಯ್ಯುತ್ತುವಿರೆ ಸಕವರ್ಷ ೯೭೭ನೆಯ ಪಿಂಗಳ ಸಂವತ್ಸರದ ಚೈತ್ರ ಬಹುಳ ೧೩ ಬೃಹಸ್ಪತಿವಾರದಂದು ಶ್ರೀಮತ್ ಮೈಲಾರದ ದೇವಜ್ಗ ಬಲ್ಲಕುನೆ, ಮೂನೂಱರೊಳಗಣ ಪಗರೆ ತಡಿಯ ಸಿಱಿಯನೂರಂ ಸರ್ವ್ವಾಭ್ಯನ್ತ ಸಿದ್ಧಿಯಾಗೆ ಕೊಟ್ಟರೀಧರ್ಮಮಂ ಪ್ರತಿಪಾಳಿಸಿದ ........ (ಇಲ್ಲ). ಯಾ ನೆಯ ಲಿಲೊಳು ವಿರ್ವ್ವಸ್ಲಿನ ... ಗದಾಹ ಸಾವಿರ ಬ್ರಾಹ್ಮಣರ್ಗ್ಗೆ ಸಾಯಿರ ಕವಿಲೆಯುಮಂ ಸಾಯಿರ ಗದ್ಯಾಣ ಹೊನ್ನಮಂ ದಾನಂಗೊಟ್ಟ ಪಲಮಕ್ಕುಂ ಈ ಧರ್ಮ್ಮಮಂ ನಱಿದಾತಂಗೆ ಈ ಪೇಟ್ದ ತೀರ್ಥಂಗಳೊ.....*

ಈ ಶಾಸನದ ಹಿನ್ನೆಲೆಯಲ್ಲಿ ಪ್ರಸ್ತುತ ದೇವಾಲಯವನ್ನು ಪರಿಶೀಲಿಸಲಾಗಿ ದೇವಾಲಯದ ಒಳರಚನೆ ಕ್ರಿ. ಶ. ೧೧ನೇ ಶತಮಾನದ ಪೂರ್ವಾರ್ಧಕ್ಕೆ ಸೇರಿದ್ದಾಗಿದೆ. ದೇವಾಲಯದ ಸ್ವರೂಪ ಹೀಗಿದೆ : ಗರ್ಭಗೃಹ, ತೆರದ ಅಂತರಾಳ ಮತ್ತು ನವರಂಗಗಳನ್ನು ಒಳಗೊಂಡಿದೆ. ಈ ದೇವಾಲಯದಲ್ಲಿ ಈಗಿರುವ ಬಿಂಬಗಳು ಕ್ರಿ. ಶ. ಸುಮಾರು ೧೫-೧೬ನೇ ಶತಮಾನಕ್ಕೆ ಸೇರಿದವು. ಗರ್ಭಗೃಹದ ಪೀಠದ ಮೇಲೆ ಈಗ ಮೂರು ದೇವತೆಗಳಿದ್ದು ಮಧ್ಯದಲ್ಲಿ ಭೈರವ ಮೂರ್ತಿಯೂ ಎಡಭಾಗದಲ್ಲಿ ಕಾಳಿಕಾದೇವಿಯ ಶಿಲ್ಪವಿದೆ. ಬಲಭಾಗದಲ್ಲಿ ಕುಮಾರಸ್ವಾಮಿಯ ಶಿಲ್ಪವಿದೆ. ಮೂರು ವಿಗ್ರಹಗಳ ಮುಂದೆ ಮೂರು ಶಿವಲಿಂಗಗಳಿವೆ. ಬಹುಶಃ ಈ ಶಿವಲಿಂಗಗಳನ್ನು ಕಾಲಾಂತರದಲ್ಲಿ ಇರಿಸಿರಬಹುದು.

ಹರವಿನಮಲ್ಲಯ್ಯ ದೇವಾಲಯದ ಮೂಲ ಬಿಂಬದ ಬಗ್ಗೆ ಹುಡುಕಾಟ ನಡೆಸಿದಾಗ ಅದೇ ದೇವಾಲಯದ ನೈರುತ್ಯ ದಿಕ್ಕಿನಲ್ಲಿ ನವರಂಗದ ಗೋಡೆಗೆ ಸೇರಿಸಿರುವ ಸ್ಥಳದಲ್ಲಿ ಭಗ್ನ ಭೈರವ ಶಿಲ್ಪವೊಂದು ಇದ್ದು ಎದೆಯ ಮೇಲ್ಭಾಗ ಮಾತ್ರ ಉಳಿದು ಬಂದಿದೆ. ಈ ಬಿಂಬವು ಮೂರ್ತಿಶಿಲ್ಪ ಲಕ್ಷಣಗಳಿಂದ ಕ್ರಿ. ಶ. ಸು. ೧೧ನೇ ಶತಮಾನದ ಪೂರ್ವಾರ್ಧಕ್ಕೆ ಸೇರುತ್ತದೆ. ಶಿಲ್ಪಕ್ಕೆ ಜಟಾಭಾರವಿದೆ.

ಶಿರೋಭಾಗದಲ್ಲಿ ಹಣೆಗಣ್ಣು, ಕೋರೆ ಹಲ್ಲುಗಳು ಇವೆ. ಬಲ ಕಿವಿಯಲ್ಲಿ ಪತ್ರಕುಂಡಲ, ಎಡಗಿವಿಯಲ್ಲಿ ಶಂಖ ಕುಂಡಲವಿದೆ. ಕತ್ತಿನಲ್ಲಿರುವ ಆಭರಣ ಅಡ್ಡಿಕೆಯಂತೆ ಕಾಣುತ್ತದೆ. ಭುಜಕೀರ್ತಿ ಇದೆ. ನಾಲ್ಕು ಕೈಗಳಿದ್ದು ಒಂದರಲ್ಲಿ ಅಕ್ಷಮಾಲೆ, ಇನ್ನೊಂದರಲ್ಲಿ ಶೂಲ, ಮತ್ತೊಂದರಲ್ಲಿ ಡಮರು ಇದೆ. ಇನ್ನೊಂದು ಕೈ ಭಿನ್ನವಾಗಿದ್ದು ಏನಿದೆಯೆಂದು ಕಾಣಬರುವುದಿಲ್ಲ. ಈ ಭಗ್ನಗೊಂಡ ಶಿಲ್ಪ ಯಾವುದೇ ಅನುಮಾನವಿಲ್ಲದೆ ನೊಳಂಬರ ಕಾಲದಲ್ಲಿ ಪ್ರತಿಷ್ಠಾಪಿತವಾಗಿದ್ದ ಮೈಲಾರನ ಬಿಂಬವೇ ಆಗಿದ್ದಿರಬೇಕು. ಇದೇ ಆವರಣದಲ್ಲಿ ಭಗ್ನಗೊಂಡ ಪ್ರಾಚೀನ ಕಾಳಿಕಾದೇವಿಯ ಬಿಂಬವೂ ದೊರಕಿದೆ. ಆದರೆ ರುಂಡದ ಭಾಗ ಭಗ್ನಗೊಂಡಿದೆ.

ಭಗ್ನ ಭೈರವ ಅಥವಾ ಮೈಲಾರನ ಮೂರ್ತಿಯ ದೇವಾಲಯದ ಮುಂಭಾಗದ ಮಂಟಪದಲ್ಲಿ ಬೃಹತ್ತಾದ ಏಕಶಿಲಾ ನಂದಿ ವಿಗ್ರಹವಿದೆ. ಈ ನಂದಿಯ ಶಿಲ್ಪವೂ ದೇವಾಲಯ ನಿರ್ಮಾಣ ಕಾಲದ್ದೇ ಆಗಿರುತ್ತದೆ. ಹುಟ್ಟುಗಲ್ಲಿನಲ್ಲಿ ಕಡೆದಿರುವ ಈ ಶಿಲ್ಪದ ಅವಯವಗಳನ್ನು ಬಿಡಿ ಬಿಡಿಯಾಗಿ ಬಿಡಿಸಿದ್ದು ಸುಂದರವಾಗಿದೆ. ನಂದಿಯು ತಲೆಯನ್ನು ಸ್ವಲ್ಪ ಬಾಗಿಸಿದಂತೆ ಇದೆ. ನಂದಿ ಮಂಟಪದ ಕಂಬಗಳು ಸಹ ದೇವಾಲಯದ ನಿರ್ಮಾಣ ಕಾಲದ್ದೇ ಆಗಿರುತ್ತದೆ. ನಂದಿಯ ಎತ್ತರ ಸುಮಾರು ೧.೯ ಮೀ. ಉದ್ದ ಸುಮಾರು ೩.೬೫ ಮೀ. ಇದೆ. ಕತ್ತಿನಲ್ಲಿ ಗಗ್ಗರದ ಸರ ಹಾಕಿದೆ.

ಈ ಹಿನ್ನೆಲೆಯಲ್ಲಿ ಈಗಿರುವ ಹೂವಿನ ಹಡಗಲಿ ತಾಲೂಕಿನ ಮೈಲಾರ ಕ್ಷೇತ್ರಕ್ಕಿಂತ ಇದೇ ಪ್ರಾಚೀನವಾದ ಹಾಗೂ ಮೈಲಾರನ ಸಂಪ್ರದಾಯದ ಮೂಲ ಸ್ಥಳ. ಮೈಲಾರ ಎಂಬುದು ಸ್ಥಳದ ಹೆಸರಲ್ಲ, ಅದು ದೇವತೆಯ ಹೆಸರಿರಬೇಕು. ಮುಂದೆ ಈ ದೇವತೆ ನೆಲೆಗೊಂಡ ಸ್ಥಳಗಳನ್ನು ಬೇರೆ ಬೇರೆ ವಿಶೇಷಣ ಗಳೊಂದಿಗೆ ಮೂಲಮೈಲಾರ, ಮಣ್-ಮೈಲಾರ, ಮಲ್ಲಾರಿ, ಮಾರ್ತಾಂಡ ಭೈರವ, ಖಂಡೋಬಾ ಮುಂತಾದ ಹೆಸರುಗಳಿಂದ ಕರೆದಿರುತ್ತಾರೆ.

ಈ ಮೈಲಾರನ ಪೂಜಾ ಉಗಮ ನೊಳಂಬರ ಕಾಲದಲ್ಲಿ ಆರಂಭವಾಗಿ ನೊಳಂಬರ ರಾಜಕೀಯ ಸ್ಥಿತ್ಯಂತರಗಳೊಂದಿಗೆ ಕರ್ನಾಟಕದ ಉದ್ದಗಲಕ್ಕೆ ಹರಡಿದೆ ಎಂದು ಹೇಳಬಹುದು. ಹೇಮಾವತಿಯಿಂದ ಕಂಪ್ಲಿ ಮತ್ತು ಅಲ್ಲಿಂದ ಬೇರೆ ಬೇರೆ ಸ್ಥಳಗಳಿಗೆ ನೊಳಂಬರು ರಾಜರಾಗಿ, ಅಧಿಕಾರಿಗಳಾಗಿ ವಲಸೆ ಹೋದಾಗ ತಮ್ಮ ಇಷ್ಟ ದೈವವನ್ನು ತಾವು ನೆಲೆಗೊಂಡ ಸ್ಥಳಗಳಲ್ಲಿ ಪ್ರತಿಷ್ಠಾಪಿಸಿರಬಹುದು. ಅವೇ ಇಂದಿನ ಮೈಲಾರ ಕ್ಷೇತ್ರಗಳಾಗಿರ ಬಹುದು. ಮೈಲಾರನ ಸಂಪ್ರದಾಯಕ್ಕೆ ಸೇರಿದ ಬ್ರಾಹ್ಮಣ ಕುಟುಂಬಗಳು ಮತ್ತು ಒಕ್ಕಲುಗಳು ಇದ್ದು, ಈ ಕುಟುಂಬಗಳ ವಲಸೆಯೊಂದಿಗೆ ಮೈಲಾರ ಸಂಪ್ರದಾಯ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಹಬ್ಬಲು ಕಾರಣವಾಗಿರಬೇಕು.

ಮೈಲಾರನ ಬಗ್ಗೆ ಹೇಳುವಾಗ ಹಾಸನದ ಸಿದ್ದೇಶ್ವರನ ಬಗ್ಗೆ ಹೇಳಬೇಕಾಗುತ್ತದೆ. ಶ್ರೀಮತಿ ವಸಂತಲಕ್ಷ್ಮಿಯವರು ಇದರ ಬಗ್ಗೆ ಲೇಖನ ಬರೆದಿದ್ದಾರೆ. ಇದು ಶಿಲ್ಪ ಲಕ್ಷಣದಿಂದ ಕ್ರಿ. ಶ. ೮ನೆಯ ಶತಮಾನಕ್ಕೆ ಸೇರಿದುದಾಗಿದೆ. ಈ ಶಿಲ್ಪದಲ್ಲಿ ಸಿದ್ದೇಶ್ವರ, ನಾಯಿ ಮತ್ತು ಕುದುರೆಯನ್ನೂ ಬಿಡಿಸಿದೆ. ಅಂದರೆ ಭೈರವನ ವಾಹನಗಳಲ್ಲಿ ಕುದುರೆಯೂ ಒಂದೆಂಬುದು ಸ್ಪಷ್ಟವಾಗುತ್ತದೆ. ಇದನ್ನು ಮೈಲಾರ ಎಂದು ಕರೆದಿರುವ ಶಾಸನಗಳಾವೂ ಇಲ್ಲದಿದ್ದರೂ ಇದು ಮೈಲಾರನೆಂಬುದರಲ್ಲಿ ಸಂದೇಹವಿಲ್ಲ. ಹಾಗೆಯೇ ಹೇಮಾವತಿಯ ಸಿದ್ದೇಶ್ವರ ಬಿಂಬವೂ ಸಹ ಭೈರವನ ಶಿಲ್ಪವೇ ಆಗಿದೆ. ಹೀಗಾಗಿ ಮೈಲಾರ ಎಂದು ಕರೆಯದಿದ್ದರೂ ಆ ಸಂಪ್ರದಾಯದ ಭೈರವ ಶಿಲ್ಪಗಳು ಅಲ್ಲಲ್ಲಿ ಪ್ರತಿಷ್ಠಾಪಿತಗೊಂಡು ಪೂಜೆಗೊಳ್ಳುತ್ತಿದ್ದವು. ಕ್ರಿ. ಶ. ೧೧೧೭ರ ನಂತರ ಈ ಬಿಂಬಗಳನ್ನು ಕೆಲವೆಡೆ ಮೈಲಾರ ಎಂದು ಕರೆಯಲಾರಂಭಿಸಿದರು. ಹೀಗೆ ಮೈಲಾರನ ಸಂಪ್ರದಾಯ ನೊಳಂಬವಾಡಿಯಿಂದ ನೊಳಂಬರ ಆಡಳಿತದೊಂದಿಗೆ ಬೇರೆ ಬೇರೆ ಸ್ಥಳಗಳಲ್ಲಿ ಹರಡಿರುವುದು ಸ್ಪಷ್ಟವಾಗುತ್ತದೆ. ನೊಳಂಬರ ಉಲ್ಲೇಖವಿರುವ ಶಾಸನವೊಂದು ಮಹಾರಾಷ್ಟ್ರದ ದಕ್ಷಿಣ ಜಿಲ್ಲೆಯೊಂದರಲ್ಲಿ ದೊರೆತಿರುವುದು ಮೇಲಿನ ನನ್ನ ವಾದವನ್ನು ಪುಷ್ಟೀಕರಿಸುತ್ತದೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.**

*೨. ಡಾ। ಎಂ. ಚಿದಾನಂದ ಮೂರ್ತಿ, **ಸಂಶೋಧನಾ ತರಂಗ-೨.**

*೩. ನೇಗಿನಹಾಳರ ಪ್ರಬಂಧಗಳು.

*೪. ಮೈಲಾರ ಶಾಸನದ ಬಗ್ಗೆ ಮಾಹಿತಿಕೊಟ್ಟು ಈ ಲೇಖನಕ್ಕೆ ನೆರವಾದ ಡಾ।। ದೇವರಕೊಂಡಾರೆಡ್ಡಿಯವರಿಗೆ ಕೃತಜ್ಞತೆಗಳು.

ಬಿ. ಎಸ್. ರಾಜೇಶ್‌ಬಾಬು*

# ಮುದುಗುಂದೂರಿನ ವೀರಗಲ್ಲು ಮತ್ತು ದೇವಾಲಯಗಳು

ಮುದುಗುಂದೂರಿನ ಮಂಡ್ಯ ಜಿಲ್ಲೆ ಸರ್ಕಾರಿ ಪಶುವೈದ್ಯ ಶಾಲೆಯ ಮುಂಭಾಗದ ತಿಪ್ಪೆಗುಂಡಿಯ ಬಳಿಯಲ್ಲಿ ಸುಮಾರು ೪೦ ವೀರಗಲ್ಲುಗಳು ಸಿಕ್ಕಿವೆ. ಈ ಯಾವ ವೀರಗಲ್ಲಿನಲ್ಲಿಯೂ ಶಾಸನ ಲಿಪಿ ಕಂಡುಬಂದಿಲ್ಲ. ಆದರೆ ವೀರಗಲ್ಲಿನ ಶಿಲ್ಪದ ಎಲ್ಲ ಅಂಶಗಳೂ ಕಾಣಬರುತ್ತವೆ.

*ವೀರಗಲ್ಲುಗಳ ವೈಶಿಷ್ಟ್ಯ :* ಇಲ್ಲಿನ ಎಲ್ಲಾ ವೀರಗಲ್ಲುಗಳು ೧.೨ ಮೀ. ನಿಂದ ೧.೭೫ ಮೀ. ಎತ್ತರದಿಂದ ಕೂಡಿದವು ಆಗಿವೆ. ಶಿಲ್ಪಿಗಳು ಬಿಳಿಯ ಹಸಿ ಮತ್ತು ಬಳಪದ ಕಲ್ಲನ್ನು ಹಾಗೂ ಸುಟ್ಟ ಕಲ್ಲು ಚಪ್ಪಡಿಯನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಇವರು ವೀರಗಲ್ಲುಗಳಿಗೆ ಒಂದು ಆಕಾರವನ್ನು ಕೊಡುವುದರ ಬದಲು ಕಲ್ಲಿನ ಮೂಲ ಆಕಾರಕ್ಕೆ ಹೊಂದುವ ಹಾಗೆ ಶಿಲ್ಪವನ್ನು ಬಿಡಿಸುವ ಪ್ರಯತ್ನ ಮಾಡಿದ್ದಾರೆ. ಇಲ್ಲೇ ನಾವು ಗಮನಿಸಬೇಕಾದ ಅಂಶ ಗಂಗ-ನೊಳಂಬ ಕಾಲದ ವೀರಗಲ್ಲು ಶಿಲ್ಪಗಳಲ್ಲಿ ಈ ಲಕ್ಷಣಗಳು ಕಾಣಬರುತ್ತವೆ.



ಇಲ್ಲಿ ನಮಗೆ ಒಂದೇ ಸಮುಚ್ಚಯದಲ್ಲಿಯೇ ೩೦ ರಿಂದ ೪೦ರ ವರೆಗೆ ವೀರಗಲ್ಲುಗಳು ದೊರೆಯುತ್ತವೆ. ಈ ವೀರಗಲ್ಲುಗಳು ಸಾಮಾನ್ಯವಾಗಿ ಪೂರ್ವಾಭಿಮುಖವಾಗಿವೆ. ಗಂಗರ ಕಾಲದ ಕೆಲವು ವೀರಗಲ್ಲುಗಳು ಸಾಮಾನ್ಯವಾಗಿ ಯುದ್ಧಸನ್ನದ್ಧನಾಗಿರುವ ವೀರಸೊಬ್ಬನ ಚಿತ್ರವನ್ನು ಮಾತ್ರ ಬಿಡಿಸಲಾಗಿರುತ್ತದೆ ಮತ್ತು ವೀರನ ಚಿತ್ರಕ್ಕೆ ಪ್ರಾಮುಖ್ಯತೆಯನ್ನು ನೀಡಲಾಗಿರುತ್ತದೆ. ಈ ವೀರನ ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ಶಿವಲಿಂಗ, ಬಸವನನ್ನು ಸಾಮಾನ್ಯವಾಗಿ ಬಿಡಿಸಿರುತ್ತಾರೆ. ವೀರನೊಂದಿಗೆ ಆತನ ಹೆಂಡತಿ ಸಹಗಮನ ಮಾಡಿದ್ದರೆ, ಆ ವಿವರಗಳೂ ಅದೇ ವೀರಗಲ್ಲುಗಳಲ್ಲಿ ದೊರೆಯುತ್ತವೆ. ವೀರನ ಎಡಭಾಗಕ್ಕೆ ತನ್ನ ಕೈ ಎತ್ತಿ ಮಹಿಳೆ ನಿಂತಿರುತ್ತಾಳೆ. ಕೆಲವು ವೀರಗಲ್ಲುಗಳಲ್ಲಿ ವೀರನೂ ಆತನ ಹೆಂಡತಿಯೂ ಕೈಜೋಡಿಸಿ ನಿಂತಿರುತ್ತಾರೆ. ಈ ರೀತಿಯ ಶಿಲ್ಪಗಳು ಮುದುಗುಂದೂರಿನಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ಮುದುಗುಂದೂರಿನ ವೀರಗಲ್ಲುಗಳು ಮೂರು ಹಂತಗಳಿಂದ ಕೂಡಿವೆ. ಕೆಳಗಿನ ಹಂತದಲ್ಲಿ ಯುದ್ಧದಲ್ಲಿ ಭಾಗವಹಿಸಿರುವ, ವೀರನ ಶಿಲ್ಪವನ್ನು ಬಿಡಿಸಲಾಗಿರುತ್ತದೆ. ಎರಡನೆಯ ಹಂತದಲ್ಲಿ ವೀರ ಮತ್ತು ಆತನ ಹೆಂಡತಿ ಅಥವಾ ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವ ವಿವರ ಅಥವಾ ವೀರನು ಪದ್ಮಾಸನದಲ್ಲಿ ಕುಳಿತಿದ್ದು ಆತನ ಎಡ ಮತ್ತು ಬಲಗಳಲ್ಲಿ ಆತನ ಹೆಂಡತಿಯರು ಕೈಮುಗಿದು ಕುಳಿತು, ಕೆಲವೊಮ್ಮೆ ಕೈಮುಗಿದು ನಿಂತಿರುತ್ತಾರೆ.

ಮತ್ತೊಂದೂ ಸೂಕ್ಷ್ಮ ಅಂಶವಿರುವುದು; ವಿಜಯ ನಗರೋತ್ತರ ಕಾಲದ ವೀರಗಲ್ಲುಗಳು ಸಾಮಾನ್ಯವಾಗಿ ಶಾಸನರಹಿತವಾಗಿರುತ್ತವೆ. ಕಲ್ಲು ಮತ್ತು ಶಿಲ್ಪ ಚಿತ್ರಗಳ ಆಧಾರದ ಮೇಲೆಯೇ ಇವುಗಳನ್ನು ಗುರುತಿಸಬೇಕಾಗುತ್ತದೆ. ಈ ಕಾಲದ ವೀರಗಲ್ಲುಗಳ ಗಂಗ-ನೊಳಂಬರ ಕಾಲದ ವೀರಗಲ್ಲುಗಳ ಮಾದರಿಯಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಗುರುತಿಸುವ ಅಂಶಗಳೆಂದರೆ, ವಿಜಯನಗರೋತ್ತರ ಕಾಲದ ಕಲ್ಲುಗಳಲ್ಲಿ ವೀರನನ್ನು ಆಲೀಢಾಸನದಲ್ಲಿ ಬಿಡಿಸಲಾಗಿರುವುದಿಲ್ಲ. ನಿಂತ ಭಂಗಿ ಇಲ್ಲವೇ ಪದ್ಮಾಸನದಲ್ಲಿರುವುದು ಹಾಗೂ ಗಿಡ್ಡಗಿರುತ್ತವೆ ಮತ್ತು ಮೇಲ್ಭಾಗದಲ್ಲಿ ಸಾಮಾನ್ಯವಾಗಿ ಧಾರ್ಮಿಕ ಸಂಕೇತಗಳಾದ ಸೂರ್ಯ, ಚಂದ್ರ, ಶಿವಲಿಂಗ, ಬಸವ, ಶಂಖ, ಚಕ್ರ, ಪದ್ಮಗಳನ್ನು ಹೊಂದಿರುತ್ತವೆ.

*ಮುದುಗುಂದೂರಿನ ಇತಿಹಾಸದ ಆಕರಗಳು :* ಮುದುಗುಂದೂರನ್ನು ಸ್ಥಳೀಕರು, 'ಮುಚುಕುಂದಪುರಿ' ಎಂದಿದ್ದಾರೆ ಕಾಲಾನಂತರದಲ್ಲಿ ಮುದುಗುಂದೂರು ಆಗಿ ಪರಿಣ ಮಿಸಿರಬಹುದು ಎಂದು ಅಭಿಪ್ರಾಯಪಡುತ್ತಾರೆ.

ಎಪಿಗ್ರಾಫಿಯ ಕರ್ನಾಟಿಕದ - ೭ನೇ ಸಂಪುಟದಲ್ಲಿ ಪುಟ ಸಂಖ್ಯೆ ೪೧೯ರ ಶಾಸನ ಸಂಖ್ಯೆ ೧೨೨ರಲ್ಲಿಯ ಪುರಿಗಾಲಿಯ ಹೊಲವೊಂದರಲ್ಲಿ ಸಿಕ್ಕಿರುವ ಕಲ್ಲಿನ ಶಾಸನದಲ್ಲಿ 'ಮುದುಗುನ್ನೂರ್' ಎಂದು ಪ್ರಸ್ತಾಪಿಸಲಾಗಿದೆ.

*ನಂ. ೨೯, ೧೨ನೇ ಮುಖ್ಯರಸ್ತೆ ವೃಷಭಾವತಿ ನಗರ, ಕಾಮಾಕ್ಷಿಪಾಳ್ಯ, ಬೆಂಗಳೂರು - ೫೬೦ ೦೭೯.



ಗಂಗ ದೊರೆ ಎರಡನೇ ಶಿವಮಾರನನ್ನು ರಾಷ್ಟ್ರಕೂಟರ ಧ್ರುವನು ಕ್ರಿ. ಶ. ೭೮೮ರಲ್ಲಿ ಮುದುಗುಂದೂರಿನಲ್ಲಿ ಯುದ್ಧ ಬಿಡಾರವನ್ನು ಹೂಡಿದ್ದ, ಆ ಯುದ್ಧದಲ್ಲಿ ಶಿವಮಾರನನ್ನು ಸೋಲಿಸಿದನು ಎಂದು ಕರ್ನಾಟಕ ಗ್ಯಾಸೇಟಿಯರ್ - ಭಾಗ-೧, ಪುಟ ೧೭೩ರಲ್ಲಿ ಪ್ರಸ್ತಾಪಿಸಲಾಗಿದೆ.

***ಮುದುಗುಂದೂರಿನ ದೇವಾಲಯಗಳು*** : ಈ ಊರಿನ ಪೂರ್ವಕ್ಕಿರುವ ಪಂಚಲಿಂಗೇಶ್ವರ ದೇವಾಲಯದ ಪಂಚಲಿಂಗ ಶಿಲ್ಪದ ವೈಶಿಷ್ಟ್ಯತೆ ಎಂದರೆ, ಒಂದೇ ಪಾಣಿವಟ್ಟದ ಮೇಲೆ ನಾಲ್ಕು ಮೂಲೆಗಳಲ್ಲಿ ನಾಲ್ಕು ಚಿಕ್ಕ ಲಿಂಗಗಳೂ ಮಧ್ಯದಲ್ಲಿ ದೊಡ್ಡಲಿಂಗವೂ ಇರುವುದಾಗಿದೆ. ಈ ಬಗೆಯ ಪಂಚಲಿಂಗ ಶಿಲ್ಪವೂ ಅತ್ಯಂತ ವಿರಳ.

***ಉಳಿದ ದೇವಾಲಯಗಳು*** : ರಾಮೇಶ್ವರ ದೇವಾಲಯ, ಹೊಯ್ಸಳ ಶೈಲಿಯ ಪೂರ್ವಾಭಿಮುಖವಾಗಿರುವ ಕೇಶವ ದೇವಾಲಯ, ಸಪ್ತಮಾತೃಕೆಯರ ದೇವಾಲಯ (ಈ ದೇವಾಲಯವನ್ನು ಇಲ್ಲಿಯವರು ಬನಶಂಕರಮ್ಮ ದೇವಾಲಯ ಎಂದು ಕರೆಯುತ್ತಾರೆ) ನೂತನವಾದ ಪಶ್ಚಿಮಾಭಿಮುಖವಾಗಿರುವ ಮಾರಮ್ಮನ ಗುಡಿ ಇದ್ದು ಈ ಊರಿನ ಸುತ್ತ-ಮುತ್ತಲಿನಲ್ಲೆಲ್ಲ ಹೆಚ್ಚಾಗಿ ಮಾರಮ್ಮನ ಗುಡಿಗಳು ಕಂಡುಬರುತ್ತವೆ.



[ಮಂಡ್ಯ ಜಿಲ್ಲೆ ಮತ್ತು ತಾಲೂಕಿನ ದುದ್ದ ಹೋಬಳಿಯಲ್ಲಿ, ಮುದುಗುಂದೂರಿನಲ್ಲಿ ಅಭಿರುಚಿ ಅಡ್ವೆಂಚರರ್ಸ್ ಕ್ಲಬ್‌ನ ಸದಸ್ಯರಾಗಿ ಕೈಕೊಂಡ ನಮ್ಮ ಈ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಮುದುಗುಂದೂರಿನ ಶ್ರೀ ರವೀಶ್, ಶ್ರೀ ವೀರಭದ್ರಸ್ವಾಮಿ ಮತ್ತು ಮಲ್ಲಪ್ಪಾಜಿರವರಿಗೆ ನಮ್ಮ ಧನ್ಯವಾದಗಳು. ಈ ಲೇಖನವನ್ನು ಸಿದ್ಧ ಪಡಿಸಲು ಸಹಕರಿಸಿದಂತಹ ಹಾಗೂ ಮಾರ್ಗದರ್ಶನ ನೀಡಿದಂತಹ ಪೂಜ್ಯ ಗುರುಗಳಾದ ಡಾ. ಶ್ಯಾಮಲರತ್ನಕುಮಾರಿ, ಡಾ. ಎಚ್. ಎಸ್. ಗೋಪಾಲ್‌ರಾವ್ ನಮಗೆ ಪ್ರೋತ್ಸಾಹ ನೀಡಿದಂತಹ ಡಾ॥ ಸೂರ್ಯನಾಥ ಕಾಮತ್‌ರವರಿಗೂ ನಮ್ಮ ಅನಂತ ನಮಸ್ಕಾರಗಳು. ಕ್ಷೇತ್ರಕಾರ್ಯದಲ್ಲಿ ಉತ್ಸಾಹ - ಉಲ್ಲಾಸದಿಂದ ಭಾಗವಹಿಸಿದಂತಹ ಶ್ರೀ ಲೋಕೇಶ್, ಶ್ರೀ ಎಂ. ಎಸ್. ಮರಿದೇವರು ಮತ್ತು ಶ್ರೀ ಅರವಿಂದ್‌ರವರಿಗೂ ವಂದನೆಗಳು.]

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

ಡಾ॥ ಆರ್. ಶೇಷಾಶಾಸ್ತ್ರಿ, **ಕರ್ನಾಟಕದ ವೀರಗಲ್ಲುಗಳು** : ಕ.ಸಾ.ಪ. ಪ್ರಕಟಣೆ, (ಪು : ೩೦೫, ೩೦೬, ೩೦೭)
**ಎಪಿಗ್ರಾಫಿಯ ಕರ್ನಾಟಕ** : ೭ನೇ ಸಂಪುಟ
**ಕರ್ನಾಟಕ ಗ್ಯಾಸೇಟಿಯರ್** ಭಾಗ - ೧.

ಪ್ರೊ. ಭೀಮಪ್ಪ ಆರ್. ಸುರಪುರ*

# ರಾಯಚೂರಿನ ನವರಂಗ ದರವಾಜಾ ಐತಿಹಾಸಿಕ - ಹಿನ್ನೆಲೆ

ಕಾಕತೀಯ ಎರಡನೆಯ ಪ್ರತಾಪರುದ್ರನ ಮಹಾದಂಡ ನಾಯಕನೂ ಸಾಮಂತನೂ ಆದ ಗೋನಗನ್ನಯರಡ್ಡಿ ಎಂಬಾತನು ಶಕವರುಷ ೧೨೧೬ರ (ಕ್ರಿ. ಶ. ೧೨೯೪) ಜಯ ಸಂವತ್ಸರದ ಮಾರ್ಗಶಿರ ಶುದ್ಧ ೭ ರಂದು ರಾಷ್ಟ್ರ ಹಾಗೂ ಪ್ರಜಾ ರಕ್ಷಣಾರ್ಥವಾಗಿ ಸುಭದ್ರವಾದ ಬೃಹತ್ ಶಿಲೆಗಳಿಂದ ರಾಯಚೂರಿನ ಕೋಟೆಯನ್ನು ಕಟ್ಟಿಸಿದನೆಂದು ಅಲ್ಲಿಯ ಶಿಲಾ ಶಾಸನದಿಂದ ತಿಳಿದುಬರುತ್ತದೆ.*೧ ರಾಯಚೂರಿನ ಕೋಟೆಯನ್ನು ಸಮೀಕ್ಷಿಸಿದರೆ ಅದನ್ನು ಕಟ್ಟಿಸಿದ ಉದ್ದೇಶ "ರಾಷ್ಟ್ರ ರಕ್ಷಣೆ" ಮತ್ತು "ಪ್ರಜಾರಕ್ಷಣೆ" ಎಂದರಿವಾಗುತ್ತದೆ. ರಾಯಚೂರು ಇರುವುದೇ ಆಡಳಿತ ದೃಷ್ಟಿಯಿಂದ ತುಂಬ ಆಯಕಟ್ಟಿನ ಸ್ಥಳದಲ್ಲಿ, ಕೃಷ್ಣಾನದಿಯ ದಕ್ಷಿಣ ಪೂರ್ವಕ್ಕೆ. ಈ ಭಾಗದ ಕೋಟೆಯನ್ನು ಹಿಡಿತದಲ್ಲಿಟ್ಟು ಕೊಂಡವರು ಅದರ ದಕ್ಷಿಣ ಮತ್ತು ಪಶ್ಚಿಮಕ್ಕೆ ಹಬ್ಬಿರುವ ರಾಯಚೂರು ಜಿಲ್ಲೆಯ ವಿಶಾಲವಾದ ಪ್ರದೇಶವನ್ನು ತುಂಗಭದ್ರಾ ನದಿಯವರೆಗೂ ಸುಲಭವಾಗಿ ತಮ್ಮ ಅಧೀನದಲ್ಲಿ ಇಟ್ಟುಕೊಳ್ಳ ಬಹುದು. ಅದೇ ಪ್ರಕಾರ ಅದರ ಪೂರ್ವ ದಿಕ್ಕಿಗಿರುವ ಈಗಿನ ಆಂಧ್ರಪ್ರದೇಶದ ಮಹಬೂಬ್‌ನಗರ ಜಿಲ್ಲೆಯ ಬಹು ಭಾಗದ ಮೇಲೆ ತಮ್ಮ ಹಿಡಿತವನ್ನು ಸಾಧಿಸಬಹುದಾಗಿದೆ. ಈ ಕಾರಣ ಕ್ಕಾಗಿಯೇ ರಾಯಚೂರಿನ ಕೋಟೆಯನ್ನು ವಶಪಡಿಸಿಕೊಳ್ಳಲು ೧೫-೧೬ನೆಯ ಶತಮಾನದಲ್ಲಿ ವಿಜಯನಗರದ ಅರಸರಿಗೂ ಮತ್ತು ಕೃಷ್ಣಾನದಿಯ ಉತ್ತರದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ ಮುಸಲ್ಮಾನ ಅರಸರಿಗೂ ನಡೆದ ಅನೇಕ ಯುದ್ಧಗಳು ಇತಿಹಾಸದ ಪುಟಗಳಲ್ಲಿ ದಾಖಲಾಗಿವೆ.

"ಶ್ರೀ ಮದ್ರಾಜಾಧಿರಾಜ" "ರಾಯ ಪರಮೇಶ್ವರ" "ಪರರಾಜ ಭಯಂಕರ" "ಮೂರು ರಾಯರಗಂಡ" ಮುಂತಾದ ಬಿರುದುಗಳೊಡನೆ "ಹಿಂದೂರಾಜ", "ಸುರತ್ರಾಣ (ಸುಲ್ತಾನ) - ದುಷ್ಟಶಾರ್ದೂಲಮರ್ದನ", "ಗಜಗಂಡ ಭೇರುಂಡ" ಎಂಬ ಬಿರುದಿಗೆ ತಕ್ಕಂತೆ ಶ್ರೀಕೃಷ್ಣದೇವರಾಯನು ಕ್ರಿ. ಶ. ೧೫೨೦ರ ಯುದ್ಧದಲ್ಲಿ ಮುಸಲ್ಮಾನ ಅರಸರನ್ನು ಸೋಲಿಸಿ ಅವರ ವಶದಲ್ಲಿದ್ದ ರಾಯಚೂರು ಕೋಟೆಯನ್ನು ವಶಪಡಿಸಿಕೊಳ್ಳುವನು. ಈ ಕೋಟೆ ಕ್ರಿ. ಶ. ಸುಮಾರು ೧೫೬೬ರ ವರೆಗೆ ವಿಜಯನಗರದ ಅರಸರ ವಶದಲ್ಲಿ ಇದ್ದುದು ತಿಳಿದುಬರುತ್ತದೆ. ಶ್ರೀ ಕೃಷ್ಣದೇವರಾಯನು ತನ್ನ ವಿಜಯದ ನೆನಪಿನ ಪ್ರತೀಕವಾಗಿ ರಾಯಚೂರಿನಲ್ಲಿ ತನ್ನ ರಾಣಿಗಾಗಿ ಒಂದು ಭವ್ಯ ಭವನವನ್ನು ಕಟ್ಟಿಸುವನು. ಅದರ ಹೆಸರು "ನವರಂಗ ಮಹಲು" ಎಂದು ಇರಬಹುದು. (ಹಂಪೆಯಲ್ಲಿ "ಕಮಲ ಮಹಲು" ಇದ್ದಂತೆ). ಅದನ್ನು "ನವರಂಗ ದರವಾಜ" ಎಂದರೆ "ನವರಂಗ ಬಾಗಿಲು" ಅಥವಾ "ನವರಂಗದ ಅಗಸಿ" ಎಂದು ಕನ್ನಡಿಗರು ಕರೆದರೆ, ನಿಜಾಮರ ಆಳ್ವಿಕೆಯಲ್ಲಿ ಸಾಮಾನ್ಯ ಜನರ ಬಾಯಲ್ಲಿ ಇದು "ನವರಂಗ ದರವಾಜ"ವಾಗಿ ಮಾರ್ಪಾಡು ಆಗಿರಬೇಕು.

"ನವರಂಗ ಮಹಲು" ಎರಡು ಅಂತಸ್ತುಗಳುಳ್ಳ ಅರಮನೆ ಆಗಿರಬೇಕು. ಇದಕ್ಕೆ ಪುರಾವೆ ಎಂದರೆ ಅದರ ಮೊದಲನೆಯ ಅಂತಸ್ತಿನ ಮೇಲೆ ಮಾಳಿಗೆಯೇ ಇಲ್ಲದೆ ಸಂಪೂರ್ಣ ಬಯಲಾಗಿರುವಿಕೆ. ಇದರ ಎರಡನೆಯ ಅಂತಸ್ತಿನ ಮೇಲೆ ಮಾಳಿಗೆ ಇರಬೇಕು. ಆದರೆ ಎರಡನೆಯ ಅಂತಸ್ತು ಸಂಪೂರ್ಣವಾಗಿ ನಾಶವಾಗಿದ್ದರೂ ಅದರ ಮೊದಲನೆಯ ಅಂತಸ್ತಿನ ನೆಲಮಾಳಿಗೆ (Ground floor) ಮೇಲೆ ಅಲ್ಲಲ್ಲಿ ಉಳಿದಿರುವ ಭಗ್ನಾವಶೇಷ ಅಂಬಾರಿಗಳ ಕುರುಹುಗಳಿಂದ ತಿಳಿದುಬರುತ್ತದೆ. ಆದರೆ ಈಗ ಕೇವಲ ನೆಲಮಾಳಿಗೆ (Ground floor) ಮಾತ್ರ ಉಳಿದಿದೆ. ಹೊರಗೆ ಹೋಗಿ ಬರಲು ಈ ಮಹಲಿಗೆ ಎರಡೂ ಕಡೆ ಅಗಸಿ ಬಾಗಿಲುಗಳಿವೆ. ಒಂದು ಪೂರ್ವ ದಿಕ್ಕಿಗಿದ್ದರೆ ಇನ್ನೊಂದು ದಕ್ಷಿಣದ ಕಡೆ ಪೂರ್ವದ ಬಾಗಿಲು ದೊಡ್ಡದಾಗಿದ್ದರೆ ದಕ್ಷಿಣದ ಬಾಗಿಲು ಅದಕ್ಕಿಂತಲೂ ಚಿಕ್ಕದು. ಪೂರ್ವದಿಕ್ಕಿನ ಅಗಸಿ ಸಂಪೂರ್ಣವಾಗಿ ನಾಶವಾಗಿದ್ದರೆ, ದಕ್ಷಿಣದ ಅಗಸಿಯ ಬಹಳಷ್ಟು ಭಾಗ ಉಳಿದುಕೊಂಡಿದೆ. ಪೂರ್ವ ದಿಕ್ಕಿನಿಂದ ಪ್ರವೇಶ ಮಾಡಿ ಒಳ ಬಂದರೆ ಅದರ ಎಡಗಡೆ ಎತ್ತರವಾದ ಒಂದು "ಹುಡೆ" ಅಥವಾ "ಬುರುಜು" ಇದೆ. ರಕ್ಷಣಾರ್ಥವಾಗಿ ಹಿಂದೆ ಅದರ ಮೇಲೆ

---

* (ಡಾ. ಜಿ. ಎಸ್. ದೀಕ್ಷಿತರು, ತಮ್ಮ ಸ್ನೇಹಿತರೂ ಮತ್ತು ಸಹಪಾಠಿಗಳೂ ಆದ ಹೈದರಾಬಾದಿನ ನಿವಾಸಿ ಪ್ರೊ. ಬಿ. ರಾಮಸ್ವಾಮಿಯವರಿಗೆ ಪತ್ರ ಬರೆದು ರಾಯಚೂರಿನ ನವರಂಗ ದರವಾಜಾದಲ್ಲಿಯ ಉಬ್ಬುಶಿಲ್ಪಗಳ ಚಿತ್ರಗಳನ್ನು, ಸಾಧ್ಯವಾದರೆ ಕಳಿಸಿಕೊಡುವಂತೆ ಕೇಳಿದ್ದರು. ಪ್ರೊ. ಬಿ. ರಾಮಸ್ವಾಮಿಯವರು ನನ್ನ ಗುರುಗಳು. ಅವರು ನನಗೆ ಕಾಗದ ಬರೆದು ವಿಷಯವನ್ನು ತಿಳಿಸಿದರು. ಅದು ನನಗೆ ಕೋಟೆ ಮತ್ತು ನವರಂಗ ದರವಾಜಾದ ಬಗ್ಗೆ ಆಸಕ್ತಿ ವಹಿಸಿ ಕಾರ್ಯಪ್ರವೃತ್ತನಾಗಲು ಪ್ರೋತ್ಸಾಹ ನೀಡಿತು.)

*ನಿವೃತ್ತ ಪ್ರಿನ್ಸಿಪಾಲರು, ಕೆ/ಆಫ್ ಕು|| ನಾಗಮ್ಮ ಬಿ.ಎಸ್., ಪೋಸ್ಟಲ್ ಅಸಿಸ್ಟೆಂಟ್, ಆರ್. ಎಸ್. ಅಂಚೇ ಕಛೇರಿ, ಗುಲಬರ್ಗಾ - ೫೮೫ ೧೦೨.

ತೋಪುಗಳನ್ನು ಇಟ್ಟಿರಲು ಸಾಧ್ಯವಿದೆ. ಈ ಮಹಲಿನ ಸುತ್ತಲೂ ದೊಡ್ಡ ದೊಡ್ಡ ಕಲ್ಲುಗಳಿಂದ ಕಟ್ಟಿದ ಭದ್ರವಾದ ಗೋಡೆ ಇದೆ. ಅದರ ಹೊರಗಡೆ ಸುತ್ತಲೂ "ಅಗಳು" ಅಥವಾ "ಕಂದಕ" ಇದ್ದ ಕುರುಹುಗಳು ಕಂಡುಬರುತ್ತವೆ. ನವರಂಗ ಮಹಲಿಗೆ ದಕ್ಷಿಣದಿಂದ ಪ್ರವೇಶ ಸ್ವಲ್ಪ ಅನುಕೂಲವಾಗಿದೆ. ಎಲ್ಲಾ ಹಾಳುಬಿದ್ದ ಕೋಟೆಕೊತ್ತಲಗಳಂತೆ ಅದೊಂದು ಅಗಸಿ (ದ್ವಾರ). ಅದರ ಬಲಗಡೆ ಮನೆಗಳಿವೆ. ಅಗಸಿ ಬಾಗಿಲಿನ ಎಡಗಡೆ "ಹಮದರ್ದ್ ಹೈಸ್ಕೂಲ್" ಮತ್ತು ಪದವಿಪೂರ್ವ ಕಾಲೇಜುಗಳಿವೆ. ಅಷ್ಟೇ ಏಕೆ ಈ ಮಹಲಿನ ಸುತ್ತಲೂ ಮನೆ ಮತ್ತು ಅಂಗಡಿಗಳು ಹುಟ್ಟಿಕೊಂಡಿದ್ದರಿಂದ ಪೂರ್ವ ದಿಕ್ಕಿನಿಂದ ಅದರ ಇರುವು ಹೊರಗಿನಿಂದ ಕಾಣದಂತಾಗಿದೆ. ಆದರೆ ದಕ್ಷಿಣ ದ್ವಾರದ ಕಡೆಯಿಂದ ಅದನ್ನು ಗುರುತಿಸಬಹುದಾಗಿದೆ. ದಕ್ಷಿಣದ ಅಗಸಿ ಉಳಿದೆಲ್ಲ ಅಗಸಿಗಳಿಗಿಂತ ಚಿಕ್ಕದು. ಅದರ ಎಡ ಮತ್ತು ಬಲ ಭಾಗಗಳೆರಡೂ ಕಡೆ ದಿಡ್ಡಿ ಬಾಗಿಲುಗಳಿವೆ. ಈ ಅಗಸಿಯ ಮುಖ್ಯ ಬಾಗಿಲನ್ನು ಹಾಕಿದಾಗ ಈ ದಿಡ್ಡಿ ಬಾಗಿಲಿನಿಂದ ಅಡ್ಡಾಡಬಹುದು. ಅಲ್ಲಿಂದ ಒಳಗೆ ಹೋದರೆ ಸ್ವಲ್ಪ ಬಯಲು. ಎಡಗಡೆ ಸುತ್ತುವರಿದ ಗೋಡೆ ಸ್ವಲ್ಪ ಮುಂದೆ ಹೋದರೆ ಹೊರಗಡೆ ಮತ್ತೊಂದು ಅಗಸಿ (ಬಾಗಿಲು). ಅದೇ ಎರಡನೆಯ ಅಗಸಿ ಎಂದು ಗುರುತಿಸಲಾಗಿದೆ. ಅದರ ಮೇಲ್ಭಾಗದಲ್ಲಿ ಎರಡನೆಯ ಅಂತಸ್ತಿನ ಅಳಿದುಳಿದ ಅವಶೇಷಗಳನ್ನು ಕಾಣಬಹುದಾಗಿದೆ. ಇದರ ಪಶ್ಚಿಮಕ್ಕೆ ಅಗಸಿಗೆ ಹತ್ತಿಕೊಂಡು ಎರಡನೆಯ ಅಂತಸ್ತಿಗೆ ಹೋಗಲು ಪಾವಟಿಗೆಗಳಿವೆ. ಈ ಅಗಸಿಯ ಎಡಭಾಗ ಮತ್ತು ಬಲಭಾಗದ ಗೋಡೆಯ ಮೇಲೆ ಕೆಲವು ಉಬ್ಬು ಶಿಲ್ಪಗಳನ್ನು ಕೊರೆಯಲಾಗಿದೆ. ಆದರೆ ಅವು ಅಷ್ಟು ಸೂಕ್ಷ್ಮವಾಗಿಲ್ಲ,





ಕಲಾತ್ಮಕವಾಗಿಲ್ಲ. ಈ ಅಗಸಿಯು ಪೂರ್ವಾಭಿಮುಖವಾಗಿದೆ. ಅದರಿಂದ ಒಳಗೆ ಪ್ರವೇಶಿಸಿದರೆ ನೋಟಕರಿಗೆ ಮಹದಾಶ್ಚರ್ಯವೇ ಕಾದಿದೆ. ಅದೇ "ನವರಂಗ"ದ ಒಳಾಂಗಣ. ಚಚ್ಚೌಕಾದ ಒಳಾಂಗಣ ಅದರ ಉತ್ತರಕ್ಕೆ ಮತ್ತೊಂದು ದೊಡ್ಡ ಅಗಸಿ (ಬಾಗಿಲು) ಇದೆ. ಎರಡನೆಯ ಅಗಸಿಯ ಎದುರುಗಡೆಯೂ ಕೂಡ ಒಂದು ಚಿಕ್ಕ ಬಾಗಿಲಿದೆ. ಒಳಾಂಗಣದ ನಾಲ್ಕೂ ಗೋಡೆಗಳು ಸುಮಾರು ೨೦-೨೫ ಅಡಿ ಎತ್ತರವಾಗಿವೆ. ಈಗ ಇದರ ಮೇಲ್ಭಾಗದಲ್ಲಿ ಛಾವಣಿ ಇಲ್ಲ. ಅದು ಎರಡನೆಯ ಅಂತಸ್ತಿನ ಮೇಲೆ ಕಟ್ಟಿರಬಹುದಾಗಿದೆ. ಆದರೆ ಆ ಎರಡನೆಯ ಅಂತಸ್ತು ಸಂಪೂರ್ಣವಾಗಿ ನಾಶ ಹೊಂದಿದೆ. ನಾಲ್ಕೂ ಗೋಡೆಯ ಬೃಹತ್ ಶಿಲ್ಪದ ಕಟ್ಟಣಿಕೆ; ಅದರ ಕೆಳಗಿನ ಭಾಗದಲ್ಲಿ ∩ ∩ ∩ ∩ ಆಕಾರದ ಕಮಾನುಗಳಿವೆ. ಕಮಾನುಗಳ ಮೇಲ್ಭಾಗದಲ್ಲಿ ಉಬ್ಬು ಶಿಲ್ಪಗಳ ಕಲ್ಲಿನ ಕೆತ್ತನೆಯು ಸೂಕ್ಷ್ಮವಾಗಿದ್ದು ಕಾಡುಗಲ್ಲಿನ ಶಿಲ್ಪಕಲೆಗೆ ಮಾದರಿಯಾಗಿವೆ. ಅನಂತರ ಅದರ ಮೇಲ್ಭಾಗದಲ್ಲಿ ಹೂಗಳನ್ನು ಬಿಡಿಸಿದ ಕಲ್ಲಿನ ಒಂದು ತರವಿದೆ. ಅದರ ಮೇಲೆ 'ಮಾಳಿಗೆ' ಅಥವಾ ಎರಡನೆಯ ಅಂತಸ್ತಿನ ನೆಲ (floor) ಇದೆ. ಎರಡನೆಯ ಅಗಸಿಯ ಎದುರಿನ ಗೋಡೆಯ ಎಡಗಡೆ ಬೇಟೆಯ ಚಿತ್ರ (ಶಿಲ್ಪ), ಯುದ್ಧದ ಚಿತ್ರ, ರಾಜರನ್ನು ಮೇನೆಯಲ್ಲಿ ಕುಳ್ಳಿರಿಸಿಕೊಂಡು ಹೋಗುವ ಚಿತ್ರ ಮತ್ತು ಮಲ್ಲಯುದ್ಧದ ಚಿತ್ರವಿದೆ. ಬಲಗಡೆ ಗೋಡೆಯ ಮೂಲೆಯಲ್ಲಿ ಅಶೋಕವನದಲ್ಲಿ ಹನುಮಂತನು ಸೀತೆಯನ್ನು ಕಂಡ, ಆ ಸಮಾಚಾರವನ್ನು ಶ್ರೀ ರಾಮನಿಗೆ ಹೇಳುವಿಕೆ ಇತ್ಯಾದಿ. ಅದರ ಹಿಂದೆ ಹನುಮಂತನ ಮೂರ್ತಿಯೂ ಇದೆ. ಅದರ ನಂತರ ಶ್ರೀ ಕೃಷ್ಣದೇವರಾಯನು ಅಂತಃಪುರದಲ್ಲಿ ಮಹಾರಾಣಿಯೊಂದಿಗೆ ದರ್ಬಾರು ಕೊಟ್ಟಿರುವುದು ಅವರೆಲ್ಲಾ ನರ್ತಕಿಯರಿಂದ ಸುತ್ತುವರಿದಿರುವುದು. ಮಹಾರಾಜರಿಗೆ ಚಾಮರ ಸೇವೆ ಇತ್ಯಾದಿ. ಅದರ ಮೇಲ್ಭಾಗದಲ್ಲಿ ಎರಡನೆಯ ಅಂತಸ್ತಿನ ಅಂಬಾರಿಯ ಕುರುಹು ಸ್ಪಷ್ಟವಾಗಿದೆ. ಅದರ ನಂತರ ಅದೇ ಭಾಗದಲ್ಲಿ ಒಂದೇ ಮುಖದ ಎರಡು ಆನೆಗಳು, ರಾಮಲಕ್ಷ್ಮಣ ಸೀತೆಯರು, ವಾಮನನು ಆಕಾಶಕ್ಕೆ ಪಾದವನ್ನು ಕೊಟ್ಟಿರುವುದು, ಅದರ ಮುಂದೆ ಸ್ತ್ರೀ, ನರಸಿಂಹನು ಹಿರಣ್ಯಕಶ್ಯಪನನ್ನು ತೊಡೆಯ





ಮೇಲಿರಿಸಿ ಹೊಟ್ಟೆಯನ್ನು ಸೀಳುವಿಕೆ, ಅದರ ಮುಂದೆ ಸ್ತ್ರೀ ಇತ್ಯಾದಿ. ಅಲ್ಲದೆ ಶೇಷನಾರಾಯಣನ ಶಿಲ್ಪ, ರಾಜನು ತನ್ನ ಸೈನ್ಯದೊಂದಿಗೆ ಕುದುರೆ ಸವಾರನಾಗಿ ಬೇಟೆಯಾಡುವಿಕೆ ಮತ್ತು ವೀರನೊಬ್ಬನು ಹುಲಿಯ ಬಾಯನ್ನು ಹಿಡಿದು ಸೀಳುವಿಕೆ ಮುಂತಾದ ಶಿಲ್ಪಗಳಿವೆ. ಎರಡನೆಯ ಅಗಸಿಯ ಬಲಗಡೆ ಗೋಡೆಯ ಮೇಲೆ ಮಿಥುನ / ರತಿಕೇಳಿಯ ಶಿಲ್ಪಗಳಿವೆ; ಎಡಗಡೆ ಗೋಡೆಯ ಮೇಲೆ ಅಶ್ವಮೇಧಯಾಗದ ಎರಡು ಶಿಲ್ಪಗಳಿವೆ. ಒಂದರಲ್ಲಿ ಇಬ್ಬರು ವೀರರು ಬಿಲ್ಲು ಹಿಡಿದು ಯುದ್ಧ ಮಾಡುತ್ತಿದ್ದಾರೆ. ಒಬ್ಬನ ಹಿಂದುಗಡೆ ಅಶ್ವವನ್ನು ಕಟ್ಟಿ ಹಾಕಿದ್ದಾರೆ. ಎರಡನೆಯ ಶಿಲ್ಪದಲ್ಲಿ ಸ್ತ್ರೀಯೋರ್ವಳು (ಚಿತ್ರಾಂಗದೆ ಆಗಿರಬೇಕು) ಕುದುರೆಯನ್ನು ತಂದು ಗದ್ದುಗೆಯ ಮೇಲೆ ಕುಳಿತಿರುವ ವೀರನಿಗೆ (ಅರ್ಜುನನಾಗಿರಬೇಕು) ಆ ಕುದುರೆಯನ್ನು ಅರ್ಪಿಸುತ್ತಿದ್ದಾಳೆ.

ಮೂರನೆಯ ಅಗಸಿ (ಬಾಗಿಲು)ಯ ಒಂದು ನೋಟವನ್ನು ಫೋಟೋದಲ್ಲಿ ನೋಡಬಹುದು. ಇದರ ಬಾಗಿಲು ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಇದೆ. ಇದರ ಎರಡೂ ಕಡೆಯ ಗೋಡೆಯ ಮೇಲೆ ವಿಶೇಷ ಕೆತ್ತನೆಗಳಿಲ್ಲ. ಆದರೆ ಇದರ ಒಳಗಂಬಗಳ ಮೇಲೆ ಉತ್ತಮವಾದ ಶಿಲ್ಪವಿದೆ. ಆದರೆ ಅವುಗಳ ಮೇಲೆಲ್ಲ ಜಾಜವನ್ನು ಸವರಿದ್ದರಿಂದ ಅವುಗಳ ಸ್ಪಷ್ಟ ಕಲ್ಪನೆಗೆ ಕಷ್ಟವಾಗುತ್ತದೆ. ಜಾಜನ್ನು ಸವರಿ ಸವರಿ ಈ ಚಿತ್ರಗಳಿಗೆ ಊದಿನ ಕಡ್ಡಿ, ಹೂಗಳಿಂದ ಪೂಜಿಸುತ್ತಿರುವುದನ್ನು ಈಗಲೂ ಕಾಣಬಹುದಾಗಿದೆ. ಒಂದು ಕಂಬದ ಶಿಲ್ಪದಲ್ಲಿ ಶ್ರೀಕೃಷ್ಣನು ಗೋಪಿಕಾಸ್ತ್ರೀಯರ ವಸ್ತುಗಳನ್ನು ಕದ್ದು ಮರ ಹತ್ತಿದಂತೆಯೂ ಆ ಸ್ತ್ರೀಯರೆಲ್ಲ ಮರದ ಕೆಳಗೆ ನಿಂತು ಅವನನ್ನು ಪ್ರಾರ್ಥಿಸುತ್ತಿರುವಂತೆಯೂ ಕಂಡುಬಂದರೆ, ಇನ್ನೊಂದು ಶಿಲ್ಪ ಮೂರ್ತಿಯೊಂದು ಮಾನವನೊಬ್ಬನನ್ನು ತನ್ನ ಕೈ ಕಾಲುಗಳಿಂದ ಮೆಟ್ಟಿ ನಿಂತಂತೆ ಇದೆ. ಇದು ಬಹುಶಃ ನರಸಿಂಹನು ಹಿರಣ್ಯ ಕಶ್ಯಪನನ್ನು ಸಂಹರಿಸುವ ಶಿಲ್ಪವಿರಬೇಕೆಂದು ಊಹಿಸಬಹುದಾಗಿದೆ.

ಈ ಮೂರನೆಯ ಅಗಸಿಯ ಒಳಗಿನಿಂದ ಮುಂದೆ ಹೋದರೆ ಅದರ ಬಲಗಡೆ ಎತ್ತರವಾದ ಹುಡೆ ಇದೆ. ಅದನ್ನು ವೃತ್ತಾಕಾರದ ರೇಖೆಗಳಿಂದ ಸೂಚಿಸಲಾಗಿದೆ. ಈ ಹುಡೆ (ಬುರುಜು) ಎತ್ತರ ವಾಗಿದ್ದು ಇದರ ಮೇಲೆ ಹಿಂದೆ ತೋಪುಗಳನ್ನು ಇಟ್ಟಿರಲೂ ಬಹುದು. ಇದನ್ನು ಸೈನಿಕರು O.P. ಎಂದರೆ "Observation Post" ನಂತೆ ಉಪಯೋಗಿಸುತ್ತಿರಬಹುದು. ಅದರ ಮುಂದೆ ಹೋದರೆ ಸಿಕ್ಕುವುದೇ ಪೂರ್ವ ದಿಕ್ಕಿಗಿರುವ ಅಗಸಿ. ಇದೇ ಹೆಬ್ಬಾಗಿಲು. ಇದನ್ನು ಅಗಸಿ ೪ ಎಂದು ರೇಖಾಚಿತ್ರದಲ್ಲಿ ಗುರುತಿಸಲಾಗಿದೆ. ಅದರ ಹಣೆಪಟ್ಟಿಯ ಮೇಲೆ ಸರ್ಕಾರದ ಇಲಾಖೆಯವರು ಹಾಕಿದ ಬೋರ್ಡು ಇದೆ. ಅದರ ಅಕ್ಕಪಕ್ಕದ ಗೋಡೆಯನ್ನು ನೋಡಿದರೆ ಅದರ ಕಟ್ಟಣಿಕೆಯ ಅರಿವಾಗದಿರದು. ಇದು ಸಂಪೂರ್ಣವಾಗಿ ಬಿದ್ದು ಹೋಗಿದೆ. ಇದಿಷ್ಟು ಅಳಿದುಳಿದ ನೆಲಮಾಳಿಗೆಯ ಚಿತ್ರಣ. ನೆಲಮಾಳಿಗೆಯು ಸೇವಕರು, ದಾಸದಾಸಿಯರು ವಾಸಿಸುವ ಸಲುವಾಗಿಯಾದರೆ ಮೇಲಂತಸ್ತು ರಾಜರಾಣಿಯರಿಗಾಗಿ ಮೀಸಲು. ನೆಲಮಾಳಿಗೆಯ ಕೆತ್ತನೆಯೇ ಹೀಗಿದ್ದರೆ, ಮೇಲಂತಸ್ತಿನ ಕೆತ್ತನೆ ಇನ್ನೂ ಸೂಕ್ಷ್ಮವಾಗಿರಬೇಕು. ಶಿಲ್ಪಗಳಿಗೆ ಬಣ್ಣ ಬಳಿದಿರಲೂ ಸಾಧ್ಯವಿದೆ.

ಸುಮಾರು ೪೦೦-೪೫೦ ವರ್ಷಗಳ ಹಿಂದೆ ಇಡೀ ರಾಜ್ಯದ ಕಣ್ಮಣಿಯಂತಿದ್ದ ಈ ಮಹಲು ಇಂದು ನಾಶವಾಗಿದೆ; ಸತ್ತ ನಾಯಿ ಬೆಕ್ಕುಗಳನ್ನು ಎಸೆಯುವ ತಾಣವಾಗಿದೆ. ಅಂದು ರಾಜರಾಣಿಯರ ಚಲನವಲನ; ವೀರಯೋಧರ ಜಯ ಘೋಷ; ನರ್ತಕಿಯರ ಕಿಂಕಿಣಿ ನಾದ; ಗಾಯಕಿಯರ ಮಂಜುಳ ನಾದ ದಿಂದಲೂ, ಆಕರ್ಷಿತವಾದ ಮಹಲು ಇಂದು ಕೇಳುವವರಿಲ್ಲದೆ*೨ ಸಾರ್ವಜನಿಕರ ಶೌಚಸ್ಥಾನವಾಗಿದೆ. ಪ್ರವಾಸಿ ಕೇಂದ್ರವಾಗಬೇಕಿದ್ದ ಮಹಲು ಕನ್ನಡಿಗರ ಅನಾದರಣೆಯ ಕುರುಹಾಗಿ ನಿಂತಿದೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಡಾ. ಶಿವಾನಂದ ವಿ., **ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು**, ಪುಟ ೨೫೦-೫೧, ಸಂ.

*೨. ಇತ್ತೀಚೆಗೆ ರಾಯಚೂರಿನ ಡೆಪ್ಯೂಟಿ ಕಮೀಷನರ್ ಆಗಿ ಬಂದ ಶ್ರೀ ಅಶೋಕ ದಳವಾಯಿ ಐ.ಎ.ಎಸ್ ಅವರು ಆಸಕ್ತಿ ವಹಿಸಿ ಈ ಸ್ಥಲವನ್ನು ನೋಟಕರ ಗಮನ ಸೆಳೆಯುವಂತೆ ಮಾಡಿರುವುದು ಗಮನಾರ್ಹ.

ಡಾ. ಎಸ್. ಕೆ. ಜೋಶಿ*

# ಕರ್ನಾಟಕದಲ್ಲಿ ವಿಶ್ವಪರಂಪರೆಯ ಸ್ಮಾರಕಗಳು

ಇಡೀ ಮಾನವ ಕುಲವು ತನ್ನ ಜೈವಿಕ ಉತ್ಕ್ರಾಂತಿಯಲ್ಲಿ, ತನ್ನ ಭೌಗೋಲಿಕ ಪ್ರದೇಶದಲ್ಲಿ, ಋತುಮಾನ ಹವಾಮಾನ ಪ್ರಾದೇಶಿಕ ಪ್ರಾಕೃತಿಕ ಸೌಲಭ್ಯಗಳ ಪಾರ್ಶ್ವದಲ್ಲಿ ತನ್ನದೇ ಆದ ಸಾಂಸ್ಕೃತಿಕ ಮೌಲ್ಯಗಳನ್ನು ವೈಶಿಷ್ಟ್ಯಪೂರ್ಣ ವಿವಿಧ ಐತಿಹಾಸಿಕ ಸ್ಮಾರಕಗಳಲ್ಲಿ (Historical Monuments) ಪ್ರತಿಬಿಂಬಿಸಿದೆ. ಅಂಥ ಸ್ಮಾರಕಗಳಲ್ಲಿ ಪ್ರಾದೇಶಿಕ ಸ್ಮಾರಕಗಳು (Regional Monuments) ರಾಷ್ಟ್ರೀಯ ಸ್ಮಾರಕಗಳು (National Monuments) ಹಾಗೂ ವಿಶ್ವಪರಂಪರೆಯ ಸ್ಮಾರಕಗಳು (World Heritage Monuments), ಎಂದು ವಿಭಾಗೀಕರಿಸಲಾಗಿದೆ. ಪ್ರಾದೇಶಿಕ ಸ್ಮಾರಕಗಳು ಆಯಾ ರಾಜ್ಯದ ಪ್ರದೇಶದ ಮಟ್ಟಿಗೆ ಪ್ರಸಿದ್ಧಿ ಪಡೆದು ಅವು ಆಯಾ ಸರಕಾರಗಳಿಂದ ಸಂರಕ್ಷಿಸಲ್ಪಡುತ್ತವೆ. ರಾಷ್ಟ್ರೀಯ ಸ್ಮಾರಕಗಳು ರಾಷ್ಟ್ರವ್ಯಾಪಿ ಪ್ರಸಿದ್ಧಿಯಿಂದ ಆಯಾ ರಾಷ್ಟ್ರಗಳಿಂದ ರಕ್ಷಿಸಲ್ಪಡುತ್ತವೆ. ಹಾಗೂ ವಿಶ್ವಪರಂಪರೆಯ ಸ್ಮಾರಕಗಳು, ಜಗತ್ತಿನ ಬೇರೆ-ಬೇರೆ ರಾಷ್ಟ್ರಗಳಲ್ಲಿ ಹರಡಿ ಕೊಂಡಿದ್ದು, ಆ ರಾಷ್ಟ್ರಗಳ ಅತ್ಯಂತ ಶ್ರೇಷ್ಠ ಹಾಗೂ ವೈಶಿಷ್ಟ್ಯ ಪೂರ್ಣ ಸ್ಮಾರಕಗಳೆಂದು ಆರಿಸಲ್ಪಡುತ್ತವೆ. ಇಂಥ ಶ್ರೇಷ್ಠ ಸ್ಮಾರಕಗಳು ಇಡೀ ಮಾನವ ಕುಲದ ಸೊತ್ತಾಗಿರುವದರಿಂದ, ವಿಶ್ವಸಂಸ್ಥೆಯ 'ಯುನೆಸ್ಕೊ' ವಿಭಾಗವು ೧೯೭೨ ರಲ್ಲಿ ಗೊತ್ತುವಳಿಯೊಂದನ್ನು ಸ್ವೀಕರಿಸಿ, ಇಡೀ ಜಗತ್ತಿನಲ್ಲಿಯ ಇಂಥ ೨೨೪ ಸ್ಮಾರಕಗಳನ್ನು ಹಾಗೂ ನೈಸರ್ಗಿಕ ರಮ್ಯ ತಾಣಗಳನ್ನು ಪಟ್ಟೀಕರಿಸಿತು ಮತ್ತು ಅವುಗಳನ್ನು 'ವರ್ಲ್ಡ್ ಹೆರಿಟೇಜ್ ಮಾನ್ಯುಮೆಂಟ್ಸ್ ಅಂಡ್ ಸೈಟ್ಸ್' (World Heritage Monuments & (Sites) ಎಂದು ಕರೆದು ಅವುಗಳ ರಕ್ಷಣಾ ಹೊಣೆಯನ್ನು ಮಿತ್ರ ರಾಷ್ಟ್ರಗಳಿಗೆ ವಹಿಸಿತು.

ಆ ವಿಶ್ವಪರಂಪರೆಯ ಸ್ಮಾರಕಗಳ ಪಟ್ಟಿಕೆಯಲ್ಲಿ ಸೇರಿದ ಒಟ್ಟು ೨೨೪ ಸ್ಮಾರಕಗಳಲ್ಲಿ, ಭಾರತದ ೨೨ ಸ್ಮಾರಕಗಳು ಆಯ್ದುಕೊಳ್ಳಲ್ಪಟ್ಟಿವೆ. ಭಾರತದಲ್ಲಿ ವಿವಿಧ ಧರ್ಮಗಳ ಸ್ಮಾರಕಗಳು ಭಾವೈಕ್ಯದ ಪ್ರತೀಕಗಳಾಗಿ, ಭಾರತ ರಾಷ್ಟ್ರೀಯ ಗುಣ ಮೌಲ್ಯಗಳಾಗಿ (Indian National Character) ನಿರ್ಮಾಣ ಗೊಂಡಿವೆ. ಬೌದ್ಧ, ಜೈನ, ಹಿಂದು, ಇಸ್ಲಾಮ್, ಕ್ರೈಸ್ತ, ಸಿಖ್ ಧರ್ಮಗಳ ಅನುಕ್ರಮ ಸ್ಮಾರಕಗಳಾಗಿ ಸ್ತೂಪಗಳು, ವಿಹಾರಗಳು, ದೇವಮಂದಿರಗಳು, ಲಯಣಗಳು, ಮಸೀದಿ - ಗುಂಬಜ್‌ಗಳು, ಚರ್ಚುಗಳು ಗುರುದ್ವಾರಗಳು, ಅರಮನೆಗಳು, ಕೋಟೆ ಕೊತ್ತಲಗಳು 'ಭಾರತ ಜನಮಾನಸ ಸಿರಿಯನ್ನು' ಹೊತ್ತಿವೆ.

ಪ್ರತಿ ವರುಷದ ಏಪ್ರೀಲ್ ೧೮ನೆಯ ತಾರೀಖು 'ವಿಶ್ವ ಪರಂಪರೆಯ ದಿನ' ಎಂದು ಸಂಯುಕ್ತ ರಾಷ್ಟ್ರದ ಎಲ್ಲ ಸದಸ್ಯ ದೇಶಗಳು ಆಚರಿಸುತ್ತವೆ. ಭಾರತದಲ್ಲಿ ನವೆಂಬರ್ ೧೯ರಿಂದ ೨೫ರವರೆಗೂ 'ವಿಶ್ವ ಪರಂಪರೆಯ ಸಪ್ತಾಹ' ವೆಂದು ವಿಶೇಷವಾಗಿ ಆಚರಿಸಲ್ಪಡುತ್ತದೆ. ಆಗ್ಗೆ, ಎಲ್ಲ ನಮ್ಮ ಪ್ರಾಚೀನ ಸ್ಮಾರಕಗಳನ್ನು ಅಂದರೆ 'ಪ್ರಾಚೀನ ದೇಗುಲ-ಮೂರ್ತಿ' ನಮ್ಮ ಕಲೆಯ ಕೀರ್ತಿ; 'ಶಿಲಾಶಾಸನ ಹಳೆಯ ಗ್ರಂಥಗಳ ರಕ್ಷಣೆ' ನಮ್ಮ ಪ್ರಾಚೀನ ಪರಂಪರೆಯ ಘೋಷಣೆ; ಪ್ರಾಚೀನ 'ಶಾಸನಗಳ ನಾಶ ಇತಿಹಾಸ ಪುರುಷನ ಪಾಶ' ಮುಂತಾದ ಘೋಷಣೆಗಳೊಂದಿಗೆ ಸಂರಕ್ಷಿಸುವುದು ನಮ್ಮ ಸಂಕಲ್ಪಿತ ಕರ್ತವ್ಯ.

ಭಾರತದ ೨೨ ವಿಶ್ವ ಸ್ಮಾರಕಗಳೆಂದರೆ ಅವುಗಳನ್ನು ವಿಶ್ವ ಸ್ಮಾರಕ ಪಟ್ಟಿಕೆಯಂತೆ, ಅಜಂತಾ ಲಯಣಗಳು, ಎಲ್ಲೋರಾ ಹಾಗೂ ಎಲಿಫಂಟಾ ಗುಹಾಂತರ ದೇವಾಲಯಗಳು, ದಿಲ್ಲಿಯ ಕುತುಬ್‌ಮೀನಾರ್ ಹಾಗೂ ಹುಮಾಯೂನ ಟೂಂಬ್ (ಇವೆರಡನ್ನು ಇತ್ತೀಚೆಗೆ ಜೋಡಿಸಲಾಗಿದೆ). ಬೀಹಾರದ ನಾಲಂದಾ (ಈಗ ಜೋಡಿಸಲಾಗಿದೆ), ಕೋನಾರ್ಕದ ಸೂರ್ಯ ದೇವಾಲಯ, ಸಾಂಚೀಸ್ತೂಪ (ಮಧ್ಯಪ್ರದೇಶ), ಖಜುರಾಹೊ (ಮಧ್ಯಪ್ರದೇಶ), ಓಲ್ಡ್‌ಗೋವೆಯ ಚರ್ಚುಗಳು ಹಾಗೂ ಕಾನ್‌ವೆಂಟ್‌ಗಳು, ಕರ್ನಾಟಕದ ಪಟ್ಟದಕಲ್ಲಿನ ಚಾಲುಕ್ಯರ ದೇವಾಲಯಗಳು ಹಾಗೂ ಹಂಪಿಯ ಸ್ಮಾರಕಗಳು, (ಶ್ರವಣ ಬೆಳಗೊಳದ ಬಾಹುಬಲಿ ಹಾಗೂ ಹೊಯ್ಸಳರ ಹಳೆಬೀಡು - ಬೇಲೂರು ದೇವಸ್ಥಾನಗಳು (ಈಗ ಶಿಫಾರಸುಗೊಂಡಿವೆ), ಬಿಜಾಪುರದ ಗೋಲಗುಮ್ಮಟ (ಈಗ ಶಿಫಾರಸುಗೊಂಡಿದೆ), ತಮಿಳುನಾಡಿನ ತಂಜಾವೂರಿನ ಬೃಹದೀಶ್ವರ ದೇವಸ್ಥಾನ, ಸಾಗರದಂಚಿನ ಮಹಾಬಲಿ ಪುರಮ್‌ನ ಪಲ್ಲವರ ದೇವಾಲಯಗಳು, ಮುಂತಾದವುಗಳನ್ನು ವಿಶ್ವಪರಂಪರೆಯ ಸ್ಮಾರಕಗಳ ಪಟ್ಟಿಯಲ್ಲಿ ದಾಖಲಿಸಲಾಗಿದೆ. ಇವುಗಳ ಸಂರಕ್ಷಣೆಗೆ ಯುನೆಸ್ಕೊ ತನ್ನ ವಾರ್ಷಿಕ ಬಜೆಟ್‌ನಲ್ಲಿ ಆರ್ಥಿಕ ಸಹಾಯ ಕಲ್ಪಿಸಿದೆ; ಹಾಗೂ ಅದನ್ನು ಆಯಾ ರಾಷ್ಟ್ರಗಳಿಗೆ ಒಪ್ಪಿಸಲಾಗುತ್ತದೆ.

ಇನ್ನು ಕರ್ನಾಟಕದ ಪ್ರಾಚೀನ ಪರಂಪರೆಯ ಎಂದರೆ ಮೌರ್ಯರಿಂದ ಹಿಡಿದು ಮೈಸೂರು ಅರಸರವರೆಗೆ ಈ ನಾಡ ಇತಿಹಾಸವು ಸಮೃದ್ಧ ನಡೆ ನುಡಿ ಸಾಹಿತ್ಯ ಸಂಗೀತ ಕಲೆ ವಾಸ್ತು-ಶಿಲ್ಪಗಳ ತಲ್ಪವನ್ನೇ ನಿರ್ಮಿಸಿದೆ, ಕನ್ನಡಿಗರ ಬೌದ್ಧಿಕ ಸತ್ವದ

*ಪುರಾತತ್ವವಿದ, 'ಶ್ರೀಕೃಪಾ', ಸಿಲ್ವರ್ ಆರ್ಚರ್ಡ್, ಶ್ರೀರಂಗ ರಸ್ತೆ, ಧಾರವಾಡ - ೫೮೦ ೦೦೧.

ಪ್ರತೀಕಗಳಾಗಿ, ಎರಡು ಸಾವಿರ ವರ್ಷಗಳಿಂದ ಇತಿಹಾಸದ ಅಮರ ಕೃತಿಗಳಾಗಿ ಸಾವಿರಾರು ದೇವಾಲಯಗಳು, ಲಯಣಗಳು, ಬಸಿದಿಗಳು, ಮಸೀದಿಗಳು, ಗುಂಬಜ್‌ಗಳು, ಕೋಟೆ-ಕೊತ್ತಲಗಳು ಕಾಲುವೆ ಕೆರೆ ಬಾವಿ ಕಾರಂಜಿಗಳು ಈ ನಾಡ ವಾಸ್ತುಶಿಲ್ಪದ ಸೊತ್ತಾಗಿ ನಿಂತಿವೆ. ಪಟ್ಟದಕಲ್ಲಿನ ದೇವಾಲಯಗಳ ಸಮೂಹ ಹಾಗೂ ಅಳಿದುಳಿದ ಹಂಪಿ - ವಿಜಯನಗರದ ರಾಜಧಾನಿಯ ಅವಶೇಷಗಳು, ಇವೆರಡು ಈಗ ವಿಶ್ವ ಪರಂಪರೆಯ ಸಂರಕ್ಷಿತ ಸ್ಮಾರಕಗಳಾಗಿವೆ.

*ವಿಶ್ವಪರಂಪರೆಯ ಸ್ಮಾರಕ: ಪಟ್ಟದಕಲ್ಲಿನ ದೇವಾಲಯಗಳು*

ಕ್ಷಾತ್ರಾಂಕುಶರಾದ ಬಾದಾಮಿ ಚಾಲುಕ್ಯರು, ಖಡ್ಗದ ತುದಿಯಲ್ಲಿ ಆತ್ಮವಿಶ್ವಾಸವನ್ನಿರಿಸಿದಂತೆ, ದೈವ ಬಲದಲ್ಲೂ ಶ್ರದ್ಧೆಯನ್ನಿರಿಸಿದ್ದಾರೆ. ದಕ್ಷಿಣ ಕಡಲಪಥಾಧೀಶ್ವರರಾಗಿ ಮುನ್ನುಗ್ಗಿದಂತೆ, ಅದಕ್ಕೆ ಸಮಾಂತರ ಸ್ಫೂರ್ತಿಯಿಂದ ನೂರಾರು ದೇವಾಲಯಗಳನ್ನು, ಕೆರೆ, ಬಾವಿಗಳನ್ನು ಸರೋವರಗಳನ್ನು ಪುಷ್ಕರಣಿಗಳನ್ನು, ರಚಿಸಿ 'ಪರಮ ಭಾಗವತ'ರೆನಿಸಿಕೊಂಡಿದ್ದಾರೆ. ವಿಖ್ಯಾತರಾಗಿ ಕರ್ನಾಟಕದ ಇತಿಹಾಸ (ಕ್ರಿ.ಶ. ೪೫೦-೭೫೦) ನಿರ್ಮಿಸಿದ್ದಾರೆ.

ಬಾದಾಮಿ ಚಾಲುಕ್ಯರಿಂದ (Western Chalukyas) ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳು ವಾಸ್ತು-ಶಿಲ್ಪ ಕೊಡುಗೆಯಲ್ಲಿ ಕರ್ಮಭೂಮಿಗಳಾದವು. ಅಲ್ಲಿಯ ಹೇರಳ ಶಿಲಾ ಸಂಪತ್ತು (Red Sand Stone) ಶಿಲ್ಪ ಬೆಳೆಯಲು ಕೆಂಪು ವರ್ಣದ ಮರಳುಗಲ್ಲು ಸಾಧನವಾಗಿದೆ. ಹಿಂದು ವಾಸ್ತು-ಶಿಲ್ಪದ ವಿಶಿಷ್ಟ ಕೆತ್ತನೆಗೆ, ವಕ್ರದ, ಕಂಸದ, ವರ್ತುಲದ ರೇಖೆಗಳಿಗೆ, ಶಿಲ್ಪಗಳು ಜಗದ ಸೌಂದರ್ಯವನ್ನು ಸೆರೆ ಹಿಡಿವ ಸಾಹಸ ಮಾಡಿದ್ದಾರೆ. ಇಲ್ಲಿ ಹೂಬಳ್ಳಿ, ಕಾಯಿಮರ, ದೇವಗಣ, ರಾಮಾಯಣ, ಮಹಾಭಾರತ ಶಿವಕಥಾನಕಗಳೆಲ್ಲ ಭಾವ ಮೈವೆತ್ತಿವೆ. ಚಾಲುಕ್ಯರ ಶಿಲ್ಪಗಳಲ್ಲಿ 'ಲಯ ಭಾವ ಚಾಲನೆ' (Rythm, Mood & Movement) ಮತ್ತು ಸಮತೋಲನಾಂಗಗಳು, ಭವ್ಯತೆಗಳು, ಎದ್ದು ಕಾಣುತ್ತವೆ. ಹೀಗಾಗಿ ಬಾದಾಮಿ ಚಾಲುಕ್ಯರ ಕೊಡುಗೆ, ಭಾರತೀಯ ಹಿಂದು ವಾಸ್ತು-ಶಿಲ್ಪ ಶಾಸ್ತ್ರದಲ್ಲಿ, ಒಂದು ಮೈಲುಗಲ್ಲು, ಒಂದು 'ಸ್ಕೂಲ್ ಆಫ್ ಆರ್ಕಿಟೆಕ್ಚರ್' ಸ್ಥಾಪಿಸಿದೆ. ಇಲ್ಲಿಯ ತಾಣಗಳು ಭಾರತೀಯ 'ವಾಸ್ತು-ಶಿಲ್ಪ'ದ ತೊಟ್ಟಿಲು ಗಳಾಗಿವೆ (Cradle of Indian Architecture).

ವಿಶ್ವಪರಂಪರೆಯ ಸ್ಮಾರಕಗಳ ಪಟ್ಟಿಕೆಯಲ್ಲಿ ಪಟ್ಟದಕಲ್ಲಿನ ದೇವಾಲಯಗಳ ಸಮುಚ್ಚಯವು ಅಗ್ರಸ್ಥಾನ ಪಡೆದಿದೆ. ಈಗ ಬಾಗಲಕೋಟೆ ಜಿಲ್ಲೆಯಲ್ಲಿ ಉತ್ತರವಾಹಿನಿಯಾಗಿ ಹರಿದ ಮಲಪ್ರಭೆಯ ತಡಿಯಲ್ಲಿಯ ಪಟ್ಟದಕಲ್ಲು, ಶಿಲ್ಪ ಕಲೆಯ ಸಿರಿಹೊತ್ತ ತಾಣ. ಚಾಲುಕ್ಯ ಸಾಮ್ರಾಟರು ದೇವಾರಾಧನೆಯಲ್ಲಿ ಉತ್ತರದ



'ರೇಖಾನಾಗರ ಶೈಲಿ' ಹಾಗೂ ದಕ್ಷಿಣದ 'ದ್ರಾವಿಡ ವಿಮಾನ' ಶೈಲಿಗಳೆರಡನ್ನು ವೈಭವೋಪೇತವಾಗಿ ದೇವಸ್ಥಾನಗಳ ಶಿಖರಗಳಲ್ಲಿ ಜೋಡಿಸಿ, ವಾಸ್ತುಶಿಲ್ಪದ ಪರಿಪಕ್ವತೆಯನ್ನು (Perfection in Architecture), ತೋರಿಸಿದ್ದಾರೆ.

ಅನತಿದೂರದ ಐಹೊಳೆಯು ಭಾರತೀಯ ದೇವಾಲಯಗಳ ನಿರ್ಮಾಣದ ಪ್ರಾಯೋಗಿಕ ತೊಟ್ಟಿಲಾದರೆ (Cradle of Indian Temple Architecture), 'ಪಟ್ಟದ ಕಲ್ಲು ಭಾರತೀಯ ದೇವಾಲಯಗಳು ಪರಿಪೂರ್ಣತೆಯ ಪರಿಪಕ್ವತೆಯ ಪ್ರೌಢತೆಯ ಪಟ್ಟ ಮೆರೆದಿವೆ. 'ಪಟ್ಟದ ಕಿಸುವೊಳಲ್' ಎಂದು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕರೆದುಕೊಂಡ ಈ ತಾಣದಲ್ಲಿ 'ವಿರೂಪಾಕ್ಷ', 'ಸಂಗಮೇಶ್ವರ', 'ಕಾಶೀವಿಶ್ವನಾಥ', 'ಗಳಗನಾಥ', 'ಪಾಪನಾಥ', ದೇವಾಲಯಗಳು ಪರಿಪೂರ್ಣತೆಯಲ್ಲಿ ಅದ್ದಿ ತೆಗೆದಂತಿವೆ! ಸೂರ್ಯೋದಯ ಸೂರ್ಯಾಸ್ತಗಳ ಕಾಲಗಳ ಈ ಕೆಂಪು ಉಸುಕು ಕಲ್ಲಿನಲ್ಲಿ (Red Sand Stone), ಕಟ್ಟಲ್ಪಟ್ಟ ಈ ದೇವಾಲಯಗಳು ಲಜ್ಜೆಯಿಂದ ಕೆಂಪಾದ ಕಪೋಲಗಳ ಅಪ್ಸರೆಯರಂತೆ ಕಾಣುತ್ತವೆ.

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವು ವಾಸ್ತು ರತ್ನತ್ರಯಗಳಲ್ಲಿ, ದಕ್ಷಿಣ ಭಾರತದಲ್ಲಿ, ಎಲ್ಲೋರದ, ಕೈಲಾಸನಾಥ, ತಂಜಾವೂರಿನ 'ಬೃಹದೀಶ್ವರ' ದೇವಾಲಯ ದ್ವಯಗಳಿಗೆ ಮೂರನೆಯದಾಗಿ ಜೋಡಿಸಲ್ಪಟ್ಟಿದೆ. ವಾಸ್ತು ಶಿಲ್ಪವು ಭವ್ಯತೆ, ವಿಶಾಲತೆ, ಭಾವಗಳಿಗೆ ಮಹತ್ವ ನೀಡಿ ಇಲ್ಲಿ ಕುಣಿಯುತ್ತದೆ.

***ಪಟ್ಟದಕಲ್ಲಿನ ಸಮಸ್ಯೆ ಮತ್ತು ಪರಿಹಾರ***

ವಾಸ್ತುಶಿಲ್ಪ ಪರಿಪೂರ್ಣತೆಯ ನೆಲೆ ಪಡೆದ ಈ ಸಮುಚ್ಚಯವು ಆಧುನೀಕರಣದ ದುಷ್ಪರಿಣಾಮವನ್ನೂ ಅನುಭವಿಸಿದೆ. ದೇವಸ್ಥಾನಗಳ ಆಸುಪಾಸುಗಳೆಲ್ಲ ದನಗಳ ಕೊಟ್ಟಿಗೆ, ಬಣಿವೆಗಳ ವಟ್ಟಿಗೆ, ಅಡುಗೆಯ ಮಸಿ ಮುಂತಾದವು ಹಳ್ಳಿಗರಿಂದ ಕಳೆದ ಒಂದು ಶತಮಾನ ಹಾಗೂ ತತ್ಪೂರ್ವದಲ್ಲಿ, ಆವರಿಸಿದ್ದವು. ಭಾರತ ಸರಕಾರದ ಪುರಾತತ್ವ ಸರ್ವೇಕ್ಷಣ ಇಲಾಖೆಯು ಈಗ್ಗೆ ಸುಮಾರು ಕಾಲುಶತಮಾನದ ಹಿಂದೆ, ತೆರುವುಗೊಳಿಸಿ ೧೯೭೫-೭೬ರ ಸುಮಾರಿಗೆ, ಅಧೀಕ್ಷಕ ಪುರಾತತ್ವವಿದ ಡಾ|| ಎಸ್. ಆರ್. ರಾವ್ ಅವರ ನೇತೃತ್ವದಲ್ಲಿ, ಸುಮಾರು ೧೦೦ ಮನೆಗಳನ್ನು 'ಅಕ್ವಾಯರ್' ಮಾಡಿ, ದೇವಸ್ಥಾನಗಳ ಸುತ್ತಲಿನ ಪ್ರದೇಶವನ್ನು ಸ್ವಚ್ಛಗೊಳಿಸಿ, ಉದ್ಯಾನವನ್ನೂ (Archaeological Gardens) ನಿರ್ಮಿಸಲಾಯಿತು. ಅದೇ ಈಗ ಕಾಣಸಿಗುವ ದೇವಸ್ಥಾನಗಳ ಸುಂದರ ಪರಿಸರ. ಹಾಗೂ ನಿರಾಶ್ರಿತರ ಪುನರ್ವಸತಿಯನ್ನು ಹೊಸ ಪಟ್ಟದಕಲ್‌ನಲ್ಲಿ ನಿರ್ಮಿಸಲಾಯಿತು.

ಈಗ ಈ ವೇದಿಯ ಮೂಲಕ, ವತ್ತುಕೊಟ್ಟು ಹೇಳುವ ದೇನೆಂದರೆ ಈ ದೇವಾಲಯಗಳ ದಕ್ಷಿಣಭಾಗದಲ್ಲಿ ಹಳೆಯ ಪಟ್ಟದಕಲ್ಲಿನ ಊರು ಭಾಗಶಃ ಇನ್ನೂ ಉಳಿದುಕೊಂಡಿದ್ದು ಸುಮಾರು ನೂರಿನ್ನೂರು ಮನೆಗಳಿವೆ. ಇವೆಲ್ಲವುಗಳನ್ನು ಒಂದೂ ಬಿಡದೆ, ಸಂಪೂರ್ಣವಾಗಿ 'ಅಕ್ವಾಯರ್' ಮಾಡಿ ಪರಿಹಾರ ಧನ ನೀಡಿ ಆ ಜನರನ್ನೆಲ್ಲ ಹೊಸ ಪಟ್ಟದಕಲ್ಲಿನ ಪುನರ್ವಸತಿಗಾಗಿ ನಿರ್ದೇಶಿಸಬಹುದು. ಈ ಪ್ರಕ್ರಿಯೆಗೆ ಸುಮಾರು ೧೫೦-೨೦೦ ಲಕ್ಷ ರೂ. ಬೇಕಾಗಬಹುದು ಎಂಬ ಅಂದಾಜು, ಇದನ್ನು UNESCOದ 'World Heritage Committee'ಯಿಂದ ಪಡೆಯಲು ಕ್ರಮ ಕೈಗೊಳ್ಳಬಹುದು. ಕೇಂದ್ರ ಸರಕಾರಕ್ಕಾಗಲೀ, ರಾಜ್ಯ ಸರಕಾರಕ್ಕಾಗಲೀ ಯಾವುದೇ ರೀತಿಯ ಆರ್ಥಿಕ ಭಾರ ಬೀಳುವದಿಲ್ಲ.

ಈ ರೀತಿ ಕೊನೆಯ 'ಅಕ್ವಾಯರ', (Final Acquisition of Land and Houses at Pattadkal) ಮಾಡಿ, ಎಲ್ಲ ಜಾಗೆಯನ್ನೂ ಸ್ವಾಧೀನಪಡಿಸಿಕೊಂಡು, ಸುಂದರವಾದ ಉದ್ಯಾನ ವನ್ನು ಅಲ್ಲಿ ಬೆಳೆಸಿದರೆ, ಈ ವಿಶ್ವಪರಂಪರೆಯ ಸ್ಮಾರಕ ತನ್ನ ಮೊದಲಿನ ಚಾಲುಕ್ಯ ಸಾಮ್ರಾಜ್ಯದ ಆ ಸಮಕಾಲೀನ ವೈಭವವನ್ನು ಪುನರಪಿ ಪಡೆಯುವಲ್ಲಿ ಎರಡು ಮಾತಿಲ್ಲ. ಇದರತ್ತ ಕೇಂದ್ರ ಸರಕಾರದ ಹಾಗು ರಾಜ್ಯ ಸರ್ಕಾರ ಗಮನ ಹರಿಸಿದರೆ ಪ್ರತಿ ವರುಷ ಏರ್ಪಡಿಸುವ 'ಪಟ್ಟದಕಲ್ ಉತ್ಸವ'ಕ್ಕೆ ಸಾಧ್ಯವಾದಷ್ಟು ವಿಪುಲ ಸ್ಥಳಾವಕಾಶ ದೊರೆಯುತ್ತದೆ.

***ವಿಶ್ವಪರಂಪರೆಯ ಸ್ಮಾರಕ : ಹಂಪಿಯ ಅವಶೇಷಗಳು***

ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಹಂಪಿಯಲ್ಲಿ ವಿಜಯನಗರ ಸಾಮ್ರಾಜ್ಯದ ರಾಜಧಾನಿ-೭ ಸುತ್ತಿನ ಕೋಟೆ, ಮಹಾನವಮಿ ದಿಬ್ಬ, ಶ್ರೀ ವಿರೂಪಾಕ್ಷ ದೇವಾಲಯ, ಶ್ರೀ ವಿಜಯ ವಿಠ್ಠಲ, ಕಡಲೆಕಾಳು ಗಣಪ, ಸಾಸಿವೆಕಾಳು ಗಣಪ, ಲಕ್ಷ್ಮೀನರಸಿಂಹ (ಉಗ್ರ) , ಶ್ರೀ ಕೃಷ್ಣದೇವಾಲಯ, ಹಜಾರ ರಾಮನ ದೇವಸ್ಥಾನ, ಅಚ್ಯುತರಾಯ ದೇವಸ್ಥಾನ, ಕೋದಂಡ ರಾಮ ಮಂದಿರ, ಜೈನಮಂದಿರಗಳ ಸಮುಚ್ಚಯ, ರಾಣಿ ಸ್ನಾನ ಗೃಹ, ಲೋಟಸ್ ಮಹಲ್, ಮಹಾನವಮಿ ದಿಬ್ಬ, ರಂಗಮಹಲ್ (Excavated and this author participated), ದಂಣಾಯಕ ಆವರಣ (Excavated) ನೋಬಲ್‌ಮನ್ಸ್ ಕ್ವಾರ್ಟರ್ಸ್, ಕೋಟೆಯ ಪ್ರವೇಶ ದ್ವಾರಗಳು - ಪೆನುಗೊಂಡಾ ಗೇಟ್, ಕಮಲಾಪುರ ಗೇಟ್, ಡೋಮ್ಡ್ ಗೇಟ್, ಭೀಮಾಗೇಟ್, ದಖನೀ ಗೇಟ್, ತಲ್ಲಾರ್ ಘಟ್ಟಾ ಗೇಟ್, ಪಬ್ಲಿಕ್ ಬಾಥ್, ನೀರಿನ ಕಾಲುವೆಗಳು, ಪುಷ್ಕರಣಿಗಳು ಮುಂತಾದ ಒಂದೇ ಎರಡೇ ನೂರಾರು ವಿಶ್ವಪರಂಪರೆಯ ರಕ್ಷಣೆಗೆ ಒಳಪಟ್ಟ ಸ್ಮಾರಕಗಳ ಸಮುಚ್ಚಯವಿದು. 'ಇಕೋಮೊಸ್' ಯುನೆಸ್ಕೊದ ಒಂದು ಅಂಗ. ಅದು ಫ್ರಾನ್ಸಿನಲ್ಲಿ ಇರುವದರಿಂದ ಕಾಗದ ಪತ್ರಗಳು ಫ್ರೆಂಚ್ ಹಾಗೂ ಇಂಗ್ಲೀಷಿನಲ್ಲಿ ಇರುವುದು ಸಹಜ. ಫ್ರೆಂಚ್ ಕರಾರು ಪತ್ರದ ಪ್ರಕಾರ, 'ಸಂಪೂರ್ಣ ಹಂಪಿಯಲ್ಲದೆ, ಪಂಪಾಸರೋವರ ಮಾಧ್ವ ಸಂಪ್ರದಾಯದ ನವ 'ವೃಂದಾವನ, ಆನೆಗೊಂಧಿ ಇವುಗಳೆಲ್ಲ ಸೇರುತ್ತವೆ, ಎಂದಿದೆ [ಡಾ। ವಸುಂಧರಾ ಫಿಲಿಯೋಜಾ ಪ್ಯಾರಿಸ್, ಫ್ರಾನ್ಸ್. ಸಂಯುಕ್ತ ಕರ್ನಾಟಕ ಹುಬ್ಬಳ್ಳಿ, ಲೇಖನ ೫.೭.೨೦೦೦, ಪುಟ ४.]

ಹಂಪಿ ಪ್ರಾಚೀನ ಮಾನವನ ಇತಿಹಾಸ ಹೊಂದಿದೆ.



ನಾಗರ-ದ್ರಾವಿಡ ಶಿಖರ ಶೈಲಿಗಳು, ಪಟ್ಟದಕಲ್ಲು (೭-೮ ಶತಮಾನ)



ವಿರೂಪಾಕ್ಷ ದೇಗುಲ



ಅಚ್ಯುತದೇವರಾಯನ ದೇವಾಲಯ (೧೬ನೇ ಶತಮಾನ)



ರಾಜಧಾನಿಗೆ ನೀರಿನ ಪೂರೈಕೆ



ಕಮಲಮಹಲ್



ಆನೆಗೊಂದಿ ಸೇತುವೆ (ನಿರ್ಮಾಣದ ಹಂತ)



ರಥಬೀದಿಯ ಅನಧಿಕೃತ ವಾಸದ ಮನೆಗಳಾಗಿ ಮಾರ್ಪಾಡಾದ ಮಂಟಪಗಳು



ಅನಧಿಕೃತ ಗುಡಿಸಲುಗಳು (ತೆರವು ಮಾಡಿಸುತ್ತಿರುವುದು)



ಆನೆಗೊಂದಿ ಜೋಡಿಸುವ ಹೊಸ ಸೇತುವೆ (ನಿರ್ಮಾಣದಲ್ಲಿದ್ದ ಹಂತ)



ಲಕ್ಷ್ಮೀನರಸಿಂಹ (ಜೀರ್ಣೋದ್ಧಾರದನಂತರ)



ಪರಿಸರದಲ್ಲಿಯೇ ಬರುವ ವಿರೂಪಾಕ್ಷೇಶ್ವರ ತೂಗುಸೇತುವೆ (ಅರ್ಧಕ್ಕೆ ನಿಂತಿದೆ)



ಸದ್ಯದ ಆನೆಗುಂದಿ ಪರಿಸರಕ್ಕೆ ಜೋಡಿಸಲೆಂದಿರುವ ತೂಗುಸೇತುವೆಯ ಗೋಪುರ




ನವ ಶಿಲಾಯುಗದ ಪ್ರಾರಂಭದಿಂದ ಹಿಡಿದು, ರಾಮಾಯಣದ ಕಾಲದಲ್ಲಿ ವಾಲಿ ಸುಗ್ರೀವರ ಕೇಂದ್ರವಾಗಿದ್ದ 'ಕಿಷ್ಕಿಂದೆ' ಹಂಪಿಯೇ ಆಗಿತ್ತು. ಮೌರ್ಯರ ಇತಿಹಾಸ ಹಾಗೂ ಬುದ್ಧ ಚರಿತೆಗೆ ಸಂಬಂಧಿಸಿದ ಪ್ರಾಚೀನ ಜಾತಕ ಫಲಕಗಳು ಇಲ್ಲಿಯ ಈಚೆಗಿನ ಉತ್ಖನದಲ್ಲಿ ದೊರೆತಿವೆ. ಶಾತವಾಹನರ ಆಳ್ವಿಕೆಯ ಸಾಂಸ್ಕೃತಿಕ ಕುರುಹುಗಳು ಇಲ್ಲಿ ಕಂಡು ಬಂದಿವೆ. ಶ್ರೀ ವಿರೂಪಾಕ್ಷ ದೇವಾಲಯದ ಪ್ರಾಚೀನತೆ ಬಾದಾಮಿ ಚಾಲುಕ್ಯರ ಸಮಯದಿಂದ ಆರಂಭವಾಗುತ್ತದೆ. ಅಂದರೆ ೬-೭ ಶತಕಗಳಷ್ಟು (ಕ್ರಿ.ಶ.) ಸಂಬಂಧಿತವಾಗಿದೆ. ಈಗಿನ ವಿರೂಪಾಕ್ಷ ದೇವಾಲಯ ಸಂಕೀರ್ಣದ ಉತ್ತರಕ್ಕೆ, ದ್ವಾರದ ಆಚೆಯ 'ನಗರ ಪುಷ್ಕರಣಿ' ಎಂದು ಕರೆದುಕೊಳ್ಳುವ ನೀರಿನ ಸಂಗಾರದ ದಡದ ಮೇಲೆ ಕದಂಬನಾಗರ ಶೈಲಿಯ ದೇವಾಲಯಗಳು ಬಾದಾಮಿ - ಚಾಲುಕ್ಯರ ಕೊಡುಗೆಗಳು, ಅಲ್ಲದೆ ಈ ದೇವಾಲಯದ ಸುತ್ತಮುತ್ತಲಿನ ಸಣ್ಣ ಪುಟ್ಟ ದೇವಸ್ಥಾನಗಳು ರಾಷ್ಟ್ರಕೂಟರ ಹಾಗೂ ಕಲ್ಯಾಣ ಚಾಲುಕ್ಯರ ಕಾಲದವು. ಮುಖ್ಯ ಅಧಿದೈವತ ಶ್ರೀ ವಿರೂಪಾಕ್ಷನು ಹರಿಹರ ಕವಿ (ಕ್ರಿ.ಶ. ೧೨೦೦) ಹಾಗೂ ರಾಘವಾಂಕ (ಕ್ರಿ.ಶ. ೧೨೨೫) ರಿಂದ ಪ್ರಾರ್ಥಿಸಿ ಕೊಳ್ಳಲ್ಪಟ್ಟಿದ್ದಾನೆ. ಹರಿಹರ ತನ್ನ ಪುಷ್ಪರಗಳೆಯಲ್ಲಿ ಈ ರೀತಿ ಹೇಳುತ್ತಾನೆ.

*'ಅನಿಲಂ ಅಲುಗದ, ರವಿ ಕಿರಣಂ ಪುಗದ,*
*ದುಂಬಿ ಮುಟ್ಟದ ಮುನ್ನ, ಪೊಸ ಪೂಗಳಂ*
*ಆಯಲ್ದಿ ತರ್ಪೆ ನಿನ್ನಡಿಗೆ'*

'ಹಂಪಿಯ ದರ್ಶನದ'ಲ್ಲಿ ನಮ್ಮ ಸಮಕಾಲೀನ ಕವಿ ಬೇಂದ್ರೆಯವರು ಹಾಳು ಹಂಪಿಯನ್ನು ಕಂಡಂತೆ'

'ಬಿದ್ದ ರಾಜ್ಯವಿದಲ್ಲ, ಉದ್ಬುದ್ಧವಾಗಿದ್ದು
ಎದ್ದ ರಾಜ್ಯದ ಮೊಳಕೆಯಿದು, ಇದರ ಬಳಿಯಲ್ಲಿ
ಇದ್ದು ಸಂಜೀವನದ ಜಪಿಸುವಂತಹ ಯೋಗಿ
ಕೊಂಪಿ ಹಂಪಿಯು ಇದಲ್ಲ....!'

ಡಾ। ಬೇಂದ್ರೆಯವರ ಆಶಯದಂತೆ ಹಂಪಿಯ ಪರಿಸರವೀಗ ಮತ್ತೆ ಜೀರ್ಣೋದ್ಧಾರ ಗೊಳ್ಳುತ್ತಲಿದೆ. ವಿಶ್ವಪರಂಪರೆಯ ಸ್ಮಾರಕಗಳ ಸಾಲಿನಲ್ಲಿ ಸೇರಿದೆ. UNESCO ದಿಂದ ಸಂರಕ್ಷಿಸಲ್ಪಟ್ಟ ವಿಶ್ವಸ್ಮಾರಕಗಳ ಪಟ್ಟಿಕೆಯಲ್ಲಿ ಅಳವಡಿಸಲ್ಪಟ್ಟಿದೆ. ಭಾರತ ಸರಕಾರದ ಪುರಾತತ್ವ ಇಲಾಖೆ ಹಾಗೂ ರಾಜ್ಯ ಸರಕಾರ ಪುರಾತತ್ವ ಇಲಾಖೆಗಳು ಈ ಅವಶೇಷಗಳ ರಕ್ಷಣೆಗೆ ಕಂಕಣ ಬದ್ಧವಾಗಿವೆ. ಹಂಪಿ ಕನ್ನಡ ವಿಶ್ವವಿದ್ಯಾಲಯವು ಕೂಡ ಹಂಪಿಯ ಕೀರ್ತಿಯನ್ನು ಇಮ್ಮಡಿಸುತ್ತದೆ.

***ವಿಜಯನಗರ ವಾಸ್ತುಶಿಲ್ಪಗಳ ವೈಶೇಷಿಕತೆ***

*೧. ಇಲ್ಲಿ ದೊರೆವ ವಿಪುಲ ಗ್ರಾನೈಟ್ ಶಿಲೆಯ ಗುಣದಿಂದ ಕಠಿಣ ವಾಗಿರುವದರಿಂದ, ಸೂಕ್ಷ್ಮ, ಸುಂದರ ಕೆತ್ತನೆಗೆ (ಹೊಯ್ಸಳ ರಂತೆ) ಆಸ್ಪದ ಸಿಕ್ಕಿಲ್ಲ.*

೨. ಈ ಶಿಲೆ ಕಠಿಣವಾದುದರಿಂದ ಒಂದು ತರಹದ ವರದಾನವೂ ಆಗಿದೆ. ಎತ್ತರವಾದ ಕಂಬಗಳು, ಭತ್ತಿನ ಹರವಾದ ಹಾಸುಗಲ್ಲುಗಳು ಎತ್ತರವಾದ ಮಂಟಪಗಳು, ಗೋಪುರಗಳು, ಮಹಲ್‌ಗಳು, ಕಲ್ಲಿನಲ್ಲಿ ಕೊರೆದು ನೀರು ಹರಿಸುವ ಕಾಲುವೆಗಳು, ಪುಷ್ಕರಣಿಗಳು, ಸ್ನಾನ ಗೃಹಗಳು, ಕೋಟೆಯ ಗೋಡೆಗಳು ಹಾಗೂ ಕೋಟೆಯ ದ್ವಾರಗಳು ಮುಂತಾದ ಸರಳ ರೇಖೆಯಲ್ಲಿ ಚಲಿಸುವ ಕಟ್ಟಡಗಳನ್ನು ಕಟ್ಟಲು ಬಹಳ ಅನುಕೂಲ.

೩. ಗಟ್ಟಿ ಗುಣಧರ್ಮದ ಗ್ರಾನೈಟ್‌ನಿಂದ ಎತ್ತರ ಹಾಗೂ ಭವ್ಯ ಮೂರ್ತಿಗಳನ್ನು-ಕಡಲೆ ಕಾಳು ಗಣಪ, ಸಾಸಿವೆ ಕಾಳು ಗಣಪ, ಉದ್ದಾನ ವೀರಭದ್ರ, ಲಕ್ಷ್ಮೀನರಸಿಂಹ - ಕೊರೆಯಲು ಅನುಕೂಲವಾಯಿತು. ಇಂಥ ಮೂರ್ತಿಗಳ ನಿರ್ಮಾಣ ವಿಜಯನಗರ ಶಿಲ್ಪಕಲೆಗೆ ವೈಶಾಲ್ಯತೆಯನ್ನು ನೀಡಿದೆ.

೪. ಗ್ರಾನೈಟ್ ಸರಳರೇಖೆಯ ವಾಸ್ತುಬಂಧಕ್ಕೆ ಅತ್ಯುತ್ತಮ. ವರ್ತುಲ, ಅರ್ಧವರ್ತುಲ, ವಕ್ರಗಳಿಗೆ ಕಠಿಣ, (ಚಿಪ್ಪೆ ಹಾರಿ ಹೋಗುತ್ತದೆ) ವಿಜಯನಗರ ಕಂಬಗಳ ಶೈಲಿ ಎತ್ತರ ಹಾಗೂ ಸಬಳ, ಮೂರ್ತಿಗಳು ಬಳ್ಳಿಗಳು ಮುಂತಾದವುಗಳಿಗೆ ಆಸ್ಪದವಿಲ್ಲ.

೫. ವಿಜಯನಗರದ ಕಟ್ಟಡಗಳು, ಸಾಮಾನ್ಯವಾಗಿ ಎಲ್ಲವೂ ದೇವಾಲಯಗಳೇ ಇರಲಿ ಅಥವಾ ರಾಜಗೃಹಗಳೇ ಇರಲಿ-ಎತ್ತರವಾದ ಗೋಡೆಗಳಿಂದ ಆವೃತವಾಗಿ, ರಕ್ಷಣಾ ದೃಷ್ಟಿಯಿಂದ ಅಭೇದ್ಯವಾಗಿವೆ; ಪ್ರಾಕಾರಗಳಿಂದ ಕೂಡಿವೆ.

೬. ದೇವಾಲಯಗಳು ವಿಶಾಲವಾಗಿದ್ದು, ಮುಖಮಂಟಪ, ಸಭಾಮಂಟಪ ರಂಗಮಂಟಪ, ಅಂತರಾಳ, ಪ್ರದಕ್ಷಿಣ ಪಥವಿರುವ ಗರ್ಭಗೃಹಗಳಿಂದ ಕೂಡಿವೆ. ದೇವಸ್ಥಾನಗಳ ಬಲ ಭಾಗದಲ್ಲಿ ಕಲ್ಯಾಣ ಮಂಟಪಗಳಿವೆ. ಸಭೆ, ಸಮಾರಂಭ ಮದುವೆಗಳಿಗಾಗಿ ಇವುಗಳ ಉಪಯೋಗ.

೭. ತುಂಗಭದ್ರೆ ನದಿಯು ನಗರಕ್ಕೆ ನೀರಿನ ಸರಬರಾಜಕ್ಕಾಗಿ ವರದಾನವಾಗಿದೆ. ಪಶ್ಚಿಮದ (Up stream) ನೀರಿನ ಏರಿಯಲ್ಲಿ ಅಣೆಕಟ್ಟು ಕಟ್ಟಿ, ಸೈಫನ್ ಪದ್ಧತಿಯಿಂದ ಕಲ್ಲಿನಲ್ಲಿ ಕಾಲುವೆಗಳನ್ನು ಕೊರೆದು ನೀರನ್ನು ಎತ್ತಲೂ ಸರಬರಾಜು ಮಾಡಿದ್ದಾರೆ. ಅರಮನೆಗಳು ರಾಣೀವಾಸಗಳು, ದೇವಾಲಯ ಗಳು, ರಾಣಿ ಸ್ನಾನಗೃಹಗಳು, ಸಾರ್ವಜನಿಕ ಸ್ನಾನದ ಕೊಳಗಳು, ಪುಷ್ಕರಣಿಗಳು ಇಂಥ ನೀರಿನ ಸರಬರಾಜಿಗೆ ಒಳಪಟ್ಟಿವೆ. *(Water System Under Vijayanagar Rulers)* ಎಂಬ ವಿಷಯವಾಗಿ, ಇತಿಹಾಸಗಾರ ಡಾ| ಜಿ. ಎಸ್. ದೀಕ್ಷಿತ ಹಾಗೂ ಕ. ಇ. ಅ. ಯ. ೧೪ನೆಯ ವಾರ್ಷಿಕ ಅಧಿವೇಶನದ ಅಧ್ಯಕ್ಷರಾದ. ಶ್ರೀ. ಸಿ. ಟಿ. ಎಂ. ಕೊಟ್ರಯ್ಯನವರು ಈ ದಿಶೆಯಲ್ಲಿ ವಿಶೇಷ ಸಂಶೋಧನೆಗೈದು ಉದ್ಗ್ರಂಥಗಳನ್ನೇ ಬರೆದಿದ್ದಾರೆ ಹಾಗೂ ಈ ನದಿಯು ನಗರಕ್ಕೆ ಪ್ರಾಕೃತಿಕ ಸೌಂದರ್ಯ ನೀಡಿದೆ.

೮. ಕ್ರಿ. ಶ. ೧೩೩೬-೧೫೬೫ ವರಗಿನ ಸುಮಾರು ಎರಡೂ ಅರ್ಧ ಶತಮಾನಗಳ ದೀರ್ಘ ಅವಧಿಯಲ್ಲಿ ಇಲ್ಲಿಯ ರಾಜರುಗಳು ವಿವಿಧ ನಾನಾ ಕಟ್ಟಡಗಳನ್ನು ಕಟ್ಟಿಸಿ, ಅವುಗಳ ಸಂಖ್ಯೆಯನ್ನು ಸಾವಿರಗಳಲ್ಲಿ ಮುಟ್ಟಿಸಿದ್ದಾರೆ.

೯. ವಿಜಯನಗರ 'ಸ್ಕೂಲ ಆಫ್ ಆರ್ಟ್ & ಆರ್ಕಿಟೆಕ್ಚರ್' ಎಂದು ವಿಶೇಷ ಕೈಚಳಕದ ರೂವಾರಿಗಳು ಅಭಿಯಾಂತ್ರಿಕರು ತಮ್ಮ ಹೆಗ್ಗುರುತನ್ನು ಈ ಸ್ಮಾರಕಗಳ ಮೂಲಕ ನೀಡಿ ಹೋಗಿದ್ದಾರೆ. ದಕ್ಷಿಣ ಭಾರತದಲ್ಲಿಯೆಲ್ಲ ವಿಜಯನಗರದ ವಾಸ್ತು-ಶಿಲ್ಪಗಳನ್ನು ಈ ಹೆಗ್ಗುರುತುಗಳಿಂದ ಕಂಡು ಹಿಡಿಯ ಬಹುದು.

೧೦. ಸುತ್ತು-ಸುತ್ತುಗಳುಳ್ಳ, ಬಲಾಢ್ಯ ಕೋಟೆ ಕೊತ್ತಲಗಳನ್ನು ಕಟ್ಟಿಸಿ, ರಕ್ಷಣ ವಾಸ್ತುವಿನಲ್ಲಿ ವಿಶೇಷತೆಯನ್ನು ಇಲ್ಲಿ ನೋಡ ಬಹುದು (೭ ಸುತ್ತಿನ ಕೋಟೆ).

೧೧. ವಿಜಯನಗರ ಸಾಮ್ರಾಜ್ಯದ ಸ್ಮಾರಕಗಳಲ್ಲಿ ದೇವಾಲಯ ಗಳಲ್ಲಿ ಗೋಡೆಯ (ಭಿತ್ತಿ) ಎತ್ತರಗಳು ಹಾಗೂ ಛತ್‌ಗಳು ಕಲ್ಲಿನಲ್ಲಿ ಕಟ್ಟಲ್ಪಟ್ಟು, ಅವುಗಳ ಮೇಲಿನ ಭಾಗಗಳಾದ ಶಿಖರ ಪಟ್ಟಿಕೆಗಳು, ಶಿಖರಗಳು, ಮೂಲೆಯ ಮೂರ್ತಿಗಳು ಸುಟ್ಟ ಮಣ್ಣಿನ *(Stucco Works)* ಕೃತಿಗಳಿಂದ ಸೌಂದರ್ಯೀ ಕರಿಸಲಾಗಿದೆ. ಮಹಲ್ ಮತ್ತು ರಾಜ ಗೃಹಗಳು ಕಟ್ಟಿಗೆಯಿಂದ ಪೂರ್ತಿಗೊಳಿಸಲಾಗಿದೆ.

**ಸಮಸ್ಯೆಗಳು ಹಾಗೂ ಪರಿಹಾರಗಳು**

೧. *AMS & R ACT, 1958, (Govt of India),* ರಾಷ್ಟ್ರೀಯ ಸ್ಮಾರಕಗಳನ್ನು ರಕ್ಷಿಸುವ ಕಾಯದೆ ಇದ್ದು ಸ್ಮಾರಕಗಳನ್ನು ಭಗ್ನಗೊಳಿಸುವ ಆಕ್ರಮಣ ಮಾಡುವ ಕಳ್ಳತನ ಮಾಡುವ, ದುರುಪಯೋಗ ಮಾಡುವ, ಹೊಸದಾಗಿ ಏನನ್ನಾದರೂ ಪ್ರಾರಂಭಿಸುವ, ವ್ಯಕ್ತಿಗೆ ೩ ತಿಂಗಳ ಸಜಾ ಹಾಗೂ ೫೦೦೦ ರೂ. ಗಳ ದಂಡ ಕೋರ್ಟ್ ವಿಧಿಸುತ್ತದೆ.

೨. ಈ ಕಾಯದೆ ಇನ್ನೂ ಹೆಚ್ಚು ತೀಕ್ಷ್ಣ ಆಗಬೇಕು. ಸ್ಥಳದಲ್ಲಿಯೇ ಮೇಲಿನ ಯಾವುದೇ ಬೇಕಾಯದೇಶೀರ ಕೆಲಸ ಮಾಡಿದರೆ, ಪ್ರಾಚ್ಯವಸ್ತು ಇಲಾಖೆಯ ಅಧಿಕಾರಿಗೆ ಕಾಯದೇಶೀರ ನೇರವಾಗಿ ಶಿಕ್ಷೆ ಕೊಡುವ ಅಧಿಕಾರ ಕೊಡಬೇಕು. ಅಂದರೆ ಸ್ಮಾರಕಗಳ ಸುತ್ತಲಿನ ಜನ ಜಾಗ್ರತ ರಾಗುತ್ತಾರೆ. ಇದನ್ನು ಪಾರ್ಲಿಮೆಂಟ್ ವಿಧೇಯಕವೆಂದು ಘೋಷಿಸಬೇಕು.

೩. 'ಪ್ರೊಟೆಕ್ಟೆಡ್ (ಸಂರಕ್ಷಿತ) ಏರಿಯಾ' ಹಾಗೂ 'ಪ್ರಾಹಿಬಿಟೆಡ್ ಏರಿಯಾ'ಗಳನ್ನು ನಿರ್ದಿಷ್ಟ ಪಡಿಸಿ ಸೀಮೆ ಕಲ್ಲುಗಳನ್ನು ನಿಲ್ಲಿಸಬೇಕು *(Boundary Stones).* ಪ್ರಾಹಿಬಿಟೆಡ್ ಏರಿಯಾವು ಪ್ರೊಟೆಕ್ಟೆಡ್ ಏರಿಯಾದ ರೇಖೆಯಿಂದ ೩೦೦ ಮೀ. ದೂರದಲ್ಲಿ ಇರುವುದು.

೪. ಹಂಪಿಯ ಸ್ಮಾರಕಗಳ ವ್ಯಾಪ್ತಿ ೧೫ ಕಿ. ಮೀ. × ೧೫ ಕಿ. ಮೀ. ಇದ್ದು, ಇದರ ಬಗ್ಗೆ ವಿಸ್ತುತವಾದ ಗಡಿರೇಖೆಯ ಕ್ರಮ ಕೈಗೊಳ್ಳಬೇಕು. ಹಾಗೂ ಪ್ರತಿ ಕಿ.ಮೀ.ಗೆ ಒಬ್ಬ ಸೀಪಾಯಿ ನೇಮಿಸಬೇಕು. ರಕ್ಷಿಸುವುದು ಹಾಗೂ ಆಕ್ರಮಣ ಅಥವಾ ಕಳವುಗಳಾಗದಂತೆ ಆತನ ಕರ್ತವ್ಯ.

೫. ಸಮೀಪದ ಕಮಲಾಪುರ ಊರು ಭರದಿಂದ ಬೆಳೆಯುತ್ತಿದೆ. ಆದರ ಆಧುನಿಕತೆ, ಸಿನೇಮಾಥೇಟರ್, ಅಂಗಡಿ, ಮಹಡಿ ಮಹಲ್‌ಗಳು ಏಳದಂತೆ ಕಾಯದೆ ಸಿದ್ಧವಾಗಬೇಕು.

೬. ಹಂಪಿಯ ಪರಿಸರದಲ್ಲಿ ರಸ್ತೆಗಳು ಉತ್ತಮಗೊಳ್ಳಬೇಕು. ಹೊಟೇಲ್ ತಂಗುದಾಣ, ಮಾರುಕಟ್ಟೆ ಮುಂತಾದವುಗಳು ನಿರ್ಧರಿಸಿದ ತಾಣದಲ್ಲಿ ಕಟ್ಟಬೇಕು, ಕುಡಿಯುವ ನೀರಿನ ವ್ಯವಸ್ಥೆ ಆಗಬೇಕು. ಈಗ ಕಟ್ಟಿಸಿದ್ದವು ಕೇವಲ ತೋರಿಕೆಗಾಗಿ ಇವೆ. ನೀರಿಲ್ಲ.

೭. ಈಗ ಅರ್ಧಕ್ಕೆ ನಿಲ್ಲಿಸಲ್ಪಟ್ಟ ತಲ್ಲಾರ್‌ಘಟ್ಟ - ಆನೆಗೊಂದಿ ಬ್ರಿಜ್, ಸಂಪೂರ್ಣ ತೆಗೆದು ಹಾಕಬೇಕು. ಅತಿ ದೂರದಲ್ಲಿ ಮತ್ತೆ ಕಟ್ಟಿಸಬಹುದು.

೮. ಅದರಂತೆ ಶ್ರೀ ವಿರೂಪಾಕ್ಷ ಬೆಟ್ಟದ ತೂಗುಸೇತುವೆ ಕೂಡ ನದಿಯ ಎರಡೂ ಬದಿಗೆ ಎರಡು ಟಾವರ್‌ಗಳನ್ನು ಮಾತ್ರ ಪಡೆದಿದೆ. ಅವುಗಳೆರಡನ್ನೂ ತೆಗೆದು ಹಾಕಬೇಕು. ಹಾಗೂ ಇನ್ನು ಮುಂದೆ ಇಂಥ ಬ್ರಿಜ್‌ಗಳು ತಲೆ ಎತ್ತದಂತೆ ಎಚ್ಚರ ವಹಿಸಬೇಕು.

೯. 'ಯುನೆಸ್ಕೊ' ಸಹಾಯದಿಂದ ಹಂಪಿಯನ್ನು ಎಲ್ಲ ತರಹದಿಂದ ಸಂರಕ್ಷಿಸಿ, ಜಾಗತಿಕ ಪರಂಪರೆಯ ಸ್ಮಾರಕಗಳ ತಾಣವೆಂದು ಹೆಮ್ಮೆ ಪಡುವಂತೆ ಮಾಡಬೇಕು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*1. K. A. Nilakanta Sastri., (1960), *An Advanced History of India*, B'bay.
*2. Percy Brown., (1970), *Architecture of India*, Part I & Part II, Buddhist (Hindu & Islamic Period), B'bay (Re Edn) 1970.
*3. Gupta. R. S., (1961) *Art and Architecture of Chalukya of Badami,* B'bay.
*4. Joshi. S. K., (1962) *Defence Architecture in Early Karnataka,* New Delhi.
*5. ರಘುನಾಥರಾವ್ ತಾಪ್ಸೆ : 'ವಿಶ್ವಪರಂಪರೆಯ ತೂಗುಯ್ಯಾಲೆಯಲ್ಲಿ ಹಂಪಿ' ವಿಜಯ **ಕರ್ನಾಟಕ**, ಬೆಂಗಳೂರು, ೨೫.೬.೨೦೦೦.
*6. ಡಾ। ಜೋಶಿ. ಎಸ್. ಕೆ. : 'ದೈವ ಕಲ್ಪನೆಯಿಂದ ದೇವಾಲಯಗಳ ವರೆಗೆ' **ಸುಧಾ** - ಯುಗಾದಿ - ೨೦೦೦, ಬೆಂಗಳೂರು.
*7. ಅಂಬಿಕಾತನಯ ದತ್ತ : **ಉಯ್ಯಾಲೆ, ಸಖೀಗೀತ, ಗರಿ** ಹಾಗೂ **ಗಂಗಾವತರಣ,** ಧಾರವಾಡ.
*8. ಡಾ। ಜೋಶಿ. ಎಸ್. ಕೆ. : ***ಕರ್ನಾಟಕ ಪರಂಪರೆ,*** Radio Talk, AIR, Dharwad, 1997.
*9. ಲೇಖಕನಿಂದ ವೈಯಕ್ತಿಕ ಸ್ಥಳ ಸಮೀಕ್ಷೆ ಚಿತ್ರಗಳು, ಲೇಖಕನಿಂದ ಸಂಗ್ರಹ : ಪಟ್ಟದಕಲ್ಲು.
*10. ಲೇಖಕನು ಹಂಪಿ ಉತ್ಖನನದಲ್ಲಿ (೧೯೭೬- ೧೯೯೪), ಕೊ - ಡೈರೆಕ್ಟರ್, (Co Director )ನಾಗಿ ಭಾಗವಹಿಸಿದುದು. : ಹಂಪಿ.

ಎಂ. ಜಿ. ನಾಗರಾಜ್*

# ಕೊಡಗಿನ ಐನ್‌ಮನೆಗಳು ಮತ್ತು ಸಂಕೀರ್ಣ

ಮನೆತನದ ಮೂಲ ಹಿರಿಯ ಮೊದಲು ಕಟ್ಟಿದ ವಾಸದ ಮನೆ; ಅರ್ಥಾತ್ ಕುಟುಂಬದ ಮೂಲಪುರುಷ ಕಟ್ಟಿದ ಮನೆ : ಮೊದಲ ಮನೆ. ಅದೇ ಅಯ್ಯನ ಮನೆ, ಉಚ್ಚಾರದಲ್ಲಿ **ಐನ್ ಮನೆ** ಎನಿಸಿದೆ. ಮೊದಲ ಬರಹಗಳಲ್ಲಿ ಇದನ್ನು **ಅೖೆನ್** ಮನೆ ಎಂದು ಬರೆಯಲಾಗುತ್ತಿತ್ತು. ಒಟ್ಟಾರೆ ಅಯ್ಯ, ಮನೆತನದ ಹಿರಿಯಜ್ಜ, ಮೂಲ ಅಜ್ಜ ಕಟ್ಟಿದ ಮನೆ ಎಂಬುದು ಸಾಮಾನ್ಯ ರೂಢಿಯ ಅರ್ಥ. ಇಲ್ಲಿಯೇ ಇತಿಹಾಸದ ಎಳೆಗಳೂ ಕೂಡಿ ಕೊಂಡಿವೆ ಎನ್ನಬಹುದು. ಕೊಡಗಿನಲ್ಲಿ ಇದೊಂದು ಭಾವಪೂರ್ಣ ಅರ್ಥಪೂರ್ಣ ಶಬ್ದ.

ಅಯ=ಅಯ್ಯ; ಐಯ=ಐಯ್ಯ ಎಂದೆಲ್ಲ ರೂಪಗಳನ್ನು ಹೊಂದಿರುವ ಈ ಶಬ್ದದ ಅರ್ಥ : ಚಲಿಸು, ಶುಭವಿಧಿ, ಶ್ರೇಷ್ಠ, ಅದೃಷ್ಟ, ಜಂಗಮ, ಅಜ್ಜ ಎಂಬರ್ಥಗಳನ್ನು ನಿಘಂಟು ರೀತ್ಯಾ ಹೊಂದಿದೆ; ಅಯನ=ಅಯ್ಯನ ಎಂದಾಗುವಲ್ಲಿ ವಾಸಸ್ಥಳ, ಜಾತ್ರೆ (ಕೂಡುವ ನೆಲೆ) ಎಂಬರ್ಥವೂ ನಿಷ್ಪತ್ತಿಗೊಳ್ಳುತ್ತದೆ. ಈ ಹಿನ್ನೆಲೆಗಳಲ್ಲಿ ಅಯ್ಯ ಕಟ್ಟಿದ ಶುಭದ ಮನೆ, ಅದೃಷ್ಟ ತರುವ ಮನೆ, ಚೈತನ್ಯ ತುಂಬುವ ಮನೆ, ಗುರುಮನೆ (ಶ್ರೇಷ್ಠ ದೇವತಾವಾಸ) ಎಂಬ ಅರ್ಥಗಳು ತಾವಾಗಿ ಸ್ಫುರಿಸುತ್ತವೆ. ಕೊಡಗಿನಲ್ಲಿ ಪಾರಂಪರಿಕವಾಗಿ ಈ ಅೖೆನ್=ಐನ್ ಮನೆಗಳು ಉಳಿದುಬಂದಿರುವುದರಿಂದ ಇಂದಿಗೂ ಸಾಂಸ್ಕೃತಿಕ ಗೌರವ, ಘನತೆಗಳನ್ನು ಸಾಮಾನ್ಯವಾಗಿ ಪಡೆದುಕೊಂಡಿವೆ ಎನ್ನಬಹುದು. ಕೊಡಗಿನ ಕೊಡವರು, ಗೌಡ ಜನಾಂಗ, ಅಮ್ಮ ಕೊಡವರು, ಕೊಯವ, (ಪೆರ್ಗ್ಗಡೆ) ಹೆಗ್ಗಡೆ, ಗೊಲ್ಲ, ಐರಿರ, ಕಾಪಳ, ಕೆಂಬಟ್ಟಿ, ಜಮ್ಮಮಾಪಿಳ್ಳೆ ಇತ್ಯಾದಿ ಜನಾಂಗಗಳಲ್ಲಿ ತಮ್ಮ ಹಿರಿಯ ಪೂರ್ವಜರ ಮನೆಗಳಿಗೆ ಈ ಹೆಸರನ್ನು ಬಳಸುತ್ತಾರೆ. ಹಿರಿಯ ಕಟ್ಟಿದ ಮನೆ, ವಾಚ್ಯಾರ್ಥದಲ್ಲಿ ದೊಡ್ಡ ಗಾತ್ರದ್ದೇ ಆಗಿರಬೇಕೆಂದಿಲ್ಲದಿದ್ದರೂ, ಸೂಚ್ಯಾರ್ಥ-ಧ್ವನ್ಯಾರ್ಥಗಳಲ್ಲಿ ಹಿರಿಯನ ಮನೆ, ದೊಡ್ಡ ಮನೆ ಎಂಬರ್ಥವನ್ನು ಹೊಂದಿ **ಬಲ್ಯಮನೆ** ಎನಿಸಿಕೊಂಡೂ ಇದೆ. ಬಯಲುಸೀಮೆಯಲ್ಲಿನ 'ದೊಡ್ಡ ಹಟ್ಟಿಮನೆ'ಗಳೂ ಇದರೊಟ್ಟಿಗೆ ವಿಶೇಷ ಸಾದೃಶ್ಯ ಹೊಂದಿವೆ ಎನ್ನಬಹುದು.

ಇದು ಕೊಡಗಿನವರಲ್ಲಿ, ಬಲ್ಯಮನೆ, ಐನ್‌ಆರ್ವಾಡು, ಮೂಲಮನೆ (ಮೂಲಂ ಗಟ್ಟ್ - ಬಲ್ಯಂಗಟ್ಟ್), ಸೂಳ್ಯಗೌಡರಲ್ಲಿ ತರವಾಡಿನ ಮನೆ, ಐನ್‌ಮನೆ ಎಂದೂ ಕರೆಸಿಕೊಳ್ಳುವುದುಂಟು. ಒಂದು ಕಾಲಕ್ಕೆ ಇವೆಲ್ಲ ಅವಿಭಕ್ತ ಕುಟುಂಬದ ಅಯ್ಯನ ಮನೆಗಳೆ. ಇಂದಿನ ಸಾಮಾಜಿಕ ಸ್ಥಿತ್ಯಂತರ - ಕೌಟುಂಬಿಕ ಸ್ಥಿತ್ಯಂತರಗಳ ನಡುವೆಯೂ, ಹಲವಾರು ಐನ್‌ಮನೆಗಳು ತಮ್ಮ ಮೂಲ ಸ್ವರೂಪಗಳನ್ನು ಉಳಿಸಿಕೊಂಡು, ಮೂಲಪುರುಷನ ವಂಶಿಕರಲ್ಲಿ ಯಾರಾದರೊಬ್ಬರು ವಾಸಮಾಡಿಕೊಂಡು ಬಂದಿರುವುದು ಆ ಮನೆಗಳ ಐತಿಹಾಸಿಕ ಅಸ್ತಿತ್ವಕ್ಕೆ ಸಾಕ್ಷಿಯಾಗಿದೆ. ಈ ಮನೆತನದ ಮೂಲಪುರುಷ ವಂಶಿಕರಿಗೆಲ್ಲ ಗುರು; ದೇವರು. ಅಂತಾಗಿ ಐನ್ ಮನೆ ಸನಿಹದಲ್ಲಿ ಸಾಮಾನ್ಯವಾಗಿ ಅವನ ಸ್ಮಾರಕ ಕಟ್ಟಡವೆನಿಸುವ **ಕೈಮಡ** (=ಕೈಮಠ=ಕಿರುಮಠ) ಇರುತ್ತದೆ. ಅಂದರೆ ಹಿರಿಯನ ಗುಡಿ, ಅಜ್ಜಪ್ಪನ ಗುಡಿ, ಸ್ಮಾರಕ ಗುಡಿ ಎಂದೆಲ್ಲ ಅರ್ಥಗಳನ್ನು ಆಚರಣಾಪೂರ್ವಕವಾಗಿ ಪರಿಭಾವಿಸಲಾಗಿದೆ. ಆ ಸ್ಮಾರಕ ನೆಲೆ ತೆರೆದ ವೇದಿಕೆಯ ರೂಪದಲ್ಲಿ ಕುಟುಂಬದ ಮನೆಯ ಬಳಿ ಇರುವಲ್ಲಿ ***ಕಾರಣೋವತರೆ***[*೧], ಕಲ್ಲುಗಳ ಸಾಲು ಅಥವಾ ಸಣ್ಣ ಕಲ್ಲುಗಳ ಗುಡ್ಡೆಯ ರೂಪದಲ್ಲಿದ್ದರೆ 'ಕಲ್ಲಂದೆರೆ' ಎಂದು ಕರೆಯುವುದುಂಟು.

ಐನ್‌ಮನೆ : ಕೈಮಡ, ಕಕ್ಕಟ್ಟು (ಇಬ್ಬದಿ ಕಲ್‌ಭಿತ್ತಿಯ ಓಣಿ), ಅಂಗಳ, ಕಲ್ಲುಬೋಟಿ (ಅಲಂಕೃತ ಕಳಶದ ಶಿಲಾಸ್ತಂಭ). ಆಲೆಪರೆ - ಒತ್ತೆಪರೆ (ಹೊರಮನೆಗಳು), ಪತ್ತಾಯ (ಭತ್ತದ ಕಣಜ), ಬಟ್ಟಗಲ್ಲು, ಭಾವಿ, ಹಿತ್ತಲು, ಕೊಟ್ಟಿಗೆ, ತೋಟ, ತೆಂಗಿನ ಮರ, ಬಕ್ಕಪರೆ - ಬಕ್ಕಬಾಗಿಲು (ಮಣ್ಣು ದಿನ್ನೆಯ ಕೋಟೆ ಬಾಗಿಲು) ಪೊಟ್ಟಕಡಂಗ (ಕಿರು ಗುಡ್ಡೋಣಿ), ಗೂಳಿಗ (ಭೂಮಿ ರಕ್ಷಕ) ನೆಲೆ, ನಾತ (ನಾಗ)ನ ನೆಲೆ, ಪೂದ (ದೈವ) ನೆಲೆ, ಜಮ್ಮಗದ್ದೆ, ಗೆರೆಕಾಡು -ಬಾಣೆ (ಮೈದಾನ), ಕಿರುಗುಂಡಿ ಅಥವಾ ಕೆರೆ - ಈ ಸಂಕೀರ್ಣ ವ್ಯೂಹ ಸುತ್ತುವರಿಯ ವಾಸದ ಮನೆ - ವಂಶಪೂರ್ವಜ ಕಟ್ಟಿದ ಸ್ಮಾರಕ ಮನೆ ಆಗಿದೆ. ಮೂಲ ವಸತಿಯ ಈ ವ್ಯೂಹ ಕೊಡಗಿನ ಕಾಡಿನ ಪರಿಸರಕ್ಕೆ - ಮಲೆನಾಡಿನ ಪರಿಸರಕ್ಕೆ ವೈಜ್ಞಾನಿಕ ಸ್ವರೂಪದ ಸುವ್ಯೂಹವೆನಿಸುತ್ತದೆ. ಕಾಲಾಂತರದಲ್ಲಿ ಕೆಲವಷ್ಟು ವೈವಿಧ್ಯಗಳೂ ಐನ್‌ಮನೆಗಳ ವಾಸ್ತುವಿನಲ್ಲಿ ಕಂಡುಬರುತ್ತವೆ. ಗಂಗ, ಚಂಗಾಳ್ವ, ಕೊಂಗಾಳ್ವರ ಕಾಲದ ಜನವಸತಿ ಕಟ್ಟಡ ಹೇಗಿದ್ದುವೆಂಬುದಕ್ಕೆ ಇಲ್ಲಿ ನಿಖರ ಮಾಹಿತಿ ಇಲ್ಲದಿದ್ದರೂ, ಆ ಕಾಲದ ಪ್ರೇರಣೆಗಳು ಇಲ್ಲಿ ಮುಂದುವರಿದು ಬರಲಿಲ್ಲವೆನ್ನುವಂತಿಲ್ಲ. ಬಹುಶಃ ೧೪ನೇ ಶತಮಾನದಲ್ಲಿ ಕೇವಲ ೨ ಶಾಸನಗಳು (ಪಾಲೂರು,

*ಅನರ್ಘ್ಯ ಶ್ರೀ ಜಚನಿ ಕೃಪ, ೨೨೧, ೭೮ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦.

ಭಾಗಮಂಡಲ) ಮಾತ್ರ ಕೇರಳದ ಅಲ್ಪಸ್ವಲ್ಪ ಸಂಬಂಧವನ್ನು ತೋರಿದರೂ, ಹಾಲೇರಿ ಅರಸರ ಕಾಲದಲ್ಲಿ ಆ ಸಂಪರ್ಕ ಮುಂದುವರಿದು ಕೇರಳದ ಐರಿರರು (ಬಡಗಿ) ಜನಾಂಗದವರೂ ಇಲ್ಲಿನ ಮನೆಗಳ ಕಟ್ಟೋಣಗಳಿಗೆ ಬಂದು ಕೂಡಿಕೊಂಡಂತೆ ಕಾಣುತ್ತದೆ. ಹಟ್ಟಿಮನೆಗಳಂತೆ ನಾಲ್ಕಟ್ಟು ಮುಂದ್ ಮನೆ - ಐನ್‌ಮನೆಗಳಿರುವುದನ್ನು ನೋಡಿದರೆ ಐರಿರ ಬರುವ ಮುನ್ನವೇ ಬಯಲು ಸೀಮೆಯ ಕೆಲಸಗಾರರೂ ಇಲ್ಲಿ ನಿರತರಿದ್ದು ನಂತರ ಕನ್ನಡ-ಕೇರಳ ವಾಸ್ತುಗಳ ಸಂಮಿಶ್ರ ಶೈಲಿ ಇಲ್ಲಿ ಬಳಕೆಯಾದಂತಿದೆ. ಈ ದೃಷ್ಟಿಯಿಂದ ವಾಸ್ತವ್ಯದ ನೆಲೆಗಳ ವಾಸ್ತುವಿನ ಉಗಮವನ್ನು ಸ್ಮರಿಸಿದರೆ ಸಾಮಾಜಿಕ - ಕೌಟುಂಬಿಕ ಬದುಕಿನಲ್ಲಿ ಪರಂಪರಾಗತವಾಗಿ ಅವು ಬೀರಿದ ಪ್ರಭಾವ ಅಥವಾ ತಾವೇ ಪ್ರಭಾವಿತವಾಗಿ ವಾಸ್ತು ರೂಪಾಂತರಗಳ ವಿಕಾಸಕ್ಕೆ ಹಾದಿ ಯಾದುದನ್ನು ಕಾಣಬಹುದೆನಿಸುತ್ತದೆ.

ಆದಿಮಾನವ ಅಲೆಮಾರಿಯಾದರೂ ರಾತ್ರಿಯ ತಂಗು ದಾಣಕ್ಕೆ ಗವಿ ಯಾ ಗುಹೆಗಳನ್ನು ಆಶ್ರಯಿಸಿ ತನ್ನ ಬದುಕಿನ ಜೊತೆಗಾರರನ್ನು ಬದುಕಿನ ಕೆಲವು ಸಂಗತಿಗಳನ್ನು ಗವಿ-ಗುಹಾಭಿತ್ತಿಗಳ ಮೇಲೆ ಚಿತ್ರಿಸಿದ್ದಾನಷ್ಟೆ. ಅದು ಸಾಂಸ್ಕೃತಿಕ ಆಚಾರ ರೂಪವಾಗಿ ಇಂದಿಗೂ ಉತ್ತರ ಹಾಗು ದಕ್ಷಿಣ ಭಾರತದ ಅನೇಕ ಅರಣ್ಯ ಮೂಲನಿವಾಸಿಗಳ ವಾರ್ಷಿಕ ಹಬ್ಬಗಳಲ್ಲಿ ಬಿಡಿಸುವ ಚಿತ್ರ ರೂಪಗಳಲ್ಲಿ ಕಾಣಬರುತ್ತದೆ. ಸಿಂಧೂ ಸಂಸ್ಕೃತಿಯ ವಸತಿಗಳು, ಶಿಷ್ಟ ರಂಗೋಲಿಗಳು ನಮ್ಮ ಗೃಹವಾಸ್ತುವಿಗೆ ಪ್ರೇರಕಗಳಾಗಿವೆ. ನವಶಿಲಾಯುಗದ ಜನರು ಮಣ್ಣಿನ ಪಾತ್ರೆಗೆ ಬಣ್ಣ ಬಳಿದು ಅದನ್ನು ಬಳಸುತ್ತಿದ್ದರು.*[೨] ಕೃಷಿ ಜೀವನ ಆ ಕಾಲಕ್ಕೆ ಸ್ಥಾಯಿಗೊಂಡ ಕಾರಣ ಅವರ 'ವಸತಿ'ಯ ವಾಸ್ತು ಅವರ ಬದುಕಿನ ಸ್ವರೂಪಕ್ಕಣಿಯಾದುದಾಗಿದ್ದಿರಬೇಕು. ತಾವು ವಾಸಿಸುವ ಆವರಣದೊಡನೆ ಹೊಂದಿಕೊಳ್ಳುವಂತೆ ಅಂದರೆ, ವಾಸಿಸುವವರ ಹಾಗೂ ವಸತಿವ್ಯೂಹ ಶಕ್ತಿ ಸಮತೋಲನಗೊಂಡು ಸಹಜವಾದ ಜೈವಿಕ - ರಾಸಾಯನಿಕ ಸ್ವರೂಪವಾಗಿ (Bio - Chemical) ಈ ವಸತಿಗಳನ್ನು ನಿರ್ಮಿಸುವಲ್ಲಿ ಪ್ರೇರಣೆ ಅಂತರಿಕವಾಗಿ ಆಗ ಮೂಡಿ ಬಂದಿರಬೇಕು. ಅಂತೇ ಪೂರ್ವಮುಖಕ್ಕೆ ಅನುಗುಣವಾಗಿ ವಸತಿದ್ವಾರವಿರುವುದು ಜೈವಿಕ- ರಾಸಾಯನಿಕ ಕ್ರಿಯೆಗೆ ನೆರವಾಗುವ ಸೂರ್ಯ ಕಿರಣಗಳ ಶಕ್ತಿ, ಧಾತುವಾಗಿ ಬರಲೆಂಬ ಪ್ರಾಕೃತಿಕ ಆಸೆ ಹಾಗೂ ಆರಾಧನ ಸಂಕೇತವಾಗಿರುವಂತಿದೆ.

'ವಾಸ್ತು' ಎಂಬ ಶಬ್ದಕ್ಕೆ ದೇವತೆಗಳು, ಮನುಷ್ಯರು ವಾಸ ಮಾಡುವ ಸ್ಥಳ - ***ವಸಂತಿ ಪ್ರಾಣಿನಃ ಯತ್ರ*** - ಎಂಬರ್ಥವಿದ್ದು ಮುಂದೆ ಆ ಸ್ಥಳದ ಮೇಲೆ ಎದ್ದುಕೊಂಡ ಕಟ್ಟಡಕ್ಕೂ ಅನ್ವಯಿಸಿತು.*[೩] ಇರಬಹುದಾದಂಥ ವಸತಿ : ***'ವಸಂತ್ಯಸ್ಮಿನ್ನಿತಿ ವಾಸ್ತುಃ'***, ಎಂದು ಹೇಳುವುದರಲ್ಲಿ 'ವಾಸ್ತು' ಶಬ್ದ, 'ವಸವಾಸೇ' ಎಂಬ ಧಾತುವಿನಿಂದ ಹುಟ್ಟಿರುವ ಬಗ್ಗೆ ಅಮರಕೋಶದ ವ್ಯಾಖ್ಯಾನವಿರಲಿ; ಕ್ರಿ. ಶ. ೬ನೆಯ ಶತಮಾನದ ವರಾಹಮಿಹಿರನ ಕಾಲದಲ್ಲಿ ಬ್ರಹ್ಮವಾಸ್ತು ಶಾಸ್ತ್ರವು ರೂಢಿಗಿದ್ದು *೧) ವಿಂಧ್ಯದಿಂದ ಹಿಮಾಲಯದವರೆಗೆ ಕಾಶ್ಯಪ ವಾಸ್ತು. ೨) ವಿಂಧ್ಯದಿಂದ ಕೃಷ್ಣಾ, ತುಂಗಭದ್ರೆಯವರೆಗೆ ಮಯವಾಸ್ತು. ೩) ದ್ರಾವಿಡ (ದಕ್ಷಿಣ) ಪ್ರಾಂತ್ಯಗಳಲ್ಲಿ ಭೃಗು ಸಂಹಿತಾ ವಾಸ್ತು ವ್ಯಾಪಿಸಿದ್ದಿರಲಿ,**[೪] ಸೂತ್ರ, ಪುರಾಣ, ಆಗಮ, ತಂತ್ರ ಗ್ರಂಥಗಳಾಗಿ ದಾಕ್ಷಿಣಾತ್ಯ - ಔತ್ತರೇಯ ಗ್ರಂಥಗಳೆಂದು ವಿಂಗಡನೆಯಾಗಿ ೧೬ನೇ ಶತಮಾನದ ಕೇರಳದ 'ತಂತ್ರಸಮುಚ್ಚಯ', 'ಶಿಲ್ಪರತ್ನ'ಗಳಿರಲಿ,*[೫] ಇವೆಲ್ಲ ಪ್ರಾಚೀನ ಬದುಕಿನ ಶಿಷ್ಟ ಸಂಹಿತೆಯಾಗಿ ಕಾಣಬರುತ್ತವೆ ವಿನಾ ಅತಿ ಪ್ರಾಚೀನ ವಾಸ್ತುವಿನ ಪ್ರತ್ಯಕ್ಷ ವಿವರಣೆ ಎನ್ನುವುದು ಕಷ್ಟ. ವಾಸ್ತುಶಾಸ್ತ್ರಾನುಸಾರ ನಿರ್ಮಿತ ಮನೆಗಳಲ್ಲಿ ದೇವಚೇತನಗಳು ಇರುವುವೆಂದು ಅಥರ್ವಣವೇದ ಹೇಳುತ್ತದೆ; ಆದರೆ ಪ್ರಾದೇಶಿಕ ವಿನ್ಯಾಸಗಳ ವೈವಿಧ್ಯತೆಗಳು ಪರಿಸರವನ್ನು ಅವಲಂಬಿಸಿದೆ ಎಂದು ಅಗ್ನಿಪುರಾಣ ಹೇಳುವುದನ್ನೂ ಗಮನಿಸಬೇಕು.

ಸುಮಾರು ಐದು ಸಾವಿರ ವರ್ಷದ ಹರಪ್ಪ ಸಂಸ್ಕೃತಿಗೂ ಹಿಂದಿನ ನವಶಿಲಾಯುಗದ ಭಾರತೀಯರ ವಸತಿಗಳು ಬಲೂಚಿಸ್ಥಾನ ಪ್ರದೇಶದ ಕುಲ್ಲಿ, ಜೋಬ್, ನಾಲ್ ಸಂಸ್ಕೃತಿಯ ನಿವೇಶನದಲ್ಲಿ ಮಣ್ಣು - ಇಟ್ಟಿಗೆಗಳ ರಚಿತ ವಸತಿಗಳಾಗಿ ಕಂಡುಬಂದಿವೆ. ಕಟ್ಟಡವನ್ನು ನಿರ್ಮಿಸುವ ಮೊದಲು ಮಾಡುವ ವಾಸ್ತುಪೂಜೆ, ಋಗ್ವೇದ ಕಾಲದಲ್ಲಿ ವಾಸ್ತೋಷ್ಪತಿಯ ಸ್ತುತಿಯ (ಮನೆಯನ್ನು ಕಾಪಾಡುವ ದೇವತೆ)ಲ್ಲಿ ಸೂಚಿತವಾಗಿದೆ. ವೇದಯುಗದಲ್ಲಿಯೂ ವಾಸ್ತುಶಾಸ್ತ್ರವಿದ್ದಂತೆ, 'ದಾಕ್ಷಿಣಾತ್ಯ ವಾಸ್ತು ಶಾಸ್ತ್ರ'ವಿದ್ದ ಬಗ್ಗೆ ಬ್ರಾಹ್ಮಣಗಳಿಂದ ತಿಳಿದುಬರುತ್ತದೆ. ಮುಂದೆ ದಕ್ಷಿಣವಾಸಿಗಳಾದ ಮಯ, ಗಾಂಧಾರದ ನಗ್ನಜಿತ್, ಭೃಗು, ನಾರದ ಇವರುಗಳು ದಾಕ್ಷಿಣಾತ್ಯ ವಾಸ್ತುವಿದ್ಯೆಯನ್ನು ಖಚಿತ ಗೊಳಿಸಿದರೆನ್ನಲಾಗಿದೆ. ಇವೆಲ್ಲ ಸಾಂಸ್ಕೃತಿಕ ವಿಕಾಸ ಕ್ರಮದಲ್ಲಿ ಕಂಡುಬಂದ ಬೆಳವಣಿಗೆ ಎನಿಸಿದರೂ ಇವಕ್ಕೆಲ್ಲ ಪ್ರೇರಣೆ ಕೊಟ್ಟವಂತು, ಇವಕ್ಕೆಲ್ಲ ಬಹಳ ಮುನ್ನ ಮರ, ಹುಲ್ಲು, ಸೊಪ್ಪು ಎಲೆಗಳಿಂದ ಮಾಡಿದ ಗುಡಿಸಲುಗಳಂಥ ವಸತಿಗಳಾಗಿದ್ದಿರಬೇಕು. ನವಶಿಲಾಯುಗದಲ್ಲಿ ದಕ್ಷಿಣದ ಜನ ಹೆಚ್ಚಾಗಿ ಎತ್ತರದ ಗುಡ್ಡಗಳ ಮೇಲೆ ವಸತಿಗೊಂಡಿದ್ದರು. ಅವು ಆಯತಾಕಾರದಲ್ಲಿದ್ದುವು. ಇದು ಅವರು ಪ್ರವಾಹಗಳಿಂದ ರಕ್ಷಿಸಿಕೊಳ್ಳಲು, ಮಳೆಯಾಧಾರಿತ ಕೃಷಿ ಮಾಡಿಕೊಳ್ಳಲು, ಆಹಾರ ತಯಾರಿಸಿಕೊಳ್ಳಲು ಅನುವಾದ ವಸತಿ ವ್ಯವಸ್ಥೆಯೆ ಆಗಿತ್ತು. ವಿಶೇಷವೆಂದರೆ, ನವಶಿಲಾಯುಗ, ಸೈಂಧವ ಸಂಸ್ಕೃತಿಯುಗ - ವೇದಯುಗ ವಾಸ್ತುಪ್ರೇರಣೆಗಳ ಸಂಕೇತವೋ ಎಂಬಂತೆ, ಕುಟುಂಬ ದೇವತೆ ಎನಿಸಿರುವ ಗುರು ಕಾರೋಣ (ವಂಶದ ಮೂಲಪುರುಷ), ಭೂತಾಯಿ, ಹರಿವ ಕಾವೇರಿ ಇವರನ್ನೆಲ್ಲ ನೆನೆಸಿ ಗುಡಿಸಲ ಹುಲ್ಲು, ಮರ, ಬಿದಿರು, ಆನಂತರ ಮಣ್ಣು, ಇಟ್ಟಿಗೆ, ಗಾರೆ ಇತ್ಯಾದಿಗಳಿಂದ ಕಾಲಾನುಕ್ರಮದಲ್ಲಿ ಕಟ್ಟಿದ

ಐನ್‌ಮನೆಯನ್ನು, ಕುಟುಂಬದ ಗುಡಿ ಎಂದೇ ಭಾವಿಸಲಾಗಿರುವುದು ಕೊಡಗಿನಲ್ಲಿ ಕಾಣಬರುತ್ತದೆ.

ಅಮ್ಮತ್ತಿ - ಹೊಸೂರು ಗ್ರಾಮದ ಪೂಧ್ರಿಮಾಡ ಐನ್‌ಮನೆಯೊಂದರ ಬಾಗಿಲುವಾಡದ ಮೇಲೆ ಬರೆದಿರುವ ಬರೆಹ : *

*'ಭೂಮಿತಾಯಿ ಕಾವೇರ್ಯಂಮ್ಮೆ ಗುರುಕಾರೊಣೊರೆ ಯಿೂ ಮಂದಿರವರನ್ನು ಕಾಪಾಡಿ'*

- ಈ ಮೇಲಿನ ಸಾಂಸ್ಕೃತಿಕ ಕನಸುಗಳ ಆಧುನಿಕ ಸಾಕಾರ ರೂಪ ಎನಿಸುತ್ತದೆ. ಈ ಮನೆಯು ೧೯೧೦ರಲ್ಲಿ ಜೀರ್ಣೋದ್ಧಾರಗೊಂಡ ಸೂಚನೆಯಾಗಿ ಕನ್ನಿಕಂಬದ ಮೇಲೆ ಕೆತ್ತನೆ ಇದೆ.

ಬಹುಶಃ 'ತಾರವಾಡ್' ಶಬ್ದದ ಮೂಲರೂಪ ತಾಯರ್ ವಾಡೆ (ಮಾತೃಮನೆ) ಎಂದು ಮಲಬಾರಿನದಾಗಿದ್ದರೆ, ಕೊಡಗಿನಲ್ಲಿ ತಾಯಿಯರ ವಾಡಿ > ತರವಾಡಿ > ತರವಾಡಿನ ಮನೆ > ತಾಯ್ಮನೆ ಆಗಿರಬಹುದು. ಗಂಡು ಬೇಟೆಗೆ ಹೋದರೆ ಹೆಣ್ಣು ಬೇಸಾಯಕ್ಕೆ ಮೊದಲು ಹೋಗಿ ಅಹಿಂಸಾತ್ಮಕವಾದ ತುತ್ತು ಕೊಟ್ಟವಳು. ಹಾಗೆಯೇ ಗಂಡು ಕಟ್ಟಡ ಕಟ್ಟಿದರೂ ಅದನ್ನು ಮನೆಯನ್ನಾಗಿ ಮಾಡಿದವಳು ಹೆಣ್ಣು (ತಾಯಿ). ಅಂತೇ ತಾಯಿಮನೆ ಅಥವಾ ತವರುಮನೆಗೆ ಕೊಡವ ಭಾಷೆ ಹಾಗೂ ಹಾಡುಗಳಲ್ಲಿ 'ತಾಮನೆ' ಎಂದು ಹೇಳಿರುವುದು ಗಮನಾರ್ಹವೆನಿಸುತ್ತದೆ. ಅದಾಗಿ, ಜಮ್ಮಭೂಮಿ (ಜನ್ಮಸಿದ್ಧ ಹಕ್ಕಿನ ಭೂಮಿ), ಕಾವೇರಿ ಹರಿವ ಭೂಮಿ ಕೊಡಗಿನವರಿಗೆ 'ತಾಯ್ಮನೆ'ಯೆ.

ಮೊದಲಿಗೆ ಗುಡಿಸಲುಗಳು ವೃತ್ತಾಕಾರವಾಗಿದ್ದು, ಅಂಡಾಕಾರವಾಗಿ ಮಾರ್ಪಾಡುಗೊಂಡು ಬಗ್ಗಿಸಿದ ಬಿದಿರಿನಿಂದ ಪ್ರಾಚೀನರು ಪೀಪಾಯಿ ಆಕಾರ ಮಾಡಿಕೊಂಡರಂತೆ. ಇದು ಬೌದ್ಧ ಚೈತ್ಯಗಳಿಗೆ ಆದರ್ಶವಾಯಿತು. ಈ ಮೊದಲಿನ ವಾಸ್ತು ಆ ಜನರ ಆರಾಧ್ಯ ದೇವತೆಯ ಪ್ರತೀಕ ಸ್ವರೂಪವೂ ಆಗಿದ್ದಿರಬಹುದು. ಕೇರಳ, ತುಳುನಾಡು, ಕೊಡಗಿನ ಇಂದಿನ ಅನೇಕ ದೇಗುಲದ ಬ್ಯಾರೆಲ್ ಶೇಪ್ ಹಾಗು ಲುಘಾಮಾದರಿಯ ಶಂಕುವಿನಂಥ ಮಾಡುಗಳಿಗೂ ಈ ವಾಸ್ತು ಪರಂಪರೆ ಹರಿದು ಬಂದಂತಿದೆ. ಜೈನರಲ್ಲಿಯ 'ಬಸದಿ' ಶಬ್ದ 'ವಸತಿ'ಯ ಪರ್ಯಾಯ ರೂಪವೆ. ಸೈಂಧವ ಸಂಸ್ಕೃತಿಯ ಕಾಲದಲ್ಲೂ ಜೈನ 'ವಷಭ'ನನ್ನು ಗುರುತಿಸುವ ಸಂಪ್ರದಾಯವಿರುವಲ್ಲಿ ಜೈನರ 'ಬಸದಿ' ಅಂದಿನ ವಾಸ್ತವ್ಯ ವಸತಿಗಳ ಪರಂಪರಾಗತ ಇಂದಿನ ರೂಪದ ಮೂಲದತ್ತ ನಿರ್ದೇಶಿಸಬಹುದೆನಿಸುತ್ತದೆ. 'ವಸತಿ' ಶಬ್ದದ ಮೂಲ ಜೈನ ಸಂಪ್ರದಾಯದಿಂದ ಬಂದಿರಬಹುದು.

ಸೈಂಧವ ಸಂಸ್ಕೃತಿಯಲ್ಲಿ ಪೂಜಾಕೋಣೆ (ಕೋಷ್ಟ=ಕೋಟ)ಯ ನೆಲೆ ಇತ್ತು; ದೇಗುಲಗಳಿದ್ದ ಕುರುಹೂ ಲಭ್ಯವಿದೆ.*[೬] ಗುಡಿಗಳೂ ಪಿತೃದೇವತೆಗಳ ಆರಾಧನೆಗೆಂದು ಮೀಸಲಾದ ಗದ್ದುಗೆಗಳಿಂದಲೇ ಬೆಳೆದುಬಂದ ಕಟ್ಟಡಗಳಾಗಿವೆ; ತಮಿಳಿನಲ್ಲಿ 'ಪಳ್ಳಿ / ಪಾಳಿ' ಶಬ್ದಕ್ಕೆ ತಿರುಕ್ಕುರಳ್ ಹಾಸಿಗೆ, ದೀರ್ಘ ನಿದ್ರೆ ಮಾಡುವ ಎಡೆ ಎಂಬರ್ಥವಿದ್ದು ಬೀಡು, ಮಠ, ಗುಡಿ ಎಂಬೆಲ್ಲ ಅರ್ಥದಲ್ಲಿ ಬಳಕೆ ಆಗಿದೆ.*[೭] ಕೇರಳದಿಂದ*[೮] ತುಳುನಾಡಿನಿಂದ ಕೊಡಗಿಗೆ ಬಂದ ಬೌದ್ಧ ಚಹರೆಗಳೂ, ಜೈನ ಸಂಪ್ರದಾಯಗಳು (ಗಂಗರ ಕಾಲಕ್ಕೆ ಜೈನ ಸಂಪ್ರದಾಯ ಚಂಗಾಳ್ವರಿಂದ ಇಲ್ಲಿಯೇ ಬೆಳೆದಿದ್ದರೂ) 'ಪಳ್ಳಿ' ಎಂಬ ಹೆಸರನ್ನು ಬೀಡು ಹಾಗು ದೇವ ನೆಲೆಗೂ ತಂದು ಹೆಸರಾಗಿವೆ. ಕೊಡಗಿನ ಐನ್‌ಮನೆಯ ವಾಸ್ತು ಹಾಗು ಕೈಮಡ ವಾಸ್ತುವ್ಯೂಹ ಮತ್ತು ಸಂಕೀರ್ಣವನ್ನು ಅರ್ಥೈಸಲು ಈ ಹಿನ್ನೆಲೆಗಳನ್ನೆಲ್ಲ ಪರಾಮರ್ಶಿಸಬೇಕಾಯಿತು. ಆಧುನಿಕ ಚೌಕಟ್ಟಿನ ಪ್ರಗತಿಪರ ನೆಲೆಯಲ್ಲಿಯೂ ಈ ಎಲ್ಲ ಪ್ರಾಚೀನ ಸಂಕೇತಗಳನ್ನು ಅಂತರಿಕ ಐತಿಹಾಸಿಕ ಎಳೆಗಳ ನೇಯ್ಗೆಯನ್ನಾಗಿ ಸೂಚಿಸಿರುವಂತಿದೆ.

ಕೊಡಗಿನ ಐನ್‌ಮನೆಗಳು ಕಲ್ಲು, ಗಾರೆ ಮಣ್ಣುಗಳಿಂದ ಕಟ್ಟಲ್ಪಟ್ಟ, ಮರಗೆತ್ತನೆಗಳಿಂದ ಕೂಡಿದ ಮಲಬಾರಿನ ಶ್ರೀಮಂತ ನಾಯರುಗಳ ಮನೆಯ ರಚನೆಯನ್ನು ಹೋಲುತ್ತವೆ ಎಂಬ ಅಭಿಪ್ರಾಯವಿದೆ. ಆದರೆ ಇಲ್ಲಿ ಹೊಸ ಬಗೆ ಇದೆ. ಮಲಬಾರಿನ ಪ್ರಾಚೀನ ಸಮಾಜದಲ್ಲಿ ಮಾತೃಪ್ರಧಾನ ವ್ಯವಸ್ಥೆಯ ಅಂಗವಾದ 'ಮರು ಮಕ್ಕತಾಯಮ್' ನಿಯಮಾವಳಿಗೆ ಬದ್ಧವಾಗಿ, ತಾಯಿ (ಹೆಣ್ಣಿನ) ಕಡೆಯ ಸೋದರಿಕೆ ಹಾಗು ವಂಶ ಪ್ರಾಧಾನ್ಯದಡಿಯಲ್ಲಿ ವಂಶಿಕ ಅವಿಭಕ್ತ ಕುಟುಂಬಗಳ ಬಾಳುವಿಕೆಯೆ 'ತಾರವಾಡ' ಎನಿಸಿತ್ತು. ಇಲ್ಲಿ ಸ್ತ್ರೀ ಯಜಮಾನಿಕೆ ಮುಖ್ಯವಾಗಿ ಇದ್ದರೂ ಅದರ ವ್ಯವಹಾರಿಕ ನಿರ್ವಹಣೆಗೆ, ತಾರವಾಡ್‌ನ ಏಕ ಸೂರಿನಡಿ ಅವಿಭಕ್ತವಾಗಿ ಬಾಳುತ್ತಿದ್ದವರಲ್ಲಿ ಅತ್ಯಂತ ಹಿರಿಯನಾದವನನ್ನು 'ಕಾರೊಣವನ್' ಆಗಿ ನೇಮಿಸಲಾಗುತ್ತಿತ್ತು. ಮರುಮಕ್ಕತಾಯಿಗೆ ಅರ್ಥಾತ್ ವಂಶದಲ್ಲಿಯ ಸ್ತ್ರೀ ಪ್ರಧಾನಿಗೆ ಇಡೀ ವಂಶಿಕ ಆಸ್ತಿಯ ಅಬಾಧಿತ ಹಕ್ಕು ಇದ್ದು ಅದರ ವ್ಯವಹಾರ ನಿರ್ವಹಣೆಗೆ ಆಜೀವ ಟ್ರಸ್ಟಿ (Life trustee) ಯಾಗಿ ಮಾತ್ರ ಈ ಕಾರೊಣವನ್ ಇರುತ್ತಿದ್ದ. ಹಾಗೆ ಆ ಇಡೀ ವಂಶದಲ್ಲಿ ಕಾರೊಣವನ್ ಲಭ್ಯವಾಗದಿದ್ದರೆ, ತಾರವಾಡಿನ ಹಿರಿಯತಮ ಸ್ತ್ರೀ, 'ಕಾರೊಣವನ್' ಸ್ಥಾನದ ಹೊಣೆಯನ್ನು ನಿತ್ತರಿಸುತ್ತಿದ್ದಳು. (ಬಹುಶಃ ಅವಳು ಕಾರೊಣವತಿ ಆಗುತ್ತಿದ್ದಳೆಂದು ತೋರುತ್ತದೆ). ಈ ಕಾರೊಣವನ್ - ಮರುಮಕ್ಕತಾಯ ಪದ್ಧತಿ ನಾಯರ್ ಜನಾಂಗಕ್ಕೆ ಮೀಸಲಿದ್ದರೂ, ಉತ್ತರ ಮಲಬಾರಿನ ಪಯ್ಯಾನೂರಿನ ೧೭ ನಂಬೂದರಿ (ಬ್ರಾಹ್ಮಣ)ಗಳ ಮನೆತನಗಳನ್ನು ಬಿಟ್ಟರೆ, ಈ ಪದ್ಧತಿ ಉಳಿದ ನಂಬೂದರಿಗಳಲ್ಲಿಲ್ಲ. ಇಂಥ ಸಂಕೀರ್ಣ ಕುಟುಂಬ ವ್ಯವಸ್ಥೆಗನುಗುಣವಾಗಿ 'ನಾಲುಕಟ್ಟು' (ನಾಲುಪುರ) ಮನೆಗಳನ್ನು ಮನುಷ್ಯಾಲಯ ಚಂದ್ರಿಕಾ ಆಧಾರಿತ *ತಾಚುಶಾಸ್ತ್ರಕ್ಕನುಗುಣವಾಗಿ* ಕಟ್ಟಲಾಗುತ್ತಿತ್ತು.*[೯] 'ನಾಲುಪುರ' ಎಂದರೆ ಮೊದಲಿಗೆ

---

* ಶ್ರೀ ಪೂಧ್ರಿಮಾಡ ಪೊನ್ನಪ್ಪನವರು ತೋರಿಸಿದ ಮನೆಯ ಮೇಲಿನ ಬರೆಹವಿದು.

ಚತುರಸ್ರವಾಗಿ ನಾಲುದಿಸೆಗಳಲ್ಲಿ ಮನೆಗಳನ್ನು ಒತ್ತಾಗಿ ಕಟ್ಟಿ 'ನಾಲುಕಟ್ಟು' ಎಂದಾಗಿರಬಹುದೆ? ಮಧ್ಯೆ ಅಂಗಳ ತೊಟ್ಟಿ ಮನೆಯ ತೆರೆದ ಭಾವಣೆಯಿಂದಾಗಿ ಅದು ಯಜ್ಞನೆಲೆಯ ಸ್ವರೂಪ ಪಡೆದಿರಬಹುದು ಎಂಬ ಅಭಿಪ್ರಾಯವೂ ಇದೆ. ಕಾಲಾಂತರದಲ್ಲಿ ಯಜ್ಞಕರ್ಮಾದಿ ಕ್ರಿಯೆಗಳನ್ನು ಬಿಟ್ಟ ಮೇಲೆ ತೆರೆದ ಭಾವಣೆಯ ಹಟ್ಟಿ ಹಳೆಯ ನೆನಪಾಗಿ ಉಳಿದು, ಬೆಳಕಿನ ಅನುಕೂಲ, ಮಳೆನೀರಿನ ಸಂಗ್ರಹ, ಬಚ್ಚಲು ಮಾರ್ಗದ ಅನುಕ್ಕೂಲಕ್ಕನು ಗುಣವಾಗಿ ವಾಸ್ತುವನ್ನು ಬದಲಾಯಿಸಿ ಕೊಳ್ಳಲಾಯಿತೇ! ಪ್ರಾಚೀನದಲ್ಲಿ ವರ್ಣ ವ್ಯವಸ್ಥೆಯ ವೈರುಧ್ಯಗಳು ಕಾಣಿಸಿಕೊಳ್ಳುವ ಮುನ್ನ ಯಜ್ಞ ಕರ್ಮ ಸಾಮಾನ್ಯರೆಲ್ಲರ ಪಾಲಿನದಾಗಿದ್ದಿರಬೇಕು. ಇಲ್ಲವೆಂದರೆ ಗಾಳಿ, ಬೆಳಕು, ನೀರು ಸಂಗ್ರಹ ಇತ್ಯಾದಿ ಅನುಕೂಲಗಳಿಗೆ ವಸತಿಯೊಳಗೆ ಬದುಕು ನಿರೂಪಿಸಿಕೊಳ್ಳ ಲಾರಂಭಿಸಿದ ಜನಪದ ಇಂಥ ವಾಸ್ತುವನ್ನು ಹುಟ್ಟು ಹಾಕಿ 'ದೊಡ್ಡ ತೊಟ್ಟಿ ಮನೆ' ಎಂಬರ್ಥದಲ್ಲಿ ತಮ್ಮ ಅಂದಿನ ಪರಿಭಾಷೆಯಲ್ಲಿ ಕರೆಯುತ್ತಿದ್ದಿರಬೇಕು. ಹಳ್ಳಿಗಳಲ್ಲಿ ಇಂದಿಗೂ ಸಾಮಾನ್ಯವಾಗಿ ಹಟ್ಟಿಮನೆಗಳಲ್ಲಿ ಕಾಣಬರುವ ವಾಸ್ತು ಇದು.

ಮಲಬಾರಿನ ಈ ಮನೆಗಳು ಚೌಕ ಚತುರಸ್ರ ಕಟ್ಟಡಗಳಾಗಿ ನಾಲ್ಕು ಭಾಗಗಳನ್ನು ಮಧ್ಯದಂಗಳ ಸಹಿತವಾಗಿ ಹೊಂದಿದ್ದುವು. ಮಧ್ಯದಂಗಳವು 'ನಡುಮುತ್ತಂ' ಎಂದು ಕರೆಸಿಕೊಳ್ಳುತ್ತಿತ್ತು. ಸುಮಾರು ೧೫೦-೨೦೦ ಜನ ***ಮರುಮಕ್ಕತಾಯ*** ಕುಟುಂಬದವರು ವಾಸಿಸಲು ಅನುಕೂಲವಿದ್ದು ನಾಲ್ದಿಸೆಗೆ ನಾಲ್ಕು ವಿಭಾಗಗಳಿದ್ದು ಅಂಕಿತಗೊಂಡಿದ್ದುವು: ಉತ್ತರ ಭಾಗದಕಟ್ಟಡಕ್ಕೆ ***ವಡಕ್ಕಿನಿ***; ಪಶ್ಚಿಮ ಭಾಗದ್ದಕ್ಕೆ ***ಪತ್ತಿಂಜತ್ತಿನಿ***; ದಕ್ಷಿಣ ಭಾಗದ್ದಕ್ಕೆ ***ತೆಕ್ಕಿನಿ***; ಪೂರ್ವ ಭಾಗದ್ದಕ್ಕೆ ***ಕಿಜಕ್ಕಿನಿ*** ಎಂಬ ಅಂಕಿತಗಳಿದ್ದುವು. 'ವಡಕ್ಕಿನಿ' ಭಾಗದಲ್ಲಿ ಅಡುಗೆ ಹಾಗು ಊಟದ ಮನೆ, 'ಪತ್ತಿಂಜತ್ತಿನಿ'ಯಲ್ಲಿ ಎರಡು ಮಲಗುವ ಕೋಣೆಗಳು ಹಾಗು ಉಗ್ರಾಣ ಇರುತ್ತಿದ್ದುವು. ಉಳಿದ ತೆಕ್ಕಿನಿ - ಕಿಜಕ್ಕಿನಿ ಭಾಗಗಳು ತೆರೆದ ಹಜಾರಗಳಾಗಿ ಅತಿಥಿಗಳ ಯಾ ಸಂದರ್ಶಕರ ಭೇಟಿಗೆ ಮೀಸಲಾಗಿದ್ದುವು. ಇಡೀ ಕಟ್ಟಡದ ಸುತ್ತ ಹಜಾರ ಹಾಗು ಒಳ ಅಂಗಳ ಹಜಾರಗಳಿದ್ದುವು. ಪೂರ್ವ ಭಾಗದಲ್ಲಿ 'ತುಲಸೀತಾರ'ದ ಕಟ್ಟೆ, ದನದ ಕೊಟ್ಟಿಗೆ (ಪೊಜುಘು), ಅಡಿಗೆಮನೆ ಬದಿಗೆ ಭಾವಿ ಇರುತ್ತಿತ್ತು. ಭತ್ತದ ಕಣಜವೆನಿಸಿ 'ಪತ್ತಾಯ' ಮನೆಯ ಅವಿಭಾಜ್ಯ ಅಂಗವಾಗಿತ್ತು. ಜಾತಿಗನುಸಾರವಾಗಿ ಈ ಮನೆಗಳಿಗೆ ಬೇರೆ ಬೇರೆ ಹೆಸರುಗಳೂ ಇದ್ದುವು. ನಂಬೂದರಿ ಹಾಗು ಎಳೆಯದ್ ವರ್ಗದವರ ಮನೆಗೆ ***'ಇಳಂ'***, ರಾಜರ ಮನೆಗೆ ***'ಕೋವಿಲಕಂ'***, ತಮಿಳು ಬ್ರಾಹ್ಮಣರ ಮನೆಗೆ ***'ಮಡಂ'***, ನಾಯರ್‌ಗಳ ಮನೆಗೆ ***'ವೀಡು'***, ಕೆಳವರ್ಗದ ಜನರ ಮನೆಗೆ 'ಅಲ ಅಥವಾ ಕುಡಿ' ಎಂಬ ಹೆಸರಿತ್ತು. ಒಳಮನೆ ಅಂಗಳದ ಮಧ್ಯದಲ್ಲಿ 'ತೂಗುಂಬೊಳಿಚ' (ನೇಲುದೀಪ) ಇರುತ್ತಿತ್ತು.*[೧೦] ಈ ದೃಷ್ಟಿಯಿಂದ ಡಾ|| ರಿವರ್ಸ್ ಅವರ 'ತಾರವಾಡ್' ಕುರಿತ ಮಾತುಗಳು*[೧೧] ಗಮನಾರ್ಹವಾಗುತ್ತವೆ. 'ನಾಲ್ಕು ಕಟ್ಟು' ಮನೆಗಳ ವಾಸ್ತುವಿಗೆ ಕಾರಣವನ್ನು ಸೂಚಿಸುವಂತಿವೆ:

*Smaller Tarwads resemble a joint family. But when it grows large and diffuse it would be a mistake to regard it as anything other than a clan - because the common name binds numerous extended families together.*

ಮಲಬಾರ್ (ಕೇರಳ)ನ 'ತಾರವಾಡ್'ಗೆ ಕೊಡಗಿನ 'ಐನ್ ಆರ್ವಾಡ್', 'ತರವಾಡಿನ ಮನೆ' ಎಂಬ ಶಬ್ದಕ್ಕೆ ಪೂರ್ಣ ಸಂವಾದಿ ಅಲ್ಲ; ಇಲ್ಲಿ ಐನ್‌ಮನೆ, ಬಲ್ಯಮನೆ 'ತಾರವಾಡ್'ನ ತದ್ರೂಪ ಎನ್ನುವಂತಿಲ್ಲ. ಅಲ್ಲಿನ 'ತಾರವಾಡ್'ನ, 'ಕಾರೊಣವನ್' ಬೇರೆ; ಇಲ್ಲಿನ ಐನ್‌ಮನೆ ಅಥವಾ ಐನ್‌ಆರ್ವಾಡುವಿನ 'ಗುರುಕಾರೊಣ' ಬೇರೆ. ವ್ಯವಹಾರಿಕವಾಗಿ ಸ್ವಲ್ಪಮಟ್ಟಿಗೆ ಸಾಮ್ಯವಿದ್ದರೂ ಇಲ್ಲಿನ ***ಕಾರೊಣ - ಕಾರೊಣವನ್*** ತಾತ್ವಿಕವಾಗಿ ಪೂರ್ಣವಾಗಿ ಅಲ್ಲಿಗಿಂತ ಬೇರೆ ಎನಿಸುತ್ತಾನೆ. ಅಲ್ಲಿ ಕಾರೋಣವನ್ ಕೇವಲ ತಾರವಾಡಿನ ವ್ಯವಸ್ಥಾಪಕ ನಿರ್ದೇಶಕ; ಇಲ್ಲಿ ಆ ವ್ಯವಸ್ಥೆಯ ಗೌರವದ ಸ್ಥಾನವನ್ನು ಮೀರಿ ಇಡೀ ವಂಶದ ಗುರು; ಮೂಲಪುರುಷ; ದೇವರು ಎಲ್ಲ. ಹೀಗಾಗಿ ಇಲ್ಲಿನ ಐನ್‌ಮನೆ ಹಾಗು ಅದರ ಸಂಬಂಧಿತ ವ್ಯಕ್ತಿಗಳು, ವ್ಯವಹಾರಗಳು ವೈಶಿಷ್ಟ್ಯಪೂರ್ಣ ಹೊಸ ರೂಪವನ್ನು ತೋರಿವೆ.

ಬಹುಶಃ ೧೪ನೇ ಶತಮಾನದ ಭಾಗಮಂಡಲ ನಾಡಿನಲ್ಲಿಯ ಮೇಲ್ಬುಂಡಿ ಕುಂಞ ಅರಸನ ಆ ಭಾಗದಲ್ಲಿನ ಪ್ರಭಾವದ ವಿನಾ; ಹಾಲೇರಿ ವಂಶದ ಎರಡನೆ ಅರಸ ಕ್ರಿ. ಶ. ೧೬೦೨ರ ಸುಮಾರಿನ ಅಪ್ಪಾಜಿ ರಾಜೇಂದ್ರ ಒಡೆಯನ ಕಾಲದಲ್ಲಿ ಮಲಬಾರಿನ ಕೋಲರಿತ್ತಿ ಅರಸರೊಡನೆ ರಾಜಕೀಯ ಸಂಪರ್ಕ ಬೆಳೆದಾಗ ಸಮಾಜೋ - ಸಾಂಸ್ಕೃತಿಕ ಪ್ರಭಾವಗಳು ವಿನಿಮಯ ಗೊಂಡಂತಿದೆ. ಪರಿಣಾಮವಾಗಿ ಕೇರಳದ 'ಐರಿರ' ಜನಾಂಗ ಕೊಡಗಿನ ಗೃಹವಾಸ್ತುಗಳ ರಚನೆಯಲ್ಲಿ ಪಾಲುಗೊಳ್ಳಲಾರಂಭಿಸಿರಬೇಕು. ಇಡೀ ಕೊಡಗಿನಲ್ಲಿ ಕೇರಳದ ಪ್ರಭಾವವಿತ್ತೆನ್ನಲಾಗುವುದಿಲ್ಲ! ಹಾಸನ ಜಿಲ್ಲೆ ಐಗೂರು ಅರಸರ ಮನೆ, ಅರಕಲಗೂಡಿನ ವೀರಶೈವ ಮಠಗಳಲ್ಲಿ 'ಹಟ್ಟಿ', ಹಾಗು ಬಯಲು ಸೀಮೆಯ 'ದೊಡ್ಡ ಹಟ್ಟಿ'ಯ ವಾಸ್ತುವು ಈ ಬಗೆಯ ರಚನಾ ವಾಸ್ತುವನ್ನು ಹೊಂದಿದಂಥವಾಗಿದ್ದುವು. 'ಮನುಷ್ಯಾಲಯ ಚಂದ್ರಿಕೆ'ಯ ಆಧಾರ, ಬರೀ ಮಲಬಾರಿಗೆ ಸೀಮಿತವಾಗಿರಲಿಲ್ಲವಲ್ಲ. ಅಲ್ಲದೆ ಕೊಡಗಿನಲ್ಲಿ ಮಾತೃಪ್ರಧಾನ ವ್ಯವಸ್ಥೆ ಪಿತೃಪ್ರಧಾನ ವ್ಯವಸ್ಥೆಗೆ ಜಗಿದಿರಲಿ, ಅಥವಾ ರಾಜಿಯಾಗಿರಲಿ, ತನ್ನ ಪರಿಸರಕ್ಕೆ ಅನುಕೂಲಕರವಾದ ಹೊಸ ರೂಪಗಳನ್ನು ಇಲ್ಲಿನ ಐನ್‌ಮನೆಗಳು ಪಡೆದುಕೊಂಡವು. ಅವು ಚೌಕ ಅಥವಾ ಚತುರಸ್ರ ವಿನ್ಯಾಸದ ಬದಲು ಆಯತ ವಿನ್ಯಾಸದ ಮನೆಗಳಾಗಿವೆ. ಕೇರಳದ ಐರಿರ ಜನಾಂಗದವರು ಇಲ್ಲಿನ ವಿನ್ಯಾಸಕ್ಕೆ ಹೊಂದಿಕೊಂಡು ತಮ್ಮ ಶೈಲಿಯ ಪ್ರಭಾವವನ್ನು ಗೃಹರಚನಾ ವಾಸ್ತುವಿನಲ್ಲಿ ಮೂಡಿಸಿ ಕಟ್ಟಿಕೊಟ್ಟ ಕಾರಣ ಕೇರಳ ಮಾದರಿ ಎಂಬ ಅಭಿಪ್ರಾಯ ಹುಟ್ಟಿರುವಂತಿದೆ. ತುಳುನಾಡಿನ

ವಾಸ್ತು ರಚನಾ ವಿನ್ಯಾಸವೂ ಇಲ್ಲಿ ಪ್ರಭಾವಿಸಿದೆ. ಮೊದಲಿಗೆ ಕೊಡಗಿನಿಂದ ಹೋದ ಚೆಂಗಾಳ್ವರ ಮೂಲದ ಇಕ್ಕೇರಿ ಅರಸು ಕುಮಾರ ಕೊಡಗಿಗೆ ಬಂದು ಸ್ಥಾಪಿಸಿದ ಹಾಲೇರಿ ವಂಶದ ಮೊದಲರಸ ವೀರರಾಜ ಒಡೆಯ ಹಾಲೇರಿಯಲ್ಲಿ ಕಟ್ಟಿದ ಮೊದಲ ಮನೆ 'ದೊಡ್ಡ ಹಟ್ಟಿ ಮನೆಯೆ', ಈಗ ಬಸವಣ್ಣನ ದೇಗುಲವಿರುವ (ಉತ್ತರದಿಕ್ಕು) ಹಿಂಬದಿ ನೆಲೆಯಲ್ಲಿತ್ತು. ಈಗ ಬರಿ ಕಾಫಿ ತೋಟವಿದೆ. ಅವಶೇಷವೂ ಮುಚ್ಚಿಹೋಗಿದೆ.

ಕೊಡಗಿನ ಐನ್‌ಮನೆಗಳ ವೈಭವೀಕೃತ ರೂಪ ಹಾಲೇರಿ ಅರಸರ ಅರಮನೆಗಳು ಎನ್ನುವ ಮಾತಿನ ಮಗ್ಗುಲಲ್ಲೇ, ಹಾಲೇರಿ ಅರಸರ ಅರಮನೆಗಳ ಸರಳೀಕೃತ ರೂಪ ಐನ್‌ಮನೆಗಳು ಎಂಬ ಮಾತೂ, ಅವೆರಡರ ವಾಸ್ತುರೂಪವನ್ನು ನೋಡಿದರೆ ಲಕ್ಷ್ಯಕ್ಕೆ ಬರುತ್ತದೆ. ಅಪ್ಪಂಗಳ ಅರಮನೆ (ಇಂದು ಅಸ್ತಿತ್ವ ಕಳೆದುಕೊಂಡಿದೆ!) ನಾಲ್ನಾಡು ಅರಮನೆ, ಗರ್ವಾಲೆ ಅರಮನೆ ಅವಶೇಷಗಳು, ಮಡಿಕೇರಿ ಅರಮನೆಯ ವಾಸ್ತುವನ್ನು ಕೊಡಗಿನ ಯಾವುದೇ ಜನಾಂಗದ ಪ್ರಾಚೀನ ಐನ್‌ಮನೆ ಹಾಗು ಕೆಲವು ವೀರಶೈವ ಮಠಗಳ ವಾಸ್ತುವಿನೊಡನೆ ಹೋಲಿಸಿದರೆ ಇದು ತಿಳಿಯುತ್ತದೆ. ಅವುಗಳಲ್ಲೂ ಕೆಲವು ಇಂದು ಅಲ್ಪ ಸ್ವಲ್ಪ ಬದಲಾವಣೆಗೊಳಗಾಗಿವೆ. ಎಂ. ಎನ್. ಶ್ರೀನಿವಾಸ್ ಅವರು ಹೇಳುವ :

*Coorgs who were in the employment of the Lii gayat Raja's borrowed the customs, manners and rituals of their rulers'*

- ಎಂಬ ಮಾತೇ*೧೨ ಮೇಲಿನ ಮಾತುಗಳಿಗೆ ಪುಷ್ಟಿ ಕೊಡುತ್ತದೆ. ಆದರೆ ಇಬ್ಬರ ಆಚಾರ ವಿಚಾರಗಳೂ ಪರಸ್ಪರ ಪ್ರಭಾವಿತವಾಗಿರುವುದೂ ಕಾಣಬರುತ್ತದೆ. ಕೊಡಗಿನ ಕೊಡವ, ಗೌಡ, ಗೊಲ್ಲ, ಹೆಗ್ಗಡೆ, ಐರಿರ, ಕೆಂಬಟ್ಟಿ, ಕೊಯವ, ಜಮ್ಮ ಮಾಪಿಳ್ಳೆ ಇತ್ಯಾದಿ ಜನಾಂಗಗಳಲ್ಲಿನ ಐನ್ ಮನೆಗಳು - ದ. ಕೊಡಗು, ಉತ್ತರ ಕೊಡಗುಗಳಲ್ಲಿನ ಚಿಕ್ಕಮಂಡೂರು, ಹುದಿಕೇರಿ, ಕುಂದ, ಹಾತೂರು, ಕಡಂಗ, ಬೇಟೋಳಿ, ಅಮ್ಮತ್ತಿ ಬಳುಗುಂದ, ನಾಪೋಕ್ಲು - ಬೇತು, ಯವಕಪಾಡಿ, ಗಾಳಿಬೀಡು, ಬಲಮುರಿ, ಕೆದಮಳ್ಳೂರು, ಬಲ್ಲಮಾವಟಿ ಇತ್ಯಾದಿ ಕಡೆ ಗಮನಿಸಿದರೆ ಹೆಚ್ಚು ಕಡಿಮೆ ವಾಸ್ತುವಿನಲ್ಲಿ ಏಕ ಸ್ವರೂಪದವಾಗಿವೆ. ಅವನ್ನು ಅಯ್ಯನ ಮನೆ, ಬಲ್ಯಂಗಟ್ಟ್ ಮನೆ, ಗುರುಕಾರೋಣ ಕಟ್ಟಿದ ಮನೆ, ಗುರುಮನೆ ಎಂದೇ ಆಯಾ ವಂಶೀಕರು ಹೇಳುವ ಮಾತು.

ರಿಕ್ಟರನು ಐನ್‌ಮನೆಯ ವಾಸ್ತುವ್ಯೂಹವನ್ನು (ಅಸಂಪೂರ್ಣ ವೆನಿಸಿದರೂ) ೧೮೭೦ರ ಸುಮಾರಿನಲ್ಲಿ ಕಂಡುಕೊಂಡಂತೆ*೧೩ ಹೇಳಿರುವಂತಿದೆ : ಈ ಐನ್ ಮನೆಗಳು ಭತ್ತದ ಗದ್ದೆಗಳ ಸನಿಹದಲ್ಲಿ ಬಾಣೆ, ಭೂಮಿಯ ಇಳಿಜಾರು ಗಿಡಗಳ ನೆರಳಿಗಿರುತ್ತವೆ. ಸುತ್ತ ಬಾಳೆ, ತಾಳೆ, ಕಿತ್ತಳೆ, ಹಲಸು, ಸೀಬೆ ಗಿಡಗಳು ಇರುತ್ತವೆ. ಕಾಫಿ ತೋಟ (ಚಿಕ್ಕವೀರ ರಾಜೇಂದ್ರ ಒಡೆಯನ ಕಾಲದಿಂದ), ತರಕಾರಿಯ ಸಣ್ಣ ಮಡಿಗಳು, ಹಿತ್ತಲು ಮನೆದಳಗಳಲ್ಲಿ ಇರುತ್ತವೆ. ಅನುಕೂಲವಿರುವೆಡೆಯಲ್ಲಿ ಮೀನುಗಳಿರುವ ಸಣ್ಣಗುಂಡಿಗಳುಂಟು. ಸ್ಥಾನ ಹಾಗು ಮನೆಯ ವಾಸ್ತು ಶೈಲಿಯು ಒಂದು ರೀತಿಯ ಮಣ್ಣು ಕೋಟೆಯಿಂದಾವೃತ ಹಳೆಯ ಪಾಳೆಯಗಾರರ ಮನೆಗಳಂತಿವೆ.

ಒರಟು ಕಲ್ಲುಗಳ ಓಣಿ ಹಾಗು ಕಕ್ಕಟ್ಟುಗಳು ವಿವಿಧ ಬಗೆಯ ಜರಿಗಿಡಗಳಿಂದಾವೃತವಾಗಿ ಅಂಕು ಡೊಂಕಿನ ಕೋನಹಾದಿಯ ಮೂಲಕ ಮನೆಯ ಪ್ರವೇಶದ್ವಾರದ ಬಳಿಗೆ ಒಯ್ಯುತ್ತವೆ. ಮನೆಯ ಮುಂದಿನ ಅಂಗಳಕ್ಕೆ ಮೂರೂ ಪಾರ್ಶ್ವಗಳಲ್ಲಿ ಪ್ರಾಣಿಗಳ ಕೊಟ್ಟಿಗೆ, ಪತ್ತಾಯ, ಆಳುಕಾಳುಗಳ ಮನೆಗಳನ್ನು ದಾಟಿ ಬರಬೇಕು. ಮುಖ್ಯಮನೆಯ ಕಟ್ಟಡವು ಒಂದು ಮೇಲುಅಂತಸ್ತಿನ ಮಹಡಿಯನ್ನು ಹೊಂದಿದ್ದು ಚೌಕಾಕಾರದಲ್ಲಿರುವುದು. ಇದು ಸುಮಾರು ಮೂರು ಅಡಿ ಎತ್ತರದ ತೆತ್ತಿಯ (ವೇದಿಕೆ) ಮೇಲೆ ಇರುವುದು. ಈ ವ್ಯೂಹದ ಎಲ್ಲ ಕಟ್ಟಡಗಳ ಮಾಡು ಬಂಬಿನ ಪಟ್ಟಿಗಳ ಮೇಲೆ ಹುಲ್ಲು ಹೊದಿಸಿದುಂಥವು. ಒಳಗೆ ಸಾಗಿದರೆ ನಡುವೆ ಚೌಕಾಕೃತಿಯ 'ನಡುಮನೆ' ಇದ್ದು ನಾಲ್ಕು ಬದಿಯಲ್ಲಿ ವಾಸದ ಕೋಣೆಗಳಿರುತ್ತವೆ. ಒಳಗಿನ ಕೋಣೆಗಳಿಗೆ ಸಣ್ಣ ಬಾಗಿಲು ಮಾತ್ರವಿದ್ದು ಕಿಟಕಿಗಳಿರಲಿಲ್ಲ. ನಡುವಣ ಚೌಕಾಕಾರದ ತೆರೆದ ಭಾಗದಲ್ಲಿ ಸೋರುವ ಮಳೆಯ ನೀರನ್ನು ಶೇಖರಿಸಿ ಕೆಳಗಿನ ಚರಂಡಿ - ಬಚ್ಚಲು ಮೂಲಕ ಹೊರಕ್ಕೆ ಬಿಡಲಾಗುತ್ತಿತ್ತು. ಈ ಅಂಗಳದಿಂದ ಹಿತ್ತಲಿಗೆ ಸಾಗಲು ಎರಡು ಬಾಗಿಲುಗಳಿದ್ದುವು. ಮನೆಯ ಮುಂದಿನ ಕೈಸಾಲೆಯಲ್ಲಿ ೨ ಅಡಿ ಅಗಲದ ಮರದ ಹಲಗೆಯುಳ್ಳ ಕೂರಲು ಅನುಕೂಲಿಸುವ ಐಮರ (ಕೈಪಿಡಿ ಗೋಡೆ - ಮಂಡಿಗೋಡೆ - small inner parapet) ಇತ್ತು. ಅದರ ಮೇಲೆ ಮೂರ್‍ನಾಲ್ಕು ಚೌಕಾಕಾರದ ಕಂಬಗಳು ಬುಡದಿಂದ ಮೇಲಕ್ಕೆ ಕಿರಿದಾಗುತ್ತ ಬರುವಂಥವು; ಚಿತ್ರ ಕೆತ್ತನೆಯನ್ನು ಹೊಂದಿರುವಂಥವು. ಒಳಮನೆಯನ್ನು ಕೈಸಾಲೆಯಿಂದ ಬೇರ್ಪಡಿಸುವ ರಚನೆಯು ಕೆಲವೆಡೆ ಮರದ ಅಡ್ಡ ಹಲಗೆಗಳದ್ದಾದರೆ ಕೆಲವೆಡೆ ಮಣ್ಣುಗೋಡೆಯದಿತ್ತು. ಮಧ್ಯೆ ಮರದ ಕಿಟಕಿ ಇದ್ದು, ಕೆತ್ತನೆ ಸಹಿತವಾಗಿತ್ತು. ಪರರ (ಶತ್ರುಗಳ) ಕಣ್ಣಿಗೆ ಬೀಳದಂತೆ ಈ ಕಿಟಕಿಯ ಕಿಂಡಿಯ ಮೂಲಕ ಹೊರಗಿನವರನ್ನು ನೋಡಲು ಅನುಕೂಲಿಸುವಂಥ ರಚನೆಯನ್ನು ಅದು ಹೊಂದಿತ್ತು. ಅಲ್ಲದೆ ಅತಿಥಿಗಳೆಂದು ಬಂದ ದಾರಿಹೋಕರನ್ನು ಕಿಟಕಿಯ ಕಿಂಡಿಯ ಮೂಲಕ ದೂರದಿಂದಲೇ ಗುರುತಿಸಿ ಸತ್ಕಾರಕ್ಕೆ ಅಣಿಯಾಗಲು ಅದು ಅನುವಾದ ರಚನೆಯಾಗಿತ್ತು. (ಇದು ವಾಸ್ತು ರಚನಾ ವಿನ್ಯಾಸದಲ್ಲಿ *ತುಂಬಿಕಣ್ಣು, ತುಂಬಿಸೂತ*ವೆಂದು ಕರೆಸಿಕೊಳ್ಳುತ್ತದೆ. ಮೊದಲಿಗೆ ಇದ್ದಕಿದ್ದಂತೆ ಶತ್ರುಗಳು, ಕಳ್ಳ ಪಡೆಗಳು ಐನ್‌ಮನೆಯ ಕಕ್ಕಟ್ಟು ಡೊಂಕಿನ ಹಾದಿಯಲ್ಲಿ ಬರುವುದನ್ನು ಕಂಡ ಕೂಡಲೆ ಒಳಗಿನ ಹೆಂಗಸರು ಹಾಗು ಮಕ್ಕಳನ್ನು ಸುರಕ್ಷಿತ ನೆಲೆಯಲ್ಲಿ ಅಡಗಿಕೊಳ್ಳಹೋಗಲು ಈ *ತುಂಬಿಕಣ್ಣು* ಹೊಂದಿಸುವ ಕಾರಣ ವಾಗಿತ್ತು.) ಮುಖ್ಯ ಬಾಗಿಲಿನಿಂದ ಪ್ರವೇಶಿಸುವಲ್ಲಿ ಬಲದ ಕೋಣೆಯು ಮನೆಯ ಯಜಮಾನ ಹಾಗು ಅವನ ಯಜಮಾನಿ

ಪತ್ನಿಯ ವಾಸದ ಕೋಣೆ ಆಗಿತ್ತು. ಅಲ್ಲಿಂದ ಮುಂದೆ ಅಡುಗೆ ಕೋಣೆ, ಉಳಿದ ಭಾಗಗಳ ಸಣ್ಣ ಕೋಣೆಗಳಲ್ಲಿ ತರುಣ ದಂಪತಿಗಳು ಅವಿವಾಹಿತರು ಇರುತ್ತಿದ್ದರು. ಮೇಲ್ಛಾವಣಿಯಿಂದ ಕೋಲಾಟದ ಕೋಲುಗಳು, ಕೋವಿ, ಮರದಗಂಟೆ, ಎತ್ತುಗಳ ಹಗ್ಗ ಇತ್ಯಾದಿಗಳ ತೂಗಿಬಿಟ್ಟಿರುತ್ತಿದ್ದುವು. ಅಟ್ಟವು ಚೀಲ, ಬುಟ್ಟಿ, ಮಡಕೆ, ಈರುಳ್ಳಿ ಇತ್ಯಾದಿಗಳ ಶೇಖರಣೆಯ ಜಾಗವಾಗಿದ್ದು, ಮನೆ ಮತ್ತು ಅಂಗಳ ಶುದ್ಧವಾಗಿ ಅಚ್ಚುಕಟ್ಟಿನಿಂದ ಕೂಡಿರುತ್ತಿತ್ತು. ಇದಿಷ್ಟೂ ರಿಕ್ಷರಿನ ವರ್ಣನೆ. ಈ ವರ್ಣನೆಯಲ್ಲಿ ಐನ್ ಮನೆಯ ಅನೇಕ ಘಟಕಗಳು ನಮೂದಾಗಿಲ್ಲ. ವಾಸ್ತುವ್ಯೂಹದ ದೃಷ್ಟಿಯಿಂದ, ಸಾಂಸ್ಕೃತಿಕ ಪರಂಪರೆಯ ದೃಷ್ಟಿಯಿಂದ ಮಹತ್ವವಿರುವ ಕಾರಣ ಅವುಗಳನ್ನು ವಿಶೇಷವಾಗಿ ಮುಂದಿನಂತೆ ವಿವರಿಸಿದೆ; ಜೊತೆಗೆ 'ವಕ್ಕ'ದ (ಒಕ್ಕ=ಇಡೀ ಕುಟುಂಬ-ಮನೆತನ) ವಾಸ್ತವ್ಯಕ್ಕೆ ಅನುವಾದ ಸಾಂಸ್ಕೃತಿಕ ವಾಸ್ತುವ್ಯೂಹವನ್ನಾಗಿಯೂ ನೋಡಬೇಕಾಗಿದೆ.

ಸಾಮಾನ್ಯವಾಗಿ ತರಾವರಿ ಮಣ್ಣಿನ ಭೂಮಿಯ ಎತ್ತರದ ಜಾಗದಲ್ಲಿ ಅಯ್ಯನ ಮನೆ (ಆೖನ್) ಇರುತ್ತದೆ. ಸುತ್ತ ಪೊಟ್ಟಕಡಂಗ (ಮನೆಯ ಪ್ರಾಕಾರದ ಸುತ್ತ ರಕ್ಷಣಾರ್ಥವಾದ ಸಣ್ಣ ಗುಡ್ಡೋಣಿ= ಗುಡ್ಡೆ + ಕಂದುಕ ರೀತಿಯ ಓಣಿ) ಇರುತ್ತದೆ. ಇದನ್ನು ದಾಟಿದರೆ ಕಲ್ಲಿನ ಕಕ್ಕಟ್ಟು (ಕಲ್ಲಿನ ಕಟ್ಟು) ಓಣಿ, ಇಕ್ಕಟ್ಟು ಹಾದಿಯ ಕಲ್ಲು ಹಾಸು, ಬಕ್ಕಬಾಗಿಲು (ಮಣ್ಣುದಿನ್ನೆ ಕೋಟೆಬಾಗಿಲು) ಮುಂದಿನ ಅಂಕುಡೊಂಕು ಸುತ್ತಿನ ಅಥವಾ ಸಾಮಾನ್ಯವಾದ ಕಲ್ಲು ಹಾದಿಯ ಮೇಲುಹುಲ್ಲುಮಾಡು, ಬೋಟಿಉಬ್ಬಕಲ್ಲು (ಅಡ್ಡ ಬಂಬು ಅಥವಾ ಮರದ ತುಂಡುಗಳ ಗೇಟು), ಕಾಣಬರುತ್ತದೆ. ಎಡಬದಿಗೆ ಅಥವಾ ಬಲಬದಿಗೆ ಕೊಟ್ಟಿಗೆ ಆಳುಕಾಳು, ಮನೆ, ಪತ್ತಾಯ ಇದ್ದರೆ, ಹೊರಮನೆ ಎನಿಸುವ ಆಲೆಪರೆ, ಒತ್ತಿನ ಮನೆಯಾದ ಒತ್ತೆಪರೆ ಇರುತ್ತವೆ. ಈ ಮಧ್ಯೆ ವಿಶಾಲವಾದ ಅಂಗಳದಲ್ಲಿ, ಸಿಂಗಾರವಾದ ಕಲ್ಲು ಬೋಟಿಗಳು (ಅಲಂಕೃತ ಇಲ್ಲವೆ ನಿರಲಂಕೃತ ಕಲ್ಲು ಕಂಬಗಳು), ಉಬ್ಬಕಲ್ಲು ದ್ವಾರದಿಂದ ಐನ್‌ಮನೆ ಬಾಗಿಲು ಹಂತದವರೆಗೆ ಬಟ್ಟಗಲ್ಲುಗಳು (ಕೆಸರುಗಾಲು ಒರೆಸಿಕೊಳ್ಳಲನು ಕೂಲಿಸುವ ದುಂಡಾದ ಚಪ್ಪಟೆ ಕಲ್ಲುಗಳು), ಜಮ್ಮದ ಗದ್ದೆಗೆ ಮನೆಯಿಂದ, ಈ ಕಲ್ಲುಗಳ ಮೇಲೆ ಸಾಗುವ ಹಾದಿ, ಕಣದ ಕಲ್ಲುಬೋಟಿ (ಸಾಜಬೋಟಿ = ಸಹಜ ಸಾಮಾನ್ಯ ಕಲ್ಲು ಕಂಬ) ಇರುತ್ತವೆ. ಸಾಮಾನ್ಯವಾಗಿ ಮನೆಯ ನೈರುತ್ಯ ದಿಕ್ಕು ಅಥವಾ ಬಲಮುಂಬದಿಗೆ ಇರುವ ಗುರುಕಾರೊಣ ನೆಲೆ (ಕೈಮಡ), ನಂತರ ನಾತ, ಗುಳಿಗ, ಪೂದ, ಧರ್ಮ ದೇವತಾ ನೆಲೆಗಳು ಹಾಗು ಹಿತ್ತಲು - ಇದಿಷ್ಟೂ ಹೊರವ್ಯೂಹ; ಪೂರ್ವದಿಶಾಮುಖವಾದ ಐನ್‌ಮನೆ ತೆತ್ತಿ (ವೇದಿಕೆ ಚಾಚು ಸುತ್ತುವರಿ) ಪ್ರವೇಶಕ್ಕೆ ಮೆಟ್ಟಿಲುಗಳಿರುವಲ್ಲಿ ಕೆಲವೆಡೆ ಹಸ್ತಿಸೋಪಾನ ಕಂಡುಬರುತ್ತವೆ. ಈ ಮೆಟ್ಟಿಲು ಹತ್ತಿದ ಮೇಲೆ ಮನೆಯ ಎತ್ತರದ ವೇದಿಯ ಸುತ್ತ ಚಾಚು ಎನ್ನಬಹುದಾದ ತೆತ್ತಿಯ ಒಂದು ತುದಿಯಲ್ಲಿ ಕೈಕಾಲು ತೊಳೆದು ಒಳಗೆ ಬರಲು ಕಲ್ಲಿನ ಹಾಸನ್ನು ಹೊಂದಿಸಲಾಗಿರುತ್ತದೆ. ತೆತ್ತಿಯ ಮೇಲೆ ಅಂಟಿಕೊಂಡಂತೆ ಐಮರ (ಮುಂಬದಿ ಮಂಡಿಗೋಡೆ ಮೇಲಿನ ಮರದ ಹಲಗೆ) ಪೀಠ, ಕನ್ನಿಕಂಬ, ಕೈಯ್ಯಾಲೆ (ಕೈಸಾಲೆ) ಎಡ-ಬಲಬದಿ ಮುಂಗೋಣೆಗಳು, ಮಧ್ಯಗೋಡೆಯ ಚಿತ್ತಾರದ ಕಿಟಕಿ (ತುಂಬಿಕಣ್ಣಿನ ಕಿಟಕಿ), ಒಳಮನೆಗೆ ಪ್ರವೇಶದ ಚಿತ್ತಾರದ ಬಾಗಿಲು ಇರುತ್ತವೆ. ನಂತರ ಒಳ ಹಜಾರದ ನಡುವೆ ನಾಲ್ಕಟ್ಟು ಮುಂದ್, (ನಾಲ್ಕಟ್ಟು ಮನೆಯ ಮಧ್ಯದ ಮೇಲ್ಮಾಡು ಇಲ್ಲದ ತೆರೆದ ಚೌಕಾಕಾರದ ಕಲ್ಲು ಹಾಸು - ಕೊಡವ ಕನ್ನಡ ನಿಘಂಟು, ಕಸಾಪ, ಪು. ೧೫೩) ಆ ಭಾಗದಲ್ಲಿಯೂ ಐಮರದಂತಿರುವ ಪೀಠ, ಹಾಗು ನಾಲ್ಮೂಲೆ ಯಲ್ಲಿ ನಾಲ್ಕು ಸ್ತಂಭಗಳಿರುತ್ತವೆ. ಅದು ಒಳಹಜಾರದ ತುಂಬ ಬೀಳುವ ಸೂರ್ಯನ ಬೆಳಕು, ಮಳೆನೀರು ಸುರಿದಾಗ ಸಾಗಿಹೋಗಲು, ಅತ್ಯಂತ ವೈಜ್ಞಾನಿಕವೆನಿಸುವ ಪಾರಂಪರಿಕ ವಾಸ್ತು ಭಾಗವಾಗಿದೆ. ಒಳ ಮುಖ್ಯಮನೆಯ ಪ್ರವೇಶದ್ವಾರದ ನೇರಕ್ಕೆ ಎದುರಾಗಿ ಒಳ ಅಂಗಳದ ವಾಯುವ್ಯದ ನೇರಕ್ಕೆ ತೂಕುಂಬೊಳಚ (ತೂಕ್ ಬೊಳಕ್) (ನೇಲು ಲಕ್ಷ್ಮಿ ದೀಪ) ಇರುತ್ತದೆ. ಇದರ ಸುತ್ತ ಮುಂದಿನ ಪ್ರವಿತ್ರ ಅಂಗಳವೆಲ್ಲ ***ನೆಲ್ಲಕ್ಕಿ ನಡುಬಾಡೆ*** (ಉಭ-ಶುಭದ ದಿನನಿತ್ಯದ ಜೋತಿ ನಮನದ ನೆಲೆ), ನಾಲ್ಕಟ್ಟ್ ಮುಂದ್ ಭಾಗದ ಮೂರು ಭಾಗದಲ್ಲಿಯೂ ಒಳಕೋಣೆಗಳು, ಉತ್ತರ ಬದಿಗೆ ಅಡುಗೆಮನೆ ಹಾಗು ಊಟದ ಮನೆ (ಉಂಬೊಳಗೆ, ಉಂಬಳ ಮನೆ - ಉಂಬಮನೆ), ನೈರುತ್ಯಕ್ಕೆ ಕನ್ನಿಕೋಂಬರೆ (ಪ್ರಾರ್ಥನಾ ಕೋಣೆ), ಹಿತ್ತಲಬಾಗಿಲು, ಅಡುಗೆ ಮನೆ ಪಾರ್ಶ್ವದ ಹೊರಬಾಗಿಲು - ಇವೆಲ್ಲ ಇರುತ್ತವೆ. ತೂಕುಂಬೊಳಚದ ಬಳಿ ಒಂದು ಸಾಮಾನ್ಯ ನೇಲು ***ಭಸ್ಮಸಂಪುಟ***ದ ಮರದ ಕರಂಡವಿರುತ್ತದೆ. ಇದೆಲ್ಲ ಐನ್‌ಮನೆ ಒಳವ್ಯೂಹ. ಐನ್‌ಮನೆ ತೋಟದ ನೆಲೆಯಲ್ಲಿ ತೂಟಂಗಳ (ರುದ್ರಭೂಮಿ)ವೂ ಇರುವುದುಂಟು. ಮೊದಲು ಅಡುಗೆ ಮನೆ ನಾಲ್ಕಟ್ಟು ಐನ್‌ಮನೆ ಕೆಲವಡೆ ಒಳಗೆ ಇರುತ್ತಿತ್ತು. ಒಂದು ರೀತಿಯಲ್ಲಿ ಆಲೆಪರೆ (ಹೊರಮನೆ) ಒತ್ತೆಪರೆಯ ಆಗಿದ್ದು ಕುಟುಂಬಸ್ಥರು ವಾಸಿಸುವ ಜಾಗ. ಈಗ ಅಲ್ಲಿಯೆ ಅಡುಗೆ ಮಾಡಿಕೊಳ್ಳುವ ರೂಢಿಯೂ ಬಂದು ಕೆಲವೆಡೆ ಮಲಗಲು ಮಾತ್ರ ಐನ್‌ಮನೆ ಬಳಕೆ ಆಗುತ್ತಿದೆ. ಇನ್ನು ಕೆಲವೆಡೆ ಸ್ಮಾರಕನೆಲೆ ಆಗಿ ವಾಸ್ತವ್ಯವಿಲ್ಲದಿದ್ದರೂ ರಕ್ಷಿಸಲ್ಪಟ್ಟಿವೆ (ಕುಕ್ಲೂರು - ಕುಂದಗ್ರಾಮ ದಲ್ಲಿದೆ). ಒಟ್ಟಾರೆ ಬಾಣೆ, ಗದ್ದೆ, ಕೈಮಡ, ಕಲ್ಲು ಬೋಟಿ, ಕಕ್ಕಟ್ಟು, ಹಿತ್ತಿಲು, ತೋಟ, ತೂಟಂಗಳ, ಪೊಟ್ಟಕಡಂಗ, ಬಕ್ಕಬಾಗಿಲು, ನಾತ-ಗೂಳಿಗ-ಪೂದ, ಪತ್ತಾಯ, ಕೊಟ್ಟಿಗೆ, ಉಬ್ಬಕಲ್ಲು, ಮುಖ್ಯಮನೆ - ಇವೇ ಐನ್ ಮನೆಯ ಮುಖ್ಯವಾಸ್ತು ವ್ಯೂಹ. ಐನ್‌ಮನೆ ಕೈಯಾಲೆಯ ಚಿತ್ತಾರದ ಕಿಟಕಿಗೆ ವಾಸ್ತು ದೃಷ್ಟಿಯಿಂದ ಪ್ರಮುಖ ಸ್ಥಾನವಿದೆ. ಅದರಲ್ಲಿರುವುದೇ ತುಂಬಿಕಣ್ಣು; ಮನೆಯ ಸೂತ್ರ (ಆಯ) ದಾಖಲಾಗುವ ನೆಲೆ. ಅದರ ಕಿಂದಿ

ರೂಪದಲ್ಲಿರುವ ತುಂಬಿಕಣ್ಣಿನ ನೇರ, ನೆಟ್ಟಗಿರಬೇಕು. ಪೂರ್ವದಿಂದ ಬರುವ ದೇವರು ಈ ಕಿಂಡಿಯ ಮೂಲಕ ಅಣುವಿನಲ್ಲಿ ಅಣುವಾಗಿ ದಾಟಿ ಬರಬೇಕಂತೆ. ಅದು ಶಾಸ್ತ್ರ, ಸೂತ್ರ. ಐನ್ ಮನೆಗಳೆಲ್ಲ ನಾಲ್ಕಟ್ಟು ಮುಂದ್ ಮನೆ ಅಲ್ಲದಿದ್ದರೂ ಮೂಲವಾಸ್ತು ಒಂದೇ, ದಿಟ. ಇದು ವಂಶದ ಮೊದಲ ಹಿರಿಯ ಕಾರೋಣಗುರು ಕಟ್ಟಿದ ವಾಸ್ತುವನ್ನೆ ಉಳಿಸಿಕೊಂಡು ಬಂದಿರುವುದೂ ಉಂಟು; ಆಧುನಿಕ ಅಗತ್ಯಕ್ಕೆ ಬದಲಾಯಿಸಿಕೊಂಡಿರುವುದೂ ಉಂಟು. ಬೆಳಗಿನ ಒಟ್ಟಾರೆ ಸೂರ್ಯನ ಬೆಳಕು ಮುಂಬಾಗಿಲನಿಂದ ನೆಲಕ್ಕಿ ನಡುಬಾಡೆಗೆ ಬೀಳುತ್ತೇ ಎಂಬ ಭಾವ, ಆಶಯ ಇಲ್ಲಿದೆ.

ಕೊಡಗಿನ ಮನೆತನಗಳಿಗೆ ರಾಜರುಗಳ ಕಾಲಕ್ಕೆ ಒದಗಿದ್ದ ಜಮ್ಮ ಜಮೀನು, ಬಾಣೆ, ಕಾಡುಗಳ ನೆಲೆಯ ಕಾರಣ ಈ ವಾಸ್ತುವ್ಯೂಹ ವೈಶಿಷ್ಟ್ಯವು ಕಾಣಬರುತ್ತದೆ. ಜಮ್ಮಭೂಮಿ (ಪರಭಾರೆ ಮಾಡಲಾಗದ ವಂಶಪಾರಂಪರ್ಯ ಕುಟುಂಬ ದವರಲ್ಲಿಯೇ ಉಳಿಯಬೇಕಾದ ಜನ್ಮಸಿದ್ಧ ಹಕ್ಕಿನ ಭೂಮಿ: ಸೈನಿಕ ಸೇವೆ, ಆಡಳಿತ ಹಾಗು ರಾಜ್ಯದ ಸೇವೆ ಸಲ್ಲಿಸಿದವರಿಗೆ ರಾಜರು ದತ್ತ ಮಾಡುತ್ತಿದ್ದ ಭೂಮಿ ಎಂಬುದು ಸಾಮಾನ್ಯ ವ್ಯಾಖ್ಯೆ) ಮನೆಯ ಪೂರ್ವಬದಿಗೆ ಸಾಮಾನ್ಯವಾಗಿ ಇರುತ್ತಿದ್ದು, ಹಸು-ಎತ್ತುಗಳ ಮೇವಿಗೆ, ಮನೆ ಬಳಕೆಯ ಸೌದೆಗೆ, ಬಾಣೆ ಹಾಗು ಗದ್ದೆ ಬದಿಯ ಗೆರೆಕಾಡುಗಳು, ಈ ಜಮೀನಿಗೆ ಹೊಂದಿಕೊಂಡಂತೆ ಇಂದಿಗೂ ಅನೇಕ ಕಡೆ ಇವೆ. ಅನ್ಯರಾಗಲಿ, ಪ್ರಾಣಿಗಳಾಗಲಿ ಸುಲಭವಾಗಿ ನುಗ್ಗದಿರುವಂಥ ಪೊಟ್ಟಕಡಂಗ, ಕಕ್ಕಟ್ಟು ಹಾದಿ, ಉಬ್ಬುಕಲ್ಲು ದ್ವಾರದ ರಚನೆ ಇದೆ. ಗದ್ದೆಗೆ ಹೋಗಿ ಬಂದ ಮೇಲೆ ಅಥವಾ ಮಳೆಗಾಲದ ಕೆಸರುಗಾಲಿನಲ್ಲಿ ಬಂದ ಮೇಲೆ ಸಾಧ್ಯವಾದಷ್ಟು ಕಾಲೊರೆಸಿಕೊಂಡು ಬರಲನುಕೂಲವಾಗಲೆಂದು ಬಟ್ಟಗಲ್ಲುಗಳನ್ನು ಸಾಲಾಗಿ ಜೋಡಿಸಿಡಲಾಗುತ್ತಿತ್ತು. ಇದು ಸುಮಾರು ೧/೨ ಅಡಿ ಎತ್ತರ, ೧ ಅಡಿ ವ್ಯಾಸದ ದುಂಡಗಲ್ಲು ಆಗಿರುತ್ತಿತ್ತು (ಕುಮಟೂರಿನ ಬಾಚರಣೆಯಂಡ ಕೆ. ಅಣ್ಣಯ್ಯ ಅವರ ಮನೆ ಇದಕ್ಕೊಂದು ಉದಾಹರಣೆ); ಕೆಲವೆಡೆ ಚೌಕಾಕೃತಿಯ ಕಲ್ಲೂ ಬಳಕೆಗಿದ್ದುವು.

ಹೊರ ಪತ್ತಾಯವು, ಆಯತ ಅಥವಾ ಚೌಕಾಕಾರದ ಬಿಗಿ ಮರದರಚನೆಯ ದೊಡ್ಡ ಭತ್ತದ ಕಣಜವಾಗಿದೆ. ಇದು ಮನೆಯ ಹೊರ ಆವರಣದಲ್ಲಿದ್ದರೆ, ಒಳಗೆ 'ತುಳಿಯ' ಎಂಬ ಹೂಜಿಯಾ ಕಾರದ ಸು. ೪ ಅಡಿ ಎತ್ತರದ ಅಗಲ ಬಾಯಿಯ ಸಾರಿಸಿದ ಬುಟ್ಟಿಯೆ ಒಳಗಿನ ಪತ್ತಾಯವಾಗಿರುತ್ತದೆ.

ಹಸ್ತಿಸೋಪಾನ ಸಾಮಾನ್ಯವಾಗಿ ರಾಜಮಾನಿತ ಕುಟುಂಬ ಗಳ ಅಥವಾ ಶ್ರೀಮಂತ ಕುಟುಂಬಗಳ ತಕ್ಕ ಮುಖ್ಯಸ್ಥರ (ಒಕ್ಕ-ಒಕ್ಕಾಮೆಯ ರೀತಿ ರಿವಾಜುಗಳ ಪಾಲಿಕಾ ನಿರ್ವಹಣೆ ದಾರರು) ಮನೆಯ ಮುಂದೆ ಕಾಣಬರುವ ರಚನೆಯಾಗಿದೆ. ಹಸ್ತಿಸೋಪಾನದ ಮುಂದಿನ ಅಂಗಳದಲ್ಲಿ ಎದ್ದು ಕಾಣುವುದು ಸಾಶ್ರಯ ಅಥವಾ ನಿರಾಶ್ರಯ (ಅಲಂಕೃತ ಅಥವಾ ಸಾಮಾನ್ಯ) ಕಲ್ಲು ಬೋಟಿಗಳು. ಇವುಗಳಿಗೆ ಚಿತ್ರಕಲ್‌ಬೋಟಿ, ಅತ್ತಕಲ್ ಬೋಟಿ (ಎತ್ತುಗಳ ಕಲ್ಲ್) ಇತ್ಯಾದಿ ಹೆಸರುಂಟು. ಬೋಟಿ (ಸ್ತಂಭ)ಗಳ ಪಾದಭಾಗ ಚೌಕಾಕಾರದ ಬ್ರಹ್ಮಕಾಂತ ಭಾಗವಾದರೆ ಅದರ ಮೇಲಿನ ದಂಡಭಾಗ ಆರು, ಎಂಟು, ಹದಿನಾರು ಅಥವಾ ದುಂಡು ಮೈಯಿನದಾಗಿ ವಿಷ್ಣುಕಾಂತ, ಸ್ಕಂದಕಾಂತ, ರುದ್ರಕಾಂತ ರಚನೆ ಎನಿಸಬಹುದು. ದಂಡಭಾಗದ ತುದಿಯಲ್ಲಿ ಚೌಕ, ಅಥವಾ ದುಂಡು ಆಕಾರವಿದ್ದು. ಅದರ ಮೇಲಿನ ಪೀಠದಲ್ಲಿ ಕಳಶ, ಕುದುರೆ, ಬಸವ (ಆಸೀನ, ಸ್ಥಾನಕ) ಆಕೃತಿಗಳಿರುತ್ತವೆ; ಕಂಬ ಶರೀರದಲ್ಲಿ ಚಿತ್ರಗೆತ್ತನೆಗಳಿರುತ್ತವೆ; ಅಪ್ಪಂಗಳ ಅರಮನೆ, ಗರ್ವಾಲೆ ಅರಮನೆ ಕುಮಟೂರಿನ ದೇಶತಕ್ಕ ಕಳ್ಳಿಂಗಡ, ಅರಮೇರಿಯ ಬಾಚಿರ, ತಾವಳಗೇರಿಯ ಕೈಬಿಲಿರ, ಕಕ್ಕಬೆಯ ಕಲ್ಯಾಟಂಡ, ಗಾಳಿಬೀಡಿನ ನೆಲ್ಲಪಟ್ಟಿರ, ಕೆಳಕೇರಿ ನಿಡುಗಣೆಯ ಪಾಂಡಿರ, ಕಳತ್‌ಮಾಡುವಿನ ಕೊಲ್ಲೀರ, ಹಳ್ಳಿಗಟ್ಟುವಿನ ಅಚ್ಚಿಯಂಡ, ಅಡ್ಡಂಡ, ಕುಂದಗ್ರಾಮದ ಮನೆಯಪಂಡ, ಹಾತೂರಿನ ಕೊಡಂದೇರ, ಈಚೂರಿನ ತೀತಾಮಾಡ ಇತ್ಯಾದಿ ಕೊಡವ, ಅಮ್ಮಕೊಡವ ಮನೆತನಗಳಲ್ಲಿ ಅಮ್ಮತ್ತಿ ಬಿಳುಗುಂದ - ಮೈತಾಡಿ ಗ್ರಾಮದ ಕೆಲವು ಜಮ್ಮಮಾಪಿಳ್ಳೆ ಗಳಲ್ಲಿ, ಅಮ್ಮತ್ತಿ, ಬಲ್ಲಮಾವಟಿ ಹಾಗು ಯಡೂರು, ಚೌಡ್ಲು, ತಾಕೇರಿ, ಬಿಳಿಗೇರಿ, ಸಂಪಾಜೆ ಬಳಿ ಕೆಲವು ಗೌಡಮನೆಗಳ ಬಳಿ ಇವು ಕಾಣಬರುತ್ತವೆ. ಹಾಗು ಜಾನಾಂಗಿಕವಾಗಿ ಕೆಲವು ಸಾಂಸ್ಕೃತಿಕ ಆಚರಣೆಗಳೂ ಇದಕ್ಕೆ ಅಂಟಿವೆ. ಪ್ರಾಗೈತಿಹಾಸಿಕ ಕಾಲದ ರಿಚುವಲ್ (ಧಾರ್ಮಿಕ ಬಲಿಸ್ತಂಭ!) ಪೋಲ್, ಹೋಲುವಂತೆ, ಸ್ತಂಭದ ತುದಿಗೆ ಹುಲ್ಲಿನ ಕೊಂಬು ಕಟ್ಟಿ ಗಾಳಿಬೀಡು, ಕಳತ್‌ಮಾಡುವಿನಲ್ಲಿ ಧಾನ್ಯದ ಹಬ್ಬಗಳನ್ನು ಮಾಡಿದರೆ, ಅರಮೇರಿಯಲ್ಲಿ ಎತ್ತುಪೊರಟ (ಎತ್ತುಗಳ ಬೆನ್ನ ಮೇಲಿನ ಇಬ್ಬದಿ ಚೀಲಗಳಲ್ಲಿ ಅಕ್ಕಿ ಬೆಲ್ಲ ತೆಂಗು ಇತ್ಯಾದಿ ಹರಕೆ ವಸ್ತುಗಳನ್ನಿಟ್ಟುಕೊಂಡು ಹೋಗುವುದು) ಹರಕೆಯನ್ನು ಕಲ್ಲುಬೋಟಿ ಬಳಿಯಿಂದ ಹೊರಡಿಸಲಾಗುತ್ತದೆ. ಕಡಂಗಾಲ - ಬಿಟ್ಟಂಗಾಲದಲ್ಲಿ ಪಾರಣಮಾನಿ ಹಬ್ಬದಲ್ಲಿ ಕಲ್‌ಬೋಟಿ ಬಳಿ ಪಿಲ್ಲು ಭೂತ (ಆರೆ ನಗ್ನ ಶರೀರಕ್ಕೆ ಒಣಹುಲ್ಲು ಸುತ್ತಿಕೊಂಡ ಆಕೃತಿ) ಹಾಗು ಕುದುರೆ ಬೋಡುಕಳಿಯನ್ನೆ ಸುತ್ತಿಸಿ ಸಾಗುವರು. ಇವು ಐನ್‌ಮನೆಯ ಮುಂದೆ ಒಂದು ಸಂಖ್ಯೆಯಿಂದ ಮೂರು ಸಂಖ್ಯೆಯವರೆಗೂ ಇರುವುದುಂಟು. ಕೊಡವ ಜನಪದ ಗೀತೆಯಲ್ಲಿ. ಈ ಕುರಿತು ಬರುವ ವರ್ಣನೆ ಹೀಗಿದೆ:

*ಪಟ್ಟೆಕ್ ಚಿಂಗಾರ ಕಲ್ಲ್‌ರ ಬೋಟಿ*
*ಮಾಣಿಕ ಕಲ್ಲೊಂಡ್ ಕೆಜ್ಜ ಪಣಯೋ*
*ಚೋಮನ ತಳತುವ ಕಗ್ಗಲ್ಲ್ ಬೋಟಿ*
*ಚೋಮನ ಕಟ್ಟೊಳ ಕಗ್ಗಲ್ ಬೋಟಿ*
*ಪೋರಾಟ ಪೋಪಕ ಚೋಮನ ಕಟ್ಟ್‌ವ ಬೋಟಿ*
*ಪಾರೆ ಕಲ್ಲ್‌ಗೊಂಡ್ ಕೆಜ್ಜ ಪಣಯೊ*
*ಕನ್ನಡಾನುವಾದ*
*(ಹಟ್ಟಿಗೆ ಸಿಂಗಾರವು ಕಲ್ಲಿನ ಚಂದದ ಕಂಬವು*
*(ಮಣಿ) ಬಿಳಿಗಲ್ಲೊಳು ಮಾಡಿದ ಅಂದದ ಕಂಬವು*

*ಎತ್ತನು ಪಳಗಿಸೆ ಇಹುದೀ ಕಂಬವು*
*ಎತ್ತನು ಕಟ್ಟಲು ಇಹುದೀ ಕಂಬವು*
*ಹರಕೆಯ ಹೇರನು ಹೊತ್ತಿಹ ಎತ್ತಿನ ಕಂಬವು*
*ಬಂಡೆಯ ಕಲ್ಲಲಿ ಮಾಡಿಹ ಕೆಲಸವೆ ಸೊಗಸು)*

ವಿಶೇಷವೆಂದರೆ ಹಾತೂರು ಗ್ರಾಮದ ಕೊಡಂದೇರ ಮನೆತನದ ಒಂದು ಕುತ್ತಿ (ವಂಶ)ಯ ಐನ್ ಮನೆಯ ಮುಂದೆ ಕುದುರೆ ಕಲ್ಲುಬೋಟಿ, ಅರಮೇರಿಯ ನಾಯಕಂಡ ಐನ್ ಮನೆಯ ಮುಂದೆ ಸ್ಥಾನಕವೃಷಭವಿರುವ ಕಲ್‌ಬೋಟಿ ಇರುವುದು.

ಇನ್ನು ಐನ್ ಮನೆಯ ಹಸ್ತಿಸೋಪಾನವೇರಿದರೆ ಮುಂಬದಿ ಐಮರದ ಮೇಲಿನ ಮೊದಲ ಬಲಕಂಬ : ಪವಿತ್ರವಾದ *'ಕನ್ನಿಕಂಬ'* ವೆನಿಸಿಕೊಂಡಿದೆ. ಇದು *ಹಿರಿಯರ ಕಂಬ* ಎಂಬ ನಂಬಿಕೆಯ ಕಾರಣ, ಹೊಸ ವಧೂವರರು ಬರುವಲ್ಲಿ, ಹುತ್ತರಿ ಇತ್ಯಾದಿ ಹಬ್ಬಗಳಲ್ಲಿ ಇದರ ಕಾಲು(ಬುಡ)ಹಿಡಿದು ನಮಿದು ಪ್ರವೇಶಿಸಬೇಕು. ಕೈಮಡದಲ್ಲಿಯೂ ಹೀಗೆಯೆ ಕನ್ನಿಕಂಬವಿದೆ. ಅಚ್ಚರಿ ಎಂದರೆ ಧಾರವಾಡದ ಬಳಿಯ ಶೆಲವಡಿ ಗ್ರಾಮದ ವೀರಭದ್ರನ ಗುಡಿಯ, ಮುಂಬದಿ ಕಂಬವನ್ನು ಹೀಗೆಯೇ ಪವಿತ್ರ ಕಂಬವೆಂದು ಅಲಂಕರಿಸಿ, ಹೂಬಳೆ ಇಟ್ಟು *'ಉಡಿ ತುಂಬುವುದು'* ಮಾಡಿ ವೀರಭದ್ರ ಒಕ್ಕಲುಗಳು ಪೂಜಿಸುತ್ತಾರೆ. (ಧಾರವಾಡ ಜಿಲ್ಲೆ ಹಾನುಗಲ್ಲು ಪ್ರದೇಶಕ್ಕೆಲ್ಲ ಕೊಡಗಿನಂತೆ ಮತ್ಸ್ಯದೇಶವೆಂಬ ಹೆಸರಿತ್ತು. ಕೊಡಗಿನ ಯಡೂರು, ತಾಕೇರಿ ಹಾದಿಯ ಹಾನುಗಲ್ಲು ಅಂಚೆಗೆ ಸೇರಿದ ಊರಲ್ಲವೆ! ಕ್ರಿ. ಶ. ೧೧೯೫ರ ಯಡೂರ ಶಾಸನದ ಸೂಚನೆಯ ರೀತ್ಯಾ. ಹಾನುಗಲ್ಲುಕದಂಬ ವಂಶಿಕರಿಗೆ ಯಡೂರು, ತಾಕೇರಿ, ದುದ್ದಗಲ್ಲು ಪ್ರದೇಶ ಸೇರಿತ್ತು) ಕನ್ನಿಕಂಬದ ನಂತರ ಗೋಡೆಗೆ ಸೇರಿದ ಕಂಬಗಳನ್ನು ಪತ್ತಿ (ಭಿತ್ತಿ) ಕಂಬಗಳೆನ್ನುತ್ತಾರೆ. ಈ ಕಂಬಗಳನ್ನು ಕೂಡಿಸುವ ಐಮರದ ಮೇಲೆ ಸೊಸೆಯರು, ಹೊರಹೋಗುವ ಹೆಣ್ಣುಗಳು ಕೂರುವ ಪದ್ಧತಿ ಇಲ್ಲ. ಇಲ್ಲಿಂದ ಕೈಯ್ಯಾಲೆ ಕಳೆದು ಕಾಣುವ ಬಾಗಿಲುವಾಡಗಳಲ್ಲಿ, ಅರಳಿದ ಕಮಲ ಪತ್ರಗಳು, ಗಜಲಕ್ಷ್ಮಿ, ಸ್ತ್ರೀ-ಪುರುಷ ಹಾಗು ಮಕ್ಕಳು, ಜಾನಪದ ವೇಷಭೂಷದ ಶಿಲ್ಪಗಳೂ ಇರುತ್ತವೆ. (ಉದಾ: ೨ನೇ ಲಿಂಗರಾಜೇಂದ್ರ ಒಡೆಯನ ಕಾಲದಲ್ಲಿ ಹೆಸರುವಾಸಿ ಆಗಿದ್ದ ಕುಕ್ಲೂರು ಕುಂದ ಗ್ರಾಮದ ತಾತಂಡ ಮನೆತನ, ಹಾಗು ಹಾತೂರು-ಕುಂದಗ್ರಾಮದ ಕೊಡಂದೇರ ಮನೆತನದ ಐನ್‌ಮನೆಗಳು). ಒಳ ನಾಲ್ಕಟ್ಟುಮುಂದ್ ಮನೆಯ ನೆಲ್ಲಕ್ಕಿನಡುಬಾಡೆಯ ತೂಕುಂ ಬೊಳಿಚದ (ನೇಲು ಲಕ್ಷ್ಮಿ ದೀಪದ ನೆಲೆ) ಸನಿಹದಲ್ಲಿ ಮನೆಯ ಶುಭಕಾರ್ಯವೆಲ್ಲ ನಡೆಯುತ್ತದೆ. ಈ ಬೊಳಿಚದ ಸರಪಣಿಯಲ್ಲಿ ನಂದಿಯ ವಿಗ್ರಹವೂ ಇರುವುದುಂಟು (ಯವಕ ಪಾಡಿ-ಕಕ್ಕಬೆಯ ಅಪ್ಪಾರಂಡ ಐನ್‌ಮನೆ) ಈ ಬೊಳಿಚದ ಪಕ್ಕದಲ್ಲಿ ನೇತುಹಾಕಿದ ಮರದ ಬೋಗುಣಿ ರಚನೆಯಂಥ ಭಸ್ಮ ಸಂಪುಟ (ಅರಮೇರಿ ಬಾಚಿರ ಮನೆ) ಪೂಜಿಸುವಲ್ಲಿ, ಭಸ್ಮ ಹಚ್ಚಿಕೊಂಡು ಹೊರ ಹೋಗುವಲ್ಲಿ ಅನುಕೂಲಿಸಲು ಇರುತ್ತದೆ. ಐನ್ ಮನೆಯ ಒಳ ಆವರಣದ ನೈರುತ್ಯ ಮೂಲೆಯಲ್ಲಿ ಕನ್ನಿಕೋಂಬರೆ - ಪ್ರಾರ್ಥನಾ ಕೋಣೆ ಇರುತ್ತದೆ. ಇಲ್ಲಿಯೆ ಹಿರಿಯರಿಗೆ ವಾರ್ಷಿಕವಾಗಿ ಪ್ರತ್ಯೇಕ ಕಾರೋಣನೆಲೆ / ಕೈಮಡ ಇಲ್ಲದಿರುವವರು, (ಅರಪಟ್ಟು ಗ್ರಾಮದ ಐರಿರ ಜನಾಂಗದ ಅನ್ನಂಬಿರ) ಮೀದಿ (ಎಡೆ) ಇಟ್ಟು ಪ್ರಾರ್ಥಿಸುತ್ತಾರೆ. ಒಟ್ಟಾರೆ ಇದೊಂದು ಪ್ರಾರ್ಥನಾ ಕೋಷ್ಠ. ಈ ಕೆಳ ಆವರಣದ ಒಳವ್ಯೂಹದ ಮೇಲೆ ಮಹಡಿ ಇರುವುದೂ ಉಂಟು.

ಕೆಲವೆಡೆ ಐನ್ ಮನೆಯ ಹಿಂಬದಿ ಮತ್ತು ಮುಂಬದಿಯಲ್ಲಿ ಕೈಯಾಲೆ ಇದ್ದು ಪೂರ್ವ, ಪಶ್ಚಿಮ, ಉತ್ತರಗಳಲ್ಲಿ ಮಾತ್ರ ದ್ವಾರಗಳಿರುತ್ತವೆ (ಕುರ್ಚಿಯ ಅಜ್ಜಾಮಾಡ, ಯವಕಪಾಡಿಯ ಪರದಂಡ, ಬಲಮುರಿಯ ಕೆಂಬಟ್ಟಿಗಳ ಐನ್‌ಮನೆ), ಐನ್ ಮನೆಗಳ ಮಾಡು ಇಂದು ಹೆಂಚು, ಸಿಮೆಂಟ್ ಭಾಗಗಳನ್ನು ಹೊಂದಿದ್ದರೆ ಹಿಂದೆ ರಾಜರ ಅರಮನೆ ಸಹಿತವಾಗಿ ಇವುಗಳೂ ಹುಲ್ಲು ಹೊದಿಸಿದ ಮಾಡನ್ನು ಹೊಂದಿದ್ದುವು. ವರುಷಕ್ಕೊಮ್ಮೆ ಅದನ್ನು ಬದಲಾಯಿಸಲಾಗುತ್ತಿತ್ತು. ಈ ಹುಲ್ಲುಮಾಡುಗಳ ಕಾರಣವೆ ಬಹಳಷ್ಟು ಮನೆಗಳು ಆಗಾಗ್ಗೆ, ಕೆಲವೇಳೆ ಶತ್ರುಧಾಳಿಗಳಿಂದಾಗಿ ಬೆಂಕಿಗೀಡಾಗುತ್ತಿದ್ದುವು. ಮುವತ್ತೊಕ್ಕಲಿನ ಜಮ್ಮಾಮಾಪಿಳ್ಳೆ, ಅಮ್ಮತ್ತಿ ಬಳುಗುಂದ ಹಾಗು ಬೆಟ್ಟಗೇರಿ ಕೆಂಬಟ್ಟಿಗಳ ಐನ್ ಮನೆಗಳಲ್ಲಿ ಕೆಲವಕ್ಕೆ ಇಂದಿಗೂ (೧೯೮೩-೧೯೯೩ರ ವಿಷಯ) ಹುಲ್ಲುಮಾಡುಗಳು ಇವೆ. ರಿಕ್ಟರನು ಹೇಳುವಂತೆ ಐನ್ ಮನೆಗಳೆಲ್ಲವೂ ಚೌಕಾಕಾರವಾಗಿರದೆ ಆಯತಾಸ್ರವಾಗಿ ಕಾಣ ಬರುತ್ತವೆ. ಕೊಂಡದೇರ ಐನ್‌ಮನೆ ಸುಮಾರು ೬೨ ಅಡಿ ಉದ್ದ, ೩೫ ಅಡಿ ಅಗಲವಿದ್ದರೆ, ಬೇಟೋಳಿಯ ಪಟ್ಟಡ ಮನೆತನದ ಐನ್‌ಮನೆ ೪೭½ ಅಡಿ ಉದ್ದ, ೨೮½ ಅಡಿ ಅಗಲ; ಬಾಳೆಲೆ ಬಳಿಯ ಆದೇಂಗಡ ಐನ್‌ಮನೆ ೪೮ ಅಡಿ ಉದ್ದ, ೩೧ ಅಡಿ ಅಗಲ ವಿಸ್ತೀರ್ಣದವಾಗಿವೆ; ಹಾಗೆಯೇ ಸುತ್ತಳತೆ ಈಚೂರು ತೀತಾಮಾಡ ಐನ್‌ಮನೆ ೪೭ ಕೋಲು, ತೂಚಮಕೇರಿ ಪೆಮ್ಮಂಡ ೪೭ ಕೋಲು, ಮಗುಟಗೇರಿ ಚೀರಂಡ ಮನೆ ೪೭ ಕೋಲು, ಮೂಕಳಮಾಡಮನೆ ೩೩ ಕೋಲು, ಹೀಗೆ ಐನ್‌ಮನೆ ಆಯತ ಮಾದರಿಗಳಂತೆ ಕಾಣುತ್ತವೆ. ಬಹುಶಃ ದೊಡ್ಡವೀರ ರಾಜೇಂದ್ರ ಒಡೆಯನ ಕಾಲದ 'ವೀರರಾಜೇಂದ್ರ ಕೋಲು' ಅಳತೆಯ ಮಾದರಿಯನ್ನು ಐನ್‌ಮನೆಗಳು ಅನುಸರಿಸಿರುವಂತೆ ತೋರುತ್ತವೆ.

ಐನ್‌ಮನೆಯ ವ್ಯೂಹದ ಇನ್ನೊಂದು ಪ್ರಮುಖ ಕಟ್ಟಡ 'ಕೈಮಡ' - ವಂಶದ ಮೂಲಪುರುಷನ ಅಥವಾ ವಂಶವನ್ನು ಎತ್ತಿ ನಿಲ್ಲಿಸಿದವನ ಸ್ಮಾರಕ ಕಟ್ಟಡ. ಇದು ಮಾತ್ರ ಸಾಮಾನ್ಯವಾಗಿ ಚೌಕಾಕಾರದ ಚತುರಸ್ರ ಕಟ್ಟಡ. ಇವನೇ ಐನ್‌ಮನೆಯ ಮೂಲ ಪುರುಷ, ಗುರುಕಾರೋಣ, ವಂಶದ ದೇವರು. ಅದಾಗಿ ಕೊಡಗಿನಲ್ಲಿ ಇವನು ದೈವೀಕರಣಗೊಂಡ ಹಿರಿಯನೇ ವಿನಹ ಭೂತಾರಾಧನೆಯ ಸಂಕೇತನಲ್ಲ. ಈ ಕೈಮಡಗಳು, ಕೇವಲ ಸ್ಮಾರಕ ನೆಲೆ ಅಥವಾ

ಸಮಾಧಿ ನೆಲೆ ಅಥವಾ ವಂಶದ ವೀರನ ವೀರಗಲ್ಲು ಇರುವ, ಅಥವಾ ಸಾಲು ದೀಪಗೂಡುಗಳ ವೇದಿಕಾ ನೆಲೆ, ಲಿಂಗಶಿರವಿರುವ ವೇದಿಕಾ ಪೀಠಗಳ ನೆಲೆ ಆಗಿ ಮನೆತನದ ಎಲ್ಲ ಉಭಶುಭಗಳಿಗೆ ಪ್ರಾರ್ಥನಾ ನೆಲೆಯೂ ಆಗಿರುತ್ತದೆ. ವಾರ್ಷಿಕ ಹಬ್ಬ, ಸಾಂಸ್ಕೃತಿಕ ನೃತ್ಯಗಳು ಭಕ್ತಿ ಪೂರ್ವಕವಾಗಿ ಇಲ್ಲಿ ಹಾಗು ಐನ್‌ಮನೆ ಬಳಿ ನಡೆಯುತ್ತವೆ. ಕೈಲ್‌ಪೊಳ್ದುವಿನಲ್ಲಿ ಬೇಟೆಗೆ ಹೋಗುವಾಗ ಪ್ರದಕ್ಷಿಣೆ ತುಲಾಸಂಕ್ರಮಣದ ತೀರ್ಥೋದ್ಭವ ಸಮಯದಲ್ಲಿ ಬೊತ್ತೆಲೆ (ಕಾವೇರಿ ಹರಿವಿನ ಸಂಕೇತದ ಕೈಬಳ ಬಳ್ಳಿ ಅಥವಾ ಕಾಂಡಬೊತ್ತುವನ್ನಿಟ್ಟ ದೋಸೆ ಹಿಟ್ಟು ನಿವೇದಿಸುವ ಸಂಕೇತ) ಹುತ್ತರಿಯಲ್ಲಿ ಭತ್ತದ ಕದಿರು ಇವುಗಳನ್ನೆಲ್ಲ ಕೈಮಡ, ಐನ್‌ಮನೆ ಬಳಿ ಇಟ್ಟು ಪ್ರಾರ್ಥಿಸಿ ಸಾಗುತ್ತಾರೆ. ಜಮ್ಮಭೂಮಿ ಗದ್ದೆಗೂ ಬೊತ್ತು ನಿಲ್ಲಿಸುತ್ತಾರೆ. ಕಾರಣ ಇವೆಲ್ಲ ಹಿರಿಯನಿಗೆ ಬಂದ, ಸಂಪಾದಿಸಿದ ಆಸ್ತಿ. ಹೀಗಾಗಿ ವಂಶ ಅವನ ಹೆಸರಿನಲ್ಲಿಯೆ ನಡೆಯುತ್ತದೆ. ಅಂದರೆ ಮನೆಪದ (ಮನೆತನದ ಹೆಸರು) known or unknown ancestor ನ ಐತಿಹಾಸಿಕ ಸಂಕೇತವಾಗಿ ಕಾಣುತ್ತದೆ. ಅವನನ್ನು ಏಳುತಲೆ ಕಾರೊಣ, ಐದು ತಲೆ ಕಾರೊಣ, ಮೂರು ತಲೆ ಕಾರೊಣ ಎಂದು ವಂಶ ನಿಲ್ಲಿಸಿದವನ ಕುರಿತು ಹೇಳುವುದುಂಟು. ಇದಕ್ಕೆ ವಂಶವೃಕ್ಷ ಪಟ್ಟಿಯನ್ನು ಗಮನಿಸಿದರೆ ತಾಳೆ ಕಾಣುತ್ತದೆ. [ಸದ್ಯ ಮುಗಟಗೇರಿಯ ಚೀರಂಡ ಮನೆತನದ ವಂಶವೃಕ್ಷವನ್ನು (೧ನೇ ಪಟ್ಟಿ) ಉದಾ: ಆಗಿ ನೀಡಿದೆ. ಈ ವಂಶಪಟ್ಟಿಯು ಮನೆಪೆದಗಳ, ಆರಾಧಿಸುವ ದೈವದ ಪ್ರಭಾವದ ವ್ಯಕ್ತಿನಾಮ, ಹಾಗೂ ವ್ಯಕ್ತಿಗಳ ಆರೋಗ್ಯ ಪೂರ್ಣ ಜೀವಿತಾವಧಿ, ಸಂತಾನ ಸಂಖ್ಯೆ, ಆಧುನಿಕ ಪರಿವರ್ತನೆ, ಹೀಗೆ ಕೌಂಟುಂಬಿಕ ಪರಂಪರೆಯ ಚಿತ್ರವನ್ನು ನೀಡುತ್ತದೆ.] ಈ ವ್ಯಕ್ತಿಯ ಹಿಂದಿನವರು ಇದ್ದರೂ ಇವನಿಂದ ವಂಶಕ್ಕೆ ಹೆಸರು ಬಂತೆಂದು ವೀರಗೌರವ ತೋರುವ ಬಗೆ ಅದು. ಏಳು ತಲೆ ಕಾರೊಣರು ಐತಿಹಾಸಿಕವಾಗಿ ವರ್ಷಾವಧಿ ಗಮನಿಸಿದರೆ ಹಾಲೇರಿ ವಂಶದರಸರ ಕಾಲದ ವೀರರಾಗಿ ಐತಿಹಾಸಿಕ ಪುರುಷರಾಗಿ ಕಾಣುಬರುತ್ತಾರೆ. ಅದಕ್ಕೂ ಹಿಂದಿನ ಮನೆತನಗಳ ಹೆಸರುಗಳು ಕೆಲವು ಶಾಸನಗಳಲ್ಲಿ ಸೂಚಿತವಾಗಿವೆ. ಇವರುಗಳನ್ನು ಕುಡಿಬೀರರು, ಪಡೆಬೀರರೆಂದು ಹಾಲೇರಿ ಅರಸರ ಕಾಲದಲ್ಲಿ ಖಚಿತವಾಗಿ ನಿರ್ದಿಷ್ಟಗೊಳಿಸಿರುವುದೂ ವಂಶೀಕರಿಂದಲೂ ತಿಳಿದುಬರುತ್ತದೆ. ಈ ವಂಶದವರಲ್ಲಿ ಆಯಾ ವರ್ತಮಾನದಲ್ಲಿ ಬದುಕಿರುವ ಅತ್ಯಂತ ಹಿರಿಯನನ್ನು *ಪಟ್ಟೆದಾರ*ನೆನ್ನುತ್ತಾರೆ. ವಂಶದ ಅಂತರಂಗ ಹಾಗು ಬಹಿರಂಗ ವ್ಯವಹಾರಗಳನ್ನೆಲ್ಲ ಅವನು ಮುಖ್ಯಸ್ಥನಾಗಿ ನಿರ್ವಹಿಸುತ್ತಾನೆ. ಇವನನ್ನು 'ಕೊರೋಕ್ಕಾರ' ಎಂದು ಕರೆಯಲಾಗುತ್ತಿತ್ತು ಎಂದರೆ ಮನೆಯ ವ್ಯವಹಾರಗಳಿಗೆ ಬೆಳಕು (ದಾರಿ) ತೋರುವವನು ಎಂಬರ್ಥದಲ್ಲಿ ಅವನನ್ನು 'ಸೂರ್ಯ'ನ ಸ್ಥಾನದಲ್ಲಿ ನಿಲ್ಲಿಸಿದ್ದರೆಂದು ತೋರುತ್ತದೆ (ಕೋರಸ್ವಾಮಿ ಎಂಬುದು ಜನಪದ ಮೂಲದಲ್ಲಿ ಸೂರ್ಯನಿಗೆ ಅನ್ವಯಿಸಿ ಹೇಳುವುದಿದೆ. ಅದಾಗಿ ಇಂಥ ಊಹೆ). ಈ ಕೊರೋಕ್ಕಾರನ ಹೆಂಡತಿಯನ್ನು 'ಮನೆಪಣಿಕಾರ್ತಿ' ಎನ್ನುತ್ತಿದ್ದು ಮನೆಯ ಒಳ ವ್ಯವಹಾರವೆಲ್ಲ ಈಕೆಯದೇ ಆಗಿರುತ್ತಿತ್ತು. ಇದನ್ನು ನೋಡಿದರೆ ವೇದಕಾಲದ 'ಘೋಷಾ'ಳಿಗಿದ್ದ ಮನೆಯ ಹೊಣೆ ನೆನಪಿಗೆ ಬರುತ್ತದೆ.

ಪಿತೃಪ್ರಧಾನ ವ್ಯವಸ್ಥೆಯ ಒಕ್ಕ-ಒಕ್ಕಾಮೆ-ತಕ್ಕಾಮೆ ಎನಿಸಿದರೂ ಸ್ತ್ರೀಯರೂ ಕಾರಣ ಪುರುಷೆಯರಾಗಿ, ಕಾರೊಣಬ್ಬೆಯರಾಗಿ ಕುತ್ತಿ (ವಂಶ) ನಿಲ್ಲಿಸಿರುವುದೂ ಇದೆ. ಅಂತೇ ಹಳ್ಳಿಗಟ್ಟುವಿನಲ್ಲಿ *ಪಿಂಜದೀರ ಕಾರಣಬ್ಬೆ* ಕೈಮಡವಿದೆ; ಕಾರೊಣ - ಕಾರಣಬ್ಬೆಯ ದಂಪತಿ ಕೈಮಡ ಮೂಕಳೇರ ಮನೆತನದಲ್ಲಿದೆ. ಕೊಡಗಿನ ಸಂಸ್ಕೃತಿ ಹೆಣ್ಣಿಗೂ ಗೌರವ ಸಲ್ಲಿಸಿದ ಬಗೆ ಇದು. ವ್ಯವಸಾಯದ ಅಧಿದೇವತೆ ಇಗ್ಗುತಪ್ಪ ಹೇಗೆ ಭಾವನಾತ್ಮಕ ದೇವತೆಯೋ, ಜಲನಿಧಿ ದೇವತೆ ಕಾವೇರಮ್ಮೆ ಅಲ್ಲಿನವರಿಗೆ ಕುಲದೇವತೆಯಾದ ಕಾರಣ, ಸ್ತ್ರೀ ಗೌರವ ಸಹಜವಾಗಿ ಮೇಳೈಸಿದೆ. ಮನೆತನದ ರಕ್ಷಕ ಪರಿವಾರ ದೇವತೆಗಳಾಗಿ ಗೂಳಿಗ (ಹಾಲು ಬರುವ ಮರದಡಿ ಶಿಲಾಸಂಕೇತ), ನಾತ, ಪೂದ ಇವರಿಗೆಲ್ಲ ವಾರ್ಷಿಕ ಪೂಜೆ, ಹಾಗು ಕೈಮಡಕಾಡು (sacred grove) ಅನ್ನು ನಿರ್ವಹಿಸಲಾಗುತ್ತದೆ. ಪರಿಸರ ನಿರ್ವಹಣಾ ಕಾಳಜಿಯನ್ನು ತೋರಲಾಗುತ್ತದೆ. ಇಂಥ ಕುಟುಂಬದ - ವಕ್ಕದ - ಸುಂದರ ಐನ್ ಮನೆ ಬದುಕನ್ನು ಹುತ್ತರಿ ಹಬ್ಬದಲ್ಲಿ, ಭದ್ರಕಾಳಿಯ ಬೇಡು ಹಬ್ಬದಲ್ಲಿ, ವೇಷ ಪರ್ಯಟನ (fancy dress) ಮಾಡುತ್ತ, ಮನೆ ಮನೆ ಹಾಡುವ (ಪುತ್ತರಿ ಬಟ್ಟೆಪಾಟ್) ಜನಪದ ಗೀತೆಯಲ್ಲಿ ತಕ್ಕರಮನೆ ಕಂಡು ಹೀಗೆ ವರ್ಣಿಸುತ್ತಾರೆ :

*ತಾನಿಯ ಲೇಲೊಳೆ ಲೇಲೊಳೆ ಲೆಲ್ಲಾ*

......

*ಅಯ್ಯೋರ್ ತಕ್ಕಂಡ ಓಣ ಪಣಿಯೋ*
*ಓಣೆಕ್ ಸಿಂಗಾರ ಓಣ ತೆರಮೆ*
*ಚಾಯುಂಡ್ ಚಾಯುಂಡ್ ಓಣಪಣಿಯೋ*

......

*ಮೊಟ್ಟ್ ಕಡಕಣೆ ಕಯ್ಯಾಲೆ ಬಾಳೋ*
*ಸೂರಿಯ ಕೈಯ್ಯಾಲೆ ಜಾಟಿ ಕಡಂದ*
*ಸಾಲಿಯ ಕಟ್ಟೊಳಿ ಜಾಟಿ ಕಡಂದ*

..................................

*ಕೈಪಕ್ಕೆ ಪೂಪೋಲೆ ಕೈ ಮಕ್ಕಳೋ ಕಂಡೆ*
*ಕುಂಬಳ ಪೂಪೋಲೆ ಏಂಡಜ್ಜೀನ ಕಂಡೆ*
*ಕೆಂಬತಿ ಪೂಪೋಲೆ ಆ ಪೊಂಗಳ ಕಂಡ*

..................................

*ಅನ್ನನೆ ತಕ್ಕಂಡ ಒಕ್ಕ ಬದುಕು*
*ವಕ್ಕಕೊತ್ತಾಚಾರ ಪಾಡ್‌ಚೊ ಎಂಗ*
*ಜ್ಯೋತಿಕೇ ತೊತ್ತ್ ಫಲತ್ ಪಿರಿಯ*
*ಮನೆಜನವೆಲ್ಲ ತಣ್ಣನೆ ಬಾಳೋ*
*ದೇವಂಗೊತ್ತಾಚಾರ ಪಾಡ್‌ಚೊ ಎಂಗ*
*ರಾಜರಾ ಪಾಡಿತ್ ಇಕ್ಕನ ಪಾಡ್‌ಚೊ ಎಂಗ*
*ದೇವಂಗೊತ್ತಾಚಾರ ಪಾಡ್‌ಚೊ ಎಂಗ*

.....................................

ಆದಿ ಮೂಲ ಲೇಲಯ್ಯ ಲೇಲೊ

**ಕನ್ನಡಾನುವಾದ**

*(ತಾನಿಯ ಲೇಲೊಳ ಲೇಲೊಳೆ ಲೆಲ್ಲಾ*

......

*ಒಕ್ಕದ ಆಯ್ಯನ (ಒಡೆಯ) ಮನೆ ಓಣಿಯ ಕೆಲಸವು ಅಂದ*
*ಓಣಿಯ ಇಬ್ಬದಿಗಿದೆ ಚಂದದ ಜರಿಗಿಡ ಅಂದ*
*ಚೆನ್ನಿದೆ ಚೆನ್ನಿದೆ ಓಣಿಯ ಕಲ್ಲಿನ ಕೆಲಸ*

......

*(ಏಳ್) ಮೆಟ್ಟಲು ದಾಟಲು ಕಾಂಬುದು ಕೈಸಾಲೆ*
*ಸೂರ್ಯನು ಕೈಸಾಲೆಯ ದಾಟಲು ಕಿರಣವು ಮಾಲೆ*
*ಬಾಗಿಲ ಒಳಗೂ ದಾಟುತ ಬರುವುದೆ ಆ ಲೀಲೆ!*

.....................................

*ಒಕ್ಕದ ಮನೆಯೊಳು ಹೊಂಬಣ್ಣದ ಎಳೆಮಕ್ಕಳ ಕಂಡೆ*
*ಕುಂಬಳ ಹೂಬಣ್ಣದ ಬಿಳಿದಲೆ ಅಜ್ಜಿಯ ಕಂಡೆ*
*ಕೆಂಬಣ್ಣದ ಚೆಲುವಿನ ಚಂದದ ಹೆಣ್ಗಳ ಕಂಡೆ*

.....................................

*ಹೀಗಿದೆ ತಕ್ಕನ - ಆಯ್ಯನ ಮನೆ ನೆಮ್ಮದಿ ಬದುಕು*
*ಒಕ್ಕಕೆ ಮುಡಿಪಿಹ ಆಚಾರವೆ ಹಾಡಿದೆವಿಂದು*
*ದೀಪಕೆ ನಮಿದು ಪ್ರಾರ್ಥಿಪೆವಿಂದು*
*ಈ ಮನೆಜನ ತಂಪಲಿ ಇರಲೆಂದು*
*ರಾಜರ ಕಾಲದ ಹಾಡಿದು ಹಾಡಿದೆವಿಂದು*
*ದೇವರ ಮೀಸಲ ಆಚಾರವ ಹಾಡಿದೆವಿಂದು*

.....................................

*ಆದಿಮೂಲನೇ ನಿನಗೆ ನಮೋ ನಮೋ.*

- ಹೀಗೆ ರಾಜರ ಕಾಲದ ಐನ್‌ಮನೆಯ ವರ್ಣನೆಯಲ್ಲಿ ವಾಸ್ತುವ್ಯೂಹ ಹಾಗು ನೆಮ್ಮದಿಯ ಬದುಕಿನ ಚಿತ್ರವನ್ನು ಈ ಗೀತೆಯು ತೋರುವಂತಿದೆ. ಐನ್‌ಮನೆ, ಒಟ್ಟಾರೆ ವಂಶಿಕ ಸಮುದಾಯದ ಶೋಭಾಗ್ರಹ. ಆದರೆ ವಂಶಿಕ ಶಾಖೆಯವರು ಬೇರೆಡೆ ಜಮೀನು ಕೊಂಡೋ (ಆಸ್ತಿ ಮಾಡಿ), ಏನೋ ಕಾರಣದಿಂದಲೋ, 'ಕೊಪ್ಪ' (ವಲಸೆ ನೆಲೆ) ಸೃಷ್ಟಿಸಿಕೊಂಡು ಆಧುನಿಕ ವಾಸ್ತುಶೈಲಿಯ ಮನೆಗಳನ್ನು ಕಟ್ಟಿಕೊಂಡಿದ್ದರೂ ಐನ್‌ಆರ್ವಾಡುವಿನ ಮೇಲೆ ಇಡೀ ವಂಶದ ಎಲ್ಲ ಸದಸ್ಯರಿಗೂ ಸಾಂಸ್ಕೃತಿಕ-ಆಸ್ತಿಯಾಗಿ ಹಕ್ಕಿರುತ್ತದೆ.

ಕೆಲವು ಸಂದರ್ಭಗಳಲ್ಲಿ ಐನ್‌ಮನೆ ಮತ್ತು ವಂಶ ಕಾರೋಣರ ಕೈಮಡ ಬೇರೆ ಬೇರೆ ಊರಿನಲ್ಲಿರುವ ಉದಾಹರಣೆ ಇವೆ. ಬಾಚಿನಾಡಂಡ ಮನೆತನದ ಸದ್ಯದ ಐನ್‌ಮನೆ ಅರಪಟ್ಟು ಗ್ರಾಮ (ವೀರರಾಜೇಂದ್ರ ಪೇಟೆ ತಾ.)ದಲ್ಲಿದೆ. ಕೈಮಡ (ಸೋಮವಾರಪೇಟೆ ತಾ.) ಬಿಳಿಗೇರಿಯಲ್ಲಿದೆ. ಅದಕ್ಕೆ ಕಾರಣವಿದೆ. ರಾಜರಕಾಲದಲ್ಲಿ ಈ ಮನೆತನದ ನಾಚಯ್ಯ ದಿವಾನ ಆಗಿದ್ದನಂತೆ. ಅವನಿಗೆ ಉಂಬಳಿ (೧ನೇ ದರ) ದೊರೆತು ಎಲೆಚಂಡ ಮನೆಯ ಸ್ವತ್ತಿಗೆ ನಿಲ್ಲುವಂತಾಯಿತು. ಅಂತಾಗಿ ಅಲ್ಲಿ ಐನ್‌ಮನೆ ಕಟ್ಟಲಾಯಿತು. ಬಿಳಿಗೇರಿಯಲ್ಲಿ ಐನ್‌ಆರ್ವಾಡು ಇದ್ದು, ರಾಜಂಡಬಾಣೆ, ಕಡಂಗ ಎಲ್ಲ ಸನಿಹದಲ್ಲಿದ್ದುವು. ಆಗಿನ ವಂಶಿಕರು ಹೋದರೂ ಐನ್‌ಆರ್ವಾಡು ಅವಶೇಷ, ಕೈಮಡ ಆಸ್ತಿ ಇಲ್ಲೇ ಉಳಿಯಿತು. ಅಂದರೆ ಮೂಲ ಆರ್ವಾಡು ಬಿಳಿಗೇರಿಯಲ್ಲಿ ಇತ್ತು ಎಂದಾಗುತ್ತದೆ. ಹೀಗಾಗಿ ಐನ್‌ಮನೆಯ ತಾತ್ವಿಕ ಆಶಯ ಅಂತರ್ಗತವಾಗಿ ಉಳಿದು ಬಂದಿದೆ. ಈಗ ಬಿಳಿಗೇರಿಯಲ್ಲಿ ವಂಶಿಕರು ಬೇರೆ ಮನೆ ಕಟ್ಟಿಕೊಂಡು ವಂಶದ ವೀರಗಲ್ಲು-ಕೊಲೆಗಲ್ಲು, ಕೈಮಡಗಳಿಗೆ ವಾರ್ಷಿಕ ಹಬ್ಬ ಹಾಗೂ ವಂಶಿಕ ನಡಾವಳಿಗಳನ್ನು ಪಾಲಿಸಿಕೊಂಡು ಬರುತ್ತಿದ್ದಾರೆ*. ೧೯೯೪ರಲ್ಲಿ ಕೈಮಡ ಕಟ್ಟಡವನ್ನು ಜೀರ್ಣೋದ್ಧಾರ ಮಾಡಿದ್ದಾರೆ.

ಇನ್ನು ಸುಳ್ಯ ಪರಿಸರಕ್ಕೆ ಹಾಸನ ಜಿಲ್ಲೆ ಐಗೂರು ಸೀಮೆಯಿಂದ ಕ್ರಿ. ಶ. ೧೪೫೦ - ೧೬೦೦ರ ಮಧ್ಯೆ ವಲಸೆ ಬಂದ ಗೌಡ ಜನಾಂಗದವರ ಐನ್‌ಮನೆಯೂ ಗಮನಾರ್ಹವಾಗಿದೆ. ಅವರಲ್ಲೂ ಕೈಯ್ಯಾಲೆ (ಮನೆಯ ಜಗಲಿ - ಕೈಶಾಲೆ) ಅಂದರೆ ಜಗಲಿ ಮನೆಯ ಒಳಗೂ ಅಲ್ಲದ, ಹೊರಗೂ ಅಲ್ಲದ ಈ ನಡುವಿನ ಸ್ಥಳದಲ್ಲಿ, ಬಂದ ಅತಿಥಿಗಳನ್ನು ಮೊದಲು ಬರಮಾಡಿಕೊಂಡು ಕೂರಿಸುವ ಜಾಗೆ ಇದು. ಅವಿಭಕ್ತ ಕುಟುಂಬ ಪದ್ಧತಿ ಇವರಲ್ಲಿದ್ದು ತರವಾಡಿನ ಮನೆ - ಐನ್‌ಮನೆ ವ್ಯವಸ್ಥೆ ಇದೆ. ಅಡುಗೆ ಮನೆಯಲ್ಲಿ ಕನ್ನಿಕಂಬವಿದ್ದು ಅದೇ ಅವರಿಗೆ ಅತ್ಯಂತ ಪವಿತ್ರ ಜಾಗ. ಊಟ ಮಾಡುವ ಜಾಗ 'ಉಂಬೊಳಗೆ' ಒಳಗೇ ಇದೆ. ಈ 'ಕನ್ನಿಕಂಬ'ವನ್ನು ಅಡಿಗೆ ಮನೆಯಲ್ಲಿ ಹುಗಿಯುವಾಗ ಅದರಡಿಯಲ್ಲಿ ಚೂರು ಚಿನ್ನವನ್ನು ಹಾಕಿರುತ್ತಾರೆ. ಅದಿಲ್ಲದ ಗೌಡರ ಮನೆ ಇಲ್ಲ. ಅವರ ಐನ್‌ಮನೆಯ ಚಿತ್ರ ಈ ಕೆಳಗಿನಂತಿದೆ.*೧೪



**ಗೌಡಜನಾಂಗದ ತರವಾಡಿನ ಮನೆನಕ್ಷೆ**

ಸರಕಿನ ಕೋಂಬ್ರೆ
ಕೋಂಬ್ರೆ
ಕೋಂಬ್ರೆ
ಕೋಂಬ್ರೆ
ಕೋಂಬ್ರೆ
ಉಂಬೊಳಗೆ
ಚಾಂಡಾರ
ಬಾಡೆ
ಕೋಂಬ್ರೆ
ಕೈಯ್ಯಾಲೆ
ಚಿತ್ತೆ ಕೋಂಬ್ರೆ
ಕೋಂಬ್ರೆ

---

* (ಶ್ರೀ ಬಾಚಿನಾಡಂಡ ಕೆ. ಕುಟ್ಟಪ್ಪ ಹಾಗೂ ಶ್ರೀ ಬಿ. ಕೆ. ಪೂಣಚ್ಚ ಅವರು ತಿಳಿಸಿದ ವಿಷಯ)

## ಚೇರಂಡ ಮನೆತನ (೧ನೇ ಪಟ್ಟೆ) ಮುಗಟಗೇರಿ ಗ್ರಾಮ (೧೯೮೩ರ ಮಾಹಿತಿ)

### ವಂಶವೃಕ್ಷ




* ಈ ಮನೆತನದ ಹಿರಿಯ ಒಬ್ಬ ಉಪ ಪಾಳೇಗಾರನಾಗಿ ಮತ್ತೂರು ಮುಕ್ಕಾಟಿ ನಾಯಕನ (೧೭ನೇ ಶತಮಾನ?) ಕಾಲದಲ್ಲಿದ್ದು ಅವನಿಂದ ನೆರವು ಪಡೆದನಂತೆ.

** ಈ ಮನೆತನದ ೪೭ ಕೋಲು ಸುತ್ತಳತೆಯ ಐನ್‌ಮನೆಗೆ ಹುಲ್ಲು ಮಾಡು ಇದ್ದಿದ್ದು ಸುಮಾರು ೧೯೩೦ರಲ್ಲಿ ಬೆಂಕಿ ಬಿದ್ದಿತ್ತು. ಆನಂತರ ೨ ಬಾರಿ ದುರಸ್ತಿ ಆಯಿತು.

*** ಈ ಮೇಲಿನ ಮಾಹಿತಿಗಳನ್ನು ಶಿಕ್ಷಕರಾಗಿದ್ದ ಶ್ರೀ ಚೇರಂಡ ಪಿ. ಮಾದಯ್ಯನವರಿಂದ ೨೪.೯.೧೯೮೩ರಲ್ಲಿ ಸಂಗ್ರಹಿಸಲಾಯಿತು. ಆಗಿದ್ದ ಮನೆತನದ ಪಟ್ಟೆದಾರರು ಶ್ರೀ ಸಿ. ಎ. ಕಾರ್ಯಪ್ಪ (೬೫).



ಹಾಲೇರಿವಂಶದ ನಾಲ್ಕಟ್ಟು ಅಪ್ಪಂಗಳ ಅರಮನೆ ಮತ್ತು ಕಲ್‌ಬೋಟಿ



ಅಪ್ಪಂಗಳ ಅರಮನೆ ಒಳತೊಟ್ಟಿ ಬಳಿ ಹಾಲೇರಿ ರಾಜವಂಶೀಯರು
(ಶ್ರೀ ಬಸವರಾಜ ಒಡೆಯರ್)



i. ದೇಶತಕ್ಕ ಕಳ್ಳಿಯಂಗಡ ಐನ್‌ಮನೆ.
ii. ಕೊಂಡದೇರ ಐನ್‌ಮನೆಯ ಕಕ್ಕಟ್ಟುಒಣಿ (ಹಾತೂರು-ಕುಂದ)



i. ಕುಮಟೂರು ಬಾಚರಣಿಯಂಡ (ಕೊಪ್ಪ)ಐನ್‌ಮನೆ, ಕಲ್‌ಬೋಟಿ, ಬಟ್ಟಿಗಲ್ಲು, ಉಬ್ಬಿಗಲ್ಲು
ii. ಮೈತಾಡಿ ಚಾಮಿಯಾಲ್‌ನ ಜಮ್ಮ ಮಾಪಿಳ್ಳೆಗಳ ಐನ್‌ಮನೆ



ಫೀಲ್ಡ್ ಮಾರ್ಷಲ್ ಕೊಡಂದೇರ ಎಂ. ಕಾರಿಯಪ್ಪ ಅವರ ಐನ್‌ಮನೆಯ ತುಂಬಿಸೂತ್ರ, ಬಾಗಿಲವಾಡದ ಶಿಲ್ಪ, ನೆಲ್ಲಕ್ಕಿನಡುಬಾಡೆ, ತೂಕುಂಬೊಳಿಚ.



ನೆಲ್ಲಕ್ಕಿ ನಡುಬಾಡೆಯಲ್ಲಿ ದಂಪತಿ ಮುಹೂರ್ತ
[ಈ ಛಾಯಾಚಿತ್ರಕೃಪೆ : ಶ್ರೀ ಎ. ಸಿ. ಕಾರ್ಯಪ್ಪ ಮತ್ತು ಟಿ. ಎಂ. ಪಿ. ಲಕ್ಷ್ಮಣ್ (ಪೋಡುಬೀಟ)]



i. ಯವಕಪಾಡಿ-ಕಕ್ಕಬೆ ಅಪ್ಪಾರಂಡ ಐನ್‌ಮನೆಯ ನಂದಿಸಹಿತ ತೂಕುಬೊಳಕು
ii. ಅರಮೇರಿ ಬಾಚಿರ ಐನ್‌ಮನೆಯ ಭಸ್ಮ ಸಂಪುಟ



ಕುಂದಂಗಾಲ-ಬಿಟ್ಟಂಗಾಲ ಪಾರಣಮಾನಿ ಹಬ್ಬದಲ್ಲಿ ಐನ್‌ಮನೆ ಬಳಿ ಬಿಲ್ಲು ಭೂತ
ಕಳಿವೇಷಗಳು ಮತ್ತು ಕುದುರೆ ಪೋಡುಕಳಿ



i. ಅರಮೇರಿ ಹುತ್ತರಿ ಹಬ್ಬದಲ್ಲಿ ದಲಿತರ ಕಾಪಳಕಳಿ
ii. ಪನ್ನಂಗಾಲತಮ್ಮೆ ಹಬ್ಬದಲ್ಲಿ ಐನ್‌ಮನೆಯ ಕಲ್ಲುಬೋಟಿ ಬಳಿಯಿಂದ ಎತ್ತುಪೋರಾಟ



ಹುತ್ತರಿ ಹಬ್ಬದಲ್ಲಿ ಅರಮೇರಿ ಐನ್‌ಮನೆ ಕಣದ ಕಲ್ಬೋಟಿಯ ಬಳಿ ಕದಿರುಪೂಜೆ

ಬಿಳಿಗೇರಿಯಲ್ಲಿನ ಬಾಚಿನಾಡಂಡ ಮನೆತನದ (ರಾಜಂಡಬಾಣೆ) ಕೈಮಡ ಮತ್ತು ವೀರಗಲ್ಲುಗಳು

## ಐನ್‌ಮನೆಯ ತಳನಕ್ಷೆಗಳು

### ಪೂರ್ವಮುಖಿ ಐನ್‌ಮನೆ

ಕನ್ನಿ ಕೋಂಬರೆ
ಉಗ್ರಾಣ
ಕೋಂಬರೆ
ಕೋಂಬರೆ
ಕೋಂಬರೆ
ಕೋಂಬರೆ
ಕೋಂಬರೆ
ಕೋಂಬರೆ
ನೆಲ್ಲಕ್ಕಿ ನಡುಬಾಡೆ
ಭಸ್ಮಸಂಪುಟ
ನಾಲ್ಕಟ್ಟ್ ಮುಂದ್ ಮನೆ ಒಳತೊಟ್ಟು
ನೇಲುಲಕ್ಕಿದೀಪ
ಉಂಬಳಮನೆ
ಉರಾಮನೆ
ಕೋಂಬರೆಗಳು
ಕಂಬ
ತುಂಬಿಸೂತ್ರದ ಕಿಟಕಿ
← ಕೈಯಾಲೆ →
ಐಮರ
ಪತ್ತಿಕಂಬ
ಕಂಬ
ಕಂಬ
ಕನ್ನಿಕಂಬ
ತೆತ್ತಿ (ವಸಾರೆ)
ಕಲ್ಲುಬೋಟಿ - ಅಂಗಳ
ಪಾದಶುದ್ದಿಗಲ್ಲು
ಬಕ್ಕಪರೆ, ಕಕ್ಕಟ್ಟು
← ಗದ್ದೆ →

---

← ಜಮ್ಮ ಗದ್ದೆ →
ಪೊಟ್ಟಕಡಂಗ
ಕೈಮಡ
ಕೊಟ್ಟಿಗೆ
ಹೊರಮನೆ
ಹೊರಮನೆ
ಬಕ್ಕಬಾಗಿಲು ಕಕ್ಕಟ್ಟು
ಹೊರಮನೆ
ಹೊರಮನೆ
ಅಂಗಳ
ಕಲ್ಲು ಬೋಟ
ಹಸ್ತಿಸೋಪಾನ
ವಸಾರೆ
ವಸಾರೆ
ಕೈಯಾಲೆ
ಪತ್ತಿಕಂಬ
ಕನ್ನಿಕಂಬ
ಐಮರ ಪಟ್ಟ
ತುಂಬಿಸೂತ್ರ
ನೆಲ್ಲಕ್ಕಿನಡುಬಾಡೆ
ನಾಲ್ಕಟ್ಟು ಮುಂದ್ ಮನೆಯ ಒಳ ತೊಟ್ಟು
ನೇಲುಲಕ್ಕಿದೀಪ ಮತ್ತು ಭಸ್ಮಸಂಪುಟ
ಕಂಬ
ಕೋಂಬರೆಗಳು
ಉಂಬಳಮನೆ
ಕೋಂಬರೆ
ಕನ್ನಿ ಕೋಂಬರೆ
ಅಡುಗೆ ಕೋಂಬರೆ
ಕೋಂಬರೆ

ಕುರ್ಚಿಗ್ರಾಮದ ಅಜ್ಜಮಾಡ ಐನ್‌ಮನೆ : ಪಶ್ಚಿಮಮುಖಿ ಪ್ರವೇಶದ್ವಾರ;
ಕನ್ನಿಕೋಂಬರೆ ನೈರುತ್ಯದ ಬದಲು ಈಶಾನ್ಯಕ್ಕಿದೆ.

ಕೊಡಗಿನಲ್ಲಿಯೂ ಹಾಸನ ಅರಕಲಗೂಡು, ಐಗೂರು ಕಡೆಯಿಂದ ಬಂದ ಗೌಡ ಜನಾಂಗದವರಿದ್ದಾರೆ. ಕೊಡಗಿನ ಗಂಗರ ಕಾಲದ ಶಾಸನಗಳಲ್ಲಿಯೂ ಉಕ್ತವಾಗಿರುವಂತೆ ಮೊದಲಿಂದಲೂ ಇದ್ದ ಗೌಡಜನಾಂಗದವರು ಇಂದು ಸೂಳ್ಯ - ಸಂಪಾಜೆಯ ಶೈಲಿಯನ್ನು ಹಾಗು ಕೊಡಗಿನ ಒಳ ಪ್ರಾದೇಶಿಕ ವೈಶಿಷ್ಟ್ಯಗಳನ್ನೆ ತಮ್ಮ ಮನೆಗೆ ಬಳಸಿಕೊಂಡಿದ್ದಾರೆ. ಕೆಲವರಲ್ಲಿ ಕೈಮಡಗಳೂ ಇವೆ. (ಅಯ್ಯಂಗೇರಿ ಗ್ರಾಮದ ಪೆಮ್ಮುಡೀರ ಮನೆತನಕ್ಕೆ ಕೈಮಡವಿದ್ದು ಪಡೆಬೀರನ ನೆಲೆ ಪಡೆದಿದೆ. ನಾಪೋಕ್ಲು ಬೆಟ್ಟಗೇರಿಯ ಗೌಡ ಅನ್ನಚ್ಚಿರ ಮನೆತನಕ್ಕೂ ಹೀಗೆಯೇ ಕೈಮಡವಿದೆ.

ಈ ಹಿನ್ನೆಲೆಗಳಿಂದ ಐನ್‌ಮನೆ ಹಾಗೂ ಅದರ ಸಂಕೀರ್ಣದ ಪ್ರಯೋಜನಗಳು ಹೀಗಿವೆ ಎನ್ನಬಹುದು :
i. ಕೃಷಿ ಬದುಕಿಗೆ ಪೂರಕ ವಾಸ್ತುವನ್ನು ಹೊಂದಿವೆ ii. ಮಲೆನಾಡಿನ ಬೆಟ್ಟಗುಡ್ಡ ಪ್ರದೇಶಕ್ಕೆ ಅನುವಾದ ಬದುಕು ಸಾಗಿಸಲು ಅನುಕೂಲವಾಗಿವೆ iii. ಮನೆತನವನ್ನು ಎತ್ತಿ ನಿಲ್ಲಿಸಿದ ಐತಿಹಾಸಿಕ ವ್ಯಕ್ತಿಯ ನೆನಪನ್ನು ಸ್ಥಿರವಾಗಿಸುತ್ತವೆ iv. ಸಾಂಸ್ಕೃತಿಕ ನಡಾವಳಿಯನ್ನು ಅಚ್ಚುಕಟ್ಟಾಗಿ ನೇರ್ಪುಗೊಳಿಸುತ್ತವೆ v. ಸಾಂಸ್ಕೃತಿಕ ಬಾಂಧ್ಯವನ್ನು ಬೆಸೆಯುತ್ತ ವಕ್ಕದ ಜೀವನವನ್ನು ನೋವು-ನಲಿವುಗಳಿಗೆ ಸ್ಪಂದಿಸುವಂತೆ ಮಾಡುತ್ತವೆ. vi. ವಂಶದ ಇತಿಹಾಸವನ್ನು ಉಳಿಸಿ ಆಯಾ ವರ್ತಮಾನದ ಜಾಯಮಾನಕ್ಕೂ ಸ್ಪಂದಿಸುತ್ತವೆ vii. ಪರಿಸರ ನಿರ್ವಹಣೆಗೆ ಧೈರ್ಯ ಸ್ಥೈರ್ಯ ಹಾಗೂ ಸ್ವಾವಲಂಬಿ ಜೀವನಕ್ಕೆ ಅನುವಾಗಿವೆ; ಹೋರಾಟದ ಶಕ್ತಿಯನ್ನು ಬೆಳೆಸಲು ಅನುಕೂಲ ಪರಿಸರದಲ್ಲಿವೆ; ಕೊಡಗಿನ ಸಾಂಸ್ಕೃತಿಕ ವೈಶಿಷ್ಟದ ಬೆಸುಗೆಗಳನ್ನು ತೋರಿ**ವೆ.**



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. I. M. Muthanna., (1953), *A Tiny Model State of South India*, p. 317.

*೨. ಬೆನಕನಹಳ್ಳಿ ಜಿ. ನಾಯಕ್ : **ಕರಕುಶಲ ಕಲೆಗಳು**, (೧೯೮೬) (ಪ್ರ. ಸಂ.) ಪ್ರೊ॥ ಎಸ್. ಕೆ. ರಾಮಚಂದ್ರರಾವ್, ಕಸಾಪ, ಬೆಂಗಳೂರು, ಪು. ೬೫.

*೩. ಪ್ರೊ॥ ಎಸ್. ಕೆ. ರಾಮಚಂದ್ರ ರಾವ್., (೧೯೮೧), **ಕರ್ನಾಟಕದ ಕಲೆಗಳು** : ಭೂಮಿಕೆ, ಕಸಾಪ, ಬೆಂಗಳೂರು, ಪು. ೭೩.

*೪. ಗೌರು ತಿರುಪತಿರೆಡ್ಡಿ (ಅನು : ವಂಶಿ)., (೧೯೯೭), **ವಾಸ್ತು ಶಾಸ್ತ್ರದ ವಾಸ್ತವಗಳು**, ಬೆಂಗಳೂರು, ಪು. ೨೨, ೨೪.

*೫. ಡಾ. ಬಾ. ರಾ. ಗೋಪಾಲ್., (೧೯೯೩), **ಕರ್ನಾಟಕದ ಕಲೆಗಳು : ವಾಸ್ತು** ಕಸಾಪ, ಬೆಂಗಳೂರು, ಪು. ೨.

*೬. **ಪ್ರಾಚೀನ ಭಾರತ.**, (೧೯೯೯), (ಅನು : ಎಂ. ಎಸ್. ರಜನೀಕಾಂತ್), ಭಾರತ ಸರ್ಕಾರ, ಪು. ೫.

*೭. ಎಸ್. ಕೆ. ರಾಮಚಂದ್ರರಾವ್., (೧೯೭೫), **ಮೂರ್ತಿಶಿಲ್ಪ ನೆಲೆ-ಹಿನ್ನೆಲೆ**, ಬೆಂ.ವಿ.ವಿ. ಪು. ೨೮.

*೮. K. K. Mammen., (1942), *Kerala Culture*, Trivendrum, p.154.

*೯. i. K. K. Mammen., Op.cit, pp. 154-55.
ii. T. K. Gopal pannikkar., (1983), *Malabar and its folk*, AES, (I Edn 1900), New Delhi, pp. 18-20.
iii. *ANTROPOLOGY*, Bulletin vol. III, No. 1 : *Notes on some of the peoples of Malabar - Mala vedars of Travancore*, Madras Govt. Museum, pp. 45, 47.

*೧೦. A Sridhara Menon., (1979), *Social and Cultural History of India* : KERALA, Sterling publishers, New Delhi, pp. 129-130.

*೧೧. A. Aiyappan., (1937), *Social and Physical Antropology of the Nayadis of Malabar*, Madras, p. 30, foot note.

*೧೨. M. N. Srinivas., (1989), *Religion and Society among the coorgs of South India*, Bombay, p. 162.

*೧೩. G. Richter., (1887), *Castes and Tribes Found in the province of Coorg*, Bangalore, pp. 24-25.

*೧೪. ಡಾ॥ ಪುರುಷೋತ್ತಮ ಬಿಳಿಮಲೆ., 'ಗೌಡ ಜನಾಂಗ - ಮದುವೆಯ ಸಾಂಕೇತಿಕತೆ', **ಮಾನವಿಕ ಕರ್ನಾಟಕ**, ಮೈ.ವಿ.ವಿ., (೧೯೮೭) ಸಂ. ೧೭, ಸಂ. ೩, ಪು. ೬೦, ೬೯.

ಡಾ| ಜ್ಯೋತ್ಸ್ನ ಕಾಮತ್*

# ಕನ್ನಡಿಗರ ಸುರಾಪಾನ ಪರಂಪರೆ

ಶತಮಾನಗಳಿಂದ ಕನ್ನಡಿಗರು ಊಟ-ಉಡಿಗೆ ರಸಿಕ ಸ್ತ್ರೀಯರ ಸಹವಾಸದಂತೆ, ಸುರಾಪಾನವನ್ನೂ ಸದಭಿರುಚಿಯ ಸಂಕೇತವೆಂದು ಪರಗಣಿಸುತ್ತ ಬಂದಿದ್ದಾರೆ. ವಿವಿಧ ಶತಮಾನಗಳಲ್ಲಿ ರೂಪಗೊಂಡ ಶಿಲ್ಪಗಳು, ಶಾಸ್ತ್ರಗಳು, ಕಾವ್ಯಗಳು ಈ ಅನಿಸಿಕೆಯನ್ನು ಪುಷ್ಟೀಕರಿಸುತ್ತವೆ. ಆದಿಕವಿ ಪಂಪನ 'ವಿಕ್ರಮಾರ್ಜುನವಿಜಯ'ವು ಈ ಕುರಿತ ಕುತೂಹಲ ಮಾಹಿತಿ ಒದಗಿಸಿದರೆ*[೧], ಚಾಲುಕ್ಯ ಭೂಲೋಕಮಲ್ಲನ 'ಮಾನಸೋಲ್ಲಾಸ' ಕೋಶಗ್ರಂಥವು (೧೧೨೬-೧೧೩೮) ಕರ್ನಾಟಕದಲ್ಲಿ ೧೦-೧೨ನೇ ಶತಮಾನಗಳಲ್ಲಿ ಪ್ರಚಲಿತವಿದ್ದ ಹತ್ತಾರು ಮದ್ಯ ಪ್ರಕಾರಗಳನ್ನು ಅವನ್ನು ತಯಾರಿಸುವ ಬಗೆಯನ್ನು ಕೊಡಮಾಡುತ್ತದೆ*[೨]. ಕಾಶ್ಮೀರದ ಕಲ್ಹಣನ ರಾಜತರಂಗಿಣಿ (೧೧೪೮), ಕುಮಾರವಾಲ್ಮೀಕಿಯ ತೊರವೆರಾಮಾಯಣ (c೧೫೦೦), ಕನಕದಾಸರ ಮೋಹನ ತರಂಗಿಣಿ, (c೧೫೫೦) ದೇವಪ್ಪ ಕವಿಯ ರಾಮವಿಜಯಕಾವ್ಯ (c ೧೫೬೦) ಹಾಗೂ ನಂಜುಂಡನ ರಾಮನಾಥಚಾರಿತ್ರಗಳೆಲ್ಲ ಮದ್ಯಪಾನದ ಹಲಕೆಲವು ವಿವರಗಳನ್ನು ನೀಡುತ್ತವೆ. ಚಂದ್ರಿಕಾ ವಿಹಾರ ವೇಶ್ಯಾವರ್ಣನ ಅಥವಾ ಮಧುಪಾನ ಗೋಷ್ಠಿಯೆಂದು ಅಷ್ಟಾದಶ ವರ್ಣನೆಗಳಲ್ಲಿ ಒಂದು ಭಾಗವಾಗಿ ಅದು ಕಾಣಿಸಿಕೊಂಡರೂ ವಾಸ್ತವಿಕವೆಂದು ಕಂಡು ಬಂದ ಅಂಶಗಳನ್ನು ಹಾಗೂ ಶಿಲ್ಪ, ಶಾಸನ ಹಾಗೂ ಭಿತ್ತಿಚಿತ್ರಗಳ ಮಾಹಿತಿಯಿಂದ ದೃಢಪಟ್ಟ ವಿಚಾರಗಳನ್ನು ಈ ಪ್ರಬಂಧದಲ್ಲಿ ಸೇರಿಸಲಾಗಿದೆ.

ದ್ರಾಕ್ಷಿ, ಹಲಸು, ಖರ್ಜೂರಗಳಂತಹ ಹಣ್ಣುಗಳಿಂದಲೂ ಅಕ್ಕಿ, ಕುಸುಬಲಕ್ಕಿ ಗೋದಿ, ಜವೆಗೋದಿಗಳಂತಹ ಧಾನ್ಯಗಳಿಂದಲೂ ಕಬ್ಬು, ತಾಳೆ, ತೆಂಗು ಈಚಲಗಳಂತಹ ಸಸ್ಯಗಳಿಂದಲೂ, ಸುರೆಯನ್ನು ಪಡೆಯುವ ಕಲೆಯನ್ನು ಅನಾದಿ ಕಾಲದಿಂದಲೂ ನಮ್ಮವರು ಬೆಳೆಸಿಕೊಂಡು ಬಂದಿದ್ದಾರೆ. ರಾಜಪರಿವಾರದವರು, ಕುಲೀನ ಸ್ತ್ರೀಯರು ತಮ್ಮ ಸುಕೋಮಲ ಶರೀರಕ್ಕೆ ಒಗ್ಗುವಂತಹ ಸೌಮ್ಯವಾದ ದ್ರಾಕ್ಷಾರಸ (ವೈನ್). ನಾಲಿಕೇರಾಸವ ಖರ್ಜೂರಾಸವಗಳನ್ನು ಸೇವಿಸಿದರೆ, ಪುರುಷರು ಹೆಚ್ಚು ತೀಕ್ಷ್ಣವಾದ, ಪೌರುಷಕ್ಕೆ ಸವಾಲಾಗುವಂಥ ಖಾರ, ಹುಳಿ ಮತ್ತು ಕಟುವಾದ ಪಾನೀಯಗಳನ್ನೆಲ್ಲ ತಮ್ಮವನ್ನಾಗಿಸಿಕೊಂಡಿದ್ದರು. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಕಕ್ಕರ ಪೈಷ್ಟೀ, ಗೌಡೀ, ಮಾಧ್ವೀ (ಪಂಪನ 'ಮಧು') ಲವ, ಕೃಷ್ಣಸುರೆ ಚಿಂತಾಮಣಿ, ಮತ್ತು ಸೀಧು ಕಟುಸಿಧುಗಳಾಗಿದ್ದವು*[೩]. *ಮಾರೀಚ ತೊಡರ್ಪು, ಸರದೆ, ಕಕ್ಕರಗಳು ಪಕ್ಕಾ ಕನ್ನಡ ಕಳ್ಳುಗಳಾಗಿರಲು ಸಾಕು!* ಪಂಪಭಾರತದಲ್ಲಿ ಇವುಗಳ ವೈಶಿಷ್ಟ್ಯಗಳನ್ನು ಕಾಣುತ್ತೇವೆ*[೪]. ತಾಳೆ, ಕಿರಿತಾಳೆ, ಹಲಸು,ಮಾವಿನ ಹಣ್ಣುಗಳಿಂದ 'ಅಸವ'ಗಳನ್ನು ಪಡೆಯುತ್ತಿದ್ದರು. ಕಳ್ಳು, ಸುರೆ, ಮದ್ಯಗಳಲ್ಲಿ ಮತ್ತಿನ ಪ್ರಮಾಣ ಸೇರಿಸಿಕೊಳ್ಳುತ್ತಿದ್ದ ಅಂಶ ಪಂಪಭಾರತ ಹಾಗೂ ಮಾನಸೋಲ್ಲಾಸಗಳಿಂದ ಅರಿಯಬಹುದಾಗಿದೆ.

ಸುರಾಪಾನ ಸೇವನೆಯನ್ನು ವಿರಾಮವಾಗಿ, ಕ್ರಮಬದ್ಧವಾಗಿ, ಶಾಸ್ತ್ರೋಕ್ತ ರೀತಿಯಲ್ಲಿ ಸಭಾಮರ್ಯಾದೆಯೊಂದಿಗೆ ಕೈಕೊಳ್ಳುತ್ತಿದ್ದರು. ಮೊದಲಿಗೆ ಮಧುದೇವತೆಗೆ ಪೂಜೆಸಲ್ಲಿಸಿ, ಭೂದೇವಿಗೆ ವಂದಿಸಿ, ಸುರೆಯನ್ನು ಶಿರದಲ್ಲಿ ಪ್ರೋಕ್ಷಿಸಿಕೊಂಡು, ಹಣೆಗೆ ಬೊಟ್ಟನ್ನಿಟ್ಟುಕೊಳ್ಳುತ್ತಿದ್ದರು. ಹೆಚ್ಚಿನವರು ಮುನ್ನೆಚ್ಚರಿಕೆಯಿಂದ ಮತ್ತು ಧರ್ಮಾಚರಣೆಯ ಅಂಗವಾಗಿ ಮದ್ಯಸೇವನೆಯಲ್ಲಿ ಪಾಲುಗೊಳ್ಳುತ್ತಿದ್ದುದರಿಂದ ಕುಡುಕರು, ಸಾರ್ವಜನಿಕರಲ್ಲಿ ಕ್ವಚಿತ್ತಾಗಿ ಕಾಣಸಿಗುತ್ತಿರಬೇಕು! ಪ್ರೇಮಿಗಳು, ಪತಿ, ಪತ್ನಿಯರು, ಕುಟುಂಬದ, ಸ್ನೇಹಿತರ, ಬಳಗದ ಜನ ಸೇರಿ ಸುರಾಪಾನ ಕೈಕೊಳ್ಳುತ್ತಿದ್ದಂತೆ, ಹೆಂಗಳೆಯರು ಹಾಸ್ಯ ಹರಟೆಗಳ ನಡುವೆ ಖಾರದ ತಿಂಡಿಗಳನ್ನು ನೆಂಜಿಕೊಳ್ಳುತ್ತ ಕಳ್ಳನ್ನು ಹೊಟ್ಟೆಗೆ ಇಳಿಸುತ್ತಿದ್ದರು. ನೆಂಜಿಕೊಳ್ಳುವ 'ಚಕ್ಕಣ'ಗಳನ್ನು ಪಂಪನು ಹೆಸರಿಸಿದ್ದಾನೆ. ಬಿದಿರ ಕಳಲೆ ಮಾವಿನಯಿಡಿ ಬಿಲ್ವಪತ್ರೆಕಾಯಿ ತಿರುಳು, ಹಸಿಶುಂಠಿಗಳು ಮೆಣಸು, ಉಪ್ಪಿನೊಂದಿಗೆ ಸೇರಿಕೊಂಡು 'ಚಕ್ಕಣ'ಗಳಾಗಿ ಮಾರ್ಪಡುತ್ತಿದ್ದವು. ಮಾನಸೋಲ್ಲಾಸದ ಪ್ರಕಾರ ಮಾಂಸದ ವಡೆಗಳು, ತರಕಾರಿಬೊಂಡ, ಈರುಳ್ಳಿ ಭಜಿ ಬೆಂಕಿಯಲ್ಲಿ ಬೆಂದ ಹಂಚಿನ ಮೇಲೆ*[೫] ಹುರಿದ ಮತ್ಸ್ಯಮಾಂಸ ಪ್ರಕಾರಗಳು, ಹುರಿಗಾಳುಗಳು ಜೊತೆಕೂಡುತ್ತಿದ್ದವು. ಮತ್ತೇರದಂತೆ ತುಪ್ಪದ ಸೇವನೆ, ಹಲಬಗೆಯ ಔಷಧಿ, ಮೂಲಿಕೆಗಳನ್ನು ಸುರಾಪ್ರಕಾರಗಳು ಒಳಗೊಂಡಿರುತ್ತಿದ್ದವು.

ಕನಕದಾಸರು ಚಿತ್ರಿಸಿದ ಸುರಾಪಾನಗೋಷ್ಠಿಯಲ್ಲಿ ಹದಿನಾರನೆಯ ಶತಮಾನದ ಶ್ರಮಿಕ ಕನ್ನಡಿಗರ ರಮ್ಯವಾದ ಆಚರಣೆಯನ್ನು ಕಾಣಬಹುದಾಗಿದೆ-'ಮೋಹನ ತರಂಗಿಣಿ'ಯಲ್ಲಿ ಸೂರ್ಯಾಸ್ತವಾಗುತ್ತಿದ್ದಂತೆ ತಂತಮ್ಮ ಮನೆಗಳನ್ನು ಶುಚಿಗೊಳಿಸಿ ರಂಗೋಲಿ ಬರೆದು, ಭಕ್ಷ್ಯ-ಭೋಜ್ಯಗಳನ್ನು ಅಣಿಗೊಳಿಸುತ್ತಿದ್ದರು.

*೧೧೦, ಶಶಿಕಿರಣ್, ೧೮ನೇ ಕ್ರಾಸ್, ಮಲ್ಲೇಶ್ವರ, ಬೆಂಗಳೂರು - ೫೬೦ ೦೫೫.

## 'ಕನ್ನಡಿಗರ ಸುರಾಪಾನ ಪರಂಪರೆ'

ಡಾ. ಜ್ಯೋತ್ಸ್ನಾ ಕಾಮತ್




1. ಮದ್ಯ-ಮೋಹಿತನು ತತ್ವಜ್ಞಾನಿಯಂತಾದಾಗ
2. ಸುರಾಪಾನದಲ್ಲಿ ಮೈ ಮರೆತಾಗ
3. ಹೆಂಡದೊಂದಿಗೆ ಹೆಂಗಳೆಯರು
4. ಮದ್ಯದಿಂದ ಮತ್ತಳಾದ ಮಹಿಳೆ
5. ಸೆರೆಯೊಂದಿಗೆ ಸೇವಕ
6. ಈಚಲ ಮರದಿಂದ ಹೆಂಡದ ಸಂಗ್ರಹಣೆ
7. ಹೆಂಡ ಹೊತ್ತ ಹೆಂಗಳೆ
8. ಚರ್ಮದ ಚೀಲದಲ್ಲಿ ಸೆರೆಯನ್ನು ಸೇರಿಸುವವನು

ಅಕ್ಕಿ ಕಡಲೆ ಪಣ್ಯಾರದ ರಾಶಿಯ ಮೇಲೆ ತುಂಬಿದ ಕೊಡವನ್ನಿಟ್ಟು ಬೇವಿನದಂಡೆ ಹಾಕಿ, ಗಂಧ, ಬಂಡಾರ ಹಚ್ಚಿ, ಧೂಪದ ದೀಪಾರತಿ ಬೆಳಗುತ್ತಿದ್ದರು. ಶ್ರದ್ಧೆಯಿಂದ ಮಂತ್ರವನ್ನು ಹೇಳಿ ಶಾಸ್ತ್ರೋಕ್ತವಾಗಿ ಪರಮಶಕ್ತಿಯ ಪಾದಪೂಜೆ ಮಾಡಿ, ಕಳ್ಳನ್ನು ಸೇವಿಸಲು ಪ್ರಾರಂಭಿಸುತ್ತಿದ್ದರು. ಕಿರಿಯರು ಹಿರಿಯರಿಗೆ ಮೊದಲು ನೀಡಿ ಗೆಣೆಯ-ಗೆಣತಿಯರು ಪರಸ್ಪರ ಉಪಚರಿಸುವಾಗಿನ ಮಾತುಗಳು:

*'ರಂಭೆಯೇ ಇಕೋ! ಸುಂದರಿಯೇ ಕೋ! ಹೊನ್ನಗೊಂಬೆಯೇ ಕುಡಿ! ಚಂದ್ರಮುಖಿ, ತುಂಬಿಗುರುಳ ತುರುಗೆವೆಗಣ್ಣ ಸಖಿಯೇ ಕುಡಿ!* ಎಂದು ರಮಿಸಿ ಕುಡಿಸುತ್ತಿದ್ದರು. ಕುಡಿಯುವ ಚಟವಿದ್ದವರು, ಇತರರಿಗೂ ನಂಬಿಸಿ, ರಮಿಸಿ ಕುಡಿಸುವದು ಸಾಮಾನ್ಯವಲ್ಲವೇ? ಹೆಂಡ ನೆತ್ತಿಗೇರಿದವರು ಹಿಂಜರಿಯದೇ ತಮ್ಮ ಪ್ರಿಯತಮನಿಗೆ ಕುಡಿಯಲು ಪ್ರೋತ್ಸಾಹಿಸುತ್ತಿದ್ದರು.

'ನಲ್ಲನೇ ಕುಡಿ' ನಾಗರಿಕನೇ ಕುಡಿ, ಮನ್ಮಥರೂಪಿಯೇ ಕುಡಿ! ನಾನು ಕುಡಿಯದಿದ್ದರೆ ನಾನು ಬದುಕಿರಲಾರೆ!' ಎನ್ನುವರು. ತತ್ತಿ, ಅವಲಕ್ಕಿಕಾರದ ಅರಳು, ಕಡಲೆಕಾಳುಗಳನ್ನು ಬಾಡಿಸಿಕೊಳ್ಳುತ್ತ ಸೋಕ್ಕೇರುವ ತನಕ ಕುಡಿಯುತ್ತಿದ್ದರು. ಅಣ್ಣ! ಒಂದೇ ಚಿಪ್ಪನ್ನಾದರೂ ಕೋ! ಎಂದು ಒತ್ತಾಯದಿಂದ ಕುಡಿಸದೇ ಇರುತ್ತಿರಲಿಲ್ಲ. ಕುಡಿಯುತ್ತ, ಕುಡಿಸುತ್ತ, ಕಲೆಯುತ್ತ ತೇಕುತ್ತ ಕೈತಟ್ಟುತ್ತ ಖುಷಿ ಪಡುತ್ತಿದ್ದರು*[೮]. ಮದ್ಯಕೂಟದ ವರ್ಣನೆ ದೇವಪ್ಪ ಕವಿಯ 'ರಾಮ ವಿಜಯ ಕಾವ್ಯ'ದಲ್ಲಿ ಸೊಗಸಾಗಿ ಮೂಡಿದೆ:

> ತಪ್ಪಿ ನುಡಿವುತ ಮಾತುಗಳ ತೊಪ್ಪಗೆ ಬೀಳುತೇಳುತ
> ಸೊಪ್ಪಾದ ಮೈಮನದಿಂದ ಸುರೆಯನುಂಡ। ರೂಪವನೇನು
> ಪೇಳುವೆನು.
>
> ಸೊಕ್ಕುವರ್ ಕೆಲರು, ಕೆಕ್ಕನೆ ಕೆಲೆ ಕೆಲೆವರು
> ಬೆಕ್ಕಸಬಡುವರು ಕೆಲರು ಅಕ್ಕರಿಂ ಕೆಲರು। ರಕ್ಕಸಿಯಂತೆ
> ಕೆಲಬರು ಇಕ್ಕೆಲದಲಿ........ ಇತ್ಯಾದಿ*[೯]

ಮದಿರಾಪಾನವು, ಪ್ರಾಚೀನ ಕನ್ನಡಿಗರಿಗೆ ಕ್ರೀಡೆಯಾಗಿದ್ದು ಈಗಿನಂತೆ ಪಾನೀಯದ ಸ್ಥಾನವನ್ನು ಅದು ಆಕ್ರಮಿಸಿರಲಿಲ್ಲ. ಸ್ತ್ರೀಜನರ ಮನಸ್ಸಂತೋಷಕ್ಕೆ ಹಾಗೂ ತಾನು, ಮುದಗೊಳ್ಳಲಿಕ್ಕೆ ಅರಸರಾದಿಯಾಗಿ, ವನಪ್ರದೇಶ, ನದಿದಂಡೆ, ಹೂ ಹಣ್ಣುಗಳ ತೋಟಗಳಲ್ಲಿ ಪಾನಕ್ರೀಡೆಯನ್ನು ಏರ್ಪಡಿಸುತ್ತಿದ್ದರು. ಸ್ತ್ರೀಯರಿಗೆ ಮದ್ಯಪಾನದ ವಿಕಾರ ಬಲುಬೇಗನೇ ಕಾಣಿಸಿಕೊಳ್ಳುತ್ತಿದ್ದು ಅದರ ವರ್ಣನೆ ಕಾವ್ಯಗಳಲ್ಲಿ ಬರುತ್ತದೆ. ನಾಲಿಗೆ ತೊದಲುತ್ತದೆ. ಕಣ್ಣು, ಹುಬ್ಬುಗಳು ವಿಚಿತ್ರ ಏರಿಳಿತ ತೋರುತ್ತವೆ. ಕಣ್ಣು ಕೆಂಬಣ್ಣ ತಾಳುತ್ತವೆ. ಒಮ್ಮೆ ನಗುತ್ತ, ಮರುಗಳಿಗೆಯಲ್ಲಿ ಅಳುತ್ತ ಬೀಳುತ್ತ, ಏಳುತ್ತ ಅತ್ತಿಂದಿತ್ತ ಮೈ ಮೇಲಿನ ಪರಿವೆಯಿಲ್ಲದೇ ಅಲೆಯವರು. ಬಿಕ್ಕಳಿಕೆ ತೇಗು ಮುಕ್ತ ನೃತ್ಯಗಳಿಗೂ ಕೊರತೆಯಿರಲಿಲ್ಲ. ಕೂದಲು, ಬಟ್ಟೆ ಬರೆ ಅಸ್ತವ್ಯಸ್ತವಾಗುವದು ಸಾಮಾನ್ಯವಾಗಿತ್ತು.

ರಣರಂಗದಲ್ಲಿ ಮದ್ಯಕ್ಕೆ ಆದ್ಯತೆ ಕೊಡಲಾಗುತ್ತಿತ್ತು. ಯುದ್ಧದ ಬಿಡದಿಗಳಲ್ಲಿ ಹೆಂಡದ ವ್ಯಾಪಾರ ಅವ್ಯಾಹತವಾಗಿ ಸಾಗುತ್ತಿತ್ತು. ಹೇಸರಗತ್ತೆಗಳ ಮೇಲೆ ಆಹಾರ ಸಾಮಗ್ರಿಗಳ ಜೊತೆಗೆ ಸಾರಾಯಿ, ಗಂಗಾಸಾರ (ಹೆಂಡ) ಹಾಗೂ ಬಂಗಿಯ ಹೇರುಗಳನ್ನು ಬೇವಹಾರಿಗಳು ಸಾಗಿಸುತ್ತಿದ್ದರು. ಯುದ್ಧದ ಅಘಾತಗಳು ಗಾಯ, ನೋವು ನರಳಾಟಗಳನ್ನು ಮರೆಯಲು ಹೆಂಡವು ದಿವ್ಯೌಷಧಿಯಾಗಿ ಮಾರ್ಪಡುತ್ತಿತ್ತು. ಪಳಗಿಸಿದ ಆನೆಗಳಿಗೆ ಮನಸ್ವಿ ಮದ್ಯಪಾನ ಮಾಡಿಸಿ, ಮದವೇರಿಸಿ ಸೊಂಡಿಲಿನ ಇಕ್ಕೆಲದಲ್ಲಿ ಜೋಡಿಸಿ ಖಡ್ಗಗಳಿಂದ ಸಜ್ಜುಗೊಳಿಸಿ ವೈರಿಸೈನ್ಯದ ಮೇಲೆ ಬಿಡುತ್ತಿದ್ದ ಕಾದಾಟದ ಪ್ರಕಾರವನ್ನು ಚೀನೀ ಪ್ರವಾಸಿ ಯುವನಜ್ವಾಂಗ್ ಹೇಳಿದ್ದನ್ನು ಸ್ಮರಿಸಿಕೊಳ್ಳಬಹುದು*[೧೦].

ವಿವಿಧ ಶತಮಾನಗಳಲ್ಲಿ ರೂಪಗೊಂಡ ಶಿಲ್ಪ, ಉಬ್ಬು ಚಿತ್ರ ಮತ್ತು ಭಿತ್ತಿಚಿತ್ರಗಳಲ್ಲಿ ಕನ್ನಡಿಗರ ಸುರಾಪಾನದ ಪರಂಪರೆಯನ್ನು ಗುರುತಿಸಬಹುದು. ಬಾದಾಮಿಯ ಮೂರನೆಯ ಗುಹಾಲಯದಲ್ಲಿ (ಕ್ರಿ.ಶ. ೫೭೮) ಮದ್ಯಪಾನದ ವೈಖರಿಯನ್ನು ಅನೇಕ ಅಂಕಣಗಳಲ್ಲಿ ಉಬ್ಬುಚಿತ್ರಗಳನ್ನಾಗಿ ಮೂಡಿಸಿದ್ದಾರೆ. ತಲೆಗೇರಿದ ಮತ್ತಿನಿಂದ ಯುವಕನೊಬ್ಬ ಕೈಯಲ್ಲಿ ಸುರಾಪಾತ್ರೆ ಹಿಡಿದುಕೊಂಡೇ ಜಗತ್ತಿಗೆ ನೀತಿಬೋಧೆ ಮಾಡುತ್ತಿದ್ದಾನೆ. ಇನ್ನೊಂದೆಡೆ ಮೂವರು ಜೋಡಿಗಳು, ವಿವಿಧ ಭಂಗಿಗಳಲ್ಲಿ ಮದ್ಯದ ಬಟ್ಟಲೊಂದಿಗೆ ಮೈಮರೆತಿದ್ದಾರೆ. ಈರ್ವರು ಸೇವಕರು ಬರಿದಾದ ಬಟ್ಟಲು ತುಂಬಲು ಸಿದ್ಧರಾಗಿಯೇ ಇದ್ದಾರೆ. ಇನ್ನೊಂದು ಅಂಕಣದಲ್ಲಿ ಈರ್ವರು ಹೆಂಗಳೆಯರು, ಹೆಂಡ ಹೀರುತ್ತ ನೆರೆಕೆರೆಯ ಮಾತುಕತೆ ನಡೆಸಿದ್ದಾರೆ. ಕೋಲಾರದ ಕೋಲಾರಮ್ಮ ದೇವಾಲಯದಲ್ಲಿ (ಕ್ರಿ.ಶ. ೧೦೨೩) ಮೂಲದೇವತೆಯ ಪೂಜಾ ವಿಗ್ರಹವನ್ನು ಮರೆಮಾಡಿ ಇಡಲಾಗಿದೆ. ಈ ವಿಗ್ರಹದ ಕೈಯಲ್ಲಿ ಸುರಾಪಾತ್ರವಿದೆ. ಶಾಕ್ತ ಸಂಪ್ರದಾಯ ಪ್ರಭಾವ ಜೋರಾಗಿದ್ದ ದಿನಗಳಲ್ಲಿ ಈ ದೇವತೆಯ ನೈವೇದ್ಯದ ಸಾಮಗ್ರಿಗಳಲ್ಲಿ ಮತ್ತಿಯ ಪಾನದ ಉಲ್ಲೇಖವಿದೆ. ಉತ್ತರ ಕನ್ನಡ ಜಿಲ್ಲೆಯ ಕೇತಪ್ಪಯ್ಯ ನಾರಾಯಣ ದೇವಾಲಯದ ಜಗಲಿಯಲ್ಲಿ ಸುಖಾಸೀನ ದಂಪತಿಗಳಿಗೆ ಮದ್ಯ ಪೂರೈಕೆಯ ದೃಶ್ಯದ ಉಬ್ಬುಚಿತ್ರವಿದೆ (ಕ್ರಿ.ಶ. ೧೫೪೫). ತುಮಕೂರು ಜಿಲ್ಲೆಯ ಸೀಬಿಯ ನರಸಿಂಹಸ್ವಾಮಿ ದೇವಸ್ಥಾನ (ಕ್ರಿ. ಶ. ೧೭೯೦)ದ ಮಾಡಿನಲ್ಲಿರುವ ಭಿತ್ತಿಚಿತ್ರದಲ್ಲಿ ಸೆರೆ ಇಳಿಸುವ ವಿವಿಧ ಹಂತಗಳ ಚಿತ್ರಣವಿದೆ. ಒಬ್ಬಾತ, ಎತ್ತರವಾದ ತಾಳೆಮರ ಏರಿ ಮಣ್ಣಿನ ಮಡಿಕೆಯಲ್ಲಿ ಸಂಚಯವಾದ ಹೆಂಡವನ್ನು ಕೂಡ ಹಾಕುತ್ತಿದ್ದಾನೆ. ಇಂಥ ಸೆರೆಯಿಳಿಸುವ ಜನಾಂಗ ಈಡಿಗರ ಅಥವಾ ಬಿಲ್ಲವರ ಉಲ್ಲೇಖ ಅನೇಕ ಶಾಸನಗಳಲ್ಲಿ ಬರುತ್ತದೆ. ಬಿಲ್ಲ ಮುನೂರರ್ವರ ಸಂಖ್ಯೆ ಸಾಂಪ್ರದಾಯಿಕವಾಗಿ ದಾನ ಲೇಖನಗಳಲ್ಲಿ ಬರುವಷ್ಟು ಅವರು ಗಣ್ಯರಾಗಿದ್ದು, ಪ್ರಾಚೀನರ ಸುರಾಪಾನ ಪದ್ಧತಿಯನ್ನು ಅರಿತುಕೊಳ್ಳುವದರಲ್ಲಿ ಗಮನೀಯ ಅಂಶವಾಗಿದೆ. ಸೀಬಿಯ ಅಂಕಣದಲ್ಲಿ, ಇನ್ನೊಂದೆಡೆಗೆ

ಇಳಿಸಿದ ಹೆಂಡವನ್ನು ಹಳ್ಳಿಯ ಹೆಣ್ಣುಮಗಳು ಕೊಡದಲ್ಲಿ ಹೊತ್ತೊಯ್ಯುವದನ್ನು ತೋರಿಸಿದರೆ, ಮಗುದೊಂದು ಎಡೆಯಲ್ಲಿ ಕತ್ತೆಯ ಬೆನ್ನಿಗೆ ಜೋಡಿಸಿದ ಚರ್ಮದ ಚೀಲಕ್ಕೆ (ಬುಡ್ಡಿ) ಕೋಡದಿಂದ ಹೆಂಡ ಸುರಿಯುವ ಚಿತ್ರವೂ ಇದೆ.

ಬಹುಸಂಖ್ಯಾತ ಕನ್ನಡಿಗರು ಪಾನಪ್ರಿಯರಾಗಿರಲಿಲ್ಲ. ಆದರೆ ಪಾನಸಹಿಷ್ಣುಗಳಾಗಿ ಬಾಳಿದರು. ಕೆಲವು ಪಂಗಡಗಳಿಗೆ ಮದ್ಯ ಪಾನ ನಿಷೇಧಿಸಲ್ಪಟ್ಟಿತ್ತು. ಆದರೆ ಯಾವುದೇ ಯುಗದಲ್ಲಿ ಯಾವುದೇ ರಾಜ್ಯದಲ್ಲಿ ಪಾನ ಪ್ರತಿಬಂಧ, ಸಂಪೂರ್ಣ ಯಶಸ್ವಿಯಾದ ದಾಖಲೆ ಇಲ್ಲ! ಮಹಾತ್ಮ ಗಾಂಧಿಯವರ ಕಟ್ಟಾ ಅನುಯಾಯಿ ಮುರಾರಜಿ ದೇಸಾಯಿ ಅವರು ಮುಂಬೈ ಪ್ರಾಂತದಲ್ಲಿ ಪಾನ ನಿರೋಧ ಹೇರಿದಾಗ ಕಳ್ಳಭಟ್ಟಿ ಸೆರೆ, ಅತ್ಯಂತ ಜನಪ್ರಿಯವಾದದ್ದನ್ನು ಮರೆಯುವಂತಿಲ್ಲ. ಗಾಂಧಿಯವರ ಜನ್ಮ ಭೂಮಿ ಗುಜರಾತ್‌ದಲ್ಲಿ ಪಾನಪ್ರತಿಬಂಧ ಹೇರಿದಾಗ ಗಡಿಯ ಊರಾದ ಮೌಂಟ್ ಆಬು ಅತ್ಯಂತ ಜನಪ್ರಿಯ ಪಾನಭೂಮಿಯಾಗಿ ಮೆರೆಯಿತು! ಮೈಸೂರು, ಮಹಾರಾಜರ ಸಂಸ್ಥಾನವಾಗಿದ್ದಾಗ, ಹಿತ ಮಿತದ ಮದ್ಯಪಾನಕ್ಕೆ ಅವಕಾಶವಿತ್ತು. ಕರ್ನಾಟಕದ ಏಕೀಕರಣದ ಬಳಿಕ ಅಬಕಾರಿ ಸುಂಕ, ಹೇರಳ ಹಣತರುವಂತಾದ್ದರಿಂದ ರಾಜ್ಯ ಸರಕಾರವು ನೀರುಸಿಗದ ಹಳ್ಳಿಯಲ್ಲಿಯೂ ಸೆರೆಯಂಗಡಿ ತೆರೆಯುವಂತೆ ಪ್ರೋತ್ಸಾಹಿಸಿತು. ಕುಡಿತದ ರೂಢಿ, ಆಧುನಿಕತೆಯ ಸಂಕೇತ ಎಂದು ತಪ್ಪಾಗಿ ನಂಬಿರುವ ಹೊಸ ಪೀಳಿಗೆಯವರಲ್ಲಿ ಹೆಂಡದಿಂದ ದೂರವಿರುತ್ತಿದ್ದ ಹಿರಿಯರಿಗೆ ಜೀವನದ ಸವಿ ಸವಿಯುವ ಭಾಗ್ಯವಿಲ್ಲ! ಎಂದು ವಾದಿಸುವರಿದ್ದಾರೆ. ಪಾಶ್ಚಾತ್ಯ 'ಕೋತಿಕರಣ' ವನ್ನು (Aping) ಮೇಲ್ವರ್ಗದವರು ಕುಡಿತ ಎಂದು ರೂಢಿಸಿ ಕೊಂಡರೆ, ದಾರಿದ್ರ್ಯ, ನಶಾಪ್ರೀತಿ, ಹಾಗೂ ಸುಲಭಲಭ್ಯತೆಗಳು ಶ್ರಮವರ್ಗದವರನ್ನು ಕುಡಿತಕ್ಕೆ ತಳ್ಳುತ್ತವೆ. ಹೀಗಾಗಿ ಕುಡಿಯುವ ಕನ್ನಡಿಗರು ಹಿಂದೆಂದಿಗಿಂತಲೂ ಹೆಚ್ಚು ಸಂಖ್ಯೆಯಲ್ಲಿ ಕಂಡು ಬರುತ್ತಿದ್ದಾರೆ. ನಮ್ಮ ಹಿರಿಯರು ಪಾಲಿಸಿಕೊಂಡು ಬಂದ ಪಾನಪದ್ಧತಿಯನ್ನು ಅಂದರೆ ಯಾವಾಗ? ಹೇಗೆ? ಏಕೆ? ಏನನ್ನು? ಹಾಗೂ ಎಷ್ಟು? ಕುಡಿಯಬೇಕು? ಎನ್ನುವುದನ್ನು ರೂಢಿಸಿಕೊಂಡರೆ, ಮಿತ ಆಹಾರ, ಯೋಗ್ಯ ವ್ಯಾಯಾಮಗಳಂತೆ ಮಿತ ಪಾನವು, ಸರ್ವರಿಗೂ ಹಿತಕಾರಿಯಾದೀತು!



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. **ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ.**, (೧೯೭೭) ಚತುರ್ಥಾಶ್ವಾಸಂ, ಪದ್ಯ ೮೮-೮೯ (ಮೈಸೂರು).

*೨. ಶ್ರೀಗೊಂದೇಕರ್. ಜಿ. ಕೆ., (ಸಂ) **ಮಾನಸೋಲ್ಲಾಸ ಆಫ್ ಕಿಂಗ್‌ಸೋಮೇಶ್ವರ**, ಸಂಪುಟ III, ಅಧ್ಯಾಯ ೯ : ವಿಂಶತಿ ೫, ಪದ್ಯ. ೪೨೭-೫೧೪ **(ಮಾನ)**.

*೩. ಪಂಪ., ಪೂರ್ವೋಕ್ತ ; ಮಾನ VI, ಪದ್ಯ. ೪೩೭, ೪೪೧.

*೪. ಪಂಪನು ಮದ್ಯ, ಆಸವ, ಕಳ್ಳುಗಳಲ್ಲಿ ಅಂತರ ಮಾಡಿಲ್ಲ. ಮಾನಸೋಲ್ಲಾಸವು ತಾಳೆಯ ಹೆಂಡವನ್ನು ಪರಿಷ್ಕರಿಸಿ ಆಸವವಾಗಿ ಪರಿವರ್ತಿಸುವ ರೀತಿಯನ್ನು ಕೊಡುತ್ತದೆ. ಪರಿಷ್ಕರಿಸಿದ (Processed) ಸುರೆಗಳನ್ನೆಲ್ಲ ಮದ್ಯ ಅಥವಾ ಮದಿರಾ ಎಂದು ಮಾನಸೋಲ್ಲಾಸವು ಪರಿಗಣಿಸಿದಂತೆ ತೋರುತ್ತದೆ. ಮಲ್ಲರಸನ ದಶಾವತಾರ ಕಾವ್ಯ (೧೭ನೇ ಶತಕ)ದಲ್ಲಿ ತಾಳೆ ಈಚಲಗಳಿಂದ ಕಳ್ಳು, ಬೆಲ್ಲ ಬೇಲಗಳಿಂದ ಸಾರಾಯಿ, ಹಾಗೂ ರಾಗಿಗಳಿಂದ ಹೆಂಡ ತಯಾರಿಸುತ್ತಿದ್ದ ಉಲ್ಲೇಖ ಬರುತ್ತದೆ.

*೫. **ಮಾನ: ಪೂರ್ವೋಕ್ತ.** ಪದ್ಯಗಳು. ೪೫೦-೪೬೫.

*೬. ಹಿರೇಮಠ ಡಾ। ಆರ್. ಸಿ., (ಸಂ) (೧೯೭೩)., **ಕನಕದಾಸರ ಮೋಹನ ತರಂಗಿಣಿ**, ಧಾರವಾಡ., 'ಅನಿರುದ್ಧನ ನಗರಶೋಧನೆ'. ಪದ್ಯಗಳು ೮೨-೮೮ ಪುಟ ೨೫೨-೩.

*೭. ಕೇಶವಭಟ್ಟ ಪ್ರೊ ಟಿ., (ಸಂ) (೧೯೬೯), **ದೇವಪ್ಪಕವಿ ವಿರಚಿತ ರಾಮವಿಜಯಕಾವ್ಯ**., ಬೆಂಗಳೂರು, ಅಧ್ಯಾಯ ೧೦ ಪದ್ಯಗಳು ೫೬-೫೭.

*೮. ಪಂಪ., IV ಪದ್ಯ :೯೦ : ಮಾನ ಅಧ್ಯಾಯ ೯. ವಿಂಶತಿ ೫. ಪದ್ಯ ೪೯೯-೫೧೦. **ವಿರೂಪಾಕ್ಷ ಪಂಡಿತ ಕೃತ ಚನ್ನಬಸವ ಪುರಾಣ**. ಬೆಂಗಳೂರು, ೧೯೭೭. ಸಂಧಿ ೧೦ ಪದ್ಯ ೭೫.

*೯. ದೇವಿರಪ್ಪ. ಎಚ್., (ಸಂ) (೧೯೫೯), **ನಂಜುಂಡ ಕವಿ ವಿರಚಿತ ರಾಮನಾಥ ಚರಿತ್ರ**, ಮೈಸೂರು, ಪೂರ್ವಾರ್ಧ ೧೯ನೇ ಸಂಧಿ ಪದ್ಯ ೧೧; ಉತ್ತರಾರ್ಧ ೪೧ ನೇ.ಯ ಸಂಧಿ ಪದ್ಯ ೫೩-೫೪.

*೧೦. **ಕರ್ನಾಟಕ ತ್ರು ದಿ ಏಜಸ್.**, (೧೯೬೮), (ಕರ್ನಾಟಕ ಸರಕಾರದ ಪ್ರಕಟನೆ), ಪುಟ. ೨೦೪.

ಡಾ. ಎಸ್.ಸಿ. ಪಾಟೀಲ*

# ಬಿ.ಕೆ. ಹಳ್ಳಿಯ ಅಪೂರ್ವ ಭಿತ್ತಿ ಚಿತ್ರಕಲಾ ಭಾಂಡಾರ ಶೋಧ

ಕರಾವಳಿಯ ಪ್ರದೇಶದ ದೇವಾಲಯಗಳಿಗೆ ಅವುಗಳದೇ ಆದ ವಾಸ್ತು ವಿನ್ಯಾಸವಿದ್ದು, ಕಾವಿ ಬಣ್ಣದಿಂದ ಬಿಡಿಸಿದ ಕಾವಿ ಭಿತ್ತಿಚಿತ್ರಕಲೆ ಈ ಪ್ರದೇಶದ ದೇವಾಲಯದ ಪ್ರಮುಖ ಆಕರ್ಷಣೆಯಾಗಿದೆ. ಕರಾವಳಿಯುದ್ದಕ್ಕೂ ಕಂಡುಬರುವ ಈ ಕಾವಿ ಭಿತ್ತಿ ಚಿತ್ರಗಳ ಮಧ್ಯದಲ್ಲಿ ಅಪರೂಪದ ಬಹುವರ್ಣ ಭಿತ್ತಿಚಿತ್ರ ನೆಲೆಯೊಂದು ಇರುವುದು ಬಹುಪಾಲು ಇತಿಹಾಸಕಾರರಿಗೆ, ಕಲಾಸಕ್ತರಿಗೆ ಗೊತ್ತಿಲ್ಲ. ಕಾರವಾರ ಜಿಲ್ಲೆಯ ಹಳಿಯಾಳ ಸಮೀಪ ೪ ಕಿ.ಮೀ. ದೂರದಲ್ಲಿ ಹಳಿಯಾಳ ಧಾರವಾಡ ಮಧ್ಯದಲ್ಲಿ ಬಿ.ಕೆ.ಹಳ್ಳಿ ಎಂಬ ಚಿಕ್ಕ ಗ್ರಾಮವಿದೆ. ಬಿ. ಕೆ. ಹಳ್ಳಿ ಎಂದರೆ ಬಂಜರ ಕಂಚನಹಳ್ಳಿ ಎಂದು, ದಾಖಲೆಯಲ್ಲಿ ಬಂಜರ ಕಂಚನಹಳ್ಳಿಯೆಂದೇ ಕರೆಯಿಸಿಕೊಂಡ ಈ ಗ್ರಾಮದಲ್ಲಿ ಕದಂಬರ ಕಾಲದ ದೇವಾಲಯಗಳಿವೆ. ಹಾಗೆಯೇ ಬೇರೆ ಬೇರೆ ಕಾಲಘಟ್ಟಗಳಲ್ಲಿ ನಿರ್ಮಾಣವಾದ ದೇವಾಲಯಗಳು ಇವೆ. ಪ್ರಸ್ತುತ, ಊರ ಹೊರಗಡೆ ಇರುವ ಶ್ರೀ ರಾಮದೇವಾಲಯವೇ ಅಪರೂಪದ ಕಲಾಕೃತಿಗಳ ವರ್ಣವಿನ್ಯಾಸ ಹೊಂದಿರುವ ವೈಭವದ ತಾಣ. ಕಲಾಸಕ್ತರನ್ನು ಬೆರಗುಗೊಳಿಸುವ ಈ ಅದ್ಭುತ ಕಲಾಭಂಡಾರದ ಸ್ಥೂಲ ಪರಿಚಯ ಪ್ರಸ್ತುತ ಲೇಖನದಲ್ಲಿದೆ.

*ದೇವಾಲಯದ ಸ್ವರೂಪ*

ಶ್ರೀರಾಮ ದೇವಾಲಯವು ಕಲ್ಲಿನಿಂದ ಕಟ್ಟಿದ ಬಯಲು ಸೀಮೆಯ ದೇವಾಲಯದಂತೆ ಇರದೆ ಮಲೆನಾಡಿನ ಹಳೆಯ ಕೊಳವೆ ಹಂಚಿನ ಮನೆಗಳ ಮಾದರಿಯಲ್ಲಿದ್ದು, ಕಲ್ಲು, ಮಣ್ಣು, ಇಟ್ಟಿಗೆ ಉಪಯೋಗಿಸಿ ಕಟ್ಟಿದ್ದು ಮೇಲ್ಛಾವಣಿಗೆ ಮಣ್ಣಿನ ಹಂಚುಗಳನ್ನು ಹೊದಿಸಲಾಗಿದೆ. ದೇವಾಲಯದ ಸುತ್ತಲೂ ಪ್ರದಕ್ಷಿಣಾ ಪಥವಿದ್ದು ಅದರ ಸುತ್ತಲು ೨೮ ಕಟ್ಟಿಗೆ (ಮರದ) ಕಂಬಗಳಿವೆ. ಒಳಬದಿಯಲ್ಲಿ ಸಹ ಈ ಮರದ ೧೮ ಕಂಬಗಳು ದೇವಾಲಯವನ್ನು ಸುತ್ತುವರಿದಿವೆ. ಈ ಕಂಬಗಳಿಗೆ ಮೇಲ್ಭಾಗದಲ್ಲಿ ಮೇಲ್ಛಾವಣೆ ಇದೆ. ದೇವಾಲಯ ಮರದ ಕಂಬಗಳ ಮೇಲೆಯೇ ನಿಂತಿರುವುದು. ಈ ದೇವಾಲಯದ ಕೆಳಗಣ ಪ್ರಾಂಗಣ ೮½ ಫೂಟ್ ಅಗಲದ ಸುತ್ತಳತೆಯನ್ನು ಹೊಂದಿದ್ದು ಅದರ ಮೇಲ್ಗಡೆ ೧ ಫೂಟ ಎತ್ತರದಲ್ಲಿ ೩½ ಫೂಟ್‌ನ ಪ್ರಾಂಗಣವಿದೆ. ಹೀಗಾಗಿ ಭಿತ್ತಿ ಚಿತ್ರಗಳು ಸ್ವಲ್ಪ ಎತ್ತರದಲ್ಲಿವೆ.

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಒಳ ಭಾಗದಲ್ಲಿ ಮರದ ಮೇಲೆ ಮತ್ತು ಗಾರೆಯನ್ನು ಮಾಡಿ ಅದರ ಮೇಲೆಲ್ಲಾ ಚಿತ್ರಗಳನ್ನು ಬಿಡಿಸಲಾಗಿದೆ. ದೇವಾಲಯದ ಒಳಗಡೆ ಯಾವ ಸ್ಥಳವನ್ನೂ ಖಾಲಿ ಬಿಡದೆ ಎಲ್ಲವನ್ನು ವರ್ಣಚಿತ್ರಗಳಿಂದ ಅಲಂಕರಿಸಲಾಗಿದೆ. ದೊಡ್ಡದಾದ ಚೌಕುಗಳಿದ್ದು ಮತ್ತೆ ಸಣ್ಣ ಸಣ್ಣ ಪಟ್ಟಿಕೆಗಳನ್ನು ಮಾಡಿಕೊಳ್ಳಲಾಗಿದೆ. ಗರ್ಭಗುಡಿಯಲ್ಲೂ ಸಹ ಸುತ್ತಲು ವರ್ಣವಿನ್ಯಾಸ ಮಾಡಲಾಗಿದೆ. ದೇವಾಲಯದ ಬಲಬದಿಯಲ್ಲಿ ಗಾರೆಯ ಭಿತ್ತಿಯಲ್ಲಿ ಮಾತ್ರ ಚಿತ್ರಗಳಿವೆ. ೬ ಫೂಟ ಅಗಲ ೭ ಫೂಟ ಉದ್ದದ ಎರಡು ದೊಡ್ಡ ಪಟ್ಟಿಕೆಗಳಿದ್ದು, ಅದರಲ್ಲಿ ೨ ೧/೨ ಫೂಟ ಅಗಲ ೬ ಫೂಟ ಉದ್ದದ ಮತ್ತೆ ಎರಡು ಪಟ್ಟಿಕೆಗಳಿವೆ. ಇವುಗಳಲ್ಲಿ ಮತ್ತೆ ಸಣ್ಣ ಸಣ್ಣ ೬×೧೨ ಇಂಚಿನ ಆಯತಾಕಾರದ ಚೌಕುಗಳನ್ನು ಮಾಡಿಕೊಂಡು ಚಿತ್ರಬಿಡಿಸಲಾಗಿದೆ. ನಡುವೆ ಉದ್ದನೆಯ ಪಟ್ಟಿಯೊಂದಿದೆ. ದೇವಸ್ಥಾನದ ಬಲಬದಿಯ ಎಲ್ಲ ಗೋಡೆಯನ್ನು ಇಲ್ಲಿ ಚಿತ್ರಕಲೆಗಾಗಿ ಬಳಸಿಕೊಳ್ಳಲಾಗಿದೆ.

ಹಿಂಬದಿಯ ಗೋಡೆಯು ೬ ಫೂಟ ಉದ್ದನೆಯದಾಗಿದ್ದು ಅಲ್ಲಿ ೮ ಪಟ್ಟಿಕೆಗಳನ್ನು ಮಾಡಿಕೊಳ್ಳಲಾಗಿದೆ. ಎಡಬದಿಯ ಗೋಡೆಯಲ್ಲಿ ಬಲಬದಿಯ ಅಳತೆಯ ಗಾರೆಯೇ ಮುಂದು ವರಿದಿದ್ದು, ಇಲ್ಲಿ ೩ ಫೂಟ ಉದ್ದ ಮತ್ತು ೬ ಫೂಟ ಅಗಲದ ಪಟ್ಟಿಕೆಗಳಿವೆ. ಭಿತ್ತಿಚಿತ್ರಗಳಿರುವ ಗಾರೆಯೂ ಇಲ್ಲಿ ೨೦ ಫೂಟ ಅಗಲ ೬ ಫೂಟ ಉದ್ದದ ಅಳತೆಯನ್ನು ಹೊಂದಿದೆ. ದೇವಾಲಯದ ಮೂರು ಬದಿಯೂ ಈ ಗಾರೆಯ ಭಿತ್ತಿ ಚಿತ್ರಗಳಲ್ಲದೆ ಮೇಲ್ಛಾವಣೆಯಲ್ಲಿ ೩ ೧/೨ ಫೂಟನಷ್ಟು ಗೋಡೆಯ ಸುತ್ತಲು ಪ್ರಾಚೀನ ಮಾದರಿಯ ಬೇಟೆಯ ದೃಶ್ಯಗಳ ವರ್ಣ ಚಿತ್ರಗಳಿವೆ.

*ಭಿತ್ತಿಚಿತ್ರಗಳ ವಸ್ತು, ವಿಷಯ*

ರಾಮಾಯಣ, ಮಹಾಭಾರತ ಮತ್ತು ಇತರ ಪುರಾಣಗಳಿಗೆ ಸಂಬಂಧಿಸಿದ ಚಿತ್ರಗಳು, ಐತಿಹಾಸಿಕ, ಘಟನೆಗಳನ್ನು ಪ್ರತಿಬಿಂಬಿಸುವ ಚಿತ್ರಗಳು, ನಿತ್ಯಜೀವನದ ಘಟನೆಗಳು, ಪ್ರಾಣಿ ಪಕ್ಷಿಗಳು, ಕಾಲ್ಪನಿಕ ಪ್ರಾಣಿ ಪಕ್ಷಿಗಳು, ಪೌರಾಣಿಕ ಪ್ರಾಣಿಗಳಾದ ಐರಾವತ, ಕಾಮಧೇನು, ಉಚ್ಚೈಶ್ರವಸ್ಸು ಹೀಗೆ ವೈವಿಧ್ಯ

*ಪ್ರವಾಚಕರು ಮತ್ತು ಮುಖ್ಯಸ್ಥರು, ವಾಸ್ತುಶಿಲ್ಪ ಮತ್ತು ಪ್ರತಿಮಾಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ, ಬನಶಂಕರಿ, ಬಾದಾಮಿ - ೫೮೭೨೦೧.



ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳು ಇಲ್ಲಿ ರಚನೆಯಾಗಿವೆ. ಇವುಗಳಲ್ಲದೇ ಸಮಕಾಲೀನ ವ್ಯಕ್ತಿಗಳು, ನವಗ್ರಹಗಳಿಗೆ ಸಂಬಂಧಿಸಿದ ತಾಂತ್ರಿಕ ಚಿತ್ರ, ಮೇಷ, ವೃಷಭ, ಕಟಕ, ಮುಂತಾದ ದ್ವಾದಶರಾಶಿಗಳ ಚಿತ್ರ, ಅಷ್ಟದಿಕ್ಪಾಲಕರ ಚಿತ್ರಗಳು, ಕೈಲಾಸ, ವೈಕುಂಠ ಬ್ರಹ್ಮಲೋಕದ ಚಿತ್ರಗಳು ಇಲ್ಲಿ ರಚನೆಯಾಗಿವೆ. ಶೇಷಶಯನ ವಿಷ್ಣು, ಮಹಿಷಾಸುರಮರ್ದಿನಿ ಪಂಚವಿಂಶತಿ ರೂಪದ ಶಿವ, ಮುಂತಾದ ಪ್ರಮುಖ ದೇವತೆಗಳನ್ನು ಒಂದೊಂದು ಪ್ರತ್ಯೇಕ ಪಟ್ಟಿಕೆಯಲ್ಲಿ ಚಿತ್ರಿಸಿದ್ದಾರೆ. ಆಂಜನೇಯನ ರೂಪಗಳು ಇಲ್ಲಿ ವಿಶಿಷ್ಟವಾಗಿ ರಚನೆಯಾಗಿವೆ. ಒಂದು ಮುಖದ ಆಂಜನೇಯನಲ್ಲದೇ ಮೂರು ಮತ್ತು ಐದು ಮುಖದ ಆಂಜನೇಯನ ಚಿತ್ರಗಳಿವೆ. ಹತ್ತು ಕೈಗಳುಳ್ಳ ಆಂಜನೇಯನ ರೂಪವು ಉಗ್ರವಾಗಿದ್ದು, ನರಸಿಂಹನ ರೂಪ ಹೋಲುತ್ತದೆ. ಇಲ್ಲಿ ಎಲ್ಲ ಕಡೆಗೂ ಆಂಜನೇಯನನ್ನು ನೀಲವರ್ಣದಲ್ಲಿ ವಿಶೇಷವಾಗಿ ಚಿತ್ರಿಸಲಾಗಿದೆ.

ಗೋಡೆಯಲ್ಲಿ ಒಂದೊಂದು ವಿಸ್ತಾರವಾದ ಪಟ್ಟಿಕೆಗಳನ್ನು ಮಾಡಿ, ಅದರಲ್ಲಿ ಮತ್ತೆ ಸಣ್ಣ ಸಣ್ಣ ಚೌರಸಗಳನ್ನು ನಿರ್ಮಿಸಿಕೊಂಡು ಅವುಗಳಲ್ಲಿ ಒಂದು ಕಥೆ, ಇಲ್ಲವೇ ಪುರಾಣಕ್ಕೆ ಸಂಬಂಧಿಸಿದಂತೆ ಘಟನೆಗಳನ್ನು ಧಾರಾವಾಹಿಯ ಹಾಗೆ ಒಂದರ ನಂತರ ಒಂದಾಗಿ ರಚಿಸುತ್ತ ಹೋಗಲಾಗಿದೆ. ಒಂದು ದೊಡ್ಡ ಪಟ್ಟಿಕೆಯಲ್ಲಿ ರಾಮ-ರಾವಣರ ಯುದ್ಧವನ್ನು ಬಿಡಿಸಲಾಗಿದೆ. ಅಲ್ಲಿ ರಾಮ-ರಾವಣ, ಲಕ್ಷ್ಮಣ-ಇಂದ್ರಜಿತ, ರಾಮಲಕ್ಷ್ಮಣ -ಕುಂಭಕರ್ಣ ಹೀಗೆ ವಿವಿಧ ವ್ಯಕ್ತಿಗಳು ಮತ್ತು ಅವರ ಯುದ್ಧದ ವಿವಿಧ ಘಟನೆಗಳನ್ನು ನಿರೂಪಿಸಲಾಗಿದೆ. ಇಂತಹ ಅನೇಕ ದೊಡ್ಡ ಪಟ್ಟಿಕೆಗಳು ಇಲ್ಲಿವೆ.

ಐತಿಹಾಸಿಕ ಘಟನೆಗಳಿಗೆ ಸಂಬಂಧಿಸಿದ ಹೆಚ್ಚಿನ ಚಿತ್ರಗಳು ಗೋಡೆಯ ಮೇಲ್ಭಾಗದ ಕಟ್ಟಿಗೆಯ ಬೋದಿಗೆಯಲ್ಲಿವೆ. ಅಂತಹ ಒಂದು ಚಿತ್ರದಲ್ಲಿ ಬ್ರಿಟೀಷ್ ಶೈಲಿಯ ಹ್ಯಾಟನ್ನು ಧರಿಸಿ, ಕೈಯಲ್ಲಿ ಕೋವಿ ಹಿಡಿದು ಶಿಸ್ತಿನಿಂದ ಹೊರಟ ಸೈನಿಕರಿದ್ದಾರೆ. ಅವರ ಸಾಲಿನಲ್ಲಿ ಹಿಂದುಗಡೆ ಎರಡು ಕುದುರೆಗಳು ಬರುತ್ತಿವೆ. ಅದರಲ್ಲಿ ಕೆಂಪುಕುದುರೆಯ ಮೇಲೆ ಒಬ್ಬ, ಬಿಳಿಕುದುರೆಯ ಮೇಲೆ ಒಬ್ಬ ಅಧಿಕಾರಿಗಳು ಕುಳಿತಿದ್ದಾರೆ. ಅವರೂ ಬ್ರಿಟೀಷ್ ಶೈಲಿಯ ಉಡುಪಿನಲ್ಲೇ ಇದ್ದಾರೆ. ಈ ಸೈನಿಕರು ಸಾಲಾಗಿ ಹೋಗುತ್ತಿದ್ದು ಸಾಲಿನ ತೀರ ಮುಂದುಗಡೆ ವ್ಯಕ್ತಿಯೊಬ್ಬ ತಲೆಯ ಮೇಲೆ ಗಂಟುಹೊತ್ತು ಹೆಗಲಿಗೆ ಕಂಬಳಿ ಇಳಿಬಿಟ್ಟಿದ್ದಾನೆ. ಆತ ಬರೀ ಲಂಗೋಟಿ ಕಟ್ಟಿದ್ದು, ಉಳಿದಂತೆ ಬರಿಮೈಯಲ್ಲಿದ್ದಾನೆ. ಕೊರಳಲ್ಲಿ ಕರಿದಾರ ಒಂದನ್ನು ಕಟ್ಟಿದ್ದು ದಪ್ಪ ಮೀಸೆ ಬಿಟ್ಟಿದ್ದಾನೆ. ಅವನನ್ನು ನೋಡಿದ ತಕ್ಷಣ ಕುರಿಕಾಯುವ ಕುರುಬ ಜನಾಂಗದವನೆಂದು ಊಹಿಸಬಹುದಾಗಿದೆ. ಮತ್ತೊಂದು ಇಂತಹ ಉದ್ದ ಪಟ್ಟಿಕೆಯಲ್ಲಿರುವ ಐತಿಹಾಸಿಕ ಚಿತ್ರದಲ್ಲಿ ಆನೆ, ಕುದುರೆಗಳ ಸಮೇತ ಜನರು ವ್ಯಕ್ತಿಯೊಬ್ಬನನ್ನು ಮೇಣೆಯಲ್ಲಿ ಕುಳ್ಳಿರಿಸಿಕೊಂಡು ಹೋಗುತ್ತಿದ್ದಾರೆ. ಆನೆ, ಕುದುರೆಗಳ ಮೇಲೆ ಕುಳಿತ ವ್ಯಕ್ತಿಗಳು ಮತ್ತು ಮೇಣೆಯಲ್ಲಿ ಕುಳಿತ ವ್ಯಕ್ತಿ ಪೇಶ್ವೆ ಅರಸರ ವೇಷಭೂಷಣ ಧರಿಸಿದ್ದಾರೆ. ಕೆಲವು ದೊಡ್ಡ ಚಿತ್ರಗಳ ಮೇಲ್ಭಾಗದಲ್ಲಿ ದೀರ್ಘ ವೃತ್ತಾಕಾರದ ಚೌಕಗಳನ್ನು ಮಾಡಿಕೊಂಡು ಅದರಲ್ಲಿ ಅಷ್ಟದಿಕ್ಪಾಲಕರು, ದ್ವಾದಶರಾಶಿಗಳು, ಮತ್ತು ದಶಾವತಾರಗಳಿಗೆ ಸಂಬಂಧಿಸಿದ ಚಿತ್ರಗಳನ್ನು ರಚಿಸಲಾಗಿದೆ. ನವಗ್ರಹಗಳ ತಾಂತ್ರಿಕ ಸಂಬಂಧಿ ಚಿತ್ರ ಇಲ್ಲಿನ ವಿಶೇಷವಾಗಿದೆ. ನವಗ್ರಹಗಳನ್ನು ಅವರ ವಾಹನ ಸಮೇತ ಚಿತ್ರಿಸಿ ವರ್ಣ ಸಂಯೋಜನೆ ಮಾಡಲಾಗಿದೆ.

ಮೇಲ್ಭಾವಣಿ ಮತ್ತು ಗೋಡೆಯ ಮಧ್ಯದ ಸ್ಥಳದಲ್ಲಿ ಪ್ರತ್ಯೇಕ ಭಿತ್ತಿ ಲೇಪಿಸಿ, ರಚಿಸಿದ ಚಿತ್ರಗಳಲ್ಲಿ ಹೆಚ್ಚಾಗಿ ಬೃಹತ್ತಾದ ಪ್ರಾಣಿಚಿತ್ರಗಳನ್ನು ರಚಿಸಲಾಗಿದೆ. ಆನೆ, ಕುದುರೆ, ಹುಲಿ, ಕಾಲ್ಪನಿಕ ಮತ್ತು ಪೌರಾಣಿಕ ಪ್ರಾಣಿಗಳು ಇವೆ. ಹಾಗೇ ಹುಲಿಯು ಗಿಳಿಯನ್ನು ಕಾಲ ಕೆಳಗೆ ಹಾಕಿ ಬಗಿದು ತಿನ್ನುತ್ತಿರುವುದು, ಹುಲಿ ಆಕಳನ್ನು ಕೊಂದು ತಿನ್ನುತ್ತಿರುವುದು, ಪೌರಾಣಿಕ ಪ್ರಾಣಿಯೊಂದು ಗಿಳಿಯನ್ನು ಕೊಲ್ಲುತ್ತಿರುವುದು ಇಲ್ಲಿ ರಚನೆಯಾದ ಚಿತ್ರಗಳಲ್ಲಿ ಮುಖ್ಯವಾಗಿವೆ. ಬೆದರಿ ಓಡುತ್ತಿರುವ ಜಿಂಕೆಗಳ ಚಿತ್ರಗಳು ಇಲ್ಲಿ ರಚನೆಗೊಂಡಿವೆ.



ಪ್ರಾಣಿಬೇಟೆಯ ಚಿತ್ರದಲ್ಲಿ ಒಂದು ಪೌರಾಣಿಕ ಪ್ರಾಣಿಯು ಇನ್ನೊಂದು ಪೌರಾಣಿಕ ಪ್ರಾಣಿಯನ್ನು ಕೊಲ್ಲುತ್ತಿರುವ ದೃಶ್ಯವಿದೆ. ಬೇಟೆಯಾಡುತ್ತಿರುವ ಮೇಲಿನ ಪ್ರಾಣಿಯು ಹುಲಿ, ಸಿಂಹ, ಚಿರತೆ, ಮೊಸಳೆ, ಹಾವುಗಳ ಸಂಯುಕ್ತ ರೂಪ ಹೊಂದಿದ್ದರೆ, ಕೆಳಗೆ ಬೇಟೆಯಿಂದಾಗಿ ಸಾಯುತ್ತಿರುವ ಪ್ರಾಣಿ ಆನೆ, ಹಂದಿ, ಮೀನು, ಘೇಂಡಾಮೃಗಗಳ ಸಂಯುಕ್ತ ರೂಪ ಹೊಂದಿದೆ. ಇದೊಂದು ತುಂಬ ಕಲಾತ್ಮಕವಾದ ಮತ್ತು ಕುತೂಹಲಕಾರಿಯಾದ ಚಿತ್ರವೆನ್ನಬಹುದು.

ಕೆಲವು ಋಷಿ-ಮುನಿಗಳ ಚಿತ್ರಗಳು ಇಲ್ಲಿ ಇದ್ದು, ಅವರಲ್ಲಿ ಕೆಲವರು ಹೋಮ, ಧ್ಯಾನದಲ್ಲಿ ತೊಡಗಿದ್ದರೆ ಕೆಲವರು ಅನುಷ್ಠಾನಗಳಲ್ಲಿ ನಿರತರಾಗಿದ್ದಾರೆ. ಯೋಗಪಟ್ಟಬಂಧದಲ್ಲಿ ಕುಳಿತಿರುವ ಋಷಿ ಬಲಗೈಯಲ್ಲಿ ಮರಾಠಿ ಭಾಷೆಯ ಹಸ್ತಪ್ರತಿಯನ್ನು ಓದುತ್ತಿರುವ ದೃಶ್ಯವಿದೆ. ಈ ಚಿತ್ರಗಳಲ್ಲದೇ ಸಮುದ್ರ ಮಂಥನದೃಶ್ಯ, ಬೇಟೆಯ ದೃಶ್ಯ, ಪೂಜಾರಿಗಳು, ಈಶ್ವರಲಿಂಗವನ್ನು ಪೂಜೆ ಮಾಡುತ್ತಿರುವ ದೃಶ್ಯ ಮನೋಹರವಾಗಿದೆ. ಹೂಬಳ್ಳಿಯ ನಕ್ಷೆಗಳು ಇಲ್ಲಿನ ಇನ್ನೊಂದು ಗಮನಾರ್ಹ ಅಂಶ. ದೊಡ್ಡ ಮತ್ತು ಸಣ್ಣದಾದ ಬಣ್ಣ ಬಣ್ಣದ ಹೂಗಳು, ಬಳ್ಳಿಗಳು, ವಿವಿಧ ಗಿಡ ಮರಗಳು ಅವುಗಳ ನೈಜ ಮತ್ತು ಅಲಂಕಾರಿಕ ರೂಪಗಳು ಇಲ್ಲಿ ರಚಿತ ಗೊಂಡಿವೆ. ಕೆಲವು ಭಾಗದಲ್ಲಿ ವಿಶೇಷವಾಗಿ ಗರ್ಭಗುಡಿಯಲ್ಲಿ ದೊಡ್ಡದಾದ ಪಟ್ಟಿಕೆಯಿದ್ದು ಅಲ್ಲೆಲ್ಲಾ ಹೂಬಳ್ಳಿ ನಕ್ಷೆಯಿಂದ ಆ ಪಟ್ಟಿಕೆಯನ್ನು ಕಲಾತ್ಮಕಗೊಳಿಸಲಾಗಿದೆ.

***ಚಿತ್ರಗಳ ಕಾಲ***

ಈ ದೇವಾಲಯದಲ್ಲಿನ ಭಿತ್ತಿಚಿತ್ರಗಳ ವಸ್ತುವಿಷಯ, ವರ್ಣಗಾರಿಕೆ, ರಚನಾಶೈಲಿಗಳು ನರಗುಂದ, ಅಮ್ಮಿನಬಾವಿ, ಮಹಾಲಿಂಗಪುರಗಳಲ್ಲಿರುವ ಭಿತ್ತಿಚಿತ್ರಗಳಿಗೆ ಹೆಚ್ಚು ಹೋಲಿಕೆ ಯಾಗುವುದರಿಂದ ೧೮ನೇ ಶತಮಾನದಲ್ಲಿಯೇ ಇವು ಕೂಡಾ ರಚನೆಯಾಗಿರುವ ಸಾಧ್ಯತೆಗಳಿವೆ. ಪೇಶ್ವೆಯವರ ಕಾಲದಲ್ಲಿ ಬಹುಶಃ ಈ ವರ್ಣಚಿತ್ರಗಳು ರಚನೆಯಾಗಿರಬಹುದು.

ಇಲ್ಲಿನ ಶೇಷಶಯನ ವಿಷ್ಣುವಿನ ಚಿತ್ರವು ನರಗುಂದದ ಬಾಬಾಸಾಹೇಬನ ಅರಮನೆಯಲ್ಲಿ ರಚಿಸಿದ ಶೇಷಶಯನ ವಿಷ್ಣುವಿನ ಚಿತ್ರಕ್ಕೆ ಸರಿಯಾಗಿ ಹೋಲುತ್ತದೆ. ಅದೇ ರೀತಿ ಶಿವನು ನಂದಿಯ ಮೇಲೆ ಕುಳಿತು ಬರುತ್ತಿರುವ ಚಿತ್ರವೂ ನರಗುಂದದಲ್ಲಿ ಮತ್ತು ಇಲ್ಲಿ ಒಂದೇ ಶೈಲಿಯಲ್ಲಿ ರಚನೆಯಾಗಿವೆ. ಇವುಗಳಲ್ಲದೆ ಸಮುದ್ರ ಮಂಥನ ಮಾಡುವ ಚಿತ್ರ, ಗರುಡನು ಎರಡೂ ಕೈಯಲ್ಲಿ ಹಾವನ್ನು ಹಿಡಿದು ಕೊಲ್ಲುತ್ತಿರುವ ಚಿತ್ರ, ಕೆಲವು ಅಲಂಕಾರಿಕ ಹೂಬಳ್ಳಿಯ ನಕ್ಷೆಗಳು ನರಗುಂದದ ಭಿತ್ತಿಚಿತ್ರಗಳಿಗೆ ಸರಿಯಾಗಿ ಹೋಲುತ್ತವೆ.

ಹಾಗೆಯೇ ಇಲ್ಲಿನ ಕಾಮಧೇನುವಿನ ಚಿತ್ರ, ಪಂಚವಿಂಶತಿ ರೂಪದ ಶಿವನ ಚಿತ್ರಗಳು ಧಾರವಾಡ ಜಿಲ್ಲೆಯ ಅಮ್ಮಿನಬಾವಿಯ ಹಿರೇಮಠದಲ್ಲಿ ರಚನೆಯಾದ ಚಿತ್ರಗಳಿಗೆ ಹೋಲಿಕೆಯಾಗುತ್ತದೆ. ಅಮ್ಮಿನಬಾವಿಯ ಈ ಚಿತ್ರಗಳೂ ಕ್ರಿ.ಶ. ೧೮ನೇ ಶತಮಾನದಲ್ಲಿ ರಚನೆಯಾಗಿವೆ. ಚಿತ್ರದ ಶೈಲಿ ವರ್ಣಗಾರಿಕೆ ವಿನ್ಯಾಸಗಳಿಂದ ಇವು ಕೂಡಾ ೧೮ನೇ ಶತಮಾನದಲ್ಲಿ ರಚನೆಯಾದ ಚಿತ್ರಗಳೆಂದು ಹೇಳಬಹುದಾಗಿದೆ. ಇವು ಮೇಲ್ಭಾವಣಿ ಕೆಳಗಿನ ಭಿತ್ತಿಚಿತ್ರಗಳಿಗೆ ಮಾತ್ರ ಅನ್ವಯಿಸುವ ಮಾತುಗಳಾಗಿವೆ.

ಇಲ್ಲಿ ಚಿತ್ರಗಳು ಒಂದೇ ಶೈಲಿಯಲ್ಲಿರದೇ ಮೂರು ರೀತಿಯ ಶೈಲಿಯಲ್ಲಿವೆ. ಕೆಲವು ನುರಿತ ಚಿತ್ರಗಾರರ ಕೈಯಿಂದ ರಚನೆಯಾಗಿದ್ದರೆ ಇನ್ನೂ ಕೆಲವು ಚಿತ್ರಗಳು ಪ್ರಬುದ್ಧರಲ್ಲದವರ ಕೈಯಿಂದ ರಚನೆಗೊಂಡಿವೆ. ಅಲ್ಲದೇ ಗ್ರಾಮೀಣ ಜನಪದ ಚಿತ್ರಶೈಲಿಯೂ ಇಲ್ಲಿನ ಬಹುಪಾಲು ಚಿತ್ರಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ ದುರಗಮುರಗಿಯವರ ಪೆಟ್ಟಿಗೆಯ ಚಿತ್ರಗಳನ್ನು ಇವು ತದ್ರೂಪವಾಗಿ ಹೋಲುತ್ತವೆ. ಇಂತಹ ಶೈಲಿಯ ಚಿತ್ರಗಳನ್ನು ಈಗಲೂ ತಾಳಿಕೋಟೆಯ 'ಜಿನಗಾರ' ಕುಟುಂಬದ ಕಲಾವಿದರು ರಚನೆ ಮಾಡುತ್ತಿರುವುದು ಗಮನಿಸಿದರೆ ಅಲ್ಲಿಯ ಕಲಾವಿದರ ಹಿರಿಯರು ಇಲ್ಲಿ ಬಂದು ಚಿತ್ರ ರಚಿಸಿರುವ ಸಾಧ್ಯತೆಯಿದೆ.

ಮೇಲ್ಭಾವಣಿ ಸಮೀಪದ ಗೋಡೆಯಲ್ಲಿ ರಚನೆಯಾಗಿರುವ ಪ್ರಾಣಿಚಿತ್ರಗಳ ಶೈಲಿಯು ಉಳಿದ ಚಿತ್ರಗಳಿಗಿಂತ ಪ್ರಾಚೀನ ವೆನಿಸುತ್ತದೆ. ಮರದ ಪಟ್ಟಿಕೆಗಳಲ್ಲಿಯ ಚಿತ್ರಗಳು ವಿಜಯನಗರ ಭಿತ್ತಿಚಿತ್ರ ಶೈಲಿಯನ್ನು ಪ್ರತಿನಿಧಿಸುತ್ತವೆ. ಹೊರಗೋಡೆಯಸುತ್ತಲು ದೊಡ್ಡ ಗಾತ್ರದ ಪಟ್ಟಿಕೆಗಳಲ್ಲಿಯ ಜನಪದ ಶೈಲಿಯ ಚಿತ್ರಗಳು ೧೮ನೇ ಶತಮಾನದವುಗಳಾಗಿವೆ. ಹೀಗೆ ವಿವಿಧ ಕಾಲಘಟ್ಟದಲ್ಲಿ ವಿವಿಧ ಕಲಾವಿದರಿಂದ ಚಿತ್ರ ರಚಿಸಲಾಗಿದ್ದು, ಇನ್ನು ಸೂಕ್ಷ್ಮವಾಗಿ ಇವುಗಳ ಅಧ್ಯಯನ ಮಾಡಬೇಕಾಗಿದೆ. ಒಟ್ಟಾರೆ ಕರ್ನಾಟಕದಲ್ಲಿ ಸ್ಪಷ್ಟವಾಗಿ ಬಹುಪಾಲು ಉಳಿದಿರುವ ಭಿತ್ತಿಚಿತ್ರಗಳಲ್ಲಿ ಈ ರಾಮ ಮಂದಿರವು ಪ್ರಮುಖ ನೆಲೆಯಾಗಿದೆ.

***ಭಿತ್ತಿ ಚಿತ್ರಗಳ ಕೆಲವು ವೈಶಿಷ್ಟ್ಯಗಳು***

*೧. ಇಲ್ಲಿ ಕಿರುರೂಪ ಭಿತ್ತಿಚಿತ್ರಗಳಿವೆ ಮತ್ತು ಜಾನಪದ ಶೈಲಿಯ ಚಿತ್ರಗಳಿದ್ದು ಧಾರಾವಾಹಿಯ ಹಾಗೆ ಸಂಪೂರ್ಣ ರಾಮಾಯಣ ವನ್ನು ಚಿತ್ರಿಸಲಾಗಿದೆ.*

*೨. ಗಾರೆಯ ಭಿತ್ತಿಯಲ್ಲದೆ, ಮಣ್ಣಿನ ಭಿತ್ತಿಯೂ ಇಲ್ಲಿದ್ದು ಇಟ್ಟಿಗೆ ಯಿಂದ ದೇವಾಲಯ ನಿರ್ಮಾಣವಾಗಿದೆ.*

*೩. ಗಾರೆ, ಮಣ್ಣು, ಮತ್ತು ಮರದ ಭಿತ್ತಿಯ ಮೇಲೆ ವರ್ಣಚಿತ್ರ ಗಳನ್ನು ಬಿಡಿಸಲಾಗಿದೆ.*

*೪. ದೇವಾಲಯದ ಗರ್ಭಗುಡಿಯಲ್ಲಿಯೂ ವರ್ಣವಿನ್ಯಾಸ ವಿರುವದು ಒಂದು ಅಪರೂಪದ ಉದಾ ಹರಣೆಯಾಗಿವೆ.*

*೫. ಮೂರು ರೀತಿಯ ವಿಭಿನ್ನ ಶೈಲಿಯ ಭಿತ್ತಿಚಿತ್ರಣ ಇಲ್ಲಿಯ ಇನ್ನೊಂದು ವೈಶಿಷ್ಟ್ಯವಾಗಿದೆ. ವಿಜಯನಗರ ಪೂರ್ವದ ವಿಜಯನಗರ ನಂತರದ ಮತ್ತು ೧೮ನೇ ಶತಮಾನದ ಭಿತ್ತಿಚಿತ್ರಗಳು ರಚನೆಯಾಗಿವೆ.*

*೬. ಶೈವ ಮತ್ತು ವೈಷ್ಣವ ಧರ್ಮದ ಹಿನ್ನೆಲೆಯ ವರ್ಣಚಿತ್ರಗಳು ಮಾತ್ರ ವಿಶೇಷ ಸ್ಥಾನ ಪಡೆದಿವೆ.*

೭. *ಬೇಟೆಯಾಡುವ ಕಾಡುಪ್ರಾಣಿಗಳು, ಬೇಟೆಗೆ ಹೋಗುವ ದೃಶ್ಯ ಇಲ್ಲಿ ತುಂಬ ಕುತೂಹಲಕಾರಿಯಾಗಿ ಚಿತ್ರಣಗೊಂಡಿವೆ.*
೮. *ಉತ್ತರ ಕನ್ನಡ ಜಿಲ್ಲೆಯಲ್ಲಿ ಭಿತ್ತಿಚಿತ್ರಗಳ ನೆಲೆಗಳೂ ಹೇರಳ ವಾಗಿದ್ದು, ಇದೊಂದು ಮಾತ್ರ ಬಹುವರ್ಣ ಭಿತ್ತಿಚಿತ್ರಗಳ ದೇವಸ್ಥಾನವಾಗಿದೆ.*
೯. *ಈ ದೇವಾಲಯದ ಗರ್ಭಗುಡಿಯಲ್ಲಿ ವಿಶೇಷವಾಗಿ ೪ ಅಡಿ ಎತ್ತರದ ರಾಮ, ಲಕ್ಷ್ಮಣ, ಸೀತೆ, ಭರತ, ಶತ್ರುಘ್ನ ಮತ್ತು ಹನುಮಂತನ ಮೂರ್ತಿಗಳನ್ನು ಸಾಲಾಗಿ ನಿಲ್ಲಿಸಲಾಗಿದ್ದು, ರಾಮ ಲಕ್ಷ್ಮಣ ಸೀತೆಯೊಂದಿಗೆ ಭರತ, ಶತ್ರುಘ್ನರ ಶಿಲ್ಪ ಗಳಿರುವುದು ಈ ದೇವಾಲಯ ಒಂದರಲ್ಲೇ ಎನ್ನುವುದು ಇನ್ನೊಂದು ವೈಶಿಷ್ಟ್ಯ.*
೧೦. *ಗ್ರಾಮೀಣ ಪ್ರದೇಶದ ಸಾಮಾನ್ಯ ಜನಜೀವನದ ದೃಶ್ಯಗಳು ಗ್ರಾಮ ಕಸುಬುಗಳಿಗೆ ಸಂಬಂಧಿಸಿದ ದೃಶ್ಯಗಳು ಪ್ರಥಮ ಬಾರಿಗೆ ಇಲ್ಲಿ ಕಂಡುಬರುತ್ತವೆ.*

***ರಕ್ಷಣೆ*** : ಈ ದೇವಾಲಯವು ಅತ್ಯಂತ ದುಸ್ಥಿತಿಯಲ್ಲಿದ್ದು, ನಾಶದ ಭೀತಿ ಎದುರಿಸುತ್ತಿದೆ. ದೇವಾಲಯದ ಪೂಜಾರಿಗಳು ಈ ದೇವಾಲಯವನ್ನು ಸದ್ಯದಲ್ಲೇ ಕೆಡವಿ ಹೊಸದಾಗಿ ಕಟ್ಟಿಸುವ ಸಿದ್ಧತೆಯಲ್ಲಿದ್ದಾರೆ. ಹಾಗೇನಾದರೂ ಮಾಡಿದರೆ ಅಪೂರ್ವಕಲೆಯ ಭಿತ್ತಿಚಿತ್ರಗಳು ನಾಶವಾಗುತ್ತವೆ. ಊರಿನ ಎರಡು ಬಣಗಳ ರಾಜಕೀಯದಿಂದಾಗಿ ಯಾರೂ ಇತ್ತ ಲಕ್ಷ ಕೊಟ್ಟಿಲ್ಲ. ಜನರು ಸುತ್ತಮುತ್ತಲೂ ಬಹಿರ್ದೆಶೆಗೆ ಕುಳಿತು ಸುತ್ತಲಿನ ವಾತಾವರಣ ಗಲೀಜು ಮಾಡುತ್ತಿದ್ದಾರೆ. ಒಳಗಡೆಗೆ ಸೋಮಾರಿಗಳು ತಮ್ಮ ಜೂಜಾಟದ ಅಡ್ಡೆಯಾಗಿ ದೇವಾಲಯವನ್ನು ಉಪಯೋಗಿಸು ತ್ತಿದ್ದಾರೆ. ಮತ್ತೆ ಕೆಲವರು ಚಿತ್ರಗಳನ್ನು ಕೆತ್ತಿ, ಕೊರೆದು, ನಾಶಮಾಡಿದ್ದಾರೆ. ಮಕ್ಕಳು ಚಾಕ್‌ಪೀಸ್ ಮತ್ತು ಇದ್ದಿಲಿನಿಂದ ಭಿತ್ತಿಚಿತ್ರಗಳ ಮೇಲೆ ಗೀಚಾಡಿದ್ದಾರೆ. ಇಂತಹ ಅಮೂಲ್ಯ ಚಿತ್ರಕಲಾ ಭಂಡಾರದ ಪ್ರಾಚೀನ ಸ್ಮಾರಕವನ್ನು ಉಳಿಸುವ ನಿಟ್ಟಿನಲ್ಲಿ ಜನಪ್ರತಿನಿಧಿಗಳು, ಸರ್ಕಾರ, ಪುರಾತತ್ವ ಇಲಾಖೆ, ಸಂಘ ಸಂಸ್ಥೆಗಳು ಆಸಕ್ತ ಅಭಿಮಾನಿಗಳು ಇತ್ತಕಡೆ ಗಮನಹರಿಸಿ ಈ ದೇವಾಲಯದ ಭಿತ್ತಿಚಿತ್ರಗಳು ನಾಶವಾಗದ ಹಾಗೆ ಉಳಿಸಿ ಕೊಳ್ಳಬೇಕಾಗಿದೆ.



(ಕ್ಷೇತ್ರಕಾರ್ಯದಲ್ಲಿ ನೆರವಾದ ಹಳಿಯಾಳದ ಡಾ. ಸದಾನಂದ ಪಾಟೀಲ, ಸಂಶೋಧನ ವಿದ್ಯಾರ್ಥಿ ಡಾ.ಯಾದಪ್ಪ ಪರದೇಶಿ, ಛಾಯಾಚಿತ್ರ ತೆಗೆದುಕೊಟ್ಟ ಗೆಳೆಯರಾದ ಜ.ಜ. ಹಿರೇಮಠ, ಇಲಕಲ್‌ದ ಬಸವರಾಜ ಗವಿಮಠ, ಮತ್ತು ಬಾದಾಮಿಯ ಆನಂದ ಪೂಜಾರ, ಎಮ್.ಆಯ್.ಬಾರಾವಲಿ, ಬಿ.ಕೆ.ಹಳ್ಳಿಯ ಶಾಲಾ ವಿದ್ಯಾರ್ಥಿನಿಯರಾದ ರೇಖಾ ತುರಸ್ಕರ, ಸುಧಾ ಲೊಂಡಿ ಇವರಿಗೆಲ್ಲ ಕೃತಜ್ಞತೆಗಳು.)

ಆರ್. ಎಚ್. ಕುಲಕರ್ಣಿ *

# ಹಂಪೆ ವಿರುಪಾಕ್ಷ ದೇವಾಲಯದ ಮಹಾ ರಂಗಮಂಟಪದ ಒಳಭಿತ್ತಿ ಚಿತ್ರ : ವಿದ್ಯಾರಣ್ಯರದೆ? ವ್ಯಾಸರಾಯರದೆ?

ಕರ್ನಾಟಕದ ಭಿತ್ತಿ ಚಿತ್ರ ಕಲೆಗೆ ಮತ್ತೊಂದು ಬಾರಿ ಹೊಸ ಆಯಾಮ ದೊರೆತಿದ್ದು ವಿಜಯನಗರದ ಕಾಲದಲ್ಲಿ. ವಾಸ್ತುಕಲೆ ಶಿಲ್ಪಕಲೆ, ಗಾರೆಕಲೆಯೊಂದಿಗೆ - ಚಿತ್ರಕಲೆಯೂ ಕೂಡಾ ತನ್ನದೆ ಆದ ತಾಂತ್ರಿಕ ಪರಂಪರೆಯೊಂದಿಗೆ ಬೆಳೆಯಿತು. ಹಲವಾರು ವಿಷಯ, ವ್ಯಾಪ್ತಿಗಳಿಗೆ ಸೇರಿದ ಚಿತ್ರಗಳು ದೇವಾಲಯಗಳ ಒಳಗೋಡೆಯ ಮೇಲೆ ಒಳಮಾಳಿಗೆಗಳ ಮೇಲೆ ಚಿತ್ರಿತವಾಗಿದ್ದು ಹಲವಾರು ಉದಾಹರಣೆಗಳಿಂದ ತಿಳಿದು ಬರುತ್ತದೆ. ಹಂಪೆಯ ವಿರುಪಾಕ್ಷ ದೇವಾಲಯ, ಲೇಪಾಕ್ಷಿ, ತಾಡಪತ್ರಿ ಹಾಗೂ ಆನೆಗೊಂದಿಯಲ್ಲಿನ ಮಠಗಳಲ್ಲಿಯ ಚಿತ್ರಗಳನ್ನು ಇಲ್ಲಿ ಉದಾಹರಿಸಬಹುದು. ಈ ಕಾಲದಲ್ಲಿಯೇ ವಿಜಯನಗರದ ಚಿತ್ರಕಲೆಯಲ್ಲಿ ವಿಶಿಷ್ಟವಾದ ಶೈಲಿಯೊಂದರ ಬೆಳವಣಿಗೆ ಆದದ್ದು.

ಈ ಪ್ರಬಂಧದ ಮುಖ್ಯ ಚರ್ಚಾವಸ್ತುವಾದ ಯತಿಗಳ ಚಿತ್ರ ವಿದ್ಯಾರಣ್ಯರದೇ ಅಥವಾ ವ್ಯಾಸರಾಯರದೆ ಎನ್ನುವುದನ್ನು ವಿವರವಾಗಿ ಚರ್ಚಿಸುವ ಮೊದಲು ಈ ಭಿತ್ತಿಚಿತ್ರ ಇರುವ ಚಿತ್ರದ ಸ್ಥೂಲ ಪರಿಚಯದ ಅವಶ್ಯಕತೆ ಇದೆ.

ಚರ್ಚೆಯಲ್ಲಿರುವ ಭಿತ್ತಿ ಚಿತ್ರಗಳು[*1] ಹಂಪಿಯ ವಿರುಪಾಕ್ಷ ದೇವಾಲಯದ ಮಹಾರಂಗ ಮಂಟಪದ ಒಳ ಮಾಳಿಗೆಯಲ್ಲಿವೆ. ಈ ಭಿತ್ತಿ ಚಿತ್ರಗಳು ಫ್ರೆಸ್ಕೋ ತಾಂತ್ರಿಕತೆಯಲ್ಲಿ ಚಿತ್ರಿಸಲ್ಪಟ್ಟಿವೆ. ಒಳಮಾಳಿಗೆಯನ್ನು ಹಲವಾರು ಚೌಕಾಕಾರದ ಪಟ್ಟಿಕೆಗಳಿಂದ ವಿಭಾಗಿಸಿ ಅದರಲ್ಲಿ ಹಲವಾರು ಪ್ರಮುಖ ದೇವಾನುದೇವತೆಯರ ಚಿತ್ರಗಳನ್ನು ಚಿತ್ರಿಸಿದೆ. ಜೊತೆಗೆ ಪೌರಾಣಿಕ ಕಥಾವಸ್ತುವಿಗೆ ಸಂಬಂಧಿಸಿದ ಚಿತ್ರಗಳು ಇವೆ. ಮುಖ್ಯವಾಗಿ ವಿಷ್ಣು, ಲಕ್ಷ್ಮೀ ಶಿವ ಪಾರ್ವತಿ ಬ್ರಹ್ಮ ಸರಸ್ವತಿ ಗಿರಿಜಾ ಕಲ್ಯಾಣ, ಮನ್ಮಥನು ಶಿವನ ತಪಸ್ಸನ್ನು ಭಂಗಗೊಳಿಸುತ್ತಿರುವ ಚಿತ್ರ, ಅಷ್ಟದಿಕ್ಪಾಲಕರು (ತ್ರಿ-ಪುರಾಂತಕ, ಶಿವ ರತಿ-ಮನ್ಮಥರು ದಶಾವತಾರದ ಚಿತ್ರಗಳು 'ಸೀತಾ ಸ್ವಯಂವರ, ದ್ರೌಪದಿ ಸ್ವಯಂವರ, ಅರ್ಜುನನ



*ಯು.ಜಿ.ಸಿ. ಹಿರಿಯ ಸಂಶೋಧನ ವಿದ್ಯಾರ್ಥಿ, ಪ್ರಾ.ಇ. ಮತ್ತು ಪು. ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦ ೦೦೬.



ಮತ್ಸ್ಯಯಂತ್ರ ಭೇದಿಸುವ ಚಿತ್ರ ಗೋಪಿಕಾ ವಸ್ತ್ರಾಪಹರಣ, ರಥಗಳ ಸವಾರಿ ಚಿತ್ರಗಳು ಹಲವಾರು ನರ್ತನ ಆಕೃತಿಗಳು ಇವೆ. ಇವೆಲ್ಲ ಚಿತ್ರಗಳಿಗೆ ಭಿನ್ನವಾಗಿ - ಯತಿಗಳ ಮೆರವಣಿಗೆಯ ಚಿತ್ರ, ಭಿತ್ತಿ ಚಿತ್ರದ ಕೊನೆಯ ಸ್ತರದಲ್ಲಿ ಇದೆ. ಭಿತ್ತಿ ಚಿತ್ರದಲ್ಲಿ ಇದೊಂದೆ ಐತಿಹಾಸಿಕ ವ್ಯಕ್ತಿಯನ್ನು ತೊರಿಸುವ ಚಿತ್ರ. ಆದುದರಿಂದ ಈ ಯತಿಗಳು ಅಂದು ಅತ್ಯಂತ ಪ್ರಮುಖ ಸ್ಥಾನ ಪಡೆದವರಾಗಿದ್ದು - ರಾಜಕೀಯವಾಗಿ ಧಾರ್ಮಿಕವಾಗಿ ಅವರು ಉನ್ನತ ಸ್ಥಾನದಲ್ಲಿದ್ದರೆಂದು ನಾವು ಊಹಿಸಬಹುದು. ಈ ಚಿತ್ರದಲ್ಲಿ ಯತಿಗಳು ತೆರೆದ ಪಲ್ಲಕ್ಕಿಯಲ್ಲಿ ಕುಳಿತಿದ್ದಾರೆ. ಅವರ ಮುಂದೆ ಮತ್ತು ಹಿಂದೆ ರಾಜ ಮರ್ಯಾದೆಯಿಂದ ಕೂಡಿದ ಆನೆ, ಕುದುರೆ, ಒಂಟೆ ಮತ್ತು ಕಾಲಾಳುಗಳು ರಾಜಧಿರಾಜರು ಇತ್ಯಾದಿ., ಮೆರವಣಿಗೆಯಲ್ಲಿ ಹೊರಟ ರೀತಿಯಲ್ಲಿ ಇದ್ದಾರೆ. ಈ ಮೆರವಣಿಗೆ ಚಿತ್ರದ ಕೊನೆಯಲ್ಲಿ ಇರುವ ವಿರುಪಾಕ್ಷ ದೇವಾಲಯದ ಕಡೆಗೆ ಮುಖ ಮಾಡಿ ಹೊರಟ ಚಿತ್ರಣವಿದೆ.

ಈ ಭಿತ್ತಿ ಚಿತ್ರವನ್ನು ಅಂದರೆ ಪಲ್ಲಕ್ಕಿಯಲ್ಲಿ ಕುಳಿತಿರುವ ಯತಿಗಳನ್ನು ವಿದ್ಯಾರಣ್ಯರೆಂದು ಗುರುತಿಸಿಲಾಗಿದೆ[*೨]. ಈ ಹಿಂದಿನ ಇದೇ ಅಭಿಪ್ರಾಯ ಹಾಗೆ ಮುಂದುವರೆದುಕೊಂಡು ಬಂದಿದೆ. ವಿದ್ಯಾರಣ್ಯ - ಕ್ರಿಯಾಶಕ್ತಿ, ಈಗ -ವ್ಯಾಸರಾಯ ಹೀಗೆ ಸಾಧ್ಯವಿರುವ ಎಲ್ಲ ಗುರುತಿಸುವಿಕೆಯನ್ನು ಮಾಡಬಹುದು. ವಿದ್ಯಾರಣ್ಯರು: ವಿಜಯನಗರದ ಅವರ ಸಂಬಂಧ ಬಹುಶಃ ೧೯೩೦ರ ದಶಕದ ವಿದ್ವಾಂಸರಿಗೆ - ಈ ಚಿತ್ರವನ್ನು ವಿದ್ಯಾರಣ್ಯರೆಂದು ಗುರುತಿಸಲು ಸ್ಫೂರ್ತಿನೀಡಿರಬಹುದು. ಆದರೆ ಕಲಾ ಇತಿಹಾಸದ ಮತ್ತು ಐತಿಹಾಸಿಕ ಚೌಕಟ್ಟಿನಲ್ಲಿ ಈ ಚಿತ್ರಗಳನ್ನು ನೋಡಲು ಯತ್ನಿಸಿದ ಕೆಲ ವಿದ್ವಾಂಸರು ಯಾವುದೇ ಒಮ್ಮತವಿಲ್ಲದ ಚರ್ಚೆಯಲ್ಲಿ ಪರ್ಯಾವಸಾನ ಗೊಂಡಿದ್ದಾರೆ. ಇವುಗಳ ಕಾಲದ ಬಗ್ಗೆಯೂ ಒಮ್ಮತದ ನಿರ್ಣಯವಿಲ್ಲ. ಕೆಲ ವಿದ್ವಾಂಸರಂತೂ ಇವುಗಳು ೧೮ - ೧೯ನೇ ಶತಮಾನದಲ್ಲಿ[*೩] ರಚಿಸಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದ್ದರಿಂದ ಈ ಭಿತ್ತಿಚಿತ್ರಗಳ ರಚನಾ ಕಾಲ ಅವುಗಳಲ್ಲಿನ ಚಿತ್ರಗಳ ಶೈಲಿ ತಾಂತ್ರಿಕತೆ ಈ ಎಲ್ಲ ಅಂಶಗಳಿಗೆ ಪ್ರಾಮುಖ್ಯತೆ ನೀಡಲೇ ಬೇಕು ಅಂದಾಗ ಮಾತ್ರ ಪ್ರಸ್ತುತ ಚಿತ್ರಗಳ ಅಧ್ಯಯನದ ಸಾರ ದೊರೆಯವುದು.

***ಯತಿಗಳ ಚಿತ್ರದ ವಿವರಣೆ*** : ಯತಿಗಳ ಚಿತ್ರದ ಸಂಯೋಜನೆಯು ಅಡ್ಡ ಪಟ್ಟಿಯಂತೆ ಉದ್ದವಾಗಿ ಇರುವ ಅವಕಾಶದಲ್ಲಿ (Space) ಇದೆ. ಚಿತ್ರದ ಕೊನೆಯಭಾಗದಲ್ಲಿ ಹಂಪಿಯ ವಿರುಪಾಕ್ಷದೇವರನ್ನು ಲಿಂಗ ರೂಪದಲ್ಲಿ ತೋರಿಸಿದೆ. ದೇವಸ್ಥಾನದ ಗೋಪುರವನ್ನು ತೋರಿಸ ಲಾಗಿದೆ. ಈ ದೇವಾಲಯದೆಡೆಗೆ ಪ್ರಸ್ತುತ ಯತಿಗಳ ಚಿತ್ರ ಮುಖಮಾಡಿ ದೇವಾಲಯದ ಮುಖ್ಯಬೀದಿಯಲ್ಲಿ ಹೊರಟಂತೆ ಇದೆ. ಯತಿಗಳು ತೆರೆದ ಪಲ್ಲಕ್ಕಿಯಲ್ಲಿ ಕುಳಿತಿದ್ದಾರೆ. ತಲೆಯ ಮೇಲೆ ಹೊದೆದ ಕೆಂಪು ವಸ್ತ್ರ, ಕೈಯಲ್ಲಿ ಓಲೆಗರಿಯಂತಹ ವಸ್ತು ಇದ್ದು ಇನ್ನೊಂದು ಕೈ ಚಿನ್ಮುದ್ರೆಯಲ್ಲಿದೆ. ಸಂಯೋಜನೆಯ ತೀರ ಮುಂದಿನ ಭಾಗದಲ್ಲಿ ಆನೆಯ ಮೇಲೆ ಕುಳಿತ ಸವಾರನು ಅದರ ಹಿಂದೆ ಭರ್ಜಿ ಹಿಡಿದ ಯೋಧರು ರಾಜಪ್ರತೀಕದಂತಿರುವ ಕವಚ ಸಹಿತ ದಂಡಗಳು ಮತ್ತು ದುಂಡಧಾರಿಗಳು ಇದ್ದಾರೆ. ಪಲ್ಲಕ್ಕಿಯ ಹಿಂದೆ ಆನೆ, ಒಂಟೆಯ ಮೇಲೆ ಇರುವ ನಗಾರಿ ಇವೆ. ಅವರ ಎರಡೂ ಬದಿಯಲ್ಲಿ ಜೊತೆ ಜೊತೆಯಾಗಿ ಚಿತ್ರಿಸಿರುವ ವಾದ್ಯಕಾರರು, ಚಾಮರಧಾರಿಗಳು, ಖಾಸ ಪರಿಚಾರಕರುಗಳ ಆಕೃತಿಗಳಿವೆ. ಆ ಕಾಲದ ಉಡುಗೆ ತೊಡುಗೆಗಳಿಂದ ಅಲಂಕೃತರಾದ ಯೋಧರು, ಮೇಲೆ ಚುಕ್ಕಿಗಳ ವಿನ್ಯಾಸದ ಅಂಗ ಮತ್ತು ಬಿಗಿಯಾಗಿ ಉಟ್ಟ ಧೋತ್ರಗಳಿವೆ. ಎಲ್ಲಾ ಆಕೃತಿಗಳು ರೇಖಾಪ್ರಧಾನವಾದ ಆಕೃತಿಗಳು. ಚಿತ್ರದ ಸಂಯೋಜನೆಯಲ್ಲಿ ಕಲಾವಿದ ವಿಭಿನ್ನ ಕಣ್ನೆಲೆಗಳಿಂದ (Perspective) ನೋಡಿದಾಗಿನ ಅನುಭವ ಕೊಡುವ ರೀತಿಯಲ್ಲಿ ಆಕೃತಿಗಳ ಮಧ್ಯೆ ನೈಜವಾದ ಅಂತರಿಕ ಸಂಬಂಧ ಕಲ್ಪಿಸಿದ್ದಾನೆ. ಇದರಿಂದ ಅವನು ನುರಿತ ಕಲಾವಿದನೇ ಆಗಿರಬಹುದೆಂದು ನಾವು ತರ್ಕಿಸಬಹುದಾಗಿದೆ.

***ಚರ್ಚೆ*** : ಯತಿಗಳ ಚಿತ್ರವನ್ನು ನಾವು ವಿದ್ಯಾರಣ್ಯರಲ್ಲ, ವ್ಯಾಸರಾಯರೆದೆಂದು ಗುರುತಿಸಬಹುದಾಗಿದೆ. ಇದಕ್ಕೆ ಶಾಸನೋಕ್ತ



ಆಧಾರದ ಅನುಪಸ್ಥಿತಿಯಲ್ಲಿ ಇಂದು ಇವರನ್ನೇ ತೋರಿಸುತ್ತದೆ ಎಂದು ಹೇಳಲು ಅಸಾಧ್ಯವಾದರೂ ದೊರೆವ ಸಮಕಾಲೀನ ದಾಖಲೆಗಳನ್ನು ಗಮನಿಸಿದಾಗ ಇದನ್ನು ವ್ಯಾಸರಾಯರದೆಂದು ಹೇಳಬಹುದಾಗಿದೆ. ಇದನ್ನು ವಿದ್ಯಾರಣ್ಯ ಅಥವಾ ಕ್ರಿಯಾಶಕ್ತಿಯೆಂದು ಹೇಳಲು ಸಾಕಷ್ಟು ಆಧಾರಗಳು ಇಲ್ಲವೇ ಇಲ್ಲ. ಆದರೆ ಈ ಕೆಳಗಿನ ಕೆಲ ದಾಖಲೆಗಳು ಇದನ್ನು ವ್ಯಾಸರಾಯರದೆಂದು ರುಜುವಾತು ಪಡಿಸುತ್ತವೆ.

೧. ಪ್ರಸ್ತುತ ಭಿತ್ತಿ ಚಿತ್ರಗಳಿರುವುದು ವಿರೂಪಾಕ್ಷ ದೇವಾಲಯದ ಮಹಾ ರಂಗಮಂಟಪದ ಒಳಭಿತ್ತಿಯಲ್ಲಿ.
೨. ಮಹಾ ರಂಗಮಂಟಪದ ನಿರ್ಮಾಣವಾದದ್ದು ಶ್ರೀ ಕೃಷ್ಣದೇವರಾಯನ ಕಾಲದಲ್ಲಿ[೪], ವರ್ಷ ೧೪೩೦ರ ಶುಕ್ಲಪಕ್ಷ ಮಾಘ ಶುದ್ಧ೧೪ರಂದು ಅಂದರೆ, ಕ್ರಿ. ಶ. ೧೫೧೦ ಜನವರಿ ೨೪ ರಂದು ಶ್ರೀ ಕೃಷ್ಣದೇವರಾಯ ಪಟ್ಟಾಭಿಷಿಕ್ತನಾದ ನೆನಪಿಗೋಸ್ಕರ ಈ ಮಹಾ ರಂಗಮಂಟಪದ ನಿರ್ಮಾಣ ರಾಯಗೋಪುರದ ನಿರ್ಮಾಣ ಮಾಡಿ ಹಲವಾರು ದಾನಗಳನ್ನು ದತ್ತಿಗಳನ್ನು ದೇವಸ್ಥಾನಕ್ಕೆ ಮತ್ತು ಶ್ರೀ ವಿರೂಪಾಕ್ಷದೇವರಿಗೆ ನೀಡಿದ ವಿಷಯ ಶಾಸನೋಕ್ತವಾಗಿದೆ.
೩. ಅಂದ ಮೇಲೆ ಪ್ರಸ್ತುತ ಭಿತ್ತಿ ಚಿತ್ರಗಳು ಕ್ರಿ. ಶ. ೧೫೧೦ರ ನಂತರವೇ ರಚಿಸಲ್ಪಟ್ಟಿರಬೇಕು. ಇವುಗಳ ಕಾಲವನ್ನು ಕೃಷ್ಣದೇವರಾಯನ ಆಳ್ವಿಕೆಯ ಕಾಲಕ್ಕೆ ನಿರ್ಧರಿಸಬಹುದು.
೪. ವ್ಯಾಸಾರಾಯರು ಕೃಷ್ಣದೇವರಾಯ ಪಟ್ಟಕ್ಕೆ ಬರುವುದಕ್ಕಿಂತಲೂ ಮೊದಲಿನಿಂದಲು ಹಂಪಿಯಲ್ಲಿಯೇ ಇದ್ದು ಧಾರ್ಮಿಕವಾಗಿ ಉನ್ನತ ಸ್ಥಾನ ಹೊಂದಿದ್ದರು.[೫] ನಂತರ ಕೃಷ್ಣದೇವರಾಯನ ಕಾಲದಲ್ಲಿ ಅವನ ಧಾರ್ಮಿಕ ಮಾರ್ಗದರ್ಶಿಗಳೂ ಆದರು. ಅಲ್ಲದೆ ಅವರು ರಾಜಗುರುವೂ ಆಗಿದ್ದರು. ವ್ಯಾಸರಾಯರ ಮತ್ತು ಕೃಷ್ಣದೇವರಾಯನ ಸಂಬಂಧ ಕುರಿತು ವಿವರಿಸುವ ಹಲವಾರು ಕೃತಿಗಳಿವೆ. ***ಕೃಷ್ಣದೇವರಾಯನ ದಿನಚರಿ*** ಹಾಗೂ ಸೋಮನಾಥ ಕವಿ ವಿರಚಿತ ವ್ಯಾಸಯೋಗಿ ಚರಿತ್ರ ಇವೇ ಮೊದಲಾದ ಕೃತಿಗಳು ಈ ಬಗ್ಗೆ ಸಾಕಷ್ಟು ಮಾಹಿತಿ ಒದಗಿಸುತ್ತವೆ.
೫. ಕೃಷ್ಣದೇವರಾಯನಿಗೆ ಒದಗಿದ ಕುಹಯೋಗವನ್ನು ಪರಿಹರಿಸಿದರೆಂಬುದು ಮಿಥ್ಯವೆನಿಸಿದರೂ ಇದರಲ್ಲಿ ತಥ್ಯಾಂಶವಿಲ್ಲದೆ ಇಲ್ಲ.
೬. ದಾಸಕೂಟದ ಮುಖ್ಯ ಹರಿಕಾರವಾಗಿ ಪುರಂದರ, ಕನಕ ಮತ್ತು ವಾದಿರಾಜರಿಗೆ ಮಾರ್ಗದರ್ಶಿಗಳಾಗಿ ಭಕ್ತಿಪಂಥದಲ್ಲಿ ಕ್ರಾಂತಿಯನ್ನೇ ಮಾಡಿದರು[೬].
೭. ಐತಿಹಾಸಿಕವಾಗಿ ಕೃಷ್ಣದೇವರಾಯನ ಕಾಲದಲ್ಲಿ ಅವನು ವ್ಯಾಸರಾಯರಿಗೆ ನೀಡಿದ ಹಲವಾರು ದಾನಗಳ ಉಲ್ಲೇಖಗಳಿವೆ.[೭] ವಿಠ್ಠಲ ದೇವಾಲಯದಲ್ಲಿ ಶ್ರೀಯೋಗವರದನರಸಿಂಹಸ್ವಾಮಿಯನ್ನು ಅಚ್ಯುತರಾಯನ ಕಾಲದಲ್ಲಿ ಪ್ರತಿಷ್ಠಾಪಿಸಿದುದಕ್ಕೆ ಶಾಸನದ ಆಧಾರವಿದೆ. ಇದರಿಂದ ಅಚ್ಯುತರಾಯನ ಆಳ್ವಿಕೆಯ ಕಾಲದಲ್ಲೂ ಅವರಿಗೆ ವಿಶೇಷ ಸ್ಥಾನಮಾನಗಳಿದ್ದವು ಎಂದ ಹೇಳಬಹುದು.

ಈ ಮೇಲಿನ ಕಾರಣಗಳಿಂದ ವ್ಯಾಸರಾಯರು ತುಳುವಂಶದ ಅರಸರ ರಾಜಗುರು ಆಗಿದ್ದರು - ಉನ್ನತ-ಸ್ಥಾನಹೊಂದಿದ್ದರು ಎಂದು ಹೇಳಬಹುದು. ಆದುದರಿಂದ ಭಿತ್ತಿಚಿತ್ರಗಳಲ್ಲಿ ಅಂದಿನ ಐತಿಹಾಸಿಕ ವ್ಯಕ್ತಿಯನ್ನೇ ಚಿತ್ರಿಸುತ್ತಾರೆಯೇ ಹೊರತಾಗಿ ವಿದ್ಯಾರಣ್ಯರನ್ನಲ್ಲ. ಹೀಗಾಗಿ ಪ್ರಸ್ತುತ ಯುತಿಗಳು ವ್ಯಾಸರಾಯರಾಗದೆ ಬೇರೆಯುವರಾಗಲು ಹೇಗೆ ಸಾಧ್ಯ? ಕೃಷ್ಣದೇವರಾಯನ ಕಾಲದ ಯಾವುದೇ ಶಾಸನಗಳಲ್ಲಿ ವಿದ್ಯಾರಣ್ಯರ ಕುರಿತು ಉಲ್ಲೇಖವಿಲ್ಲ. ಅಲ್ಲದೆ ಈ ಮೊದಲು ವಿಜಯನಗರವನ್ನು ಆಳಿದ ಯಾವುದೇ ಮನೆತನದವರು ವಿದ್ಯಾರಣ್ಯರನ್ನು ಉಲ್ಲೇಖಿಸುವ ಮತ್ತು ಅವರು ಹಂಪೆಯೊಂದಿಗೆ ಹೊಂದಿದ್ದ ಸಂಬಂಧವನ್ನು ಸ್ಪಷ್ಟ ಪಡಿಸುವ ಶಾಸನಗಳು ದಾಖಲೆಗಳು ಹಂಪಿಯಲ್ಲಿ ದೊರೆತಿಲ್ಲವೆಂದರೆ ಆಶ್ಚರ್ಯವೇ ಸರಿ. ಪ್ರಾಯಶಃ ವಿದ್ಯಾರಣ್ಯರ ಪ್ರಾಮುಖ್ಯತೆ ಆಗ ಕಡಿಮೆ ಆಗಿದ್ದಿರಬಹುದೇ ಎಂಬ ಸಂಶಯ ಬಾರದೇ ಇರದು. ಈ ಲೇಖನದಲ್ಲಿ ವಿದ್ಯಾರಣ್ಯರು-ಹಂಪಿಯ ಸಂಬಂಧವನ್ನು ಕುರಿತು ವಿವರಿಸುತ್ತಿಲ್ಲ ಅಥವಾ ಪ್ರಶ್ನಿಸುತ್ತಿಲ್ಲ. ಈ ಚರ್ಚೆಯ ಮುಖ್ಯ ಉದ್ದೇಶ, ಆ ಕಾಲದ ಐತಿಹಾಸಿಕ ವ್ಯಕ್ತಿಯೋರ್ವನನ್ನು ನಿಖರವಾಗಿ ಗುರುತಿಸಲು ಪ್ರಯತ್ನಿಸುವುದು. ಈ ಹಿಂದಿನ ವಿದ್ವಾಂಸರು ವಿದ್ಯಾರಣ್ಯರೆಂದು ಗುರುತಿಸಿರುವುದು ಕೇವಲ ಊಹೆಯಿಂದಲೇ ಎಂಬುದನ್ನು ಇಲ್ಲಿ ಗಮನಿಸಬೇಕು. ಈ ಗುರುತಿಸುವಿಕೆಗೆ ಯಾವುದೇ ತರಹದ ಸ್ಪಷ್ಟ ನಿಲುವು ಇಲ್ಲ. ಅಥವಾ ಪುರಾವೆಗಳಿಲ್ಲ.

ಇವೆಲ್ಲಕ್ಕಿಂತ ಮುಖ್ಯವಾಗಿ ಈ ಮೇಲಿನ ಆಧಾರದಿಂದ ನಾವು ಗಮನಿಸಿದರೆ, ಕೃಷ್ಣದೇವರಾಯ ತನ್ನ ಕಾಲದ ತನ್ನ ರಾಜಗುರುವೂ, ಪೂಜ್ಯರೂ ಆದ, ವ್ಯಾಸತೀರ್ಥರನ್ನು ಮೆರವಣಿಗೆಯ ಚಿತ್ರದಲ್ಲಿ ಚಿತ್ರಿಸಲು ಆದೇಶಿಸಿರುತ್ತಾನೆಯೇ ಹೊರತು ನೇಪಥ್ಯಕ್ಕೆ ಸೇರಿದ ವಿದ್ಯಾರಣ್ಯರನ್ನಲ್ಲ. ಹಂಪಿಯ ವ್ಯಾಸರಾಯರು, ಹರಿದಾಸ ಸಾಹಿತ್ಯ ಹಾಗೂ ಮಾಧ್ವ ಪರಂಪರೆಯ ಹಲವು ಯತಿಗಳಿಗೂ ಮೊದಲಿಂದಲೂ ಗಾಢವಾದ ಸಂಬಂಧವಿದೆ. ಹಲವರು ಯತಿಗಳು ಸನ್ಯಾಸದೀಕ್ಷೆ ಪಡೆದರೂ ತುಂಗಭದ್ರೆಯ ದಡದಲ್ಲಿ ಹಲವರು ಸಮಾಧಿಸ್ತರಾದದ್ದು - ಪಕ್ಕದ ಆನೆಗೂಂದಿಯ ಹತ್ತಿರದ ತುಂಗಭದ್ರೆಯ ನಡುಗಡ್ಡೆ ನವ ಬೃಂದಾವನದಲ್ಲಿ ವ್ಯಾಸರಾಯರ ಬೃಂದಾವನವೂ ಇವುಗಳಲ್ಲಿ ಒಂದು ಅಂದ ಮೇಲೆ ಚಿತ್ರಗಳಲ್ಲಿನ ಯತಿಗಳು ವ್ಯಾಸರಾಯರೆಂದು ಹೇಳುವುದು ಸೂಕ್ತ ಮತ್ತು ಯೋಗ್ಯವೂ ಹೌದು. ಹಂಪಿಗೂ ವ್ಯಾಸರಾಯರಿಗೂ ಇರುವ ಸಂಬಂಧವನ್ನು ನಂತರದ ಕಾಲದ ಹಲವಾರು ಚಿತ್ರಗಳಲ್ಲಿ ನೋಡಬಹುದು.

೧೮೩೬ರ[*೪] ಸುಮಾರಿಗೆ ಚಿತ್ರಿತವಾದ ಹಂಪಿ ಮತ್ತು ವ್ಯಾಸರಾಯರನ್ನು ತೋರಿಸುವ ಭಿತ್ತಿ ಚಿತ್ರದ ದೃಶ್ಯಪುರಾವೆಯೊಂದು ಮೈಸೂರಿನ ಕೃಷ್ಣಾಂಬ ಅಗ್ರಹಾರದಲ್ಲಿನ ಶ್ರೀ ಸುಬ್ರಾಯದಾಸರ ಪ್ರಸನ್ನ ವೆಂಕಟರಮಣಸ್ವಾಮಿಯ ದೇವಾಲಯದ ಚಿತ್ರ ಮಂಟಪದಲ್ಲಿದೆ[*೫] ಇಲ್ಲಿ ಕಲಾವಿದ ಹಂಪಿಯನ್ನು ಹಲವಾರು ದೇವಾಲಯಗಳ ಗೋಪುರಗಳಿಂದ, ವಿರೂಪಾಕ್ಷ ದೇವಾಲಯ, ದೇವಾಲಯದಲ್ಲಿ ಲಿಂಗರೂಪಿ ವಿರೂಪಾಕ್ಷದೇವರು ಮತ್ತು ಪಂಪಾಂಬಿಕೆಯನ್ನು **ಹಂಪೆ ವಿರುಪಾಕ್ಷ** ಎಂಬ ಶಿರೋನಾಮೆಯಿಂದ ಗುರುತಿಸಿದ್ದಾನೆ. ಅದರಂತೆಯೇ ವ್ಯಾಸರಾಯರು ಪಾಠಹೇಳಿಕೊಡುತ್ತಿರುವ ಸನ್ನಿವೇಶವನ್ನು 'ವ್ಯಾಸರಾಯರ ಪಾಠ' ಎಂಬುದಾಗಿ ಉಲ್ಲೇಖಿಸಿದ್ದಾನೆ. ಇದು ಬಿಟ್ಟು ಹಂಪಿ ಮತ್ತು ವ್ಯಾಸರಾಯರ ಸಂಬಂಧವನ್ನು ತೋರಿಸುವ ಉದಾಹರಣೆ ಬೇರೊಂದಿಲ್ಲ. ಆದುದರಿಂದ ಈ ಮೇಲಿನ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನೋಡಿದಾಗ ಅದು ವ್ಯಾಸರಾಯರ ಚಿತ್ರವೆನಿಸದೇ ಇರದು.

ವ್ಯಾಸರಾಯರು ಇದರ ಅಂದಿನ ಸಂದರ್ಭವನ್ನು ನೋಡಿದರೆ ಭಿತ್ತಿಚಿತ್ರ ಕಲಾವಿದ, ರಾಜನಿಗೆ ಪ್ರಿಯರೂ ರಾಜಗುರುಗಳೂ ಆದ ವ್ಯಾಸತೀರ್ಥರನ್ನೇ ಮೆರವಣಿಗೆಯಲ್ಲಿ ದೃಶ್ಯರೂಪದಲ್ಲಿ ಚಿತ್ರಿಸಿರಬಹುದು. ಅಷ್ಟು ಮುಖ್ಯ ಭಿತ್ತಿಯಲ್ಲಿ ದೇವತೆಗಳ ಸಾಲಿನಲ್ಲಿ ಯತಿಯೋರ್ವರ ಚಿತ್ರ ರಚಿಸಬೇಕಾದರೆ ಅದೊಂದು ಐತಿಹಾಸಿಕ ದಾಖಲೆಯಾಗುತ್ತದೆ. ಶ್ರೀಕೃಷ್ಣದೇವರಾಯ ವ್ಯಾಸರಾಯರನ್ನು ಅದೇ ದೃಷ್ಟಿಯಿಂದ ನೋಡುತ್ತಿದ್ದರಿಂದ, ಅವರದೇ ಚಿತ್ರ ರಚಿಸಲು ಬಯಸಿದ್ದಿರಬಹುದೆಂದು ಹೇಳಬಹುದು, ಮತ್ತು ಪ್ರಸ್ತುತ ಚಿತ್ರ ವಿದ್ಯಾರಣ್ಯರದಲ್ಲ, ವ್ಯಾಸರಾಯರದು ಎಂದು ಹೇಳಬಹುದು.



(ಈ ಲೇಖನವನ್ನು ಸಿದ್ಧ ಪಡಿಸುವ ಹೊತ್ತಿಗೆ ಪ್ರಸ್ತುತ ಚಿತ್ರದ ವಿವರವಾದ ಅಧ್ಯಯನವನ್ನು ಮಾಡುವ ದೃಷ್ಟಿಯಿಂದ ಹಲವಾರು ಬಾರಿ ಈ ಭಿತ್ತಿ ಚಿತ್ರವನ್ನು ನೋಡಿದ್ದೇನೆ. ಈ ಸಂದರ್ಭದಲ್ಲಿ ಮೆರವಣಿಗೆಯ ಚಿತ್ರವನ್ನು ಅತ್ಯಂತ ವಿವರವಾಗಿ ನೋಡಿ ಅದನ್ನು ಕುರಿತು ಧೀರ್ಘವಾಗಿ ಚರ್ಚಿಸಿದ್ದೇನೆ. ಈ ಸಂದರ್ಭದಲ್ಲಿಯೇ ಇದೇ ಭಿತ್ತಿ ಚಿತ್ರ ಸಮೂಹದಲ್ಲಿ ಭಿತ್ತಿಚಿತ್ರಕ್ಕೆ ಹೊಂದಿಕೊಂಡಂತೆ, ಮತ್ತು ಕಂಬಗಳ ಬೋದಿಗೆಯ ಮೇಲಿನ ಪಟ್ಟಿಕೆಯಲ್ಲಿ (Lintle) ಹಲವಾರು ಚಿತ್ರಗಳನ್ನೂ ಗಮನಿಸಿದೆ. ಮುಖಮಂಟಪದ ಒಳಗೆ ಹೊಂದಾಗ ಎಡಗಡೆಯ ಪಟ್ಟಿಯಲ್ಲಿ ಎಂಟನೇ ಚೌಕದಲ್ಲಿ ಯತಿಗಳ ಪಾಠದ ದೃಶ್ಯವಿದೆ. ಬಹುಶಃ ಇದೂ ಕೂಡಾ ವ್ಯಾಸರಾಯರದೇ ಇರಬಹುದು.)

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು


*೧. ಈ ಭಿತ್ತಿ ಚಿತ್ರಗಳನ್ನು ಕುರಿತು ಮೊದಲು ವಿವರವಾಗಿ ಗಮನಿಸಿದವರು.

i) ಎಸ್. ಪರಮಶಿವನ್ ಸಂ-೧೯೩೬; *The Vijayanagara Paintings ; Late Vijayanagara Paintings in Brihadishwara temple* at Tanjore Pp. 87-100 in *Vijayanagar Six centinary commemoration vol.* Dharwad.

ii) ಕೊಟ್ರಯ್ಯ ಸಿ.ಟಿ ಎಂ., (೧೯೫೯), *Vijayanagara Paintings at the Virupaksha Temple.* QJMS Vol. XLIX-4, PP. 228-237.

*೨. ಈ ಮೇಲಿನ ವಿದ್ವಾಂಸರು ಮೊದಲು ಇದನ್ನು ವಿದ್ಯಾರಣ್ಯ ಸ್ವಾಮಿ ಎಂದು ಗುರುತಿಸಿದರು. ಅನಂತರ ಶಿವರಾಮಮೂರ್ತಿ ಅವರು ಕೂಡಾ ಅದನ್ನೇ ಪುನರುಚ್ಚರಿಸಿದ್ದಾರೆ. ಸಿ. ಶಿವರಾಮಮೂರ್ತಿ, (೧೯೬೮), *South Indian Paiting National Museum,* New Delhi.

*೩. ದೆಲ್ಲಾಪಿಕೊಲ್ಲಾ ಎ. ಎಲ್., (೧೯೯೭) *Ceiling Paintings in the Virupaksha Temple.* Hampi, South Asian Studies Vol. 13 P.P. 35-65, ಇದರಲ್ಲಿ ಅವರು ಈ ಚಿತ್ರಗಳು, ಅದರಲ್ಲಿ ವಿಶೇಷವಾಗಿ ಯತಿಗಳ ಚಿತ್ರ-ನಂತರದಲ್ಲಿ ರಚಿಸಿದ್ದು ಎಂದಿದ್ದಾರೆ. ಯತಿಗಳಿಗೆ ಜಡೆ ಇದೆ ಎಂದೂ ಬರೆದಿದ್ದಾರೆ. ಚುಕ್ಕೆ ಚುಕ್ಕೆ ಇರುವ ಯೋಧರ ಉಡುಪು ಟಿಪ್ಪು ಸುಲ್ತಾನ ಕಾಲದ್ದು ಎಂದು ಹೇಳುತ್ತಾರೆ. ಈ ಯಾವವನ್ನೂ ಒಪ್ಪಲು ಸಾಧ್ಯವಿಲ್ಲ. ಯತಿಗಳು ತಲೆಯಮೇಲೆ ವಸ್ತ್ರವನ್ನು ಹೊದಿರುವುದು ಸ್ಪಷ್ಟವಾಗಿ ಕಾಣುತ್ತದೆ.

ವಿಶ್ವನಾಥ ಶೇಟ್ ಮೆಣಸಿನಮನೆ*

# ಯಕ್ಷಗಾನದ ಬಡಗುತಿಟ್ಟಿನಲ್ಲಿ ಕೆಳದಿ ಅರಸರ ಗಂಡಭೇರುಂಡ ಲಾಂಛನ

ಪ್ರಾರಂಭದ ಕೆಲವು ಜನಪದಗಳೇ ಅಲ್ಲದೆ ಉತ್ಸವಾದಿಗಳಲ್ಲಿ ಆಚರಿಸುತ್ತಿರುವ ವೈದಿಕ ರಾಜಿಕ ವಿನಿಯೋಗಗಳೂ ವಿದ್ವತ್ ಮಂಡಳಿಯಲ್ಲಿ ಚಿಂತಿಸಿ ಸುಂದರ ರೂಪ ಪಡೆದು ಶಿಷ್ಟಕೃತಿಗಳಾಗಿ ಬೆಳದವು. ಶಿಷ್ಟಕೃತಿಗಳೆನಿಸಿಕೊಂಡವುಗಳು ಅಪೌರುಷೇಯನಗಳೇನಲ್ಲ.

ಅರಸರ ಆದರಕ್ಕೊಳಪಟ್ಟ ಕೃತಿಗಳು ವಿದ್ವಜ್ಜ ನಾನು ಕೃಪೆಯಿಂದ ಸರ್ವಾಂಗ ಸುಂದರವಾಗಿ ಪುಷ್ಟವಾಗಿ ಬೆಳೆದವು. ಬೆಳೆಯುವುದಕ್ಕೆ ದತ್ತಿದಾನ ಗೌರವದಿಂದ ಗಟ್ಟಿಯಾದವು. ಆದರೆ ತತ್ಸಮಾನ ಕೃತಿಗಳು ಜನಪದವಾಗಿ ಉಳಿದು ಸಾಂಸ್ಕೃತಿಕ ನೆಲೆಯಲ್ಲಿ ಭದ್ರವಾಗಿ ನಿಂತವು. ಅಂತವುಗಳಲ್ಲಿ ಬಡಗುತಿಟ್ಟು, ತೆಂಕುತಿಟ್ಟು ಯಕ್ಷಗಾನಗಳನ್ನು ಪ್ರಧಾನವಾಗಿ ಹೆಸರಿಸಬಹುದು. ಅಂತಾಗಿ ಜನಪದವೆ ಎಲ್ಲಕ್ಕೂ ಬೇಕು. ಜಾನಪದದಲ್ಲಿ ಬಳಸುವ ವಾದನ ಸಾಧನಗಳೇ ಬಳಸುವ ಪರಿಕರಗಳಿಂದ ಹೆಸರು ಪಡೆದಿವೆ. ಸಂಪ್ರದಾಯದ ನೆಲೆಯಲ್ಲಿ ಪ್ರಸಿದ್ಧಿ ಪಡೆದಿವೆ. ಉದಾ : ಬೀಸುವ ಹಾಡು, ಬೀಸುವ ಲಯಕ್ಕೆ ಗತಿಗೆ ದಾಟಿಗೆ ರೂಪಗೊಂಡಿವೆ. ಕೋಲು ಬಾರಿಸುವ ಗತಿಗೆ ಹೊಂದಿರುವ ಕೋಲಾಟದ ಹಾಡು, ಡೊಳ್ಳು ಬಾರಿಸುವ ಗತಿಗೆ ಹೊಂದಿರುವದು ಯಕ್ಷಗಾನದಲ್ಲಿ ಮೃದಂಗ, ಚುಡೆ, ತಾಳ, ಶೃತಿ ಹಿಮ್ಮೇಳದಲ್ಲಿದ್ದು ಹಾಡು ಇರುತ್ತದೆ. ಮುಮ್ಮೇಳದಲ್ಲಿ ರಂಗಿನ ವೇಷಭೂಷಣ ಧರಿಸಿದ ಪಾತ್ರಧಾರಿಕುಣಿತ ಮಣಿತ ಭಾವಾಭಿನಯದೊಂದಿಗೆ ರಾಮಾಯಣ, ಭಾರತ, ಭಾಗವತ ಪುರಾಣ ಕಥಾಪ್ರಸಂಗಗಳನ್ನು ಆಯ್ದು ಆಡಿ ಪ್ರದರ್ಶನ ನೀಡಿದರೂ ಯಾವದೆ, ಬಳಸುವ ಪರಿಕರದ ಪ್ರಸಾದನದ ಹೆಸರನ್ನಿಡದೆ ನೇರವಾಗಿ ***ಯಕ್ಷಗಾನವೆಂದು*** ಕರಿದಿರುವುದು ಹೆಸರಿಸಿರುವುದು ವಿಶೇಷವಾಗಿದೆ. ಈ ಕುರಿತು ಮೊದಮೊದಲು ಬಯಲಾಟ ಭಾಗವತರಾಟ, ದಶಾವತಾರದಾಟ ಎಂಬುದಾಗಿ ಕರೆದರೂ ಯಕ್ಷಗಾನವೆಂಬುದು ಗಟ್ಟಿರೂಢಿಯಾಗಿದೆ. ಇದಕ್ಕೆ ತೌರ್ಕಿಕವಾಗಿ ಒಬ್ಬ ಹಾಡುವದರಿಂದ ಎಕ್ಕಲಗಾನ - ಎಕ್ಷಗಾನವಾಯಿತೆಂದೂ ಉತ್ತರದ ಗಾಂಧಾರ ಪದ್ಧತಿಯ ಹಾಡಿಗೆ ಪ್ರತಿಯಾಗಿ ಯಕ್ಷಗಾನ ಪ್ರಯೋಗವೆಂದು ಡಾ. ಶಿವರಾಮ ಕಾರಂತರ ಯಕ್ಷಗಾನ ಬಯಲಾಟದಿಂದ ತಿಳಿದುಬರುತ್ತದೆ. ಇಂಥ ಯಕ್ಷಗಾನ ಜಾನಪದ ಕೆಳದಿ ಅರಸರ ಅವಧಿಯಲ್ಲಿ ಪರಿಷ್ಕರಣಗೊಂಡ ಉಲ್ಲೇಖ 'ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ' ದಿಂದ ತಿಳಿದುಕೊಳ್ಳ ಬಹುದು. (ಕೆಳದಿ ನೃಪ ವಿಜಯ, ೨೫ನೇ ಪುಟ).

*ಮುಗುಳ್ದಿಕ್ಕೇರಿಯರಮನೆಯೊಳ್ ವಿಚಿತ್ರತರ ರಚನಾ ಕೌಶಲ್ಯದಿಂ ನಾಟಕ ಶಾಲೆಯಂ ನಿರ್ಮಾಣಂಗೈಸಿ ತದಿಕ್ಕೇರಿಯಾ ನಂದಪುರಕ್ಕಂ ವೈಹಾಳಿಯನೆಸಗುತ್ತ ತ್ಯಂತೋತ್ಸಾಹದಿಂ ವಿಹರಿಸುತ್ತುಂ ತಾರಾಜ್ಯಂಗೆಯ್ಯುತಿರ್ದನಂತು ಮಲ್ಲದೆಯುಂ*

- ಎಂದಿದೆ. ಈ ಮೇಲಿನ ವಾಕ್ಯದಿಂದ ಮುಖ್ಯವಾಗಿ ಗಮನಿಸುವದೆಂದರೆ 'ವಿಚಿತ್ರತರ ರಚನಾ ಕೌಶಲದಿಂದಾ ನಾಟಕ ಶಾಲೆಯಂ' ನಿರ್ಮಾಣಂಗೈಸಿದ. ಕಲೆಯಲ್ಲಿ ಮಾರ್ಗೀಯತೆ, ದೇಶೀಯತೆ, ಎರಡು ಬಗೆಯಾದರೆ ಈ ಮೇಲಿನ ವಿಚಾರ ವಿಚಿತ್ರತರ ರಚನಾ ಕೌಶಲವೆಂದೆನ್ನುವಾಗ ದೇಶೀಯತೆಗೆ ಮಾರ್ಗೀಯ ಸಂಸ್ಕರಣ ಆಗಿದೆ ಎಂದು ಅರ್ಥವಾಗುತ್ತದೆ. ಹಾಗೂ ಕೌಶಲವೆಂದು ಪ್ರಯೋಗಿಸಿದ್ದು ಗಮನಿಸುವ ಅಂಶವಾಗಿದೆ. ಬಯಲಾಟವೆಂದು ಜನಮನ ತಟ್ಟುತ್ತ ತನ್ನದೆ ಸೀಮಿತ ವ್ಯಾಪ್ತಿಯಲ್ಲಿರುವ ಜನಪದ ಕಲೆಗೆ ಕೆಳದಿಯವರು ಶಿಷ್ಟತೆಯ ಲೇಪಹಚ್ಚಿ ಸಂಸ್ಕರಣಗೊಳಿಸಿ ಲಕ್ಷಣವಾದ ತಮ್ಮ ರಾಜಲಾಂಛನ ಕಿರೀಟದಾಕೃತಿಗೆ ಕಲಾತ್ಮಕವಾಗಿ ಪರಿವರ್ತಿತ ರೂಪನೀಡಿ ರಂಗಕ್ಕೆ ತಂದು ವೈಭವೀಕರಿಸಿರುವದನ್ನು ತಿಳಿಯಬಹುದು. ಯಕ್ಷಗಾನಕ್ಕೆ ಹೋಲುವ ತತ್ಸಮಾನ ಕೃತಿಗಳನ್ನು ಗ್ರಹಿಸಿದಾಗ ಬಡಗುತಿಟ್ಟಿನ ಯಕ್ಷಗಾನಕ್ಕಾದ ಸಂಸ್ಕಾರಗಳು ನಮಗೆ ಅರ್ಥವಾಗುತ್ತವೆ. [ಸಂಗೀತಾದಿ ಗಾನ ಪದ್ಧತಿಯಲ್ಲಿ ಲಯದ ವಿಲಂಬತೆ ತೀವ್ರತೆ ಕಂಡು ಬಂದರೆ ಯಕ್ಷಗಾನದ (ಹಾಡುಗಳು) ಒಂದೇ ಹಾಡನ್ನು ರೂಪಕ, ಏಕ, ಕೋರೆ ಚೌತಾಳದಲ್ಲಿಯೂ ಹಾಡಿ ಮುಗಿಸುವದು. ತ್ರಿಪುಡೆ, ಏಕ, ಕೋರೆ, ತಾಳಗಳಲ್ಲಿ ಹಾಡುವದು, ಅಷ್ಟ, ಏಕ, ಕೋರೆ ಚೌತಾಳಗಳಲ್ಲಿ ಹಾಡುವದು, ಆದಿತಾಳ ಏಕತಾಳಗಳಲ್ಲಿ



*ಹಾರ್ಸಿಕಟ್ಟಾ ಅಂಚೆ, ಸಿದ್ಧಾಪುರ, ಉತ್ತರ ಕನ್ನಡ.

ಹಾಡುವದು ಕೌಶಲ್ಯಮಯವಾಗಿದೆ. ತಾಳ ಪಂಡಿತನ ಗಂಗಪ್ಪನ ರಾಮಚಂದ್ರ ದೇವಾಲಯದಲ್ಲಿರುವ ನಮನ ಶಿಲಾಲೇಖ ಕೆಳದಿಯಲ್ಲಿ ನೊಡಲು ಲಭ್ಯವಿದೆ.]

ಭರತನ ನಾಟ್ಯ ಶಾಸ್ತ್ರದಲ್ಲಿ ಹೇಳಿರುವಂತೆ ಚತುರಂಗ ಶುದ್ಧಿ ಪುಷ್ಟಿ ಯಕ್ಷಗಾನದಲ್ಲಿ ಕಾಣುತ್ತದೆ. ೧) ಆಂಗಿಕ, ೨) ವಾಚಿಕ, ೩) ಸಾತ್ವಿಕ ೪) ಆಹಾರ್ಯ ಹೀಗೆ ಪ್ರತಿಯೊಂದು ಅಂಗಗಳೂ ರಮ್ಯಾದ್ಭುತ ಸುಂದರ ಸುವ್ಯವಸ್ಥಿತವಾಗಿವೆ. ಇದನ್ನು ಗ್ರಹಿಸಿದಾಗ ಕೆಳದಿ ನೃಪವಿಜಯದ 'ಸರಸ ಸಂಗೀತ ಲೋಲಂ. ನಿರುಪಮ ಕೌಶಲ್ಯ ವಿವಿಧ ಸಾಹಿತ್ಯ ವಿಧಂ,' ಸುರುಚಿರ ಸಂಕಲ ಕಲಾಸತ್ವರಿಣತ' ಎಂಬ ವಾಕ್ಯ ನಮಗೆ ಚಿಂತನೆಗೆ ತೊಡಗಿಸುತ್ತದೆ. ಇಂದಿದು ಜಾನಪದವೆಂದು ಜನಾವಲೋಕಿಸಿದರೂ ಜಗತ್ತಿನ ಯಾವ ಕಲಾಮಾನಕ್ಕೆ ಹೋಲಿಸಿದರೂ ತುಂಬಾ ಆಕರ್ಷಕವಾಗಿದೆ. ಹಾಗಾಗಿ ಇದರ ಮೂಲ ಸಂಸ್ಕರಣ ಕಾರಣ ಕ್ಷೇತ್ರ ಕೆಳದಿ ನಾಟ್ಯಶಾಲೆ ಎಂದು ಹೇಳಲು ಹಲವು ಗಟ್ಟಿ ಉದಾಹರಣೆಗಳು ದೊರೆಯುತ್ತವೆ. ಇಂದಿಗೂ ಕೆಳದಿ ಇಕ್ಕೇರಿ ಸಾಗರದ ಗಣಪತಿ ದೇವಾಲಯದೆದುರು ವಾರ್ಷಿಕ ಒಂದಾದರೂ ಆಟ (ಯಕ್ಷಗಾನ) ಆಡಿಸುವ ರೂಢಿ ನಡೆದು ಬಂದಿದೆ. ಹಾಗೂ ಕೆಳದಿಯವರು ಕಟ್ಟಿಸಿದ ಮುಖ್ಯ ದೇವಾಲಯಗಳಲ್ಲಿ ವರ್ಷಂಪ್ರತಿ ಆಟ ಆಡಿಸುವದು ವಾಡಿಕೆ ಇತ್ತು, ಇದೆ ಎಂದು ಆ ಭಾಗದವರು ಹೇಳುತ್ತಾರೆ. ಡಾ. ಶಿವರಾಮಕಾರಂತರ ಅಧ್ಯಯನದ ಯಕ್ಷಗಾನದಲ್ಲಿಯ ಸಭಾಲಕ್ಷಣ ಪದ್ಯದಲ್ಲಿ ಮನ್ನಣೆ ಹಾಡು: 'ಇಂದುವದನೆ ಕರೆದು ತಾರೆ ಭಾಗ್ಯವಂತನಾ ಕಂಜಪುರದ ಕೋಟೆ ಬಾಗಿಲ ಆಂಜನೇಯನ॥' ಎಂದಿದೆ. ಇಲ್ಲಿ ಬಿದುನೂರು ಕೋಟೆ ಹನುಮನ ಬಗ್ಗೆ ಹೇಳಿದೆ. ಮತ್ತು 'ನಿರೀಕ್ಷಿಸ ಬಲ್ಲೆ ಏ ಹನುಮ' ಎಂಬ ಹಾಡಿನಲ್ಲಿ 'ಭಕ್ತರ ಒಡೆಯ ವೇಣುಪುರ ನಿಲಯ ಮುಖ್ಯಪ್ರಾಣನಲ್ಲಿ' ಎಂಬಲ್ಲಿಯೂ ಬಿದುನೂರನ್ನು ರಾಜಧಾನಿಯ ನ್ನಾಗಿಸಿಕೊಂಡು ರಾಜ್ಯವಾಳಿದ ಕೆಳದಿ ಅರಸರದಿರುತ್ತದೆಂದು ಅನಿಸುತ್ತದೆ. ಕೆಳದಿ ಅರಸರುಗಳ ಆಶ್ರಯದಲ್ಲಿಯೇ 'ಶಿವಕಲ್ಯಾಣ ವೆಂಬ' ಹದಿನೆಂಟು ಆಶ್ವಾಸಗಳ ದೊಡ್ಡದೊಂದು ಯಕ್ಷಗಾನ ಕಥಾನಕವು ರಚನೆಯಾದದ್ದು ಕೆಳದಿ ನೃಪವಿಜಯದಿಂದ (ಲಿಂಗಣ್ಣ ಕವಿ) ತಿಳಿದು ಬರುತ್ತದೆ. ಹಾಗೂ ವೆಂಕಕವಿ ಅವರ ಮಗ ಸುಬ್ಬ ಕವಿ ಇನ್ನನೇಕ ಕವಿಗಳು ಯಕ್ಷಗಾನ ಕೃತಿಗಳನ್ನು ರಚಿಸಿದ್ದು ತಿಳಿದುಬರುತ್ತದೆ. ಬಸಪ್ಪ ಅರಸರು ಶಿವತತ್ವರತ್ನಾಕರ ಗ್ರಂಥ ಬರೆದು ನಾಟ್ಯಶಾಸ್ತ್ರಕ್ಕೆ ದೊಡ್ಡ ಗ್ರಂಥ ನೀಡಿದ್ದಾರೆ. ಆ ಗ್ರಂಥ ಪರಿಚಯದಿಂದ ಯಕ್ಷಗಾನದಲ್ಲಿ ಬಳಸುವ ಮೃದಂಗ ಚಂಡೆ ವಾಯಲಿನ್ ಇತ್ಯಾದಿ ಬಳಸಿದ್ದು ತಿಳಿದುಬರುತ್ತದೆ. ಹಾಗೂ ಕೆಳದಿ ಅರಸರ ಆಡಳಿತಾವಧಿಯಲ್ಲಿ ಹಾಗೂ ಆಡಳಿತ ಕ್ಷೇತ್ರದಲ್ಲಿ ಉತ್ತಮ ಯಕ್ಷಗಾನ ಕೃತಿಗಳು ರಚಿತವಾದದ್ದು ತಿಳಿದುಬರುತ್ತದೆ.

ಬಡಗುತಿಟ್ಟಿನ ಯಕ್ಷಗಾನ ಸಂಪ್ರದಾಯದಂತೆ ಪರ್ವರಂಗದಲ್ಲಿ ಬಳಸುವ ಕ್ರಮ ಸಭಾಲಕ್ಷಣದಲ್ಲಿ ಹಾಡುವ ಹಾಡು ಘೋಷಣೆ ಇತ್ಯಾದಿಗಳು ಕೆಳದಿ ಅರಸರ ಕೊಡುಗೆಯನ್ನು ಸೂಚಿಸುತ್ತವೆ.

ಉದಾಹರಣೆಗೆ ಪೂರ್ವರಂಗದ ಪೂಜೆಯಲ್ಲಿ ಹನುಮನಾಯಕ (ಕೋಡಂಗಿ) ಪಾತ್ರದವನು ಕುಡಿಬಾಳೆಯಲ್ಲಿ ಅಕ್ಕಿಕಾಯಿ, ಎಲೆ, ಅಡಿಕೆ, ಕಾಂಚಾಣ, ಸಭೆಗೆ ಕಾಣುವಂತೆ, ಕಿರೀಟವನ್ನು ತೆಗೆದುಕೊಂಡು ಬಂದು ಇಡುತ್ತಾನೆ. ಕಿರೀಟದ ಮೇಲೆ ಮಂಗಲ ದ್ರವ್ಯ, ಅರಿಶಿಣ, ಕುಂಕುಮ, ಹೂವು ಏರಿಸಿ ಘೋಷಣೆ ಕೂಗುತ್ತಾನೆ.

೧. *ಅನ್ನದಾತೋ ಬಹು ಪಾರಾಕ್ - ಅರಸರಿಗಿರುವ ಬಿರುದು. ಕಸ್ತೂರಿ ಕೋಲಾಹಲೋ ಬಹು ಪರಾಕ್ ಕೋಟೆ ಕೋಲಾಹಲೋ ಬಹು ಪರಾಕ್ (ಎಂಬುದು ಬಳ್ಳಾರಿಕೋಟೆ ಗೆದ್ದವನ ಬಿರುದು).*

೨. *ಶರಧಿ ಗಂಭೀರೋ ಬಹುಪರಾಕ್ - ಗಾಂಭೀರ್ಯ ರತ್ನಾಕರಂ (ಬಿರುದು)*

೩. *ಧೀರ ವಯ್ಯಾರೋ ಬಹುಪರಾಕ್ -ಕೆಳದಿ ಅರಸರ ವ್ಯಕ್ತಿತ್ವ*

೪. *ವೀರಭದ್ರೊ ಬಹುಪರಾಕ್-ಕೆಳದಿ ವೀರಭದ್ರ ಸ್ವಾಮಿ ಸ್ಥಾಪನೆ. (ಇವೆಲ್ಲ ಕೆಳದಿ ನೃಪ ವಿಜಯದಿಂದ ತಿಳಿದುಬರುತ್ತದೆ).*

೫. ***ಗಂಡಭೇರುಂಡೊ ಬಹುಪರಾಕ್*** ಎಂದು ೩ ಸಾರೆ ಘೋಷಣೆ ಕೂಗುತ್ತಾನೆ. ಈ ಗಂಡಭೇರುಂಡವು ಕೆಳದಿ ಅರಸರ ಲಾಂಛನ. ಈ ಗಂಡಭೇರುಂಡ ಲಾಂಛನ ಶೌರ್ಯ, ಪ್ರತಾಪ ಧೀರೋದಾತ್ತ ಅಭೇದ್ಯ ಶಕ್ತಿ ಹೊಂದಿರು ವಂತಹದ್ದು. ಕೆಳದಿ ಅರಸರು ನಿಜಕ್ಕು ಪ್ರತಾಪಿಗಳಾಗಿದ್ದು ಗಂಡಭೇರುಂಡದಂತಿದ್ದರು. ವೆಂಕಟಪ್ಪನಿಗೆ 'ದೋಖಂಡೇ ರಾಯ' ಹಾಗೂ 'ದೊನೇಜ'ನೆಂಬ ಬಿರುದಿರುವದು ಕೆಳದಿ ನೃಪ ವಿಜಯದಿಂದ ತಿಳಿದುಬರುತ್ತದೆ. ಇವರು ಧೀರರು ಪ್ರತಾಪಿಗಳಾದಂತೆ ಸುಸಂಸ್ಕೃತ ರಸಿಕರೂ ಭಗವದ್ಭಕ್ತರು ಆಗಿರುವದರಿಂದ ಧೀರವಯ್ಯಾರೊ ಎಂದು ಘೋಷಣೆ ಇರಬೇಕು.

ಹೀಗೆ ಹನುಮನಾಯಕ ಪೂರ್ವರಂಗದಲ್ಲಿ ಕೂಗುವ ಘೋಷಣೆಯ ಹಿಂದೆ ನಾವು ಗ್ರಹಿಸಬೇಕಾದ ಸಂಗತಿಯೆಂದರೆ ಯಕ್ಷಗಾನ ಸಮಾನ ಜಾನಪದದಲ್ಲಿ ಪೂರ್ವರಂಗ ಪೂಜೆಗೆ ಗಣಪತಿ ಮುಖವಾಡ ಧರಿಸಿ ಮಡಿಯುಟ್ಟು ವ್ಯಕ್ತಿಯೇ ಬಂದುನಿಲ್ಲುತ್ತಾನೆ. ಈ ರೂಢಿಯನ್ನು ದೊಡ್ಡಾಟ ಮೂಡಲಪಾಯದಲ್ಲಿ ಇಂದಿಗೂ ನಡೆಸಿಕೊಂಡು ಬಂದಿದ್ದಾರೆ. ಮತ್ತು ಶಾರದಾಸ್ತುತಿಯನ್ನು ಮಾಡುವಾಗ ಶಾರದೆ ಪಾತ್ರವನ್ನೇ ರಂಗಕ್ಕೆ ತರುತ್ತಾರೆ. ಯಕ್ಷಗಾನದಲ್ಲಿ ಈ ಕಿರೀಟ ತರುವ ರೂಢಿಗಿಂತ ಮೊದಲು ಹೇಗಿತ್ತೆಂದು ಹೇಳಲು ಪುರಾವೆಗಳನ್ನು ಹುಡುಕಬೇಕು. ಈ ಕಿರೀಟ ಪೂಜೆ ಪ್ರಾರಂಭವಾದದ್ದು ರಂಗಸ್ಥಲಕ್ಕೆ ಮೊದಲು ಕಿರೀಟ ತಂದು ಪರಿಚಯಿಸುವದು ಬಹು ಪರಾಕೆಂದು ಘೋಷಣೆ ಕೂಗುವದು ಪ್ರಾರಂಭವಾದದ್ದು ಕೆಳದಿ ಅರಸರ ಕಾಲದಿಂದ ಎನ್ನುವದನ್ನು ಯೋಚಿಸುವಂತಿದೆ. *ಶುದ್ಧ ಬಡಗುತಿಟ್ಟಿನವರು ಬಳಸುವ ರಾಜಕಿರೀಟ, (ಗಣಪತಿಕಿರೀಟ) ಗಂಡಭೇರುಂಡ ಲಾಂಛನದ ನೇರ ಹೋಲಿಕೆ ನೀಡುತ್ತದೆ. ಇದು ಕೆಳದಿ ಅರಸರ ರಾಜಲಾಂಛನವೆನ್ನುವದರಲ್ಲಿ*

*ಅನುಮಾನವಿಲ್ಲ. ಈ ಲಾಂಛನವೇ ಕಲಾತ್ಮಕ ರೂಪ ಪಡೆದು ಗಣಪತಿ ಕಿರೀಟವಾಗಿದೆ. ಈ ಎಲ್ಲ ಕುರಿತ ಸ್ತುತಿ ಇದು :*

*ಗುರುಗಣಾಧಿಪತಯೇನಮಃ ಸರಸ್ವತಯೇನಮಃ ಪಾರ್ವತ್ಯೈ ನಮಃ ದಕ್ಷಿಣಾಮೂರ್ತಿ ದೇವಾನಾಂ ಸಕಲಕಾರ್ಯ ವಿಜಯೀ ಭವಃ*

i. ಯಕ್ಷಗಾನ ಸಮಾನ ಜಾನಪದದಲ್ಲಿರುವ ಇನ್ನಿತರ ಪ್ರದೇಶಗಳಲ್ಲಿರುವ. ದೊಡ್ಡಾಟ ಸಣ್ಣಾಟ, ಮೂಡಲಪಾಯ ಪಡುವಲಪಾಯ, ಘಟ್ಟದ ಕೋರೆ, ವೀಥಿನಾಟಕ, ರಾಮನಾಟ್ಯಂ ಹಾಗೂ ತೆಂಕುತಿಟ್ಟು ಯಕ್ಷಗಾನದಲ್ಲಿ ಕಿರೀಟ (ಉಷ್ಣೀಶ) ಟೊಪ್ಪಿ ಮೂಲದಿಂದ ಪ್ರಾರಂಭವಾಗುತ್ತದೆ. ಆದರೆ ಬಡಗುತಿಟ್ಟಿನಲ್ಲಿ ಬಳಸುವ ಕಿರೀಟ ಭಿನ್ನವಾಗಿದೆ. ಇದು ಗಂಟಾಕೃತಿ ಅಥವಾ ಕಳಶಾಕೃತಿಯಿಂದ ಪ್ರಾರಂಭವಾಗುತ್ತದೆ. ಗಂಡಭೇರುಂಡ ಪಕ್ಷಿಯ ಕಟಿಭಾಗದಿಂದ ಕತ್ತರಿಸಿಟ್ಟಂತಿದೆ. ಎರಡು ಕುತ್ತಿಗೆಯ ಪಕ್ಷಿ ಒಂದು ಹೃದಯದಲ್ಲಿ ಎಡಬಲದಲ್ಲಿ ಸಮಾನಾಂತರದಲ್ಲಿ ಕೂಡಿಕೊಂಡಿದೆ. ಈ ಕಿರೀಟದ ವಿನ್ಯಾಸ, ಕೌಶಲ, ಸೌಂದರ್ಯ, ತಾತ್ವಿಕ ಕಲ್ಪನೆ ಅತ್ಯಂತ ಭಿನ್ನವಾಗಿದೆ. ಈ ಕೀರಿಟದ ಕಲ್ಪನೆ ವಿನ್ಯಾಸ ಮತ್ತೆಲ್ಲಿಯೂ ಕಾಣಸಿಗುವುದಿಲ್ಲ. ಹಾಗಾಗಿ ಕೆಳದಿ ಅರಸರು ವಿಚಿತ್ರತರ ರಚನಾ ನಾಟ್ಯಕ್ರಮಕ್ಕೆ ಕುಶಲಕರ್ಮಿಗಳಿಂದ ಹೊಂದಿಸಿದ ಗಂಡಭೇರುಂಡ ಲಾಂಛನವೆಂದೇ ಹೇಳಬೇಕಾಗುತ್ತದೆ. ಇದು ಹನುಮನಾಯಕ ಗಂಡಭೇರುಂಡೊ ಬಹು ಪರಾಕ್ ಎನ್ನುವದಕ್ಕೆ ಸರಿಹೊಂದುತ್ತದೆ.

ii. ಬಡಗುತಿಟ್ಟು ಯಕ್ಷಗಾನವಿರುವಲ್ಲೆಲ್ಲ ಈ ಕಿರೀಟದ ವಿನ್ಯಾಸ ರೂಢಿ ಇದೆ. ಕೆಳದಿಯವರು ಆಳಲು ಪ್ರಾರಂಭಿಸಿದ ಮೂಲ ಪ್ರದೇಶದಲ್ಲಿ, (ಪಶ್ಚಿಮ ಕಡಲು ತೀರ ಮಲೆನಾಡು ಪ್ರದೇಶ (***ಗಂಭೀರ ರತ್ನಾಕರಂ***) ಎಂಬ ಬಿರುದಿದೆ. ಬಡಗುತಿಟ್ಟು ಯಕ್ಷಗಾನದ ಹೆಚ್ಚಿನ ಚಿಂತನೆಯೂ ಈ ಪ್ರದೇಶದಲ್ಲಿ ಚನ್ನಾಗಿ ಕಂಡುಬರುತ್ತದೆ. ಯಕ್ಷಗಾನದ ಕೃತಿರಚನಾ ಕವಿಗಳು ಈ ಮೂಲದಲ್ಲಿಯೇ ಬಹುಪಾಲು ಬೆಳೆದಿರುವದು ಉಲ್ಲೇಖನೀಯ.

iii. ಬಡಗುತಿಟ್ಟಿನಲ್ಲಿ ಕಿರೀಟಕ್ಕೆ ಅತ್ಯಂತ ಗೌರವ ಭಕ್ತಿಯಿಂದ ಆರಾಧಿಸಿಕೊಂಡು ಬಂದಿರುವುದು ಕಂಡು ಬರುತ್ತದೆ. *ಉಳಿದ ಸಮಾನ ಕಲಾ ಮಾಧ್ಯಮದವರು ಅದೊಂದು ಸುಂದರ ಶೃಂಗಾರ ಪರಿಕರ ಶಿರೋಭೂಷಣವೆಂದಷ್ಟೆ ತಿಳಿಯುತ್ತಾರೆ.* ಆದರೆ ಬಡಗುತಿಟ್ಟಿನಲ್ಲಿ ಪೂಜಿಸಿದಾಗ

*ವಿಘ್ನೇಶಾಯ ಸರಸ್ವತ್ಯೈ ಪಾರ್ವತ್ಯೈ ಗುರವೇನಮಃ*

*ದಕ್ಷಿಣಾಮೂರ್ತಿದೇವಾನಾಂ ಸಕಲ ಕಾರ್ಯ ವಿಜಯೀಭವಃ*

ಎಂದು ಪ್ರಾರ್ಥಿಸುತ್ತಾರೆ. ಹಾಗಾಗಿ ಈ ಗಣಪತಿ ಕಿರೀಟ ಪ್ರಥಮ ಪೂಜಕ ಸ್ಥಾನದಲ್ಲಿ ರಾಜಲಾಂಛನ ಕಲಾತ್ಮಕ ರೂಪಗೊಂಡು ರಂಗದಲ್ಲಿ ಪರಿಚಯಿಸುವ ರೂಢಿಯಾಯಿತೆಂದು ಭಾವಿಸುವಂತಿದೆ. ಇನ್ನು ಕಿರೀಟದ ಹೊರತಾಗಿ ಬಡಗುತಿಟ್ಟಿನ ಆಭರಣಗಳು ಶಿಲ್ಪ ವಿಜ್ಞಾನಕ್ಕೆ ಆ ಪ್ರಮಾಣಕ್ಕೆ ಹೊಂದುವಂತಿದೆ. ಇನ್ನೂ ಹೊಂದಿಸುವ ಪ್ರಯತ್ನ ನಡೆದಿತ್ತೆಂದು ತೋರುತ್ತದೆ. ದೊಡ್ಡ ಪೊಗದೆ ಮುಂಡಾಸು ಕೇದಿಗೆ ಮುಂದಲೆ, ಇದು ಬಡಗುತಿಟ್ಟಿನಲ್ಲಿ ಮಾತ್ರಿಕಾ ಸುಂದರರೂಪ ಹೊಂದಿದೆ. ಶಿವರಾಮ ಕಾರಂತರು : 'ಈ ಸುಂದರ ರೂಪ ಕೊಟ್ಟ ಮೊದಲಿಗನಿಗೆ ನಿಜವಾಗಿ ನಮಿಸುವಂತಿದೆ' ಎಂದೇ ಹೇಳಿದ್ದಾರೆ. ಇದೆಲ್ಲ ರಂಗತಜ್ಞ ಶಿಲ್ಪತಜ್ಞ ಗಾನಕಲಾ ವಿಶಾರದರನೇಕರ ಜ್ಞಾನಾನುಸಂಧಾನದ ಒಮ್ಮತ ಪರಿಷ್ಕರಣ ಕಲೆ ಎಂದು ಭಾವಿಸುವಂತಿದೆ. ಇದು ಕೆಳದಿಯವರ ಕೊಡುಗೆ ಎಂದು ಹೇಳಬಹುದು.

ಲಿಂಗಣ್ಣಕವಿಯ ಕೆಳದಿನೃಪವಿಜಯ ಓದಿದಾಗ ಆ ಕುರಿತು ಇತರ ಪೂರಕ ಅಂಶಗಳು ಹೊಳಹುಗಳು ದೊರಕಲಾರಂಭಿಸಿದ ಕಾರಣ ಶಿಲ್ಪ ವಿಜ್ಞಾನ ಸೂತ್ರಕ್ಕೆ ಹೋಲಿಕೆಯಾಗಿರುವದು ತಿಳಿದು ಆಭರಣಕ್ಕೆ ಪ್ರಮಾಣಬದ್ಧ ಸೂತ್ರ ಬರೆಯುವ ಪ್ರಯತ್ನ ಮಾಡಿದ್ದೇನೆ.

ಯಕ್ಷಗಾನದಿಂದ ಪುರಾಣೋತ್ತರ ಕಥೆಗಳನ್ನು ಆಡಿ ಚಾರಿತ್ರಿಕ ವಿಚಾರಗಳನ್ನು ಜನಮನ ಮುಟ್ಟುವಂತೆ ಮಾಡಿ ಉತ್ತಮ ಪ್ರಜೆಗಳನ್ನು ರೂಪಿಸುವ ಚಿಂತನೆ ಆರಸರದಾಗಿತ್ತು. ಬಡಗುತಿಟ್ಟಿನವರು ಜಾನಪದ ಕತೆಗಳಲ್ಲಿಯೇ ಸಮೃದ್ಧರು ಎನ್ನುವದನ್ನು ಡಾ। ಜಿ. ಎಸ್. ಭಟ್ಟರು ಉಪನ್ಯಾಸವೊಂದರಲ್ಲಿ ಹೇಳಿದ್ದು ನೆನಪಿಗೆ ಬರುತ್ತದೆ. ಈ ಬಡಗುತಿಟ್ಟು ಯಕ್ಷಗಾನ ಕಲೆ ಅರಮನೆಯ ಆವಾರದಿಂದ ರೂಪಗೊಂಡು ಬಯಲಿಗೆ ಬಂದಿರುವದು ಕಾರಣವಾಗಿರಬೇಕು. ಇದು ತನ್ನ ಸ್ಥಿತಿಗತಿಯಿಂದ ವಿದ್ಯಾವಂತರನ್ನು ತನ್ನತ್ತ ಆಕರ್ಷಿಸುತ್ತಿದೆ. ಪ್ರತಿಸಿದ್ಧ ಸಾಹಿತಿ ದಿ। ಶೇಡಿಯೂಪು ಕೃಷ್ಣಭಟ್ಟರು ಬಡುಗುತಿಟ್ಟು ಯಕ್ಷಗಾನ ಜಾನಪದ ಕತೆಯಾದರೂ ಶಿಷ್ಟತೆಯತ್ತ ಮುಖಮಾಡಿದ ಕಲೆ ಎಂದೇ ಹೇಳಿದ್ದಾರೆ.

ಪ್ರಸಂಗ ಕೃತಿಗಳ ಪದ್ಯದ ಮಟ್ಟು ಮಾರ್ದವತೆ ತಿಳಿದರೆ ಕಥೆ ತಿಳಿಸಲು ನೃತ್ಯರೂಪಕ ಪ್ರಯತ್ನಪಟ್ಟಿರುವದು ತಿಳಿದು ಬರುತ್ತದೆ. ಉತ್ತಮ ಲಯತಾಳ ಸಹೃದಯ ಚಿಂತಕರ ಹಿಮ್ಮೇಳ ಮುಮ್ಮೇಳ ಏಕತಾನತೆ ನೀಡಿದರೆ ಉತ್ತಮ ರೂಪಕಗಳನ್ನು ಈಗಿನ ಕೃತಿಗಳಲ್ಲಿ ಯಾವ ಬದಲಾವಣೆಯನ್ನು ಮಾಡದೆ ಆಡಿದರೂ ಖಂಡಿತ ಉತ್ತಮ ಪ್ರದರ್ಶನ ನೀಡಬಹುದು. ಹೀಗೆ ಕಲಾ ಮಾಧ್ಯಮವನ್ನು ನಿತ್ಯ ನೂತನ ಭವ್ಯವಾಗಿಸಿದ ಸಂಯುಕ್ತ ವಿಚಿತ್ರತರವೆಂದು ಬಣ್ಣಿಸಿದ ನಾಟ್ಯಶಾಲೆ ಪ್ರಾರಂಭವಾದದ್ದು ಕೆಳದಿ ವೆಂಕಟಪ್ಪ ಅರಸರ ಕಾಲದಿಂದ.

*ಸರಸ ಸಂಗೀತ ಲೋಲಂ*

*ನಿರುಪಮ ಕೌಶಲ್ಯ ವಿವಿಧ ಸಾಹಿತ್ಯವಿಧಂ*

*ಸುರುಚಿರ ಸಕಲ ಕಲಾಸ*

*ತ್ವರಿಣತನೆಂದೆನಿಸಿ ವೆಂಕಟೋರ್ವಿಪನೆಸೆದಂ (ಕೆಳದಿ ನೃಪ ವಿಜಯ)*

ಹಲವು ಕಲಾ ಸಂಸ್ಕರಣ ಸಂಯುಕ್ತರೀತಿಯಲ್ಲಿ ಚತುರಾಂಗ ಸುಂದರ ಕತೆಗೆ ಪುಟ್ಟವಿಟ್ಟು ಕಲಾವಿದರನ್ನು ಸಿದ್ಧಗೊಳಿಸಿ ಬೆಳಸಿದ ಕೇಂದ್ರ, ಕೆಳದಿಯುನ್ನು ಮೊದಲಂತೆ ಶುದ್ಧ ಸುಂದರ ಕಲಾಕೇಂದ್ರವಾಗಿಸಬಹುದು. ಮರುಚಿಂತನೆ ನಡೆಸಬೇಕಾಗಿದೆ.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*ಗಂಡಭೇರುಂಡ ಸಂಬಂಧದ ಆಕರ ಹಾಗು ಮಾಹಿತಿಗಳು ಇಂತಿವೆ ;*

*೧. ಸಾಂಖ್ಯದರ್ಶನದಲ್ಲಿಯ ಪ್ರಕೃತಿ ಪುರುಷ ತತ್ವದರ್ಶನಕ್ಕೆ ಹೋಲಿಕೆ ಇದೆ.

*೨. ಋಗ್ವೇದದಲ್ಲಿ ಹಾಗೂ ಮುಂಡಕೋಪನಿಷತ್ತಿನಲ್ಲಿಯೂ ಕಾಣಬಹುದು.

ದ್ವಾಸುಪರ್ಣಾ ಸವಿದಾ ಸಖಾಯಾ
ಸಮಾನಂ ವೃಕ್ಷಂ ಪರಿಷತಾಜ್ಯಾಯತೆ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ
ಅನರ್ಶ್ನ್ ಅನ್ಯಹ ಅಭಿಚಾರ ಶೀಲೆ॥

- ಇಲ್ಲಿ ಜೀವಾತ್ಮ ಪರಮಾತ್ಮ ತತ್ವ ಒಳಗೊಂಡಿದೆ. ಪೂರ್ಣತೆಯ ಸಂಕೇತವೂ ಆಗಿದೆ.

*೩. ಸಾವಿರ ವರ್ಷದ ಹಿಟ್ಟೈಟ್ ಶಿಲ್ಪದಲ್ಲಿ ಕಂಡು ಬರುತ್ತದೆ.

*೪. ೧೨ನೇ ಶತಮಾನದ ಹೊಯ್ಸಳ ಚಿತ್ರದಲ್ಲಿ ಕಾಣುತ್ತಿದೆ. (ಬಳ್ಳಿಗಾವೆ, ಬೇಲೂರು ಕಲಶಿ ಇತ್ಯಾದಿ) ಕೋರಮಂಗಲ ಬೂಜೇಶ್ವರ ದೇವಾಲಯದಲ್ಲಿ ಕೊರೆದಿರುತ್ತಾರೆ.

*೫. ಕೆಳದಿ ಅರಸ ದೊಡ್ಡಸಂಕಣ್ಣನಾಯಕನ ಕಾಲದಿಂದ ರಾಜ-ಲಾಂಛನವಾಗಿ ರೂಢಿಗೆ ಬಂತೆನ್ನುವದಾಗಿ ಜ್ಞಾನಗಂಗೋತ್ರಿಯಿಂದ ತಿಳಿದುಬರುತ್ತದೆ.

*೬. ಶಿವಮೊಗ್ಗದ 'ಬಿ' ಸ್ಟ್ರೀಟ್‌ನಲ್ಲಿರುವ ಎರಡು ಮುಖದ ಪಕ್ಷಿಯ ಅಸ್ತಿಪಂಜರ ಇರುತ್ತಿದ್ದು ವಸ್ತುಸಂಗ್ರಹಾಲಯದಲ್ಲಿ ಇಡುವದಾಗಿ ಹೇಳಿಕೊಂಡು ಹೋಗಿದ್ದಾರೆ.

*೭. ವಿಥಿಕ್ ಸೊಸೈಟಿಯ, Q.J.M.S. ೧೯೨೯ರ ಸಂಚಿಕೆಯೊಂದರಲ್ಲಿ ಗಂಡಭೇರುಂಡದ ಬಗ್ಗೆ ಲೇಖನವಿದೆ.

*೮. ಸುಮಾರು ೨೦೦ ವರ್ಷಗಳ ಹಿಂದೆಯೂ ಎರಡು ತಲೆಯ ಪಕ್ಷಿಕುಲ ಇದ್ದಿತೆಂದು ವಿದ್ವಾಂಸರಾದ ಶ್ರೀ ವೈದ್ಯನಾಥನ್ ಮೈಸೂರು ಅವರನ್ನು ಸಂಪರ್ಕಿಸಿದಾಗ ಹೇಳಿದ್ದರು.

*೯. ಡಾ। ಸೂರ್ಯನಾಥ ಕಾಮತರವರ ಕರ್ನಾಟಕ ಸಂಕ್ಷಿಪ್ತ ಇತಿಹಾಸದಲ್ಲಿ ಕೆಳದಿ ಅರಸರ ಲಾಂಛನ ಗಂಡಭೇರುಂಡದ ಬಗ್ಗೆ ವಿವರಿಸಿದ್ದಾರೆ.

*೧೦. ಗಂಡಭೇರುಂಡದ ಕುರಿತು **ಕೆಳದಿ ಸಂಸ್ಥಾನದ ಸಮಗ್ರ ಅಧ್ಯಯನ** ಪುಟ ೪೯೫ರಲ್ಲಿ ಶ್ರೀ ಸಿದ್ಧಯ್ಯ ಹಿರೇಮಠರು ಹಾಗೂ ಶ್ರೀ ಎಮ್. ಎಲ್. ಶಿವಶಂಕರರವರ ಗಂಡಭೇರುಂಡ ಕುರಿತ ವಿವರಣೆ ನೋಡಬಹುದು.

*೧೧. ಬಡಗುತಿಟ್ಟು ಯಕ್ಷಗಾನದಲ್ಲಿಯ ಮಾಹಿತಿಗಾಗಿ ಡಾ। ಶಿವರಾಮ ಕಾರಂತರ ಯಕ್ಷಗಾನ ಬಯಲಾಟ ನೋಡಬಹುದು, ಯಕ್ಷಗಾನ ಕತೆ ರಚನೆಯಾದದ್ದು ೧೫ನೇ ಶತಮಾನದ ನಂತರ. ಅದಕ್ಕೂ ಹಿಂದಿನ ಕೃತಿಗಳು ಈ ವರೆಗೆ ದೊರೆತಿಲ್ಲ (ಕೆಳದಿ ಆಸ್ಥಾನ ಕವಿ ಸುಬ್ಬನ ಹಾಡು (ಯಕ್ಷಗಾನ ಬಯಲಾಟದಲ್ಲಿ ಪುಟ ೨೧೦ರಲ್ಲಿದೆ.)

ಹರಿಹರ ಶ್ರೀನಿವಾಸ ರಾವ್*

# ಸಾಹಿತ್ಯ ಮತ್ತು ಶಾಸನಗಳಲ್ಲಿ "ಜಲತಂತ್ರಜ್ಞಾನ"

ಒಂದು ಪ್ರದೇಶದಲ್ಲಿ ದೊರೆಯುವ ನೀರಿನ ಪ್ರಮಾಣವು ಅಲ್ಲಿರುವ ಜಲಮೂಲಗಳು, ಸಂಗ್ರಹಿಸುವ ರೀತಿ, ಅದನ್ನು ಬಳಸುವ ವಿಧಾನ, ಗುಣಲಕ್ಷಣಗಳು, ಯಾವ ನೀರು ಕುಡಿಯಲು ಯೋಗ್ಯ ? ಕೈಗಾರಿಕೆಗಳಿಗೆಲ್ಲಿ ನೀರಿನ ಅವಶ್ಯಕತೆ ಮತ್ತು ಪೂರೈಕೆ, ದಿನವೂ ನಮ್ಮ ಜೀವನ ನಿರ್ವಹಣೆಯಲ್ಲಿ ಶುದ್ಧ ಕುಡಿವ ನೀರಿನ ಪ್ರಭಾವವೇನು ? ಇತ್ಯಾದಿಗಳನ್ನು ಒಳಗೊಂಡ ಶಾಸ್ತ್ರ, ಜಲಶಾಸ್ತ್ರ (Hydrology)

ನಾವಿರುವ ಈ ಭೂಮಿಯಲ್ಲಿ ಮುಕ್ಕಾಲು ಭಾಗ ನೀರೇ ಇದ್ದರೂ ಮನುಷ್ಯನ ಬಳಕೆಗೆ ಯೋಗ್ಯವಾಗಿರುವುದು ಕೇವಲ ಶೇಕಡಾ ೨.೭೫೮ ಮಾತ್ರ. ಇಂದಿನ ವಿವಿಧ ಮಾಲಿನ್ಯದ ವಾತಾವರಣದಲ್ಲಿ ನಾವು ಉಪಯೋಗಿಸುತ್ತಿರುವ ನೀರಿನ ಉತ್ತಮ ಗುಣಗಳೇನು? ಅದು ಆರೋಗ್ಯಕ್ಕೆ ಹಾನಿಕಾರಕವೆ? ನಮ್ಮ ಬಳಕೆಗೆ ಎಷ್ಟರ ಮಟ್ಟಿಗೆ ಪೂರಕವಾಗಿದೆ? ಎನ್ನುವುದನ್ನು ತಿಳಿಯುವ ಅವಶ್ಯಕತೆ ಇದೆ.

ಇಂದಿನ ಜಲ ವಿಜ್ಞಾನದ ಆವಿಷ್ಕಾರಗಳು ಅತ್ಯಂತ ಸೂಕ್ಷ್ಮವಾಗಿ ಇಂತಹ ಸಮಸ್ಯೆಗಳನ್ನು ಬಗೆಹರಿಸಲು ಸಮರ್ಥವಾಗಿವೆಯಾದರೂ, ಅವು ಈ ನೆಲದಲ್ಲೇ ವಿಪುಲವಾಗಿ ದೊರಕುವ, ಸುಲಭ ಬೆಲೆಗೆ ಕೈಗೆಟಕುವ, ನೂರಾರು ವರ್ಷಗಳಿಂದ ಉಪಯೋಗದಲ್ಲಿರುವ ಜಲ ಶುದ್ಧೀಕರಣ ತಂತ್ರಜ್ಞಾನದ ಬಗ್ಗೆ ಹೆಚ್ಚಾಗಿ ಏನನ್ನೂ ಹೇಳುವುದಿಲ್ಲ. ಈ ನೆಲೆಯಿಂದ ಸಾಹಿತ್ಯ ಮತ್ತು ಶಾಸನಗಳಲ್ಲಿ ದೊರೆವ ಮಾಹಿತಿಗಳನ್ನು ಆಧುನಿಕ ಪ್ರಯೋಗಗಳಿಗೆ ಅಳವಡಿಸಿದಾಗ ಕಂಡುಬಂದ ಅಂಶಗಳನ್ನು ವಿವರಿಸುವುದು ಈ ಸಂ-ಪ್ರಬಂಧದ ಉದ್ದೇಶ.

*ವಿಶ್ವದ ಭೂ, ವಾಯು ಮತ್ತು ಜಲಮಂಡಲಗಳಲ್ಲಿನ ನೀರಿನ ಪ್ರಮಾಣ ಹಾಗೂ ಅಂತರ್ಜಲದ ಅಂಶಗಳ ಪಟ್ಟಿ*

| ಕ್ರಮ ಸಂಖ್ಯೆ | ವಿಭಾಗ | ನೀರಿನ ಪ್ರಮಾಣ ೧೦೦೦ ಘನ ಕಿ.ಮಿ. | ಒಟ್ಟು ಪ್ರಮಾಣದ ನೂರರ ಅಂಶ ಶೇಖಡವಾರು ಪ್ರಮಾಣ |
|---|---|---|---|
| ೧ | ವಾಯು ಮಂಡಲದ ನೀರು | ೧೩ | ೦.೦೦೧ |
| ೨ | ಭೂಮಂಡಲದ ನೀರು | | |
| | ಅ. ಸಮುದ್ರದ ಉಪ್ಪು ನೀರು | ೧,೩೨೨,೨೪೦ | ೯೭.೨೨೪ |
| | ಆ. ಭೂಮಧ್ಯ ಸಮುದ್ರ ಮತ್ತು ಉಪ್ಪು ನೀರಿನ ಸರೋವರಗಳು | ೧೦೪ | ೦.೦೦೮ |
| | ಇ. ಕೆರೆ, ಕಟ್ಟೆ ಮತ್ತು ಸಿಹಿನೀರಿನ ಸರೋವರಗಳು | ೧.೨೫ | ೦.೦೦೯ (ಒಟ್ಟು ಶೇಖಡವಾರು ಪ್ರಮಾಣ ಮನುಷ್ಯನಿಗೆ ಬರುವ ಬಳಕೆ ಬರುವಂಥಹುದು) |
| | ಈ. ನದಿ, ಕಾಲುವೆಗಳಲ್ಲಿ ಸಂಗ್ರಹಿತ ನೀರು | ೧.೨೫ (ಮನುಷ್ಯನ ಉಪಯೋಗಕ್ಕೆ ಬರುವ ನೀರು) | ೦.೦೦೧ |
| | ಉ. ಹಿಮಪರ್ವತಗಳಲ್ಲಿ ಸಂಗ್ರಹಣೆ | ೨೯,೦೦೦.೦೦ | ೨.೧೩೨ |
| | ಊ. ಸಸ್ಯ ಮತ್ತು ಜೀವಾಣುಗಳು | ೫೦.೦೦ | ೦.೦೦೪ |
| ೨ | ಭೂಗರ್ಭದಲ್ಲಿನ ನೀರು: | | ೨.೭೫೮೧ |
| | ಅ. ಪಾರ್ಶ್ವ ಜಲಭರಿತ ನೀರು | ೬೭ | ೦.೦೦೫ |
| | ಆ. ಅಂತರ್ಜಲ: ೦.೮೮ಮಿ. ಆಳದ ಒಳಗೆ | ೪,೨೦೦ | ೦.೩೦೯ |
| | ಅಂತರ್ಜಲ: ೦.೮೮ಮಿ. ಆಳದ ಒಳಗೆ | ೪,೨೦೦ | ೦.೩೦೯ |
| | | ೧,೩೬೦,೦೦೦ | ೧೦೦.೦೦೦ |

*೭೫/೫ ಸಮರ್ಥ ಹೊಸವಿಕಾಸ್ ಶಾಲೆ ಎದುರು ೫ನೇ ಬ್ಲಾಕ್, ೩ನೇ ಫೇಸ್, ಬೆಂಗಳೂರು – ೫೬೦೦೮೫.

ಸಿಂಧೂ ನದಿಯ ಸಂಸ್ಕೃತಿಯಲ್ಲೇ ನೀರಿನ ಗರಿಷ್ಠ ಬಳಕೆಯಾಗಿ ಉಪಯೋಗಿಸಿ ಬಿಟ್ಟ ಕೊಳೆನೀರನ್ನು ಚರಂಡಿಗಳ ಮೂಲಕ ಸುವ್ಯವಸ್ಥಿತವಾಗಿ ಹೊರಹಾಕುವ ವ್ಯವಸ್ಥೆ ಇರುವುದು ಕಂಡು ಬಂದಿದೆ. ಅಶೋಕನ ಶಾಸನಗಳು ಅರವಟ್ಟಿಗೆಗಳನ್ನು ದಾರಿಯಲ್ಲಿಟ್ಟು ಪ್ರಯಾಣಿಕರಿಗೆ ಕುಡಿವ ನೀರನ್ನು ಒದಗಿಸುತ್ತಿದ್ದುದನ್ನು ಉಲ್ಲೇಖಿಸುತ್ತವೆ. ಪೌರಾಣಿಕವಾಗಿ, ದಶಾವತಾರಗಳಲ್ಲಿ ಮೊದಲನೆ ಎರಡು ಅವತಾರಗಳು: ಮತ್ಸ್ಯ, ಕೂರ್ಮ - ಇಂದಿಗೂ ಕೆರೆ, ನದಿಗಳಲ್ಲಿ, ಸಮುದ್ರದ ನೀರಲ್ಲಿ ಕರಗಿರುವ ಆಮ್ಲಜನಕದ ಮಟ್ಟವನ್ನು ಈ ಎರಡು ಮುಖ್ಯ ಜಲಚರಗಳು ಎಷ್ಟರ ಮಟ್ಟಿಗೆ ಉಪಯೋಗಿಸಿ ಕೊಳ್ಳುತ್ತವೆ? ಎನ್ನುವ ಜೈವಿಕ ರಸಾಯನ (Fish Culture) ಶಾಸ್ತ್ರದ ಮೂಲಕವೇ ಕಂಡು ಹಿಡಿಯುತ್ತಾರೆ.

ಇಂದಿನ ಪ್ರಯೋಗಗಳಿಗೂ ನಿಲುಕುವ ಹಾಗೂ ಉಪಯೋಗಕ್ಕೆ ಬರುವ ಹಲವಾರು ತಾಂತ್ರಿಕ ಸುಲಭ ವಿಧಾನಗಳನ್ನು ನಮ್ಮಲ್ಲಿಯ ಸಾಹಿತ್ಯವು ಒಳಗೊಂಡಿದೆ. ಹೀಗಿದ್ದಾಗ್ಯೂ ನಮ್ಮಲ್ಲಿ ಇಂದಿನ ತಾಂತ್ರಿಕ ಪ್ರಯೋಜನಾತ್ಮಕ ರೀತಿಯಲ್ಲಿ ನಮ್ಮ ಹಿಂದಿನವರು ಬರೆದಿಟ್ಟಿಲ್ಲ ಎನ್ನುವ ಕೂಗು ಇದೆ. ಆದರೆ ಆಳವಾಗಿ ಅಧ್ಯಯನ ಮಾಡಿದರೆ ಕನ್ನಡದ ನೆಲದಲ್ಲೇ ಹುಟ್ಟಿ ಬೆಳೆದ ೨ನೇ ಸೋಮೇಶ್ವರನ *ಮಾನಸೋಲ್ಲಾಸ*, ಚಾವುಂಡರಾಯನ *ಲೋಕೋಪಕಾರ*, ಕೆಳದಿ ಬಸವರಾಜನ *ಶಿವತತ್ತ್ವರತ್ನಾಕರ*, ಅಷ್ಟೇ ಏಕೆ *ಪಂಪ ಭಾರತ*, ರನ್ನನ *ಗದಾಯುದ್ಧ*, *ಕರ್ನಾಟಕ ಭಾರತ ಕಥಾಮಂಜರಿ*, ಮಂಗರಸನ *ಸೂಪಶಾಸ್ತ್ರ* ಜನಪದಸಾಹಿತ್ಯ, ಶರಣರ ವಚನಗಳು, ದಾಸ ಸಾಹಿತ್ಯ, ಜನ್ನನ *ಯಶೋಧರ ಚರಿತೆ*, ಸರ್ವಜ್ಞನ ವಚನಗಳಲ್ಲೂ ಅನೇಕ ಉಪಯುಕ್ತ ವೈಜ್ಞಾನಿಕ ಅಂಶಗಳನ್ನು ವಿವರವಾಗಿಯೋ ಅಥವಾ ಸಾಂಕೇತಿಕವಾಗಿಯೋ (Symbolic) ತಿಳಿಸುವುದನ್ನು ಕಾಣುತ್ತೇವೆ. ಈ ನಿಟ್ಟಿನಲ್ಲಿ ಆಲೋಚಿಸಿದಾಗ, ಶಾಸನಗಳನ್ನು ಬರೆದಿರುವ ಕವಿ ಜನ್ನ, ದಾಸ ಶ್ರೇಷ್ಠರೆಂದೆನಿಸಿಕೊಂಡ ಶ್ರೀಪುರಂದರದಾಸರ ಹಾಡಿನ ಉದಾಹರಣೆಗಳು ಜಲವಿಜ್ಞಾನಶಾಸ್ತ್ರಕ್ಕೆ ಹೇಗೆ ಹೊಂದಿಕೊಳ್ಳುತ್ತವೆ ಎಂಬುದನ್ನು ಗಮನಿಸಬಹುದು.

***ಕಥೆ:***

ಯಶೋಧರನ ರಾಣಿ ಅಮೃತಮತಿ ಮಾವುತ ಅಷ್ಟಾವಂಕನ ಮಧುರ ಧ್ವನಿಗೆ ಮರುಳಾಗಿ ಅವನಿಗೆ ತನ್ನ ಮನಸ್ಸನ್ನು, ದೇಹವನ್ನೂ ಅರ್ಪಿಸುತ್ತಾಳೆ. ಈ ಸಂದರ್ಭದಲ್ಲಿ ಕವಿಚಕ್ರವರ್ತಿ ಜನ್ನನ ಹೃದಯ ಮಿಡಿದ ಸಾಲುಗಳಿವು: *"ಬಿನದಕೆ ಪಾಡುತ್ತಿರೆ ನುಣ್ಣನಿ ನಿದ್ರೆಗೆ ಕತಕ ಬೀಜ ಮಾಯ್ತೆನೆ"*- ಎನ್ನುವ ಸಾಲುಗಮನಿಸಿ. ಇಲ್ಲಿ ಮಾಹಿತಿಯ ಜಾಡು ಹಿಡಿದು ನಡೆಸಿದ ಪ್ರಯೋಗಗಳ ವಿವರಣೆ ಇದೆ.*೧

ಕತಕ ಬೀಜಕ್ಕೆ ಕನ್ನಡದ ಪರ್ಯಾಯ ಪದ ಚಿಲ್ಲದ ಬೀಜ. ಕತಕ ಬೀಜವನ್ನು ವಿಶೇಷವಾಗಿ ದಕ್ಷಿಣಭಾರತದ ಹಳ್ಳಿಗಳಲ್ಲಿ ಒರಿಸ್ಸಾ, ಮಧ್ಯಪ್ರದೇಶ ಮುಂತಾದ ಕಡೆಗಳಲ್ಲಿ ಆದಿವಾಸಿಗಳೂ ಮೊದಲ್ಗೊಂಡು ಹಳ್ಳಿಯ ನದಿತೀರದ ಜನಗಳು ಮಳೆಗಾಲದಲ್ಲಿ ನದಿಯಲ್ಲಿ ಬರುವ ರಾಡಿ ನೀರನ್ನು ತಿಳಿಗೊಳಿಸಲು ಉಪಯೋಗಿಸುತ್ತಾರೆ. ಅಂದರೆ ರಸಾಯನ ವಸ್ತುವಾದ ಪಟಿಕ(Alum)ನ್ನು ಉಪಯೋಗಿಸುವ ವಿಧಾನದಂತೆ ಎನ್ನಬಹುದಾದರೂ ಈ ಬೀಜವು ಸಸ್ಯಜನಕವಾಗಿದ್ದು; ಬಹುಉಪಯೋಗಿಯೂ ಹೌದು.

ಆಯುರ್ವೇದ ಗ್ರಂಥ 'ದ್ರವ್ಯ ವಿಜ್ಞಾನ ಶಾಸ್ತ್ರ'ದ ಪುಟ ೫೧೯, (ಗ್ರಂಥ ಸಂಪಾದನೆ ಮತ್ತು ಪ್ರಕಟಣೆ - ಆಯುರ್ವೇದ ವಿದ್ವಾನ್ ಪಂ॥ಎಲ್.ಅಶ್ವತ್ಥನಾರಾಯಣ, ಆಯುರ್ವೇದ ಮಹಾ ವಿದ್ಯಾಲಯ ನಿರ್ವಾಹರ್ ಸಮಿತಿ, ಮೈಸೂರು) ಪ್ರಕಾರ ಚಿಲ್ಲದ ಅಥವಾ ಕತಕ ಬೀಜದ ಹೆಸರು, ಪ್ರಭೇದ, ಪ್ರಯೋಗ ಕುರಿತಾದ ವಿವರಣೆ:

| | |
|---|---|
| *ಸಂಸ್ಕೃತ* | *ಕತಕ, ಅಂಬು ಪ್ರಸಾದನ ಫಲಮ್* |
| *ಕನ್ನಡ* | *ಚಿಲ್ಲದ ಬೀಜ* |
| *ಹಿಂದಿ* | *ನಿರ್ಮಲೀ* |
| *ತೆಲುಗು* | *ಚಿಲ್ಲ ಚೆಟ್ಟು* |
| *ತಮಿಳು* | *ಟೇಟನ್* |
| *ಲ್ಯಾಟಿನ್* | *ಸ್ಟೈಕೊನಾಲ್ ಪೊಟ್ಯಾಮೊರಮ್* *(Strychnol Potatorum)* |

*ವಿಶೇಷವಾಗಿ - ಬಂಗಾಳ, ಬರ್ಮ ಮತ್ತು ದಕ್ಷಿಣ ಭಾರತಗಳಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಒರಿಸ್ಸಾ, ಆಂಧ್ರಪ್ರದೇಶ, ಕರ್ನಾಟಕ ಮಧ್ಯಪ್ರದೇಶದ ದೊರೆವಸ್ಥಳಗಳು, ಬಸ್ತಾರ್ ಜಿಲ್ಲೆಗಳಲ್ಲಿ ಈ ಬೀಜವನ್ನು ಬಂಡು ನೀರನ್ನು ತಿಳಿಗೊಳಿಸಲು ಇಂದಿಗೂ ಉಪಯೋಗಿಸುತ್ತಿರುವುದನ್ನು ಕಂಡು ಕೇಳಿದ್ದೇನೆ. ವಿಶೇಷವಾಗಿ ಮಳೆಗಾಲದ ಪ್ರಾರಂಭದಲ್ಲಿ ಹೊಸ ರಾಡಿ ನೀರು ಬಂದಾಗ ಉಪಯೋಗಿಸಿ ತಿಳಿಗೊಳಿಸಿ ಕುಡಿಯುತ್ತಾರೆ.*

***ಪ್ರಭೇದ:*** ಎರಡು ವಿಧ ೧. ಸಣ್ಣದು ೨. ದೊಡ್ಡದು.

***ಗುಣಾಃ*** - ಕಕರಸ್ಯ ಫಲಂ ನೇತ್ರ್ಯಃ ಜಲ ನಿರ್ಮಲ ತಾರಕಮ್। ವಾತ ಶ್ಲೇಷ್ಮಹರಂ ಶೀತಂ ಮಧುರಂ ತುವರಂ ಕುರು॥(ಭಾವಪ್ರಕಾಶ) ಕತಕಂ ಶೀತಲಂ ಪ್ರಾಹು ತೃಷ್ಣಾ ವಿಷವಿನಾಶಕಮ್। ನೇತ್ರೋತ್ರಥರೋಗ ವಿಧ್ವಂಸಿ ವಿಧಿನಾಂಜನ ಯೋಗತಃ। ಕತರಸ್ಯ ಫಲಂ ತಕ್ತಂ ಚಕ್ಷುಷ್ಯಂ ಪಿತ್ತಾಲಂ ಮೃದು।ವಾರಿ ಪ್ರಸಾದನಂ ಕೃಚ್ಛ್ರ ಶರ್ಕ ರಾಮಶ್ಮರೀಂ ಜಯೇತ್

ಈ ಹೇಳಿಕೆಯ ಪ್ರಕಾರ ಕತಕ ಬೀಜ 'ಕಣ್ಣಿನ ರೋಗಕ್ಕೆ ದಿವ್ಯ ಔಷಧಿ'. ನೇತ್ರದ ಉಷ್ಣವನ್ನು ನಾಶಮಾಡಿ ಕಣ್ಣುಗಳಿಗೆ ತಂಪನ್ನು ನೀಡುವುದರಿಂದ ಇದನ್ನು ಪ್ರಸಾದನಕ್ಕೆ (Make up) ಕೂಡಾ ಬಳಸಲ್ಪಡುತ್ತದೆ.

*(ಧನ್ವಂತರಿ ನಿಘಂಟು)*

ಬಾಲಕತರ ಫಲ ಗುಣಾ :- ಶೀತಲಂ ತತ್ಫಲಂ ಬಾಲಂ ಶಕ್ತ ಪಿತ್ತ (ಸಣ್ಣ ಚಿಲ್ಲದ ಬೀಜದ ಗುಣ):- ಹರಂ ಪರಮ್। ಅರ್ಜುನೇಕತರಂ (ನೇತ್ರ ರೋಗಚಿಕಿತ್ಸೆ) ನೇತ್ರಪ್ರಸಾದ್ಯರ್ಥಮ್ - ಕತರಂ (ಭಾವಪ್ರಕಾಶ)

ಸಣ್ಣ ಕತಕ ಬೀಜವು ತಣ್ಣನೆಯ ಗುಣವುಳ್ಳದ್ದಾಗಿರು

ವುದರಿಂದ ರಕ್ತದಲ್ಲಿಯ ಪಿತ್ತವನ್ನು ನಿವಾರಿಸುತ್ತದೆ. ಹೀಗಾಗಿ ಇದು ನೇತ್ರರೋಗಕ್ಕೆ ಒಳ್ಳೆಯ ಚಿಕಿತ್ಸೆಯನ್ನುಂಟು ಮಾಡುತ್ತದೆ.

ಚಿಲ್ಲದ ಬೀಜವನ್ನು ನೀರನ್ನು ತಿಳಿಗೊಳಿಸಲು ಉಪಯೋಗಿಸುತ್ತಾರೆನ್ನುವುದು ತಿಳಿದ ನಂತರ ಇದನ್ನು ನೀರು ಶುದ್ಧೀಕರಿಸಲು ಉಪಯೋಗಿಸಬಹುದೆನ್ನುವ ಆಲೋಚನೆ ಬಂದಿತು. ಹೀಗೆ ನಡೆಸಿದ ರಾಸಾಯನಿಕಪ್ರಯೋಗದ ಕೆಲವು ಭಾಗದ ವಿವರಣೆ ಇಂತಿದೆ.

i. ಪ್ರಯೋಗ ಪ್ರಾರಂಭಿಸಿದ ದಿನಾಂಕ : ೨೩-೬-೨೦೦೦
ii. ಮುಕ್ತಾಯದ ದಿನಾಂಕ : ೨೯-೬-೨೦೦೦
iii. ಉಪಯೋಗಿಸಿದ ಕತಕ ಬೀಜಗಳ ಸಂಖ್ಯೆ : ೪
iv. ಕುಡಿವ ನೀರಿನ ಪ್ರಮಾಣ : ೧೨೫ ಮಿಲಿಲೀಟರ್ (೧/೮ ಲೀಟರ್)
v. ಬೀಜಗಳನ್ನು ನೆನೆಸಿದಕಾಲ : ೧೩ ಗಂಟೆಗಳ (ಬೆಳಿಗ್ಗೆ ೭ ರಿಂದ ರಾತ್ರಿ ೮ರವರೆಗೆ)
vi. ನೀರನ್ನುಉಪಯೋಗಿಸಿದ ವಿಧಾನ : ಬೆಳಿಗ್ಗೆ ಮುಖ ತೊಳೆದ ನಂತರ ಮತ್ತು ರಾತ್ರಿ ಮಲಗುವಮುನ್ನ,
vii. ಬಳಸಿದ ಪಾತ್ರೆ : ಗಾಜಿನ ಲೋಟ (೨೫೦ ಮಿ. ಲೀಟರ್ ಹಿಡಿಯುವಂಥ ಸಾಮಾನ್ಯ ಲೋಟ)

*ಮುಂಜಾಗ್ರತೆ*

ನೀರನ್ನು ಪ್ರತಿ ೧೨ ಗಂ. ಗಳಿಗೆ ಒಮ್ಮೆ ಬದಲಾಯಿಸಲಾಗಿದೆ. ಹೀಗೆ ಬದಲಾಯಿಸದಿದ್ದರೆ ಬೀಜವು ಕೊಳೆತ ವಾಸನೆ ಬರುತ್ತದೆ. ಅಲ್ಲದೆ ಮತ್ತೆ ಮತ್ತೆ ಉಪಯೋಗಿಸಲು ಬರುವುದಿಲ್ಲ. ನೀರು ಕೂಡಾ ತನ್ನ ಉತ್ತಮಗುಣ ಗಳನ್ನು ಕಳೆದುಕೊಳ್ಳುತ್ತದೆ.

*ಪ್ರಯೋಜನ*

ಚಿಲ್ಲದ ನೀರು ನಾಲಿಗೆಗೆ ಸಿಹಿಯಾಗಿ, ಹೊಟ್ಟೆಗೆ ತಂಪಾಗಿ, ಮೆದುಳಿಗೆ ಹೆಚ್ಚಿನ ಲವಲವಿಕೆ ಉಂಟು ಮಾಡುತ್ತದೆ. ಈ ಪ್ರಯೋಗವನ್ನು ೩ ವ್ಯಕ್ತಿಗಳ ಮೇಲೆ ಮಾಡಿದಾಗ ಅವರು ಬರಿಯ ನೀರನ್ನು ಕುಡಿದಾಗ ಉಂಟಾಗುವ ಅನುಭವಕ್ಕಿಂತ ಸಿಹಿ ನೀರನ್ನು ಕುಡಿದಂತೆ ಇದ್ದಿತು ಎಂದು ಸ್ಪಷ್ಟ ಪಡಿಸಿದ್ದಾರೆ. ಅಲ್ಲದೇ ಒಂದು ವಿಭಿನ್ನ ಅನುಭವವೂ ಉಂಟಾಯಿತು ಎಂದಿದ್ದಾರೆ.

***ಫಲಿತಾಂಶ***

*ಚಿಲ್ಲದ ಬೀಜವು ತಿಳಿಯಾದ ಮನಸ್ಸನ್ನೂ ಉತ್ಕರ್ಷಗೊಳಿಸಬಲ್ಲದು ಎಂಬ ಜನ್ನ ಕವಿಯ ಧ್ವನಿತತ್ವವನ್ನು ಸಮರ್ಥಿಸುತ್ತದೆ. ಈ ಮುಂದೆ ತಿಳಿಸಿರುವಂತೆ ಈ ಬೀಜದಿಂದ ಉತ್ಪಾದಿಸಲ್ಪಡುವ*[*೬] *ಗ್ಯಾಲಾಕ್ಟೋಸ್, ಮ್ಯಾನೋಸ್ ಎಂಬ ಸಕ್ಕರೆಗಳನ್ನು ರಸಾಯನ ಶಾಸ್ತ್ರದ ಮೂಲಕ ಪಡೆಯಲಾಗುತ್ತಿದೆ. ಇತ್ತೀಚೆಗೆ ಇದರ ಎಲೆಗಳಿಂದ ಡಯಾ ಬೋಲಿನ್ ಎಂಬ ಸಂಯುಕ್ತ ರಸಾಯನ ಪದಾರ್ಥವನ್ನೂ ಕಂಡುಹಿಡಿಯಲಾಗಿದೆ.*

ಇದುವರೆಗೆ ಚಕ್ರವರ್ತಿ ಜನ್ನ ವಿರಚಿತ ಯಶೋಧರ ಚರಿತೆಯಲ್ಲಿ ಪ್ರಸ್ತಾಪಿಸಲಾಗಿರುವ ಕತಕ ಬೀಜ (ಚಿಲ್ಲದ ಬೀಜ)ದಿಂದ ನೀರನ್ನು ಶುದ್ಧೀಕರಿಸುವ ಗುಣಗಳನ್ನು ಗಮನಿಸಿದ್ದಾಯಿತು.

ಇನ್ನು ಶ್ರೀಪುರಂದರದಾಸರು ಹೇಳುವ "ಒಂದು ದಳ ಶ್ರೀ ತುಳಸಿ ಬಿಂದು ಗಂಗೋದಕಷ್ಟ" ಎನ್ನುವ ಒಂದು ಪಂಕ್ತಿಯನ್ನು ಆಧರಿಸಿ ಮಾಡಿದ ರಸಾಯನಿಕ ಪ್ರಯೋಗ, ಅದರ ಉಪಯೋಗಗಳನ್ನು ಈಗ ನೋಡೋಣ.

ಶ್ರೀ ಬಿ.ಜಿ.ಎಲ್. ಸ್ವಾಮಿಯವರು ದಾಖಲಿಸಿರುವಂತೆ "ಭಾಗವತ" ದಲ್ಲಿ ಎಂದರೆ ಸುಮಾರು ಕ್ರಿ.ಶ.. ೧೦ನೇ ಶತಮಾನದಲ್ಲಿ ತುಳಸಿಯ ಪ್ರಸ್ತಾಪವಿದೆ. ಇದನ್ನು ತಕ್ಕ ಮಟ್ಟಿಗೆ ಒಪ್ಪಬಹುದು. (ಪುಟ-೧೮೭ 'ಫಲಶೃತಿ' - ಬಿ.ಜಿ.ಎಲ್. ಸ್ವಾಮಿ).

ತುಳಸಿಯಿಂದ ನೀರಿನ ಶುದ್ಧತೆ ಹೇಗಾಗುತ್ತದೆ? ಎನ್ನುವುದು ಪ್ರಯೋಗದ ಮೂಲಕ ಪರಿಶೀಲಿಸುವುದು ಮಾತ್ರ ಇಲ್ಲಿ ನನ್ನ ಉದ್ದೇಶ. ಆದರೆ ಅವರು ಹೇಳುವಂತೆ ತುಳಸಿಯ "ಇರುವಿಕೆಯೆಲ್ಲವೂ ತೋಟಗಳಲ್ಲಿ, ಬೃಂದಾವನಗಳಲ್ಲಿ, ವೈಷ್ಣವ ದೇವಾಲಯಗಳಲ್ಲಿ, ಮಠಗಳಲ್ಲಿ ಈ ಸ್ಥಾನಗಳಿಂದ ತಪ್ಪಿಸಿಕೊಂಡು ಸುತ್ತಿನ ಹರವಿನಲ್ಲಿ ಬೆಳೆಯ ಬಹುದೇ ವಿನಾ ಸ್ವಾಭಾವಿಕವಾಗಿ ಬೆಳೆದಿರುವ ಪ್ರದೇಶಗಳೊಂದೂ (ಪುಟ ೩೮-೩೯ ಶಾಸನಗಳಲ್ಲಿ ಗಿಡಮರಗಳು - ಬಿ.ಜಿ.ಎಲ್. ಸ್ವಾಮಿ) ನಮ್ಮ ದೇಶದಲ್ಲಿಲ್ಲ", ಎನ್ನುವ ವಾದವು ಸಮರ್ಥನೀಯವಲ್ಲ. ಕೆರೆಯ ಕೋಡಿಗಳಲ್ಲಿ, ಹೊಲದ ಮೇರೆಗಳಲ್ಲಿ, ಕಾಡುಗಳಲ್ಲಿ (ಉದಾಹರಣೆಗೆ ಕಾಡುತುಳಸಿ ಎಂಬ ವಿಶಿಷ್ಟ ಪ್ರಭೇದವೇ ಇದೆ) ಗುಡ್ಡಗಳಲ್ಲಿಯ ಬಂಡೆ ಸಂದಿಗಳಲ್ಲಿ ಯಥೇಚ್ಛವಾಗಿ ಬೆಳೆದಿರುವುದು ಸಾಮಾನ್ಯ ಅನುಭವ ವಾಗಿದೆ.

*ತುಳಸೀದಳ(ಎಲೆ), ಬೀಜಗಳನ್ನು ಶುದ್ಧನೀರು (Pure Distilled water) ಮತ್ತು ಬೆಂಗಳೂರು ನಗರದಲ್ಲಿ ನೀರಿನಲ್ಲಿ ಹಾಕಿ ೩ ಗಂಟೆಗಳ ನಂತರ ಪರೀಕ್ಷಿಸಿದಾಗ ಉಂಟಾದ ರಸಾಯನಿಕ ಬದಲಾವಣೆಗಳ ಪಟ್ಟಿ:*

*೧. ಉ.ದಾ. : ೧ ಲೀಟರ್ ಡಿಸ್ಟಿಲ್ಡ್ ನೀರು + ೪ ತುಳಸೀದಳ (೧ದಳ ಎಂದರೆ ಸಾಮಾನ್ಯವಾಗಿ ತೀರ್ಥಕ್ಕೆ ಉಪಯೋಗಿಸುವ ೨ ದೊಡ್ಡ ಹಾಗೂ ಎರಡು ಚಿಕ್ಕ ಎಲೆಗಳ ಸಮೂಹ)*
*೨. ಉ.ದಾ. : ೧ ಲೀಟರ್ ಕಾವೇರೀಜಲ + ೪ತುಳಸೀದಳ*
*೩. ಉ.ದಾ. : ೧ ಲೀಟರ್ ಕಾವೇರಿ ನೀರು + ೪ ತುಳಸೀ ಬೀಜದ ತೆನೆಗಳು.*

| ಪಿ.ಹೆಚ್[*೭] | ಉ.ದಾ ೧ | ಉ.ದಾ ೨ | ಉ.ದಾ ೩ |
|---|---|---|---|
| | ೭.೨೬ | ೭.೫೮ | ೭.೫೬ |

**ಕಂಡಕ್ಟಿವಿಟಿ**[*೮]

೧ ಸೆಂ.ಮೀ. ಕ್ಯೂಬ್‌ದ್ರವದಲ್ಲಿ ೧ ಓಂ (Ohm) ವಿದ್ಯುತ್ ಹಾಯಿಸಿದಾಗ ಅದರಿಂದ ತಡೆಯಲ್ಪಟ್ಟ ನೀರಿನ ನಿರೋಧಕ ಶಕ್ತಿ ಇದು.

| ಉ.ದಾ ೧ | ಉ.ದಾ ೨ | ಉ.ದಾ ೩ |
|---|---|---|
| ೭೯.೦ | ೪೦೮ | ೪೦೮ |

ನೀರಿನ ರೋಧಕ ಶಕ್ತಿಯು ಅದರಲ್ಲಿ ಕರಗಿರುವ ಲವಣಾಂಶಗಳನ್ನು*೯ ಅವಲಂಬಿಸಿರುತ್ತದೆ. ಪ್ರಮುಖವಾದ ಲವಣಾಂಶಗಳಾದ ಕ್ಯಾಲ್ಷಿಯಂ, ಮೆಗ್ನೀಷಿಯಂ, ಗಡಸುತನ (Hardness of water) ನೀರಿನಲ್ಲಿ ಕರಗಿದ ಆಮ್ಲಜನಕ ಇತ್ಯಾದಿಗಳ ಪರಿಶೀಲನೆಯ ಪಟ್ಟಿ ಈ ಕೆಳಗಿನಂತಿದೆ.

| ಲವಣಾಂಶ | ಉದಾ. ೧ | ಉದಾ. ೨ | ಉದಾ. ೩ |
|---|---|---|---|
| i ಕ್ಯಾಲ್ಸಿಯಂ | ೦.೩೯ | ೧.೫೬ | ೧.೧೭ |
| ii ಮ್ಯಾಗ್ನೀಷಿಯಂ | ೦.೦೬ | ೧.೭೩ | ೨.೧೨ |
| iii ಗಡಸುತನ (ಉಪ್ಪು ನೀರು) | ೫೧.೦೭ | ೧೬೪.೯೮ | ೧೬೪.೯೮ |
| ನೀರಿನಲ್ಲಿ ಕರಗಿರುವ ಆಮ್ಲಜನಕ | ೨.೩೬೯ | ೨.೩೬೯ | ೨.೩೬೯ |

ಜಲ ಚರಗಳಾದ ಮೀನು, ಕಪ್ಪೆ, ಆಲ್‌ಗೀಗಳು ಇತ್ಯಾದಿಗಳು ನೀರಿನಲ್ಲಿ ಕರಗಿರುವ ಆಮ್ಲಜನಕದಿಂದಲೇ ಜೀವಿಸುತ್ತವೆ. ಈ ಅಂಶವೇ ನೀರಿನ ರುಚಿಯನ್ನು ನಿರ್ಧರಿಸುತ್ತದೆ. ತುಳಸೀದಳ ಬೀಜಗಳನ್ನು ೩ ಗಂಟೆಗಳ ಕಾಲ ನೆನೆಸಿದಾಗ ಡಿಸ್ಟಿಲ್ಡ್ ವಾಟರ್ (Distilled water), ಕಾವೇರಿ ನೀರು ಮತ್ತು ತುಳಸೀ ಬೀಜದ ತನೆಯಿಂದ ಉತ್ಪತ್ತಿಯಾಗುವ ಆಮ್ಲಜನಕ ಎಲ್ಲವೂ ಒಂದೇ ಪ್ರಮಾಣದ್ದಾಗಿರುವುದು ಖಚಿತವಾಗಿ ಕಂಡುಬಂದಿತು. ಇದೊಂದು ಸಮಾನ ಅಂಶ ಬಿಟ್ಟರೆ ಉಳಿದ ಎಲ್ಲಾ ಅಂಶಗಳೂ ಕಾವೇರಿ ನೀರಿಗಿಂತಲೂ ಮತ್ತು ತುಳಸೀಬೀಜದ ನೀರಿನಲ್ಲಿ ಹೆಚ್ಚಾಗಿರುವುದು ಕಂಡು ಬರುತ್ತದೆ. ಈ ಪ್ರಯೋಗಗಳು ತುಳಸಿಯ ಮಹತ್ವವವನ್ನು ಹೆಚ್ಚಿಸುತ್ತದೆ ಎನ್ನುವುದಕ್ಕೆ ತಕ್ಕ ಉದಾಹರಣೆಯಾಗಿವೆ.

ಒಂದು ಲೀಟರ್ ನೀರಿಗೆ ೪ ತುಳಸೀದಳಗಳನ್ನೇ ಏಕೆ ಉಪಯೋಗಿಸಲಾಗಿದೆ? ಎನ್ನುವ ವಿವರಣೆ ಹೀಗಿದೆ. ಒಬ್ಬ ಸಾಮಾನ್ಯ ಮನುಷ್ಯನ(೬ ಅಡಿ ಎತ್ತರದ) ಅಂಗೈಯಲ್ಲಿ ಸುಮಾರು ೮ ರಿಂದ ೧೦ ಮಿಲಿಲೀಟರ್ ನೀರು ಹಿಡಿಯುತ್ತದೆ. ಅಲ್ಲದೆ ತೀರ್ಥಕ್ಕೆ ಬಳಸುವ ಚಮಚ ಅಥವಾ ಉದ್ಧರಣೆ ೫ ರಿಂದ ೧೦ ಮಿ.ಲೀ. ನೀರು ಹಿಡಿಯುತ್ತದೆ. ಪುರಂದರದಾಸರೇ ಹೇಳಿರುವ 'ಬಿಂದು' ಎನ್ನುವ ಅರ್ಥವನ್ನು ಇಲ್ಲಿ ಪಿ.ಪಿ.ಎಂ.(ಎಂದರೆ parts per Million) ಎಂಬ ಸಮಾನ ಪದಕ್ಕೆತೆಗೆದುಕೊಂಡು ಅದರ ವೃದ್ಧಿಯನ್ನೇ ಒಂದು ಲೀಟರ್ ಎಂದು ಲೆಕ್ಕಿಸಲಾಗಿದೆ. 'ಗಂಗೋದಕ' ಎನ್ನುವುದನ್ನು ಶುದ್ಧ ಜಲ ಎಂದು ಪರಿಭಾವಿಸಿದೆ. ಈ ಪ್ರಯೋಗದಿಂದ ದಾಸರ ಹಾಡಿನ ಆ ಶಬ್ದದ ಮಹತ್ವ ತಿಳಿಯುತ್ತದೆ. ಅಂದರೆ ತುಳಸಿಯನ್ನು ಉಪಯೋಗಿಸುವುದರಿಂದ ನೀರಿನ ಶುದ್ಧತೆಗೆ ಸಹಾಯಕವಾಗುತ್ತದೆನ್ನುವ ಅಂಶವನ್ನು ಇದು ದೃಢಪಡಿಸುತ್ತದೆ. ಈಗಾಗಲೇ ತಿಳಿಸಿದಂತೆ ಈ ತುಳಸೀ ನೀರಿನ ಒಳ್ಳೆ ಗುಣಗಳು ಕಂಡುಬರುವುದು ೩ ರಿಂದ ೪ ಗಂಟೆಗಳ ಮಾತ್ರ. ಸಸ್ಯದ ಕೊಳೆಯುವಿಕೆಯಿಂದಾಗಿ ಈ ಅವಧಿಯ ನಂತರ ನಿಧಾನವಾಗಿ ಕಡಿಮೆಯಾಗಿ ಸುಮಾರು ೧೦-೧೨ ಗಂಟೆಗಳ ನಂತರ ನೀರು ಕುಡಿಯಲು ಅಶುದ್ಧವೆನಿಸುತ್ತದೆ. ಪ್ರಾಯಶಃ ತುಳಸೀ ತೀರ್ಥವನ್ನು ತ್ರಿಕಾಲ ಪೂಜೆ (ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲ)ಯ ನಂತರ ಬಳಸಬೇಕೆನ್ನುವ ಪದ್ಧತಿಗೆ ವೈಜ್ಞಾನಿಕ ಒತ್ತೂ ಸಿಗುತ್ತದೆ. ತುಳಸೀ ಎಲೆಗಳನ್ನು ಒಂದುಸಾರಿ ಮಾತ್ರ ಬಳಸಬಹುದು. ಆದರೆ ಚಿಲ್ಲದ ಬೀಜವನ್ನು ಮತ್ತೆ ಮತ್ತೆ ನೀರನ್ನು ಬದಲಾಯಿಸಿ, ಒಣಗಿಸಿ, ನೀರಿನ ಶುದ್ಧತೆಗೆ ಬಳಸಿಕೊಳ್ಳಬಹುದು.

ಈ ಮೇಲೆ ಹೇಳಿದ ಎರಡು ಉದಾಹರಣೆಗಳು ನೀರಿನ ಶುದ್ಧತೆ (water Quality)ಯ ಬಗ್ಗೆ ತಿಳಿಸಿದರೆ, ತುರವೆಯ ಕೆರೆ, ಹರಿಹರ, ಇತ್ಯಾದಿ ಸ್ಥಳಗಳ ಶಾಸಗಳು ಕೆರೆಗಳನ್ನು ನಿರ್ಮಾಣ ಮಾಡುವ ಮುನ್ನ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ, ನೀರಿನ ಹಂಚಿಕೆ, ಮಹಾಪೂರ ಬಂದಾಗ ಆ ನೀರನ್ನು ತಡೆಗಟ್ಟಿ, ಅಥವಾ ಬೇರೆಡೆಗೆ ತಿರುಗಿಸಿ ಅದನ್ನು ಕೆರೆಗಳ ಮೂಲಕ ವ್ಯವಸಾಯಕ್ಕೆ ಉಪಯೋಗಿಸುತ್ತಿದ್ದ ರೀತಿಯನ್ನು ಬಣ್ಣಿಸುತ್ತವೆ. ಕನ್ನಡದ ಮೊದಲ ಶಾಸನವೆಂದು ಪರಿಗಣಿತವಾಗಿರುವ ಹಲ್ಮಿಡಿ ಶಾಸನದಲ್ಲೇ ಗದ್ದೆ, ಒಡ್ಡು, ತೆರಿಗೆಯ ವಿಧಾನವು ಕಂಡುಬರುತ್ತದೆ. "the Construction of Dam across the Tunga bhadra, its Subsequent breach and restoration (Davangere 23, 1410 A.D. and 29, 1425 A.D) and the establishment of a bank by Achyutaraya (Davangere 24, HK 123) are fine compositions" ಎಂದು ರೈಸ್ ಸಾಹೇಬರೇ ಚಿತ್ರದುರ್ಗ ಜಿಲ್ಲೆಯ ಶಾಸನ ಸಂಪುಟದ ಮುನ್ನುಡಿಯಲ್ಲೇ ಬರೆದಿದ್ದಾರೆ. ವಾದಿರಾಜರು 'ತೀರ್ಥ ಪ್ರಬಂಧ'ವೆನ್ನುವ ಪುಸ್ತಕದಲ್ಲಿ ದೇಶದ ತೀರ್ಥಕ್ಷೇತ್ರಗಳ ವರ್ಣನೆ ಮಾಡುವಾಗ ಅಲ್ಲಿಯ ಜಲನಿಧಿಗಳನ್ನು ವಿಶೇಷವಾಗಿ ವರ್ಣಿಸಿದ್ದಾರೆ. ಕವಿ ಹರಿಹರನು ಪಂಪಾಕ್ಷೇತ್ರದ*೧೦ ರಗಳೆಯಲ್ಲಿ ಹಂಪೆಯ ಸುತ್ತಮುತ್ತಲಿನ ೨೭ ತೀರ್ಥಗಳ ಪಟ್ಟಿಯನ್ನೇ ಕೊಡುತ್ತಾ ಇಲ್ಲಿರುವ ತೀರ್ಥಗಳ ವರ್ಣನೆ ತನ್ನ ನಾಲಗೆಗೆ ನಿಲುಕದು ಎಂದು ಉದ್ಗರಿಸಿದ್ದಾನೆ.

ಈ ಸಂಪ್ರಬಂಧದ ಜಲತಂತ್ರಜ್ಞಾನದ ವಿಶ್ಲೇಷಣೆ ಮತ್ತು ಉಪಯೋಗವನ್ನು ಹೀಗೆ ಸಂಗ್ರಹಿಸಬಹುದು: ಕತಕ ಬೀಜ ತುಳಸಿದಳ ಈ ಬೀಜ, ಮೂಲಿಕೆಗಳು ಮಾನವರಿಗೆ ಔಷಧೀ ಸಸ್ಯಗಳಾಗಿ ಮಾತ್ರವಲ್ಲ ಮಾನವನು ಬಳಸುವ ನೀರಿನ ಶುಚಿ ರುಚಿಗೂ ಸಹಕಾರಿ ಎನ್ನುವುದನ್ನು ಮೊದಲ ಬಾರಿಗೆ ವಿಶ್ಲೇಷಿಸ ಲಾಗಿದೆ. ಸಾಹಿತ್ಯ ಸಾಮಗ್ರಿಯ ಮೂಲಕ ನೂರಾರು ವರ್ಷಗಳಿಂದ ಜನರು ನಮ್ಮ ಸಾಹಿತ್ಯ ಹಾಗೂ ಶಾಸನೋಕ್ತ ಕವಿಗಳು, ಅನುಭಾವಿಗಳು ನಿತ್ಯಬಳಕೆಯ ನೀರನ್ನು ಕಡಿಮೆ ಖರ್ಚಿನಲ್ಲಿ ಸುಲಭವಾಗಿ ಹೇಗೆ ಶುದ್ಧೀಕರಿಸಿ ಉಪಯೋಗಿಸಿ ಕೊಳ್ಳುತ್ತಿದ್ದರು? ಎನ್ನುವುದನ್ನು ಕಾವ್ಯದ ಧ್ವನಿ ತತ್ವದ ಮೂಲಕವಾಗಿಯೇ ತಿಳಿಸಿದ್ದಾರೆ. ಅಂದಿಗಿಂತ ಇಂದಿನ ಶುದ್ಧ ನೀರಿನ ಅಭಾವದ ಪರಿಸ್ಥಿಯಲ್ಲಿ

ಬಿಸ್ಲೆರಿಗಳನ್ನು ಕೊಳ್ಳಲಾಗದವರೂ ನಮ್ಮ ಪರಿಸರದಲ್ಲೇ ಸುಲಭವಾಗಿ ದೊರೆಯುವ ತುಳಸಿ, ಕತಕಬೀಜಗಳನ್ನು ಉಪಯೋಗಿಸಿಕೊಂಡು ತಮ್ಮ ದಾಹ, ಆರೋಗ್ಯ ಎರಡನ್ನೂ ಕಾಪಾಡಿಕೊಳ್ಳಲು ಸಹಾಯವಾಗುತ್ತದೆ. ಈ ಪ್ರಯೋಗದಿಂದ ಇದರಲ್ಲಿ ಯಾವ ಋಣಾತ್ಮಕ ಕಾಯಿಲೆಗಳೂ ಉಂಟಾಗುವುದಿಲ್ಲ. (Body reaction or side effects)

ಪ್ರಾಚೀನ ಸಾಹಿತ್ಯ ಕೇವಲ ಮನೋರಂಜನೆಗೆ ಮಾತ್ರ ಸೀಮಿತವಾಗಿಲ್ಲ. ಇಂದಿನ ಪ್ರಯೋಗಗಳಿಗೂ ನಿಲುಕುವ ಮಾಹಿತಿ ಇರುವುದರಿಂದ ನಿತ್ಯೋಪಯೋಗಿಯೂ ಆಗಿರುವುದರಿಂದ ಇಂದಿನ ಕಂಪ್ಯೂಟರ್ ಜನಾಂಗದ ಯುವಕ ಯುವತಿಯರಿಗೂ ಈ ನೆಲ-ಜಲದ ಬಗ್ಗೆ ಆಸಕ್ತಿ ಅಭಿಮಾನ ಮೂಡಿಸುವಂಥ ಧನಾತ್ಮಕ ಆಲೋಚನೆಗೆ ಇಂಬು ದೊರೆಯುತ್ತದೆ. ಇದರಿಂದ ಅವುಗಳನ್ನು ಹಾಳುಮಾಡುವ ಪ್ರವೃತ್ತಿ ಕಡಿಮೆಯಾಗಬಹುದು. ತಮ್ಮ ಆಸಕ್ತಿಯನ್ನು ಹೆಚ್ಚಿಸಿಕೊಂಡು ಹೊಸ ಹೊಸ ಚಿಂತನೆಗೆ ಅವಕಾಶವಾಗುವುದು.

ನಮ್ಮ ಪ್ರಾಚೀನ ಕಾವ್ಯಗಳಲ್ಲಿ ಕಂಡುಬರುವ ಅಷ್ಟಾದಶವರ್ಣನೆಗಳಲ್ಲಿ ಕವಿ ತನ್ನ ನೆಲ-ಜಲಗಳ ಬಗ್ಗೆ ನೇರವಾಗಿಯೋ ಅಥವಾ ಸಾಂಕೇತಿಕವಾಗಿಯೋ ತನ್ನ ಅನುಭವ ಹಾಗು ಅಂತರ್ ದರ್ಶನಗಳನ್ನು ದಾಖಲಿಸಿರುವುದರಿಂದ ನಮ್ಮಲ್ಲಿ ನಿರ್ದಿಷ್ಟ ದಾಖಲೆಗಳು ಕಾಲಕಾಲಕ್ಕೆ ಇಲ್ಲ ಎನ್ನುವ ಮಾತಿಗೆ ಹೆಚ್ಚಿನ ಮನ್ನಣೆ ಕೊಡದೆ, ಇಂದಿನ ವೈಜ್ಞಾನಿಕ ಮನೋಭಾವದಿಂದ ನಿರ್ದಿಷ್ಟ ವಸ್ತುವನ್ನು ವಿವಿಧ ರೀತಿಯಲ್ಲಿ ಬಳಸಿಕೊಳ್ಳುವತ್ತ ಆಲೋಚಿಸಿದರೆ ಇನ್ನೂ ಹೆಚ್ಚಿನ ಉಪಯೋಗ ಪಡೆಯಬಹುದು. ಆದ್ದರಿಂದ ಯಾವ ಕವಿಯೂ (ಎಂದರೆ ಇಂದೂ ಜನರ ನಾಲಿಗೆ ಮೇಲಿರುವ ಕವಿಗಳ ಹೆಸರುಗಳು) ಬಣಗು ಕವಿಯಾಗದೆ ಅವನ ಕಾವ್ಯದ ಸರಿಯಾದ ವಿಮರ್ಶೆಗೆ ಕಾರಣವಾಗುತ್ತದೆ.

ಇಲ್ಲಿ ಶಾಸನೋಕ್ತ ಕವಿ ಜನ್ನ ೧೨ನೇ ಶತಮಾನದಲ್ಲಿ ಇದ್ದವನು ಮತ್ತು ಪುರಂದರದಾಸರು (ಜನಮನದ ಕವಿ) ಸುಮಾರು ೫೦೦ ವರ್ಷಗಳ ಹಿಂದೆ ಇದ್ದವರು. ಎಂದರೆ ಚಿಲ್ಲದ ಬೀಜ (ಕತಕ ಬೀಜ) ಮತ್ತು ತುಳಸಿ ದಳಗಳ ಉಪಯೋಗ ಅಂದಿನಿಂದಲೂ ಬಳಕೆಯಲ್ಲಿದ್ದವೆನ್ನುವುದು ಉಕ್ತವಾಗುತ್ತದೆ. ಅದಕ್ಕೂ ಹಿಂದಿನಿಂದಲೇ ಬೇರೆ ಬೇರೆ ಕವಿಗಳು ಇದನ್ನು ಉಪಯೋಗಿಸಿರುವುದು ಕಂಡು ಬಂದಿದ್ದರೂ ಅದು ಅವರವರ ಜೀವಿತದ ಕಾಲಘಟ್ಟವೇ ಆಗಿರುವುದರಿಂದ ಅಷ್ಟು ದೀರ್ಘಕಾಲದ ಮಾಹಿತಿ ಖಚಿತವಾಗಿ ದೊರೆತಂತಾಗುತ್ತದೆ. ಕವಿ ಹೇಳುವ ಅಂದಿನ ಪರಿಸರಕ್ಕೂ, ಇಂದು ನಾವಿರುವ ಪರಿಸರಕ್ಕೂ ಏನು ವ್ಯತ್ಯಾಸವಿದೆ ಎಂದು ಅಭ್ಯಾಸಮಾಡಬಹುದು. ಆ ಕವಿ ಇಂದಿಗೆ ಎಷ್ಟುಪ್ರಸ್ತುತ? ಎನ್ನುವುದನ್ನು ಗಮನಿಸಬಹುದು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. : Ground water Hydrology by Heman Bower-Page No.2
*೨. ನೆಲದ ಮೇಲ್ಭಾಗದಿಂದ ೦.೮ ಕಿ.ಮೀ. ಆಳದವರೆಗಿನ ಒಂದನೇ ಸ್ಥಾನ
*೩. ೦. ಕಿ.ಮೀ ಆಳದಿಂದ ಎಂದರೆ ಒಂದನೇ ಸ್ತರದಿಂದ ಮತ್ತೆ ೦.೮ ಕಿ.ಮಿ ಆಳದ ವರೆಗಿನ ಎರಡನೇ ಸ್ತರ
*೪. ಎರಡನೇ ಸ್ಥರದದಿಂದ ಪೂರ್ತಿಕಲ್ಲಿನ ಸ್ತರ ಅಥವಾ ಲಾವಾರಸದ ಗಟ್ಟಿಭಾಗ ದೊರೆಯುವ ತನಕ ಇರುವ ಸ್ತರ. ಭೂಪದರಗಳಲ್ಲಿ ದೊರೆಯುವ ನೀರಿನ ಬೇರೆ ಬೇರೆ ನೆಲೆಗಳನ್ನು ವೈಜ್ಞಾನಿಕವಾಗಿ ಗುರ್ತಿಸುವ ಒಂದು ರೀತಿ ಇದು.
*೫. ಸಂ. ಆಯುರ್ವೇದ ವಿದ್ವಾನ್ ಪಂ॥ ಎಲ್. ಅಶ್ವತ್ಥನಾರಾಯಣ, ಆಯುರ್ವೇದ ಮಹಾ ವಿಶ್ವವಿದ್ಯಾಲಯ ನಿರ್ವಾಹಕರ ಸಮಿತಿ, ಮೈಸೂರು, ಪು. ೫೧೯
*೬. ಆಧಾರ ಸೈಟೋ ಕೆಮಿಸ್ಟ್ರ ೧೯೭೫, ೧೪, ಪು. ೫೮೭
*೭. ಪಿ.ಹೆಚ್ (ಇದು ನೀರು ಆಮ್ಲವೆ? ಅಥವಾ ಕ್ಷಾರವೆ? ಎಂದು ಪರೀಕ್ಷಿಸುವ ವಿಧಾನ. ಡಿಸ್ಟಿಲ್ಡ್‌ವಾಟರ್‌ನ ಪಿ.ಹೆಚ್.೭.೦; ೬.೫ನಿಂದ ೮.೫ವರೆಗೆ ಇದ್ದರೆ ಅದು ಕುಡಿಯಲು ಯೋಗ್ಯ - ಇದಕ್ಕಿಂತ ಹೆಚ್ಚಿದ್ದರೆ ಅದು ಕ್ಷಾರೀಯ; ೬.೫ಕ್ಕಿಂತ ಕಡಿಮೆ ಇದ್ದರೆ ಆ ನೀರು ಆಮ್ಲೀಯ ಲಕ್ಷಣ ಹೊಂದಿರುತ್ತದೆ.
*೮. ಕಂಡಕ್ಟಿವಿಟಿ ೧ ಸೆಂಟೀ ಮೀಟರ್ ಕ್ಯೂಬ್ ದ್ರವದಲ್ಲಿ (ನೀರಿನಲ್ಲಿ) ೧ ಓಂ ವಿದ್ಯುತ್ ಹಾಯಿಸಿದಾಗ ಅದರಿಂದ ತಡೆಹಿಡಿಯಲ್ಪಟ್ಟ ದ್ರವದ (ನೀರಿನ) ನಿರೋಧಕ ಶಕ್ತಿಯನ್ನು ಸ್ಥೂಲವಾಗಿ ಕಂಡಕ್ಟಿವಿಟಿ ಎಂದು ಕರೆಯಲಾಗುತ್ತದೆ.
೭೯.೦ ೪೦೮ ೪೦೮
*೯.

| ಲವಣಾಂಶಗಳು | ಉ.ದಾ೧ | ಉ.ದಾ೨ | ಉ.ದಾ೩ |
|---|---|---|---|
| ಕ್ಯಾಲ್ಷಿಯಂ (ಸುಣ್ಣದ ಅಂಶ) | ೦.೩೯ | ೧.೫೬ | ೧.೧೭ |
| ಮೆಗ್ನೀಷಿಯಂ | ೦.೦೬ | ೧.೭೩ | ೨.೧೨ |
| ಗಡಸುತನ (Hardness) | ೫೧.೦೭ | ೧೬೪.೯೮ | ೧೬೪.೯೮ |

*೧೦. ಆಕರ: ಹರಿಹರನ ರಗಳೆಗಳು-ಡಾ॥ಫ.ಗು.ಹಳಕಟ್ಟಿ ಪುಟ ೫೧೫-೧೬

(ಕೃತಜ್ಞತೆಗಳು : ಡಾ. ಕೆ. ಆರ್. ಗಣೇಶ್, ಕೆ. ಶೇಷಾದ್ರಿ ಅಸೋಸಿಯೇಟ್ ಇಂಜಿನೀಯರ್ಸ್, ಶ್ರೀ ಎನ್. ಎಸ್. ಶ್ರೀಧರ್ ಅವರುಗಳಿಗೆ.)

ಡಾ| ಎಚ್. ಚಂದ್ರಶೇಖರ*

# ಕರ್ನಾಟಕದ ಕೆಲ ಪುರಾತನ ಬಾವಿಗಳ ಒಂದು ಅಧ್ಯಯನ

ಭೂಮಿಯ ಮೇಲೆ ಮಾನವ ಉದಯಿಸಿದಾಗ ಆರಂಭದಲ್ಲಿ ತನ್ನ ವಸತಿಗಳನ್ನು ಹಳ್ಳ ಮತ್ತು ನದಿಗಳ ಸಮೀಪದಲ್ಲಿ ನಿರ್ಮಿಸಿದನು. ಅವನು ತನ್ನ ಬದುಕಿನ ಅಗತ್ಯವಾಗಿ ಮೇಲು ಜಲವನ್ನು (Surface Water) ನದಿ, ಹಳ್ಳ, ಕೊಳ್ಳಗಳ ರೂಪದಲ್ಲಿ ಸುಲಭವಾಗಿ ಪಡೆಯುತ್ತಿದ್ದ. ಹಲವಾರು ಕಾರಣಗಳಿಂದ ಕಾಲಾಂತರದಲ್ಲಿ ಮಾನವನು ಮೇಲುಜಲ ಮೂಲದಿಂದ ದೂರ ಸರಿದಂತೆಲ್ಲಾ ಬಹು ಪುರಾತನ ಕಾಲದಿಂದಲೂ ಮನುಷ್ಯನು ತನ್ನ ನೀರಿನ ಪೂರೈಕೆಯನ್ನು ಬಾವಿಗಳ ಮೂಲಕ ಪಡೆಯುತ್ತಾ ಬಂದಿದ್ದಾನೆ. ಮಧ್ಯಪ್ರಾಚ್ಯದಲ್ಲಿ ಕ್ರಿ. ಪೂ. ೨ನೇ ಶತಮಾನದ ಕನಾತಗಳಿವೆ. (Qanats)*[1] ನಮ್ಮ ದೇಶದಲ್ಲಿಯಾಗಲಿ ನಮ್ಮ ರಾಜ್ಯದಲ್ಲಿಯಾಗಲೀ ಇಷ್ಟು ಪುರಾತನ ಬಾವಿಗಳ ಆಸ್ತಿತ್ವ ಇನ್ನೂ ಗೊತ್ತಾಗಿಲ್ಲ. ಆದರೆ ರಾಯಚೂರು ಜಿಲ್ಲೆಯ ಹಟ್ಟಿಗಣಿಯು ಕ್ರಿ. ಪೂ. ೨ನೆಯ ಶತಮಾನದಲ್ಲಿ ಸುಮಾರು ೬೦೦ ಅಡಿಗಳಷ್ಟು ಆಳಕ್ಕೆ ಹೋಗಿತ್ತು ಎಂಬ ಅಂಶ ಈಗ ಸಾಬೀತು ಆಗಿದೆ. ಆದ್ದರಿಂದ ನಮ್ಮಲ್ಲಿಯೂ ಅಂತಹ ಹಳೆಯ ಕಾಲದ ಬಾವಿಗಳು ಇದ್ದಿರಬಹುದೆಂದನಿಸುತ್ತದೆ. ಆದರೆ ಅಷ್ಟು ಹಳೆಯ ಕಾಲದ ಬಾವಿಗಳಿನ್ನೂ ಪತ್ತೆಯಾಗಿಲ್ಲ.

ನಮ್ಮ ರಾಜ್ಯದಲ್ಲಿ ಬಾದಾಮಿ ಚಾಳುಕ್ಯರ, ರಾಷ್ಟ್ರಕೂಟರ, ಕಲ್ಯಾಣ ಚಾಳುಕ್ಯರ, ಬಿಜಾಪುರ ಆದಿಲ್‌ಶಾಹಿಗಳ ಮತ್ತು ವಿಜಯನಗರ ಅರಸರ ಕಾಲದ ಬಾವಿಗಳು ಇವೆ. ಬಿಜಾಪುರದ ಬಾವಿಗಳನ್ನು ಮತ್ತು ಕನಕಗಿರಿಯ ಬಾವಿಗಳನ್ನು ಕಟ್ಟಿಸಿದವರ ಹೆಸರು ಇತ್ಯಾದಿ ವಿವರಗಳು ಸಿಗುತ್ತವೆ. ಉಳಿದ ಅರಸು ಮನೆತನ ಕಾಲದ ಬಾವಿಗಳು ಗುಡಿಗಳಿಗೆ ಸಂಬಂಧಿಸಿರುವದರಿಂದಾಗಿ ಆಯಾ ಬಾವಿಗಳ ಕಾಲವನ್ನು ಆಯಾ ಕಾಲದ ಗುಡಿಗಳಿಗೆ ಹೊಂದಿಸ ಬೇಕಾಗುತ್ತದೆ. ಈ ಇತಿ ಮಿತಿಯೊಳಗೆ ಕರ್ನಾಟಕದ ಕೆಲ ಬಾವಿಗಳ ಭೂವೈಜ್ಞಾನಿಕ ವಿಶಿಷ್ಟತೆ, ರಚನಾವಿನ್ಯಾಸವನ್ನು ವಾಸ್ತುಶೈಲಿಯನ್ನು ಮುಂದೆ ಚರ್ಚಿಸಲಾಗಿದೆ.

***ಬಾದಾಮಿ ಚಾಳುಕ್ಯರ ಕಾಲದ ಬಾವಿ*** : ಬಾದಾಮಿ, ಪಟ್ಟದ ಕಲ್ಲು ಮತ್ತು ಐಹೊಳೆಯಲ್ಲಿರುವ ಗುಹೆಗಳನ್ನು, ಗುಡಿಗಳನ್ನು ಮತ್ತು ಅವುಗಳ ಸುತ್ತಲಿರುವ ಪರಿಸರವನ್ನು ಗಮನಿಸಿದಾಗ ಆ ಕಾಲದ ಸ್ಥಪತಿಗಳು ಮೇಲು ಜಲವನ್ನೇ ಹೆಚ್ಚಾಗಿ ನೆಮ್ಮಿಕೊಂಡಿದ್ದರೆಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಅಪವಾದ ವೆಂಬಂತೆ ಐಹೊಳೆಯಲ್ಲಿ ದುರ್ಗಾದೇವಾಲಯದ ಹತ್ತಿರ ಒಂದು ಚಿಕ್ಕ ಆಯತಾಕಾರದ ಹೊಕ್ಕು ತುಂಬುವ ಬಾವಿ ಇದೆ. ಇದರ ಉದ್ದ ಸುಮಾರು ೩೦ ಅಡಿ ಅಗಲ ೧೦ ಅಡಿ ಇದೆ. ವಾಸ್ತುಶೈಲಿಯ ದೃಷ್ಟಿಯಿಂದ ಅಂಥ ವಿಶೇಷತೆಗಳಿಲ್ಲ. ಈ ಬಾವಿಯನ್ನು ಮರಳುಗಲ್ಲಿನಲ್ಲಿ (Sand Stone) ತೋಡಲಾಗಿದೆ. ಕಟ್ಟಡಕ್ಕಾಗಿ ಮರಳುಗಲ್ಲಿನ ಸೈಜುಕಲ್ಲುಗಳನ್ನು ಉಪಯೋಗಿಸ ಲಾಗಿದೆ. ಈ ಬಾವಿ ಮೇಲೆ ಕ್ರಿ. ಶ. ೮ನೇ ಶತಮಾನದ ಮತ್ತು ಕ್ರಿ. ಶ. ೧೦೭೫ ನೇ ವರ್ಷದ ಶಿಲಾಲೇಖಗಳಿರುವದರಿಂದ ಈ ಬಾವಿಯನ್ನು ಕ್ರಿ. ಶ. ೮ನೇ ಶತಮಾನದಲ್ಲಿ ತೋಡಲಾಗಿತ್ತು ಎಂದು ನಿಶ್ಚಿತವಾಗಿ ಹೇಳಬಹುದು.

***ಕಲ್ಯಾಣ ಚಾಳುಕ್ಯರ ಕಾಲದ ಬಾವಿಗಳು*** : ಕರ್ನಾಟಕವನ್ನು ಕ್ರಿ. ಶ. ೯೭೩ರಿಂದ ಹನ್ನೆರಡನೇ ಶತಮಾನದ ಅಂತ್ಯದವರೆಗೆ ಆಳಿದ ಕಲ್ಯಾಣ ಚಾಳುಕ್ಯರು ಕರ್ನಾಟಕದ ವಾಸ್ತು ಶಿಲ್ಪಕ್ಕೆ ತಮ್ಮದೇ ಆದ ವಿಶಿಷ್ಟವಾದ ಲಕ್ಷಣಗಳನ್ನು ರೂಪಿಸಿದರು. ಬಹುಶಃ ಈ ಕಾಲದ ಯಾವುದೇ ದೇವಾಲಯದ ಮುಂದೆ ನದಿ, ಕೆರೆ (ಹೊಂಡ) ಅಥವಾ ಬಾವಿ ಇದ್ದೇ ಇರುತ್ತದೆ. ಸಹಜವಾಗಿಯೇ ದೇವಾಲಯ ನಿರ್ಮಾಣಕ್ಕೆ ಮತ್ತು ಮನುಷ್ಯನ ಇತರ ಅವಶ್ಯಕತೆಗಳಿಗಾಗಿ ಇಂಥ ಬಾವಿಗಳನ್ನು ನಿರ್ಮಿಸಿದರು ಎಂದು ಊಹಿಸಬಹುದು. ಆದರೆ ಕೆಲ ಬಾವಿಗಳನ್ನು ನೀರಾವರಿಗಾಗಿ ನಿರ್ಮಿಸಿದರೆಂಬುದು ಕ್ಷೇತ್ರ ಕಾರ್ಯದಿಂದ ವ್ಯಕ್ತವಾಗುತ್ತದೆ.

***ಬಸವ ಬಾಗೇವಾಡಿಯ ಬಾವಿ*** : ಇಂದಿನ ಬಸವನ ಬಾಗೇವಾಡಿ ಹಿಂದೆ ಇಂಗಳೇಶ್ವರ ಬಾಗೇವಾಡಿ ಎಂಬ ಹೆಸರಿನ ಪ್ರಸಿದ್ಧ ಅಗ್ರಹಾರವಾಗಿತ್ತು. ಈಗ ಬಸವಣ್ಣನ ಗುಡಿ ಎಂದು ಕರೆಯಲ್ಪಡುವ ದೇವಾಲಯ ಮೂಲತಃ ಒಂದು ಶಿವಾಲಯ. ಇದು ಶಾಸನೋಕ್ತ ಬೊಂತೇಶ್ವರ ಅಥವಾ ಸಿದ್ಧೇಶ್ವರ ದೇವಾಲಯ ವಿರಬಹುದೆಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ*[2]. ಈ ಗುಡಿಯ ನಂದಿ ವಿಗ್ರಹದ ಹಿಂಭಾಗದಲ್ಲಿ ಒಂದು ದೊಡ್ಡ ಆಳತೆಯ ತುಂಬುವ ಬಾವಿ ಇದೆ. ಇದನ್ನು ಬೆಸಾಲ್ಟ್ (Basalt) ಶಿಲೆಯಲ್ಲಿ ತೋಡಲಾಗಿದೆ. ಬಾವಿಯ ರಚನೆಯನ್ನು ನೋಡಿದಾಗ ಸುತ್ತಲೂ ಕಟ್ಟಲಾಗಿರುವ ಗೋಡೆಗಳು ಮತ್ತು ಪಾವಟಿಗೆಗಳು ಕಾಲ ಕಾಲದಲ್ಲಿ ಮಾರ್ಪಾಟಾಗಿವೆ ಎಂದು ಗೊತ್ತಾಗುತ್ತದೆ. ಇದನ್ನು ಈಗಲೂ ನೀರಾವರಿಗಾಗಿ ಉಪಯೋಗಿಸಲಾಗುತ್ತದೆ. ಬಸವಣ್ಣನು ಬಾಲಕನಾಗಿದ್ದಾಗ, ಬಸವಣ್ಣನ ಸ್ನೇಹಿತನೊಬ್ಬ ಬಾವಿಯಲ್ಲಿ ಜಾರಿ

* 'ಸಂಗಮ', ಎಂಐಜಿ-೭೭, ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯.

ಬಿದ್ದು ಸತ್ತ ಎಂಬ ಕಥಾ ಪ್ರಸಂಗ ಸಿಂಗಾರಾಜ ಕವಿಯ **ಬಸವರಾಜ ಚಾರಿತ್ರ** ಎಂಬ ಕಾವ್ಯದಲ್ಲಿ ಹೇಳಲಾಗಿದೆ[೩]. ಈ ಕಥಾ ಪ್ರಸಂಗದ ಸತ್ಯಾ ಸತ್ಯತೆಯ ಬಗ್ಗೆ ಇಲ್ಲಿ ಚರ್ಚಿಸುವದು ಅಪ್ರಸ್ತುತ. ಆದರೆ ಈ ಕಾವ್ಯದಲ್ಲಿ ಉಲ್ಲೇಖಿಸಲಾಗದ **ದೇವತಾ ರೂಪ** ಇದೇ ಎಂದು ತರ್ಕಿಸಬಹುದಾಗಿದೆ.

***ಮುದನೂರಿನ ಬಾವಿಗಳು*** : ಮುದನೂರು ಇಂದು ಕಲ್ಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ಒಂದು ಹಳ್ಳಿ - ಕ್ರಿ.ಶ. ಹನ್ನೊಂದು ಹನ್ನೆರಡನೇ ಶತಮಾನದಲ್ಲಿ ಇದೊಂದು ಸುಪ್ರಸಿದ್ಧ ಅಗ್ರಹಾರವಾಗಿತ್ತು. ಹನುಮಾಕ್ಷಿಗೋಗಿಯವರು ಇಲ್ಲಿಯ ಒಟ್ಟು ೨೦ ಶಾಸನಗಳನ್ನು ಸಂಕಲಿಸಿದ್ದಾರೆ[೪]. ಈ ಶಾಸನಗಳಲ್ಲಿ ರಾಮೇಶ್ವರ (ರಾಮನಾಥ) ಮತ್ತು ಲಕ್ಷ್ಮಣೇಶ್ವರ ದೇವಾಲಯಗಳಿಗೆ ದತ್ತಿಗಳನ್ನು ನೀಡಲಾದ ಸಂಗತಿಗಳನ್ನು ಉಲ್ಲೇಖಿಸಲಾಗಿದೆ. ಈ ಎಲ್ಲಾ ಶಾಸನಗಳು ಕ್ರಿ. ಶ. ೧೦೭೯ ರಿಂದ ಕ್ರಿ. ಶ. ೧೨೧೮ ರವರೆಗಿನ ಅವಧಿಗೆ ಸೇರಿವೆ. ಕ್ರಿ. ಶ. ೧೦೭೯ರ ಶಾಸನದಲ್ಲಿ ಮಾತ್ರ (ಶಾಸನ ಸಂಖ್ಯೆ) ೫೨, ಪುಟ ೧೧೩) ಜನ್ನದ ಬಾವಿಯಿಂದ ತೆಂಗಿನ ತೋಟಕ್ಕೆ ನೀರನ್ನು ಒದಗಿಸಲಾಗುತ್ತಿತ್ತು ಎಂದು ಹೇಳಲಾಗಿದೆ. ಆದರೆ ಜನ್ನದ ಬಾವಿ ಎಂಬ ಹೆಸರಿನ ಬಾವಿ ಅಲ್ಲಿ ಸದ್ಯಕ್ಕೆ ಕಂಡು ಬಂದಿಲ್ಲ. ಬಹುಶಃ ಈ ಹೆಸರು ಕಾಲಾಂತರದಲ್ಲಿ ಜನರ ಬಾಯಿಯಿಂದ ಮಾಯವಾಗಿರಬೇಕು. ಇಲ್ಲಿಯ ಜನಪದರು ಹಿಂದೆ ಇಲ್ಲಿ ಸಪ್ತತೀರ್ಥಗಳಿದ್ದವು (ಬಾವಿಗಳು) ಎಂದು ಹೇಳುತ್ತಾರೆ. ಆದರೆ ಈಗ ರಾಮತೀರ್ಥ (ನಿಜವಾದ ಹೆಸರು ರಾಮೇಶ್ವರ ತೀರ್ಥ) ಮತ್ತು ಲಕ್ಷ್ಮಣತೀರ್ಥ (ಲಕ್ಷ್ಮಣೇಶ್ವರ ತೀರ್ಥ ಎಂಬುದು ಸರಿಯಾದ ಹೆಸರು) ಎಂಬೆರಡು ೧೧ನೇ ಶತಮಾನದ ಒತ್ತಡದ ನೀರಿನ ಬಾವಿಗಳಿವೆ (Artesian wells).

ಮದನೂರಿನಲ್ಲಿ ಸಿಗುವ ಕಲ್ಲು ಭೀಮಾಶ್ರೇಣಿಗೆ (Bhima Series) ಸೇರಿದ ಸುಣ್ಣದ ಕಲ್ಲು. ಸಾಮಾನ್ಯವಾಗಿ ಸುಣ್ಣದ ಕಲ್ಲಿನಲ್ಲಿ ನೀರಿನ ಸಂಗ್ರಹ ಕಡಿಮೆಯಾಗುತ್ತದೆ. ಆದರೆ ಇಲ್ಲಿ ಸಿಗುವ ಸುಣ್ಣದ ಕಲ್ಲಿನ ಸ್ತರಗಳು ಇಳುಕಲಾಗಿವೆ (Dipping) ಚಿತ್ರ- : ಮತ್ತು ಸಂದುಗಳಿಂದ (Joint) ಕೂಡಿವೆ. ಇದರಿಂದಾಗಿ ಈ ಸುಣ್ಣದ



ಕಲ್ಲಿನಲ್ಲಿ ಕೊರಕಲು (Cracks) ಮತ್ತು ಗುಹೆಗಳು (Cavities) ನಿರ್ಮಾಣವಾಗಿವೆ. ಅದೂ ಅಲ್ಲದೆ ಅಲ್ಲಲ್ಲಿ ಸ್ತರಭಂಗಗಳಿವೆ. ಆದ್ದರಿಂದ ಈ ಪ್ರದೇಶದ ಸುಣ್ಣದ ಕಲ್ಲಿನ ಸ್ತರಗಳು (Lime stone layers) ಉತ್ತಮ ಜಲಭರಗಳಾಗಿವೆ (Aquifens). ಈ ಭೂವೈಜ್ಞಾನಿಕ ಕಾರಣಗಳಿಂದಾಗಿ ರಾಮೇಶ್ವರ ತೀರ್ಥ ಮತ್ತು ಲಕ್ಷ್ಮಣೇಶ್ವರ ತೀರ್ಥ ಸದಾ ನೀರನ್ನು ನೀಡುತ್ತವೆ. ನೀರು ತನ್ನಷ್ಟಕ್ಕೆ ತಾನೇ ಹೊರಕ್ಕೆ ಹರಿದು ಬರುವಂತೆ ಬಾವಿಯ ಕಟ್ಟಡಗಳನ್ನು ಕಟ್ಟಲಾಗಿದೆ. ಹಾಗೆ ಹೊರಬಂದ ನೀರನ್ನು ಕಾಲುವೆಗಳ ಮೂಲಕ ಗದ್ದೆಗಳಿಗೆ ಹಾಯಿಸುತ್ತಾರೆ. ಈ ಎರಡೇ ಬಾವಿಗಳಿಂದ ಸುಮಾರು ೨೦೦ ಹೆಕ್ಟರಿನಷ್ಟು ಭೂಮಿ ನೀರಾವರಿ ಸೌಕರ್ಯವನ್ನು ಪಡೆದಿದೆ. ಈ ಬಾವಿಗಳೇ ವಚನಕಾರ ಜೇಡರ ದಾಸಿಮಯ್ಯನ ತವನಿಧಿಗಳು[೫]. ಈ ಬಾವಿಗಳನ್ನು ಕರ್ನಾಟಕದ ಭೂವೈಜ್ಞಾನಿಕ ವಿಸ್ಮಯಗಳ ಗುಂಪಿಗೆ ಸೇರಿಸಲಾಗಿದೆ.

ಈ ಎರಡು ಬಾವಿಗಳಲ್ಲಿ ಲಕ್ಷ್ಮಣೇಶ್ವರ ತೀರ್ಥ (ಬಾವಿಯು) ತುಂಬಾ ದೊಡ್ಡದು. ಇದರ ಅಳತೆ ಸುಮಾರು ೬೦'×೬೦' ಇದೆ. ರಾಮೇಶ್ವರ ತೀರ್ಥ ಬಾವಿ ಸುಮಾರು ೪೦'×೪೦' ಅಳತೆಯದ್ದಾಗಿದೆ. ಈ ಬಾವಿಯಿಂದ ನೀರು ಒಂದು ಕೊಳವೆಯ ಮೂಲಕ (Conduit) ಮುಂದಿನ ಹೊಂಡಕ್ಕೆ ಹರಿಯುತ್ತದೆ. ಈ ಹೊಂಡದಲ್ಲಿ ಜನ ತಮ್ಮ ಬಟ್ಟೆಗಳನ್ನು









(ಮುಸುಕಿನ ಬಾವಿಯ ಬಳಿ ದ್ವಾದಶಲಿಂಗಗಳ ಗುಡಿಮಂಟಪ)

ತೊಳೆಯುತ್ತಾರೆ. ಇದರಿಂದಾಗಿ ರಾಮೇಶ್ವರ ತೀರ್ಥದ (ಬಾವಿ) ನೀರು ಮಲಿನಗೊಳ್ಳುವದಿಲ್ಲ. ಇಂಥ ವ್ಯವಸ್ಥೆ ಕರ್ನಾಟಕದ ಬೇರೆ ಯಾವ ಪುರಾತನ ಬಾವಿಗಳಲ್ಲಿಲ್ಲ. ಆದರೆ ಆಂಧ್ರದ ಶ್ರೀಶೈಲದ ಬಳಿ ಇರುವ ಮಹಾನಂದಿಯಲ್ಲಿರುವ ಶಿವ ದೇವಾಲಯದ ಮುಂದೆ ಇಂಥ ಪುರಾತನ ಬಾವಿ ಇದೆ. ರಾಮೇಶ್ವರ ತೀರ್ಥದ ಗೋಡೆಗಳ ಸುಣ್ಣದ ಕಲ್ಲಿನ ಸೈಜುಕಲ್ಲುಗಳ ಮೇಲೆ ರಾಮಾಯಣ ಮತ್ತು ಮಹಾ ಭಾರತದ ಪ್ರಸಂಗಗಳನ್ನು ಚಿತ್ರಿಸುವ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಇದು ಈ ಬಾವಿಯ ಇನ್ನೊಂದು ವೈಶಿಷ್ಟ್ಯ. ಕಲೆಯ ದೃಷ್ಟಿಯಿಂದ ಶ್ರೇಷ್ಠ ಕಲಾಕೃತಿಗಳು ಅಲ್ಲ. ಆದರೆ ಸಾಮಾನ್ಯ ಜನರಿಗೆ *ಪುರಾಣಗಳನ್ನು ಚಿತ್ರಗಳ ಮೂಲಕ (Visuals) ಹೇಳಿಕೊಡುವ ಒಂದು ವಿಧಾನ ಇದು. ಅದರಲ್ಲಿಯೂ, ವಿಶೇಷವಾಗಿ ಬಾವಿಗೆ ಗ್ರಾಮದ ಸಮಸ್ತರು ಭೇಟಿ ನೀಡುತ್ತಾರೆ. ಇದರಿಂದಾಗಿ ಪೌರಾಣಿಕ ಕತೆಗಳು ವ್ಯಾಪಕವಾಗಿ ಜನರಿಗೆ ಗೊತ್ತಾಗಲಿ ಎಂಬುದು ಈ ಬಾವಿಯನ್ನು ಕಟ್ಟಿಸಿದವರ ಉದ್ದೇಶಗಳಲ್ಲಿ ಒಂದಾಗಿತ್ತು ಎಂದು ಊಹಿಸಬಹುದು.*

***ಲಕ್ಕುಂಡಿಯ ಬಾವಿಗಳು** :* ಲಕ್ಕುಂಡಿ ಇಂದಿನ ಗದಗ ಜಿಲ್ಲೆಗೆ ಸೇರಿದ ಒಂದು ಸಣ್ಣ ಹಳ್ಳಿ. ಕೊಪ್ಪಳ ಗದಗ ರಸ್ತೆಯ ಪಕ್ಕದಲ್ಲಿ ಗದಗಿನಿಂದ ಸುಮಾರು ೧೦ ಕಿ.ಮೀ. ದೂರದಲ್ಲಿದೆ. ಇದು ಐತಿಹಾಸಿಕವಾಗಿ ಧಾರ್ಮಿಕವಾಗಿ ೯-೧೦ನೇ ಶತಮಾನ ದಿಂದಲು ಪ್ರಸಿದ್ಧ. ಇನ್ನೂ ಲಕ್ಕುಂಡಿಯಲ್ಲಿರುವ ಅಪರೂಪದ ಬಾವಿಗಳನ್ನು ಮುಂದೆ ವಿವರಿಸಲಾಗಿದೆ.

ಲಕ್ಕುಂಡಿಯಲ್ಲಿ ಇತ್ತೀಚೆಗೆ ಕೊಳವೆ ಬಾವಿಗಳ ಸಂಖ್ಯೆ ಬೆಳೆದಿದೆಯಾದರೂ ಹೊಕ್ಕು ತುಂಬುವ ಬಾವಿಗಳು ಇನ್ನು ಬಳಕೆಯಲ್ಲಿವೆ. ಹಲವಾರು ತೋಡು ಬಾವಿಗಳನ್ನು (Open wells) ಈಗಲೂ ಕೆಲವರು ತೋಡಿಸುತ್ತಲಿದ್ದಾರೆ. ಲಕ್ಕುಂಡಿಯಲ್ಲಿ ಸಿಗುವ



ಸೀಮೆಕಲ್ಲು (Genesis) ತುಂಬಾ ನಗ್ನೀಕರಣಗೊಂಡಿದೆ (Highly weathered). ಭೇದಗಳು (Fractrure) ಮತ್ತು ಸಂದುಗಳು (Joints) ತೀರ ಹೆಚ್ಚಾಗಿರುವದರಿಂದ ಮಳೆಯಿಂದ ಬಂದ ನೀರು ಸುಲಭವಾಗಿ ಮಣ್ಣಿನ ಮೂಲಕ ಈ ನಗ್ನೀಕರಣಗೊಂಡ ಸೀಣೆ ಕಲ್ಲಿನಲ್ಲಿ ಸಂಗ್ರಹಗೊಳ್ಳುತ್ತದೆ.ಇದು ಅಂತರ್ಜಲ ಸಂಗ್ರಹಕ್ಕೆ (Storage) ಮತ್ತು ಇಳುವರಿಗೆ (Yield) ಅತ್ಯಂತ ಉತ್ತಮ ಪರಿಸರ. ಆದ್ದರಿಂದ ಪುರಾತನ ಕಾಲದಿಂದಲೂ ಇಂದಿನವರೆಗೆ ಹಲವಾರು ಬಾವಿಗಳು ಇಲ್ಲಿಯ ಜನರ ನೀರಾವರಿ ಮತ್ತು ಗೃಹದ ಬಳಕೆಯ ಅವಶ್ಯಕತೆಗಳನ್ನು ಪೂರೈಸುತ್ತಾ ಬಂದಿವೆ. ಈಗ ಲಕ್ಕುಂಡಿಯ ಪರಿಸರದಲ್ಲಿ ಸುಮಾರು ೪೦೦ ತೋಟಗಳು ಬಾವಿಗಳಿಂದ (ಕೊಳವೆ ಬಾವಿಗಳು ಸೇರಿ) ನೀರನ್ನುಣ್ಣುತ್ತವೆ ಎಂಬುದೇ ಇಲ್ಲಿಯ ಅಂತರ್ಜಲ ಸಮೃದ್ಧತೆಗೆ ಸಾಕ್ಷಿ.

ಲಕ್ಕುಂಡಿಯಲ್ಲಿ ಪುರಾತತ್ವ ಇಲಾಖೆಯು ನೆಟ್ಟಿರುವ ಒಂದು ಫಲಕದ ಪ್ರಕಾರ ಲಕ್ಕುಂಡಿಯಲ್ಲಿ ೧೦೧ ದೇವಾಲಯಗಳು, ೧೦೧ ಶಿವ ಲಿಂಗಗಳು ಮತ್ತು ೧೦೧ ಬಾವಿಗಳು ವೀರ ಬಲ್ಲಾಳನ ಕಾಲದಲ್ಲಿದ್ದವು ಎಂದು ತಿಳಿದು ಬರುತ್ತದೆ. ಆದರೆ ಕೇವಲ ಎಂಟು ಬಾವಿಗಳನ್ನು ಪುರಾತನ ಬಾವಿಗಳೆಂದು ಗುರ್ತಿಸಲು ಸಾಧ್ಯವಾಯಿತು. ಅವುಗಳ ರಚನಾತ್ಮಕ ಶೈಲಿ ಮತ್ತು ಅಂದ ಚೆಂದದ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ಒಂದರಿಂದ ಎಂಟರವರೆಗೆ ಹೆಸರಿಸಲಾಗಿದೆ. ಈ ಹೆಸರುಗಳು ಇಂದಿನ ಜನಪದರು ಕರೆಯುವ ಹೆಸರುಗಳಾಗಿವೆ. ಮೂಲದಲ್ಲಿ ಯಾವ ಹೆಸರುಗಳನ್ನು ಇಟ್ಟಿದ್ದರು ಎಂಬುದಕ್ಕೆ ದಾಖಲೆ ಸಿಕ್ಕಿಲ್ಲ. ಮುಸುಕಿನ ಬಾವಿ, ಚಪ್ಪರದ ಬಾವಿ, ಕನ್ನೇರ ಬಾವಿ, ಹನುಮನ ಬಾವಿ, ಸಿದ್ದರ ಬಾವಿ, ಮಜ್ಜನ ಬಾವಿ, ಪತ್ರೇರ ಬಾವಿ ಮತ್ತು ಮಳೆ ಬಾವಿ ಇವೇ ಆ ಎಂಟು ಬಾವಿಗಳು.

ಮುಸುಕಿನ ಬಾವಿಯ ನಮ್ಮ ರಾಜ್ಯದಲ್ಲಿಯೇ ಅತ್ಯಂತ

ಚಿತ್ರ ೧೧: ಆದಿಲ್ ಶಾಹಿ ಕಾಲದ ಬಾವಿಗಳು



ತಾಜ್‌ಬಾವಡಿಯ ವಿನ್ಯಾಸ



ಚಾಂದ ಬಾವಡಿಯ ವಿನ್ಯಾಸ

(ಆಧಾರ : ಕಸಿನ್ಸ್ ೧೯೬೬)



ಸುಂದರ ಕಟ್ಟಡವುಳ್ಳ ಬಾವಿ. ಇದು ಮಾಣಿಕೇಶ್ವರ ದೇವಾಲಯದ ಮುಂಭಾಗದಲ್ಲಿದೆ. ಮಾಣಿಕೇಶ್ವರ ದೇವಾಲಯವು ಲಕ್ಕುಂಡಿಯ ಉಳಿದ ದೇವಾಲಯಗಳಿಗೆ ಹೋಲಿಸಿದರೆ ಚಿಕ್ಕದು. ಆದರೆ ಕಂಬಗಳು ಜಾಲಂಧರಗಳು ಕಲಾತ್ಮಕವಾಗಿವೆ. ಇದೊಂದು ಪೂರ್ವಾಭಿಮುಖವಾಗಿರುವ ತ್ರಿಕೂಟಾಚಲ. ರಂಗಮಂಟಪವು ಮುಸುಕಿನ ಬಾವಿಯ ಮುಖ್ಯ ಪ್ರವೇಶದ್ವಾರದ ಕಡೆ ತೆರೆದು ಕೊಂಡಿದೆ. ಈ ಬಾವಿಯ ದಕ್ಷಿಣ ಪೂರ್ವ ಮತ್ತು ಪಶ್ಚಿಮಕ್ಕೆ ಬಾವಿಯೊಳಕ್ಕೆ ಇಳಿಯಲು ಸಮರೂಪದ ಪಾವಟಿಗೆಗಳನ್ನು ಕಟ್ಟಲಾಗಿದೆ. ಆದರೆ ದಕ್ಷಿಣದಲ್ಲಿರುವ ಪಾವಟಿಗೆಗಳು ಮೂರು ಹಂತಗಳನ್ನು ಹೊಂದಿವೆ. ತಲೆಯ ಮೇಲೆ ಸುಮಾರು ೧೦ ಅಡಿ ಉದ್ದವಿರುವ ತೊಲೆಗಳನ್ನು ಒಂದು ನಿರ್ದಿಷ್ಟ ಶೈಲಿಯಲ್ಲಿ ಕೂಡಿಸಲಾಗಿದೆ. ಈ ರಚನೆ ನೋಡಲು ಸಮಾನಾಂತರ ರೇಖೆಗಳಿಂದಾಗಿ ಕಂಗಳಿಗೆ ಅಂದವಾಗಿ ಕಾಣುತ್ತದೆ. ಹಾಗೆಯೇ ಪೂರ್ವ ಮತ್ತು ಪಶ್ಚಿಮದ ಮೆಟ್ಟಲುಗಳನ್ನು ಸುಂದರವಾಗಿ ಜೋಡಿಸಲಾಗಿದೆ. ಆದರೆ ತಲೆಯ ಮೇಲೆ ತೊಲೆಗಳಿಲ್ಲ. ಈ ಬಾವಿಯು ದಕ್ಷಿಣೋತ್ತರವಾಗಿ ೬೦ ಅಡಿ ಉದ್ದ ಮತ್ತು ಪೂರ್ವಪಶ್ಚಿಮವಾಗಿ ೪೦ ಅಡಿಗಷ್ಟು ಅಗಲವಾಗಿದೆ. ಈ ಬಾವಿಯ ಆಳ ಸುಮಾರು ೫೦ ಅಡಿ. ಈ ಬಾವಿಯ ಮೆಟ್ಟಿಲುಗಳು ಎಡ ಬಲದ ಗೋಡೆಗಳಲ್ಲಿ ಮತ್ತು ಉದ್ದಗಲದ ಗೋಡೆಗಳಲ್ಲಿ ಚಾಳುಕ್ಯಶೈಲಿಯ ಗೋಪುರವನ್ನು ಹೊಂದಿರು ಹನ್ನೆರಡು ಕೋಷ್ಠಗಳನ್ನು ಕಟ್ಟಲಾಗಿದೆ. ಜನರು ಇವುಗಳನ್ನು ಮಂಟಪಗಳೆಂದು ಕರೆಯುತ್ತಾರೆ ಬಾವಿಯ ಗೋಡೆ ಮತ್ತು ಮೆಟ್ಟಲುಗಳಿಗೆ ಕಣಶಿಲೆಯ ಸೈಜುಗಲ್ಲುಗಳನ್ನು ಉಪಯೋಗಿಸಿದ್ದರೆ ಈ ಮಂಟಪಗಳನ್ನು ಕಟ್ಟಲು ಬಳಪದ ಕಲ್ಲನ್ನು ಉಪಯೋಗಿಸಲಾಗಿದೆ. ಪ್ರತಿ ಮಂಟಪವು. ೨'x೪' ಅಳತೆಯುಳ್ಳದ್ದು. ಬಾಗಿಲ ಚೌಕಟ್ಟಿನ ಮೇಲೆ ಗಜಲಕ್ಷ್ಮಿ ಶಿಲ್ಪವನ್ನು ಕೆತ್ತಲಾಗಿದೆ. ಒಂದು ಮಂಟಪದ ಒಳಗೆ ಮಾತ್ರ ಶಿವಲಿಂಗದ ಪೀಠ ಮಾತ್ರ ಇದೆ. ಉಳಿದ ಮಂಟಪಗಳು ಒಳಗೆ ಖಾಲಿಯಾಗಿವೆ. ಹಿಂದೆ ಎಲ್ಲಾ ಮಂಟಪಗಳ ಒಳಗೆ ಶಿವಲಿಂಗವಿದ್ದಿರಬಹುದೆಂದು ಊಹಿಸಬಹುದು. ಈ ಮಂಟಪಗಳು ದ್ವಾದಶ ಜ್ಯೋತಿರ್ಲಿಂಗಗಳನ್ನು ಪ್ರತಿನಿಧಿಸುತ್ತಿರಬಹುದೆಂದು ತರ್ಕಿಸಬಹುದಾಗಿದೆ. ನನಗೆ ಶಾಸನಗಳಲ್ಲಿ ಈ ಬಗ್ಗೆ ಆಧಾರಸಿಕ್ಕಿಲ್ಲ. ಆದರೆ ಈ ಪುರಾತತ್ವ ಅವಶೇಷಗಳು ಖಂಡಿತವಾಗಿಯೂ ಇದನ್ನೂ ಸ್ಥಿರೀಕರಿಸುತ್ತವೆ. ಈ ಬಾವಿಯ ಉತ್ತರದ ಗೋಡೆಯ ಮೇಲೆ ನೀರಾವರಿಗಾಗಿ ಮೊಟ್ಟೆಯನ್ನು ಕಟ್ಟಿ ಇಲ್ಲಿ ನೀರನ್ನು ಮೇಲೆತ್ತುತ್ತಿದ್ದರು ಎಂಬುದಕ್ಕೆ ಕಲ್ಲುಗಳು ಸಾಕ್ಷಿಯಾಗಿವೆ. ಇಂದಿಗೂ ವಿದ್ಯುತ್‌ಪಂಪನ್ನು ಕೂಡಿಸಿ ನೀರಾವರಿಗಾಗಿ ನೀರನ್ನು ಬಳಸಲಾಗುತ್ತದೆ. ಈ ಬಾವಿಯನ್ನು ನೋಡಿದಾಗ ಅಹ್ಮದಾಬಾದ ಬಳಿಯ ***ಆದಲ್‌ಜಿಕ ಬಾವಡಿ*** ನೆನಪಾಯಿತು. ರಚನೆ ಮತ್ತು ಚೆಂದದ ದೃಷ್ಟಿಯಿಂದ ಚಪ್ಪರದ ಬಾವಿಯು ನಂತರದ ಸ್ಥಾನವನ್ನು ಪಡೆಯುತ್ತದೆಯಾದರೂ ಅಂತರ ಬಹಳ ಹೆಚ್ಚು. ಚಪ್ಪರದ ಬಾವಿಗೆ ದಕ್ಷಿಣ ಮತ್ತು ಪೂರ್ವದ ದಿಕ್ಕಿನಲ್ಲಿ ಮೆಟ್ಟಲುಗಳಿವೆ. ಈ ಬಾವಿ ೩೦ ಅಡಿ ಅಳತೆಯ ಚಚ್ಚೌಕಾರದಲ್ಲಿದೆ. ಸುಮಾರು ೫೦ಅಡಿ ಆಳ. ಬಾವಿಯ ಒಳಗಿದೆ. ಉಳಿದ ಆರುಬಾವಿಗಳು ರಚನೆ ಮತ್ತು ಸೌಂದರ್ಯದ ದೃಷ್ಟಿಯಿಂದ ವಿಶೇಷತೆಗಳಿಂದ ಕೂಡಿಲ್ಲ.

ಡಂಬಳವು ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಸುಪ್ರಸಿದ್ಧ ಕೇಂದ್ರವಾಗಿತ್ತು. ಧರ್ಮ, ಕಲೆ ಮತ್ತು ವಿಜ್ಞಾನಗಳ ಕೇಂದ್ರವಾಗಿತ್ತು. ಈ ಊರಿನಲ್ಲಿ ಶೆಟ್ಟರ ತೋಟದಲ್ಲಿರುವ ***ಜಪದ ಬಾವಿಯು*** ಕಲ್ಯಾಣ ಚಾಳುಕ್ಯರ ಕಾಲದ ಬಾವಿ. ೫೦ ಅಡಿ ಉದ್ದ ಮತ್ತು ೨೦ ಅಡಿಗಳಷ್ಟು ಅಗಲವಾಗಿರುವ ಈ ಬಾವಿಯ ಕಟ್ಟಡದ ಗೋಡೆಗಳಲ್ಲಿ ಬಳಪದ ಕಲ್ಲಿನಲ್ಲಿ ಕಟ್ಟಿದ ಮಂಟಪಗಳಿವೆ. ಈ ಮಂಟಪಗಳು ಮುಸುಕಿನ ಬಾವಿಯ ಮಂಟಪಗಳ ತದ್ರೂಪವಾಗಿವೆ. ಯಾವ ಮಂಟಪದ ಒಳಗೂ ಯಾವ ಮೂರ್ತಿಯೂ ಇಲ್ಲ. ಆದ್ದರಿಂದ ಇಲ್ಲಿ ಹಿಂದೆ ಈ ಮಂಟಪಗಳಲ್ಲಿ ಕುಳಿತು ತಪಸ್ವಿಗಳು ಜಪ ಮಾಡುತ್ತಿದ್ದರು. ಅದಕ್ಕಾಗಿ ಈ ಬಾವಿಗೆ ಜಪದ ಬಾವಿ ಎಂದು ಹೆಸರು ಎಂದು ಜನಪದರು ಹೇಳುತ್ತಾರೆ. ಈ ಬಾವಿಯ ನೀರನ್ನು ಇಂದಿಗೂ ನೀರಾವರಿಗಾಗಿ ಬಳಸಲಾಗುತ್ತದೆ. ನಮ್ಮ ರಾಜ್ಯದ ಪುರಾತನ ಸುಂದರ ಬಾವಿಗಳಲ್ಲಿ ಇದೊಂದು ಎಂಬುದು ನಿಸ್ಸಂಶಯ.

***ವಿಜಯನಗರ ಕಾಲದ ಬಾವಿ*** : ವಿಜಯನಗರ ಸಾಮ್ರಾಜ್ಯವು ತನ್ನ ಕಾಲದಲ್ಲಿ ಕರ್ನಾಟಕಕ್ಕೆ ಹಲವಾರು ರೀತಿಯಲ್ಲಿ ಹೊಸತನವನ್ನು ನೀಡಿತು. ಈ ಕಾಲದ ಕಾಲುವೆಯು ಹಂಪಿಯ ಪರಿಸರದಲ್ಲಿ ಇಂದಿಗೂ ನೀರನ್ನು ಒದಗಿಸುತ್ತದೆ. ಈ ಕಾಲದ ಬಾವಿಗಳು ಹಂಪಿಯ ಉತ್ಖನನದಲ್ಲಿ ಇತ್ತೀಚೆಗೆ ಬಯಲಿಗೆ ಬಂದಿವೆ. ಈ ಕಾಲದ ಕನಕಗಿರಿಯ (ತಾ। ಗಂಗಾವತಿ) ಬಾವಿಯನ್ನು ಇಲ್ಲಿಯ ಪಾಳೆಗಾರ ವೆಂಕಟಪ್ಪನಾಯಕ ನಿರ್ಮಿಸಿದನು. ಈ ಬಾವಿಯ ಸುತ್ತಲೂ ಇರುವ ಮಂಟಪಗಳು ಮತ್ತು ಜಾಲಂದರಗಳು ಕಣಶಿಲೆಯಲ್ಲಿ ಕಟೆಯಲಾದ ಸುಂದರ ಕಲಾಕೃತಿಗಳು. ಇಲ್ಲಿಯ ಎರಡು ಕಂಬಗಳ ಮೇಲೆ ಕಟೆಯಲಾದ

ಸಿಂಹದ ಬಾಯಿಯಲ್ಲಿ ಕಲ್ಲಿನ ಗುಂಡು ಸರಾಗವಾಗಿ ಸುತ್ತುತ್ತಿತ್ತು. ಇತ್ತೀಚೆಗೆ ಜನರ ಅಜಾಗರೂಕತೆಯಿಂದಾಗಿ ಇದು ಭಗ್ನಗೊಂಡಿದೆ. ಈ ಬಾವಿಯ ರಚನೆಯನ್ನು ನೋಡಿದಾಗ ರಾಜಮನೆತನದವರು ಈಜಾಡಲು ಈ ಬಾವಿಯನ್ನು ನಿರ್ಮಿಸಲಾಗಿತ್ತು ಎಂಬುದು ತಿಳಿಯುತ್ತದೆ.

***ಬಿಜಾಪುರ ಆದಿಲ್ ಶಾಹಿ ಕಾಲದ ಬಾವಿಗಳು*** : ಬಾದಶಹರ ಕಾಲದಲ್ಲಿ ವಿಜಾಪುರ ರಾಜಧಾನಿಯಲ್ಲಿ ಈಗಿನ ಬಿಜಾಪುರದ ಜನಸಂಖ್ಯೆಗಿಂತಲೂ ಬಹುಪಾಲು ದೊಡ್ಡದಾದ ಜನಸಂಖ್ಯೆ ವಾಸವಾಗಿತ್ತು. ಸಾವಿರಾರು ಆನೆಗಳು ಕುದುರೆಗಳು ಮತ್ತಿತರೆ ಪ್ರಾಣಿಗಳಿದ್ದವು. ಅಲ್ಲದೆ ವ್ಯಾಪಾರಕ್ಕಾಗಿ ಪ್ರವಾಸಿಗರು ಭೇಟಿ ನೀಡುತ್ತಿದ್ದರು. ಇಂಥ ದೊಡ್ಡ ಜನಸಂಖ್ಯೆಗೆ ಊರಿನ ಹೊರವಲಯದಲ್ಲಿ ಕೆರೆಗಳನ್ನು ಕಟ್ಟಿಸಿ ಮತ್ತು ಊರೊಳಗೆ ಹಲವಾರು ಬಾವಿಗಳನ್ನು ತೋಡಿಸಿ ನೀರನ್ನು ಒದಗಿಸಿಲಾಗುತ್ತಿದ್ದ ಆ ಕಾಲದ ಜಲಪೂರೈಕೆ ವ್ಯವಸ್ಥೆಯೇ ಒಂದು ಮಹತ್ವಪೂರ್ಣ ಅಧ್ಯಯನವಾಗಬಲ್ಲದು. ಈಗಿನ ಪಟ್ಟಣದಲ್ಲಿ ಹಲವಾರು ಆದಿಲ್‌ಶಾಹಿ ಕಾಲದ ಬಾವಿಗಳಿವೆಯಾದರೂ **ತಾಜ ಬಾವಡಿ ಮತ್ತು ಚಾಂದ ಬಾವಡಿಗಳನ್ನು** ಮಾತ್ರ ಇಲ್ಲಿವಿವರಿಸಲಾಗಿದೆ.

ಕರ್ನಾಟಕದಲ್ಲಿ ಸಿಗುವ ನಾಲ್ಕು ಪ್ರಮುಖ ಶಿಲಾ ಸಮುದಾಯಗಳಲ್ಲಿ (ಕಣ ಶಿಲೆ, ಸೀಣೆ ಕಲ್ಲು, ಪದರ ಶಿಲೆ ಮತ್ತು ಬೆಸಾಲ್ಟ್) ಬೆಸಾಲ್ಟ್ ಶಿಲೆಯು ತುಲನಾತ್ಮಕವಾಗಿ ಹೆಚ್ಚು ಸರಂಧ್ರವಾಗಿರುವದರಿಂದಲೂ, ಹೆಚ್ಚು ಛೇದಗಳಿಂದ ಕೂಡಿರುವದರಿಂದಲೂ ಅಂತರ್ಜಲವನ್ನು ಹೆಚ್ಚಿನ ಪರಿಮಾಣದಲ್ಲಿ ಸಂಗ್ರಹಿಸುತ್ತದೆ ಮತ್ತು ನೀಡುತ್ತದೆ. ಆದ್ದರಿಂದ ಬೆಸಾಲ್ಟ್ ಶಿಲೆ ಹಬ್ಬಿರುವ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಇಂದಿಗೂ ಬಾವಿ ನೀರಾವರಿಯು ಹೆಚ್ಚು ವ್ಯಾಪಕವಾಗಿದೆ. ಈಗ ತೋಡುಬಾವಿಗಳ ಬದಲಾಗಿ ಲಕ್ಷಗಟ್ಟಲೆ ಕೊಳವೆ ಬಾವಿಗಳನ್ನು ಅನಿರ್ಬಂಧಿತವಾಗಿ ಕೊರೆಯುತ್ತಿರುವದರಿಂದಾಗಿ ಅಂತರ್ಜಲದ ಮಟ್ಟ ದಿನೇ ದಿನೇ ಕುಸಿಯುತ್ತಲೆ ಇದೆ. ಈ ಬೆಸಾಲ್ಟ್ ಶಿಲೆಯ ಅಂತರ್ಜಲ ಸಂಗ್ರಹ ಸಾಮರ್ಥ್ಯ ಅಂದಿನ ನಿರ್ಮಾಪಕರಿಗೂ ಸ್ಥಪತಿಗಳಿಗೂ ಗೊತ್ತಿದ್ದರಿಂದಲೇ ಬಿಜಾಪುರದಲ್ಲಿ ಹಳೆಯ ತೋಡುಬಾವಿಗಳ ಸಂಖ್ಯೆ ಜಾಸ್ತಿ ಇದೆ. ಅವುಗಳಲ್ಲಿ ಎರಡನ್ನು ಮಾತ್ರ ವಿವರಿಸಲಾಗಿದೆ.

**ಚಾಂದಬಾವಡಿಯನ್ನು** ೧೫೭೯ರಲ್ಲಿ ಅಲಿ ಆದಿಲ್ ಶಾಹನು ಚಾಂದಬೀಬಿಯ ಸ್ಮರಣಾರ್ಥ ಶಹಾಪುರ ಹೆಬ್ಬಾಗಿಲ ಬಳಿ ತೋಡಿಸಿ ಕಟ್ಟಿಸಿದನು. ಅಲ್ಲಿಗೆ ಒಂದು ಕಮಾನಿನ ಮೂಲಕ ಮೆಟ್ಟಲುಗಳ ಮೇಲೆ ಇಳಿದು ಹೋಗಬೇಕು. ಈ ಬಾವಿಯ ಉದ್ದ ೧೫೬ ಅಡಿ ಮತ್ತು ಅಗಲ ೧೪೪ ಅಡಿ ಇದೆ. ಕೆಲವುಕಡೆ ಕಟ್ಟಡ ಕುಸಿದು ಬಿದ್ದಿದೆ. ನೀರೆಲ್ಲಾ ಹಸಿರುಗಟ್ಟಿ ಮಲೆತು ಹೋಗಿದೆ.

**ತಾಜ್‌ಬಾವಡಿಯನ್ನು** ಎರಡನೇ ಆದಿಲ್‌ಶಾಹನು ತನ್ನ ಹೆಂಡತಿ ತಾಜ್‌ಸುಲ್ತಾನಳ ಸ್ಮರಣಾರ್ಥ ೧೬೨೦ರಲ್ಲಿ ಕಟ್ಟಿಸಿದನು. ಇದನ್ನು ಚಾಂದಬಾವಡಿಯ ಮಾದರಿಯ ಮೇಲೆ ಕಟ್ಟಿದರೂ ತುಂಬಾ ಭವ್ಯವಾದ ಕಮಾನಿನ ಪ್ರವೇಶ ದ್ವಾರ ಮತ್ತು ಎಡ ಬಲಗಳಲ್ಲಿರುವ ತಂಗುದಾಣಗಳಿಂದಾಗಿ ಇದೊಂದು ಕಲಾ ಕೃತಿಯಾಗಿ ನಿರ್ಮಾಣಗೊಂಡಿದೆ. ೧೨೦ ಅಡಿ ಉದ್ದ ೧೦೦ ಅಡಿಗಳಷ್ಟು ಭವ್ಯವಾದ ಬಾವಿಯ ಆಳ ೫೨ ಅಡಿ. ಸದ್ಯಕ್ಕೆ ನೀರು ಹಸಿರುಗಟ್ಟಿ ಮಲೆತು ಹೋಗಿದೆ. ಕೆಲವೊಂದು ಸಲ ನೀರಾವರಿಗಾಗಿ ಉಪಯೋಗಿಸಲು ಪಂಪಸೆಟ್‌ನ್ನು ಅಳವಡಿಸ ಲಾಗಿದೆ.

ಬಿಜಾಪುರದ ನಗರ ಸದಾ ಕುಡಿಯುವ ನೀರಿನ ಪೂರೈಕೆ ಯಿಂದ ಈಗ ಬಳಲುತ್ತಲಿದೆ. ಆದರೆ ಹಿಂದೆ ಇದಕ್ಕೂ ಹಲವು ಪಟ್ಟು ಹೆಚ್ಚಾಗಿದ್ದ ಜನಸಂಖ್ಯೆಗೆ ನೀರನ್ನು ಪೂರೈಸಲಾಗುತ್ತಿತ್ತು ಎಂಬುದನ್ನು ಗಮನಿಸಿದರೆ ನಮ್ಮ ಇಂದಿನ ನೀರಿನ ನಿರ್ವಹಣೆ ಹದಗೆಟ್ಟಿದೆ ಎಂಬುದರಲ್ಲಿ ಅನುಮಾನವಿಲ್ಲ. ಇಂದಿಗೂ ಬಿಜಾಪುರದಲ್ಲಿರುವ ಆದಿಲ್‌ಶಾಹಿಕಾಲದ ಬಾವಿಗಳನ್ನು ದುರಸ್ತಿಗೊಳಿಸಿ ಅವಶ್ಯವಿದ್ದರೆ ಪುನಃಶ್ಚೇತನ (Revitalise) ಗೊಳಿಸಿದರೆ ಬಿಜಾಪುರದ ಕುಡಿಯುವ ನೀರಿನ ಸಮಸ್ಯೆಗೆ ಪರಿಹಾರ ಸಾಧ್ಯ.

***ಉಪಸಂಹಾರ*** : ಹಿಂದಿನ ಪ್ಯಾರಗಳಲ್ಲಿ ಕರ್ನಾಟದ ಕೆಲ ಪುರಾತನ ಬಾವಿಗಳನ್ನು ವಿವರಿಸಲಾಗಿದೆ. ಈ ಎಲ್ಲಾ ಬಾವಿ ಗಳಿರುವ ಊರುಗಳು ಬರಸಂಭವ ಪ್ರದೇಶದಲ್ಲಿವೆ. ಈ ಪ್ರದೇಶದ ವಾರ್ಷಿಕ ಸರಾಸರಿ ಮಳೆ ಸುಮಾರು ೬೦೦ ಮಿ. ಮೀ. ಆದ್ದರಿಂದಲೇ ನಮ್ಮ ಪೂರ್ವಜರು ಅಂತರ್ಜಲದ ಮಹತ್ವವನ್ನು ಅರಿತು ಬಾವಿಗಳನ್ನು ತೋಡಿಸಿ ನೀರಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದರೆಂಬುದು ಸ್ಪಷ್ಟ. ಇಂಥ ಪ್ರಮುಖ ಬಾವಿಗಳನ್ನು ಸ್ಮಾರಕಗಳಂತೆ ಸಂರಕ್ಷಿಸಿಕೊಂಡು ಅವುಗಳನ್ನು ಪುನಃಶ್ಚೇತನ ಗೊಳಿಸಿದರೆ ಆಯಾ ಬಾವಿಗಳ ಸುತ್ತಲಿರುವ ಪ್ರದೇಶ ಸಮೃದ್ಧಗೊಳ್ಳುವುದಲ್ಲದೆ ನಮ್ಮ ಐತಿಹಾಸಿಕ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡಂತಾಗುತ್ತದೆ.



(**ಕೃತಜ್ಞತೆಗಳು** : ಲಕ್ಕುಂಡಿ ಮತ್ತು ಡಂಬಳದಲ್ಲಿ ಕ್ಷೇತ್ರ ಕಾರ್ಯಕ್ಕೆಗೊಳ್ಳಲು ವಾಹನ ಸೌಕರ್ಯವನ್ನೊದಗಿಸಿ ಉಪಕರಿಸಿದ ಪರಮ ಪೂಜ್ಯ ಡಾ। ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳ ನೆರವನ್ನು ಭಕ್ತಿ ಪೂರ್ವಕವಾಗಿ ನೆನೆಯುತ್ತೇನೆ.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. *Biswas, A. K.*, (1970)., *History of Hydrology*, North-Holland Pub. Co. Amsterdam-London.

*೨. ಡಾ। ಮುನಿಸ್ವಾಮಿ ಆರ್., (ಪ್ರಧಾನ ಸಂ), (೧೯೯೯), **ಬಿಜಾಪುರ ಜಿಲ್ಲೆಯ ಗ್ಯಾಸೆಟಿಯರ್** (ಪರಿಷ್ಕೃತ ಆವೃತ್ತಿ)......ಕರ್ನಾಟಕ ಸರ್ಕಾರ.

*೩. ದೇವೀರಪ್ಪ, ಎಚ್., (೧೯೭೦), **ಸಿಂಗಿರಾಜ ಕವಿಕೃತ ಬಸವರಾಜ ಚಾರಿತ್ರ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

*೪. ಗೋಗಿ ಹನುಮಾಕ್ಷಿ., (೧೯೯೫), **ಸುರಪುರ ತಾಲೂಕಿನ ಶಾಸನಗಳು**, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ.

*೫. ಡಾ। ಚಂದ್ರಶೇಖರ್. ಎಚ್., (೧೯೯೨), *ಜೇಡರ ದಾಸಿಮಯ್ಯನ ತವನಿಧಿ:ಜಲಗೋಳದ ಸುಂದರ ರೂಪಕ*......... **ಪ್ರಜಾವಾಣಿ** ದೀಪಾವಳಿ ಸಂಚಿಕೆ.

*೬. ಡಾ।ಚಂದ್ರಶೇಖರ. ಎಚ್., (೧೯೮೬), *ಕರ್ನಾಟಕದ ಭೂವೈಜ್ಞಾನಿಕ ವಿಸ್ಮಯಗಳು*, **ತರಂಗ** ಸಂ ೪, ಸಂಚಿಕೆ ೧೨, ಮಾರ್ಚ್ ೨೩ ೧೯೮೬.

*೭. ಡಾ। ಚಂದ್ರಶೇಖರ. ಎಚ್., (೧೯೯೭), *ಕಲೆ ಮತ್ತು ಧರ್ಮಗಳ ಆಡೊಂಬಲ : ಡಂಬಳ*, **ಪ್ರಜಾವಾಣಿ** ದೀಪಾವಳಿ ಸಂಚಿಕೆ.

*೮. Abhishankar. K., (Chief Ed.), (1970), *Raichur District Gazetteer*, Govt. of Karnataka.

*೯. *Henry Cousens.*, (1996), *Bijapur and its Architectural Remains*, Archalogical Survey of India, New Delhi (Reprint).

ಆರ್. ಪುರುಷೋತ್ತಮ ರೆಡ್ಡಿ*

# ವಿಜಯನಗರ ಸಾಮ್ರಾಜ್ಯದಲ್ಲಿ ಬಳಸಿದ ಶಿಲೆಯ ಇತಿಹಾಸ ಸಮೀಕ್ಷೆ

ಹಂಪೆಯ ಹಾಗು ವಿಜಯನಗರದ ಚರಿತ್ರೆಯ ಅನೇಕ ವಿಷಯಗಳ ಬಗ್ಗೆ ಇದುವರೆಗೆ ಸಾಕಷ್ಟು ಅಧ್ಯಯನ ನಡೆದಿದೆ. ಇಲ್ಲಿಯ ರಾಜ ಮನೆತನಗಳು, ಅವರ ಆಡಳಿತ ವ್ಯವಸ್ಥೆ, ಧಾರ್ಮಿಕ - ಸಾಮಾಜಿಕ ಸ್ಥಿತಿ-ಗತಿಗಳು, ಕಲೆ, ಸಾಹಿತ್ಯ, ಶಿಲ್ಪ, ವಾಸ್ತುಶಿಲ್ಪ, ಇವೇ ಮೊದಲಾದ ವಿಷಯಗಳ ಬಗ್ಗೆ ಐತಿಹಾಸಿಕ ದೃಷ್ಟಿಕೋನದ ಅಧ್ಯಯನ ನಡೆದಿದೆ. ಆದರೆ ವಿಜಯನಗರ ಪರಿಸರದ 'ಶಿಲಾ ಪ್ರಪಂಚದ' ಬಗ್ಗೆ ವೈಜ್ಞಾನಿಕ ಅಧ್ಯಯನ ನಡೆದಿಲ್ಲ. ಶಿಲೆಗಳ ಚರಿತ್ರೆಯ ಒಂದು ರೋಚಕ ಇತಿಹಾಸ ಈ ಪ್ರಬಂಧದಲ್ಲಿ ಮೂಡಿ ಬಂದಿದೆ.

ವಿಜಯನಗರದ ಅರಸರು ಬಳ್ಳಾರಿ ಪ್ರದೇಶದಲ್ಲಿ ಸಿಗುವ ಶಿಲಾ ಸಂಪತ್ತನ್ನು ತುಂಬಾ ಅರ್ಥಪೂರ್ಣವಾಗಿ ದುಡಿಸಿ ಕೊಂಡಿದ್ದಾರೆ. ನೂರಾರು ಗುಡಿ, ಮಂಟಪ, ವಿಗ್ರಹಗಳನ್ನು ತಯಾರಿಸುವ ಮೂಲಕ ಇಲ್ಲಿಯ ಕಲ್ಲು ಕಲ್ಲಿಗೂ ಜೀವ ತುಂಬಿದ್ದಾರೆ. ಕಲ್ಲಿನ ಬಳಕೆಯ ಒಂದು ಮುಖ ವಾಸ್ತುಶಿಲ್ಪ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟರೆ, ಅದರ ಇನ್ನೊಂದು ಮುಖ ಭೂವಿಜ್ಞಾನ ಕ್ಷೇತ್ರಕ್ಕೆ ಸಂಬಂಧಪಟ್ಟಿರುತ್ತದೆ. ವಿಜಯನಗರ ಸಾಮ್ರಾಜ್ಯದ ದೇವಸ್ಥಾನ, ಕೋಟೆ, ಮಂಟಪಗಳು, ಗಜಶಾಲೆ, ತುಲಾಭಾರ, ವಿಗ್ರಹಗಳು, ಗರುಡಗಂಬಗಳು, ಶಿಲಾಗುಹೆ, ದಿಬ್ಬಗಳು, ಪುಷ್ಕರಿಣಿ, ಈಜುಕೊಳ, ಶಾಸನಗಳು, ಶಿಲಾ ಬಾಗಿಲು, ಬಸದಿಗಳು, ರಾಜಬೀದಿ ಏಕಶಿಲಾ ರಚಿತ ಗಜಸ್ತಂಭ ಮುಂತಾದ ಕಟ್ಟಡ ರಚನೆಗಳನ್ನು ಹಂಪಿಯ ಸುತ್ತಮುತ್ತ ಗಮನಿಸಿದಾಗ ಗ್ರ್ಯಾನೈಟ್ ಎಂಬ ಅಗ್ನಿಶಿಲೆಯನ್ನು ಹೇರಳವಾಗಿ ಉಪಯೋಗಿಸಿ ರುವುದನ್ನು ಕಾಣಬಹುದು. ಅಂದು ಸಾಮ್ರಾಜ್ಯ ಕಟ್ಟುವ ಸಮಯದಲ್ಲಿ ಒರಟು ಒರಟಾಗಿ ಚಾಣ ಹೊಡೆದು ತಯಾರಿಸಿದ ದೊಡ್ಡ ದೊಡ್ಡ ಗ್ರ್ಯಾನೈಟ್ ದಿಂಡುಗಳನ್ನು ಕೋಟೆಯ ನಿರ್ಮಾಣ ದಲ್ಲಿ ಹಾಗೂ ಮಂಟಪಗಳ ರಚನೆಯಲ್ಲಿ ಬಳಸಿರುವುದನ್ನು ಕಾಣಬಹುದು. ಇತ್ತೀಚೆಗೆ ತಾಂತ್ರಿಕತೆ ಬೆಳೆದಿರುವುದರಿಂದ ಕಚ್ಚಾ ಗ್ರ್ಯಾನೈಟನ್ನು ಹಾಗೇ ಬಳಸದೆ ಉಜ್ಜಿ ನಯಗೊಳಿಸಿ ಮೆರಗು ಪಡೆಯುವಂತೆ ಮಾಡಿ ಇದೇ ಶಿಲೆಯನ್ನು ಹೆಚ್ಚು ಆಕರ್ಷಕವಾಗಿ ಮಾಡಿ, ಅಲಂಕಾರಿಕ ಶಿಲೆಯಾಗಿ ಬಳಸುವುದನ್ನು ಕಾಣಬಹುದು.

ಭಾರತ ದೇಶದಲ್ಲಿ ಸುಮಾರು ೧೬೦ ಬಗೆಯ ಗ್ರ್ಯಾನೈಟ್ ಇರುವುದು ಪ್ರಾಕೃತಿಕ ವರದಾನ. ಇವುಗಳಲ್ಲಿ ಪ್ರಮುಖ ವಿಧಗಳೆಂದರೆ ಮಹಾರಾಜ, ಹಿಮಾಲಯನ್ ಬ್ಲ್ಯೂ, ಇಳಕಲ್ ರೆಡ್, ಶಿರಾಗ್ರೇ, ಚಾಕಲೇಟ್ ಪಾರ್ಫಿರಿ, ನ್ಯೆನ್ ರೋಜ್, ಇಂಪೀರಿಯಲ್ ರೆಡ್ ಮಲ್ಟಿ, ಬ್ಲಾಕ್ ಇಂಪಾಲ, ಇಂಡಿಯನ್ ಜುಪ್ರಾನ್, ಇಂಡಿಯನ್ ಸ್ಕೈ ಬ್ಲ್ಯೂ, ಬ್ಲಾಕ್ ಗೆಲಾಕ್ಸಿ, ಆರೆಂಜ್ ಮಲ್ಟಿ, ಕಾಶ್ಮೀರ ನೈಟ್, ಇಂಡಿಯನ್ ಪ್ಯಾಂಟಸಿ ಇತ್ಯಾದಿ, ಹೀಗೆ ದೇಶದಲ್ಲಿ ಒಟ್ಟು ೪೫ ಕೋಟಿ ಘನಮೀಟರ್‌ಗಳಷ್ಟು ಗ್ರ್ಯಾನೈಟ್ ಶಿಲಾ ಸಂಪತ್ತಿದ್ದು ಈ ಪೈಕಿ ಶೇಕಡಾ ೦.೦೧ರಷ್ಟು ಕೂಡಾ ಬಳಕೆಯಾಗಿಲ್ಲ. ಭೂಗರ್ಭ ಶಾಸ್ತ್ರಜ್ಞರ ಪ್ರಕಾರ ಪ್ರಪಂಚದ ಒಟ್ಟು ಗ್ರ್ಯಾನೈಟ್ ನಿಕ್ಷೇಪದ ಪೈಕಿ ಶೇಕಡಾ ೨೦ ರಷ್ಟು ಭಾರತದಲ್ಲಿದೆ. ಇಲ್ಲಿ ಸಿಗುವಷ್ಟು ವೈವಿಧ್ಯಗಳು ಬೇರಾವ ದೇಶಗಳಲ್ಲೂ ಸಿಗುತ್ತಿಲ್ಲ. ಪ್ರತಿವರ್ಷ ೧ ದಶಲಕ್ಷ ಟನ್‌ಗಿಂತಲೂ ಹೆಚ್ಚು ಗ್ರ್ಯಾನೈಟನ್ನು ಉತ್ಪಾದಿಸುವ ದೇಶಗಳಲ್ಲಿ ಭಾರತವು ಒಂದಾಗಿದೆ. ದೇಶಕ್ಕೆ ಹೇರಳವಾಗಿ ವಿದೇಶಿ ವಿನಿಮಯ ದೊರಕಿಸಿ ಕೊಡುವ, ಲಕ್ಷಾಂತರ ಜನರಿಗೆ ಉದ್ಯೋಗ ಒದಗಿಸಿರುವ ದೇಶದ ಪ್ರತಿಷ್ಠೆಯನ್ನು ಎಲ್ಲೆಲ್ಲೂ ಎತ್ತಿ ಹಿಡಿಯುತ್ತಿರುವ ಗ್ರ್ಯಾನೈಟ್ ರಫ್ತು ಕ್ಷೇತ್ರ ಇನ್ನೂ ಹೆಚ್ಚಾಗಿ ಅಭಿವೃದ್ಧಿ ಹೊಂದಬೇಕಾಗಿದೆ. ಈ ದಿಸೆಯಲ್ಲಿ ಹಂಪಿಯಲ್ಲಿ ದೊರೆಯುವ ಹೇರಳ ಶಿಲಾ ಸಂಪತ್ತಿನ ಸಂಪೂರ್ಣ ಬಳಕೆಯ ಬಗ್ಗೆ ಆಲೋಚಿಸುವುದು ಅವಶ್ಯ. ಕ್ರಿ. ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿದೆಯೆನ್ನುವಾಗ ಶಿಲೆಯ ಜನನದ ಕಾಲಕ್ಕೆ ಹೋಲಿಸಿದಲ್ಲಿ ಇದು ತೀರಾ ಇತ್ತೀಚಿನದೆಂದೆ ಹೇಳಬಹುದು. ಭೂವೈಜ್ಞಾನಿಕ ದೃಷ್ಟಿಯಿಂದ ನೋಡಿದಾಗ ಖನಿಜ ಕಣಗಳಿಂದ ಕೂಡಿದ ಘನ ವಸ್ತುಗಳಿಗೆ ಶಿಲೆ ಎನ್ನುವರು. ಏಕ ಖನಿಜದಿಂದ ಆದ ಶಿಲೆ ತೀರಾ ವಿರಳ. ಒಂದಕ್ಕಿಂತ ಹೆಚ್ಚು ಖನಿಜ ಸಂಯೋಜನೆಯಿಂದಾದ ಶಿಲೆಗಳೇ ಹೆಚ್ಚು. ಖನಿಜಗಳು ವಿವಿಧ ಪ್ರಮಾಣದಲ್ಲಿ ಒಟ್ಟುಗೂಡಿ ಬೇರೆ ಬೇರೆ ಬಗೆಯ ಶಿಲೆಗಳಾಗುತ್ತವೆ. ಇದೂವರೆಗೆ ಸುಮಾರು ೬೦೦೦ಕ್ಕೂ ಹೆಚ್ಚು ಬಗೆಯ ಶಿಲೆಗಳನ್ನು ಗುರುತಿಸಿದ್ದಾರೆ. ಭೂಮಿಯ ಕವಚವೇ ಶಿಲೆಗಳ ತವರು. ಶಿಲಾಗೋಳ ಸುಮಾರು ೧೬ ಕಿ.ಮೀ.ನಷ್ಟು ಮಂದವಾಗಿದೆಯೆಂದು ಊಹಿಸಲಾಗಿದೆ. ಇದರಲ್ಲಿ ಶೇ. ೯೫ ಭಾಗ ಅಗ್ನಿ ಶಿಲೆಗಳಿಂದಲೂ ಉಳಿದ ೫ ಭಾಗ ದ್ವಿತೀಯಕ ಹಾಗೂ ರೂಪಾಂತರ ಶಿಲೆಗಳಿಂದಾಗಿವೆ. ಈ ಕಾರಣದಿಂದ ಭೂಮಿಯ ಮೇಲುದೊಗಟೆ ಅಗ್ನಿ ಶಿಲೆಗಳಿಂದಾಗಿದೆ ಎಂದರೆ ತಪ್ಪಾಗಲಾರದು.

ಹಂಪಿಯಲ್ಲಿರುವ ಉಗ್ರ ನರಸಿಂಹನ ವಿಗ್ರಹವಾಗಲಿ, ಪುರಂದರ ಮಂಟಪವಾಗಲೀ, ಬೂದು ಬಣ್ಣದ ಗ್ರ್ಯಾನೈಟ್ ಶಿಲೆಯಿಂದ ರಚಿಸಲ್ಪಟ್ಟಿವೆ. ಈ ಶಿಲೆಯಲ್ಲಿ ಬೆಣಚು ಮತ್ತು ಅರ್ಥೋಕ್ಲೇಸ್ ಫೆಲ್ಡ್‌ಸ್ಪಾರ್ ಅಧಿಕ ಪ್ರಮಾಣದಲ್ಲಿಯೂ

*ಪ್ರವಾಚಕರು, ಅನ್ವಯಿಕ ಭೂವಿಜ್ಞಾನ ವಿಭಾಗ, ಸ್ನಾತಕೋತ್ತರ ಕೇಂದ್ರ, ಸಂಡೂರು.

ಪ್ಲೇಜಿಯೋಸೇಸ್ ಅಲ್ಪ ಪ್ರಮಾಣದಲ್ಲಿರುವುದು ಬಯೋಟೈಟ್ ಸಾಮಾನ್ಯವಾಗಿ ಕಂಡುಬರುವ ಮ್ಯಾಫಿಕ್ ಖನಿಜ. ಕೆಲವು ವೇಳೆ ಹಾರನ್‌ಬ್ಲೆಂಡ್, ಎಪಿಡೋಟ್, ಕ್ಲೋರೈಟ್ ಖನಿಜಗಳು ಕಂಡುಬರುತ್ತವೆ. ಅಲ್ಲದೇ ಮ್ಯಾಗ್ನಟೈಟ್, ಅಪಟೈಟ್, ಜಿರ್ಕಾನ್ ಖನಿಜಗಳು ಅತ್ಯಲ್ಪ ಪ್ರಮಾಣದಲ್ಲಿರುವುವು. ವಿಜಯನಗರ ಸಾಮ್ರಾಜ್ಯದಲ್ಲಿ ವಿಜಯ ವಿಠ್ಠಲ ದೇವಸ್ಥಾನ, ವಿರುಪಾಕ್ಷ ದೇವಸ್ಥಾನ, ಸಾಸಿವೆ ಕಾಳು ಮತ್ತು ಕಡಲೆಕಾಳು ಗಣೇಶ ವಿಗ್ರಹಗಳು ಭೂಗರ್ಭ ದೇವಾಲಯ ಹಜಾರರಾಮ ದೇವಾಲಯ, ಗಜಶಾಲೆ ಮುಂತಾದವುಗಳನ್ನು ಗ್ರ್ಯಾನೈಟ್ ಶಿಲೆಯಿಂದ ರಚಿಸಲು ಪ್ರಮುಖ ಕಾರಣವೆಂದರೆ ಈ ಪ್ರದೇಶದಲ್ಲಿ ಹೇರಳವಾಗಿ ಈ ಶಿಲಾ ಸಂಪತ್ತು ದೊರೆಯುವುದು ಒಂದಂಶವಾದರೆ ಆ ಶಿಲೆಯಲ್ಲಿರುವ ವಿಶಿಷ್ಟ ಗುಣಗಳು ಇವುಗಳ ರಚನೆಗೆ ಕಾರಣೀಭೂತವಾಗಿವೆ. ಈ ಶಿಲೆಯ ಅತ್ಯಂತ ವಿಶಿಷ್ಟ ಗುಣಗಳೆಂದರೆ : *೧) ಬೇಕಾದ ಗಾತ್ರಕ್ಕೆ ಸುಲಭವಾಗಿ ಒಪ್ಪ ಮಾಡಬಹುದು. ೨) ಮೋಹಕವಾದ ಬಣ್ಣ ಮತ್ತು ಉತ್ತಮ ಹೊರನೋಟವಿರುವುದು ೩) ಹವಾಮಾನದ ಏರುಪೇರುಗಳನ್ನು ತಡೆದುಕೊಳ್ಳುವ ಸಾಮರ್ಥ್ಯ ಪಡೆದಿರುವುದು ೪) ನೀರಿನಲ್ಲಿ ಸುಲಭವಾಗಿ ಕರಗುವ ಖನಿಜಗಳನ್ನು ಹೊಂದಿರುವುದು. ೫) ಹೆಚ್ಚು ರಂಧ್ರ ಹಾಗೂ ಸೀಳುಗಳನ್ನು ಕಾಣದಿರುವುದು ೬) ಕಬ್ಬಿಣಾಂಶಯುಕ್ತ ಖನಿಜಗಳು ಅತೀ ಕಡಿಮೆ ಪ್ರಮಾಣದಲ್ಲಿರುವುದು. ೭) ಪಟ್ಟಿಗಳು ಮತ್ತು ಶಿರಗಳಲ್ಲಿರುವುದು. ೮) ಅದುಮುವ ಬಲ ತಡೆಯುವ ಸಾಮರ್ಥ್ಯವನ್ನುಳ್ಳದ್ದು. ೯) ಸೆಳೆತ ಸಾಮರ್ಥ್ಯವನ್ನು ತಡೆಯುವ ಶಕ್ತಿ ಹೊಂದಿರುವುದು. ೧೦) ಸಮಕಣ ವಿನ್ಯಾಸದ ರಚನೆಯನ್ನು ತೋರುವುದು. ೧೧) ಸಿಮೆಂಟಿನ ಜೊತೆಗೆ ಬಳಸಿದಾಗ ಅಂಟಿಕೊಳ್ಳುವ ಗುಣವಿರುವುದು. ೧೨) ಶಿಲೆಯನ್ನು ಮೂಲ ಬಂಡೆಗಳಿಂದ ಬೇಕಾದ ಗಾತ್ರದ ಆಯಾ ಆಕೃತಿಯ ಮತ್ತು ಚಪ್ಪಟೆ ಹಲಗೆಗಳನ್ನು ಪಡೆಯಲು ಪೂರಕವಾಗಿರುವುದು. ೧೩) ಹೇರಳವಾಗಿ ನಿಸರ್ಗದಲ್ಲಿ ದೊರೆಯುವುದು.*

ಈ ಶಿಲೆಯು ಅಗ್ನಿ ಶಿಲೆಗಳ ಗುಂಪಿಗೆ ಸೇರಿರುವುದರಿಂದ ಸ್ವಾಭಾವಿಕವಾಗಿ ಗಡಸುತನವನ್ನು ತೋರುವುದರ ಜೊತೆಗೆ ಭಾರವನ್ನು ಹೊರುವ ಸಾಮರ್ಥ್ಯವನ್ನು ಪಡೆದಿರುತ್ತದೆ. ಈ ಶಿಲೆಯ ಸಾಪೇಕ್ಷ ಸಾಂದ್ರತೆ ೨.೭, ವ್ಯಾಪ್ಯತೆ ೦.೫-೧.೫, ಸೆಳೆತ ಸಾಮರ್ಥ್ಯ ೭೦-೨೫೦ ಕೆಜಿ.ಸಿಎಂ$^2$ ಅದುಮುವ ಬಲ ಸಾಮರ್ಥ್ಯ ೧೦೦೦-೨೫೦೦ ಕೆಜಿ : ಸಿಎಂ$^2$.

ಈ ಶಿಲೆ, ಭಾರತದಲ್ಲಿ ವಿಶೇಷವಾಗಿ ಗುಜರಾತ್, ರಾಜಸ್ಥಾನ, ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳು ನಾಡು ಮುಂತಾದ ರಾಜ್ಯಗಳಲ್ಲಿ ದೊರೆಯುತ್ತದೆ. ಕರ್ನಾಟಕ ರಾಜ್ಯದಲ್ಲಿ ಉತ್ತರ ದಕ್ಷಿಣ ದಿಕ್ಕಿನುದ್ದಕ್ಕೂ ಈ ಶಿಲೆಯ ಬೆಟ್ಟಗಳ ಸಾಲನ್ನು ರಾಮನಗರದಿಂದ ಹಿಡಿದು ಹಂಪಿಯತನಕ ಗುರುತಿಸ ಬಹುದು. ಇವು ಸುಮಾರು ೪೮೦ ಚ.ಕಿ.ಮೀ. ಮೀರಿ ಹಬ್ಬಿವೆ. ಅಲ್ಲದೆ ೨೪ ಕಿ.ಮೀ.ಗಳಷ್ಟು ಏಕರೀತಿಯ ಅಗಲವಾಗಿ ಹರಡಿರುವುದನ್ನು ಕಾಣಬಹುದು. ಭೂ ಚರಿತ್ರೆಯ ಎಲ್ಲ ಕಾಲಗಳಲ್ಲಿಯೂ ಭೂಮಿಯ ಹೊರ ಪದರವನ್ನು ಭೇದಿಸಿ ಗ್ರ್ಯಾನೈಟ್ ಹೊರಬಂದಿರುವುದು ಕಾಣುತ್ತದೆ. ಆದರೆ ವಿಶೇಷವಾಗಿ ಕಾಣಿಸುವುದು ಅತಿ ಪ್ರಾಚೀನವಾದ ಪ್ರಕೇಂಬ್ರಿಯನ ಯುಗದ ಶಿಲೆಗಳಲ್ಲಿ ಮಾತ್ರ. ಈ ಶಿಲೆ ಅನೇಕ ಮಿಲಿಯನ್ ವರ್ಷಗಳಷ್ಟು ಹಳೆಯದು. ಹೇಮಕೂಟ, ಅಕ್ಕ-ತಂಗಿಯರ ಗುಂಡು, ಮಾಲ್ಯವಂತ, ರಘುನಾಥ ದೇವಾಲಯ, ಮಾತಂಗ ಬೆಟ್ಟ, ಚಾಮುಂಡಿ ಬೆಟ್ಟ, ನಂದಿಬೆಟ್ಟ, ಸಾವನದುರ್ಗ, ಶಿವಗಂಗೆ, ಸಿದ್ಧಗಂಗೆ, ಅರಸೀಕೆರೆ ಬಳಿಯಿರುವ ಮಾಲೆಕಲ್ಲು ತಿರುಪತಿ ಬೆಟ್ಟ ಮುಂತಾದವು ಸಂಪೂರ್ಣ ಗ್ರ್ಯಾನೈಟ್ ಶಿಲೆಯಿಂದ ರೂಪು ಗೊಂಡಂತಹವು. ಚಿತ್ರದುರ್ಗ, ಮಧುಗಿರಿ, ಪಾವಗಡ, ಬಳ್ಳಾರಿ ಮುಂತಾದ ಅನೇಕ ಹಾಗೂ ವಿಜಯನಗರ ಪ್ರದೇಶಗಳ ಗ್ರ್ಯಾನೈಟ್ ಬೆಟ್ಟಗಳ ನೆತ್ತಿಯಲ್ಲಿ ಕೋಟೆಗಳನ್ನು ಕಟ್ಟಿರುವುದು ಈಗಲೂ ಕಾಣಬಹುದು.

ಭೂಮಿಯ ಮೇಲಿರುವ ಶಿಲೆಗಳು ಶಿಥಿಲೀಕರಣ ಕ್ರಿಯೆಗೆ ಒಳಗಾಗುತ್ತವೆ. ಈ ರೀತಿ ಶಿಥಿಲಗೊಂಡ ಶಿಲಾರಾಶಿ ಮಣ್ಣೆಲ್ಲವನ್ನು ಸಾಗರಕ್ಕೆ ಸಾಗಿಸಿ ಅಲ್ಲಿ ಒಟ್ಟುಗೂಡಿ ಮತ್ತೆ ಶಿಲೆಯ ರೂಪ ತಳೆಯುತ್ತದೆ. ಜಲವಿರುವ ಕಡೆ ಶಿಲೆಯ ನೂತನ ಸೃಷ್ಟಿಯಾಗುತ್ತದೆ. ಭೂಮಿ ರೂಪುಗೊಂಡಾಗಿನಿಂದ ಕೊನೆ ಕಾಣದೇ ನಿರಂತರವಾಗಿ ಈ ಕ್ರಿಯೆ ನಡೆಯುತ್ತಲೇ ಇದೆ. ಇದಕ್ಕೆ ಹಂಪಿಯ ಸ್ಮಾರಕಗಳಾಗಲಿ, ಬೆಟ್ಟಗಳಾಗಲೀ ಹೊರತಾಗಿಲ್ಲ. ಆದರೆ ಈ ಕ್ರಿಯೆ ಬಹಳ ನಿಧಾನ. ಆದರೂ ನಿರಂತರವಾಗಿ ನಡೆದು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಿವೆ. ಈ ರೀತಿಯಾಗದಂತೆ ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಂಡಲ್ಲಿ ಸ್ಮಾರಕಗಳನ್ನು ಶಾಶ್ವತವಾಗಿ ರಕ್ಷಿಸಿಕೊಳ್ಳಬಹುದು.

ಹಂಪಿಯ ಸುತ್ತ-ಮುತ್ತಲಿರುವ ಹೇರಳ ಶಿಲಾ ಸಂಪತ್ತನ್ನು ದೇವಾಲಯ, ಮಂಟಪ ಹಾಗೂ ವಿಗ್ರಹಗಳು, ರಾಜಬೀದಿ, ತುಲಾಭಾರ ಮುಂತಾದ ರಚನೆಗಳಲ್ಲಿ ಬಳಸುವುದರ ಜೊತೆಗೆ ಇತರೆ ಉಪಯೋಗಗಳ ಬಗ್ಗೆ ಆಲೋಚಿಸುವುದು ಒಳಿತು.

ಉನ್ನತ ಗುಣಮಟ್ಟ ಹಾಗೂ ಸುದೀರ್ಘ ಬಾಳಿಕೆಯಿಂದಾಗಿ ವಿಶ್ವ ಮಾರುಕಟ್ಟೆಯಲ್ಲಿ ಭಾರತದ ಗ್ರ್ಯಾನೈಟ್ ಬೇಡಿಕೆ ದಿನೇ ದಿನೇ ಹೆಚ್ಚುತ್ತಿದೆ. ಅಲ್ಲದೇ ಈ ಶಿಲೆಯಲ್ಲಿ ಉಪಯುಕ್ತ ಆರ್ಥಿಕ ಖನಿಜಗಳೇನಾದರೂ ದೊರೆಯುವ ಬಗ್ಗೆ ಸಂಶೋಧನೆ ಕೈಗೆತ್ತಿಕೊಳ್ಳಬೇಕು.

*ವಿಜಯನಗರ ಸಾಮ್ರಾಜ್ಯವಾಗಿದ್ದ ಹಂಪಿಯ ಪರ್ಯಾಯ ದ್ವೀಪ ಪ್ರದೇಶದ ಒಂದು ಭಾಗ ಇದು ಸ್ಥಿರವಾದ ಪ್ರದೇಶ. ಭೂಚಲನೆಗಳಾಗುವ ಸಂಭವ ಕಡಿಮೆ. ಇಲ್ಲಿ ಆಗುವ ಭೂಕಂಪ ಗಳು ಬಹಳ ಕ್ಷೀಣವಾದವು. ಆದ್ದರಿಂದ ಅತ್ಯಂತ ಪುರಾತನ ಕಾಲದಿಂದಲೂ ಇಲ್ಲಿಯ ಸ್ಮಾರಕಗಳು ಸುರಕ್ಷಿತವಾಗಿವೆ.*



ಸಾಸುಲು ಜಿ. ವಿಶ್ವನಾಥ್*

# ಸಾಸುಲು ಪ್ರದೇಶದ ಸ್ಥಳನಾಮಗಳು

ನಮ್ಮ ದೇಶದ ಬಹುತೇಕ ಎಲ್ಲಾ ಪ್ರದೇಶದ ಸ್ಥಳಗಳ ಹೆಸರುಗಳು; ಕಥೆ, ದಂತಕಥೆ, ಐತಿಹ್ಯ, ಪುರಾಣ, ಸಮಕಾಲೀನ ಅಂಶಗಳಿಂದ ಆವರಿಸಲ್ಪಟ್ಟಿವೆ. ಪ್ರತಿಯೊಂದು ಗ್ರಾಮದವರು ತಮ್ಮ ಗ್ರಾಮಕ್ಕೆ ಹೆಸರು ಬಂದ ಬಗೆಯನ್ನು ಹಲವು ರೀತಿಯಲ್ಲಿ ಕಾರಣ ನೀಡಿ ಪರಿಣಾಮಗಳ ಅರಿವಿದ್ದೋ ಇಲ್ಲದೇಯೋ ಹೇಳುತ್ತಿರುತ್ತಾರೆ. ಸ್ಥಳಮಹಿಮೆ ಮತ್ತು ಪವಾಡಗಳು ಕೆಲ ಸಂದರ್ಭಗಳಲ್ಲಿ ನೈಜತೆ ಹಾಗೂ ವಾಸ್ತವಕ್ಕೆ ದೂರವಾಗಿರವುದು ಉಂಟು. ಈ ನಿಟ್ಟಿನಲ್ಲಿ ನಮ್ಮ ನಾಡಿನ ಸ್ಥಳನಾಮಗಳ ಐತಿಹಾಸಿಕ ವಿವೇಚನೆ ವೈಜ್ಞಾನಿಕತೆಯ ಹಿನ್ನೆಲೆಯಲ್ಲಿ ನಡೆಯಬೇಕು.

ಸಾಸಲು ಪ್ರದೇಶದಲ್ಲಿನ ನೂರಾರು ಹಳ್ಳಿಗಳ ಹೆಸರುಗಳ ವಿಚಾರದಲ್ಲಿ ಹತ್ತಾರು ರೀತಿಯ ವಿವರಗಳು ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರಕಿದವು. ಐತಿಹಾಸಿಕ ವಿಚಾರಗಳ ಸೂಕ್ಷ್ಮ ವಿಶ್ಲೇಷಣೆಯೊಂದಿಗೆ ಸಾಸಲು ಪ್ರದೇಶದ ಸ್ಥಳ ನಾಮಗಳನ್ನು ಸ್ಥೂಲವಾಗಿ, ವೈಜ್ಞಾನಿಕವಾಗಿ ಇಲ್ಲಿ ವಿವರಿಸಲಾಗಿದೆ. ಸಾಸಲು ಪ್ರದೇಶ ಐತಿಹಾಸಿಕ ಹಾಗೂ ಪ್ರಾಗೈತಿಹಾಸಿಕ ಹಿನ್ನೆಲೆಯನ್ನು ಹೊಂದಿದ್ದು ೨೦೦೦ ವರ್ಷಗಳಿಗೂ ಹೆಚ್ಚಿನ ಇತಿಹಾಸವನ್ನು ಒಳಗೊಂಡಿದೆ. ಈ ಸುದೀರ್ಘ ಅವಧಿಯಲ್ಲಿ ಈ ಪ್ರದೇಶದ ಗ್ರಾಮಗಳು, ಯಾರಿಂದ, ಯಾವಾಗ ಆರಂಭ ವಾದವೆಂದು ಖಚಿತವಾಗಿ ಹೇಳುವುದು ಕಷ್ಟ. ಆದರೂ ಈ ಸ್ಥಳನಾಮಗಳ ವಿಚಾರವನ್ನು ದಂತಕಥೆ ಐತಿಹ್ಯ, ವಾಸ್ತವಿಕತೆ ಭಾಷಾಣಶಾಸ್ತ್ರ, ಸಮಾಜಜೀವನ, ಶಾಸನಾಧಾರ, ಪರಿಸರದ ಹಿನ್ನೆಲೆಯಲ್ಲಿ ಸ್ಪಷ್ಟಪಡಿಸಬಹುದು.

ಸಾಸಲು ಪ್ರದೇಶದ ಸ್ಥಳನಾಮಗಳಲ್ಲಿ ಹಳ್ಳಿ, ಪುರ, ಗ್ರಾಮ, ಪಾಳ್ಯ, ಹಟ್ಟಿ, ಕೆರಿ, ಪಳ್ಳಿ, ವಾಳ ಊರು, ಮಡಗು, ಕುಂಟೆ, ಕೆರೆ, ಮುಂತಾದ ಪ್ರತ್ಯೇಕ ವಾರ್ಗಿಕಗಳನ್ನು ಗ್ರಾಮದ ಹೆಸರ ಕೊನೆಯಲ್ಲಿ ಕಾಣಬಹುದಾಗಿದೆ. ಸಾಸಲು ಪ್ರದೇಶದಲ್ಲಿ ಪ್ರಾಚೀನ ಹೆಸರುಗಳು ಅರ್ಥಗರ್ಭಿತವಾಗಿರುವುದನ್ನು ನಾವು ಕಾಣ ಬಹುದಾಗಿದೆ. ಉದಾಹರಣೆಗೆ, ಕಾಡಿನ ನಡುವೆ ಇರುವ ಹಳ್ಳಿಯನ್ನು ಕಾಡಳ್ಳಿ ಎಂಬುದರ ಬದಲು ಕಾಡುಹಲಪನಹಳ್ಳಿ, ದೊಡ್ಡಹಲಪನ ಹಳ್ಳಿ ಎಂದು ಕರೆಯುತ್ತಾರೆ, ನದಿ, ಬೆಟ್ಟ, ಕಲ್ಲು, ಮಣ್ಣು, ಮರ, ಗಿಡ, ದೇವಾಲಯಗಳ ಹೆಸರಿನಿಂದ, ಪುರಾಣ ಪ್ರತೀಕಗಳಾಗಿ ಗುರುತಿಸುವ ಸ್ಥಳಗಳು ಸಾಸಲು ಪ್ರದೇಶದಲ್ಲಿ ಸಾಕಷ್ಟಿವೆ. ಒರ್ವ ವ್ಯಕ್ತಿ ಒಂದು ಕೆರೆಯನ್ನು ಕುಂಟೆಯನ್ನು ಕಟ್ಟಿಸಿದರೆ ಆ ವ್ಯಕ್ತಿಯ ಹೆಸರನ್ನೆ ಆ ಗ್ರಾಮಕ್ಕೆ ಇಡುವ ಅಥವಾ ಆ ಕೆರೆಯ ಹೆಸರು ಆ ಗ್ರಾಮಕ್ಕೆ ಅಥವಾ ಆ ಕೆರೆಯ ಹೆಸರನ್ನೇ ಆ ಗ್ರಾಮವಾಗಿ ಕರೆಯುವ ವಾಡಿಕೆ ಬೆಳೆದು ಬಂದಿದೆ. ಉದಾಹರಣೆಗೆ ಸೂಳೆಕುಂಟೆ, ಗೌಡನಕುಂಟೆ, ಗುಂಡುಮ್‌ಗೆರೆ, ಜಾಲಗೆರೆ, ಕಲ್ಕುಂಟೆ, ನಾಸ್ಕುಂಟೆ, ಇತ್ಯಾದಿ.

ಭಾಷಾಶಾಸ್ತ್ರ ದೃಷ್ಟಿಯಿಂದಲೂ ಕೃಷಿಯಾಧಾರಿತ ದೃಷ್ಟಿ ಯಿಂದಲೂ ಈ ಪ್ರದೇಶದ ಗ್ರಾಮಗಳನ್ನು ನಾವು ಅಧ್ಯಯನ ಮಾಡಬಹುದಾಗಿದೆ. ಸಾಸಲು ಗ್ರಾಮವನ್ನು ೧೯೨೫-೩೦ ರಲ್ಲಿ **ಸಾಸೂಲು** ಎಂದು ಕರೆದ ಸ್ಥಳನಾಮವಿದೆ. ೧೯೩೫ರಲ್ಲಿ ಬ್ರಿಟಿಷರು ಕಟ್ಟಿದ ಸುಂಕದ ಕಟ್ಟೆ ದಾಖಲೆಯಲ್ಲಿಯೂ ಸಾಸೂಲು ಒಂದೇ ಕರೆಯಲಾಗಿದೆ. ಈ ಹಳ್ಳಿಯ ಹಿರಿಯರು ಈ ಹಿಂದೆ ಈ ಊರಲ್ಲಿ 'ಸಾಸುವೆಮರ' ಇತ್ತೆಂದು ಆದ್ದರಿಂದಲೇ ಸಾಸಲು ಆಯಿತೆಂದು ಈ ಗ್ರಾಮದ ಬಗ್ಗೆ ದಂತಕಥೆ ಹೇಳುತ್ತಾರೆ. ತೆಲುಗು ಭಾಷೆಯ ಪ್ರಭಾವವಿರುವ ಈ ಗ್ರಾಮ ತೆಲಗು ಭಾಷೆಯ ಸಾಸೂವ್ಲು ಕನ್ನಡದಲ್ಲಿ ಸಾಸಲು ಆಗಿದೆ. ಈ ಪ್ರದೇಶದ ಮಣ್ಣು ವೈಜ್ಞಾನಿಕವಾಗಿ ಸಾಸುವೆ ಬೆಳೆಯಲು ಪ್ರಶಸ್ತವಾಗಿದ್ದು ಈಗಲೂ ಸಾಸುವೆ ಬೆಳೆಯುತ್ತಾರೆ. ಆದುದರಿಂದ ಸಾಸುವೆ ಬೆಳೆಯುವ ಮೂಲ ಮನೆತನ ತೆಲುಗು ಮೂಲದಾಗಿದ್ದು ಕನ್ನಡದ ಪ್ರಾಬಲ್ಯ ಹೆಚ್ಚಿದ ಹಾಗೆ ಸಾಸುವ್ಲು-ಸಾಸೂಲು ಆಗಿದೆ. ಸಾಸೂಲು ಎಂದು ಆಡುಭಾಷೆಯಲ್ಲಿ ಕರೆಯುವ ಸಾಸಲು ಇಂಗ್ಲೀಷ್ ಸಂಸರ್ಗದಿಂದ ಸಾಸಲ್ ಆಗಿ ಶಿಷ್ಟ ಭಾಷಿಕರ ಬಾಯಿಯಲ್ಲಿ ಸಾಸಲು ಆಗಿದೆ. ಒಟ್ಟಾರೆ ಕೃಷಿ ಆಧಾರಿತ ದೃಷ್ಟಿಯಿಂದ ಈ ಹೆಸರು ಬಂದಿರಬೇಕು. ಸಾಸಲಿನಲ್ಲಿ ವಿಜಯನಗರದ ಕೃಷ್ಣದೇವರಾಯನ ಕಾಲದ ಶಾಸನವೊಂದು ದೊರಕಿದ್ದು ಈ ಶಾಸನದಲ್ಲಿ ಈ ಪ್ರದೇಶವನ್ನು ಶಿವಪುರವೆಂದು ಕರೆಯಲಾಗಿದೆ. ಆದರೆ ಶಿವಪುರ ಯಾವಾಗ ಸಾಸಲು ಆಯಿತೆಂದು ನಿಖರವಾಗಿ ಹೇಳುವುದು ಕಷ್ಟ.

ಕರ್ನಾಟಕದಲ್ಲಿ ಅನೇಕ ಸಾಸುಲುಗಳಿವೆ :- ತುಮಕೂರು ಜಿಲ್ಲೆಯ ಹೊನ್ನುಡಿಕೆ-ಸಾಸಲು, ಚಿಕ್ಕನಾಯಕನಹಳ್ಳಿ ಸಮೀಪ ವಿರುವ ಸಾಸಲು, ಮೈಸೂರು ಸಮೀಪ ಸಾಸಲು, ಕೊಡಗು ಸಂಸ್ಥಾನದಲ್ಲಿ ಒಂದು ಸಾಸಲು, ಧಾರವಾಡ ಗುಲ್ಬರ್ಗದಲ್ಲಿ ಪ್ರದೇಶದಲ್ಲಿ ಸಾಸಲು, ಚಿತ್ರದುರ್ಗದ ಜಿಲ್ಲೆಯಲ್ಲಿ ಸಾಸಲು, ದಾವಣಗೆರೆ ಸಮೀಪ ಸಾಸಲು, ಹೀಗೆ ಒಟ್ಟು ೮ ಸಾಸಲುಗಳು ಕರ್ನಾಟಕದಲ್ಲಿ ಇದ್ದರೂ ಈ ದೊಡ್ಡಬಳ್ಳಾಪುರ ತಾಲೂಕಿನ ಸಾಸಲಿನಂತೆ ಕೃಷಿಯಾಧಾರಿತ ಹಿನ್ನೆಲೆಯನ್ನು ಬೀರುವ ಸಾಸಲು ಹೊಂದಿಲ್ಲ. ಸಾಸುವ್ಲು, ಸಾಸೂಲು, ಸಾಸುಲು - ಸಾಸ್ಲು - ಸಾಸಲ್ = ಸಾಸಲು ಈ ರೀತಿ ಬೆಳೆದು ಬಂದಿವೆ.

ಸಾಸಲು ಪ್ರದೇಶಕ್ಕೆ ಹೊಂದಿಕೊಂಡಿರುವ ಕೋಳಾಲ

*೮೭೦, ೩ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - ೫೬೦೦೪೦.

ಮೂಲತಃ ಗಂಗರ ರಾಜಧಾನಿ ಕುವಲಾಲವಾಗಿರಬೇಕೆಂದು ಡಾ। ಎಂ. ಚಿದಾನಂದಮೂರ್ತಿ ಹಾಗೂ ಡಾ। ಗೋಪಾಲರಾವ್ ಅವರು ಅಭಿಪ್ರಾಯಪಟ್ಟಿದ್ದರು. ಆದರೆ ಯಾವ ಆಧಾರಗಳನ್ನೂ ಈ ವಿದ್ವಾಂಸರು ನೀಡಿರಲಿಲ್ಲ. ಸ್ಥಳನಾಮದ ಹಿನ್ನೆಲೆಯಿಂದ ಶಾಸನಗಳಲ್ಲಿ ಲಭ್ಯವಿರುವ **ಕುವಲಾಲ ಪುರವರಾಧೀಶ್ವರರ್** ಎಂದು ಗಂಗರನ್ನು ಕರೆದಿರುವುದರಿಂದ ಕೋಲಾರವೇ ಕುವಲಾಲವೆಂದು ಇತಿಹಾಸಕಾರರು ಹೇಳಿದ್ದಾರೆ. ಆದರೆ ಕೋಲಾರ ವೆಂಬುದು ಕೋಳಾಲ 'ಕುವಲಾಲ'ವಾಗಿರ ಬೇಕೆಂದು ಗಮನಿಸ ಬೇಕಾದ ಅಂಶ. ಇತ್ತೀಚೆಗೆ ಈ ಕೋಳಾಲದ ಸಮೀಪವಿರುವ ಅಕ್ಕ ತಿಮ್ಮನಹಳ್ಳಿ ಸಮೀಪ ಗಂಗರ ಶಾಸನವೊಂದು ಲಭ್ಯವಿದ್ದು ವೇಳೆವಾಳಿ ವೀರನೊಬ್ಬ ಆತ್ಮಾಹುತಿ ಮಾಡಿಕೊಂಡ ವಿಚಾರವನ್ನು ಹೇಳುತ್ತದೆ. ಈ ವೇಳೆವಾಳಿ ವೀರನ ಹೆಸರು ಸವೆದಿದ್ದು ಈ ವೀರನ ಕುಟುಂಬಕ್ಕೆ ೫ ಖಂಡುಗ ಬೆಳೆ ಬರುವ ಗದ್ದೆಯನ್ನು ದಾನವಾಗಿ ಕೊಟ್ಟಿದ್ದನ್ನು ಈ ಶಾಸನ ಸ್ಪಷ್ಟಪಡಿಸುತ್ತದೆ. ಈ ಶಾಸನ ಶಕ ವರ್ಷ ೯೦೩ ನೆಯ ವಿಷು ಸಂವತ್ಸರದ ಕಾರ್ತಿಕ ತ್ರಯೋದಶಿ ಆದಿತ್ಯವಾರ ರಚಿಸಲ್ಪಟ್ಟಿದೆ. ಅಂದರೆ ಕ್ರಿ. ಶ. ೯೮೦ರ (ವಿಷು ಸಂವತ್ಸರದ) ನವೆಂಬರ್ ೨೭ನೇ ತಾರೀಖು ಭಾನುವಾರ ಈ ಶಾಸನ ರಚನೆಯಾಗಿದೆ. ಈ ಪ್ರದೇಶ ಸಾಸಲು ಪರಿಸರದ ಮಣ್ಣೆಯ ಹತ್ತಿರವಿರುವುದರಿಂದ ಮತ್ತು ಗಂಗರ ದೊರೆ ರಾಚಮಲ್ಲನ ಕಾಲಕ್ಕೆ ಈ ಶಾಸನ ಸೇರುವುದರಿಂದ ಈ ರಾಚಮಲ್ಲನ ವೇಳೆವಾಳಿ ನಾಳ್ಗಾಮುಂಡನು ಈ ಶಾಸನದ ವೇಳೆವಾಳಿ ಆಗಿರಬೇಕು. ಸಾಸಲು ಪ್ರದೇಶದಲ್ಲಿ ಗಂಗರ ಕಾಲದ ಪ್ರಾಚೀನ ಶೈಲಿಯ ಬ್ರಹ್ಮ ಸೂತ್ರವನ್ನೊಳಗೊಂಡ ಶಿವಲಿಂಗ ಹಾಗೂ ದೇವಾಲಯದ ಪಳಿಯುಳಿಕೆಗಳು ದೊರೆತಿರುವುದಿರಿಂದ ಈ ಕೋಳಾಲವೆ ಗಂಗರ ರಾಜಧಾನಿ ಕುವಲಾಲವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಅಷ್ಟೆ ಅಲ್ಲದೆ ಈ ಪ್ರದೇಶದ ಜನರಲ್ಲಿ ನೂರಾರು ಜನ, ಗಂಗ, ಗಂಗಪ್ಪ ಗಂಗಯ್ಯ ಎಂದು ಹೆಸರನ್ನಿಟ್ಟುಕೊಳ್ಳುವುದು ಮತ್ತು ಗಂಗರ ಹೆಸರಿನ ಹಳ್ಳಿಗಳನ್ನು ಯಥೇಚ್ಛವಾಗಿ ಈ ಪ್ರದೇಶದಲ್ಲಿ ಕಾಣುವುದರಿಂದ ಗಂಗರ ರಾಜಧಾನಿ ಕುವಲಾಲ ಸಾಸಲು ಪ್ರದೇಶದ ಕೋಳಾಲ ವೆಂದು ಇತಿಹಾಸದ ಆಧಾರಗಳು ಹಾಗೂ ಸ್ಥಳನಾಮದ ವಿವೇಚನೆಯಿಂದ ಸ್ಪಷ್ಟಪಡಿಸಬಹುದು.

ಕಾಡುಅಲಪನಹಳ್ಳಿಯೆಂಬ, ಅಲಪನಹಳ್ಳಿಯ ಸ್ಥಳನಾಮ ಗಳನ್ನು ಅಲಪ ಎಂಬ ವ್ಯಕ್ತಿನಾಮಗಳು ಈ ಪ್ರದೇಶದಲ್ಲಿ ಸಾಕಾಷ್ಟಿದ್ದರೂ ಆಳೂಪರಿಗೂ ಈ ಪ್ರದೇಶಕ್ಕೂ ಯಾವುದೇ ಸಂಬಂಧವಿಲ್ಲ. ಸಾಸಲು ಪ್ರದೇಶದ ಸ್ಥಳನಾಮಗಳು ಪ್ರಮುಖವಾಗಿ ಕಾಡಿನ ಕಾರಣದಿಂದ, ವ್ಯಕ್ತಿಗಳು ಗ್ರಾಮಗಳನ್ನು ಕಟ್ಟಿದ ಕಾರಣದಿಂದ ಕೃಷಿ ಕಾರಣದಿಂದ, ಪುರಾಣ, ಕೆರೆ, ಕುಂಟೆ, ಪರಿಸರದ ಕಾರಣ ದಿಂದ, ಪ್ರಾಕೃತಿಕ ಕಾರಣಗಳಿಂದ ಉಗಮಗೊಂಡಿರು ವುದನ್ನು ನಾವು ಈ ಕೆಳಕಂಡಂತೆ ಗಮನಿಸಬಹುದಾಗಿದೆ.

೧. ***ಜನಾಂಗೀಯ ಕಾರಣಗಳು*** : ಗೊಲ್ಲರ ಜಾತೀಯ ಜನರು ಅತಿ ಹೆಚ್ಚಾಗಿರುವ ಸಾಸಲು ಪ್ರದೇಶದಲ್ಲಿ ಗೊಲ್ಲಗೌಡರ ಹೆಸರಿನ ಅನೇಕ ಹಳ್ಳಿಗಳಿವೆ. ಉದಾಹರಣೆಗೆ. ಹೆಣ್ಣೆಗೌಡನ ಹಳ್ಳಿ, ಚೆನ್ನವೀರನಹಳ್ಳಿ, ಅಲಪನಹಳ್ಳಿ ಗಂಗರಂಗಯ್ಯನಹಳ್ಳಿ, ಗೊರವಯ್ಯನಪಾಳ್ಯ, ದೊಡ್ಡವೀರಯ್ಯನಪಾಳ್ಯ, ಗುಂಡಪ್ಪನಾಯಕನ ಹಳ್ಳಿ, ಭೋವಿಪಾಳ್ಯ, ಹೀಗೆ ಹಲವು ಜಾತಿಯವರು ತಮ್ಮ ಜಾತಿ ಸೂಚಕಾಗಿ ಹಳ್ಳಿಗಳಿಗೆ ಹೆಸರನ್ನಿಟ್ಟು ಕೊಂಡಿದ್ದಾರೆ.

೨. ***ಪ್ರಾಕೃತಿಕ ಕಾರಣಗಳು*** : ಪ್ರಕೃತಿದತ್ತ ಕಾಡು, ಕೆರೆ, ಕುಂಟೆ, ಕೋಟೆಗಳ ಹಿನ್ನೆಲೆಯೊಂದಿಗೆ ಕೆಲವು ಸ್ಥಳನಾಮಗಳಿಂದ ಹಳ್ಳಿಗಳನ್ನು ನಾವು ಈ ಪ್ರದೇಶದಲ್ಲಿ ಕಾಣಬಹುದು. ಅವುಗಳೆಂದರೆ ಏಳು ಹಟ್ಟಿ, ಸುತ್ತಳ್ಳಿ, ಸೂಳೆಕುಂಟೆ, ಗುಂಡುಗೆರೆ, ಗೌಡನಕುಂಟೆ, ಕಲ್ಕುಂಟೆ, ಕೊಡಲುಬಂಡೆ, ಜಾಲಿಗೆರೆ, ದಡಗಟ್ಟಮಡಗು, ಬೆಳಕಿನ ಮಡಲು, ಬೈರಗೊಡ್ಲು ಇತ್ಯಾದಿ.

೩. ***ಪುರಾಣ – ಐತಿಹಾಸಿಕ ಸ್ಥಳನಾಮಗಳು*** : ಮಹಾಭಾರತ ರಾಮಾಯಣ ಕತೆಗಳು ಹಾಗು ಐತಿಹಾಸಿಕ ಮಹಾವ್ಯಕ್ತಿಗಳ ಸಾಧನೆಯ ಮೂಲವಾದ ಐತಿಹ್ಯಗಳಿರುವ ಗ್ರಾಮಗಳು ಈ ಪ್ರದೇಶ ದಲ್ಲಿವೆ. ಉದಾಹರಣೆಗೆ - ಶ್ರೀರಾಮನ ಹಳ್ಳಿ, ಉಪವಾಸಪುರ, ತಿಪ್ಪೂರು, ಅಲುಪನಹಳ್ಳಿ, ಗರುಡಗಲ್ಲು, ಹಾಲು ಚಿಲುಮೆ, ಗುಂಡುಂಗೆರೆ, ಪಾಂಡವರದಿಣ್ಣೆ, ದಾಸರಪಾಳ್ಯ, ಭಕ್ತರಹಳ್ಳಿ.

ಶ್ರೀ ರಾಮನಹಳ್ಳಿಯವರು ಶ್ರೀರಾಮ ವನವಾಸಕ್ಕೆ ಬಂದಾಗ ಒಂದು ದಿನ ಈ ಗ್ರಾಮದಲ್ಲಿ ತಂಗಿದ್ದನೆಂದು ದಂತಕಥೆ ಹೇಳಿ ರಾಮನೇ ನಮ್ಮ ಊರಿಗೆ ತನ್ನ ಹೆಸರಿಟ್ಟನೆಂದು ಹೇಳುತ್ತಾರೆ. ಉಪವಾಸಪುರದವರು ಶ್ರೀರಾಮ ವನವಾಸಕ್ಕೆ ಬಂದಾಗ ಈ ಹಳ್ಳಿಯಲ್ಲಿ ತಿನ್ನಲು ಏನೂ ಸಿಗದ ಕಾರಣ ಉಪವಾಸಪುರವೆಂದು ಹೆಸರಿಟ್ಟನೆಂದು ಹೇಳುತ್ತಾರೆ. ಅದೇ ರೀತಿ ಹಳೇಕೋಟೆ, ತೊಡಲು ಬಂಡೆ ಕೋಟೆಗ್ರಾಮಗಳು, ಪಾಳೇಗಾರರ ಸಾಹಸ ಕಥೆಗಳನ್ನು ಒಳಗೊಂಡಿವೆ. ಪಾಂಡವರದಿಣ್ಣೆ, ಶ್ರೀರಾಮನಹಳ್ಳಿ ಪ್ರದೇಶದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಸಮಾಧಿಗಳು, ನಿಲುವುಗಲ್ಲು ಸ್ಮಾರಕಗಳು, ರೇಖಾ ಚಿತ್ರಗಳನ್ನು ಒಳಗೊಂಡು ಪ್ರಾಚೀನ ಅವಶೇಷಗಳ ಜೊತೆಗೆ ದಂತ ಕಥೆಗಳನ್ನು ಸೇರಿಸಿಕೊಂಡು ಬೆಳೆದ ಹಳ್ಳಿಗಳಾಗಿರುವುದನ್ನು ನಾವಿನ್ನು ಕಾಣಬಹುದು.

೪. ***ವೃತ್ತಿ ಸ್ಥಳ ನಾಮಗಳು*** : ತಾವು ಮಾಡುವ ಕಸುಬಿನಿಂದ ಕೆಲಸದ ಕಾರಣದಿಂದ ಕೆಲವು ಸ್ಥಳನಾಮಗಳು ಬಂದಿವೆ. ಅವುಗಳೆಂದರೆ ಭೋವಿಪಾಳ್ಯ, ಒಡ್ಡರಹಟ್ಟಿ, ಸೂಳೆಕುಂಟೆ, ಆಚಾರ ಹಳ್ಳಿ, ಹರಿಜನ ಕಾಲೋನಿ, ಸುಖಾಲಿಗರತಾಂಡ, ಲಿಂಗದ ಬೀರನ ಹಳ್ಳಿ, ದಾಸರಪಾಳ್ಯ, ಹಾರುಡಿ, ಹಾರ್ವಯ್ಯನಪಾಳ್ಯ, ಭಕ್ತರ ಹಳ್ಳಿ, ಕಾಡುಬ್ಯಾಡರಹಳ್ಳಿ.

೫. ***ವಿಶಿಷ್ಟ ಸ್ಥಳ ನಾಮಗಳು*** : ಈ ಮೇಲಿನ ಯಾವ ಗುಂಪಿಗೂ ಸೇರದ ಯಾವುದೇ ಸ್ಪಷ್ಟ ಆಧಾರಗಳನ್ನು ನೀಡಲಾರದ ಸಂದಿಗ್ಧ ಹೆಸರಿನ ಕೆಲವು ಸ್ಥಳನಾಮಗಳು ಈ ಪ್ರದೇಶದಲ್ಲಿವೆ. ಅವುಗಳನ್ನು ವಿಶಿಷ್ಟ ಸ್ಥಳನಾಮಗಳೆಂದು ಕರೆಯಬಹುದು. ಉದಾ: ಬನವಸಿ, ಹಾರುಡಿ, ಜ್ಯೋತಿಪುರ, ಕನಕೇನಹಳ್ಳಿ ಗುಮ್ಮಹಳ್ಳಿ, ಮಚ್ಚೇನಹಳ್ಳಿ, ಕಾಕುರಾಡಿ, ಗುನ್ನಾನಹಳ್ಳಿ, ವಾಡಿಗರಹಳ್ಳಿ, ಪಚ್ಚಾರ್ಲಹಳ್ಳಿ, ಬಂದಾರ್ಲಹಳ್ಳಿ, ಗರಾಡಗಲ್ಲು, ನಾಗಲಿಪುರ, ಕಾಡತಿಪುರ, ಬೈರಾಪುರ, ಸಿಂಗೇನಹಳ್ಳಿ ತಮ್ಮಗಾನ ಹಳ್ಳಿ.

ಈ ರೀತಿಯಾಗಿ ಸಾಸಲು ಪ್ರದೇಶದ ಸ್ಥಳನಾಮಗಳನ್ನು ಅನೇಕ ದೃಷ್ಟಿಯಿಂದ ಗಮಿಸಬಹುದಾಗಿದೆ.



ಎಸ್. ಎಂ. ನಾಗಭೂಷಣ*

# ತ್ರಿಪರ್ವತ ಕದಂಬರ ರಾಜಧಾನಿ : ಮುರುಗೋಡು

'ಮುರುಗೋಡು' ಬೆಳಗಾವಿ ಜಿಲ್ಲೆಯ ಸೌಂದತ್ತಿ ತಾಲೂಕಿನಲ್ಲಿ ಉತ್ತರಭಾಗದಲ್ಲಿದೆ. ಬೆಳಗಾವಿಯಿಂದ ಪೂರ್ವಕ್ಕೆ ೪೦ ಕಿ.ಮೀ. ಅಂತರದಲ್ಲಿದ್ದು, ಬನವಾಸಿ ಕದಂಬರ ಕಾಲದಲ್ಲಿ ಉಪರಾಜಧಾನಿಯಾಗಿದ್ದು "ತ್ರಿಪರ್ವತ" "ಮೂಡುಗಡ" "ಮೂಡುಗಡೆ ಮುರುಗೋಡ" ಎಂಬ ಉಲ್ಲೇಖಗಳಿಂದ ವಿಜಯನಗರ ಕಾಲದವರೆಗೆ ಇತಿಹಾಸದಲ್ಲಿ ತನ್ನದೇ ಆದ ವಿಶೇಷ ಇತಿಹಾಸವನ್ನು ಹೊಂದಿದೆ. ಇದಕ್ಕೆ ಸಾಕ್ಷಿಯಾಗಿ ಈ ಪಟ್ಟಣದಲ್ಲಿ ಆಳಿದುಳಿದ ಕದಂಬರ ಕಾಲದ ಕೋಟೆ ದೇವಾಲಯಗಳು ಶಿಲ್ಪಮೂರ್ತಿಗಳ ಅವಶೇಷಗಳನ್ನು ಹಾಗೂ ಶಾಸನಗಳನ್ನು ಕಾಣಬಹುದು.

ಶ್ರೀ ಕೆ. ಬಿ. ಪಾಠಕ ಅವರು ಹಲವು ವರ್ಷಗಳ ಹಿಂದೆ ತ್ರಿಪರ್ವತ ಕದಂಬರ ಶಾಖೆಯ ಬಗ್ಗೆ ಬರೆಯುತ್ತ ತ್ರಿಪರ್ವತ ರಾಜಧಾನಿ, ತ್ರಿಪರ್ವತವೆಂದರೆ ಬೆಳಗಾವಿ ಜಿಲ್ಲೆಯ ಮುರುಗೋಡು ಎಂದು ಪ್ರತಿಪಾದಿಸಿದ್ದಾರೆ.*೧ ಆದಾಗ್ಯೂ ತ್ರಿಪರ್ವತವೆಂದರೆ "ಶ್ರೀಶೈಲ" ಬೇಲೂರ ಎಂದು ಕೆಲ ಸಂಶೋಧಕರು ವಾದಿಸಿದ್ದುಂಟು. ಆದರೆ ಇತ್ತೀಚೆಗೆ ದೊರೆತ ಆಕರ ಸಾಮಗ್ರಿಗಳಿಂದ ತ್ರಿಪರ್ವತವೆಂದರೆ **ಮುರುಗೋಡ** ಎಂಬುದು ಸ್ಪಷ್ಟವಾಗುತ್ತದೆ. ಬನವಾಸಿ ಕದಂಬರ ಶಾಖೆಯೊಂದು ಆಡಳಿತ ಮಾಡಿ ನಂತರದ ಕರ್ನಾಟಕ ಅರಸುವಂಶದ ಕ್ರಮವಾಗಿ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರ ನಂತರದ ವಿಜಯನಗರದ ಅರಸರ ಸದಾಶಿವರಾಯನ ಕಾಲದವರೆಗಿನ ಅನೇಕ ಅವಶೇಷಗಳೂ ಇಲ್ಲಿ ದೊರೆಯುತ್ತವೆ. ಆದರೆ ಇಲ್ಲಿ ಕದಂಬರ ರಾಜಧಾನಿ ವಿಷಯಕ್ಕಷ್ಟೇ ಸೀಮಿತವಾಗಿಟ್ಟುಕೊಂಡು ಈ ಲೇಖನ ಮಂಡಿಸಲಾಗಿದೆ.

ಕದಂಬರ ಕಾಲದ ಶಾಸನಗಳಲ್ಲಿ ಸಂಸ್ಕೃತ, ಭಾಷೆಯ ಪ್ರಭಾವದಿಂದ ಈ ಗ್ರಾಮ ಅಥವಾ ಪಟ್ಟಣವನ್ನು "ತ್ರಿಪರ್ವತ" ವೆಂದು ಉಲ್ಲೇಖಿಸಿದ್ದಾರೆ. ಕಿತ್ತೂರು, ಹಲಸಿ, ಬೆಣ್ಣೆಹಳ್ಳಿ, ಮುಂತಾದ ಶಾಸನಗಳಲ್ಲಿ ತ್ರಿಪರ್ವತ ಕದಂಬರ ಶಾಖೆಯ ಆಡಳಿತ ಉಲ್ಲೇಖಗಳಿವೆ. ಭಾಗೋಳಿಕವಾಗಿ ಈ ಪಟ್ಟಣ ಮೂರು ಗುಡ್ಡಗಳ ನಡುವೆ ಇದೆ. ಮೂರು ಗುಡ್ಡಗಳಿಂದ ಅವೃತವಾಗಿರುವುದರಿಂದ ಮೂರು ಗುಡ್ಡ "ಮುರುಗೋಡ"ಎಂದು ಸಂಸ್ಕೃತ ಭಾಷೆಯಲ್ಲಿ ತ್ರಿಪರ್ವತವೆಂದು ಕರೆದಿರಬಹುದು.

ಕದಂಬರ ತಾಂಬ್ರ ಹಾಗೂ ಶಿಲಾಶಾಸನಗಳಲ್ಲಿ ಕಲ್ಯಾಣ ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಶಾಸನಗಳಲ್ಲೇ ಅಲ್ಲದೇ ವಿಜಯನಗರದ ಸದಾಶಿವರಾಯನ ಶಾಸನದಲ್ಲಿ "ಮೂಡುಗಡೆ" ಎಂದು ಉಲ್ಲೇಖಿಸಲಾಗಿದೆ. ಮೂಡುಗಡೆ ಎಂದರೆ ಮೂಡಣದ ಗಡ "ಪೂರ್ವ ದಿಕ್ಕಿನಲ್ಲಿರುವ ಪರ್ವತದ ಗುಡ್ಡದ ಮೇಲಿರುವ ಕೋಟೆ" ಎಂದರ್ಥ.*೨

ಕದಂಬರ ಉಪರಾಜಧಾನಿ ಹಲಸಿಯಿಂದ ಈ ಸ್ಥಳ ಮೂಡಣ ದಿಕ್ಕಿನಲ್ಲಿರುವ ಕೋಟೆಯಾದ್ದರಿಂದ ಮೂಡಲಗಡ "ಮೂಡುಗಡ" ವೆಂದು ಕರೆದಿರಬಹುದು ಮೂಡಗಡ ಮೂಡುಗೋಡ ಎಂದಾಗಿರಬಹುದು. ಹಾಗೆಯೇ ಮೂರು ಗುಡ್ಡಗಳಿಂದ ಆವೃತವಾಗಿರುವದರಿಂದ ಮೂರುಗುಡ್ಡ ಮೂರು ಗೋಡ ಎಂದಾಗಿರಬಹುದು.

**ಮೂರುಗೋಡ ಕ್ಷೇತ್ರಕಾರ್ಯ** ನಡೆಸಿದಾಗ ಅಲ್ಲಿ ಕಾಣುವ ಅವಶೇಷಗಳು : ಪಟ್ಟಣದ ಸುತ್ತ "ಪ್ರಾಚೀನ ಕೋಟೆ" ಹಾಗೂ ಕಂದಕಗಳು ಕದಂಬರ ಕಾಲದ ದೇವಾಲಯ, "ಶಿವದೇವಾಲಯ" ಗರ್ಭಗೃಹ ಮಾತ್ರ ಉಳಿದಿವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹದ ದ್ವಾರಬಂಧದಲ್ಲಿ ಪಟ್ಟಿಕೆ ಹಾಗೂ ಸ್ತಂಭ ಶಾಖಗಳಿವೆ. ಮುಂಭಾಗದ ಅಂತರಾಳ ನವರಂಗ ಹಾಳಾಗಿವೆ. ತ್ರಿಕೂಟವಿದ್ದ



*ಉಪನ್ಯಾಸಕರು, ಮಹಾಲಕ್ಷ್ಮಿ ಮಹಾವಿದ್ಯಾಲಯ, ಧಾರವಾಡ - ೫೮೦ ೦೦೬.



ಕುರುಹುಗಳಿವೆ. ದೇವಾಲಯದ ಸ್ವಲ್ಪದೂರದಲ್ಲಿ ಮತ್ತೊಂದು ಶಿವಲಿಂಗವಿದೆ. ಚೌಕಾಕಾರದ ತ್ರಿಪೀಟದಲ್ಲಿ ಶಿವಲಿಂಗವಿದೆ. ಇದು ಸುಮಾರು ೫ನೇ ಶತಮಾನಕ್ಕೆ ಸೇರಬಹುದು. ದೇವಾಲಯದ ಸುತ್ತಲೂ ಅನೇಕ ವಾಸ್ತುಶಿಲ್ಪ ಶಿಥಿಲ ಶಿಲೆಗಳಿವೆ. ಸಮೀಪದಲ್ಲಿಯೇ ತೀರ್ಥಂಕರ ಶಿಲ್ಪವಿದೆ. ಸುಮಾರು ೨.೫ ಅಡಿ ಎತ್ತರ ವಿರುವ ಕರಿಕಲ್ಲಿನ ರುಂಡವಿಲ್ಲದ ವಿಗ್ರಹ ಕೆಲವೇ ವರ್ಷಗಳ ಹಿಂದೆ ಈ ಭಾಗದಲ್ಲಿಯೇ ಭೂಮಿಯಿಂದ ಹೊರಬಿದ್ದಿದೆ. ಸುಮಾರು ೬ನೇ ಶತಮಾನಕ್ಕೆ ಸೇರಬಹುದಾದ ಶಿವಲಿಂಗದ ಶಿಥಿಲವಾದ ನಂದಿ ವಿಗ್ರಹ, ಮಲ್ಲಿಕಾರ್ಜುನ ದೇವಾಲಯದಲ್ಲಿದೆ. ಇಷ್ಟು ವಾಸ್ತುಶಿಲ್ಪ ಆಕರಗಳಾದರೆ ಕದಂಬರ ಕಾಲದ ಶಾಸನಗಳು ಸುಮಾರು ೩೦



ಕಿ.ಮೀ. ಉತ್ತರದಲ್ಲಿ ಗೋಕಾಕ ತಾಲೂಕಿನ ಕೊಣ್ಣೂರಿನಲ್ಲೆ ದೊರೆತಿರುವ ಕೊಣ್ಣೂರು ಶಾಸನ*[೩] ೬ನೇ ಶತಮಾನದ ಕದಂಬ ಚೌಕತಲೆಕಟ್ಟಿನ ಲಿಪಿ ಶಾಸನವಿದ್ದು, ಕದಂಬರ ದಾಮೋದರನ ಉಲ್ಲೇಖವಿದೆ. ಮತ್ತೊಂದು ಬೆಡಿಕಿಹಾಳ ಶಾಸನ.*[೪]

ಗೋವೆ ಕದಂಬರ ೩ನೇ ಜಯಕೇಶಿಯ ದೊಡ್ಡವಾಡ ಶಾಸನ.*[೫] ಮೂರುಗೋಡದಲ್ಲಿ ದೊರೆತಿದ್ದು ಇವಲ್ಲದೇ ಮುರುಗೋಡ ಸುತ್ತ ಮುತ್ತಲಿನ ದೊಡ್ಡವಾಡ, ಹಲಸಿ, ಕಿತ್ತೂರು, ದೇಗಾವಿ, ಧಾರವಾಡ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಬನವಾಸಿ ಕದಂಬರ ಶಾಸನಗಳು ಹಾಗೂ ಸ್ಮಾರಕಗಳು ಹೆಚ್ಚಾಗಿ ದೊರೆತಿರುವದರಿಂದ ತ್ರಿಪರ್ವತವೆಂದರೆ ಇದೇ ಮುರುಗೋಡ, ಕದಂಬರ ಉಪ ರಾಜಧಾನಿಯಾಗಿತ್ತೆಂದು ಸ್ಪಷ್ಟವಾಗುತ್ತದೆ. ಭೌಗೋಳಿಕವಾಗಿ ದೂರದಲ್ಲಿರುವ ಶ್ರೀಪರ್ವತ, ಶ್ರೀಶೈಲವಾಗಲಿ ಅಥವಾ ಬೇಲೂರು ಇರಲಿಕ್ಕಿಲ್ಲ. ಏಕೆಂದರೆ ಶ್ರೀಶೈಲದ ಸುತ್ತ ಬನವಾಸಿ ಕದಂಬರು ಯಾವುದೇ ಶಾಸನಗಳಾಗಲಿ ವಾಸ್ತು ಶಿಲ್ಪಗಳು ಇಲ್ಲವೇ ಇಲ್ಲ. ಆದ್ದರಿಂದ ತ್ರಿಪರ್ವತವೆಂದರೆ ಮುರುಗೋಡ ಎಂದು ದಾಖಲೆಗಳ ಮೂಲಕ ಸ್ಪಷ್ಟವಾಗುತ್ತದೆ.

***ತ್ರಿಪರ್ವತ ಕದಂಬರು : ಅಥವಾ ಮುರುಗೋಡ ಕದಂಬರ ರಾಜಕೀಯ ಇತಿಹಾಸ***

೧ನೇ ಕೃಷ್ಣವರ್ಮ ಕ್ರಿ.ಶ. (೪೩೦-೪೬೦) ಬನವಾಸಿ ಕದಂಬರ ಕಾಕುಸ್ಥವರ್ಮನ ನಂತರ ಅವನ ಮಕ್ಕಳಾದ ಶಾಂತಿ ವರ್ಮ ಹಾಗೂ ೧ನೇ ಕೃಷ್ಣವರ್ಮ ವೈಮನಸ್ಸಿನಿಂದ ರಾಜ್ಯವನ್ನು ವಿಭಾಗಿಸಿ ಏಕಕಾಲದಲ್ಲಿ ಶಾಂತಿವರ್ಮ ಬನವಾಸಿಯಿಂದಲೂ ೧ನೇ ಕೃಷ್ಣವರ್ಮ ತ್ರಿಪರ್ವತ (ಮೂರುಗೋಡ) ದಿಂದ ಆಡಳಿತ ಆರಂಭಿಸಿದರು.*[೬] ಅಲ್ಲದೇ ಸ್ವತಂತ್ರ ಆಳ್ವಿಕೆಯ ದ್ಯೋತಕವಾಗಿ ಅಶ್ವಮೇಧಯಾಗವನ್ನು ಮಾಡಿದರು. ಇದರಿಂದ ತ್ರಿಪರ್ವತದ ಕದಂಬರು, ಬನವಾಸಿ ಕದಂಬರಿಂದ ಸ್ವತಂತ್ರ ರೆಂದಾಯಿತು. ತ್ರಿಪರ್ವತ (ಮೂರುಗೋಡ) ಕದಂಬರ ಶಾಖೆಯ ಸ್ಥಾಪಕ ೧ನೇ ಕೃಷ್ಣವರ್ಮ ಎಂದಾಯಿತು. ಇವನಿಗೆ ವಿಷ್ಣುವರ್ಮ ಹಾಗು ದೇವವರ್ಮ ಎಂದಿಬ್ಬರು ರಾಜಕುಮಾರರಿದ್ದರು.*[೭] ಇವರಲ್ಲಿ ಜೇಷ್ಟಪುತ್ರನಾದ ವಿಷ್ಣುವರ್ಮ ತಂದೆಯ ನಂತರ ಆಡಳಿತಕ್ಕೆ ಬಂದನು.*[೮]

*ವಿಷ್ಣುವರ್ಮ :* (೪೬೦-೪೯೦) ತ್ರಿಪರ್ವತ ಶಾಖೆಯ ಎರಡನೇ ದೊರೆಯಾಗಿ ಆಡಳಿತ ಮಾಡಿದನು. ಬೆಣ್ಣೆಹಳ್ಳಿ ತಾಮ್ರ ಶಾಸನ ಇವನ ಪಾಂಡಿತ್ಯ, ಆಡಳಿತ ವೈಖರಿಗಳನ್ನು ವರ್ಣಿಸುತ್ತ ವತ್ಸರಾಜ ಇಂದ್ರನೆಂದು ವರ್ಣಿಸಿದೆ. ಅಲ್ಲದೆ ತರ್ಕಶಾಸ್ತ್ರ ಹಾಗೂ ವ್ಯಾಕರಣ ಪಾಂಡಿತ್ಯವನ್ನು ಹೊಂದಿದ್ದಾನೆಯೆಂದು ಹೊಗಳಿವೆ.*[೯]

*ಸಿಂಹವರ್ಮ* (೪೯೦-೫೧೧) ವಿಷ್ಣುವರ್ಮನ ನಂತರ ಸಿಂಹವರ್ಮನು ಆಡಳಿತ ಮಾಡಿದನು. ಇವನ ಕಾಲದಲ್ಲಿ ಬನವಾಸಿ ಕದಂಬ ಶಾಖೆಯಲ್ಲಿ ಹರಿವರ್ಮ ಆಡಳಿತಕ್ಕೆ ಬಂದಿದ್ದು. ಇವನ ನಂತರ ಸಿಂಹವರ್ಮನ ಮಗನಾದ ೨ನೇ ಕೃಷ್ಣ ಆಡಳಿತಕ್ಕೆ ಬಂದ

(೫೧೧-೫೭೦). ಇವನು ತ್ರಿಪರ್ವತ ಆಡಳಿತಕ್ಕೆ ಬಂದಾಗ ಬನವಾಸಿ ಕದಂಬರ ಹರಿವರ್ಮನಿಗೆ ಸಂತಾನವಿರಲಿಲ್ಲ. ಕಾರಣ ಹರಿವರ್ಮನ ನಂತರ ಬನವಾಸಿರಾಜ್ಯವನ್ನು ತ್ರಿಪರ್ವತ ಮುರುಗೋಡ ಕದಂಬರ ೨ನೇ ಕೃಷ್ಣವರ್ಮನು ಆಕ್ರಮಿಸಿಕೊಂಡ*[೧೦] ೨ನೇ ಕೃಷ್ಣವರ್ಮನ ಕದಂಬರ ಮೂಲ ರಾಜಧಾನಿಯಾದ ಬನವಾಸಿಯಿಂದ ಆಡಳಿತ ಆರಂಭಿಸಿ ತ್ರಿಪರ್ವತವನ್ನು (ಮೂರುಗೋಡ)ವನ್ನು ಕೈಬಿಟ್ಟನು. ಮುಂದೆ ಬನವಾಸಿ ರಾಜಧಾನಿಯಾಗಿ ಆಡಳಿತ ಮುಂದುವರೆಯಿತು. ಇಲ್ಲಿಗೆ ತ್ರಿಪರ್ವತ ಮೂರುಗೋಡ ಕದಂಬರಶಾಖೆ ಮುಕ್ತಾಯವಾಯಿತು. ನಂತರದಲ್ಲಿ ಈ ಭಾಗವನ್ನು ಬಾದಾಮಿ ಚಾಲುಕ್ಯರು ಅನಂತರದ ಕಾಲದಲ್ಲಿ ಸೌಂದತ್ತಿ ರಟ್ಟರು ಆಕ್ರಮಿಸಿ ಕಲ್ಯಾಣದ ಚಾಲುಕ್ಯರ ಹಾಗೂ ದೇವಗಿರಿ ಯಾದವರ ಸಾಮಂತರಾಗಿ ೧೩ನೇ ಶತಮಾನದವರೆಗೆ ಆಳಿದರು.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು


*1. Desai. P.B., (1981), *A History of Karnataka,* Dharwad, P-63.
*2. Rev.F.Kittle., (1994), *Kannada-English Dictionary*(6th Ed) Mangalore, (P-6 519)
*3. 1.A.Val.XXI-1972: P-92
*4. J.K.U.Hum IV: P-131
*5. Gopal B.R., (1985), *Corpus of Kadamba Inscriptions*-Sirsi, P-178.
*6. Deai.P.B: *A History of Karnataka,* Dharwad-1981 p-61.
*7. Moraes G.M., (1931), *Kadamba Kula,* Bombay, P-41.
*8. E.C.Vol V : P-121.
*9. Desai P.B., (1981), *A History of Karnataka,* Dharwad, p-64
*10. Gopal B.R., (1985), *Corpus of Kadamba Inscriptions,* Srisi, P-LXIII.

ಎಂ. ಟಿ. ರಮಾಮಣಿ*



# ಶ್ರೀವೈಷ್ಣವ ಕ್ಷೇತ್ರ ಬಿಂಡಿಗನವಿಲೆ

ಮಂಡ್ಯ ಜಿಲ್ಲೆ, ನಾಗಮಂಗಲದ ಪಶ್ಚಿಮಕ್ಕೆ ಸುಮಾರು ೧೯ ಕಿ.ಮೀ. ದೂರದಲ್ಲಿರುವ ಹೋಬಳಿ ಕೇಂದ್ರ ಬಿಂಡಿಗನವಿಲೆ, ಮಯೂರಪುರಿ ಎಂದು ಹೆಸರು ಪಡೆದಿರುವ ಸ್ಥಳ. ಈ ಅರಣ್ಯ ಸ್ಥಳದಲ್ಲಿ ಹಿಂದೆ ಡಿಂಡಿಮವೆಂಬ ಮುಳ್ಳುಗಿಡ ಅಪಾರವಾಗಿ ಬೆಳೆದಿದ್ದು. ಅದನ್ನು ನಿರ್ಮೂಲನಗೊಳಿಸಿದ್ದರಿಂದ ದಿಂಡಿಗನವಿಲೆ ಎಂದೂ ಈ ವನದಲ್ಲಿ ಮಯೂರ ಪಕ್ಷಿಗಳು ಹೇರಳವಾಗಿದ್ದ ಕಾರಣ ಇದಕ್ಕೆ ಮಯೂರಪುರಿ ಎಂದೂ, ಹೆಸರಾಗಿತ್ತು. ಈಗ ಬಿಂಡಿಗನವಿಲೆ ಎಂಬ ನಾಮ ಬಂದಿದೆ ಎಂದು ತಾಳಪತ್ರದಿಂದ ತಿಳಿದು ಬರುತ್ತದೆ.

ಬ್ರಹ್ಮಾಂಡ ಪುರಾಣದ ಮಯೂರಪುರಿ ಮಹಾತ್ಮ್ಯೆಯಲ್ಲಿ ಈ ಸ್ಥಳದ ಉಲ್ಲೇಖವಿದ್ದು ಶ್ರೀಕೃಷ್ಣನು ಧರ್ಮರಾಯನಿಂದ ರಾಜಸೂಯಯಾಗವನ್ನು ಮಾಡಿಸಿದ ಸ್ಥಳ; ದ್ರೌಪದೀ ಸಮೇತರಾಗಿ ಕಶ್ಯಪರ ತಪೋನೆಲೆ; ವೈನತೇಯನ ಜನನ ಸ್ಥಾನ ಎಂದೆಲ್ಲ ಪೌರಾಣಿಕ ಕತೆಗಳಿವೆ. ಇಲ್ಲಿರುವ ಕೇಶವ ದೇವಾಲಯವು ದ್ರಾವಿಡ ಶೈಲಿಯಲ್ಲಿದೆ. ಈ ದೇವಾಲಯದ ಬಾಗಿಲ ಎಡಗಡೆ ಕಂಬದಲ್ಲಿ ಮತ್ತು ಅದೇ ದೇವಾಲಯದ ವೇದಾಂತದೇಶಿಕರ ಗುಡಿಯ ಪಶ್ಚಿಮದ ಕಂಬದಲ್ಲಿ ಶಾಸನಗಳಿವೆ. ಈ ಶಾಸನಗಳಿಂದ ಕೇಶವ ದೇವರಿಗೆ ಸೆಟ್ಟಿಗಳು ಮಾಡಿರುವ ಧರ್ಮ ಕಾರ್ಯಗಳ ಬಗ್ಗೆ ವಿವರಣೆ ಇದೆ. (ಎ.ಕ. ಸಂ. ೪ ರೈಸ್ ಸಂಪುಟ) ಈ ಹಳ್ಳಿಯ ಉತ್ತರದಲ್ಲಿ ಮತ್ತು ಕೆರೆಯದಡದಲ್ಲಿಯೂ ಕ್ರಿ.ಶ. ೧೦೮೯ರ ಶಾಸನಗಳಿವೆ. ಇದು ಹೊಯ್ಸಳರ ಆಳ್ವಿಕೆಯ ಆರಂಭ ಕಾಲಕ್ಕೆ ಸೇರಿದುದಾಗಿದೆ.

ಶ್ರೀ ಮುದ್ರಾಮಾನುಜಾಚಾರ್ಯರು ಕರ್ನಾಟಕದಲ್ಲಿದ್ದಾಗ ಈ ಕ್ಷೇತ್ರಕ್ಕೆ ಭೇಟಿನೀಡಿ ಇಲ್ಲಿ ಶ್ರೀವೈಷ್ಣವರಿಗೆ ಅಗ್ರಹಾರಗಳನ್ನು ಮತ್ತಿತರ ಸೌಲಭ್ಯಗಳನ್ನು ನೀಡಬೇಕೆಂದು ಹೊಯ್ಸಳ ಅರಸ ವಿಷ್ಣುವರ್ಧನನಿಗೆ ಪ್ರೇರಣೆ ನೀಡಿದರಂತೆ. ಅಂತೆಯೇ ವಿಷ್ಣುವರ್ಧನನು ಶ್ರೀವೈಷ್ಣವರಿಗೆ ಅಗ್ರಹಾರಗಳನ್ನು ಕಟ್ಟಿಸಿ ದಾನ ನೀಡಲು ಈ ಸ್ಥಳವು ಅಭಿವೃದ್ಧಿ ಹೊಂದಿತು. ಈ ಕ್ಷೇತ್ರವು ಸುಮಾರು ೧೨೦ ಶ್ರೀವೈಷ್ಣವ ಕುಟುಂಬಗಳಿರುವ ಶ್ರೀ ವೈಷ್ಣವರ ಪಂಚಗ್ರಾಮಗಳಲ್ಲೊಂದಾಗಿದೆ. ಇಲ್ಲಿನ ಪಾಳೇಗಾರರ ಜಗದೇಕರಾಯನು ಈ ಗ್ರಾಮದ ವಿಸ್ತರಣಾ ಕಾರ್ಯವನ್ನು ಮಾಡಿದನು.

ಇಲ್ಲಿನ ಕೇಶವ ದೇಗುಲದಲ್ಲಿ ವಿಷ್ಣುವಿನ ವಾಹನಗಳಿಂದ ಗರುಡ ಮತ್ತು ಆಂಜನೇಯ ಮೂರ್ತಿಗಳನ್ನು ಮರದಲ್ಲಿ ಕೆತ್ತಿ ಕೇಶವಮೂರ್ತಿಯ ಬಲಭಾಗದಲ್ಲಿ ಪ್ರತಿಷ್ಠಾಪಿಸಲಾಯಿತು. ಈ ಮರದ ಮೂರ್ತಿಗಳು ಜೀರ್ಣವಾಗಿ ಶಿಥಿಲಗೊಂಡಿದ್ದರಿಂದ ಇತ್ತೀಚೆಗೆ ಶ್ರೀ ಗಂಧದ ಮರದ ಗರುಡ ಮತ್ತು ಆಂಜನೆಯ ಮೂರ್ತಿಗಳನ್ನು ಕೆತ್ತಿಸಿ ಪ್ರತಿಷ್ಠಾಪಿಸಲಾಗಿದೆ. ಈ ವೈನತೇಯ ಮೂರ್ತಿಯ ಕಣ್ಣುಗಳು ಸಾಲಿಗ್ರಾಮ ಶಿಲೆಯಲ್ಲಿದೆ. ವಿಗ್ರಹದ ಈ ವೈಶಿಷ್ಟ್ಯ ವಿಶೇಷ, ಶಕ್ತಿ ವಿಗ್ರಹವೆಂಬ ಜನನಂಬುಗೆ. ಕಾರಣ ಈ ಮೂರ್ತಿ ಅಂಥ ಆಕರ್ಷಕ ಪ್ರಭಾವ ಬೀರಿದೆ.

ಈ ದೇಗುಲದ ಗರುಡೋತ್ಸವ, ಪ್ರತಿ ವರ್ಷವೂ ಮಾಘ ಮಾಸದಲ್ಲಿ ನಡೆಯುವ ಇಲ್ಲಿಯ ರಥೋತ್ಸವ ಹೆಚ್ಚು ಜನರನ್ನು ಆಕರ್ಷಿಸುತ್ತದೆ. ಇತ್ತೀಚೆಗೆ ಈ ಊರಿನ ಭಕ್ತಾದಿಗಳು ಸೇರಿ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಇಲ್ಲಿನ ಅನೇಕ ಕುಟುಂಬದವರಿಗೆ ವೈನತೇಯ ಕುಲದೈವ. ಮೊದಲ ಕನ್ನಡ ಕಾದಂಬರಿಕಾರ ಬಿ. ವೆಂಕಟಾಚಾರ್ಯರು ಈ ಸ್ಥಳದವರು.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

೧. **ಎಪಿಗ್ರಾಫಿಯ ಕರ್ನಾಟಕ**, ಸಂಪುಟ ೪ ರೈಸ್ ಸಂಪುಟ.
೨. **ಎಂ. ಎ. ಆರ್.**, (೧೯೧೫), ಪುಟ ೨೫. ೨೬.
೩. **ಕನ್ನಡ ವಿಷಯ ವಿಶ್ವಕೋಶ** - ಕನ್ನಡ ಅಧ್ಯಯನ, ಸಂಸ್ಥೆ ಮೈಸೂರು.
೪. **ಶ್ರೀಮಯೂರಪುರಿ ಮಹಾತ್ಮ್ಯೆ**., (೧೯೭೩), ಶ್ರೀ ವೆಂಕಟಾಚಾರ್ಯ ಭಟ್ಟಾರಕ, ಬಿಂಡಿಗನವಿಲೆ.

*ಇತಿಹಾಸ ಉಪನ್ಯಾಸಕ ಬಿ. ಎಸ್. ವಿ. ಪಿ. ಕಾಲೇಜು ವಿಜಯನಗರ, ಬೆಂಗಳೂರು.

ಸಿ. ಮಹದೇವ*

# ಸಂಗಮ ಮನೆತನದ ಮೂಲನೆಲೆ - ಕುರುಗೋಡು

ವಿಜಯನಗರದ ಕುರಿತಂತೆ ಅಧ್ಯಯನಗಳು ಒಂದಿಲ್ಲೊಂದು ರೀತಿಯಲ್ಲಿ ನಡೆಯುತ್ತಲೇ ಇವೆ. ಇದಕ್ಕೆ ಕೊನೆಯೆಂಬುದಿಲ್ಲ. ಇದು ಚರಿತ್ರೆಯ ಗುಣವೂ ಹೌದು. ಈಗಾಗಲೇ ನಾಡಿನ ವಿದ್ವಾಂಸರು ವಿಜಯನಗರ ಚರಿತ್ರೆಯ ವಿವಿಧ ಆಯಾಮಗಳನ್ನು ಕುರಿತು ಆಳವಾದ ಅಧ್ಯಯನ ನಡೆಸಿದ್ದಾರೆ. ಆ ಕಾಲದ ಬೇರೆ, ಬೇರೆ ಮೂಲದ ಸಾಕ್ಷ್ಯಾಧಾರಗಳನ್ನು ಬಳಸಿಕೊಂಡು ಅಧ್ಯಯನಕ್ಕೆ ತೊಡಗುತ್ತಿದ್ದೇವೆ. ಹೀಗೆ ತೊಡಗುವಾಗ ನಮ್ಮ ಜ್ಞಾನ ಸಮಕಾಲೀನ ಅಗತ್ಯತೆಗಳಿಂದ ನಿರ್ಬಂಧಿಸಲ್ಪಟ್ಟಿರುತ್ತದೆ.

ಈ ಹಿನ್ನೆಲೆಯಲ್ಲಿ ಸೃಷ್ಟಿಸುವುದು ಸಂದೇಹಾಸ್ಪದವಾದ ಚರಿತ್ರೆಯನ್ನೆ, ಆದರೂ ಈ ಸಂದೇಹಗಳನ್ನು ಲಭ್ಯವಿರುವ ಮಾಹಿತಿಗಳನ್ನಾಧರಿಸಿ ಹೋಗಲಾಡಿಸುವುದು ನಮ್ಮ ಮುಂದಿರುವ ದೊಡ್ಡ ಜವಾಬ್ದಾರಿ. ಈ ನಿಟ್ಟಿನಲ್ಲಿ ವಿಜಯನಗರ ಸ್ಥಾಪಕರಾದ ಸಂಗಮ ಮನೆತನವನ್ನು ಕುರಿತಂತೆ ಇನ್ನಷ್ಟು ವಿಷಯಗಳನ್ನು ಬೆಳಕಿಗೆ ತರುವುದು, ಅದರಲ್ಲೂ ಅವರ ಮೂಲ ನೆಲೆಯನ್ನು ಗುರುತಿಸುವುದು ಪ್ರಸ್ತುತ ಲೇಖನದ ಉದ್ದೇಶ.

ಈಗಾಗಲೇ ಸಂಗಮ ಮನೆತನದ ಮೂಲ ಪ್ರದೇಶ, ಭಾಷೆ ಮತ್ತು ಜಾತಿಗಳನ್ನು ಕುರಿತಂತೆ ಅನೇಕ ವಿದ್ವತ್ಪೂರ್ಣ ಲೇಖನಗಳು ನಮ್ಮ ಮುಂದಿವೆ. ಸಂಗಮ ಮನೆತನದವರನ್ನು ಕನ್ನಡಿಗರೆಂದು, ತೆಲುಗಿನವರೆಂದು ಆಯಾಯ ಪ್ರದೇಶಗಳ ಚರಿತ್ರೆ ವಿದ್ವಾಂಸರು ತಮ್ಮದೇ ಆದ ವಾದಗಳನ್ನು ಮಂಡಿಸಿದ್ದಾರೆ. ಆದರೆ ಕೊನೆಗೀಗ ಅವರು ಕರ್ನಾಟಕದವರೆಂದು ಹಾಗೂ ಕನ್ನಡ ಭಾಷಿಕರೆಂದು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಇದಕ್ಕೆ ಆಧಾರಗಳಾಗಿ ಶಾಸನಗಳು, ಸಾಹಿತ್ಯಾಧಾರಗಳು, ಮತ್ತು ಕೈಫಿಯತ್ತುಗಳಲ್ಲಿ ಸ್ಪಷ್ಟ ಮಾಹಿತಿಗಳುಂಟು. ಬಹುತೇಕ ವಿದ್ವಾಂಸರು ಹೆಚ್ಚಾಗಿ ಶಾಸನಗಳನ್ನು ಆಶ್ರಯಿಸಿದ್ದಾರೆ. ಶಾಸನಗಳಾದರೂ ನೀಡುವ ಮಾಹಿತಿಗಳಲ್ಲಿ ಏಕರೂಪತೆಯಿಲ್ಲ. ಶಾಸನದ ಮಾಹಿತಿಗಳನ್ನು ಬೆಂಬಲಿಸುವ ಜೊತೆಗೆ ಸಾಹಿತ್ಯದ ಅಥವಾ ಕೈಫಿಯತ್ತಿನ ಮಾಹಿತಿಗಳನ್ನು ಬಳಸಿಕೊಂಡಲ್ಲಿ ಆದಷ್ಟೂ ಸ್ಪಷ್ಟ ಮಾಹಿತಿಯನ್ನು ಈ ಬಗೆಗೆ ಪಡೆಯಲು ಸಾಧ್ಯವಾಗಬಹುದು.

ಸಂಗಮ ಮನೆತನದ ಮೂಲ ಪುರುಷ ಸಂಗಮ. ಈತನು ಕುಮ್ಮಟದ ಕಂಪಿಲದೇವನ ಸೇವೆಯಲ್ಲಿ ಗಣ್ಯ ಸೇನಾನಿಯಾಗಿದ್ದನು (ಕಾಮತ್ ೧೯೯೬ : ೮೧). ವಿಜಯನಗರ ಕಾಲದಲ್ಲಿ ರಚನೆಯಾದ ಕುಮಾರ ರಾಮನ ಸಾಂಗತ್ಯಗಳಲ್ಲಿ ಭಾವಸಂಗಮ ಎಂಬುವನು ಕಂಪಿಲದೇವನ ಅಳಿಯನಾಗಿದ್ದನೆಂದು ತಿಳಿದು ಬರುತ್ತದೆ (ವರದರಾಜರಾವ್ ೧೯೬೬). ಕಂಪಿಲನ ಮಂತ್ರಿ ಬೈಚೆಯನ ಜೊತೆ ಉಲ್ಲೇಖಗೊಂಡಿರುವ ಸಂಗಮ ಸೇನಾನಿಯು ಗಣ್ಯ ವ್ಯಕ್ತಿಯಾಗಿದ್ದು, ಅವನೇ ಹರಿಹರಾದಿ ಸೋದರರ ತಂದೆ ಸಂಗಮನಾಗಿರಬೇಕು ಎಂದು ಅಭಿಪ್ರಾಯಪಡಲಾಗಿದೆ (ಕಾಮತ್ ೧೯೯೬ : ೮೧). ನಂಜುಂಡನ ಕಥನದಲ್ಲಿ, ಹೊಯ್ಸಳ ಬಲ್ಲಾಳನ ವಿರುದ್ಧ ನಡೆದ ಹುಳಿಯೂರಿನ ಯುದ್ಧದಲ್ಲಿ ಭಾವಸಂಗಮನು ಕಂಪಿಲನ ಜೊತೆಯಿದ್ದನು (ವರದರಾಜರಾವ್ ೧೯೬೬ : ೩). ಇದೇ ಯುದ್ಧದಲ್ಲಿ ರಾಮನು ಕಾಟಣ್ಣನ ನೆರವಿಗೆ ಭಾವ ಸಂಗಮನನ್ನು ಕಳುಹಿಸಿದ (ಅದೇ). ನೇಮಿಖಾನನೊಡನೆ ನಡೆದ ಯುದ್ಧದಲ್ಲಿ ರಾಮನ ಜೊತೆ ಭಾವ ಸಂಗಮನಿದ್ದನು (ಅದೇ : ೪೯). ಮುಂದೆ ಕುಮಾರರಾಮನು ನೇಮಿಯ ಜೊತೆ ನಡೆಸಿದ ಯುದ್ಧದಲ್ಲೂ ಭಾವಸಂಗಮ ಭಾಗವಹಿಸಿದ್ದನು (ಅದೇ : ೭೨). ಕುಮಾರರಾಮನು ಚೆಂಡಿನಾಟ ಆಡಲು ಒಂದು ತಂಡಕ್ಕೆ ತನ್ನ ಭಾವನಾದ ಸಂಗಮನನ್ನು ಮುಂದಾಳನ್ನಾಗಿ ನಿಯೋಜಿಸುತ್ತಾನೆ (ವರದರಾಜರಾವ್ ೧೯೬೩ : ೮೭). ಭಾವಸಂಗಮನ ಪಕ್ಷಕ್ಕೆ ಅಳಿಯಪೈಕದವರೆಲ್ಲ ಸೇರಿಕೊಳ್ಳುತ್ತಾರೆ. ಮಾತಂಗಿಯ ಜೊತೆ ನಡೆದ ಕೊನೆಯ ಯುದ್ಧದಲ್ಲಿ ರಾಮನಿಗೆ ಮೊದಲೇ ಭಾವಸಂಗಮ ಹತನಾಗುತ್ತಾನೆ (ವರದರಾಜರಾವ್ ೧೯೬೬ : ೭೭). ಮಹಾಲಿಂಗಸ್ವಾಮಿಯ ಕೃತಿಯಲ್ಲಿ ಈತ ಭಾವಸಂಗಯ್ಯ ಎಂದು ಕರೆಯಲ್ಪಟ್ಟಿದ್ದಾನೆ. ಈತನು ಕುಮಾರರಾಮನ ಸೋದರಿ ಮಾರಮ್ಮನ ಪತಿಯಾಗಿ ಭಾವಸಂಗಮನೆನಿಸಿದ್ದಾನೆ.

ಈ ಭಾವಸಂಗಮನೇ ಹರಿಹರ-ಬುಕ್ಕರ ತಂದೆ ಸಂಗಮನಿರಬಹುದೆಂದು ಅಭಿಪ್ರಾಯ ಪಡಲಾಗಿದೆ (ಶ್ರೀನಿವಾಸ ಜೋಯಿಸ್ : ೮೨). ಆದರೆ ಎಸ್. ಶ್ರೀಕಂಠಯ್ಯ, ರೈಸ್ ಮುಂತಾದವರು ಇದನ್ನು ತಿರಸ್ಕರಿಸುತ್ತಾರೆ (ಕಾಮತ್ ೧೯೯೬ : ೮೨). ಶಾಸನಗಳಲ್ಲಿ ಉಲ್ಲೇಖಿಸಿರುವ ಸಂಗಮನ ಪತ್ನಿಯು ವಿವಿಧ ಹೆಸರುಗಳಲ್ಲಿ (ಶಾರದ, ಮಾಲಾಂಬಿಕಾ, ಗೌರಾಂಬಿಕಾ, ಕಾಮಾಂಬಿಕಾ, ಕಾಮಾಯಿ, ಕಾಮಾಕ್ಷಿ) ನಂಜುಂಡ ಕವಿಯು ಉಲ್ಲೇಖಿಸಿರುವ ಕುಮಾರ ರಾಮನ ಸೋದರಿ ಮಾರಾಂಬೆಯ ಹೆಸರಿಲ್ಲವೆಂದು ಎಸ್. ಶ್ರೀಕಂಠಯ್ಯನವರು ತಿಳಿಸುತ್ತಾರೆ. ಆದರೆ ಸಾಂಗತ್ಯಗಳನ್ನು ಬರೆದದ್ದು, ತುಳುವ ಮನೆತನ ಮತ್ತು ನಂತರದ

* ಪ್ರವಾಚಕ, ಪುರಾತತ್ವ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.

ಕಾಲದಲ್ಲಿ. ಅಲ್ಲದೆ ಸಾಂಗತ್ಯಕಾರರು ಕುಮ್ಮಟದ ನಾಯಕರನ್ನು ಬೇಡರೆಂದು ಚಿತ್ರಿಸಿದ್ದಾರೆ. ಹೀಗಾಗಿ ಇಲ್ಲಿ ಶಿಷ್ಟ ಹೆಸರನ್ನು ಕೈಬಿಟ್ಟು ಮಾರಮ್ಮ ಎಂಬ ಹೆಸರನ್ನೆ ಪ್ರಯೋಗಿಸಿರಬೇಕು. ಶಾಸನಗಳಲ್ಲಿರುವ ಹೆಸರೇ ಸಾಂಗತ್ಯದಲ್ಲೂ ಇರಬೇಕೆಂಬ ನಿಯಮವಿಲ್ಲ. ಸಮಕಾಲೀನ ಒತ್ತಡಗಳಿಗೆ ಒಳಗಾಗಿ ಸಾಂಗತ್ಯಗಳು ರಚನೆಯಾದಂತೆ ಕಂಡುಬರುತ್ತವೆ. ಮತ್ತೊಂದು ರೀತಿಯಲ್ಲಿ ಆಲೋಚಿಸುವುದಾದರೆ, ಸಂಗಮನ ಪತ್ನಿಯ ವಿವಿಧ ಹೆಸರುಗಳನ್ನು ಉಲ್ಲೇಖಿಸುವ ಶಾಸನಗಳು ಕ್ರಿ. ಶ. ೧೩೪೦ರ ನಂತರದವು. ಯಾವ ಹೆಸರು ಅಧಿಕೃತವೆಂದು ಹೇಳಲು ಬರುವುದಿಲ್ಲ. ಜೊತೆಗೆ ಶಾಸನಗಳಲ್ಲಿ ಲಿಖಿತಗೊಳ್ಳುವ ವ್ಯಕ್ತಿನಾಮಗಳು ಸಾಮಾನ್ಯವಾಗಿ ಸಂಸ್ಕೃತೀಕರಣಕ್ಕೆ ಒಳಗಾಗುವ ಸಾಧ್ಯತೆಗಳುಂಟು. ಬಹುಶಃ ಹಾಗಾಗಿ ನಂಜುಂಡ ಕವಿ ಉಲ್ಲೇಖಿಸಿರುವ ಮಾರಾಂಬೆಯನ್ನು ಶಾಸನಗಳಲ್ಲಿ ವಿವಿಧ ಶಿಷ್ಟ ಹೆಸರುಗಳಿಂದ ಕರೆದಿರಬಹುದು. ಒಟ್ಟಿನಲ್ಲಿ ಸಂಗಮನು ಕಂಪಿಲದೇವನ ಅಳಿಯನೆಂಬುದರಲ್ಲಿ ಸಂದೇಹವಿಲ್ಲ.

ಮತ್ತೊಂದು ಮುಖ್ಯವಾದ ವಿಚಾರವೆಂದರೆ ನಂಜುಂಡ ಕವಿ ಹೆಸರಿರುವ ಭಾವಸಂಗಮ ಮತ್ತು ಒಂದನೆಯ ಬುಕ್ಕನ ಕಾಲದ ಎಡತೊರೆ ಶಾಸನದಲ್ಲಿ ಉಲ್ಲೇಖಗೊಂಡಿರುವ ಭಾವ ಸಂಗಮ ಒಬ್ಬನೆ ಎಂದು ಒಪ್ಪಿಕೊಳ್ಳುವುದು. ಶಾಸನದಲ್ಲಿ, ***ಪಂಪಾಪುರಿ ಪರಿಸರ ಭವೇ ಸಂಗಮಾಖ್ಯಃ*** ಎಂದಿದೆ (ಎ.ಕ. : ಎಡತೊರೆ ೪೬). ಅಂದರೆ ಸಂಗಮನು ಪಂಪಾಪುರಿಯ ನೆರೆಹೊರೆಯಿಂದ ಬಂದವನೆಂದು ಖ್ಯಾತ ಇತಿಹಾಸತಜ್ಞರಾದ ದೀಕ್ಷಿತ್ ಅವರು ಪ್ರಸ್ತಾಪಿಸಿದ್ದಾರೆ (ದೀಕ್ಷಿತ್ ೧೯೯೬ : ೫). ಈ ಶಾಸನವನ್ನು ಬಹು ಹಿಂದೆಯೇ ಸಾಲೆತೊರೆಯವರು ತಮ್ಮ ಅಧ್ಯಯನದಲ್ಲಿ ಬಳಸಿಕೊಂಡಿದ್ದಾರೆ. ಆದರೆ ಈ ಮೇಲೆ ಹೇಳಿದ ಸಾಲುಗಳು ಅವರ ಗಮನಕ್ಕೆ ಬಾರದಿರುವುದು ಅಚ್ಚರಿಯಾಗಿದೆ. ಇದನ್ನು ಡಾ. ಪಿ. ಬಿ. ದೇಸಾಯಿಯವರು ವಿದ್ವಾಂಸರ ಗಮನಕ್ಕೆ ತಂದಿದ್ದಾರೆ. ಇದರಿಂದಾಗಿ ವಿಜಯನಗರ ಸ್ಥಾಪಕರ ಮೂಲ ನೆಲೆಯ ಬಗೆಗೆ ಯಾವುದೇ ವಾದ ವಿವಾದಗಳಿಲ್ಲವೆಂದು ದೀಕ್ಷಿತ್ ಅವರ ಅಭಿಪ್ರಾಯ (ಅದೇ). ಅಂದರೆ ಸಂಗಮ ಮನೆತನದವರು ಇಂದಿನ ಹಂಪೆಯ ನೆರೆಹೊರೆಯ ಪ್ರದೇಶದವರೆಂದು ಸ್ಪಷ್ಟಪಡಿಸುತ್ತಾರೆ. ಸೀತಾರಾಮ ಜಾಗೀರುದಾರರು, ಸಂಗಮ ಮನೆತನದವರು ಬಾದಾಮಿ - ಹನ್ಮಕುಂದೆಯ ಕಲ್ಯಾಣ ಚಾಲುಕ್ಯರ ವಂಶಸ್ಥರು ಎಂದು ತಿಳಿಸುತ್ತಾರೆ (ಸೀತಾರಾಮ ೧೯೯೮ : ೯೭). ಸಂಗಮ ಸ್ವತಃ ರಾಜನಾಗಿದ್ದು (ಎ.ಕ. ೯ ಬೇಲೂರು ೨೬೪ : ೨೫೦), ಕರ್ನೂಲು-ಅನಂತಪುರ ಜಿಲ್ಲೆಗಳಲ್ಲಿ ಅವಕ್ಕೆ ಆನಿದ ಉತ್ತರ ಭಾಗದ ಜಿಲ್ಲೆಗಳಲ್ಲಿ ರಾಜ್ಯವಿತ್ತೆನ್ನುವ ಜಾಗೀರುದಾರರು, ಹರಿಹರನ ಮೊದಲ ರಾಜಧಾನಿ ಗುತ್ತಿಯಾಗಿದ್ದು, ಸಂಗಮ ಮನೆತನದವರು ಗುತ್ತಿಯ ಸುತ್ತಮುತ್ತಣ ಪ್ರದೇಶವನ್ನು ಆಳುತ್ತಿದ್ದರು ಎಂದು ತಿಳಿಸುತ್ತಾರೆ. (ಅದೇ : ೯೮, ೧೦೪). ಸಂಗಮನ ತಂದೆ ಬುಕ್ಕಭೂಪನೂ ಸಹ ದೊರೆಯಾಗಿದ್ದನೆಂದು ಚಾಮರಾಜನಗರ ತಾಲೂಕಿನ ಹೊಮ್ಮಗ್ರಾಮದ ಶಾಸನ ತಿಳಿಸುತ್ತದೆ (ಎ.ಕ. ೪ : ಚಾಮರಾಜನಗರ ೧೪೮ : ೯೦-೯೨).

ಈ ಮೇಲಿನ ಮಾಹಿತಿಗಳಿಂದ ಭಾವಸಂಗಮನು ಪಂಪಾಪುರಿ ಅಥವಾ ಇಂದಿನ ಹಂಪೆಯ ಪ್ರದೇಶದವನೆಂಬುದು ಸುಸ್ಪಷ್ಟ. ಅದರಂತೆ ನಂಜುಂಡ ಕವಿ ಹೆಸರಿಸಿರುವ ಕಂಪಿಲನ ಅಳಿಯ ಭಾವಸಂಗಮನು ಸಹ ಇದೇ ಪ್ರದೇಶದವನು. ಹಾಗಾಗಿ ಎಡತೊರೆ ಶಾಸನದ ಭಾವಸಂಗಮ ಮತ್ತು ಕುಮಾರ ರಾಮನ ಸಾಂಗತ್ಯದ ಕಂಪಿಲನ ಅಳಿಯ ಭಾವಸಂಗಮ ಒಬ್ಬನೆ ಆಗಿದ್ದು, ಸಂಗಮ ಮನೆತನದ ಸ್ಥಾಪಕನಾಗಿದ್ದಾನೆ. ಇದಕ್ಕೆ ಪೂರಕವೆಂಬಂತೆ ಭಟ್ಟರಹಳ್ಳಿಯ ಕೈಫಿಯತ್ತಿನಲ್ಲಿ ಕುಮಾರ ರಾಮನಿಗೆ ಕಪ್ಪಕೊಡುತ್ತಿದ್ದ ಹನ್ನೊಂದು ಬೀಡಿನ ಮಂಡಳಿಕರಲ್ಲಿ ಒಬ್ಬನಾದ ಕುರುಗೋಡು ಸಂಗಮನ ಉಲ್ಲೇಖವಿದೆ (ಕಲಬುರ್ಗಿ ೧೯೯೪ : ೪೬೬). ಕುರುಗೋಡು ಇಂದಿನ ಬಳ್ಳಾರಿ ತಾಲೂಕಿನಲ್ಲಿದ್ದು, ಹಂಪೆ ಪ್ರದೇಶದ ವ್ಯಾಪ್ತಿಯಲ್ಲಿಯೇ ಬರುತ್ತದೆ. ಈ ಮಾಹಿತಿಯನ್ನು ಶಾಸನದ ಮಾಹಿತಿಗಳು ಬೆಂಬಲಿಸುತ್ತವೆ. ಅಂದರೆ ಹಂಪೆ ಪರಿಸರದ ಭಾವ ಸಂಗಮನೆ, ಕುರುಗೋಡು ಸಂಗಮನಾಗಿದ್ದಾನೆ. ಈ ಕುರುಗೋಡು ಸಂಗಮನೆ ನಂಜುಂಡ ಕವಿ ತಿಳಿಸುವ ಕಂಪಿಲನ ಅಳಿಯ ಭಾವ ಸಂಗಮನಾಗಿದ್ದಾನೆ. ಹೀಗೆ ಶಾಸನದ ಭಾವಸಂಗಮ, ಕುಮಾರ ರಾಮನ ಸಾಂಗತ್ಯದ ಭಾವಸಂಗಮ ಹಾಗೂ ಕೈಫಿಯತ್ತಿನಲ್ಲಿ ಉಲ್ಲೇಖಗೊಂಡಿರುವ ಕುರುಗೋಡು ಸಂಗಮ ಮೂವರು ಒಬ್ಬನೇ ಸಂಗಮನಾಗಿದ್ದು, ಸಂಗಮ ಮನೆತನದ ಮೂಲ ಪುರುಷ ನೆನಿಸಿದ್ದಾನೆ. ಸಂಗಮ ಮನೆತನದವರು ಗುತ್ತಿಯ ಸುತ್ತಮುತ್ತಣ ಪ್ರದೇಶವನ್ನು ಆಳುತ್ತಿದ್ದರು ಎಂಬ ಜಾಗೀರುದಾರರ ಅಭಿಪ್ರಾಯವು ಸಹ ಕೈಫಿಯತ್ತಿನ ಮಾಹಿತಿಯನ್ನು ಬೆಂಬಲಿಸುತ್ತದೆ. ಅಲ್ಲದೆ ಕುರುಗೋಡು ಗುತ್ತಿಯಿಂದ ಅಷ್ಟೇನು ದೂರ ಪ್ರದೇಶವಲ್ಲ. ಹೀಗಾಗಿ ಸಂಗಮ ಮನೆತನದವರು ಕುರುಗೋಡಿನವರಾಗಿದ್ದು, ಅಚ್ಚ ಕನ್ನಡಿಗರಾಗಿದ್ದಾರೆ.

ಸಂಗಮ ಮನೆತನದವರು, ಬಳ್ಳಾರಿ ಜಿಲ್ಲೆಯ ಕುರುಗೋಡಿನವರೆಂದು ಗುರುತಿಸುವುದೇ ಪ್ರಸ್ತುತ ಸಂಶೋಧನ ಲೇಖನದ ಮುಖ್ಯ ಉದ್ದೇಶ. ಸಂಗಮನು ಈ ಪ್ರದೇಶದವನಾದ್ದರಿಂದಲೇ; ಆತನ ಮಕ್ಕಳು ಈ ಭಾಗದಲ್ಲಿ ಜನರ ಪ್ರೀತಿ ವಿಶ್ವಾಸ ಗಳಿಸಿ, ವಿಜಯನಗರ ರಾಜ್ಯ ಸ್ಥಾಪನೆ ಮಾಡಲು ಸಾಧ್ಯವಾಯಿತು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ಸೂರ್ಯನಾಥ ಕಾಮತ್., (೧೯೯೬), "ಕುಮಾರ ರಾಮ ಮತ್ತು ಸಂಗಮವಂಶ", **ವಿಜಯನಗರ ಅಧ್ಯಯನ** : ಸಂಪುಟ-೧ ಡಾ. ಡಿ. ವಿ. ದೇವರಾಜ್ ಮತ್ತು ಡಾ. ಚನ್ನಬಸಪ್ಪ ಎಸ್, ಪಾಟೀಲ್ (ಸಂ) ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು.

*೨. ವರದರಾಜರಾವ್., (೧೯೬೬), **ಕುಮಾರ ರಾಮನ ಸಾಂಗತ್ಯಗಳು**, ಮೈಸೂರು.

*೩. ಶ್ರೀನಿವಾಸ ಜೋಯಿಸ್ ಹುಲ್ಲೂರು : **ಕುಮಾರ ರಾಮನ ಸಾಂಗತ್ಯಗಳು**, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ. ೨೬, ೧, ಕಸಾಪ ಬೆಂಗಳೂರು.

*೪. ವರದರಾಜರಾವ್., ಜಿ, (೧೯೬೩)., **ಕುಮ್ಮಟ ಕೇಸರಿ**, ಉಷಾ ಸಾಹಿತ್ಯ ಮಾಲೆ, ಮೈಸೂರು.

*೫. ಎಫಿಗ್ರಾಫಿಯಾ ಕರ್ನಾಟಕ ಸಂಪುಟ :

*೬. Dikshi G. S., (1996), Key Note Address By G. S. Dikshit, Hampi, Vijayanagara History Seminor, February 9, 10, 11, 1996, Hampi.

*೭. ಮಹದೇವ ಸಿ., (೧೯೯೬)., ಚರಿತ್ರೆ ಭಾಗ (ಕರ್ನಾಟಕದಲ್ಲಿ ಕುಮಾರ ರಾಮನ ಪಂಥ), ಅಪ್ರಕಟಿತ ಯೋಜನೆ, ಕನ್ನಡ ವಿ. ವಿ. ಹಂಪಿ, ವಿದ್ಯಾರಣ್ಯ.

*೮. ಸೀತಾರಾಮ್ ಜಾಗೀರ್‌ದಾರ್., (೧೯೯೮), : "ವಿಜಯನಗರದ ಮೂಲ ಚೂಲಗಳು" **ವಿಜಯನಗರ ಅಧ್ಯಯನ**, ಸಂಪುಟ-೩, ಶಿವಶಂಕರ ಎಂ. ಎಲ್. ಮತ್ತು ಚನ್ನಬಸಪ್ಪ ಎಸ್. ಪಾಟೀಲ್ (ಸಂ), ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

*೯. ಕಲಬುರ್ಗಿ ಎಂ. ಎಂ. (ಸಂ)., (೧೯೯೪), **ಕರ್ನಾಟಕದ ಕೈಫಿಯತ್ತುಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಿ. ಎಸ್. ರಾಮಭಟ್ಟ*

# ಆನಂದಾಪುರ ಒಂದು ಚಾರಿತ್ರಿಕ ನೆಲೆ

ಆನಂದಪುರವು ಶಿವಮೊಗ್ಗ ಜೋಗದ ಮಾರ್ಗದಲ್ಲಿ ಶಿವಮೊಗ್ಗದಿಂದ ಸು. ೫೦ ಕಿ.ಮೀ. ದೂರದ ಸಾಗರ ತಾಲೂಕಿನ ಒಂದು ಗ್ರಾಮವಾಗಿದೆ. ಒಂದು ಸ್ಥಳಕ್ಕೆ ಬೇರೆ ಬೇರೆ ಹೆಸರುಗಳಿರುವಂತೆ ಆನಂದಪುರಕ್ಕೆ*[೧] ಅಂತರಾಸಿಪುರ*[೨] ಆನಂದೂರು*[೩] ಅನಂತಪುರ*[೪] ಔಷಧಪುರ*[೫] ಎಂಬ ಹೆಸರುಗಳಿತ್ತು. ಈ ಆನಂದಪುರದೊಂದಿಗೆ ಇನ್ನೂ ಮೂರು ಅಗ್ರಹಾರಗಳು ಸೇರಿಕೊಂಡಿರುವುದು ಗಮನಾರ್ಹವಾಗಿದೆ.

*ಚಾರಿತ್ರಿಕ ಹಿನ್ನೆಲೆ :* ದೇವರದಾಸಿಮಯ್ಯನ ಶಿಷ್ಯನಾಗಿದ್ದ ಕಲ್ಯಾಣಿ ಚಾಲುಕ್ಯರ ಇಮ್ಮಡಿ ಜಯಸಿಂಹ (೧೦೧೫-೧೦೪೨)ನ ಸಾಮಂತ ಮಾಚಿರಾಜನು ಆನಂದಪುರದ ನೆರೆಯ ಅಂದಾಸುರದಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸಿದನು. ಬನವಾಸಿನಾಡಿನ ರಾಜ್ಯಪಾಲ ಬಿಜ್ಜಳನ ತಮ್ಮ ಸಾಮಂತ ಗೋನರಸನು ಆಚಾಪುರದಲ್ಲಿ ಅಗ್ರಹಾರವನ್ನು ನಿರ್ಮಿಸಿದನು. ಇದನ್ನು ಇಲ್ಲಿರುವ ಶಾಸನದಲ್ಲಿ ಪ್ರಸ್ತಾಪಿಸಿದೆ.*[೬] ಆನಂದಪುರಕ್ಕೆ ಹೊಂದಿಕೊಂಡ ಮಲಂದೂರು ಅಗ್ರಹಾರಕ್ಕೆ ಕಲ್ಯಾಣಿ ಚಾಲುಕ್ಯರ ಮೊದಲನೆಯ ಸೋಮೇಶ್ವರನು ದಾನದತ್ತಿಗಳನ್ನು ನೀಡಿದ್ದಾನೆ. ಆ ಚಾಪುರತೀರ್ಥ ಸ್ಥಾನದಲ್ಲಿದ್ದ ಅನಂತಶಿವಪಂಡಿತರಿಂದ ಆನಂದೂರಿಗೆ 'ಅನಂತಪುರ' ಎಂಬ ಹೆಸರು ಬಂದಿತೆಂದು ತಿಳಿಯುತ್ತದೆ.*[೭]

ಆನಂದೂರು ಮತ್ತು ಇದರ ಸುತ್ತಲಿನ ಪ್ರಕೃತಿ ಸಂಪತ್ತನ್ನು ಇನ್ನಷ್ಟು ಶ್ರೀಮಂತಗೊಳಿಸಿದವನು ಬಿಜಲಿರಸ ಮಹಾಮಂಡಳೇಶ್ವರನ ತಮ್ಮನಾದ ಗೋನರಸ. ೧೧ನೇ ಶತಮಾನವಾದ ಇವನ ಕಾಲದ ಸಂಪದ್ಭರಿತವಾದ ರಾಜ್ಯ ಹಾಗೂ ಅಗ್ರಹಾರಗಳನ್ನು ಕುರಿತು :

*ತೃಣಕಾಷ್ಠಜಳಸಮೃದ್ಧಂ*
*ಪ್ರಣವಾಲ .... ಕವೇದ ಶಾಸ್ತ್ರಂಗಳ ಭೂ*
*ಷಣ ಮಾಗೆ ಪಲಬರುಂ ಬ್ರಾ*
*ಹ್ಮಣರಿರ್ಪಲ್ಲೋಕ ಪೂಜ್ಯರರು ಕಾರುಣದಿಂ*

ಎಂದು ಹೇಳಿ ಈ ನಾಡಿನ ಎಲ್ಲ ಅಗ್ರಹಾರಗಳ ಬ್ರಾಹ್ಮಣರು ಮಹಾ ವಿದ್ವಾಂಸರು ಮತ್ತು ಲೋಕಪೂಜ್ಯರೆಂದು ಹೇಳಿದೆ. ಗೋನರಸನು ಸಮರ್ಥ ಆಡಳಿತಗಾರ ಮಹಾದಾನಿ.

*ಕಟ್ಟಿಸಿದಂ ಕೆರೆಯಂ ಮೋ*
*ರಿಟ್ಟಿಗೆ ಯೆತ್ತರ್ದವಾಡಿನಾಡೊಳಗೀಗಳ್*
*ಕಟ್ಟಿಕೆರೆ ಬಾವಿ ದೇಗುಲ*
*ಮಟ್ಟಾರವೆ ತೋರ್ಪುವು ಗೋನನೃಪಾಳಕನಂ*

ಎಂದು ಆಚಾಪುರದಲ್ಲಿ ನಿಂತಿರುವ ಶಾಸನವೊಂದು ಉಲ್ಲೇಖಿಸಿದೆ. ಇವನ ಕಾಲದಲ್ಲಿ ಇಟ್ಟಿಗೆಯಲ್ಲಿ ಕಟ್ಟಿಸಿದ ಕೆಲವು ಪುಟ್ಟ ದೇವಾಲಯಗಳು ಶಿಥಿಲಾವಸ್ಥೆಯಲ್ಲಿ ಈಗಲೂ ಕಂಡು ಬಂದಿವೆ. ಆನಂದೂರು ಹಾಗು ಸುತ್ತಮುತ್ತಲಿನ ವಿಶಾಲವಾದ ಕೆರೆಗಳು ಹಲವಾರು ಕೊಳಗಳೂ ಹಾಗೂ ಇದಕ್ಕೆ ಕಟ್ಟಿಸಿದ ಪಾವಟಿಗೆಗಳನ್ನೂ ಈಗಲೂ ನೋಡಬಹುದು. ಸ್ಥಳೀಯವಾಗಿ ದೊರೆಯುವ ಜಂಬಿಟ್ಟಿಗೆಯಿಂದ ಬಹು ಭದ್ರವಾದ ಕಟ್ಟಡಗಳನ್ನು ಕಟ್ಟಲಾಗಿದೆ. ಅಲ್ಲಲ್ಲಿ ಪಾಳು ಬಾವಿಗಳೂ ಕಂಡುಬರುತ್ತವೆ. ಈ ನಾಡಿಗೆ ತರ್ದವಾಡಿ ಎಂಬ ಹೆಸರನ್ನು ಸೂಚಿಸಿದೆ.

ಪೊಂಬುಚದ ಪಂಚಬಸದಿಯ ಶಾಸನದಲ್ಲಿ ಮೊಟ್ಟಮೊದಲ ಬಾರಿ ಆನಂದಪುರಕ್ಕೆ 'ಆನಂದೂರು' ಎಂದು ಉಲ್ಲೇಖಿಸಿದೆ. ಇದರಲ್ಲಿ ಪೊಂಬುಚದ ಶಾಂತರ ದೊರೆಯಾಗಿದ್ದ ಭುಜಬಳ *ಶಾಂತರ ದೇವಂ, ಕೊಟ್ಟ ಗ್ರಾಮಂಗಳ್*[೮]* ಎಂದೂ, ಇಲ್ಲಿಯ ಇನ್ನೊಂದು ಶಾಸನದಲ್ಲಿ ನಾಡರಸಂ ರಣವಿಕ್ರಮ ಮ್ವಾಣೆಯಕ್ಕನ *ಬಸದಿಗೆ ಬದರಿನಾಡು ನನ್ದುಪ್ಪನ್ನೆರಡ ವಣ್ಣ ತಮ್ಮ ಬಾಣಸಿಗೆಯ ಬಯಂ ಕೊಟ್ಟು....*[೯] ಎಂದು ಹೇಳಿದೆ. ಇದರಿಂದ ಆನಂದೂರು ಸಹ ಒಂದು ಅಗ್ರಹಾರವಾಗಿ ಅಂದಾಸುರ, ಆಚಾವುರ ಮತ್ತು ಮಲಂದೂರು ಅಗ್ರಹಾರಗಳೊಂದಿಗೆ ಸೇರಿಕೊಂಡಿದೆ. ಆದರೆ ಈ ಅಗ್ರಹಾರವನ್ನು ಯಾರು ಯಾವ ಕಾಲದಲ್ಲಿ ಸ್ಥಾಪಿಸಿದರೆಂದು ತಿಳಿಯುವುದಿಲ್ಲ. ಬಹುಶಃ ಇದೂ ಸಹ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿಯೇ ನಿರ್ಮಾಣ ವಾಗಿರಬಹುದು.

ಶಾಸನೋಕ್ತ ಬದರಿ ಮತ್ತು ರಾವ ಎಂಬುದು ನಾಡಿನ ಹೆಸರುಗಳಾಗಿರಬಹುದು. ಇದರಂತೆ ಪಂಚ ಬಸದಿ ಶಾಸನಗಳಲ್ಲೆ ಕುಕ್ಕಸನಾಡು*[೧೦] ಮತ್ತು ಬಲಕನಾಡು ಮುಂತಾದ ಹೆಸರುಗಳಿವೆ. ಈ ಹೆಸರುಗಳ ಹಿನ್ನೆಲೆಯನ್ನು ಶೋಧಿಸಬೇಕಾಗಿದೆ.

ಬಸದಿಗಳು : ಪೊಂಬುಚದ ಸಾಂತರಸರ ಕಾಲದಲ್ಲಿ ಪೊಂಬುಚದ ಅರಸುಕುಲದ ಚಟ್ಟಲೆ ಮತ್ತು ಅವಳ ಸಾಕು ಮಗ ತ್ರಿಭುವನ ಮಲ್ಲ ಸಾಂತರನು ಸೇರಿ ಬೀರಬ್ಬರಸಿ (ಕೆಂಚಲದೇವಿ)ಗೆ ಪರೋಕ್ಷ ವಿನಯವಾಗಿ ಆನಂದೂರಿನಲ್ಲಿ ಒಂದು ಬಸದಿಯನ್ನು ಕಟ್ಟಿಸಿದರು. ಇದು ವೊಂಬುಚದ ಪಂಚಬಸದಿಗೆ ಅಧೀನವಾಗಿತ್ತು.*[೧೧] ಈ ಬಸದಿಗೆ ವಾದಿಘರಟ್ಟ ಅಜಿತಸೇನಪಂಡಿತರ ಹೆಸರಿನಲ್ಲಿ ಕೆಸರುಗಲ್ಲು ಇಕ್ಕಿಸಿದರು.

*(ನಿ) ಉಪನ್ಯಾಸಕ, 'ಪದ್ಮಶ್ರೀ' ೧೩೮ ಇ., ೩ನೇ ಕ್ರಾಸ್, ಗೋಪಾಲಗೌಡ ಬಡಾವಣೆ, ಗೋಪಾಳ, ಶಿವಮೊಗ್ಗ-೫೭೭ ೨೦೧.

ಚಟ್ಟಲೆಯು ಪೊಂಬುಚದ ದೊರೆ ವೀರ ಶಾನ್ತರನ ಪತ್ನಿ ಕೆಂಚಲದೇವಿಯ ಅಕ್ಕ. ಕೆಂಚಲದೇವಿಯು ಮರಣ ಹೊಂದಿದಾಗ ಅವಳ ನಾಲ್ಕು ಪುಟ್ಟ ಮಕ್ಕಳನ್ನು ಸಾಕಿದವಳು ಚಟ್ಟಲೆ. ಅಲ್ಲದೆ ಕ್ರಿ.ಶ. ೧೦೭೧ರಲ್ಲಿ ಚಟ್ಟಲೆಯು ತನ್ನ ತಂಗಿಗೆ ಪರೋಕ್ಷ ವಿನಯವಾಗಿ ಪಂಚಬಸದಿಯನ್ನು ಕಟ್ಟಿಸಿದಳು. ಹೀಗಿದ್ದರೂ ಪುನಃ ಆನಂದೂರಿನಲ್ಲಿ ಇನ್ನೊಂದು ಬಸದಿಯನ್ನೂ ಯಾಕೆ ಕಟ್ಟಿಸದಳೆಂದು ತಿಳಿದಿಲ್ಲ.

ಪೊಂಬುಚದ ಅರಮನೆಯಲ್ಲಿದ್ದ ಸಾವಿಯಬ್ಬೆಯು ತೊಲಾಪುರುಷ ಶಾನ್ತರನ ಬಳಿಯಾಕೆ ಅಥವಾ ಅವನ ಉಪಪತ್ನಿ*೧೩ ಹಾಗೂ ಅರಮನೆಯ ಅಡಿಗೆಯವಳು. ಇವಳ ಮಗಳೇ ಪಾಣಿಯಕ್ಕ. ಪಾಣಿಯಕ್ಕಳು ಪೊಂಬುಚದಲ್ಲಿ ಕಟ್ಟಿಸಿದ ಬಸದಿಯ ನಿರ್ವಹಣೆಗೆ ಭುಜಬಲಶಾನ್ತರನು ಆನಂದೂರನ್ನು ದತ್ತಿಯಾಗಿ ನೀಡಿದನು. ಇದರಿಂದ ಆನಂದೂರಿನಲ್ಲಿ ಕಟ್ಟಿಸಿದ್ದ ಬಸದಿಯ ನಿರ್ವಹಣೆಯು ಪೊಂಬುಚದ ಪಂಚ ಬಸದಿಯ ಉತ್ಪನ್ನದಿಂದಲೇ ನಡಿಯಬೇಕಾಯಿತು. ಪ್ರಸ್ತುತ ಆನಂದಪುರದಲ್ಲಿ ಬಸದಿಯು ಉಳಿದಿಲ್ಲ. ಆನಂದೂರು ಅಗ್ರಹಾರದಲ್ಲಿ ಪಾಣಿಯಕ್ಕಳು ಕಟ್ಟಿಸಿದ ಬಸದಿಯ ನಿರ್ವಹಣೆಗೆ ಆನಂದೂರನ್ನು ನೀಡಿದ್ದರಿಂದ ಅಗ್ರಹಾರದ ಅಸ್ತಿತ್ವಕ್ಕೆ ತೊಂದರೆಯಾಯಿತು. ಇದರಿಂದ ಈ ಗ್ರಾಮದ ಜಮೀನನ್ನು ವಿಭಾಗಿಸಿ ಅಗ್ರಹಾರದವರಿಗೆ ಪ್ರತ್ಯೇಕ ವೃತ್ತಿಯನ್ನು ಹಾಕಿಸಿಕೊಟ್ಟಿರಬೇಕು. ಅಲ್ಲದೆ ಈ ಎಲ್ಲ ವೈದಿಕರು ವಾಸಿಸುತ್ತಿದ್ದ ಸ್ಥಳಕ್ಕೆ 'ಔಷಧಪುರ' ಎಂದು ಹೆಸರಿಟ್ಟ ಸಂಭವವಿದೆ*೧೪

***ಇತಿಹಾಸದ ಪುಟಗಳಲ್ಲಿ***

ಪೊಂಬುಚದ ಸಾಂತರಸರ ಆಡಳಿತ ಕಾಲದಲ್ಲಿ ಆನಂದೂರು - ೧೨ ಮತ್ತು ಇದಕ್ಕೆ ಹೊಂದಿಕೊಂಡ ಅಂದಾಸುರ-೧೨ ಎಂಬ ಎರಡು ಪ್ರತ್ಯೇಕ ಆಡಳಿತ ಘಟಕಗಳಿದ್ದವು. ಆನಂದೂರು ಒಂದು ಆಡಳಿತ ಘಟಕವಾಗಿದ್ದ ಕಾರಣ ಪ್ರಾಯಶಃ ಅಲ್ಲೊಂದು ಬಸದಿಯನ್ನು ಕಟ್ಟಿಸಿದ್ದ ಸಾಧ್ಯತೆಯಿದೆ. ಸಾಂತರರು ಮತ್ತು ಹೊಯ್ಸಳರ ನಂತರ ಆನಂದೂರಿನ ಇತಿಹಾಸವು ಅಜ್ಞಾತವಾಗಿದ್ದು ವಿಜಯನಗರ ಕಾಲದ ಒಂದು ಶಾಸನವು ಮಾತ್ರ ಲಭ್ಯವಿದೆ. ಆದರೆ ಕೆಳದಿ ಅರಸರ ಕಾಲದ ಚಾರಿತ್ರಿಕ ಪುರಾವೆಗಳು ಸಿಗುತ್ತವೆ. ಕೆಳದಿಯ ದೊರೆ ಹಿರಿಯ ವೆಂಕಟಪ್ಪನಾಯಕ (೧೫೮೬-೧೬೩೦)ನು ಕಿರಾತರ ವಶದಲ್ಲಿದ್ದ ಹರತಾಳು ಮತ್ತು ಎಡೆಹಳ್ಳಿಯನ್ನು ವಶಪಡಿಸಿಕೊಂಡು ಎಡೆಹಳ್ಳಿಗೆ 'ಆನಂದಪುರ' ಎಂದು ಹೆಸರಿಟ್ಟನೆಂದು ಕೆಳದಿ ನೃಪವಿಜಯದಲ್ಲಿದೆ.*೧೫ ಅಲ್ಲದೆ ಎಡೆಹಳ್ಳಿಯಲ್ಲಿದ್ದ ಕೋಟೆಯನ್ನು ಬಲಪಡಿಸಿದನು. ಇದರ ಒಳಗೆ ತಾಂಡವೇಶ್ವರ ಮೂರ್ತಿಯನ್ನು ಪ್ರತಿಷ್ಠೆ ಮಾಡಿ ಅಲ್ಲಿ ಒಂದು ಸುಂದರವಾದ ಅರಮನೆಯನ್ನು ಕಟ್ಟಿಸಿ ಬಾವಿ, ಕೆರೆ, ಕೊಳ ಮತ್ತು ತೋಟವನ್ನು ನಿರ್ಮಾಣ ಮಾಡಿಸಿದನು. ಇಕ್ಕೇರಿಯಿಂದ ಆನಂದ ಪುರಕ್ಕೆ ರಾಜಮಾರ್ಗವನ್ನು ಮಾಡಿಸಿ ಕುದುರೆ ಮೆರವಣಿಗೆಯನ್ನು (ಪ್ರಾಯಶಃ ಕುದುರೆ ಗಾಡಿ ಸಂಚಾರ) ಏರ್ಪಡಿಸಿದನೆಂದು ಇದೇ ಗ್ರಂಥದಲ್ಲಿದೆ.*೧೬

ಕೆಳದಿ ಬಸಪ್ಪನಾಯಕನ ಕಾಲದಲ್ಲಿ (೧೬೯೮-೧೭೧೫) ಶೇಖಕುಂಟ ಎಂಬುವನು ಆನಂದಪುರದ ಸುತ್ತಮುತ್ತಲೂ ಭಾರಿ ಹಾವಳಿ ಮಾಡುತ್ತಿದ್ದನು. ಇವನನ್ನು ಹಿಡಿದು ಕೊಲ್ಲಲ್ಲಾಯಿತು.*೧೭ ೧೭೮೦ರಲ್ಲಿ ಇಂಗ್ಲಿಷ್ ಸೇನಾಪತಿ ಜನರಲ್ ಮ್ಯಾಥುಸನು ಬಿದನೂರು ನಗರ ಮತ್ತು ಆನಂದಪುರವನ್ನು ವಶಪಡಿಸಿ ಕೊಂಡಿದ್ದನು. ಟೀಪುಸುಲ್ತಾನನು ಇವನನ್ನು ಸೋಲಿಸಿ ಪುನಃ ಇವೆರಡು ಪಟ್ಟಣಗಳನ್ನು ವಶಪಡಿಸಿಕೊಂಡನು.*೧೮

೧೮೩೦ ರಿಂದ ೧೮೩೧ರ ವರೆಗೆ ಬೂದಿಬಸಪ್ಪ ನಾಯಕನ ನೇತೃತ್ವದಲ್ಲಿ ರೈತರ ಚಳವಳಿ ನಡೆಯಿತು. ಆನಂದಪುರದ ಬಳಿಯ ಹೊಸಂತೆಯಲ್ಲಿ ನಡೆದ ಬೃಹತ್ ರೈತರ ಸಮಾವೇಶದಲ್ಲಿ ರೈತರ ಚಳವಳಿಯು ನಿರ್ದಿಷ್ಟ ಕಾರ್ಯಕ್ರಮಗಳನ್ನು ರೂಪಿಸ ಲಾಯಿತು. ನಗರ ಪ್ರಾಂತ್ಯದ ರೈತರ ಬಂಡಾಯ ಎಂದು ಕರೆದಿರುವ ಈ ಹೋರಾಟದಲ್ಲಿ ಬ್ರಿಟಿಷರು ಅತ್ಯಧಿಕ ಸಂಖ್ಯೆಯಲ್ಲಿ ರೈತರನ್ನು ಗುಂಡಿಕ್ಕಿ ಕೊಂದರು. ಆನಂದಪುರದ ಹೋರಾಟದಲ್ಲಿ ರೈತರ ನಾಯಕ ಅಣ್ಣಪ್ಪನು ಪಾಲ್ಗೊಂಡಿದ್ದನು. ರಾಜ್ಯಾದ್ಯಂತ ವ್ಯಾಪಿಸಿದ ಈ ಚಳವಳಿಯ ಫಲವಾಗಿ ಮೈಸೂರು ಸಂಸ್ಥಾನದ ಆಡಳಿತವನ್ನು ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಬ್ರಿಟಿಶರು ತಾವೇ ವಹಿಸಿಕೊಂಡರು.*೧೯

ಇಂದಿನ ಆನಂದಪುರದಲ್ಲಿರುವ ವಿಶಾಲವಾದ ಎರಡು ಕೆರೆಗಳು ಪ್ರಾಯಶಃ ಚಾಲುಕ್ಯರ ಕಾಲದಲ್ಲಿ ಕ್ರಿ. ಶ. ಸು. ೧೧ನೆಯ ಶತಮಾನದಲ್ಲಿ ನಿರ್ಮಾಣವಾಗಿರಬಹುದು. ರೈಲ್ವೆ ಸ್ಟೇಷನ್ನಿನ ಬಳಿಯಲ್ಲಿ ಕೆಳದಿ ಅರಸರ ಕಾಲದ ಕೋಟೆಯ ಅವಶೇಷವಿದೆ. ಇಲ್ಲಿ ಕೋಟೆಯ ಬಾಗಿಲು ಮತ್ತು ಬತೇರಿಯ ಪಾಳು ಸ್ಥಳವಿದೆ. ಕೋಟೆಯ ವಿಶಾಲತೆ ತಿಳಿಯುವುದಿಲ್ಲ. ಇಂದಿನ ಕಾಂತಿ ಸಿದ್ದೇಶ್ವರ ಗುಡಿಯು ಅಂದಿನ ತಾಂಡವೇಶ್ವರ ದೇವಾಲಯವಾಗಿದ್ದಿರ ಬಹುದು. ಆಂಜನೇಯ ಗುಡಿಯು ಅಂದಿನ ಕೋಟೆಯ ಬಾಗಿಲಲ್ಲಿತ್ತು.

***ಧಾರ್ಮಿಕ*** : ಆನಂದಪುರದ ಇಂದಿನ ರಂಗನಾಥ ಸ್ವಾಮಿ ದೇವಾಲಯದ ಶಾಸನವು ಐತಿಹಾಸಿಕ ಮಹತ್ವ ಪಡೆದಿದೆ.*೨೦ ಈ ದೇವಾಲಯದ ವಿಷ್ಣುಮೂರ್ತಿಯನ್ನು ಬನವಾಸಿಯ ಆದಿ ಮಾಧವ ದೇವನೆಂದು ಸ್ತುತಿಸಿದೆ. ಅಲ್ಲದೆ ಜಯಂತೀ ಪುರವರಾಧೀಶ್ವರ ಎಂದೂ ಕರೆದಿದೆ. ಕದಂಬರ ರಾಜಧಾನಿಯಾಗಿದ್ದ ಬನವಾಸಿಯೇ ಜಯಂತಿಪುರ.*೨೧ ಇಲ್ಲಿರುವ ಮಧುಕೇಶ್ವರ ದೇವಾಲಯದ ಈಶಾನ್ಯ ಮೂಲೆಯಲ್ಲಿ ಆದಿಮಾಧವನೆಂಬ ವಿಷ್ಣು ಮೂರ್ತಿಯಿದೆ. ಈ ಮೂರ್ತಿಯು ಕ್ರಿ. ಶ. ೯ನೆಯ ಶತಮಾನದ ಆದಿಭಾಗದ ಶಿಲ್ಪವೆಂದು ಅಭಿಪ್ರಾಯವಿದೆ. ಮಾಧವನ

ಎಡಬಲಗಳಲ್ಲಿ ಸರಸ್ವತಿ ಮತ್ತು ಲಕ್ಷ್ಮಿಯ ಮೂರ್ತಿಗಳಿವೆ. ಎದುರಿನಲ್ಲಿ ನಮಸ್ಕರಿಸುತ್ತಿರುವ ಗರುಡನ ಶಿಲ್ಪವಿದೆ. ವಿಷ್ಣುವಿನ ನಾಭಿಕಮಲದಲ್ಲಿದ್ದ ಬ್ರಹ್ಮನಿಂದ ವೇದಗಳನ್ನು ಕಸಿದುಕೊಂಡು ಹೋದ ಮಧು ಮತ್ತು ಕೈಟಭ ಎಂಬ ರಾಕ್ಷಸರನ್ನು ದೇವಿಯ ಸೂಚನೆಯಂತೆ ವಿಷ್ಣುವು ಸಂಹಾರ ಮಾಡಿದ. ಇದರಿಂದ ಮಾಧವನ ಮೂರ್ತಿಯೊಂದಿಗೆ ಲಕ್ಷ್ಮಿಯ ಮೂರ್ತಿಯನ್ನೂ ಪ್ರತಿಷ್ಠಾಪಿಸಿದೆ.

ಆನಂದಪುರದಲ್ಲಿರುವ ಈ ದೇವಾಲಯದ ಮೂರ್ತಿಯನ್ನು ಶ್ರೀಜಯಂತಿ ಪುರವರಾಧೀಶ್ವರ ಶ್ರೀ ಮಹಾಲಕ್ಷ್ಮಿ ಕುಚ ಕುಂಕುಮ ಲೋಲ ××× ಮನೋವಲ್ಲಭಜಾಲ, ಇತ್ಯಾದಿ ಸ್ತುತಿಸಿ ಮಾಧವನಿಗೆ ಹೋಲಿಸಲಾಗಿದೆ. ಇದೇ ಮೂರ್ತಿಯ ಪಕ್ಕದಲ್ಲಿ ಶ್ರೀಲಕ್ಷ್ಮಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದೆ. ಈ ಸ್ತುತಿಯು ದೇವಾಲಯದ ಪ್ರಾಚೀನತೆಗೆ ಸಂಕೇತವಾಗಿರಬಹುದು.

ಪ್ರಸ್ತುತ ಈ ದೇವಾಲಯದ ಮೂರ್ತಿಯನ್ನು ಶ್ರೀ ರಂಗನಾಥ ಸ್ವಾಮಿ ಎಂದು ಕರೆಯಲಾಗುತ್ತಿದೆ. ಆದರೆ ಶಾಸನದಲ್ಲಿ ಮಾತ್ರ ಇದನ್ನು 'ತಿರುವೆಂಗಳನಾಥ' ಎಂದು ಹೇಳಿದೆ. ಮಲೆನಾಡಿನ ಈ ಪ್ರದೇಶದಲ್ಲಿ ಈ ಹೆಸರಿನ ದೇವಾಲಯ ಇನ್ನೆಲ್ಲಿಯೂ ಕಂಡುಬಂದಿಲ್ಲ. ಈ ದೇವಾಲಯಕ್ಕೆ ×× ಜಯಕೊಪದ ಕಲ್ಲಪ್ಪನಾಯಕನ ಕುಮಾರ ಚಿಕಣನಾಯಕರು ತಮ್ಮ ನಾಯಕತನಕೆ ಸಲುವ ಹೊಸಗುಂದದ ಸೀಮೆಯ ಒಳಗಣ ಕೋಟಿಸೆಟ್ಟಿಕೊಪ್ಪ ×× ಮತ್ತು ××× ನೂಗಟುಪುರವನ್ನು ದಾನವಾಗಿ ನೀಡಿದರೆಂದು ಶಾಸನದಲ್ಲಿದೆ. ಅಲ್ಲದೆ ತಿರುವೆಂಗಳನಾಥನು ತಮ್ಮ ಕುಲದೈವವೆಂದೂ ಹೇಳಿಕೊಂಡಿರುವುದು ಗಮನಾರ್ಹವಾಗಿದೆ. ಇವರ ನಾಯಕತನದ ×× ಜಯಕೊಪ ಯಾವುದೆಂದು ತಿಳಿದಿಲ್ಲ. ಮಲಂದೂರಿಗೆ ಹೋಗುವ ಮಾರ್ಗದ ದಾಸಕೊಪ್ಪವು ಈ ಜಯಕೊಪವಾಗಿರಬಹುದು.

ಶಾಸನೋಕ್ತ ಇಬ್ಬರು ನಾಯಕರು ಕ್ರಿ. ಶ. ೧೬ನೆಯ ಶತಮಾನದಲ್ಲಿ ವಿಜಯನಗರದ ಆಶ್ರಯದಲ್ಲಿ ಈ ಪ್ರದೇಶದಲ್ಲಿ ಆಳುತ್ತಿದ್ದ ಪಾಳೆಯಗಾರರಾಗಿರಬಹುದು. ಎರಡು ಗ್ರಾಮಗಳನ್ನು ದೇವಾಲಯಕ್ಕೆ ದಾನ ಕೊಟ್ಟಿರುವುದರಿಂದ ಹಾಗೂ ಹೊಸಗುಂದದ ಸೀಮೆಯೂ ಇವರ ಅಧೀನದಲ್ಲಿದ್ದ ಕಾರಣ ಇವರು ಸಾಕಷ್ಟು ಪ್ರಬಲರಾಗಿದ್ದರೆಂದು ತಿಳಿಯುತ್ತದೆ. ಶಾಸನದಲ್ಲಿ 'ಭಯಂಕರ ರಿಪುಮಂ, ಕೋಳಾ ಹಳಕದನ ಪ್ರಚಂಡರು' ಎಂಬ ಪ್ರಶಸ್ತಿಯು ಇದನ್ನು ಸಮರ್ಥಿಸುತ್ತದೆ. ಶಾಸನದ "ಕೊಯಿಪುರದ ತಿರುವೆಂಗಳನಾಥ" ಎಂದು ಹೇಳಿರುವುದರಿಂದ ಆನಂದೂರಿಗೆ ಕೊಯಿಪುರ ಎಂಬ ಇನ್ನೊಂದು ಹೆಸರಿದ್ದಿರಬಹುದು.

ತಿರು ಎಂದರೆ ಶ್ರೀ ಮುದ್ರೆ ಎಂದೂ ಇನ್ನೊಂದು ಅರ್ಥದಲ್ಲಿ ಪೂಜ್ಯ ಎಂದು ತಿಳಿಯುತ್ತದೆ. ತಿರು ಎಂಬ ಪದವು ತಿರುಮಲೈ, ತಿರುವಳ್ಳೂರು, ತಿರುಪತಿ, ತಿರುವಾಂಕೂರು, ತಿರುಚ್ಚಿ, ತಿರುವಣ್ಣಾಮಲೈ, ತಿರುಚಂದೂರು, ತಿರುಪ್ಪೂರು, ತಿರುನಲ್ವೇಲಿ ಮುಂತಾದ ಸ್ಥಳನಾಮಗಳೊಂದಿಗೆ ಸೇರಿಕೊಂಡಿದೆ. ಇವು ಕರ್ನಾಟಕದ ಹೊರಗಿನ ಸ್ಥಳಗಳಾಗಿವೆ. ವೆಂಗಳ ಎಂಬುದು ವೆಂಕಟ ಎಂಬುದರ ಇನ್ನೊಂದು ರೂಪ. ಇದು ತಿರುಪತಿ ವೆಂಕಟೇಶ್ವರನೂ ಆಗಬಹುದು. ರಂಗನಾಥ ಎಂದೂ ಹೇಳಬಹುದು.

ಕ್ರಿ. ಶ. ೧೧ನೆಯ ಶತಮಾನದಲ್ಲಿ ಶ್ರೀರಂಗದಲ್ಲಿ ರಂಗನಾಥಾ ಚಾರ್ಯ ಎಂಬ ವೈಷ್ಣವ ಪಂಡಿತರು ವಾಸಿಸುತ್ತಿದ್ದು ಇವರಿಗೆ 'ನಾಥಮುನಿ' ಎಂಬ ಹೆಸರಿತ್ತು. ಇವರು ನಮ್ಮಾಳ್ವಾರರ 'ತಿರುವಾಯ್ ಮೊಟಿ" ಎಂಬ ಕೃತಿಯಲ್ಲಿರುವ ಪದ್ಯಗಳನ್ನು ವೈಷ್ಣವರ ಗುಡಿಗಳಲ್ಲಿ ರಾಗಬದ್ಧವಾಗಿ ಹಾಡುವ ಪದ್ಧತಿಯನ್ನು ಆರಂಭಿಸಿದರು. ಇವರ ಮೊಮ್ಮಗ ಯಮುನಾಚಾರ್ಯರು ದಕ್ಷಿಣ ಭಾರತದ ಯಾತ್ರಾ ಸಮಯದಲ್ಲಿ ಕರ್ನಾಟಕದ ವೈಷ್ಣವ ಕ್ಷೇತ್ರಗಳಿಗೂ ಭೇಟಿ ನೀಡಿದ್ದರೆಂದು ತಿಳಿಯುತ್ತದೆ. ತಿರುಪ್ಪಾಣ, ತಿರುಮೊರುರೈ, ತಿರುಮುಗೈ ಎಂಬ ವೈಷ್ಣವ ಭಕ್ತರು ವೈಷ್ಣವ ದೇವಾಲಯಗಳಲ್ಲಿ ಹಾಡುತ್ತಿದ್ದರು. ಇವರು ಆನಂದೂರಿನ ತಿರುವೆಂಗಳನಾಥ ದೇವಾಲಯಕ್ಕೆ ಆಗಮಿಸಿ ಕೀರ್ತನೆಗಳನ್ನೂ ಹಾಡುತ್ತಿದ್ದ ಸಂಭವವಿದೆ. ವೆಂಗಳನಾಥನಿಗೆ ಭಕ್ತಿರಸಪೂರಕವಾದ 'ತಿರು' ಎಂಬ ಹೆಸರು ಈ ವೈಷ್ಣವ ಭಕ್ತರಿಂದ ಸೇರಿ 'ತಿರುವೆಂಗಳನಾಥ' ಎಂದು ಕರೆದಿರಬಹುದು. ಇವರು ವೈಷ್ಣವ ಪದಗಳನ್ನು ಹಾಡುತ್ತಾ ನರ್ತಿಸುತ್ತಿದ್ದರೆಂದು 'They were excellent narrators or story tellers. The Sanskrit word Kathak or Kathika means narrator or story teller' ಎಂದು ಕರುಣಾ ಮಂಗಳವೇಢೆಯವರು ತಮ್ಮ ಒಂದು ಲೇಖನದಲ್ಲಿ ಉಲ್ಲೇಖಿಸಿದ್ದಾರೆ*[೨೨] ಇದರಿಂದ ಈ ವೈಷ್ಣವ ಭಕ್ತರು ಈ ದೇವಾಲಯಕ್ಕೆ ಬರುತ್ತಿದ್ದ ಸಂಭವವಿದೆ. ಇದರ ಬಗ್ಗೆ ಶಾಸನಾಧಾರವೇನೂ ಇಲ್ಲ.

ಕರ್ನಾಟಕ ಗೆಜೆಟಿಯರ್ ಶಿವಮೊಗ್ಗ ಜಿಲ್ಲೆಯ ಈ ಗ್ರಂಥದಲ್ಲಿ ಈ ದೇವಾಲಯವನ್ನು ೧೭ನೆಯ ಶತಮಾನದಲ್ಲಿ ನಿರ್ಮಾಣವಾದ ರಂಗನಾಥಸ್ವಾಮಿ ದೇವಾಲಯ ಅಥವಾ ಕೋದಂಡರಾಮ ದೇವಾಲಯವೆಂದು ಹೇಳಿದೆ. ಆದರೆ ಈ ದೇವಾಲಯದ ದಾನಶಾಸನದಲ್ಲಿ ಕ್ರಿ. ಶ. ೧೫೦೭ ಎಂದು ಹೇಳಿದೆ. ಪ್ರಾಯಶಃ ಇದಕ್ಕು ಹಿಂದಿನ ದೇವಾಲಯವಾಗಿರಬಹುದು. ಭೂದಾನ ನೀಡಿದ ಚಿಕಣನಾಯಕನು ದೇವರನ್ನು ತಿರುವೆಂಗಳನಾಥನೆಂದು ಕರೆದು ತನ್ನ ಮನೆ ದೇವರೆಂದೂ ಹೇಳಿಕೊಂಡಿದ್ದಾನೆ. ಇದರಿಂದ ಇವನಿಗೂ ಈ ದೇವಾಲಯಕ್ಕು ತಮಿಳುನಾಡಿನ ಸಂಬಂಧವಿರಬಹುದು. ಅಲ್ಲದೆ ತಿರುವೆಂಗಳನಾಥ ಮತ್ತು ಲಕ್ಷ್ಮಿಯನ್ನು ಬನವಾಸಿಯ ಮಾಧವ ಮತ್ತು ಲಕ್ಷ್ಮಿಗೆ ಹೋಲಿಸಲು ಕಾರಣವೇನೆಂಬುದೂ ತಿಳಿಯುವುದಿಲ್ಲ.

ಮಂಡಳಿಯಲ್ಲಿ ಗಂಗರ ಮಹಾಮಂಡಳೇಶ್ವರ ತ್ರಿಭುವನ ಮಲ್ಲ ಗಂಗ ಪೆರಮ್ಮಾಡಿಯು ಆಳುತ್ತಿದ್ದಾಗ ವೆಂಕಟನಾಯಕ ಎಂಬುವನು ಕ್ರಿ. ಶ. ೧೧೦೩ರಲ್ಲಿ ಮಂಡಳಿನಾಡಿನಲ್ಲಿ ರಂಗನಾಥ

ಸ್ವಾಮಿ ದೇವಾಲಯವನ್ನು ಕಟ್ಟಿಸಿ ದಾನ ದತ್ತಿಗಳನ್ನು ನೀಡಿರುವುದಾಗಿ ತಿಳಿಯುತ್ತದೆ*[೨೩] ಇವನು ಕಟ್ಟಿಸಿದ ಈ ದೇವಾಲಯವು ಶಿವಮೊಗ್ಗದ ಗೋಪಾಳದಲ್ಲಿದೆ. ಇವನ ಹೆಸರನ್ನೂ ಹೇಳಿರುವ ಒಂದು ತ್ರುಟಿತ ಶಾಸನವಿದೆ. ದೇವಾಲಯದಲ್ಲಿರುವ ರಂಗನಾಥ ಮೂರ್ತಿಗೂ ಆನಂದೂರಿನ ತಿರುವೆಂಗಳನಾಥ ಮೂರ್ತಿಗೂ ಗಾತ್ರದಲ್ಲಿ ಹೊರತಾಗಿ ಹೋಲಿಕೆಯಿದೆ. ಇಲ್ಲಿರುವ ಮೂರ್ತಿ ಚಾಲುಕ್ಯ ಶೈಲಿಯಲ್ಲಿದೆ ಅಲ್ಲದೆ ಶ್ರೀದೇವಿ ಮತ್ತು ಭೂದೇವಿ ಎಂಬ ಇನ್ನೆರಡು ಮೂರ್ತಿಗಳಿವೆ. ಗರ್ಭಗುಡಿಯಲ್ಲಿ ಶಿವಲಿಂಗವಿದೆ.

ಆನಂದೂರಿನ ತಿರುವೆಂಗಳನಾಥ ಸ್ವಾಮಿಯ ದೇವಾಲಯವು ಆಗಾಗ ಜೀರ್ಣೋದ್ಧಾರಗೊಂಡಿದೆ. ಗೋಪುರವು ದ್ರಾವಿಡ ಶೈಲಿಯಲ್ಲಿದೆ. ಗರ್ಭಗುಡಿಯು ಮತ್ತು ಉಳಿದಿದ್ದು ಅಂತರಾಳ ಹಾಗೂ ರಂಗಮಂಟಪವನ್ನು ಈಚೆಗೆ ನವೀಕರಿಸಿ ಕಟ್ಟಿದೆ. ಶಿಲಾಸ್ತಂಭಗಳೂ ಉಳಿದಿಲ್ಲ. ಕೆಳದಿಯ ಅರಸು ವೆಂಕಟಪ್ಪ ನಾಯಕನು ಕೊನೆಯ ಬಾರಿ ಇದನ್ನು ಜೀರ್ಣೋದ್ಧಾರ ಮಾಡಿದಂತೆ ತಿಳಿಯುತ್ತದೆ. ಧ್ವಜಸ್ತಂಭದ ತಳಭಾಗದಲ್ಲಿರುವ ಗರುಡನ ಶಿಲ್ಪವು ಆಕರ್ಷಕವಾಗಿದ್ದು ಒಂದು ಕೈಯಲ್ಲಿ ಸರ್ಪವಿದೆ. ಇದು ವೈಷ್ಣವ ದೇವಾಲಯವೆಂದು ಹೇಳುವ ಸಂಕೇತವಾಗಿರಬಹುದು. ಗರುಡನನ್ನು ಜನಮೇಜಯ ಪೂಜಿಸಿದನೆಂಬ ದಂತಕಥೆ ಅದರ ಪೌರಾಣಿಕ ಪ್ರಾಚೀನತೆಯತ್ತ ಬೆರಳು ತೋರುವಂತಿದೆ.

ಗರ್ಭಗುಡಿಯಲ್ಲಿರುವ ಶ್ರೀರಂಗನಾಥಸ್ವಾಮಿ ಮೂರ್ತಿಯು ಕಪ್ಪು ಶಿಲೆಯಿಂದ ನಿರ್ಮಾಣವಾಗಿದ್ದು ಶಿರಸ್ಸಿನ ಮೇಲೆ ಕಿರೀಟವಿದೆ. ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ ಎಂಬ ಆಯುಧಗಳಿವೆ. ಸು. ೪½ ಅಡಿ ಎತ್ತರದ ಈ ಮೂರ್ತಿಯು ಹೊಯ್ಸಳ ಶಿಲ್ಪದ ಒಂದು ಉತ್ಕೃಷ್ಟ ವಿನ್ಯಾಸವಾಗಿದೆ. ಪಕ್ಕದಲ್ಲಿರುವ ಲಕ್ಷ್ಮಿಯ ಮೂರ್ತಿಯೂ ಸಹ ಸು. ೪ ಅಡಿ ಎತ್ತರವಾಗಿದ್ದು ಕಪ್ಪು ಶಿಲೆಯಲ್ಲಿ ನಿರ್ಮಿಸಿದೆ. ಆಯುಧ ಪಾಣಿಯಾಗಿರುವ ದೇವಿಯ ಶಿರಸ್ಸಿನ ಮೇಲೆ ಕಿರೀಟವಿದೆ. ಅನೇಕ ಆಭರಣಗಳಿಂದ ಅಲಂಕೃತಳಾಗಿದ್ದಾಳೆ. ಪ್ರಭಾವಳಿಯಲ್ಲಿ ಅಲಂಕಾರಿಕ ಕೆತ್ತನೆಯಿದೆ. ಮೂರ್ತಿಗಳಿಗೆ ಪದ್ಮಪೀಠವಿದೆ.

ದೇವಾಲಯದ ತಿರುವೆಂಗಳನಾಥನ ಹರಿವಾಣ ನೈವೇದ್ಯಕೆ, ಕಾಲ ಕಾಲಂ ಪ್ರತಿ ಸ್ವಾಮಿಯ ಅಂಗರಂಗ ಭೋಗಂಗೆ ನಿವೇದ್ಯಕೆ.... ಎಂದು ಶಾಸನದಲ್ಲಿ ಹೇಳಿರುವುದರಿಂದ ದೇವಾಲಯದಲ್ಲಿ ನಡೆಯುವ ತ್ರಿಕಾಲ ಪೂಜೆ, ನಿತ್ಯ ನೈವೇದ್ಯ, ಬಲಿ ಮತ್ತು ಉತ್ಸವಾದಿಗಳು ಪ್ರಾಚೀನತೆಯ ಸಂಕೇತವಾಗಿದೆ. ಈ ಶಾಸನವು ಪ್ರಾರ್ಥನಾ ಶ್ಲೋಕದಿಂದ ಆರಂಭವಾಗಿರದೆ ದಾನವನ್ನು ಅಪಹರಿಸಿದವನಿಗೆ ಪಾಪ ಭೀತಿ ಹುಟ್ಟಿಸುವ ಮಾತುಗಳಿಂದ ಆರಂಭವಾಗಿದೆ. ನಂತರದ ಒಂದು ಸಾಲು ಶ್ಲೋಕವು ಇದು ವೈಷ್ಣವ ದೇವಾಲಯವೆಂದು ಹೇಳುತ್ತದೆ. ಶಾಸನವು ಅಲ್ಲಲ್ಲಿ ತ್ರುಟಿತವಾಗಿದೆ. ಇಷ್ಟಾದರೂ ಈ ದೇವಾಲಯಕ್ಕೆ ದಾನ ನೀಡಿದ ಈ ನಾಯಕರಿಬ್ಬರ ಬಗೆಗೆ ಐತಿಹಾಸಿಕವಾಗಿ ಯಾವ ದಾಖಲೆಗಳೂ ಸಿಕ್ಕಿಲ್ಲ.

ದೇವಾಲಯದ ಹೊರ ಪ್ರಾಕಾರದಲ್ಲಿರುವ ಒಂದು ಮೂರ್ತಿಯು ಸು. ಎರಡು ಅಡಿ ಎತ್ತರವಾಗಿದ್ದು ಚತುರ್ಭುಜಾಕಾರವಾಗಿದೆ. ಶಂಖ ಚಕ್ರ ಗದಾಪದ್ಮ ಮತ್ತು ಕಿರೀಟ ಹಾರಗಳಿಂದ ಅಲಂಕೃತವಾಗಿದೆ. ಕೈಯಲ್ಲಿ ಬಿಲ್ಲುಬಾಣವಿದೆ. ಇದನ್ನು ರಂಗನಾಥ ಸ್ವಾಮಿ ಎಂದು ಕರೆಯಲಾಗುತ್ತಿದೆ. ಭೂದೇವಿ ಎಂದು ಕರೆಯುವ ಇನ್ನೊಂದು ಮೂರ್ತಿಗೆ ಆಂಡಾಳ್ ಎಂದು ಕರೆಯುತ್ತಿದ್ದರೆಂದು ದೇವಾಲಯದ ಅರ್ಚಕರು ಹೇಳುತ್ತಾರೆ. ಪ್ರಭಾವಳಿಯ ಸುತ್ತಲೂ ಹಸುಗಳನ್ನು ಕೆತ್ತಿರುವುದು ಅಪರೂಪವೆನಿಸಿದೆ. ಆಸೀನ ಭಂಗಿಯಲ್ಲಿರುವ ಈ ಮೂರ್ತಿಯು ಆಕರ್ಷಕವಾಗಿದೆ.

ಗೋವು ಕಾಮಧೇನುವಿನಂತೆ ಸಮೃದ್ಧಿಯ ಸಂಕೇತ. ದೇವಾಲಯದ ಪ್ರಾಕಾರದಲ್ಲಿ ಸ್ಥಾಪಿಸಿರುವ ಬನಶಂಕರಿ ಮೂರ್ತಿಯು ಚಾಲುಕ್ಯ ಶೈಲಿಯ ಒಂದು ಸುಂದರ ಶಿಲ್ಪ. ಇದನ್ನು ಇಲ್ಲಿಗೆ ಸಮೀಪದ ಗೌತಮಪುರದಿಂದ ತಂದು ಇಲ್ಲಿ ಪ್ರತಿಷ್ಠಿಸಿದೆ.

ಆನಂದಪುರದಿಂದ ಸು. ೧½ ಕಿ.ಮೀ. ದೂರದಲ್ಲಿರುವ ಮಹಂತಿನಮಠದ ಚಂಪಕ ಸರಸ್ಸು (ಸರೋವರ) ಒಂದು ಆಕರ್ಷಕ ತಾಣ. ಈ ಸ್ಥಳದಲ್ಲಿ ಸು. ೨೦೦'x೧೪೪' ಅಳತೆಯ ವಿಸ್ತಾರವಾದ ಹಾಗೂ ಸುತ್ತಲೂ ಗೋಡೆಯಿರುವ ಪುಷ್ಕರಣಿಯಿದೆ. ಪುಷ್ಕರಣಿಯನು ೮೦'x೬೦' ಗಳಷ್ಟು ವಿಸ್ತಾರವಾಗಿದ್ದು ಇದಕ್ಕೆ ನಾಲ್ಕು ಕಡೆಗಳಿಂದ ಇಳಿಯಲು ಮೆಟ್ಟಲುಗಳಿವೆ. ಇದು ಸು. ೧೫ ಅಡಿಗಳಷ್ಟು ಆಳವಾಗಿದ್ದು ಸು. ೮ ಅಡಿಗಳಷ್ಟು ನೀರಿದೆ. ಇದರ ಸುತ್ತಲೂ ಸು. ೫ ಅಡಿ ಅಗಲದ ಪ್ರದಕ್ಷಿಣಾಪಥವಿದೆ. ಪುಷ್ಕರಣಿಯ ನಡುವೆ ಸು. ೧೫ ಅಡಿ ಎತ್ತರದ ತಳಪಾಯದ ಮೇಲೆ ಒಂದು ಪುಟ್ಟ ಗುಡಿಯನ್ನು ಕಟ್ಟಿದೆ. ಇದರಲ್ಲಿ ಸುಂದರವಾದ ನಂದಿಯ ವಿಗ್ರಹವಿದೆ. ಈ ಗುಡಿಗೆ ಹೋಗಲು ಸು. ೨೫ ಅಡಿ ಉದ್ದದ ಹಾಗೂ ಸು. ೬ ಅಡಿ ಅಗಲದ ಕಲ್ಲುಸಾರವಿದೆ. ಇದನ್ನು ಏಳು ಜೋಡಿ ಕಲ್ಲು ಕಂಬಗಳ ಮೇಲೆ ನಿರ್ಮಿಸಿ ಉದ್ದಕ್ಕೂ ಕಲ್ಲು ಚಪ್ಪಡಿ ಹಾಸಿದೆ. ಈಗಲೂ ಈ ಸಾರವನ್ನು ಹಾಯ್ದು ಗುಡಿಗೆ ಹೋಗಬಹುದು.

ಚಂಪಕ ಸರಸ್ಸನ್ನು ಸ್ಥಳೀಯವಾಗಿ ಸಿಗುವ ಜಂಬಿಟ್ಟಿಗೆಯಿಂದಲೇ ನಿರ್ಮಿಸಿದ್ದು ಗಮನಾರ್ಹವಾದುದು. ಕಲ್ಲುಗಳ ಜೋಡಣೆಯು ತುಂಬಾ ಸುಭದ್ರವಾಗಿದ್ದು ಪುಷ್ಕರಣಿಯು ಈಗ ನಿರ್ಮಾಣವಾದಂತಿದೆ. ಇದಕ್ಕೆ ನಿರ್ಮಿಸಿದ ತೂಬೂ ಸಹ ಸುಭದ್ರವಾಗಿದ್ದು ಇದರಿಂದ ಬೇಸಾಯಕ್ಕೊ ಸ್ವಲ್ಪ ಮಟ್ಟಿಗೆ ನೀರು ಹಾಯಿಸುತ್ತಿದ್ದ ಸಂಭವವಿದೆ. ಆದರೆ ಈಗ ನೀರು ಹರಿದು ಹೋಗುತ್ತಿಲ್ಲ.

ಪುಷ್ಕರಣಿಯ ಮೇಲುಭಾಗದಲ್ಲಿರುವ ಒಂದು ಪುಟ್ಟ ಹೆಂಚಿನ ಕಟ್ಟಡದಲ್ಲಿ ಒಂದು ಗದ್ದುಗೆಯಿದೆ. ಪುಷ್ಕರಣಿಯ ನಡುವಿನ ನಂದಿ ಗುಡಿಯು ಇದಕ್ಕೆ ಅಭಿಮುಖವಾಗಿದೆ. ಈ ಕಟ್ಟಡದ ಎದುರಿಗೆ

ಒಂದು ಪುಟ್ಟ ಕೊಳವಿದ್ದು ಇದರಲ್ಲಿ ನೀರಿಲ್ಲ. ಈ ನಿರ್ಮಿತಿಯ ಸುತ್ತಲೂ ಎತ್ತರವಾದ ಜಂಬಿಟ್ಟಿಗೆಯ ಗೋಡೆಯಿದೆ. ಹಿಂದೆ ಈ ಸ್ಥಳದಲ್ಲಿ ಪೂರ್ಣ ಪ್ರಮಾಣದ ಒಂದು ಕಟ್ಟಡವಿದ್ದು ಇದು ವೀರಶೈವ ಯತಿಗಳ ಸಾಧನಾ ಸ್ಥಳವಾಗಿತ್ತು. ಪುಷ್ಕರಣಿಗೆ ಇಳಿಯಲು ಈ ನಿರ್ಮಿತಿಯಿಂದ ಕಲ್ಲಿನ ಪಾವಟಿಗೆಗಳಿವೆ. ಇದರ ಉಭಯ ಪಾರ್ಶ್ವಗಳಲ್ಲಿ ಸು. ೪ ಅಡಿ ಎತ್ತರದ ಬಹು ಸುಂದರವಾದ ಎರಡು ಕಲ್ಲಿನ ಆನೆಗಳಿವೆ.

ಚಂಪಕ ಸರಸ್ಸಿನ ಹಿಂಭಾಗದಲ್ಲಿ ಸು. ೧೨೦'×೧೦೦' ಅಳತೆಯ ಒಂದು ಪಾಳು ನಿವೇಶನವಿದ್ದು ಇದರಲ್ಲಿ ಸು. ೧೧/೨ ಅಡಿ ಎತ್ತರದ ಎರಡು ಜಂಬಿಟ್ಟಿಗೆಯ ಕಂಬಗಳು ಮಾತ್ರ ನಿಂತಿವೆ. ಇದೇ ಶಾಸನದಲ್ಲಿರುವ ಮಹಾಮಹತ್ತಿನ ಮಠ ಹಾಗೂ ಇದರ ಪಾಳು ನಿವೇಶನ. ಕೆಳದಿಅರಸರ ಕಾಲದಲ್ಲಿ ಈ ಮಠವು ತುಂಬಾ ಪ್ರಸಿದ್ಧಿ ಪಡೆದಿತ್ತು. ಈ ಮಠಕ್ಕೆ ಕೆಳದಿಯ ಅರಸು ಹಿರಿಯ ವೆಂಕಟಪ್ಪನಾಯಕ*[೨೪] ಹಿರಿಯ ಸೋಮಶೇಖರ ನಾಯಕ*[೨೫] ಹಾಗೂ ಪೆನುಗೊಂಡೆಯಲ್ಲಿ ಆಳುತ್ತಿದ್ದ ವಿಜಯನಗರದ ರಾಜವಂಶದ ವೆಂಕಟಪತಿರಾಯನು ಈ ಮಠಕ್ಕೆ ಖೈರ ಎಂಬ ಒಂದು ಗ್ರಾಮವನ್ನೇ ದಾನವಾಗಿ ಕೊಟ್ಟಿದ್ದಾನೆ.*[೨೬] ಕೆಳದಿ ರಾಣಿ ಚೆನ್ನಮ್ಮಾಜಿಯು ಕ್ರಿ. ಶ. ೧೬೭೪ರಲ್ಲಿ ಆನಂದಪುರದ ಸೋಮಾಪುರದಮಠಕ್ಕೆ ಬಿಟ್ಟ ಗ್ರಾಮ ದಾನದ ಶಾಸನವಿದೆ.*[೨೭] ಆದರೆ ಈ ಸೋಮಾಪುರಮಠ ಎಲ್ಲಿತ್ತು ಎಂಬುದು ತಿಳಿದಿಲ್ಲ. ಮಲಂದೂರಿನಲ್ಲಿ ಒಂದು ಆಕರ್ಷಕವಾದ ಮಹಾಸತಿ ಶಿಲ್ಪವಿದೆ.

ಆನಂದಪುರಕ್ಕೆ ಸಂಬಂಧಿಸಿದ ಕ್ರಿ. ಶ. ೧೬೦೬ರ ಒಂದು ಶಾಸನವನ್ನು ಕೆಳದಿ ಗುಂಡಾಜೋಯ್ಸರು ಸಂಗ್ರಹಿಸಿದ್ದು ಇದು ೧೯೯೫ರ ಇತಿಹಾಸ ದರ್ಶನದಲ್ಲಿ ಪ್ರಕಟವಾಗಿದೆ*[೨೮] ಇದೊಂದು ಮೂಲವೀಸದ ಧರ್ಮಶಾಸನ. ಶಾಸನೋಕ್ತ ದೆಶೆ ಮುಖ ಮಹತ್ತ ದೇವರು ಯಾವುದೆಂದು ಸಂದೇಹಬಂದರೂ ಇದು ಚಂಪಕ ಸರಸ್ಸಿನ ಮಠವೇ ಆಗಿರಬೇಕು. ಈ ಮಠಕ್ಕೆ ಹಿರಿಯೂರ ದಾಸಪ್ಪ ಗೂಳೂರು ಚೆಂನಪ್ಪ, ತುಮಕೂರು ದಾಸಣ್ಣ ಗೌಡ, ಹೆಬ್ಬೂರ ವಿರಸೆಟ್ಟಿ, ಕೈದಾಳ ತಿಪ್ಪಸೆಟ್ಟಿ, ಬಳ್ಳಾಪುರದ ಅನಂತಯ್ಯ, ಮಾಗಡಿ ದಾಸಪ್ಪ, ಗುತ್ತಲೂರ ನರಸಯ್ಯ ಬೆಂಗಳೂರು ಬಾಲಕೃಷ್ಣಯ್ಯ ಹಾಗೂ ಮುಳವಾಗಿಲು, ನಾಗಮಂಗಲ ಧರ್ಮಾವರ, ಪೆನುಗೊಂಡೆ, ರಾಣಿಬೆನ್ನೂರು ಮುಂತಾದ ಚತುರ್ದಿಕ್ಕು, ದಿಸೆ, ವಳನಾಡು, ಸ್ತಳ, ಪರಸ್ಥಳದ ಸುಪ್ರಸಿದ್ಧ ವರ್ತಕರು ದಾನ ನೀಡಿದ್ದಾರೆ. ಇವರೆಲ್ಲರೂ ಚಿತ್ರದುರ್ಗ, ಬೆಂಗಳೂರು ಮುಂತಾದ ಬೇರೆ ಬೇರೆ ಜಿಲ್ಲೆಯ ವ್ಯಾಪಾರಿಗಳು. ಅಲ್ಲದೆ ಕೆಲವರು ನೆರೆಯ ಆಂಧ್ರ ಪ್ರದೇಶದವರು. ಇವರು ಕೆಳದಿ ಸಂಸ್ಥಾನದ ವಿವಿಧ ಸ್ಥಳಗಳಲ್ಲಿ ವ್ಯಾಪಾರ ನಡೆಸುತ್ತಿದ್ದ ವರ್ತಕರಾಗಿದ್ದಾರೆ. ಇದರಿಂದ ಈ ಜಿಲ್ಲೆಯ ವಾಣಿಜ್ಯ ಹಾಗೂ ಆರ್ಥಿಕ ಸ್ಥಿತಿಯ ಅಧ್ಯಯನ ನಡೆಸಲು ಯೋಗ್ಯವಾಗಿದೆ. ಅಲ್ಲದೆ ಆನಂದಪುರವೂ ಸಹ ಒಂದು ಸುಪ್ರಸಿದ್ಧ ವ್ಯಾಪಾರ ಸ್ಥಳವಾಗಿತ್ತೆಂದು ತಿಳಿಯುತ್ತದೆ. ಹಿರಿಯ ಸೋಮಶೇಖರ ನಾಯಕನ ಕಾಲದಲ್ಲಿ ಈ ಪಟ್ಟಣದಲ್ಲಿ ಸುಂಕ ವಸೂಲು ಮಾಡುವ ಕೇಂದ್ರ ಕಾರ್ಯಾಲಯವನ್ನು ಸಹ ಸ್ಥಾಪಿಸಲಾಗಿತ್ತು.

ಕೆಳದಿ ಅರಸು ವೀರಭದ್ರ ನಾಯಕನು ಕ್ರಿ. ಶ. ೧೬೩೨ರಲ್ಲಿ ಆನಂದಪುರದ ಮಲವಗೊಪದ ತಾವರೆಕೆರೆಗೆ ಹೊಂದಿಕೊಂಡು ಕಟ್ಟಿರುವ ಮಸೀದಿಗೆ ವಿಡಿಹಳ್ಳಿ ಗ್ರಾಮದ ಹಿರೆಕೈ ಗದ್ದೆ ಬೀಜವರಿ ೧೨ ಖಂಡುಗ ಗದೆ ಧರ್ಮಾರ್ಥವಾಗಿ ನೀಡಿದನೆಂದು ಇಲ್ಲಿರುವ ಶಾಸನದಲ್ಲಿದೆ.*[೨೯] ದಾನಶಾಸನದ ಕೊನೆಯಲ್ಲಿ ವೆಂಕಟಾದ್ರಿ ಎಂದಿದೆ.

ಹಿರಿಯ ವೆಂಕಟಪ್ಪನಾಯಕ (೧೫೮೨-೧೬೨೯)ನು ಶ್ರೀ ರಾಮಾನುಜ ವೈಷ್ಣವ ಧರ್ಮದ ಮಠಗಳಿಗೂ ಭೂದಾನ ನೀಡಿದ್ದಾನೆ.*[೩೦] ಅಲ್ಲದೆ ಆನಂದೂರಿನ ತಿರುವೆಂಗಳನಾಥ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದನೆಂದೂ ಹಿಂದೆಯೇ ಹೇಳಿದೆ. ಕೆಳದಿ ಅರಸರ ಕಾಲದಲ್ಲಿ ಆನಂದೂರಿಗೆ ಆನಂದಪುರವೆಂದೂ ತಿರುವೆಂಗಳನಾಥನಿಗೆ ಶ್ರೀರಂಗನಾಥ ಎಂಬ ಹೆಸರು ರೂಢಿಗೆ ಬಂದಿರಬೇಕು. ಈ ದೇವಾಲಯದ ಪ್ರಾಚೀನತೆಯ ಬಗ್ಗೆ ಇನ್ನಷ್ಟು ಶೋಧನೆಯ ಅಗತ್ಯವಿದೆ.

ಸುಮಾರು ಸಾವಿರ ವರ್ಷಗಳ ಇತಿಹಾಸವಿರುವ ಆನಂದೂರು ಚಾಳುಕ್ಯರಿಂದ, ಶಾಂತರರಿಂದ ಮುಂದೆ ಕೆಳದಿ ಅರಸರ ಕಾಲದವರೆಗಿನ ಕಾಲ ಘಟ್ಟಗಳಲ್ಲಿ ರಾಜಕೀಯ, ಧಾರ್ಮಿಕ ಹಾಗೂ ಆರ್ಥಿಕ ಚಟುವಟಿಕೆಗಳ ಕೇಂದ್ರ ಸ್ಥಳವಾಗಿತ್ತು.

**ಆನುಬಂಧ - ಒಂದು**

*ಆನಂದಪುರದ ಶ್ರೀ ರಂಗನಾಥ ದೇವಾಲಯದ ಗರುಡನ ಶಿಲಾ ಪ್ರತಿಮೆಯ ಕೆಳಗಿನ ಶಿಲಾಶಾಸನ*

*ಪ್ರಮಾಣ ೩'೫"×೨'*

೧ *ಆವನೊಬ ಮುಂದೆಯಿಸುವದರೆ ತಪಿ*
೨ *ದವನು ತಂನ ತಾಯಿಗೆ ತಪಿದವನು*
೩ *ತಂನತಂದೆಯ ವಾರಣಾಸಿಯಲಿ ಕೊಂದವ*
೪ *ನುಗೋವನು×ಧಿ(ಸಿ)ದವನು ಭ್ರೂಣಹತ್ಯ*
೫ *ಪಾತಕವನೂ ಮಾಡಿದವನೂ ತಂನಗುರುವಿಗೆ ತಪಿದವನು*
೬ *ತಂನ ಕುಲಧರ್ಮ*
೭ *(ದಿ)ಕೆತಪಿದವನು ಅ*
೮ *ಚಂದ್ರದಿ ತಿರುಳಪರಿಯಂತ ××××× ನರಕ*
೯ *ಅಲೋಡ್ಯಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ*
೧೦ *ಇದಮೇಕಂ ಸುನಿಷ್ಪಂನಂ ದೇಯೋನಾರಾಯಣನ್ಸದಾ।*
*ಸ್ವಸ್ತಿಶ್ರೀ*
೧೧ *ಜಯಾದ್ಭುದಯ ಶಾಲಿವಾಹನ ಶಕ ಸಾವಿರದ ನಾನೂರ ಇಪತ್ತ ಒಂಭತು ಕಲಿವರುಷ ನಾಲ್ಕು ಸಾವಿರದ*
೧೨ *ಆರುನೂರು ಎಂಟು ಸಂದು ಸಲುವ ಪ್ರಭವ ಸಂವತ್ಸರದ ಚೈತ್ರ ಶುದ್ಧ ಪಾಡ್ಯದಲು ಶ್ರೀಮತು ××*

೧೩ ಗೆಭಯಂಕಾರ ರಿಪುಮಂ ಕೋಳಾ ಹಳ ಕದನ ಪ್ರಚಂಡರಲೂ ×× ಅಂ ×× ಜಯಕೊಪದ ಕಲ್ಲಪನಾಯ
೧೪ ಕರಕುಮಾರ ಚಿಕಣನಾಯಕರು ತಂಮ ಕುಲಸ್ವಾಮಿ ಸ್ವಸ್ತಿಶ್ರೀ ಜಯಂತೀ
೧೫ ಪುರವರಾಧೀಶ್ವರ ಶ್ರೀಮಹಾಲಕ್ಷ್ಮಿ ಕುಚ ಕುಂಕುಮಲೋಲ ×× ಳ ಕೌಂಡ ××× ಮನೋವಲಾಭ ಜಾಲಲೀಲಾ ವಿನೋದ ಭೂಕುಂದ × ಕೊ
೧೬ ಯಿಪುರದ ತಿರುವೆಂಗಳನಾಥನಾ ಹರಿವಾಣ ನೈವುದಕೆ ತಂಮನಾಯಕ ತನಕೆ ಸಲುವ ಹೊಸಗುಂದದ
೧೭ ಸೀಮೆಯೊಳಗಣ ಕೋಟಿಸೆಟಿಕೊವಕೆನ ಕೊಡಿ ×× ಕ ×× ನೂ ಗಟಪುರವನೂ ×××× ನೂ ಕಾಲಕಾಲಂ ಪ್ರತಿ ಸ್ವಾಮಿಯ ಅಂಗರಂಗ ಭೋಗಂ ನಿವೇದ್ಯಕೆ ಸಲಿಸಿ ಸ್ವಾಮಿಯಬ್ರ ×× ವನೂ
೧೮ ಕೊಂಡು ಕೃತಾರ್ಥರಾ ಉದುಯಿಂದು ಬಿಟ್ಟ ಪುರ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಡಾ. ಕೆ. ಎನ್. ಚಿಟ್ನಿಸ್, **ಕೆಳದಿ ಪಾಲಿಟಿ**, ಪು. ೧೦೦.
*೨. **ಮೆಕೆಂಜಿ ಕಲೆಕ್ಷನ್ಸ್**, ೧೯-೧೪-೩೨.
*೩. ಎ.ಕ.೭, ನಗರ ೩೫, ಪೊಂಬುಚ ೧, ಕ್ರಿ. ಶ. ೧೦೭೭.
*೪. ಅದೇ, ಸಾಗರ ೧೦೯, ಆಬಾಪುರ, ಕ್ರಿ. ಶ. ೧೦೪೨.
*೫. ಡಾ. ಎಂ. ವಿ. ಕೃಷ್ಣರಾವ್, ಎಂ. ಕೇಶವಭಟ್ಟ., **ಕರ್ನಾಟಕ ಇತಿಹಾಸ ದರ್ಶನ**, ಪುಟ ೬೨.
*೬. ಟಿಪ್ಪಣಿ ಸಂಖ್ಯೆ ೪ ರಂತೆ.
*೭. ಟಿಪ್ಪಣಿ ಸಂಖ್ಯೆ ೩ ರಂತೆ.
*೮. ಅದೇ ಶಾಸನ.
*೯. ಎ.ಕ.೭, ನಗರ ೧೧, ಪೊಂಬುಚ, ಕ್ರಿ. ಶ. ೮೯೮.
*೧೦.ಅದೇ, ೪೫.
*೧೧.ಅದೇ, ಶಾಸನ.
*೧೨.ಎ.ಕ.೮, ತೀರ್ಥಹಳ್ಳಿ ೧೯೨, ದಾನಸಾಲೆ, ಕ್ರಿ. ಶ. ೧೧೦೩.
*೧೩.ಎ.ಕ.೭, ನಗರ ೧೧, ಪೊಂಬುಚ, ಕ್ರಿ. ಶ. ೮೯೮.
*೧೪.ಡಾ. ಎಂ. ವಿ. ಕೃಷ್ಣರಾವ್, ಎಂ. ಕೇಶವಭಟ್ಟ., **ಕರ್ನಾಟಕ ಇತಿಹಾಸ ದರ್ಶನ**, ಪುಟ ೭೮.
*೧೫.**ಕೆಳದಿ ನೃಪವಿಜಯ**, ಪುಟ ೧೧೭-೧೧೮.
*೧೬.ಅದೇ.
*೧೭.ಅದೇ ಪುಟ ೨೪೮.
*೧೮.ಹಯವದನರಾವ್, **ಮೈಸೂರು ಗ್ಯಾಜೆಟಿಯರ್**, ಭಾಗ ೩, ಪು. ೨೫೪೮.
*೧೯.ಬಿ. ಎಸ್. ರಾಮಭಟ್ಟ., **ನಗರ ಪ್ರಾಂತ್ಯದ ರೈತರ ಬಂಡಾಯ**, ಪು. ೫.
*೨೦.ಎ.ಕ. ೭, ಸಾಗರ ೧೦೭, ಆನಂದಪುರ, ಕ್ರಿ. ಶ. ೧೫೦೭.
*೨೧.ಡಾ. ಎ. ಕೆ. ಶಾಸ್ತ್ರಿ, **ಬನವಾಸಿ ಸಮಗ್ರ ಪರಿಚಯ**, ಲೇಖನ ಪುಟ ೩.
*೨೨.ಕರುಣ ಮಂಗಳವೇಢೆ, *ಕರ್ನಾಟಕದಲ್ಲಿ ವೈಷ್ಣವಗೀತೆ ಮನೋಹರಿ*, **ಇತಿಹಾಸ ದರ್ಶನ**, ಸಂಪುಟ ೧೪, ೧೯೯೯ ಪು. ೧೯೮.
*೨೩.Hampa Nagarajaiah, *Later Gangas of Mandali Thousand*, p.83.
*೨೪.ಎಂ.ಎ.ಆರ್. ೧೯೨೩, ಪು. ೧೦೮.
*೨೫.ಎ.ಕ.೮, ಶಿವಮೊಗ್ಗ ೨೭.
*೨೬.**ಎಂ.ಎ.ಆರ್.** ೧೯೨೩, ಎಡಿಹಳ್ಳಿ ಕ್ರಿ. ಶ. ೧೫೫೨.
*೨೭.ಡಾ. ಕೆಳದಿ ವೆಂಕಟೇಶ ಜೋಯ್ಸ್., **ಕೆಳದಿ ಅರಸರ ಶಾಸನ ಸಂಪುಟ**, ಪು. ೨೮೯.
*೨೮.ಕೆ. ಗುಂಡಾ ಜೋಯ್ಸ್, ಲೇಖನ **ಇತಿಹಾಸ ದರ್ಶನ ಸಂ.** ೧೦, ೧೯೯೫ ಪುಟ ೧೪೦.
*೨೯.ಟಿಪ್ಪಣಿ ಸಂಖ್ಯೆ ೧ ರಂತೆ.
*೩೦.ಎ.ಕ.೮, ಸಾಗರ ೧೦೮, ಕ್ರಿ. ಶ. ೧೬೩೨.

ಚಂದನಾ ವೈ. ನೀಲಪ್ಪ*

# ಹರಿಹರದ ಗುತ್ತೂರಿನ ಇತಿಹಾಸ

ಹರಿಹರದಿಂದ ಉತ್ತರಕ್ಕೆ ೨ ಕಿ.ಮೀ. ದೂರದಲ್ಲಿರುವ ಗುತ್ತೂರು ಗ್ರಾಮ ಹರಿಹರ ಪಟ್ಟಣಕ್ಕೆ ಮೇರೆಯಾಗಿ ನಿಂತಿದೆ. ಶಾಸನಗಳಲ್ಲಿ ಇದನ್ನು ಗುತ್ತಿವೂರು, ಗುತ್ತವೂರು ಎಂದು ಉಲ್ಲೇಖಿಸಲಾಗಿದೆ. ಹಾಲಿ ಗುತ್ತೂರು ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ.

ಇತ್ತೀಚೆಗೆ ಇಲ್ಲಿಗೆ ಬಂದು ಹಾಳು ಬಿದ್ದ ದೇವಾಲಯ ಮತ್ತು ಐತಿಹಾಸಿಕ ಹೊಳೆಮಠವನ್ನು ಜೀರ್ಣೋದ್ಧಾರ ಮಾಡಿ ಸರ್ವಧರ್ಮ ಸಮನ್ವಯ ಭಾವನೆಯಿಂದ ಶಾಂತ ಗಂಗಾಧರ ಸ್ವಾಮಿಯವರು ಒಂದು ಮಠವನ್ನು ಸ್ಥಾಪಿಸಿದ್ದಾರೆ. ಶ್ರೀ ಗಂಗಾಧರ ಸ್ವಾಮಿಯವರು ಮೂಲತಃ ಗಂಗಾ ಮತಸ್ಥರು. ಗುತ್ತೂರಿನಲ್ಲಿ ಗಂಗಾ ಮತಸ್ಥರ ಜನಸಂಖ್ಯೆ ಹೆಚ್ಚಾಗಿದೆ. ಕಾರಣ ಈ ಮಠವನ್ನು ಗಂಗಾಮತಸ್ಥರ ಪೀಠವೆಂದು ಸಾಮಾನ್ಯವಾಗಿ ಜನರಿಗೆ ಪರಿಚಯಿಸಲಾಗುತ್ತದೆ.

ಇತ್ತೀಚೆಗೆ ಜೀರ್ಣೋದ್ಧಾರಗೊಂಡ ಹೊಳೆಮಠ ಮತ್ತು ಅದರ ಪಾರ್ಶ್ವದಲ್ಲಿರುವ ಆಂಜನೇಯ ಸ್ವಾಮಿ ದೇವಾಲಯ, ದೇವಾಲಯದ ಮುಖಮಂಟಪದಲ್ಲಿರುವ ಸಾಧು ಸಿದ್ಧಪ್ಪಜ್ಜನ ಮೂರ್ತಿ, ದೇವಾಲಯದ ಪಾಣಿ ಪೀಠದಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಆಂಜನೇಯ ಉಬ್ಬುಶಿಲ್ಪ ಅದರ ಹಿಂಬದಿಯಲ್ಲಿಯೇ ಕೆತ್ತಲ್ಪಟ್ಟಿರುವ ವೀರಗಲ್ಲು, ತುಂಗಭದ್ರೆಯ ತೀರದಲ್ಲಿರುವ ಸಿದ್ಧಪ್ಪಜ್ಜನ ಸಮಾಧಿ, ಪಕ್ಕದಲ್ಲೆ ಪೂರ್ಣವಾಗಿ ಬಿದ್ದು ಹೋಗಿರುವ ರಾಮಲಿಂಗೇಶ್ವರ ದೇವಾಲಯದ ಅವಶೇಷಗಳು, ಊರೊಳಗಿನ ಬಸವಣ್ಣ ದೇವಾಲಯ, ಹೊಸ ದೇವಾಲಯ ಪಕ್ಕದಲ್ಲಿ ದೊರೆತ ಅಷ್ಟದಿಕ್ಪಾಲಕರ ಒಂದು ಪಟ್ಟಿಕೆ ಗುತ್ತೂರಿನಿಂದ ಹಳ್ಳಿಗೆ ಹೋಗುವ ಕಾಲುದಾರಿಯಲ್ಲಿ ಇಟ್ಟಿಗೆ ಭಟ್ಟಿಗಳ ನಡುವೆ ನಿಂತಿರುವ ಬೃಹತ್ ವೀರಗಲ್ಲು ಇವು ಇಲ್ಲಿರುವ ಸ್ಮಾರಕಗಳು.

ಆಂಜನೇಯನ ಹಿಂಬದಿಯಲ್ಲಿ ಕೆತ್ತಲ್ಪಟ್ಟ ವೀರಗಲ್ಲನ್ನು ಕಾಶೀ ವಿಶ್ವನಾಥ ಎಂದು ಈ ಜನರು ಪೂಜಿಸುತ್ತಿದ್ದು ಶ್ರೀ ಶಿವಯೋಗಿ ಸ್ವಾಮಿಗಳು ಈ ಬಗ್ಗೆ ನನ್ನ ಗಮನ ಸೆಳೆದ ಕಾರಣ ಮತ್ತೆ ಶೋಧನೆಗೆ ಅನುವಾಯಿತು.

ಹರಿಹರದಲ್ಲಿ ದೊರಕುವ (ದಾವಣಗೆರೆ ೪೧) ಕ್ರಿ. ಶ. ೧೧೪೮ರ ಶಾಸನದಲ್ಲಿ ಗುತ್ತಿವೂರು ಗ್ರಾಮವನ್ನು ಶ್ರೀ ಶಂಕರ ನಾರಾಯಣ ದೇವರಿಗೆ ಶ್ರೀಗಂಧ, ಕುಂಕುಮ ಕರ್ಪೂರ ಲೇಪನಗಳ, ಭೋಗ ಮತ್ತು ನೈವೇದ್ಯ ಮತ್ತು ಸತ್ರಕ್ಕೆ ದತ್ತಿಯಾಗಿ ನೀಡಿರುವ ಉಲ್ಲೇಖವಿದೆ. ವೀರ ಪಾಂಡ್ಯರಸರಿಗೆ ಸೇರಿದ ಈ ಶಾಸನದ ಪಾಠದಿಂದ ಈ ಕಾಲದಲ್ಲಿ ಪಾಂಡ್ಯರು ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದು ಉಚ್ಚಂಗಿಯಿಂದ ಹರಿಹರದ ಕ್ಷೇತ್ರವನ್ನು ಆಳುತ್ತಿದ್ದರು ಎಂದು ಸ್ಪಷ್ಟವಾಗುತ್ತದೆ.

ವಿಜಯನಗರ ಅರಸ ಒಂದನೇ ದೇವರಾಜನ ಕಾಲಕ್ಕೆ ಸೇರಿದ ಕ್ರಿ. ಶ. ೧೪೧೦ರಲ್ಲಿಯ ಶಾಸನವೊಂದು ಮಂತ್ರಿ ನಾಗಪ್ಪನ ಮಗನಾದ ಬಳ್ಳಪ್ಪನು ರಾಜನ ಅಪ್ಪಣೆ ಪಡೆದು ಬನ್ನಿಕೋಡು ಗ್ರಾಮದಲ್ಲಿ ಹರಿದ್ರಾ ನದಿಗೆ ಆಣೆಕಟ್ಟು ಕಟ್ಟಿ ಬನ್ನಿಕೋಡು, ಬೆಳವಡಿ, ಹನಗನವಾಡಿ ಹರಿಹರ ಗುತ್ತೂರು ಗಂಗನರಸಿಯ ಕೆರೆಯವರೆಗೆ ಕಾಲುವೆ ಕಟ್ಟಿಸಿದ ವಿಷಯ ತಿಳಿಸುತ್ತದೆ. ಅಂದರೆ ಕ್ರಿ. ಶ. ೧೨ನೇ ಶತಮಾನದಿಂದಲೂ ಈ ಊರಿಗೆ ಗುತ್ತಿವೂರು, ೧೫ನೇ ಶತಮಾನದಿಂದ ಗುತ್ತೂರು ಎಂದಿರುವುದು ಸ್ಪಷ್ಟವಾಗುತ್ತದೆ. ಹಲವಾರು ಸಾಧು ಪುರುಷರು ತಮ್ಮ ಕೊನೆಯ ಕಾಲದಲ್ಲಿ ಇಲ್ಲಿ ನೆಲೆಸಿ ಸಮಾಧಿ ಹೊಂದಿದ್ದಾರೆ. ಆ ಸಮಾಧಿಗಳ ಪೂಜಾ ವಿಧಿಯನ್ನು ಗುತ್ತಿಪೂಜೆ ಎಂದು ಕರೆಯುವ ಹಿನ್ನೆಲೆಯಲ್ಲಿ ಈ ಊರಿಗೆ ಗುತ್ತಿವೂರು ಎಂಬ ಹೆಸರು ಬಂದಿರಲೂಬಹುದು.

ಮಠಕ್ಕೆ ಹೊಂದಿಕೊಂಡಿರುವ ಆಂಜನೇಯ ದೇವಾಲಯ ಸುಮಾರು ಎರಡು ನೂರು ವರುಷಗಳಷ್ಟು ಹಳೆಯದಾಗಿರಬಹುದು. ಈ ದೇವಾಲಯದ ರಚನೆಯಲ್ಲಿ ಹೊಳೆಯ ದಂಡೆಯಲ್ಲಿ ಮಣ್ಣಿನ ದಿಬ್ಬದಲ್ಲಿ ಸಿಕ್ಕಿದ ರಾಮಲಿಂಗೇಶ್ವರ ದೇವಾಲಯದ ಅವಶೇಷಗಳು ಬಳಕೆಯಾಗಿದೆ ಎಂದು ತಿಳಿದುಬರುತ್ತದೆ. ಮೂಲ ದೇವಾಲಯವು ಬಹಳ ಚಿಕ್ಕದಾಗಿದೆ. ಗರ್ಭಗುಡಿ ೫'×೫' ಅಳತೆಯನ್ನೊಳಗೊಂಡಿದೆ. ಇಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಆಂಜನೇಯನ ಉಬ್ಬುಶಿಲ್ಪದ ಹಿಂಬದಿಯಲ್ಲಿ ಒಂದು ವೀರಗಲ್ಲಿನ ಕೆತ್ತನೆ ಇರುವುದು ವಿಶೇಷವಾಗಿದೆ. ಕೈಯಲ್ಲಿ ಗಂಟೆ ಹಿಡಿದಿರುವ ವ್ಯಾಸಾಂಜನೇಯ ವಿಜಯನಗರ ಕಾಲಕ್ಕೆ ಸೇರಿರುವುದು ಶಿಲ್ಪ ಲಕ್ಷಣಗಳಿಂದ ತಿಳಿದುಬರುತ್ತದೆ. ಹಿಂಬದಿಯ ವೀರಗಲ್ಲಿನಲ್ಲಿ ಸಾಮಾನ್ಯವಾಗಿ ಎಲ್ಲಾ ವೀರಗಲ್ಲುಗಳಲ್ಲಿರುವಂತೆ ಮೂರು ಭಾಗಗಳಿದ್ದುವಾದರೂ ಎಲ್ಲಕ್ಕಿಂತ ಕೆಳಗಿನ ಭಾಗ ಪಾಣೀಪೀಠದ ಗಾರೆಯೊಳಗೆ ಹುದುಗಿರುವುದರಿಂದ ವೀರನು ಯಾವ ಕಾರಣಕ್ಕಾಗಿ ಪ್ರಾಣಾರ್ಪಣೆಗೈದ ಎಂಬುದು ಸ್ಪಷ್ಟವಾಗುತ್ತಿಲ್ಲ. ಎರಡನೇ ಎಂದರೆ ಮಧ್ಯದ ಪಟ್ಟಿಕೆಯಲ್ಲಿ ವೀರನನ್ನು ಕುಳ್ಳಿರಿಸಿದ ಗೋಪುರ ತುಂಬಾ ಸುಂದರವಾಗಿ ಕೆತ್ತಲ್ಪಟ್ಟಿದೆ. ಪೀಠದಲ್ಲಿ ಆಸೀನನಾದ ವೀರನನ್ನು

*ಶ್ರವಣ ಟುಟೋರಿಯಲ್ಸ್, ೩೧೨, 'ಇ' ಬ್ಲಾಕ್, ನಡುವಲ್ ಪೇಟೆ, ಹರಿಹರ, ೫೭೭ ೬೦೧.

ಚಾಮರ ಹಿಡಿದಿರುವ ದೇವತೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಮೇಲಿನ ಸ್ತರದಲ್ಲಿ ಯತಿಯೊಬ್ಬನು ಲಿಂಗ ಪೂಜೆ ಮಾಡುತ್ತಿರುವುದಿದೆ. ಲಿಂಗದ ಮುಂದೆ ಬಲಬದಿಗೆ ಶಿವನ ವಾಹನ ನಂದಿಯ ಮುಂದಿನ ಅರ್ಧ ದೇಹ ಕೆತ್ತಲ್ಪಟ್ಟಿದೆ. ಸೂರ್ಯ ಚಂದ್ರರೂ ಇದ್ದಾರೆ. *ಸೂರ್ಯನ ಕಿರಣಗಳು ಲಿಂಗದ ಮೇಲೆ ಬೀಳುತ್ತಿರುವ ದೃಶ್ಯವನ್ನು ಬಹು ಅಲಂಕಾರಿಕವಾಗಿ ವಿಜಯನಗರ ಕಾಲದ ಶೈಲಿಯಲ್ಲಿ ಕೆತ್ತಲಾಗಿದ್ದು* ಆಂಜನೇಯ ಮತ್ತು ವೀರಗಲ್ಲು ಎರಡೂ ಒಂದೇ ಕಾಲಕ್ಕೆ ಸೇರುತ್ತಿರುವುದು ಖಚಿತವಾಗುತ್ತದೆ.

ಈಗ ಆಂಜನೇಯ ಗುಡಿಯ ಜೀರ್ಣೋದ್ಧಾರ ಮಾಡಿ ಮುಂದೆ ದೇವಾಲಯವನ್ನು ವೃದ್ಧಿಗೊಳಿಸಿದ್ದಾರೆ. ದೇವಾಲಯದ ಗರ್ಭಗುಡಿಯ ಹೊರಗಿನ ಅಂಕಣದಲ್ಲಿ ಗರ್ಭಗುಡಿಯ ಎಡಗಡೆ ಪೀಠವನ್ನು ಕಟ್ಟಿ ಅದರ ಮೇಲೆ ರಾಮ ಸೀತೆ ಲಕ್ಷ್ಮಣ ಮತ್ತು ಆಂಜನೇಯನ ವಿಗ್ರಹಗಳನ್ನಿಟ್ಟಿದ್ದಾರೆ. ಒಂದು ಗಂಗಾಮಾತೆಯ ವಿಗ್ರಹವೂ ಇದೆ. ಇವು ಕಲ್ಲಿನಿಂದ ಕೆತ್ತಲ್ಪಟ್ಟ ವಿಗ್ರಹಗಳಾದರೂ ಇವುಗಳಿಗೆ ಪೇಯಿಂಟ್ ಬಳಿದ ಕಾರಣ ಅಷ್ಟು ಸುಲಭವಾಗಿ ಕಾಲ ಗುರುತಿಸಲು ಸಾಧ್ಯವಾಗುವುದಿಲ್ಲ. ಆದರೆ ಊರಿನ ಹಿರಿಯರ ಹೇಳಿಕೆಯಂತೆ ಈ ನಾಲ್ಕೂ ವಿಗ್ರಹಗಳು ರಾಮಲಿಂಗೇಶ್ವರ ದೇವಾಲಯದ ಹಾಳು ಮಣ್ಣಿನ ದಿಬ್ಬದಲ್ಲಿ ದೊರೆತವು ಎಂದು ತಿಳಿದು ಬರುತ್ತದೆ.

ಇತ್ತೀಚೆಗೆ ಕಟ್ಟಿದ ಹೊರಗಿನ ಅಂಕಣದಲ್ಲಿ ಸಾಧು ಸಿದ್ಧಪ್ಪಜ್ಜನ ಒಂದು ವಿಗ್ರಹವಿದೆ. ಸುಮಾರು ಆರು ಅಡಿ ಎತ್ತರದ ದಷ್ಟ ಪುಷ್ಟ ವ್ಯಕ್ತಿ, ಹಣೆಯಲ್ಲಿ ವಿಭೂತಿ ಕೊರಳಲ್ಲಿ ರುದ್ರಾಕ್ಷಿ ಸೊಂಟದ ಸುತ್ತ ಒಂದು ತುಂಡು ಬಟ್ಟೆ ಧರಿಸಿರುವ ಸಾಧು ಪುರುಷ. ಹರಿಹರದ ನಾರಾಯಣ ಸ್ವಾಮಿ ಗುಡಿಯಲ್ಲಿ ವಾಸಿಸುತ್ತಿದ್ದ ಭೀಮಣ್ಣನು ಸಾಧು ಸಿದ್ಧಪ್ಪಜ್ಜನ ಅನುಯಾಯಿಯಾಗಿದ್ದು ಈ ಮೂರ್ತಿಯನ್ನು ಅವನು ರಚಿಸಿದ ಎಂದು ತಿಳಿದುಬಂದಿದೆ. ಸುಮಾರು ೧೯೨೦ರ ದಶಕದಲ್ಲಿ ಸುಮಾರು ಇಪ್ಪತ್ತೈದರಿಂದ ಮೂವತ್ತು ವರುಷದೊಳಗಿನ ಯುವಕ ಸಾಧು ಸಿದ್ಧಪ್ಪಜ್ಜ ಗುತ್ತೂರಿಗೆ ಬಂದು ಅರವತ್ತು ವರುಷಗಳ ಕಾಲ ಏಕಾಂಗಿಯಾಗಿ ಆಂಜನೇಯ ಸ್ವಾಮಿಯ ದೇವಾಲಯದಲ್ಲಿ ವಾಸಿಸುತ್ತಿದ್ದರು. ಇವರ ಊರು ಕೋಲಾಳ. ಮಾತಾಡುತ್ತಿದ್ದ ಭಾಷೆ ತಮಿಳು. ಅಲ್ಪ ಸ್ವಲ್ಪ ಕನ್ನಡ ಬರುತ್ತಿತ್ತು. ಇವರು ಒಳ್ಳೆಯ ಆಯುರ್ವೇದ ಔಷಧಿಗಳನ್ನು ಕೊಟ್ಟು ಊರಿನ ಜನರ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಇವರಿಂದ ಔಷಧೋಪಚಾರ ಮಾಡಿಸಿಕೊಂಡ ಹಿರಿಯರು ಈಗಲೂ ಇದನ್ನೆಲ್ಲ ಹೇಳುತ್ತಾರೆ. ಇವರ ಅನುಯಾಯಿಗಳು ಶಿಷ್ಯರು ಆಗಾಗ ಇವರನ್ನು ಕಾಣಲು ಬಂದು ಕೆಲಕಾಲ ಈ ಮಠದಲ್ಲಿ ಉಳಿದು ಹೋಗುತ್ತಿದ್ದರು. ಕಾಲಕ್ರಮೇಣ ಈ ಊರಿನ ಮಡಿವಾಳರ ಗುಡ್ಡಪ್ಪನವರು ಇವರಿಗೆ ಹತ್ತಿರ ದವರಾದರು. ಈಗ ಮಠ ಇರುವಲ್ಲಿ ಸಾಧು ಸಿದ್ಧಪ್ಪಜ್ಜ ಮಡಿವಾಳ ಮಾಚಯ್ಯನ ಗುಡಿ ಕಟ್ಟಿಸಿದ್ದರಂತೆ. ಅಲ್ಲದೆ ರಾಣೆಬೆನ್ನೂರಿನಲ್ಲೂ ಒಂದು ಗವಿಯನ್ನು ಮಾಚದೇವರ ಹೆಸರಿನಲ್ಲಿ ಕಟ್ಟಿಸಿರುವುದು ತಿಳಿದುಬರುತ್ತದೆ. ಇವರಿಗೆ ಐರಣಿ ಸ್ವಾಮಿಯವರ ಜೊತೆ ಅನ್ಯೋನ್ಯ ಸಂಬಂಧವಿತ್ತು. ಸುಮಾರು ೧೯೭೦ರಲ್ಲಿ ಯಾವುದೋ ಒಂದು ಜಗಳವನ್ನು ಬಗೆಹರಿಸಲು ಮಧ್ಯೆ ಪ್ರವೇಶಿಸಿದಾಗ ಬಿದ್ದು ಕಾಲು ಮುರಿದು ಕೊಂಡರು. ಅಲ್ಲಿಂದ ಇವರ ಆರೋಗ್ಯ ದಿನದಿಂದ ದಿನಕ್ಕೆ ಕ್ಷೀಣಿಸುತ್ತಾ ಬಂತು. ಒಬ್ಬಂಟಿಯಾದ ಇವರ ಸೇವೆಯನ್ನು ಅಗಸರ ಗುಡ್ಡಪ್ಪನವರ ಹೆಂಡತಿ ಗೌರಮ್ಮ ಮಾಡುತ್ತಿದ್ದರಂತೆ. ಅದರ ಕಾಲು ಮುರಿದ ಕಾಲದಲ್ಲಿ ಮುರುಘರಾಜೇಂದ್ರ ಸ್ವಾಮಿಗಳಿಂದ ತಿಂಗಳಾ ಹಣ ಬರುತ್ತಿತ್ತೆಂದು ತಿಳಿದುಬಂದಿದೆ.

ಗುತ್ತೂರಿನ ನದೀ ದಡದಲ್ಲಿ ಆಂಜನೇಯ ದೇವಾಲಯದ ಪಶ್ಚಿಮಕ್ಕೆ ಐವತ್ತಡಿ ಅಂತರದಲ್ಲಿ ಒಂದು ನೆಲಮಾಳಿಗೆ ಇರುವ ೧೦'×೧೦'×೧೦' ಇರುವ ಕೋಣೆಯ ಸಮಾಧಿಯನ್ನು ತಾವು ಸಾಯುವ ಮೊದಲೇ ಕಟ್ಟಿಸಿಕೊಂಡಿದ್ದರು. ಇವರು ಬದುಕಿರುವಾಗ ಆ ಸಮಾಧಿಯೊಳಗೆ ಹೋಗಿ ತಾಸುಗಟ್ಟಲೆ ಧ್ಯಾನಾಸಕ್ತರಾಗಿರು ತ್ತಿದ್ದರು. ಅವರಲ್ಲಿ ಹಲವಾರು ಗ್ರಂಥಗಳು, ತಾಳೆಗರಿಗಳು ಇದ್ದುವು. ಅವರಿಂದ ಆಯುರ್ವೇದ ಅಲ್ಪ ಸ್ವಲ್ಪ ಕಲಿತಿರುವ ಮಡಿವಾಳ ಹಾಲಪ್ಪನವರು ಈಗಲೂ ಚೇಳು ಕಡಿತ, ಹಾವು ಕಡಿತ ಅಲ್ಲದೆ ಹಲವಾರು ವ್ಯಾಧಿಗಳಿಗೆ ಉತ್ತಮ ಔಷಧಿ ನೀಡುತ್ತಿದ್ದಾರೆ. ಮಡಿವಾಳ ಹಾಲಪ್ಪನವರ ಮನೆಯಲ್ಲಿ ಮಾತ್ರ ಸಾಧು ಸಿದ್ಧಪ್ಪಜ್ಜನ ಛಾಯಾ ಚಿತ್ರವಿದೆ. ಮಡಿವಾಳ ಗೌರಮ್ಮನ ಮಗ ಚಂದ್ರಪ್ಪ ಸಾಧು ಸಿದ್ಧಪ್ಪಜ್ಜನೇ ತಮ್ಮ ಮನೆತನದ ಉದ್ಧಾರಕ್ಕೆ ಕಾರಣ ಎನ್ನುತ್ತಾರೆ. ಸಾಧು ಸಿದ್ಧಪ್ಪನವರು ೪-೯-೧೯೮೦ರಲ್ಲಿ ಸಮಾಧಿಸ್ಥರಾದರು ಆಗ ಅವರೇ ಕಟ್ಟಿದ ಸಮಾಧಿಯಲ್ಲಿ ಶವಸಂಸ್ಕಾರ ನಡೆಸಿ ಸಮಾಧಿಯ ಕೋಣೆಯ ಬಾಗಿಲನ್ನು ಭದ್ರವಾಗಿ ಮುಚ್ಚಲಾಗಿದೆ. ಅವರ ನಂತರ ೨೦ ವರುಷ ಕಾಲ ಈ ಮಠ ಹಾಳು ಬಿದ್ದಿತು. ಆಗಾಗ ಬರುತ್ತಿದ್ದ ಸಿದ್ಧಪ್ಪ ಸಾಧುವಿನ ಶಿಷ್ಯರು ಅವರಲ್ಲಿದ್ದ ಗ್ರಂಥ, ತಾಳೆಗರಿಗಳನ್ನು ತೆಗೆದುಕೊಂಡು ಹೋಗಿ ದ್ದಾರೆಂದು ಮಡಿವಾಳ ಬಾಲಪ್ಪರವರಿಂದ ತಿಳಿದುಬಂದಿದೆ.

ಗುತ್ತೂರು ಊರೊಳಗೆ ಇರುವ ಬಸವಣ್ಣನ ಗುಡಿ ಇತ್ತೀಚಿನದಾದರೂ ಇದರಲ್ಲಿ ಬಳಸಲ್ಪಟ್ಟಿರುವ ಕಲ್ಲುಕಂಬಗಳು ಭುವನೇಶ್ವರಿಯಲ್ಲಿರುವ ನಾಗಮಂಡಲ, ಶಿವಲಿಂಗ ಬಸವಣ್ಣ ಎಲ್ಲವೂ ರಾಮಲಿಂಗೇಶ್ವರ ದೇವಾಲಯದ ಅವಶೇಷಗಳಾಗಿವೆ. ಇದೇ ರೀತಿ ಪ್ರಾಚೀನ ರಾಮಲಿಂಗೇಶ್ವರ ದೇವಾಲಯದ ಕಲ್ಲು ಕಂಬಗಳನ್ನು ನಾರಾಯಣಸ್ವಾಮಿ ಆಶ್ರಮದ ದೇಗುಲದ ನಿರ್ಮಾಣದಲ್ಲಿ ಬಳಕೆಯಾಗಿವೆ ಎಂದು ಊರಿನ ಜನರು ತಿಳಿಸಿದ್ದಾರೆ. ಕಲ್ಲುಕಂಬ, ಲಿಂಗ ಇವುಗಳನ್ನು ಗಮನಿಸಿದಾಗ ಇವು ಸುಮಾರು ೧೨ನೇ ಶತಮಾನದ ಕಾಲಕ್ಕೆ ಸೇರಿರಬಹುದು. ಹೆಚ್ಚಾಗಿ ಕಲ್ಯಾಣ ಚಾಲುಕ್ಯರ ಕಾಲದವಿರಬಹುದು ಎಂದು ನನ್ನ ಅನಿಸಿಕೆ.

ಬಸವಣ್ಣನ ಗುಡಿಯ ಗೋಡೆಯ ಹೊರಗೆ ಒಂದು ಶಿಲ್ಪಕಲಾ ಪಟ್ಟಿಕೆ ಮಣ್ಣಿನಲ್ಲಿ ಹೂತು ಹೋಗಿತ್ತು. ಗ್ರಾಮಸ್ಥರ ಸಹಾಯದಿಂದ

ಅದನ್ನು ಅಗೆಸಿ ಹೊರ ತೆಗೆದಾಗ ಸುಂದರವಾದ ಅಷ್ಟದಿಕ್ಪಾಲಕರ ಒಂದು ಪಟ್ಟಿಕೆ ದೊರೆಯಿತು. ವೃಷಭಾರೂಢರಾದ ಉಮಾ ಮಹೇಶ್ವರ, ಅಶ್ವಾರೂಢರಾದ ಉಮಾಮಹೇಶ್ವರರ ಕೆತ್ತನೆ ತುಂಬಾ ಸುಂದರವಾಗಿದೆ. ಇದು ಕೂಡ ರಾಮಲಿಂಗೇಶ್ವರ ದೇವಾಲಯದ ಹಾಳು ದಿಬ್ಬದಲ್ಲಿ ದೊರೆತ ಪಟ್ಟಿಕೆಯಾಗಿದೆ ಎಂದು ಊರವರು ತಿಳಿಸಿದಾಗ ಖಂಡಿತವಾಗಿ ನದೀ ದಡದಲ್ಲಿ ಪ್ರಾಚೀನವಾದ ಒಂದು ಶೈವ ದೇವಾಲಯವಿತ್ತು ಎನಿಸುತ್ತದೆ. ಆದರೆ ಪ್ರತಿ ವರುಷ ಮಳೆಗಾಲದಲ್ಲಿ ಪ್ರವಾಹದಿಂದ ಜಲ ಸಮಾಧಿಯಾಗುತ್ತಿದ್ದ ಈ ಗುಡಿ ಕಾಲ ಕ್ರಮೇಣ ಶಿಥಿಲಗೊಂಡು ಈಗ್ಗೆ ಸುಮಾರು ನೂರು ವರುಷಗಳ ಹಿಂದೆ ಬಿದ್ದುಹೋಗಿರಬೇಕು. ಈ ಪಟ್ಟಿಕೆಯ ಕೆಳಭಾಗದ ಅಂಚಿನಲ್ಲಿ ಪಟ್ಟಿಕೆಯ ಮೂರು ಭಾಗಗಳಲ್ಲಿಯೂ ಎಂಟೆಂಟು ಸಂಗೀತ ನರ್ತನ ಪ್ರವೃತ್ತರಾದ ಎರಡಿಂಚು ಗಾತ್ರದ ಜನ ಸಮುದಾಯ ಕಾಣಬಹುದು. ಈ ಪಟ್ಟಿಕೆಯು ಹರಿಹರೇಶ್ವರ ದೇವಾಲಯದಲ್ಲಿ ನವರಂಗದಲ್ಲಿ ಕಂಡುಬರುವ ಭುವನೇಶ್ವರಿ ಯಲ್ಲಿರುವ ಅಷ್ಟದಿಕ್ಪಾಲಕರ ಪಟ್ಟಿಕೆಯನ್ನು ಹೋಲುತ್ತದೆ. ಈ ಬಗ್ಗೆ ಯಾವದೇ ಶಾಸನಾಧಾರ ಸಿಗಲಿಲ್ಲವಾದರೂ ಚಾಲುಕ್ಯರ ಸಾಮಂತರಾದ ಪಾಂಡ್ಯಕುಲದ ವೀರ ಪಾಂಡ್ಯನ ಶಾಸನದಲ್ಲಿ ಗುತ್ತೂರಿನ ಉಲ್ಲೇಖವಿರುವುದು ಸುಮಾರು ೧೨ನೇ ಶತಮಾನ ದಲ್ಲಿ ಗುತ್ತೂರು ಪ್ರಸಿದ್ಧ ಒಂದು ಗ್ರಾಮವಾಗಿರಬೇಕು. ಅದೇ ಕಾಲದಲ್ಲಿ ಇಲ್ಲಿ ದೇವಾಲಯ ನಿರ್ಮಾಣವೂ ಆಗಿರಬೇಕು. ಅದಕ್ಕೆ ಸಂಬಂಧಿಸಿದ ಶಾಸನವು ನಮಗೆ ಇನ್ನೂ ಸಿಕ್ಕಿಲ್ಲ. ಈ ದಿಕ್ಪಾಲಕ ಪಟ್ಟಿಕೆಯು ಕೆತ್ತನೆ ತುಂಬಾ ಸುಂದರವಾಗಿದೆ. ಹಾಗೂ ಹರಿಹರೇಶ್ವರ ದೇವಾಲಯದ ದಿಕ್ಪಾಲಕರ ಪಟ್ಟಿಕೆಯನ್ನು ಹೋಲುತ್ತಿದೆಯಾದರೂ ಇದು ಹೊಯ್ಸಳರ ಕಾಲಕ್ಕೆ ಸೇರಿರಲಿಕ್ಕಿಲ್ಲ. ಏಕೆಂದರೆ ರಾಮ ಲಿಂಗೇಶ್ವರ ದೇವಾಲಯದಲ್ಲಿ ದೊರೆತ ಕಂಬಗಳು ಹೊಯ್ಸಳ ವಾಸ್ತುವನ್ನು ಹೋಲುತ್ತಿಲ್ಲ. ಅವು ಚಾಲುಕ್ಯರ ಕಾಲವನ್ನು ಪ್ರತಿಪಾದಿಸುತ್ತವೆ. ಎರಡನೆಯದಾಗಿ ಚಾಲುಕ್ಯರ ಕಾಲದ ಶಾಸನದಲ್ಲಿ ಗುತ್ತಿವೂರಿನ ಉಲ್ಲೇಖವಿರುವುದು ಆ ಕಾಲದಲ್ಲಿ ಗುತ್ತೂರು ರಾಜ್ಯರ ಮನ್ನಣೆಗೆ ಪಾತ್ರವಾಗಿತ್ತು. ಕಾರಣ ಅದೇ ಕಾಲದಲ್ಲಿ ಇಲ್ಲಿ ದೇವಾಲಯದ ನಿರ್ಮಾಣವೂ ಆಗಿರಬೇಕು ಎಂದು ನನ್ನ ಅನಿಸಿಕೆಗೆ ಪುಷ್ಠಿ ಕೊಡುತ್ತದೆ.

ಇನ್ನು ಕೊನೆಯದಾಗಿ ಗುತ್ತೂರಿನಿಂದ ಹಳ್ಳ್ಯಾಳಕ್ಕೆ ಹೋಗುವ ಕಾಲದ ದಾರಿಯಲ್ಲಿ ಇಟ್ಟಿಗೆ ಭಟ್ಟಿಗಳ ನಡುವೆ ಬೇವಿನ ಮರಕ್ಕೆ ಒರಗಿಸಿ ಇಟ್ಟಿರುವ ವೀರಗಲ್ಲು ಈ ವೀರಗಲ್ಲಿನಲ್ಲಿ ಲಿಪಿ ಇತ್ತಾದರೂ ಊರ ದನಗಾಹಿಗಳು ಇದನ್ನು ಕುಟ್ಟಿ ಯಾವ ಅಕ್ಷರವೂ ಕಾಣದಂತೆ ಮಾಡಿದ್ದಾರೆ.

ಈ ವೀರಗಲ್ಲನ್ನು ೩೦ ಸೆಂ.ಮೀ. ದಪ್ಪದ ಕಾಡುಗಲ್ಲಿನಲ್ಲಿ ಕೆತ್ತಲಾಗಿದೆ. ವೀರಗಲ್ಲಿನ ಎತ್ತರ ೩೦೫ ಸೆಂ.ಮೀ. ಇದ್ದು ತಳದ ಅಗಲ ೧೪೫ ಸೆಂ.ಮೀ.ಗಳು ಇದೆ. ಮೇಲಕ್ಕೆ ಹೋದಂತೆ ಅಗಲ ಕಡಿಮೆಯಾಗುತ್ತಾ ಬಂದಿದೆ. ಈ ವೀರಗಲ್ಲಿನಲ್ಲಿ ಮೂರು ಭಾಗಗಳಿವೆ. ಪ್ರತಿಯೊಂದು ಭಾಗವು ಸುಮಾರು ೩೦ ಸೆಂ.ಮೀ. ಅಗಲದ ಪಟ್ಟಿಯಿಂದ ಬೇರ್ಪಡಿಸಲ್ಪಟ್ಟಿದೆ. ಅತ್ಯಂತ ಕೆಳಗಿನ ಪಟ್ಟಿಯಲ್ಲಿ ವೀರನೊಬ್ಬನು ಊರ ಪಶುಗಳ ರಕ್ಷಣೆಗಾಗಿ ಬಿಲ್ಲು ಬಾಣಗಳಿಂದ ಹೋರಾಡುತ್ತಿರುವುದು, ದನ ಕರುಗಳ ದೃಶ್ಯ, ಒಬ್ಬನು ಸತ್ತು ಕೆಳಗುರುಳಿರುವ ದೃಶ್ಯವನ್ನು ಕಾಣಬಹುದು. ಬಲಗಡೆಯಲ್ಲಿ ಶತ್ರುಗಳ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ಮೊದಲನೆ ಮತ್ತು ಎರಡನೆ ಪಟ್ಟಿಯ ನಡುವಿನ ಪಟ್ಟಿಕೆಯಲ್ಲಿ ೪೩ ಸೆಂ.ಮೀ. ಉದ್ದದ ನೇಗಿಲಿನ ಉಬ್ಬು ಕೆತ್ತನೆ ಇದೆ. ೧೮ ಸೆಂ.ಮೀ. ಉದ್ದದ ಬಾಳು ಇದೆ. ಇದೇ ಸ್ತರದಲ್ಲಿ ಒಂದೆರಡು ಅಕ್ಷರಗಳು ಗೋಚರವಾಗುತ್ತಿವೆ. ಎರಡನೇ ಭಾಗದಲ್ಲಿ ನಿಂತಿರುವ ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಇದರ ಇಬ್ಬದಿಗಳಲ್ಲಿ ಪೂರ್ಣ ಕುಂಭಗಳನ್ನು ಕೆತ್ತಲಾಗಿದೆ. ಮೂರನೇ ಸ್ತರದಲ್ಲಿ ಮಂಟಪದಲ್ಲಿ ಮುದ್ರೆಯಲ್ಲಿ ಆಸೀನನಾಗಿರುವ ವೀರನಿಗೆ ಇಬ್ಬದಿಗಳಲ್ಲಿ ನಿಂತಿರುವ ಅಪ್ಸರೆಯರು ಚಾಮರ ಹಿಡಿದು ಅವನ ಸೇವೆ ಮಾಡುತ್ತಿದ್ದಾರೆ. ವೀರಗಲ್ಲನ್ನು ಬೇವಿನ ಮರಕ್ಕೆ ಒರಗಿಸಿ ನಿಲ್ಲಿಸಿದ್ದಾರೆ. ಈ ಹೊಲವು ಗೌಳಿಯರ ರುದ್ರಪ್ಪ ಅವರಿಗೆ ಸೇರಿದೆ.

ವೀರಗಲ್ಲಿನಲ್ಲಿರುವ ಕುಂಭ ಮತ್ತು ನೇಗಿಲು ಕಾಲದ ಗ್ರಹಿಕೆಗೆ



ಸಹಾಯಕವಾಗಿ ನಿಂತು ಇದು ರಾಷ್ಟ್ರಕೂಟರ ಕಾಲದ ಒಂದು ವೀರಗಲ್ಲು ಎಂದು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿದೆ. ಹರಿಹರದ ಇತಿಹಾಸದಲ್ಲಿ ಸುಮಾರು ಏಳನೆಯ ಶತಮಾನದ ಬಾದಾಮಿ ಚಾಲುಕ್ಯ ವಿನಯಾದಿತ್ಯನ ತಾಮ್ರ ಶಾಸನದ ನಂತರ ಹನ್ನೆರಡನೆ ಶತಮಾನದವರೆಗೆ ಇತಿಹಾಸಕ್ಕೆ ಸಂಬಂಧಿಸಿದ ಯಾವ ಆಧಾರಗಳೂ ನಮಗೆ ದೊರೆತಿಲ್ಲ. ಅಲ್ಲಿಂದ ಕಲ್ಯಾಣಿ ಚಾಲುಕ್ಯರ ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲನ (ಕ್ರಿ. ಶ. ೧೧೩೯ ರಿಂದ ೧೧೪೦) ಆಳ್ವಿಕೆ ಕಾಲದ ಶಾಸನವು ಹರಿಹರದ ಇತಿಹಾಸ ಸೃಷ್ಟಿಸುತ್ತಿದೆ. ಈಗ ಸಿಕ್ಕಿರುವ ರಾಷ್ಟ್ರಕೂಟರ ಕಾಲದ ಈ ವೀರಗಲ್ಲು ಹರಿಹರ ಮತ್ತು ಅದರ ಅಂಚಿನಲ್ಲಿರುವ ಗ್ರಾಮಗಳೂ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿರುವುದನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಹರಿಹರಕ್ಕೆ ಹೊಂದಿಕೊಂಡಿರುವ ಗುತ್ತಿವೂರು ಹರಿಹರದ ಇತಿಹಾಸ ಸೃಷ್ಟಿಸುವುದರಲ್ಲಿ ಒಂದು ಹೊಸ ಮಜಲಿಗೆ ಕಾರಣವಾಗಿದೆ.



(ಈ ಸಂಶೋಧನೆಗೆ ಸಹಾಯಕರಾದ ಶ್ರೀ ಶಾಂತ ಗಂಗಾಧರ ಸ್ವಾಮಿಯವರಿಗೆ, ಗುತ್ತೂರಿನ ಗ್ರಾಮಸ್ಥರಿಗೆ ನನ್ನ ಧನ್ಯವಾದಗಳು.)

ಕೆ. ನಾರಾಯಣ ನಾಯಕ್*

# ಕುಳೂರು ಮಾಗಣೆಯ ಇತಿಹಾಸ - ಒಂದು ಅವಲೋಕನ

ಕರಾವಳಿ ಕರ್ನಾಟಕದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ (ಈಗಿನ ಉಡುಪಿ ಮತ್ತು ದ. ಕ. ಜಿಲ್ಲೆಗಳು) ಹಾಗೂ ಕೇರಳಕ್ಕೆ ಸೇರಿರುವ ಕಾಸರಗೋಡು ತಾಲೂಕು ಒಳಗೊಂಡ ಭೂಪ್ರದೇಶವು ಮೊದಲು ಕದಂಬ ಹಾಗೂ ಅಲೂಪರ ಅಧೀನವಿದ್ದು, ನಂತರ ಹೊಯ್ಸಳರ ಕಾಲದಲ್ಲಿ ಜೈನರಸರ ಪ್ರಾಬಲ್ಯಕ್ಕೆ ಒಳಗಾಯಿತು. ವಿಜಯನಗರ ಆಳ್ವಿಕೆಯ ಕಾಲದಲ್ಲಿ ಎಂದರೆ ಸುಮಾರು ೧೪ನೆಯ ಶತಮಾನದ ಮಧ್ಯಕಾಲದಲ್ಲಿ ಬಂಗರಸರು, ಭೈರವರಸರು, ಚೌಟರಸರು, ಸಾವಂತ ಅರಸರು, ಅಜಿಲ ಅರಸರು, ಕುಂಬಳೆ ಅರಸರು ಮೊದಲಾದವರು ಇಲ್ಲಿ ರಾಜ್ಯವಾಳಿದರು. ಇವರಲ್ಲಿ ಹೊನ್ನೆಯ ಕಂಬಳಿ, ವಿಟ್ಲದ ಅರಸರು ಮತ್ತು ಕುಂಬಳೆ ಅರಸರನ್ನು ಬಿಟ್ಟರೆ ಉಳಿದವರೆಲ್ಲರೂ ಜೈನಮತೀಯರು. ಕನ್ನಡ ನಾಡಿನ ಅರಸುಗಳ ಸಾರ್ವಭೌಮತೆಯನ್ನು ಒಪ್ಪಿಕೊಂಡು ಆಳಿದ ಈ ತುಳುನಾಡಿನ ಅರಸು ಮನೆತನಗಳು ಒಳಾಡಳಿತದಲ್ಲಿ ಹೆಚ್ಚಿನ ಸ್ವಾತಂತ್ರ್ಯವನ್ನು ಹೊಂದಿದ್ದು, ಈ ನೆಲದ ಕಟ್ಟುಕಟ್ಟಳೆಗಳನ್ನು ಅನುಸರಿಸಿ ಆಡಳಿತ ನಡೆಸಿದರು. ರಾಜ್ಯವನ್ನು ಮಾಗಣೆ, ಗ್ರಾಮ ಮತ್ತು ಗುತ್ತುಗಳಾಗಿ ಆಡಳಿತದ ಅನುಕೂಲಕ್ಕಾಗಿ ವಿಭಜಿಸಲಾಗಿತ್ತು. ಕೆಲವು ಗ್ರಾಮಗಳು ಸೇರಿದ ಈ ಮಾಗಣೆಗೆ ಸೀಮೆ ಅಥವಾ ನಾಡು ಎಂಬ ಹೆಸರು ಇತ್ತು. ಈ ಮಾಗಣೆ ಯಾ ಸೀಮೆಗೆ ಜೈನ ಬಲ್ಲಾಳರು ಅಥವಾ ಹೆಗ್ಗಡೆಯವರು ಅಧಿಕಾರಿಗಳಾಗಿ ವಂಶಪಾರಂಪರ್ಯವಾಗಿ ಅಳಿಯ ಸಂತಾನದಂತೆ ಮಾಗಣೆಯ ಬೀಡಿನಲ್ಲಿ ಪಟ್ಟವನ್ನೇರಿ ಆಡಳಿತ ನಡೆಸಿದರು.

*"ಪ್ರತಿ ಗ್ರಾಮವನ್ನು ನಾಲ್ಕು ಪಾಲು ಮಾಡಿ ನಾಲ್ಕು ಗುರಿಕಾರರೊಳಗೆ ಹಂಚಿ, ಅದಕ್ಕೆ ಗಡಿ ಹಾಕಿ ಕೊಡುತ್ತಿದ್ದರು. ಆ ಗಡಿಯೊಳಗಿರುವ ಭೂಮಿಯ ಕಂದಾಯವನ್ನು ಗುರಿಕಾರರು ಕೂಡಿಸಿ ಕೊಡಬೇಕಿತ್ತು. ಆದುದರಿಂದ ಪ್ರತಿಯೊಬ್ಬ ಗುರಿಕಾರನಿಗೆ **ಗಡಿ ಹಾಕಿದ ಗುತ್ತಿನವನು** ಎಂಬ ಹೆಸರು ಬಂತು. ಗ್ರಾಮ ಗುತ್ತಿನ ಗುರಿಕಾರರು ಗ್ರಾಮಗಳಲ್ಲಿರುವ ನ್ಯಾಯಗಳನ್ನು ಗ್ರಾಮ ದೇವಸ್ಥಾನ ಅಥವಾ ದೈವಸ್ಥಾನದ ಮುಂದಿರುವ ಚಾವಡಿಯಲ್ಲಾಗಲೀ, ಅಶ್ವತ್ಥ ಕಟ್ಟೆಯಲ್ಲಾಗಲೀ ಒಟ್ಟಿಗೆ ಕೂಡಿಬಂದು ತೀರ್ಮಾನಿಸುತ್ತಿದ್ದರು. ಮರಣದಂಡನೆ ವಿಧಿಸುವ ಅಧಿಕಾರ ಈ ಗ್ರಾಮಗುರಿಕಾರರಿಗೆ ಇರಲಿಲ್ಲ. ಆಯಾ ಜಾತಿಯ ನ್ಯಾಯಗಳನ್ನು ತೀರಿಸಲಿಕ್ಕಾಗಿ, ಜಾತಿ-ನೀತಿಯ ವಿಷಯವಾಗಿ ಆಯಾ ಜಾತಿಯ ಗುರಿಕಾರರು ಇದ್ದರು."*

*ಮಾಗಣೆಗಳ ನ್ಯಾಯವನ್ನು ತೀರಿಸುವುದಕ್ಕಾಗಿ ಪ್ರತಿಯೊಂದು ಗ್ರಾಮದಿಂದ ಅಥವಾ ಹೆಚ್ಚು ಗ್ರಾಮಗಳು ಇರುವಲ್ಲಿ ೨ ಅಥವಾ ೩ ಗ್ರಾಮಗಳಿಗೆ ಒಬ್ಬನ ಪ್ರಕಾರ ಮಾಗಣೆ ಗುರಿಕಾರರನ್ನು ಆರಿಸುತ್ತಿದ್ದರು. ಪ್ರತಿಯೊಂದು ಮಾಗಣೆಯಲ್ಲಿ ನಾಲ್ಕು ಗುರಿಕಾರರು ಇದ್ದರು. **ಬಲ್ಲಾಳಿಕೆ ಪಟ್ಟವು ಗಂಡಸರಿಗೂ ಹೆಂಗಸರಿಗೂ ಆಗುತ್ತಿತ್ತು.** ಆದರೆ, ಮಾಗಣೆ ಗುರಿಕಾರರು ಗಂಡಸರೇ ಆಗಿದ್ದರು. ಈ ಗುರಿಕಾರರಿಗೆ ಕ್ರಮಾಗತವಾಗಿ ಒಂದನೆಯ ಬಾವದವರು, ಎರಡನೇ ಬಾವದವರು, ಬಾಳಿಕೆಯವರು ಮತ್ತು ಪರಾರಿಯವರೆಂದು ಹೆಸರಿತ್ತು. ಗ್ರಾಮ ಮತ್ತು ಮಾಗಣೆ ಗುತ್ತುಗಳ ಗುರಿಕಾರರು ಬಂಟರು ಯಾ ನಾಡವರಾಗಿದ್ದರು.*

ಶ್ರೀ ಗಣಪತಿರಾವ್ ಐಗಳ್‌ರವರು ತಮ್ಮ "ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ" (೧೯೨೩) ಗ್ರಂಥದಲ್ಲಿ ಈ ಮಾಗಣೆಗಳ ವಿವರವನ್ನು ಸಂಕ್ಷಿಪ್ತವಾಗಿ ನೀಡಿರುವರು. ಮಂಗಳೂರು ತಾಲೂಕಿನಲ್ಲಿರುವ **ಕುಳೂರು ಮಾಗಣೆಯು** ಈಗ ಮಂಗಳೂರು ಮಹಾನಗರ ಪಾಲಿಕೆಯೊಳಗೆ ಬರುವ ಪಂಜಿ ಮೊಗರು, ಪಡುಕೋಡಿ, ಕಾವೂರು, ಕುಂಜತ್ತಬೈಲು, ಮರಕಡ ಮತ್ತು ಕುಳೂರು - ಈ ಆರು ಗ್ರಾಮಗಳನ್ನು ಒಳಗೊಂಡಿತ್ತು. ತೀವ್ರ ನಗರೀಕರಣ ಮತ್ತು ಕೈಗಾರಿಕೀಕರಣದ ಭರದ ಕಾಲಗತಿಯಲ್ಲಿ ಜೀವನದ ಮೌಲ್ಯಗಳು ಬದಲಾಗುತ್ತಿರುವ ದಿಸೆಯಲ್ಲಿ ಚಾರಿತ್ರಿಕ ಮಾಗಣೆ ಆಳ್ವಿಕೆಯ ಪಳೆಯುಳಿಕೆಗಳನ್ನು ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ತಿಳಿಯಲು ಪ್ರಯತ್ನಿಸುವುದು ಅಗತ್ಯವೆಂದು ಮನಗಂಡು ಈ "ಕುಳೂರು ಮಾಗಣೆ"ಯ ಸಂಕ್ಷಿಪ್ತ ಐತಿಹಾಸಿಕ ಅವಲೋಕನದ ಯತ್ನವನ್ನು ಸದ್ಯ ಮಾಡಲಾಗಿದೆ.

ಕುಳೂರು ಮಾಗಣೆಯ ಭೂಸ್ವರೂಪವನ್ನು ಅವಲೋಕಿಸಿದರೆ, ಪ್ರಾಕೃತಿಕವಾಗಿ ಇತರ ಪ್ರದೇಶಗಳಿಂದ ಇದು ಪ್ರತ್ಯೇಕವಾಗಿರುವುದು ಗೋಚರವಾಗುವುದು. ಈ ಮಾಗಣೆಯ ಉತ್ತರ ದಿಕ್ಕಿನಲ್ಲಿ ಗುರುಪುರ ನದಿ (ಫಲ್ಗುಣಿ) ಹರಿಯುತ್ತಿದೆ. ನದಿಯಾಚೆ ಐತಿಹಾಸಿಕ ಮುದ್ದ ಹೆಗ್ಗಡೆಯ ಆಳ್ವಿಕೆಯಿದ್ದ ಪಣಂಬೂರು ಮಾಗಣೆ (ಪಣಂಬೂರು, ತಣ್ಣೀರು ಬಾವಿ, ಹೊಸಬೆಟ್ಟು, ಬೈಕಂಪಾಡಿ, ಕುಳ್ಯಾ-ಗ್ರಾಮಗಳು) ಇದೆ. ಇದರ ಪೂರ್ವಕ್ಕೆ ಪೇಜಾವರ ಮಾಗಣೆ ಗ್ರಾಮಗಳು ಇವೆ. ಎತ್ತರವಾಗಿರುವ ಬೊಂದೇಲು ಪದವು ಕುಳೂರು ಮಾಗಣೆಯ ಪೂರ್ವದಲ್ಲಿದೆ. ದಕ್ಷಿಣದಲ್ಲಿ ಮುಳ್ಳಕಾಡು ಬೆಟ್ಟದ ಸಾಲು ಪಶ್ಚಿಮ ದಿಸೆಯ ಬಯಲಿನ ಅಂಚಿನಿಂದ ಪೂರ್ವದ ಬೊಲ್ಪುಗುಡ್ಡೆಯವರೆಗೂ ಚಾಚಿಕೊಂಡಿದೆ. ಇದರ ಸೆರಗಿನಲ್ಲಿಯೇ ಬಂಗರ ಸೀಮೆಯ ದೇರೆಬೈಲು, ಬೋಳೂರು

*ಇತಿಹಾಸ ಉಪನ್ಯಾಸಕರು, ಸರಕಾರಿ ಪದವಿ ಪೂರ್ವ ಕಾಲೇಜು, ಕಾವೂರು, ಮಂಗಳೂರು - ೫೭೫ ೦೧೫.

ಗ್ರಾಮಗಳಿವೆ. (ಮಂಗಳೂರು ನಗರ) ಈ ಮಾಗಣೆಯ ಪಶ್ಚಿಮದಲ್ಲಿ ಫಲವತ್ತಾದ ಬಯಲು ಕುಳೂರು, ಪಡುಕೋಡಿ ಗ್ರಾಮಗಳನ್ನು ಆವರಿಸಿದೆ. (ನಗರೀಕರಣಕ್ಕೆ ಒಳಗಾಗಿ ಬಯಲು ಕಣ್ಮರೆಯಾಗುತ್ತಿದೆ!) ಈಗಲೂ ಇಲ್ಲಿ ಬೆಟ್ಟ, ಕಾಡು, ಕಣಿವೆ, ಹಳ್ಳ ಬಯಲುಗಳ ಭೂಸ್ವರೂಪವನ್ನು ಕಾಣಬಹುದಾಗಿದೆ. ವೈವಿಧ್ಯಮಯವಾದ ಸಹಜ ಸಸ್ಯಗಳ ನೆಲೆಯಾಗಿರುವ ಈ ಪ್ರದೇಶವು ಪ್ರಾಕೃತಿಕ ಸೌಂದರ್ಯದ ನೆಲೆವೀಡು ಎಂದೆನ್ನಬಹುದು. ಮಾಗಣೆಯ ಗ್ರಾಮಗಳ ಹೆಸರುಗಳಲ್ಲಿಯೂ ಇಲ್ಲಿನ ಭೂಸ್ವರೂಪದ ವೈಶಿಷ್ಟ್ಯವು ಅಡಗಿದೆ. ಒಂದು ಕಾಲದಲ್ಲಿ ಭತ್ತ, ಕಬ್ಬು, ತೆಂಗು, ಬಾಳೆಯ ಬೆಳೆಗೆ ಹೆಸರು ಪಡೆದ ವ್ಯವಸಾಯ ಭೂ ಪ್ರದೇಶವು ಇದಾಗಿತ್ತು. ರಾಷ್ಟ್ರೀಯ ಹೆದ್ದಾರಿ ಸಂಖ್ಯೆ-೧೭ ಮಂಗಳೂರಿನಿಂದ ಕುಳೂರು ಗ್ರಾಮದ ಮೂಲಕವೇ ಉತ್ತರಕ್ಕೆ ಉಡುಪಿಗೆ ಹಾದುಹೋಗಿದೆ. ನವ ಮಂಗಳೂರು ಬಂದರು, ಮಂಗಳಾ ಗೊಬ್ಬರ ಕಾರ್ಖಾನೆ, ಕುದುರೆಮುಖ ಕಬ್ಬಿಣ ಕಾರಖಾನೆ. ಬೈಕಲಪಾಡಿಯ ಕೈಗಾರಿಕಾ ಸಂಕೀರ್ಣ ಮತ್ತು ಮಂಗಳೂರು ತೈಲಾಗಾರ (MRPL), ನಗರ ಅಂತರ್ಗತವಾಗಿರುವ ಈ ಕುಳೂರು ಮಾಗಣೆಯ ಸನಿಹದಲ್ಲಿಯೇ ನೆಲೆ ನಿಂತಿವೆ. ಐಗಳ್‌ರವರ 'ಇತಿಹಾಸ'ದ ಉಲ್ಲೇಖದಂತೆ, ಈ ಮಾಗಣೆಯ ಬಲ್ಲಾಳರು ಕುಳೂರು ಬೀಡಿನ ಕರ್ಣಂತಾಯ ದೊರೆ ಬಲ್ಲಾಳ ಎಂದು ಕರೆಯಲ್ಪಡುತ್ತಾರೆ. ಇವರು ಜೈನರು. ಕುಳೂರು ಬೀಡು ಮಂಗಳೂರು - ಕುಳೂರು - ಕಾವೂರು ರಸ್ತೆಯಲ್ಲಿ ಪಂಜಿಮೊಗರು ಎಂಬಲ್ಲಿಂದ ಸು. ೩ ಫರ್ಲಾಂಗ್ ದೂರದಲ್ಲಿ (ಎಡಬದಿಯ ಮಾರ್ಗ) ಇದೆ. (ಐಗಳ್‌ರವರು "ಈಗಲೂ ಈ ಮನೆತನದ ಬೀಡು ಪಡುಕೋಡಿ ಗ್ರಾಮದಲ್ಲಿದೆ" ಎಂದು ಬರೆದಿರುವ "ಪಡ್ಡಾಯಿ ಬೀಡು"ದಲ್ಲಿ ಈಗ ಈ ಮನೆತನದ ಸ್ವಾಧೀನ ಇಲ್ಲ ಎಂಬುದಾಗಿ ತಿಳಿಯಲಾಯಿತು.) ಈಗಿನ ಕುಳೂರು ಬೀಡಿನ ಕರ್ಣಂತಾಯ ದೊರೆ ಬಲ್ಲಾಳರು ಶ್ರೀ ವಜ್ರಕುಮಾರ್ ಆಗಿರುತ್ತಾರೆ. ಇವರು ಗುಣಪಾಲ ಬಲ್ಲಾಳ ಕರ್ಣಂತಾಯರ ಮಗ ಹಾಗೂ ನೇಮಿರಾಜ ಬಲ್ಲಾಳ ಕರ್ಣಂತಾಯರ ಮೊಮ್ಮಗ ಆಗಿರುತ್ತಾರೆ. ಇವರೆಲ್ಲರಿಗೂ ಕ್ರಮಕಟ್ಟಳೆಯಂತೆ *ಪಟ್ಟಬಂಧ ಮಹೋತ್ಸವವು* ನಡೆದಿರುತ್ತದೆ. ಶ್ರೀ ವಜ್ರಕುಮಾರ್ ಕರ್ಣಂತಾಯ ದೊರೆ ಬಲ್ಲಾಳರಿಗೆ ತಾ. ೩-೨-೧೯೮೬ ರಂದು ಪಟ್ಟಬಂಧ ಮಹೋತ್ಸವವು ನಡೆಯಿತು. ವಂಶಪಾರಂಪರ್ಯವಾಗಿ ಬಂದಿರುವ *ಪಟ್ಟದ ಮಂಚ* ಈ ಬೀಡಿನ ಚಾವಡಿಯಲ್ಲಿ ಇದೆ. ಇದು ಮಾಗಣೆಯ ದೈವವಾಗಿರುವ *ಜಾರಂದಾಯ ದೈವದ "ಉಜಲ್" ಕೂಡಾ ಆಗಿರುತ್ತದೆ.* ಕಾವೂರಿನ ಶ್ರೀ ಮಹಾಲಿಂಗೇಶ್ವರ ದೇವಸ್ಥಾನವೇ ಮಾಗಣೆಯ ದೇವಸ್ಥಾನವಾಗಿರುತ್ತದೆ. ಬಲ್ಲಾಳರ ರಾಜ ಮುದ್ರೆಯುಂಗುರದಲ್ಲಿ "ಶ್ರೀ ಮಹಾಲಿಂಗೇಶ್ವರ ಪ್ರಸನ್ನಾ" ಎಂದು ಬರೆದಿರುತ್ತದೆ. ಇವರ ಮನೆದೇವರುಗಳು ಪಾರ್ಶ್ವನಾಥ ಸ್ವಾಮಿ ಮತ್ತು ಪದ್ಮಾವತಿ ದೇವಿ. ಪಟ್ಟದ ಚಾವಡಿಯಲ್ಲಿ ಕುಳಿತು ಬಲ್ಲಾಳರು ಕಾರ್ಯಕಲಾಪ ನಡೆಸುತ್ತಿದ್ದರು. ಮಾಗಣೆ ದೈವ ಜಾರಂದಾಯ ಹಾಗೂ ಕಾಂತಿನೇತ್ರಿ



ಧೂಮಾವತಿ, ಮೈಸಂದಾಯ, ಕಲ್ಲುರ್ಟಿ, ಕಲ್ಕುಡ, ಪಂಜುರ್ಲಿ ಮತ್ತು ಗುಳಿಗ ಈ ಬೀಡಿನವರು ನಂಬಿಕೊಂಡು ಬಂದಿರುವ ದೈವ ಭೂತಗಳಾಗಿವೆ. ಬೀಡಿನ ಬಳಿಯಲ್ಲಿಯೇ ಎರಡು ಪ್ರಾಚೀನ ನಾಗಬನಗಳೂ ಇವೆ.

"ತಮ್ಮ ಹಿಂದಿನ ಅಧಿಕಾರ, ವೈಭವಗಳನ್ನು ಪೂರ್ತಿಯಾಗಿ ಕಳೆದುಕೊಂಡಿದ್ದರೂ, ತುಳುನಾಡಿನ ಕೆಲವು ಅರಸು ಮನೆತನಗಳ ಕೆಲವು ಸಾಂಪ್ರದಾಯಿಕ ಆಚರಣೆಗಳು ಇಂದಿಗೂ ಜೀವಂತವಾಗಿವೆ" ಕುಳೂರು ದೊರೆ ಬಲ್ಲಾಳರೂ ಸಾಧ್ಯವಿದ್ದಷ್ಟು ಸಾಂಪ್ರದಾಯಿಕ ಆಚರಣೆಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸದಲ್ಲಿ ಈ ಬಲ್ಲಾಳರಿಗೆ ಪಟ್ಟವಾಗುವ ರೀತಿಯನ್ನು ವಿವರಿಸಲಾಗಿದೆ.

೧. *ಈ ಬಲ್ಲಾಳರಿಗೆ ಪಟ್ಟವಾಗುವಾಗ ಕೈ ಹಿಡಿದು ಪಟ್ಟದ ಮಂಚದ ಮೇಲೆ ಕುಳ್ಳಿರಿಸುವ ಹಕ್ಕು ಒಂದನೇ ಬಾವದ ಗುರಿಕಾರರಾದ ಮಾಲಾಡಿಗುತ್ತಿನವರಿಗೆ (ಮಾಲಾಡಿ ಕಾವೂರು ಗ್ರಾಮದಲ್ಲಿದೆ) ಇದೆ.*

೨. *ಪಟ್ಟದ ಉಂಗುರವನ್ನು ಬಲ್ಲಾಳರ ಕೈ ಬೆರಳಿಗೆ ತೊಡಿಸುವವರು ಪಾಂಜಗುತ್ತಿನವರು. ಇವರು ಎರಡನೇ ಬಾವದವರು. ಪಾಂಜಗುತ್ತು ಮರಕಡ ಗ್ರಾಮದಲ್ಲಿದೆ. (ಐಗಳ್‌ರವರ ಗ್ರಂಥದಲ್ಲಿ ಪಾಣಂಜೆ ಎಂದಿರುತ್ತದೆ)*

೩. *ಪಟ್ಟದ ಕತ್ತಿಯನ್ನು ಬಲ್ಲಾಳರ ಕೈಗೆ ಕೊಡುವವರು ಪಡುಕೋಡಿ ಗುತ್ತಿನವರು. ಇವರು ಬಾಳಿಕೆಯವರು.*

೪. *ಪಟ್ಟದ ಹೆಸರನ್ನು ಕರೆಯುವರು ಯರ್ಮಜಲ (ದೆಪ್ಪುಣಿ) ಗುತ್ತಿನವರು. ಇವರು ಪರಾರಿಯವರು.*

ಈ ಹಕ್ಕುಗಳೆಲ್ಲವೂ ಸಂತಾನ ಪಾರಂಪರ್ಯವಾಗಿ ನಡೆದು ಬಂದವುಗಳಾಗಿವೆ. ಈ ಎಲ್ಲಾ ನಾಲ್ಕು ಗುರಿಕಾರರು ಮಾಗಣೆ ಗುತ್ತುಗಳ ಗುರಿಕಾರರು ಆಗಿರುತ್ತಾರೆ.

ಕುಳೂರು ಕರ್ಣಂತಾಯ ದೊರೆ ಬಲ್ಲಾಳರ ವಂಶಾವಳಿ ದಾಖಲೆ ಲಭ್ಯವಿಲ್ಲ. ಕುಂಜತ್ತಬೈಲು ಮತ್ತು ಕದಿರೆ ಶಾಸನಗಳು ಈ ಬಗ್ಗೆ ಸ್ವಲ್ಪ ಬೆಳಕನ್ನು ಚೆಲ್ಲುತ್ತವೆ. ಕದಿರೆ ಶಾಸನದಲ್ಲಿ ಶಾಲಿವಾಹನ ಶಕವರುಷ ೧೩೦೮ರಲ್ಲು (ಕ್ರಿ. ಶ. ೧೩೮೬) "ಅಜಿಲೆಕೆರೆ ಬಿತ್ತುಮುಡಿ ೨೦ ಬೀರಣ್ಣ ಕದ್ರಿ ಮಂಜನಾಥ ದೇವರಿಗೆ ಬೊಕ್ಕದಳಿಯ (ವಿಜಯನಗರ ಅರಸ ಇಮ್ಮಡಿ ಹರಿಹರನ *೧೩೭೭-೧೪೦೪*ಕೋಶಾಧಿಕಾರಿ) ಕರ್ಣಂತಾಯನ ಕೈಯಲು

ಧಾರಾಪೂರ್ವಕ ಭೂಮಿ ಬಿಟ್ಟಿರುವ" ಉಲ್ಲೇಖವು ಇದೆ. ಇದೇ ಶಾಸನದಲ್ಲಿ "ಬಜಲಾಡಿ ಗದ್ದೆ ಕಳಭೂಮಿ ಬೆಳೆಕಾರು ಮುಡೆ ೬... ಭೂಮಿ ಬಿಟ್ಟಿರುವ" ಉಲ್ಲೇಖವೂ ಇದೆ. ಅಂತೆಯೇ, ಶಾ.ಶ. ೧೩೪೫ರಲ್ಲಿ "ಕುಂದಟ್ಟು ಬೆಟ್ಟು ಮಾದಂಡತಿಮರು ಮುಡೆ ನಾಲ್ಕು ನೀಡಿರುವುದನ್ನು" ತಿಳಿಸಿದೆ. ಈ ಶಾಸನದಲ್ಲಿ "ಕುಳೂರು ಒಳಗಣ ಕರ್ಣಂತಾಯ" ಎಂದಿದೆ.

ಡಾ. ಪಿ. ಎನ್. ನರಸಿಂಹಮೂರ್ತಿಯವರು ಸಂಶೋಧಿಸಿದ ಎರಡು ಶಾಸನಗಳಲ್ಲಿ ಬಂದು ಕ್ರಿ. ಶ. ೧೪೨೯ರಲ್ಲಿ ವಿಜಯನಗರದ ವೀರಪ್ರತಾಪಒಡೆಯರು ಮಹೇಶ್ವರ ದೇವರಿಗೆ ಉಂಬಳಿಯಿತ್ತುದನ್ನು ಸೂಚಿಸುತ್ತದೆ. ಕ್ರಿ. ಶ. ೧೪೩೦ರಲ್ಲಿ ಮಂಗಳೂರು ರಾಜ್ಯಪಾಲ ದೇವರಾಜ ಒಡೆಯರು "ಕಾವನು ಧಾರಾಪೂರ್ವಕ ಧಾರೆಯೆರೆದು ಕೊಟ್ಟನು" ಎಂದಿದೆ. (ಕುಂಜತ್ತ ಬೈಲಿನಲ್ಲಿರುವ ಈ ಶಾಸನಗಳನ್ನು ನಾನು ನೋಡಿರುವೆನು. ಇಲ್ಲಿರುವ ಮೂರು ಶಾಸನಗಳನ್ನು ಈಗ ಓದುವಂತಿಲ್ಲ. ಅವು ಹಾಳಾಗಿವೆ).

ಕೆಳದಿ ವೀರಭದ್ರ ನಾಯಕ (೧೬೨೯-೧೬೪೫) ಮತ್ತು ಶಂಕರದೇವಿ ಬಂಗಾರಾಣಿಗೂ ಆದ ಕರಾರಿನಲ್ಲಿ (ಕ್ರಿ. ಶ. ೧೬೪೧) ***ಕುಳೂರು ಕರ್ಣಂತಾಯನ ಹುಟ್ಟುವಳಿ*** ಎಂಬ ಉಲ್ಲೇಖವಿದೆ. ಕುಳೂರು ಮಾಗಣೆಗೆ ಸೇರಿದ ಇನ್ನೂರ ಹತ್ತು ವರಹದ ಹುಟ್ಟುವಳಿಯನ್ನು ಬಂಗರಸರಿಗೆ ಬಿಡಲಾಗಿ ಈ ಪ್ರದೇಶಕ್ಕೆ ***ಬಂಗ್ರ ಕುಳೂರು*** ಎಂದು ಹೆಸರಾಯಿತು. (ಈಗಲೂ ಅದೇ ಹೆಸರು ಪ್ರಚಲಿತವಿದೆ.) ಮೇಲಿನ ಶಾಸನಗಳನ್ನು ಅವಲೋಕಿಸಿದಾಗ, ಕುಳೂರು ದೊರೆ ಬಲ್ಲಾಳರು ವಿಜಯನಗರ ಅರಸರ ಕಾಲದಿಂದಲೇ ಅಧಿಕಾರವನ್ನು ಹೊಂದಿದ್ದರು ಎಂದು ಸ್ಪಷ್ಟವಾಗುತ್ತದೆ.

ಕಾವೂರಿನಲ್ಲಿರುವ *ಶ್ರೀ ಮಹಾಲಿಂಗೇಶ್ವರ ದೇವಸ್ಥಾನವು* ಕುಳೂರು ಮಾಗಣೆಯ ದೇವಸ್ಥಾನವಾಗಿರುತ್ತದೆ. ಮಂಗಳೂರು ನಗರದಿಂದ ಎಂಟು ಕಿ.ಮೀ. ದೂರದಲ್ಲಿ ಬಜ್ಪೆ, ಕಟೀಲು ಕಡೆಗೆ ಹೋಗುವ ಬಸ್ಸು-ಮಾರ್ಗದ ಸನಿಹದಲ್ಲೇ ಇರುವ ಈ ದೇವಾಲಯ ಜಿಲ್ಲೆಯ ಸುಪ್ರಸಿದ್ಧ ದೇವಾಲಯಗಳಲ್ಲೊಂದಾಗಿದೆ. ವಿಜಯನಗರ ಶೈಲಿಯಲ್ಲಿರುವ ಈ ದೇಗುಲದ ಎದುರು ಬಲಿಪೀಠ, ಧ್ವಜಸ್ತಂಭ, ಒಳಗಡೆ ತೀರ್ಥಮಂಟಪ, ಗರ್ಭಗುಡಿ, ಪ್ರದಕ್ಷಿಣಾ ಪಥ ಮತ್ತು ಸುತ್ತಲೂ ಪಾಳಿ ಇದೆ. ಪ್ರಧಾನ ಆರಾಧನಾ ಮೂರ್ತಿ ಶ್ರೀ ಮಹಾಲಿಂಗೇಶ್ವರ ಲಿಂಗಸ್ವರೂಪಿಯಾಗಿ ಮೂಡುದಿಕ್ಕಿಗೆ ಮುಖ ಮಾಡಿದೆ. ನೈರುತ್ಯದಲ್ಲಿ ಗಣಪತಿ ಮತ್ತು ವಾಯವ್ಯದಲ್ಲಿ ಶಾಸ್ತಾರ (ಅಯ್ಯಪ್ಪ ಸ್ವಾಮಿ) ಇಲ್ಲಿನ ಉಪದೇವತೆಗಳು. ಆಗಮಶಾಸ್ತ್ರ ಪ್ರಕಾರ ಪೂಜೆಗೊಳ್ಳುವ ಶ್ರೀ ಮಹಾಲಿಂಗೇಶ್ವರ ದೇವರು ಭಕ್ತರ ಇಷ್ಟಾರ್ಥ ದೇವರೆನಿಸಿದ್ದಾನೆ. ಮಳೆಗಾಗಿ ನಡೆಸುವ ಸೀಯಾಳ (ಎಳನೀರು) ಅಭಿಷೇಕ ಇಲ್ಲಿನ ವೈಶಿಷ್ಟ್ಯಗಳಲ್ಲೊಂದಾಗಿದೆ. ದೇಗುಲದ ಎದುರಿನ ಅಂಗಣದಲ್ಲಿ ರಕ್ತೇಶ್ವರಿ ಮತ್ತು ಹೊರಗೆ ಬಲಬದಿಯಲ್ಲಿ ಮರುಳು ಧೂಮಾವತಿ ದೈವದ ಪೀಠಗಳು ಇವೆ. ಪೂರ್ವದ ಮೆಟ್ಟಲಿನ ಬದಿಯಲ್ಲಿ ನಾಗಬನ ಒಂದಿದೆ. ಸನಿಹದಲ್ಲಿರುವ ಪ್ರಾಚೀನ ಕೆರೆಯ



ಸಂರಕ್ಷಣೆ ಮಾಡುವ ಅವಶ್ಯಕತೆಯು ಕಂಡುಬರುತ್ತದೆ.

ಐಗಳ್‌ರವರ ಉಲ್ಲೇಖದಂತೆ, ಈಗಲೂ ಇಲ್ಲಿ ಪರಂಪರಾನುಗತ ಕ್ರಮ ಕಟ್ಟಳೆ ರೂಢಿಗಳನ್ನು ದೇವಸ್ಥಾನದ ಉತ್ಸವ ಆಚರಣೆಗಳಲ್ಲಿ ಅನುಸರಿಸುತ್ತಾರೆ. ಬಲ್ಲಾಳ ಮತ್ತು ಮಾಗಣೆ ಗುರಿಕಾರರು ವರ್ಷಾವಧಿ ಉತ್ಸವಕ್ಕೆ ಒಟ್ಟು ಸೇರಿ ದಿನ ನಿಶ್ಚಯಿಸಿ, ಬಾಳೆಗೊನೆ ಕಡಿಯುವ ವಾಡಿಕೆಯಿದೆ. ಇದರ ನಂತರ ಉತ್ಸವ ಮುಗಿಯುವವರೆಗೆ, "ಯಾವ ತರದ ಶುಭಾಶುಭ ಕೆಲಸಗಳನ್ನು ಮಾಡಕೂಡದೆಂದೂ, ಮಾಗಣೆ ಬಿಟ್ಟು ಊರು - ಪರವೂರಿಗೆ ಹೋಗಕೂಡದೆಂದೂ ಕಟ್ಟಳೆ ಈಗಲೂ ಇದೆ. ಈ ಮಾಗಣೆಯಲ್ಲಿ ಪುರಾತನ ಕಾಲದಿಂದಲೂ ಇದ್ದ ವಂಶದವರು ಇದನ್ನು ಈಗಲೂ ಅನುಸರಿಸುತ್ತಾರೆ." ದೇವರ ಉತ್ಸವಕ್ಕೆ ಬಲ್ಲಾಳರನ್ನು ರಾಜ ವೈಭವದಲ್ಲಿ ಮಾಗಣೆಯವರು ಕರೆದುಕೊಂಡು ಬರುತ್ತಿದ್ದರು. ಬಲ್ಲಾಳರು ಕುಳಿತುಕೊಳ್ಳುವ ***ಬಲ್ಲಾಳ ಕಟ್ಟೆ*** ಈಗಲೂ ದೇವಾಲಯ ಮುಂಬದಿಯಲ್ಲಿದೆ. "ಕಾವೂರು ದೇವಸ್ಥಾನದ ಅರ್ಚಕರು ರಾಜಪುರೋಹಿತರೆಂದು ಕರೆಯಲ್ಪಡುತ್ತಾರೆ". ಶ್ರೀ ಶ್ರೀನಿವಾಸ ಭಟ್ಟರು ದೇವಾಲಯದ ಅರ್ಚಕರಾಗಿರುತ್ತಾರೆ. ಇತ್ತೀಚೆಗೆ ಎಂದರೆ, ೧೯೮೨ರಲ್ಲಿ ದೇವಾಲಯ ಜೀರ್ಣೋದ್ಧಾರ ಹೊಂದಿ ಬ್ರಹ್ಮ ಕಲಶಾಭಿಷೇಕೋತ್ಸವವು ಜರಗಿತು.

ತುಳುನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಈ ಕುಳೂರು ಮಾಗಣೆಯ ಪ್ರದೇಶದಲ್ಲಿ ಈಗಲೂ ಕಂಡುಕೊಳ್ಳಬಹುದು. ಬ್ರಾಹ್ಮಣ, ಜೈನ, ಬಂಟ, ಬಿಲ್ಲವ, ಮೂಲ್ಯ, ಮೊಯಿಲಿ, ಮಡಿವಾಳ, ಗಾಣಿಗ, ಮೊಗೇರ, ಪಂಬದ, ನಲಿಕೆ, ಮೇರ ಮೊದಲಾದ ಸಮುದಾಯಗಳ ಭಾಷೆ ಮೊದಲಿಂದಲೂ ತುಳು ಆಗಿರುತ್ತದೆ. ನಾಗಾರಾಧನೆ ಮತ್ತು ಭೂತಾರಾಧನೆ ಇಲ್ಲಿನ ಜನರ ವಿಶಿಷ್ಟ ಜನಪ್ರಿಯ ಆರಾಧನಾ ಸಂಪ್ರದಾಯಗಳಾಗಿವೆ. ಪಾಡ್ದನಗಳು ತುಳು ಜಾನಪದ ಮೌಖಿಕ ಪರಂಪರೆಯ ಸಾಹಿತ್ಯವಾಗಿದ್ದು ತುಳುವರ ಜೀವನ-ಸಾಂಸ್ಕೃತಿಕ ಇತಿಹಾಸದ ಅಧ್ಯಯನಕ್ಕೆ ನೆರವಾಗಿ. ಅವುಗಳಲ್ಲಿರುವ ಮಾಹಿತಿಯಂತೆ, ಜನರು ಚೆನ್ನೆ, ಚದುರಂಗ, ಪಗಡೆ ಇತ್ಯಾದಿ ಒಳಾಂಗಣ ಆಟಗಳನ್ನೂ, ಚೆಂಡು, ಕುಟ್ಟಿದೊಣ್ಣೆ, ಕಳಂಜಿಕಾಯಿ ಗೋಲಿ, ತೆಪ್ಪಂಗಾಯಿ ಮೊದಲಾದ ಹೊರಾಂಗಣ

ಆಟಗಳನ್ನು ಆಡುತ್ತಿದ್ದರು; ಕಂಬಳ, ಕೋಳಿ ಅಂಕ, ಬೇಟೆಯನ್ನು ಕಾಲಕಾಲಕ್ಕೆ ಏರ್ಪಡಿಸುತ್ತಿದ್ದರು; ಊರಿನ ದೇವಾಲಯದ ಜಾತ್ರೆಯಲ್ಲಿ ಸೇರುತ್ತಿದ್ದರು. ಕಟೀಲು, ಪೊಳಲಿ, ಕದಿರೆ, ಬೋಳಾರ, ಶರವು, ಮುಲ್ಕಿ-ಬಪ್ಪನಾಡು ಮತ್ತು ಧರ್ಮಸ್ಥಳ, ಸುಬ್ರಹ್ಮಣ್ಯಗಳಿಗೆ ಹೋಗಿ ದೇವರ ದರ್ಶನ ಮಾಡಿ ಬರುವ ಪರಿಪಾಠ ಹಾಗು ಯಕ್ಷಗಾನ - ಬಯಲಾಟವೂ ಇಲ್ಲಿನ ಜನರ ಪಾರಂಪರಿಕ ಕಲೆಯಾಗಿದೆ.

ಚಾರಿತ್ರಿಕವಾಗಿಯೂ, ಸಾಂಸ್ಕೃತಿಕವಾಗಿಯೂ, ಕರಾವಳಿ ಕರ್ನಾಟಕದ ತುಳುನಾಡಿನ ಅಧ್ಯಯನವನ್ನು ಗ್ರಾಮ-ಸೀಮೆಗಳ ಹಂತದಲ್ಲಿಯೂ ಮಾಡುವ ಅಗತ್ಯವಿದೆ. ಐತಿಹ್ಯವೂ ಸೇರಿದಂತೆ ಕುಳೂರು ಬೀಡಿನ ಬಲ್ಲಾಳರಲ್ಲಿರುವ ತಾಳೆಗರಿ ಸಂಗ್ರಹ ಹಾಗೂ ಕಾವೂರು ದೇವಸ್ಥಾನದ ಅರ್ಚಕರಾದ ಶ್ರೀ ಶ್ರೀನಿವಾಸ ಭಟ್ಟರಲ್ಲಿರುವ ತುಳು ಲಿಪಿಯ ತಾಳೆಗರಿಗಳ ಸಂಗ್ರಹ - ಇವುಗಳ ಅಧ್ಯಯನ ಐತಿಹಾಸಿಕ ಮಾಹಿತಿಗೆ ನೆರವಾಗಬಲ್ಲದು.



(ಶಾಸನ ಮಾಹಿತಿ ಒದಗಿಸಿದ ಡಾ|| ಕೆ. ಜಿ. ವಸಂತ ಮಾಧವರಿಗೆ ಹಾಗೂ ಮಾಹಿತಿ ನೀಡಿದ ಕುಳೂರು ಬೀಡಿನ ಶ್ರೀ ವಜ್ರಕುಮಾರ್ ಕರ್ಣಂತಾಯರಿಗೆ ಮತ್ತು ಕಾವೂರು ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಅರ್ಚಕರು ಶ್ರೀ ಶ್ರೀನಿವಾಸ ಭಟ್ಟರಿಗೆ ಕೃತಜ್ಞತೆಗಳು.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಶ್ರೀ ಗಣಪತಿ ರಾವ್ ಐಗಳ್., (೧೯೨೩), **ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ**, ಪುಟಸಂಖ್ಯೆ ೩೮೨-೩೮೭, ೩೯೦-೩೯೩, ೪೧೭-೪೧೯.

*೨. ಡಾ|| ಕೆ. ಜಿ. ವಸಂತ ಮಾಧವ., (೧೯೯೮), **ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಅಧ್ಯಯನ ಮತ್ತು ಸಂಶೋಧನೆ**, ಪು. ಸಂ. ೩೫, ೩೬-೩೭, ೧೦೩-೧೦೫-೧೧೬-೧೧೮, ೧೫೮-೧೫೯.

*೩. ಹೆರಂಜೆ ಕೃಷ್ಣಭಟ್ಟ., ಡಾ| ಎಸ್. ಡಿ. ಶೆಟ್ಟಿ., (೨೦೦೦), **ತುಳು ಕರ್ನಾಟಕ ಅರಸುಮನೆತನಗಳು**, ಪ್ರಸ್ತಾವನೆ ಪು. ೫೦ V-IX.

*೪. **'ಶಿವಕೃಪೆ'** - ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಕಾವೂರು ಬ್ರಹ್ಮ ಕಲಶಾಭಿಷೇಕೋತ್ಸವ - ಸ್ಮರಣ ಸಂಚಿಕೆ (೧೯೮೨) ಈ ಸಂಚಿಕೆಯಲ್ಲಿ ಶ್ರೀ ಪು. ಶ್ರೀನಿವಾಸ ಭಟ್, ಕಟೀಲು ಇವರು ಬರೆದಿರುವ - ಕಾವೂರು - ಕೆಲವು ಪ್ರಾಚೀನ ಉಲ್ಲೇಖಗಳು - (ಲೇಖನ).

*೫. ಡಾ| ಬಿ. ಎಸ್. ಸ್ವಾಮಿ., (೧೯೯೮), **ತುಳುನಾಡ ಐಸಿರಿ**, ಪು. ಸಂ. ೫೨.

*೬. ಅಮೃತ ಸೋಮೇಶ್ವರ., (೧೯೯೭), **ತುಳು ಪಾಡ್ದನ, ಸಂಪುಟ** ಪು. ಸಂ. ೨೪, ೨೫, ೩೫-೩೭-೩೮.

*೭. ಡಾ|| ಕೆ. ಚಿನ್ನಪ್ಪಗೌಡ., (೧೯೯೦), **ಭೂತಾರಾಧನೆ - ಜಾನಪದೀಯ ಅಧ್ಯಯನ**, ಪು. ೬೫-೬೭.

*೮. South Indian Inscriptions - Vol. VII.

*೯. ಅಳಿಯ ಸಂತಾನ ಕಟ್ಟು - ಸೋದರ ಮಾವನ ಆಸ್ತಿಗೆ ಅಳಿಯನು ಹಕ್ಕುದಾರನಾಗಿರುವುದು. ತುಳುನಾಡಿನಲ್ಲಿ ಕಂಡುಬರುವ ಕಟ್ಟಳೆ - ೧೩ನೆಯ ಶತಮಾನದಿಂದ ಆರಂಭ - ಹೆಣ್ಣುಗಳ ಮೂಲಕ ಅಧಿಕಾರ. ಪು. ೧೪-೧೫. ಡಾ| ಬಿ. ಎ. ವಿವೇಕ ರೈ: **ತುಳು ಜನಪದ ಸಾಹಿತ್ಯ** (೧೯೮೬).

*೧೦. ಮಾಗಣೆ - ಈಗ ಪ್ರಚಲಿತವಿರುವ 'ಹೋಬಳಿ'.

*೧೧. ಗ್ರಾಮಗಳ ಹೆಸರುಗಳು - ಕುಳೂರು - ಕೂಳು - ಕೂರು = ಅನ್ನ ಆಹಾರ - ಸಮೃದ್ಧಿಯ ಊರು; ಪಂಜಿಮೊಗರು - ಪಂಜಿ (ತುಳು) = ಹಂದಿ - ಮೊಗರು = ಹಳ್ಳ - ಹಂದಿಗಳ ಹಳ್ಳ ಇರುವ ಊರು; ಕುಂಜತ್ತಬೈಲು - ಕುಂಜ - ಬೆಟ್ಟ ಬೆಟ್ಟ ಇರುವ ಬಯಲು; ಮರಕಡ = ಮರಕಾಡು ಇರುವ ಊರು; ಆಧಾರ - **ತುಳು ನಿಘಂಟು ಸಂಪುಟಗಳು** - ಮಂಜೇಶ್ವರ ಗೋವಿಂದ ಪೈ ಸ್ಮಾರಕ ಗ್ರಂಥಾಲಯ (ಸಂ). ಕಾವೂರು - ಕಾವು ಎಂದರೆ ನಾಗಬನ ಎಂಬ ಅರ್ಥವಾಗುತ್ತದೆ. ನಾಗಬನಗಳಿರುವ ಊರು.

*೧೨. ಹಿಂದಿನ ಕಾಲದಲ್ಲಿ ಕುಳೂರು ಪ್ರದೇಶವು "ಭತ್ತದ ಕಣಜ" ವಾಗಿತ್ತು ಎಂಬ ಐತಿಹ್ಯ ಇದೆ.

*೧೩. **ಉಜಲ್** - ದೈವದ ಉಯ್ಯಾಲೆ ಮಂಚ - (ತುಳು ಭಾಷೆಯಲ್ಲಿ).

*೧೪. **ದೈವ - ಭೂತಗಳು** - ಅಲೌಕಿಕ ಪ್ರಪಂಚಕ್ಕೆ ಸೇರಿದವುಗಳು ದೈವಪಾತ್ರಿಯ ಮೇಲೆ ದೈವಾವೇಶ ಬಂದಾಗ 'ನುಡಿ' ಕೊಡುವ ಕೋಲ, ನೇಮ, ಇತ್ಯಾದಿ ಆಚರಣೆಗಳು ತುಳುನಾಡಿನಲ್ಲಿ ಇವೆ. ಜಾರಂದಾಯ - ರಾಜನ್ ದೈವ; ಕಲ್ಲುರ್ಟಿ - ಉಗ್ರ ಸ್ವಭಾವದ ದೈವ; ಕಲ್ಲುಡ - ಕಲ್ಲುರ್ಟಿ: ಅಣ್ಣ ತಂಗಿ ದೈವಗಳು. ಜೋಡಿ ದೈವಗಳಾಗಿ ಆರಾಧನೆಗೊಳ್ಳುತ್ತವೆ. ಪಂಜುರ್ಲಿ - ವರಾಹಮೂರ್ತಿ ದೈವ. ಉದಾ - ಅಣ್ಣಪ್ಪ ಪಂಜುರ್ಲಿ. ಜುಮಾದಿಯನ್ನು ಧೂಮಾವತಿ ಎಂದೂ ಕರೆಯುತ್ತಾರೆ; ಕಾಂತಿನೇತ್ರಿ ಧೂಮಾವತಿ - ದುರ್ಗಾದೇವಿಗೆ ಸಂಬಂಧಿಸಿದ ದೈವ; ಗುಳಿಗ - ಪ್ರಭಾವಶಾಲಿ ದೈವ, ಶಿವಗಣಕ್ಕೆ ಸೇರಿದ ಈ ದೈವಕ್ಕೆ ರಕ್ತಾಹಾರ ಕೊಡಬೇಕಾಗುತ್ತದೆ. - (ಸಂ. ೬ ಮತ್ತು ೭ನ್ನು ನೋಡಿ ಹಾಗೂ ತುಳು ನಿಘಂಟು ಸಂಪುಟಗಳು).

*೧೫. ವಿವರಗಳಿಗೆ ವಿಷಯ ಸೂಚಿ ಸಂ. ೬ ಮತ್ತು ೭ ಮತ್ತು ಡಾ| ಬಿ. ಎ. ವಿವೇಕ ರೈ - ಇವರ **ತುಳು ಜನಪದ ಸಾಹಿತ್ಯ** ನೋಡುವುದು.

ಬಿ. ಜಿ. ಅಮ್ಮಣಗಿ*

# ಪೇಶ್ವೆಯವರ ಕಾಲದ ಯಮಕನಮರಡಿ



ಭಾರತೀಯ ಸಾಮಾಜಿಕ, ಐತಿಹಾಸಿಕ ಪರಂಪರೆಗಳಲ್ಲಿ ಅಗ್ರಹಾರವೂ ಒಂದು. 'ಅಗ್ರಹಾರ'ವೆಂದರೆ ಬ್ರಾಹ್ಮಣರಿಗೆ ಉಪ ಜೀವನಕ್ಕಾಗಿ ಕೊಟ್ಟ ಹಳ್ಳಿಯೆಂದು ಸ್ಥೂಲವಾಗಿ ಹೇಳಬಹುದು. ಅದು ಬ್ರಾಹ್ಮಣರು ಒಂದೆಡೆಗೆ ಇರುವ ಸ್ಥಾನ, ಬೀದಿ, ಊರು ಎಂದೂ ಆಗುತ್ತದೆ. ಇದರ ಉದ್ದೇಶ ವಿಪ್ರರಿಗೆ ಅಧ್ಯಯನ, ಅಧ್ಯಾಪನಕ್ಕೆ ಅನುಕೂಲವಾಗಲೆಂದು, ಅವರ ಉದರ ಪೋಷಣೆಗೆ ಅನುವಾಗಲೆಂದು ಯೋಜಿಸಿದ ಪದ್ಧತಿ ಇದಾಗಿದೆ. ಅಗ್ರಹಾರದ ಪರಿಸರದಲ್ಲಿ ಇನ್ನುಳಿದ ಕಸಬುದಾರರು, ಕೃಷಿಕರೂ ವಣಿಕರೂ ವಾಸಿಸುತ್ತಿದ್ದರು. ಇದು ಸ್ವಯಂಪೂರ್ಣ ಘಟಕವಾಗಿದ್ದು ಇದರ ಆಡಳಿತವನ್ನು ಮುಖ್ಯಸ್ಥನು ನೋಡಿಕೊಳ್ಳುತ್ತಿದ್ದನು. ಪ್ರಾಚೀನ ಕಾಲದಿಂದಲೂ ಪ್ರಚಲಿತವಿದ್ದ ಈ ವ್ಯವಸ್ಥೆ ಪೇಶ್ವೆಯವರ ಕಾಲದವರೆಗೂ ನಮ್ಮ ನಾಡಿನಲ್ಲಿ ಮುಂದುವರೆದು ಬಂತು.

ಬಿಜಾಪುರ ಆದಿಲ್‌ಶಾಹಿಗಳ ಆಳ್ವಿಕೆಯು ಕೊನೆಗೊಂಡ ಮೇಲೆ ಪೇಶ್ವೆಯವರ ಕೈವಶವಾಯಿತು. ಮೊದಲನೇ ಬಾಜೀರಾಯನ ಕಾಲದಲ್ಲಿ ಅಂದರೆ ಸು. ೧೭೨೦-೧೭೩೫ರ ಅವಧಿಯಲ್ಲಿ ವಿರೂಪಾಕ್ಷ ಯಾಮಾಜಿ ಪಂತನೆಂಬ ಜಾಹಗೀರದಾರನು ಹುಕ್ಕೇರಿ ಪರಗಣಾದ ಆಧಿಪತ್ಯದ ಸನದನ್ನು ಆಗಿನ ಸರಕಾರದಿಂದ ಪಡೆದುಕೊಂಡು ಆಡಳಿತಗಾರನಾಗಿ, ಕಾರಭಾರಿಯಾಗಿ ಮೊದಲಿನ ನಡಹತ್ತರಗಿಗೆ (ಈಗಿನಯಮಕನ ಮರಡಿಗೆ) ಬಂದನು. ಆಗ ಇವನ ಆಧಿಪತ್ಯಕ್ಕೆ ಆಳ ಹಳ್ಳಿಗಳು ಒಳಪಟ್ಟಿದ್ದವು.

ನಡಹತ್ತರಗಿ ಎಂಬ ಹಳ್ಳಿಯು ಮೂಲ ಹತ್ತರಗಿಯ ಭಾಗವೇ ಆಗಿದ್ದಿತು. ಪ್ರಾಗೈತಿಹಾಸಿಕ ಕಾಲದಲ್ಲಿ ಹಳ್ಳದ ಬಲದಂಡೆಯ ಮೇಲಿದ್ದ ಈ ಊರು ಬಹುಶಃ ಐತಿಹಾಸಿಕ ಕಾಲದಲ್ಲಿ ಹಳ್ಳದ ಪ್ರವಾಹದ ಹೊಡೆತಕ್ಕೆ ಸ್ಥಳಾಂತರವಾಗಿರಬೇಕು. ಮೂಲ ಹತ್ತರಗಿಯ ವಿಸ್ತಾರ ೨೦೩ ಮೈಲುಗಳವರೆಗೆ ಹಬ್ಬಿದ್ದಿತು. ಇದೇ ಹೆಸರಿನಿಂದ, ಮಧ್ಯವರ್ತಿ ಕೇಂದ್ರದಿಂದ ಐದು ಕಡೆಗೆ ಇದೇ ಊರು ಸ್ಥಿತವಾಗಿತ್ತೆಂದು ಇಂದಿಗೂ ಜನರುಹೇಳುತ್ತಾರೆ. ಇದು ಪರಂಪರಾಗತ ಕಥನವಾಗಿದ್ದು ಆ ನೆಲೆಗಳನ್ನು ಇಂದಿಗೂ ಜನರು ಗುರುತಿಸುತ್ತಾರೆ. ಆಡಳಿತದ ಅನುಕೂಲಕ್ಕಾಗಿ ನಡಹತ್ತರಗಿ, ಠಾಣಾ ಹತ್ತರಗಿ, ಕಾರಿ ಮರಡಿ ಹತ್ತರಗಿಯೆಂದು ಪಾರಂಪರಿಕ ಹೇಳಿಕೆಗಳಿಂದ ಹಾಗೂ ಕಂದಾಯ ಇಲಾಖೆಯ ದಾಖಲೆಗಳಿಂದ ಈ ಸಂಗತಿ ದೃಢಪಡುತ್ತದೆ. ಈ ನಡಹತ್ತರಗಿ ಒಂದು ಕಡೆಯಿಂದ ಕೊಳ್ಳ (ಹುಣಸಿ ಗಿಡಗಳಿಂದ ತುಂಬಿದ ಹುಣಸಿಕೊಳ್ಳ) ದಕ್ಷಿಣಕ್ಕೆ ದಟ್ಟವಾದ ಅರಣ್ಯ, ಪೂರ್ವಕ್ಕೆ ಕ್ಕಿಕಿರಿದ ಕಾಡು, ಗುಡ್ಡನಟ್ಟಿ ಗ್ರಾಮ, ಉತ್ತರದ ಕಡೆಗೆ ಅನತಿ ದೂರದಲ್ಲಿ ಹಳ್ಳ ಮುಂತಾದವುಗಳ ಮಧ್ಯದಲ್ಲಿ ಸ್ಥಿತವಾಗಿರುವುದರಿಂದ ಇದಕ್ಕೆ ನಡಹತ್ತರಗಿಯೆಂಬ ನಾಮವಾಯಿತು. ಈ ಗ್ರಾಮದಿಂದ ೧ ಕಿ.ಮೀ. ಅಂತರದಲ್ಲಿ ಆಗಿನ ಮತ್ತು ಈಗಿನ ರಾಷ್ಟ್ರೀಯ ಹೆದ್ದಾರಿಯಿದೆ. ಈಗಿನ ಗ್ರಾಮ ಪಂಚಾಯತಿಯಿಂದ ದೊಡ್ಡಹುಡೆಯ(ಕೋಟೆ)ವರೆಗೆ ಅರ್ಧಕಿ.ಮೀ. ಉದ್ದ, ಒಂದು ನಾಲ್ಕಾಂಶ ಕಿ.ಮೀ. ಗಳಂತೆಯ ವ್ಯಾಪ್ತಿಯಲ್ಲಿ ನಡಹತ್ತರಗಿ ಗ್ರಾಮವಿತ್ತು. ೧೬ನೇ ಶತಮಾನದಲ್ಲಿ ವೀರಶೈವ ಧರ್ಮದ ಗುರುಸಿದ್ಧಸ್ವಾಮಿಗಳೆಂಬುವರು ಬಂದು ಇಲ್ಲಿ ಆಶ್ರಮವನ್ನು ಸ್ಥಾಪಿಸಿಕೊಂಡು ಅನುಷ್ಠಾನ ಮಾಡುತ್ತಿದ್ದರೆಂದೂ ಮುಂದೇ ಇದೇ ಸ್ಥಳದಲ್ಲಿ ಅಮರೇಶ್ವರ ಎಂಬ ಮಠ ಸ್ಥಾಪನೆಯಾಯಿತೆಂದು ಈ ಮಠದ ಪರಂಪರೆ ಇದೆ. ನಡಹತ್ತರಗಿ ಗ್ರಾಮವು ವಿಜಯನಗರ ಕಾಲದಲ್ಲಿ ವ್ಯಾಪಾರದ **ಪಡಮೂಲೆ** ಯಾಗಿತ್ತೆಂದು ಆಖ್ಯಾಯಿಕೆಯಿದೆ.

ವಿರುಪಾಕ್ಷಪಂತರು ಎಂಬ ಭಾಗವತ ಸಂಪ್ರದಾಯದವರಿಲ್ಲಿದ್ದು ಇವರಿಗೆ ಸದಾನಂದ ಎಂಬ ಗುರುಗಳಿದ್ದರು. ಇವರು ಮಾಸ್ತಿಹೊಳಿ (ಮಹಾಸತಿ + ಹೊಳೆ = ಘಟಪ್ರಭಾನದಿಯ ದಂಡೆಯ ಮೇಲಿದ್ದ ಊರು, ಈಗ ಹಿಡಕಲ್ ಜಲಾಶಯದಲ್ಲಿ ಮುಳುಗಡೆಯಾಗಿದೆ) ಊರಿನ ಸಮೀಪದ ಒಂದು ಚಿಕ್ಕ ಗುಹೆಯಲ್ಲಿ ವಾಸಿಸುತ್ತಿದ್ದರು. ಇಲ್ಲಿಯ ಮಹಾಲಿಂಗೇಶ್ವರ ದೇವಾಲಯದಲ್ಲಿ ಸಾರ್ವಜನಿಕರಿಗೆ ದರ್ಶನ ನೀಡುತ್ತಿದ್ದರು. ಇವರನ್ನು ಆಗಾಗ ಪಂತರು ಭೇಟಿಯಾಗಲು ಅಲ್ಲಿಗೆ ಹೋಗುತ್ತಿದ್ದರು. ಸದಾನಂದರು ಈ ಹೊಳೆಯ ತಿರುಗುಣಿ ಮಡುವಿನಲ್ಲಿ ಜೀವಂತ ಜಲಸಮಾಧಿ ತೆಗೆದುಕೊಂಡರೆಂದು ಪ್ರತೀತಿಯಿದೆ. ಅಲ್ಲಿಯ ಒಂದು ಫಡಿಗಲ್ಲಿನ ಮೇಲೆ, ಪಂತರು ತಮ್ಮ ಗುರುಗಳ ಸ್ಮರಣಾರ್ಥವಾಗಿ ಪಾದುಕೆಗಳನ್ನು ಕೆತ್ತಿಸಿದ್ದಾರೆ. ಅವರ ಆಶೀರ್ವಾದ, ಅನುಗ್ರಹ, ಮಾರ್ಗದರ್ಶನ, ಸಲಹೆ -

*೨ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ.

ಸೂಚನೆಗಳನ್ನು ಪಂತರು ಸದಾ ಪಡೆಯುತ್ತಿದ್ದು ಧಾರ್ಮಿಕರೂ ಕೊಡುಗೈ ದೊರೆಗಳೂ ಆಗಿದ್ದರು. ಸದಾನಂದ ಯತಿಗಳು ಸದಾಸಂಚಾರಿಯಾಗಿದ್ದರು. ಇವರ ಆರಾಧನೆಯು ಶಿರಹಟ್ಟಿ (ಜಿ. ಧಾರವಾಡ) ಊರಿನ ಸಮೀಪ ವೆಂಕಟಾಪುರದಲ್ಲಿ ಇಂದಿಗೂ ನಡೆಯುತ್ತದೆಂದು ತಿಳಿದುಬಂದಿದೆ.

ವಿರುಪಾಕ್ಷಪಂತರ ತಂದೆಯವರ ಹೆಸರು ಅಮೃತರಾವ ಉರ್ಫ್ ಯಾಮಾಜಿ ಆಗಿದ್ದಿತು. ಪಂತರೇ ಈಗಿನ ಯಮಕನ ಮರಡಿಯ ಸ್ಥಾಪಕರು. ಒಂದು ಅರ್ಥದಲ್ಲಿ ನಡಹತ್ತರಗಿ ಎಂಬ ಹೆಸರನ್ನು ಕೈಬಿಟ್ಟು *ಯಮಕನಮರಡಿಯೆಂದು* ತಮ್ಮ ಆಡಳಿತಾವಧಿ ಯಲ್ಲಿ ಪುನರ್ ನಾಮಕರಣ ಮಾಡಿದರು. ಪಂತರಿಗೆ 'ಯಮುನಕ್ಕ' ಎಂಬ ಅಕ್ಕರೆಯ ಅಕ್ಕಳಿದ್ದಳು. ಇವಳ ಮೇಲಿನ ಪ್ರೀತಿ-ಅಭಿಮಾನಗಳಿಂದ ಇವಳ ಹೆಸರನ್ನು ಮೊದಲಿನ ಊರಿಗೆ ಮರುನಾಮಕರಣ ಮಾಡಿದರು. ಅದೇ ಯಮುನಕ್ಕನ + ಮರಡಿ='ಯಮಕನಮರಡಿ'ಯಾಯಿತು. ಇಷ್ಟೇ ಅಲ್ಲದೆ ಈ 'ಯಮುನಾ + ಮಾತೆ'ಯ ಹೆಸರಿನಿಂದ 'ಯಮತೇಶ್ವರ' ಗುಡಿಯನ್ನೂ ಕಟ್ಟಿಸಿದರು (ಯಮುನಾ + ಮಾತಾ + ಈಶ್ವರ = ಯಮತೇಶ್ವರ) ವಾಡಿಕೆಯಲ್ಲಿ ಈ ಗುಡಿಯನ್ನು ಜನರು ಮಹಾದೇವ ಗುಡಿ, ಈಶ್ವರನ ಗುಡಿಯೆಂದೂ ಕರೆಯುತ್ತಾರೆ. ಈ ದೇವಾಲಯವೇ ಇನ್ನುಳಿದ ನಾಲ್ಕು ದೇವಸ್ಥಾನಗಳ ನಿರ್ಮಾಣಕ್ಕೆ ಪ್ರೇರಣೆಯಾಯಿತು. ಈ ದೇವಾಲಯದ ಸಂಕೀರ್ಣದಲ್ಲಿ ಪೌಳಿಯಿದ್ದು ಬಹಳ ವರುಷಗಳವರೆಗೆ ಧರ್ಮಶಾಲೆಯಾಗಿ ಪರಿವರ್ತಿತವಾಗಿತ್ತು. ಇದರಲ್ಲಿ ೧-೪-೧೮೬೧ರಲ್ಲಿ ಪ್ರಾಥಮಿಕ ಶಾಲೆ ಪ್ರಾರಂಭಿಸಲ್ಪಟ್ಟಿತ್ತು. ಇದರ ಸ್ಥಾಪಕ ಅಧ್ಯಾಪಕರೆಂದರೆ ಶ್ರೀ ನಾನಾ ಪಂತೋಜಿಯವರಾಗಿದ್ದರು. ಆಗ ಪೇಶ್ವೆಯವರ ಆಡಳಿತದ ಪರಿಣಾಮವಾಗಿ ಆಗಿನ ಕಾಲದ ಕಾಗದಪತ್ರಗಳು ಮೋಡಿ ಇದ್ದುದರಿಂದ ಕನ್ನಡದ ಜೊತೆಗೆ ಮೋಡಿಲಿಪಿಯನ್ನೂ ಕಲಿಸುತ್ತಿದ್ದರು. ಮುಂದೆ ೧೮೮೫ರಲ್ಲಿ ಇದೇ ಶಾಲೆಯಲ್ಲಿ ಇಂಗ್ಲೀಷ್ ವರ್ಗಗಳು ಪ್ರಾರಂಭವಾದವು. ಈ ಧರ್ಮಶಾಲೆಯನ್ನು ಊರಿನ ಗಣ್ಯವರ್ತಕರಾದ ಬಸವಲಿಂಗಪ್ಪ ಕಂಕನವಾಡಿ ಎಂಬವರು ಕಟ್ಟಿಸಿದ್ದರು. ಗಮನಿಸಿಬೇಕಾದ ಒಂದು ಅಂಶವೆಂದರೆ ಇಂದಿಗೂ ಜನರು ನಡಹತ್ತರಗಿಯ *ಸೀಮೆಗಲ್ಲೆಂದು* ಕೋಟೆಯ ಹತ್ತಿರವಿರುವ ರಸ್ತೆ ಬದಿಯ ದುಂಡಗಲ್ಲನ್ನು ತೋರಿಸುತ್ತಾರೆ. ಅಲ್ಲದೆ ಇಂದಿಗೂ ಯಮಕನಮರಡಿ ಗ್ರಾಮದ ಹೆಸರಿನಲ್ಲಿ ಒಂದು ಜಮೀನವೂ ಇಲ್ಲ. ಹೊಲಗಳೆಲ್ಲವನ್ನು *ನಡಹತ್ತರಗಿ ಮಾಜಿ ಯಮಕನಮರಡಿ* ಯೆಂದು ಕಂದಾಯ ಇಲಾಖೆಯ ದಾಖಲೆಗಳಲ್ಲಿ ತೋರಿಸಲಾಗಿದೆ. ಇದರಿಂದ ಯಮಕನಮರಡಿ ಇತ್ತೀಚಿನ ಹೊಸ ಊರೆಂದು ಸಿದ್ಧವಾಗುತ್ತದೆ. ಪಂತರ ಕಾಲದಲ್ಲಿ ಮೂಲ ಊರು ವಿಸ್ತೃತವಾಗಿ ಬೆಳೆದು, ವ್ಯಾಪಾರ, ಕೃಷಿ, ನೇಕಾರಿಕೆ, ಕುಂಬಾರಿಕೆ ಮುಂತಾದ ಕಸಬುಗಳು ಊರ್ಜಿತಾವಸ್ಥೆಯನ್ನು ಹೊಂದಿದವು. ಹೊಸ ಊರು ಆಡಳಿತ ಕೇಂದ್ರವಾಗಿ, ಕೋಟೆ ಕೊತ್ತಳ, ಹುಡೆ, ಊರಿನ ಆವರಣ ಗೋಡೆ, ದೇವಾಲಯಗಳಿಂದ ಪ್ರವರ್ಧಮಾನಕ್ಕೆ



ಬಂತು: ಒಂದು ಸಣ್ಣ ಸಂಸ್ಥಾನದ ಸ್ಥಾನ ಪಡೆಯಿತೆಂದು ನಿಸ್ಸಂಕೋಚ ವಾಗಿ ಹೇಳಬಹುದು.

***ಕೆರೆ-ಕೋಟೆಗಳ ನಿರ್ಮಾಣ*** : ಶ್ರೀ ಪಂತರು ಗ್ರಾಮದ ಪುನರ್ ನಾಮಕರಣದೊಂದಿಗೆ ಪುನರ್ ನಿರ್ಮಾಣವನ್ನೂ ಮಾಡಿದರು. ಅನೇಕ ಬ್ರಾಹ್ಮಣರನ್ನು ಬರಮಾಡಿಕೊಂಡು ಉದ್ಯೋಗವನ್ನಿತ್ತರು. ಕೆಲವರಿಗೆ ದೇವಸ್ಥಾನಗಳ ಪುರೋಹಿತ ಕಾರ್ಯವನ್ನು ಒಪ್ಪಿಸಿದರೆ, ಇನ್ನುಳಿದವರಿಗೆ ಆಯಾ ಹಳ್ಳಿಗಳ 'ಕುಲಕರ್ಣಿಕೆಯ' (ತಲಾಠೀ) ಕೆಲಸವನ್ನು ಒಪ್ಪಿಸಿದರು. ಊರು ಬೆಳೆದಂತೆ ಊರಿನ ಪೇಟೆಯೂ ಬೆಳೆಯಿತು. ಮೂಲಗ್ರಾಮ ಬೆಳವಣಿಗೆಯಾಗಲು ಮುಖ್ಯ ಕಾರಣವೆಂದರೆ - ಜನರ ಹೇಳಿಕೆ ಯಂತೆ ಈಗಿನ ಯಮಕನಮರಡಿ ಉತ್ತರಕ್ಕೆ ಒಂದು ಊರು ಇತ್ತು. ಜನರ ನುಡಿಯಲ್ಲಿ ಅದು 'ಹಾಳೂರು' ಆಗಿದೆ. ಆದರೆ ಅದು ಕೂಡ ಹತ್ತರಗಿಯ ಭಾಗವೇ ಆಗಿತ್ತು. ಕಂದಾಯ ಇಲಾಖೆಯ ದಾಖಲೆಗಳಿಂದ, ಆ ಊರು ಮೊದಲಿನಿಂದಲೂ ನಡಹತ್ತರಗಿಯೇ ಆಗಿತ್ತೆಂದು, ಅಲ್ಲಿಯ ಜಮೀನುಗಳು ನಡ ಹತ್ತರಗಿಯವೇ ಎಂದು ತಿಳಿದುಬರುತ್ತವೆ. ದಿನಾಂಕ ೨-೬-೩೨ರ ಹುಕುಂ ಪ್ರಕಾರ ಆ ಪ್ರದೇಶ ಹೊಲಗಳನ್ನು ನಡಹತ್ತರಗಿ *ಮಾಜಿಯಮಕನಮರಡಿಯೆಂದು* ಬರೆಯುತ್ತ ಹೋಗಲಾಗಿದೆ. 'ಬೆಂಕಿಯ' ಮಳೆಯಿಂದ ಮೂಲ ಊರು ಹಾಳಾಯಿತೆಂದೂ ಅಲ್ಲಿನ ಜನರು ಈಗಿನ ಯಮಯಕನಮರಡಿಯ ಕೋಟೆಯ ಕೆಳಗಿನ ಪ್ರದೇಶಕ್ಕೆ ವಲಸೆ ಬಂದರೆಂದೂ ಸ್ಥಳೀಯರು ಹೇಳುತ್ತಾರೆ. ಇಲ್ಲಿ ಊರು ಇದ್ದುದರ ಅವಶೇಷಗಳು ಕಾಣಸಿಗುತ್ತವೆ. ಗಣಪತಿ,

ದುರ್ಗಾ, ಮಾರುತಿ ಗುಡಿಗಳಿವೆ. ಈಶ್ವರಲಿಂಗವೊಂದು ಅನಾಥವಾಗಿ ಬಯಲಿನಲ್ಲಿದೆ. ಇಲ್ಲಿಯೇ ಈಶ್ವರ ದೇವಸ್ಥಾನ ವಿತ್ತೆಂದು ಕಂಡುಬರುತ್ತದೆ. 'ಬೆಂಕಿಯ ಮಳೆ' ಎಂದರೆ ತೋಪು, ಬಂದೂಕುಗಳಿಂದ ಕೂಡಿದ ಯುದ್ಧ ಅಥವಾ ದಾಳಿಯಾಗಿರಬೇಕು.

ಈ ಕಥನವನ್ನು ಪುಷ್ಟೀಕರಿಸುವ ಒಂದು ಘಟನೆ ೧೭೮೦ರ ಸುಮಾರಿಗೆ ನಡೆದಿದೆ. ಅಹಮ್ಮದನಗರ ಮತ್ತು ಗೊವಳಕೊಂಡ ದವರ ಸಂಯುಕ್ತ ಸೇನೆಗಳು ಈ ಭಾಗದ ಮೇಲೆ ದಾಳಿ ಮಾಡಿದವು. ಏಕೆಂದರೆ ಈ ಭಾಗವು ಬಿಜಾಪುರ ಆದಿಲಶಾಹಿಗಳ ವಶದಲ್ಲಿತ್ತು. ಅವರು ಹುಕ್ಕೇರಿ, ಮಿರಜ-ಸಾಂಗಲಿ ಪ್ರದೇಶಗಳನ್ನು ಸುಟ್ಟು ಹಾಕಿದವರೆಂದು ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಹುಕ್ಕೇರಿ ಮತ್ತು ನಡಹತ್ತರಗಿಯ ಅಂತರ ಕೇವಲ ೫-೬ ಮೈಲುಗಳು. ಹುಕ್ಕೇರಿ, ಮಿರಜಗಳಿಗೆ ಈ ಊರಿನ ಮೇಲಿಂದಲೇ ಹೋಗ ಬೇಕಾಗುತ್ತಿತ್ತು. ಹುಕ್ಕೇರಿಯ ಜೊತೆಗೆ ನಡಹತ್ತರಗಿಯೂ ಈ ಸೈನ್ಯಗಳ ದಾಳಿಗೆ ತುತ್ತಾಗಿರಬೇಕು. ಬಹುಶಃ ಈ ಊರ ಹತ್ತಿರ ದಂಡು ಬೀಡು ಬಿಡುತ್ತಿದ್ದು ಜಾಗೆಯೂ ನಡಹತ್ತರಗಿಯಿಂದ ದೂರವೇನೂ ಇಲ್ಲ. ಕೇವಲ ಅರ್ಧಮೈಲು. ಆದ್ದರಿಂದ ಸೈನ್ಯ ಇಲ್ಲಿಯೇ ಬೀಡುಬಿಟ್ಟು ನಡಹತ್ತರಗಿಯ ಮೇಲೆ ದಾಳಿ ಮಾಡಿರಬೇಕು. ಇಲ್ಲವೆ ಹುಕ್ಕೇರಿಯಲ್ಲಿದ್ದ ಬಿಜಾಪುರದ ಸೈನ್ಯ ದೊಂದಿಗೆ ಯುದ್ಧವಾಗಿರಬೇಕು. ಈ ಭಯಂಕರ ಯುದ್ಧಕ್ಕೆ ಜನರು ಬೆದರಿ ಇಲ್ಲಿಂದ ಮೊದಲಿನ ನಡಹತ್ತರಗಿಗೆ ಅರ್ಥಾತ್ ನೂತನ ಯ ಮಕನಮರಡಿಗೆ ವಲಸೆ ಹೋದರು. ಈ ಕಾರಣದಿಂದ ಮೂಲಗ್ರಾಮದ ಜನ ವಸತಿ ಹೆಚ್ಚಾಗಿ ನೀರಿನ ಕೊರತೆ ಉಂಟಾಗಿರಬೇಕು. ಆಗ ಕೇವಲ ೨-೩ ಹೊಕ್ಕು ತುಂಬುವ ಬಾವಿಗಳಿದ್ದವು. ಆದ್ದರಿಂದ ಆಡಳಿತಾಧಿಕಾರಿ ಶ್ರೀ ಪಂತರು ಕೆರೆಯನ್ನು ಕಟ್ಟಿಸುವ ಯೋಜನೆಯನ್ನು ಹಾಕಿಕೊಂಡು ಪ್ರಾರಂಭಿಸಿಯೇ ಬಿಟ್ಟರು. ಈ ಕೆಲಸ ಮುಂದುವರೆದಂತೆ ಒಂದು ದೊಡ್ಡ ಝರಿ ಹತ್ತಿತು. ಅದರ ರಭಸ ಕೆರೆ ಕಟ್ಟಲು ಆತಂಕವಾದ್ದರಿಂದ ತಾತ್ಪೂರ್ತಿಕವಾಗಿ ಅದನ್ನು ಸೀಸಿನ ಗುಂಡಿನಿಂದ ಬಂದು ಇಟ್ಟು ಕೆರೆ ಕಟ್ಟುವ ಕೆಲಸವನ್ನು ಮುಂದುವರಿಸಿದರು. ಈ ಕಾರ್ಯ ಮುಗಿದ ಮೇಲೆ ಸೀಸಿನ ಗುಂಡನ್ನು ತೆಗೆದರೂ ಮೊದಲಿನಷ್ಟು ನೀರು ಬಾರದೆ ಆ ಝರಿ ಈ ಊರಿನ ಪೂರ್ವಕ್ಕಿರುವ ಗುಡ್ಡನಟ್ಟಿ ಗ್ರಾಮದ ಕಡೆ ತಿರುಗಿ ಅಲ್ಲಿಯ ಹಳೆಯ ಬಾವಿಯಲ್ಲಿ ಸೇರಿ ಕೊಂಡಿತು. ಆ ಬಾವಿಗೆ ಇದರಿಂದ ವಿಪುಲವಾದ ನೀರು ಸದಾ ದೊರೆಯುವಂತಾಯಿತು. ಏಳು ಯಾತಗಳಿಂದಲೂ ನೀರನ್ನು ಜಗ್ಗಿಸಿ ಕೃಷಿಗೆ ಉಪಯೋಗಿಸಿದರೂ ನೀರು ಎಂದೂ ಕಡಿಮೆಯಾದದ್ದೇ ಇಲ್ಲ. ನೀರು ಬಲು ಸಿಹಿ. ಆದ್ದರಿಂದ ವಂಟ ಮೂರಿಯ ಸಂಸ್ಥಾನದ ಬಸವ ಪ್ರಭುಗಳು ಈ ನೀರನ್ನೇ ಕುಡಿಯಲು ತರಿಸಿಕೊಳ್ಳುತ್ತಿದ್ದರು. ಊರಿನ ದಕ್ಷಿಣಕ್ಕಿರುವ ಈ ಬೃಹತ್ ಕೆರೆ ಸುಮಾರು ೧೨೦ ಅಡಿ ಅಗಲ, ೧೫೦ ಅಡಿ ಉದ್ದ ೧೦೦ ಅಡಿಯಷ್ಟು ಆಳವಿದ್ದು ಇಂದಿಗೂ ಜನಬಳಕೆಗಿದೆ. ನೀರಿನ ಆಳ ೨೦-೨೫ ಅಡಿಯಷ್ಟು ತಳದಿಂದ ಇಪ್ಪತ್ತು ಅಡಿ ಅಂತರದ ಮೇಲೆ ಒಂದು ಚಿಕ್ಕ ಈಶ್ವರ ದೇವಾಲಯವಿದೆ.

ಕೆರೆ ಕಟ್ಟುವ ಕೆಲಸ ಮುಗಿದ ಮೇಲೆ ಪಂತರು ಸಂತೋಷ ಭರಿತರಾಗಿ ಈ ಕೆರೆಯ ದಂಡೆಯ ಮೇಲೆ ತಮ್ಮ ತಂದೆ ಅಮೃತರಾವ್ ಸ್ಮರಣಾರ್ಥವಾಗಿ ಕಟ್ಟಿಸಿದ ಅವರ ಶಿವಾಲಯಕ್ಕೆ 'ಅಮೃತೇಶ್ವರ' ದೇವಾಲಯವೆಂದು ನಾಮಕರಣ ಮಾಡಿದರು. ಇಂದಿಗೂ ಇದರ ಈ ಅಚ್ಚುಕಟ್ಟಾದ ದೇವಾಲಯದ ಸರಳ, ಸುಂದರ ಉಸ್ತುವಾರಿಯನ್ನು ವ್ಹಿ. ಎಲ್. ಜೋಶಿಯವರ ಮನೆತನದವರು ನೋಡಿಕೊಳ್ಳುತ್ತಿದ್ದಾರೆ.

ಈ ಕೆರೆಯನ್ನು ತೋಡುವಾಗ ದೊರೆತ ಕಲ್ಲಿನ ಅಪಾರ ರಾಶಿಯನ್ನು ಊರ ಮಧ್ಯದ ಕೋಟೆಯನ್ನು ಕಟ್ಟಲು ಉಪಯೋಗಿಸಿ ದರು. ಇದರ ದೊಡ್ಡ ಕೋಟೆ (ಹುಡೆ) ನಿರ್ಮಾಣವಾಯಿತು. ಇದರ ಸುತ್ತ ಸುಮಾರು ೨೦ ಅಡಿ ಆಳ, ೧೫ ಅಡಿ ಅಗಲದ ಕಂದಕವೂ ತಯಾರು ಆಯಿತು. ಸುಮಾರು ೩೦೦ ಅಡಿ ಎತ್ತರ, ೧೦೦ ಅಡಿ ಅಗಲವಿರುವ ಈ ಕೋಟೆಯ ಒಳಬಾಗಿಲದಿಂದ ಹತ್ತರಗಿಯ ವೀರಭದ್ರೇಶ್ವರ ಗುಡಿಯ ಹತ್ತಿರದ ದಿಬ್ಬದವರೆಗೆ ನೆಲಮಾರ್ಗವಿದ್ಧಿತು. ಪ್ರಸ್ತುತ ಲೇಖಕನು ಚಿಕ್ಕವನಿದ್ದಾಗ ನೋಡಿದ್ದುಂಟು. ಆದರೆ ಅದನ್ನು ಜನರ ಸುರಕ್ಷತತೆಯ ದೃಷ್ಟಿಯಿಂದ ಪೂರ್ತಿಯಾಗಿ ಮುಚ್ಚಲಾಗಿದೆ. ಕೋಟೆಯ ಒಳಗೆ ಒಂದು ಬಾವಿಯೂ ಇತ್ತು. ದಾಳಿಕಾರರ, ದರೋಡೆಕೋರರ, ಕಳ್ಳರ ಉಪಟದಿಂದ ತಪ್ಪಿಸಿಕೊಳ್ಳಲು ಮತ್ತು ಊರ ಜನರನ್ನು ಸಂರಕ್ಷಿಸಲು ಊರ ಸುತ್ತಲೂ ಕಲ್ಲಿನ ಗೋಡೆಯನ್ನು ಕಟ್ಟಿಸಿದುದು ಪಂತರ ಜನಪರ ಕಾಳಜಿಯನ್ನು ಎತ್ತಿ ತೋರಿಸುತ್ತದೆ. ಈ ಆವಾರ ಗೋಡೆಯನ್ನು ಕಲ್ಲು ಮತ್ತು ಹಾಳು ಮಣ್ಣಿನಿಂದ ನಿರ್ಮಿಸಲಾಗಿತ್ತು. ಇದು ಸುಮಾರು ೧೫ ಅಡಿ ಎತ್ತರ, ೪ ಅಡಿ ಅಗಲವಾಗಿದ್ದಿತು. ಇದಕ್ಕೆ 'ಚಕ್ರ ರೇಖೆ' ಎಂದು ಕರೆಯುತ್ತಿದ್ದರೆಂದು ಸ್ಥಳೀಯರು ಹೇಳುತ್ತಾರೆ. ನಾಲ್ಕು ದಿಕ್ಕಿಗೆ ನಾಲ್ಕು ಹುಡೆಗಳನ್ನು ಹಾಳು ಮಣ್ಣು, ಕಲ್ಲುಗಳಿಂದಲೇ ಕಟ್ಟಿದವುಗಳಾಗಿದ್ದವು. ಇವುಗಳ ಎತ್ತರ ಸುಮಾರು ೨೦-೨೫ ಅಡಿ. ಈಗ ಎರಡು ಹುಡೆಗಳು ಮಾತ್ರ ಉಳಿದಿದ್ದು ಇವು ಕೂಡ ಅರ್ಧಮರ್ಧ ಬಿದ್ದುಹೋಗಿವೆ. ಆವರಣ ಗೋಡೆಯ ಈಗ ಅಳಿದಿಲ್ಲ. ಅಲ್ಲಲ್ಲಿ ಸ್ವಲ್ಪ ಉಳಿದುಳಿದ ಅವಶೇಷ ಕಂಡುಬರುತ್ತದೆ. ಪೂರ್ವದಿಕ್ಕಿನ ಹುಡೆಗಳ ಆಚೆಗೆ ಗ್ರಾಮದೇವತೆಯ ದೇವಾಲಯವಿದೆ. ದಡ್ಡಿ ಅಗಸೆಯಲ್ಲಿ ಅಂದರೆ ಈಗಿನ ಪಂಚಾಯತ ಕಾರ್ಯಾಲಯದ ಹತ್ತಿರ ಒಂದು ಹುಡೆ ಇದ್ದಿತು. ಎರಡನೆಯದು ದೇವರಗುಡಿಯ ಹತ್ತಿರ, ಠಾಣಾ ಹತ್ತರಗಿಯ ಅಗಸೆಯಲ್ಲಿದ್ದಿತು. ಮೂರನೆಯವು ನಾಲ್ಕನೆಯವು ಕಾಲು ಫರ್ಲಾಂಗ್ ಅಂತರದ ಮೇಲೆ ಇದ್ದವು. ಇನ್ನೆರಡು ಹುಕ್ಕೇರಿ ಮತ್ತು ವಂಟಮೂರಿ ಅಗಸೆಗಳಲ್ಲಿದ್ದವು. ಒಂದು ಹೇಳಿಕೆಯಂತೆ ಒಂದು ಹುಡೆಯಿಂದ ಮತ್ತೊಂದಕ್ಕೆ ಹೋಗಲು ಚಕ್ರ ರೇಖೆಯೊಳಗೆ ಒಂದು ಚಕ್ಕಡಿ ಹೋಗುವ ದಾರಿಯಿದ್ದಿತು. ಕೋಟೆಯ ಕೆಳಗೆ ಈಗಿನ ಗೋಡಾವನ್ ಜಾಗೆಯಲ್ಲಿ ಕುದುರೆ ಪಾಗಾ ಇತ್ತು. ಅದರ ಮಗ್ಗುಲಲ್ಲಿಯೇ ಮದ್ದು ಗುಂಡುಗಳನ್ನು ಇಡುವ ಕೊಠಡಿಯಿತ್ತು. ಪೂರ್ವ ದಿಕ್ಕಿನಲ್ಲಿರುವ ಹುಡೆಯ ಹತ್ತಿರ ಹೊಕ್ಕುತುಂಬುವ ಬಾವಿಯಿದೆ. ಬಳಸುತ್ತಿದ್ದ ಕೋಟೆಯ ಒಳಗೆ ಬಲಗಡೆಗೆ ಒಂದು ಚಿಕ್ಕ ಕಾವಲು ಕೋಣೆಯಿತ್ತು. ಕೋಟೆಯ

ಸಮೀಪವೇ ಶ್ರೀಪಂತರ ನಿವಾಸವಿತ್ತು. ಆದರೆ ಅದು ಈಗ ಹಾಳಾಗಿ ಆ ಜಾಗೆಯಲ್ಲಿ ಹೊಟೇಲ್ ಆಗಿದೆ.

***ದೇವಾಲಯಗಳ ನಿರ್ಮಾಣ:*** ಶ್ರೀಪಂತರು ಸ್ವಭಾವತಃ ಭಿನ್ನ ಭಿನ್ನ ಮತ - ಧರ್ಮದವರಿಗೆ ಅವರವರ ಆರಾಧ್ಯ ದೇವರ ದೇವಾಲಯಗಳನ್ನು ಕಟ್ಟಿಸಿಕೊಟ್ಟು ಸರ್ವಧರ್ಮ ಸಮಭಾವವನ್ನು ಮೆರೆದಿದ್ದಾರೆ. ಇವರು ತಮ್ಮ ಮೂಲ ನಿವಾಸದ ಸಮೀಪ ಹನುಮಾನ ಗುಡಿಯನ್ನು ಕಟ್ಟಿಸಿದ್ದಾರೆ. ಊರ ಮಧ್ಯದಲ್ಲಿ ವಿಠ್ಠಲ ಮಂದಿರವನ್ನು ನಿರ್ಮಿಸಿದ್ದಾರೆ. ಅಲ್ಲದೆ ಊರಿನ ಪಶ್ಚಿಮಕ್ಕೆ ಹತ್ತರಗಿಯ ಅಗಸೆಯ ಹತ್ತಿರ ಐದು ಗುಡಿಗಳನ್ನು ಕಟ್ಟಿಸಿದ್ದಾರೆ. ಈ ಎಲ್ಲ ದೇವಾಲಯಗಳು ಒಂದೇ ಕಡೆಗೆ ಇದ್ದು ಈ ಸಂಕೀರ್ಣ **ಐದೇವರ** ಗುಡಿಯೆಂದೇ ಪ್ರಸಿದ್ಧವಾಗಿದೆ. ಪ್ರವೇಶ ದ್ವಾರದ ನಂತರ ನಮ್ಮ ದೃಷ್ಟಿಗೆ ಬೀಳುವ ಯಮತೇಶ್ವರ ದೇವಾಲಯ ಶಿವಾಲಯ ವಾಗಿದ್ದು ಮಹಾದೇವನ ಗುಡಿಯೆಂದು ಖ್ಯಾತವಾಗಿದೆ. ಶೈವ-ಶೈವೇತರರೂ ಸಮಾನವಾಗಿ ಭಕ್ತಿ, ಶ್ರದ್ಧೆಗಳಿಂದ ಈ ದೇವರಿಗೆ ನಡೆದುಕೊಳ್ಳುತ್ತಾರೆ. ಇದರ ಮಗ್ಗುಲಲ್ಲಿ ವೀರಶೈವ-ಲಿಂಗಾಯತ ಧರ್ಮೀಯರಿಗಾಗಿ ಅವರ ಆರಾಧ್ಯ ಪುರುಷನೂ, ನಂದಿಯ ಅವತಾರವೂ ಆದ ಬಸವಣ್ಣನ ದೇವಾಲಯವಿದೆ. ಇದರ ಸಮೀಪ ವೈಷ್ಣವರಿಗಾಗಿ ವೆಂಕಟೇಶ್ವರ ದೇವಸ್ಥಾನವಿದೆ. ರಾಮನ ಭಕ್ತರಿಗಾಗಿ ರಾಮ ಮಂದಿರವಿದೆ. ಶಾಕ್ತೇಯರಿಗಾಗಿ ಬನಶಂಕರಿ ದೇವಾಲಯ ವಿದೆ. ಈ ಎಲ್ಲ ಗುಡಿಗಳು ಕಲ್ಲು, ಗಾರೆಗಳಿಂದ ಕಟ್ಟಿದವುಗಳಾಗಿವೆ. ಇವುಗಳ ಶಿಖರಗಳಲ್ಲಿ ಕೆಲವು ಶಿಲಿಂಡರಾಕೃತಿಯಾಗಿಯೂ, ಮೆಟ್ಟಿಲು, ಮೆಟ್ಟಿಲಾಕೃತಿಗಳಾಗಿಯೂ ಇವೆ; ಇದೇ ರೀತಿ ಪಂತರ ದತ್ತುಪುತ್ರ ಊರ ಮಧ್ಯದಲ್ಲಿ ವೇಣುಗೋಪಾಲ ಗುಡಿಯನ್ನು ಕಟ್ಟಿಸಿದ್ದಾನೆ. ಇದರ ಶಿಖರದ ಮಾಡುಗಳಲ್ಲಿ ದುರ್ಗಾ, ಮಾರುತಿ, ಗಣಪತಿ ಚಿತ್ರಗಳನ್ನು ಬಿಡಿಸಲಾಗಿದೆ.

ಯಮಕನಮಕರಡಿ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಗ್ರಾಮ ದೇವತೆಯ ಗುಡಿಯನ್ನು ಪೂರ್ವದಿಶೆಯಲ್ಲಿ ಹತ್ತರಗಿಯ ಕಾರಿ ಮರಡಿಯಲ್ಲಿ **ಹುಲಿಗೆಮ್ಮನ** ಮಂದಿರವನ್ನು ಕಟ್ಟಿಸಿ ಇವುಗಳ ಪೂಜಾರಿಗಳಿಗೆ, ಪೂಜಾಕಾರ್ಯಗಳನ್ನು ನಿರ್ವಹಿಸಲು, ದೇವಾಲಯದ ಉಸ್ತುವಾರಿಯನ್ನು ನೋಡಲು ಜಮೀನನ್ನು ಉಂಬಳಿಯಾಗಿ ಕೊಡಲಾಗಿದೆ. ಮೇಲಿನ ಐದೂ ಗುಡಿಗಳ ಅರ್ಚಕರಿಗೆ ಹೊಲಗಳನ್ನು ದತ್ತಿಯಾಗಿ ಕೊಡಲಾಗಿದೆ.



*ಶ್ರೀಪಂತರ ಸಹೋದರಿ ಯಮುನಕ್ಕ ಒಂದು ಸಲ ಹಳ್ಳದ ವರತಿಯಿಂದ ಕುಡಿಯುವ ನೀರು ತರುವಾಗ ಅವಳ ಕಾಲಿಗೆ ಕಲ್ಲಿನ ಹರಳೊಂದು ನಟ್ಟು ಗಾಯವಾಯಿತಂತೆ! ಇದು ಪಂತರಿಗೆ ಗೊತ್ತಾಗಿ ಅಕ್ಕನಿಗೆ ಆದ ಸ್ಥಿತಿಗೆ ಮರುಕಪಟ್ಟು ಈ ಸ್ಥಿತಿ ತಮ್ಮ ಪ್ರಜೆಗಳಿಗೂ ಬರಬಾರದೆಂದು ಊರಿನ ಪ್ರಮುಖ ರಸ್ತೆಗಳಿಗೆಲ್ಲಾ ಕಲ್ಲಿನ ಫರಸಿ ಯನ್ನು ಹಾಕಿಸಿದರಂತೆ!*

*ತಪೋನಿಧಿಗಳಾದ ಮುರಗೋಡದ (ತಾ.) ಸವದತ್ತಿ ಶ್ರೀ ಚಿದಂಬರ ದೀಕ್ಷಿತರು, ಮಹಾತಪಸ್ವಿಗಳಾದ ಅರಭಾವಿಯ ದುರದುಂಡೀಶ್ವರರು ತಮ್ಮ ಸಂಚಾರದಲ್ಲಿ ಇಲ್ಲಿಗೆ ಆಗಮಿಸಿದ್ದರು. ಶ್ರೀ ದುರದಿಂಡೀಶ್ವರರ ಆಗಮನದ ಸವಿನೆನಪಿಗಾಗಿ, ಜನರು ಊರು/ ಮಧ್ಯದಲ್ಲೊಂದು ಕಟ್ಟಿಸಿರುವ ಶಿವಾಲಯವನ್ನು ದುರ ದುಂಡೀಶ್ವರರ ಗುಡಿಯೆಂದೇ ಕರೆಯುತ್ತಾರೆ. ಅವರಿಗೆ ಇಬ್ಬರು ಪತ್ನಿಯರಿದ್ದರೂ ಗಂಡು ಸಂತಾನವಾಗದೆ ಶ್ರೀನಿವಾಸನನ್ನು ದತ್ತಕ ತೆಗೆದುಕೊಂಡರು. ಸ್ವಂತ ಮಕ್ಕಳಿಲ್ಲದ ಕೊರಗು ಅವರನ್ನು ಕಾಡಿದಂತೆ ಕಾಣುತ್ತದೆ. ಅಧಿಕಾರ, ಅಂತಸ್ತುಗಳ ಉನ್ಮತ್ತತೆಯಿಂದಲೋ, ಕುಟಿಲ/ಕಾರಸ್ತಾನಿಗಳ ಚಿತಾವಣೆಯಿಂದಲೋ ಶ್ರೀ ದುಂಡೀಶ್ವರ ಮಹಾ ತಪಸ್ವಿಗಳನ್ನು ಕೋಣೆಯಲ್ಲಿ ಕೂಡಿಹಾಕಿ ಅವರನ್ನು ಪರೀಕ್ಷಿಸಲು ಪ್ರಯತ್ನಿಸಿದರೆಂದು ಪ್ರತೀತಿಯಿದೆ. ಇದರ ನಂತರ ಅವರ ಮನೆತನದ ಅವನತಿ ಪ್ರಾರಂಭವಾಯಿತಂತೆ. ಇದೇ ಕೊರಗಿನಲ್ಲಿ ಅವರೂ ಕೊನೆ ಯುಸಿರೆನ್ನೆಳೆದರು.*



## ಆಧಾರ ಸೂಚಿ


*೧. **ಬೆಳಗಾವಿ ಜಿಲ್ಲಾ ಗ್ಯಾಝೆಟೀಯರ್**, ಸಂ : ಡಾ. ಸೂರ್ಯನಾಥ ಕಾಮತ.

*೨. ಕನ್ನಡ ಗಂಡು ಮಕ್ಕಳ ಶಾಲೆ ಯಮಕನ ಮರಡಿ : ಶತಸಾಂವತ್ಸರಿಕ ಉತ್ಸವ ಪತ್ರಿಕೆ - **ಜಾನೇವಾರಿ ೧೯೬೨.**

*೩. ಮೌಖಿಕ ಕಥನ : ಶ್ರೀ ವ್ಹಿ. ಎಲ್. ಜೋಶಿ, ನಿವೃತ್ತ ಪ್ರೌಢ ಶಾಲೆ ಮುಖ್ಯೋಧ್ಯಾಪಕರು, ಯವಕನಮರಡಿ.

*೪. **ಶ್ರೀ ದುರದುಂಡೀಶ್ವರ ಪುರಾಣ**, ಲೇ. ಬಸವ ಕವಿ.

*೫. **ಚಿದಂಬರ ಲೀಲಾಮೃತ**, ಲೇ. ಶ್ರೀ ಚಿದಂಬರ ಯಜ್ಞೇಶ್ವರ ದೀಕ್ಷಿತ.

ಡಾ। ಎಸ್. ಕೆ. ಅರುಣಿ*

# ಬಹಮನಿ ರಾಜ್ಯದ ರಾಜಧಾನಿ ನಗರಗಳು : ಒಂದು ವಿಶ್ಲೇಷಣೆ

ಕ್ರಿ.ಶ. ೧೩೪೭ ರಿಂದ ೧೫೩೮ ರವರೆಗೆ ಆಳ್ವಿಕೆ ನಡೆಸಿದ ಬಹಮನಿ ಸುಲ್ತಾನ ರಾಜ್ಯವು ದಖನ್‌ನಲ್ಲಿ ಆಳಿದ ಪ್ರಥಮ ಸುಲ್ತಾನ ರಾಜ್ಯವೆಂದು ಕರೆಯಲ್ಪಡುತ್ತದೆ. ಇವರು ಮೂಲತಃ ಪರ್ಷಿಯಾ ದೇಶದಿಂದ ವಲಸೆ ಬಂದವರು. ಇವರ ಕಾಲಾವಧಿಯಲ್ಲಿ ಅನೇಕ ಕೋಟೆ ಕೊತ್ತಲಗಳು, ನಗರಗಳು ನಿರ್ಮಾಣಗೊಂಡವು. ಇವರ ಕಾಲದಲ್ಲಿ ರಚನೆಗೊಂಡ ನಗರಗಳಲ್ಲಿ ಪರ್ಷಿಯಾ/ಟರ್ಕಿ ದೇಶಗಳ ನಗರಗಳ ರಚನೆಯ ಅನುಕರಣೆಯನ್ನು ನಾವು ನೋಡಬಹುದು. ಇವರ ಕಾಲದಲ್ಲಿ ನಿರ್ಮಾಣಗೊಂಡ ಮೂರು ರಾಜಧಾನಿ ನಗರಗಳು ಮತ್ತು ಒಂದು ಪ್ರಾಂತೀಯ ಕೇಂದ್ರ ನಗರಗಳ ರಚನೆ ಹಾಗೂ ಅವುಗಳ ಮಹತ್ವದ ಕುರಿತಾಗಿ ಈ ಲೇಖನದಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

*ಗುಲ್ಬರ್ಗಾ*

ಬಹಮನಿ ರಾಜ್ಯದ ಸಂಸ್ಥಾಪಕ ಅಲ್ಲಾವುದ್ದೀನ್, ಹಸನ್-ಗಂಗು ತುಘಲಕ್ ಸಾಮ್ರಾಜ್ಯದ ವಿರುದ್ಧ ದಂಗೆ ಎದ್ದು ದೌಲತಾಬಾದನ್ನು ತೊರೆದು ಗುಲ್ಬರ್ಗಾದಲ್ಲಿ ಸ್ವತಂತ್ರ ರಾಜ್ಯವನ್ನು ೧೩೪೭ರಲ್ಲಿ ಸ್ಥಾಪನೆ ಮಾಡಿದನು. ದಖನ್ ಪ್ರಸ್ಥಭೂಮಿ




ಭಾಗದಲ್ಲಿ ಇದು ಒಂದು ಆಯಕಟ್ಟಿನ ಸ್ಥಳ. ಇಲ್ಲಿ ಒಂದು ಭದ್ರವಾದ ಕೋಟೆ ಹಾಗೂ ನಗರಗಳು ನಿರ್ಮಾಣಗೊಂಡವು.

**ಕೋಟೆ** : ನಗರದ ಮಧ್ಯಭಾಗದಲ್ಲಿರುವ ಕೋಟೆಯು ಭದ್ರವಾದ ಎರಡು ಸುತ್ತಿನ ಗೋಡೆಗಳಿಂದ ಕೂಡಿದೆ. ಸುತ್ತಲೂ ಆಳವಾದ ಕಂದಕವಿರುವುದು. ಈ ಕೋಟೆಯನ್ನು ಪ್ರವೇಶಿಸಲು ಪೂರ್ವ ಹಾಗೂ ವಾಯ್ಯುವ್ಯ ಭಾಗಗಳಲ್ಲಿ ದ್ವಾರಗಳನ್ನು ನಿರ್ಮಿಸಲಾಗಿದೆ. ಪೂರ್ವದ ದ್ವಾರವು ಆಯತಾಕಾರದ ಬುರುಜುಗಳಿಂದ ಕೂಡಿದ್ದು ಪ್ರವೇಶದ್ವಾರವು ಕಮಾನಿನಾಕಾರದಲ್ಲಿದೆ. ವಾಯುವ್ಯದ ದ್ವಾರವು ವೈರಿಗಳಿಗೆ ನೇರವಾಗಿ ಪ್ರವೇಶಿಸಲು ಅಸಾಧ್ಯವಾಗುವಂತೆ, ಮೂರು ಬಾಗಿಲುಗಳಿಂದ ಸುತ್ತಿ-ಬಳಸಿ ಬರುವಂತೆ ವ್ಯವಸ್ಥೆ ಮಾಡಲಾಗಿದೆ. ಕೋಟೆಯ ಆವರಣ ಬಹು ವಿಸ್ತಾರವಾಗಿದ್ದು ಕೋಟೆಯ ಗೋಡೆಯಲ್ಲಿ ಎತ್ತರದ ಬುರುಜುಗಳು, ಬತೇರಿಗಳನ್ನು ಮಾಡಲಾಗಿದೆ. ಕೋಟೆಯ ಆವರಣದಲ್ಲಿ ಒಂದು ಜಮ್ಮಾಮಸೀದಿ, ಬಾಳ-ಹಿಸಾರ, ಬಜಾರ ಹಾಗೂ ಇತರ ಕಟ್ಟಡಗಳ ಅವಶೇಷಗಳು ಕಂಡುಬರುತ್ತವೆ. ಕೋಟೆಯ ಮಧ್ಯದಲ್ಲಿರುವ ಜಮ್ಮಾಮಸೀದಿಯ ಬಹು ವಿಶಿಷ್ಟವಾಗಿದ್ದು ಇದು ಬಹಮನಿ ಸುಲ್ತಾನ ಒಂದನೇಯ ಮುಹಮ್ಮದನ ಕಾಲದಲ್ಲಿ ಪರ್ಶಿಯಾದ ವಾಸ್ತು ಶಿಲ್ಪಿ ತಂತ್ರಜ್ಞ ರಫಿ ಎಂಬವನು ೧೩೬೭ರಲ್ಲಿ ನಿರ್ಮಿಸಿದನೆಂದು ಇದರ ಮೇಲಿನ ಶಾಸನದಿಂದ ತಿಳಿದುಬರುತ್ತದೆ. ಈ ಮಸೀದಿಯು ಅಂಗಳದಿಂದ ಕೂಡಿರದೆ ಇರುವದು ಒಂದು ವಿಶೇಷ. ಮಸೀದಿಯ ಒಳಾಂಗಣದಲ್ಲಿ ಅಗಲವಾದ ಹಾಗೂ ಎತ್ತರವಾದ ಕಮಾನುಗಳಿಂದ ಕೂಡಿದ ಪ್ರಾರ್ಥನಾ ಆವರಣವಿರುವುದು. ಇದರ ಛಾವಣೆಯು ಚಿಕ್ಕ ಚಿಕ್ಕ ಗುಮ್ಮಟಗಳಿಂದ ಕೂಡಿದೆ.



ಕೋಟೆಯ ಒಳ ಆವರಣ

ಜಮ್ಮಾ ಮಸೀದಿಯ ಉತ್ತರಕ್ಕೆ ಒಂದು ಎತ್ತರದ ಕಟ್ಟಡ ಇರುವುದು. ಇದನ್ನು ಬಾಳಹಿಸಾರ ಅಥವಾ ಬಾಳಕಿಲ್ಲಾ ಎಂದು ಕರೆಯುವರು. ಈ ಕಟ್ಟಡದ ಮೇಲೆ ಉದ್ದನೇಯ ಫಿರಂಗಿ ಇರುವುದು. ಈ ಫಿರಂಗಿಯ ಮೇಲಿನ ಶಾಸನದ ಪ್ರಕಾರ ಇದು ಆದಿಲ್ ಷಾಹಿಯವರ ಕಾಲದಲ್ಲಿ ಫಿರಂಗಿಯನ್ನು ಇಡಲಾಗಿದೆ

*ಸಂಶೋಧನ ಅಧಿಕಾರಿ, ಐ.ಸಿ.ಎಚ್.ಆರ್. ದಕ್ಷಿಣ ಭಾರತ ಪ್ರಾದೇಶಿಕ ಕಛೇರಿ, ಬೆಂಗಳೂರು - ೯.

ಎಂಬ ಅಂಶ ಸ್ಪಷ್ಟವಾಗುತ್ತದೆ. ಕೋಟೆಯ ಆವರಣದ ಮಧ್ಯದಲ್ಲಿ ಹಾಗೂ ಜನವಸತಿ ಇರುವ ಮಧ್ಯದಲ್ಲಿ ಬುರುಜು ಕಟ್ಟಿ ಅದರ ಮೇಲೆ ಫಿರಂಗಿಯನ್ನು ಇಡುವದು ಕೋಟೆಗಳ ರಚನೆಯ ಕಾರ್ಯದಲ್ಲಿ ಕಂಡುಬರುವ ಅವೈಜ್ಞಾನಿಕ ಅಂಶವೆಂದು ಹೇಳಬಹುದು. ಫಿರಂಗಿಯ ಗುಂಡಿನ ಸದ್ದಿನಿಂದ ಕೋಟೆಯ ನಾಗರಿಕರಿಗೆ, ಸುಲ್ತಾನರಿಗೆ ತೊಂದರೆಯಾಗುತ್ತಿತ್ತು ಎಂಬುದು ಗಮನಿಸಬೇಕಾದ ಅಂಶ. ಈ ಒಂದು ಹಿನ್ನೆಲೆಯಲ್ಲಿ ಕಟ್ಟಡವನ್ನು ಸೂಕ್ಷ್ಮವಾಗಿ ಗಮನಿಸಲಾಗಿ ಈ ಕಟ್ಟಡ ಮೂರು ಬೃಹತ್ ಕಮಾನುಗಳಿಂದ ಕೂಡಿದ ಎರಡು ಅಂತಸ್ತಿನ ಕಟ್ಟಡವಿದಾಗಿತ್ತೆಂದು ತಿಳಿದು ಬರುತ್ತದೆ. ಇದು ಮೂಲದಲ್ಲಿ ಬಹಮನಿಯವರ ಕಾಲದಲ್ಲಿ ಒಂದು ಅರಮನೆ ಕಟ್ಟಡ ಆಗಿತ್ತು. ಬಹಮನಿಯವರ ಪತನದ ನಂತರ ಆದಿಲ್ ಷಾಹಿಯವರು ಈ ಕೋಟೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡು ಈ ಅರಮನೆ ಕಟ್ಟಡವನ್ನು ಗೋಡೆಗಳಿಂದ ಮುಚ್ಚಿ ಒಂದು ಬುರುಜನ್ನಾಗಿ ಪರಿವರ್ತಿಸಿದರು ಎಂಬ ಅಭಿಪ್ರಾಯ ಮೂಡುತ್ತದೆ. ಈ ಕಟ್ಟಡದ ಗೋಡೆ ಎರಡು ಗೋಡೆಗಳಿಂದ ಕೂಡಿವೆಯಂಬುದು ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕಂಡುಬರುತ್ತದೆ. ಬಾಳಕಿಲ್ಲಾದ ಹಿಂಭಾಗದಲ್ಲಿ ಹಾಗೂ ಪಕ್ಕದಲ್ಲಿ ಕೆಲವು ಕಟ್ಟಡಗಳ ಅವಶೇಷಗಳು ಕಂಡುಬರುತ್ತದೆ. ಆ ಅವಶೇಷಗಳು ಅಂದಿನ ಅರಮನೆಯ ಇತರ ಕಟ್ಟಡಗಳಾಗಿರ ಬಹುದು.

ಕೋಟೆಯ ವಾಯುವ್ಯ ದ್ವಾರದ ಒಳಆವರಣದಲ್ಲಿ ಪಿರಾಮಿಡ್ ಆಕಾರದ ಛಾವಣಿಗಳ ಕೋಟೆಗಳ ಸಾಲುಗಳಿವೆ. ಇವು ರಸ್ತೆಯ ಎರಡು ಬದಿಯಲ್ಲಿ ನಿರ್ಮಿಸಲಾಗಿವೆ. ಇವುಗಳ ಮೇಲೆ ಗಾರೆಯಿಂದ ಮಾಡಿದ ಜ್ಯಾಮಿತಯಾಕಾರದ ವಿನ್ಯಾಸ ಗಳಿವೆ. ಕೋಟೆಯ ನಿವಾಸಿಗಳಿಗೆ ಮಾಡಲಾದ ಬಜಾರದ ಅಂಗಡಿ ಗಳೆಂದು ಹೇಳಲಾಗಿದೆ. ನಮಗೆ ಲಭ್ಯವಿರುವ ಆಧಾರಗಳ ಪ್ರಕಾರ ವಿಶ್ವದಲ್ಲಿಯೇ ಅತಿ ಹಳೆಯ ಬಜಾರ ಇದು ಎಂದು ತಿಳಿದುಬರುತ್ತದೆ.

**ನಗರ** : ನಗರವು ಕೋಟೆಯ ಗೋಡೆಗಳಿಂದ ಸುತ್ತುವರೆ ದಿರುವಂತೆ ಕಾಣುವದಿಲ್ಲ. ಕೋಟೆಯ ನಾಲ್ಕು ದಿಕ್ಕುಗಳಲ್ಲಿ ದೊರೆಯುವ ಬಹಮನಿ ಕಾಲದ ಸ್ಮಾರಕಗಳನ್ನಾಧರಿಸಿ ಈ ನಗರವು ಸುಮಾರು ೭ ಕಿ.ಮೀ. ಉದ್ದ ಮತ್ತು ೩ ಕಿ.ಮೀ. ಅಗಲ ವಿಸ್ತೀರ್ಣತೆ ಯಿಂದ ಕೂಡಿತ್ತೆಂದು ಹೇಳಬಹುದು. ನಗರವನ್ನು ಅಗಲವಾದ ರಸ್ತೆಗಳಿಂದ ಹಾಗೂ ಚರಂಡಿಗಳ ವ್ಯವಸ್ಥೆಗಳಿಂದ ನಿರ್ಮಿಸಲಾಗಿತ್ತು. ನೀರಿನ ಅನುಕೂಲಕ್ಕಾಗಿ ಅಲ್ಲಲ್ಲಿ ಕೆರೆಗಳನ್ನು ನಿರ್ಮಿಸಲಾಗಿತ್ತು. ಬಹಮನಿ ಕಾಲದ ವಸತಿ ಗೃಹಗಳು ಕಂಡುಬರುವುದಿಲ್ಲವಾದರೂ ಆ ಕಾಲದ ರಸ್ತೆಗಳ ರಚನೆಯನ್ನು ನಾವು ಗಮನಿಸಬಹುದು.

ಕೋಟೆಯ ಪೂರ್ವದ ದ್ವಾರದಿಂದ ಪ್ರಾರಂಭವಾಗುವ ರಸ್ತೆ 'ಮಾರ್ಕೆಟ್ ಚೌಕ್' ಎನ್ನುವ ವರ್ತುಲಕ್ಕೆ ಬಂದು ಸೇರುತ್ತದೆ. ಈ ವರ್ತುಲದಲ್ಲಿ ನಗರದ ನಾಲ್ಕು ರಸ್ತೆಗಳು ಸೇರುತ್ತವೆ. ಈ ವರ್ತುಲದ ರಸ್ತೆಗಳ ಬದಿಗಳ ಅಂಗಡಿಗಳು ಕಮಾನಿನಿಂದ ಕೂಡಿವೆ. ಈ ಕಮಾನುಗಳ ಶೈಲಿ ಬಹಮನಿ ಕಾಲದ ಕಮಾನುಗಳ ಶೈಲಿಯನ್ನು ಹೋಲುತ್ತದೆ. ಕೋಟೆಯ ಒಳ ಆವರಣದಲ್ಲಿ ಇರುವ ಬಜಾರದಂತೆ ನಗರದ ನಾಗರಿಕರಿಗೆ ಮಾರುಕಟ್ಟೆಯ ವ್ಯವಸ್ಥೆ ಮಾಡಲಾಗಿದೆ.

ಕೋಟೆಯ ಉತ್ತರದ ನಗರವನ್ನು ಶಹಾಬಜಾರ ಎಂದು ಕರೆಯುವರು. ಇಲ್ಲಿಯ ಪ್ರಮುಖ ರಸ್ತೆಯು ಕೋಟೆಯ ವಾಯುವ್ಯ ದ್ವಾರಕ್ಕೆ ಬಂದು ಸೇರುವದು. ಶಹಾಬಜಾರ ಪ್ರದೇಶವು, ಬಹಮನಿ ಕಾಲದ ನಗರದ ಒಂದು ಪ್ರಮುಖ ಭಾಗವಾಗಿತ್ತೆಂದು ತಿಳಿದು ಬರುತ್ತದೆ. ಇಲ್ಲಿಯ ಪ್ರಮುಖ ರಸ್ತೆ ಅಂದಿನ ಬಜಾರದ ಬೀದಿ ಯಾಗಿತ್ತೆಂದು ಅಲ್ಲಿ ಕಂಡುಬರುವ ಕಮಾನುಗಳಿಂದ ಕೂಡಿದ ಅಂಗಡಿಗಳ ಆಧಾರಗಳಿಂದ ಹೇಳಬಹುದು. ಈ ರಸ್ತೆಯ ಕೊನೆಯಲ್ಲಿ ಒಂದು ಜಮ್ಮಾಮಸೀದಿ ಇರುವದು. ಇದನ್ನು 'ಶಹಾಬಜಾರ ಮಸೀದಿ' ಎಂದು ಕರೆಯಲ್ಪಡುತ್ತದೆ.

**ಮಸೀದಿಗಳು** : ಸುಲ್ತಾನರ ಕಾಲದ ನಗರಗಳಲ್ಲಿ ಕಂಡು ಬರುವ ಸಾರ್ವಜನಿಕ ಕಟ್ಟಡಗಳೆಂದರೆ ಮಸೀದಿಗಳು. ನಾಗರಿಕರಿಗೆ ಸಾಮೂಹಿಕ ಪ್ರಾರ್ಥನೆ ಮಾಡಲು ನಿರ್ಮಿಸಿದ ಕಟ್ಟಡಗಳಿವು. ಅವುಗಳಲ್ಲಿ ಅತಿ ಹಳೆಯ ಹಾಗೂ ವಿಶಾಲವಾದ ಮಸೀದಿಯೆಂದರೆ ಶಹಾಬಜಾರ ಮಸೀದಿ. ಇದು ಕೋಟೆಯ ಉತ್ತರಕ್ಕೆ ಶಹಾಬಜಾರ ರಸ್ತೆಯ ಕೊನೆಯಲ್ಲಿರುವದು. ಇದು ಒಂದನೆಯ ಮುಹ್ಮದ (೧೩೫೮-೭೫)ನು ನಿರ್ಮಿಸಿದನು. ತೊಘಲಕ್ ಶೈಲಿಯ ಮಸೀದಿಯ ಅನುಕರಣೆ ಈ ಮಸೀದಿಯ ವಾಸ್ತು ರಚನೆಯಲ್ಲಿ ನಾವು ಕಾಣುತ್ತೇವೆ. ಇದರ ವಿಶೇಷತೆಯೆಂದರೆ ಅದರ ಗುಮ್ಮಟದಿಂದ ಕೂಡಿದ ಪ್ರವೇಶದ್ವಾರ ಹಾಗೂ ಉದ್ದನೆಯ ಕಮಾನುಗಳಿಂದ ಕೂಡಿದ ಪ್ರಾರ್ಥನಾ ಆವರಣ ಅದರ ಹಿಂಭಾಗದ ಗೋಡೆಯಲ್ಲಿ ಒಂದು ಚಿಕ್ಕ ದ್ವಾರ ಇರುವುದು. ಇದರ ವಿಸ್ತಾರ ಹಾಗೂ ಇದರ ರಚನೆಯ ಶೈಲಿಯನ್ನು ಗಮನಿಸಿದರೆ ದಕ್ಷಿಣ ಭಾರತದಲ್ಲಿಯೇ ಆ ಕಾಲದಲ್ಲಿ ನಿರ್ಮಿಸಲಾದ ಒಂದು ಬೃಹತ್ ಹಾಗೂ ಭವ್ಯತೆಯ ಮಸೀದಿ ಇದಾಗಿತ್ತು ಎಂದು ತಿಳಿದುಬರುತ್ತದೆ.

***ಲಂಗರ-ಕಿ-ಮಸೀದಿ*** : ಇದು ಶಹಾಬಜಾರ ಮಸೀದಿಯಿಂದ ಉತ್ತರಕ್ಕೆ ೨.ಕಿ.ಮೀ. ದೂರದಲ್ಲಿದೆ. ಇಂದಿನ ರಿಂಗರೋಡಿಗೆ ಹತ್ತಿರ ಇರುವ ಈ ಮಸೀದಿಯು ಬಹಮನಿಯವರ ಕಾಲದಲ್ಲಿ ನಿರ್ಮಿಸಲಾದ ಸುಂದರ ಮಸೀದಿ. ಇದರ ಮುಕ್ಕಾಲು ಭಾಗ ನಾಶವಾಗಿದೆ. ಇದರ ಬಲಭಾಗದ ಕಟ್ಟಡ ಅಗಲವಾದ ಮೂರು ಕಮಾನುಗಳಿಂದ ಕೂಡಿದೆ. ಈ ಕಮಾನುಗಳು ವಿಶಿಷ್ಟವಾಗಿದ್ದು ಇವು ಬಹಮನಿ ಸುಲ್ತಾನ ಫಿರೋಜಶಹಾನ ಕಾಲದಲ್ಲಿ ಕಂಡುಬರುವ ಕಮಾನುಗಳ ಶೈಲಿಯಲ್ಲಿವೆ. ಈ ಮಸೀದಿಯ ಮುಂಭಾಗದಲ್ಲಿ ಇಳಿಜಾರಿನ ಛಜ್ಜ ಹಾಗೂ ಈ ಛಜ್ಜಗಳಿಗೆ ಕಲ್ಲಿನಲ್ಲಿ ಮಾಡಿದ ಬ್ರ್ಯಾಕೇಟ್‌ಗಳಿವೆ. ಈ ವಿಶಿಷ್ಟವಾದ ವಾಸ್ತುಶೈಲಿ ಫಿರೋಜ ಶಹಾ ಕಾಲದ ಕಟ್ಟಡಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಈ ಆಧಾರದ ಮೇಲೆ ಈ ಮಸೀದಿಯು ಹದಿನಾಲ್ಕನೆಯ ಶತಮಾನದ ಆರಂಭದ ದಶಕಗಳಲ್ಲಿ ನಿರ್ಮಿತ ವಾಗಿದೆ ಎಂದು ಹೇಳಬಹುದು.

**ದರ್ಗಾಗಳು** : ಬಹಮನಿ ಸುಲ್ತಾನರು ಸೂಫಿ ಸಂತರ ಭಕ್ತರಾಗಿದ್ದರು. ಇವರ ಕಾಲದಲ್ಲಿ ಪರ್ಷಿಯಾ ದೇಶದಿಂದ ಬಂದ ಸೂಫಿ ಸಂತರು ರಾಜಧಾನಿ ಗುಲ್ಬರ್ಗಾದಲ್ಲಿ ನೆಲೆಸಿದ್ದರು. ಇವರ ದರ್ಗಾಗಳು ಅನೇಕ ಭಕ್ತರನ್ನು ಆಕರ್ಷಿಸುವ ಕೇಂದ್ರಗಳು. ನಗರದಲ್ಲಿ ಕಂಡುಬರುವ ಮುಖ್ಯ ದರ್ಗಾಗಳೆಂದರೆ ಬಂದೇನವಾಜ ದರ್ಗಾ ಎಂದು ಕರೆಯುವ ಹಜರತ್ ಫೆಜುದರಾಜ್ ದರ್ಗಾ ಮತ್ತು ಷೇಖ್ ರೌಜಾ ಎಂದು ಕರೆಯು ಷೇಖ್ ಶಿರಾಜುದ್ದಿನ್ ಜುನಯ್ದಿ ದರ್ಗಾ. ಇವರಲ್ಲಿ ಮೊದಲಿಗನೆಂದರೆ ಷೇಖ್ ಶಿರಾಜುದ್ದಿನ್ ಜುನಯ್ದಿ. ಈ ಸಂತನು ಬಹಮನಿ ರಾಜ್ಯದ ಸಂಸ್ಥಾಪಕರ ಕಾಲದಲ್ಲಿ (೧೩೫೦) ಗುಲ್ಬರ್ಗಾಕ್ಕೆ ಬಂದು ನೆಲೆಸಿದ್ದನು. ಈ ಸಂತನ ದರ್ಗಾವು ಶಹಾಬಜಾರ ಮಸೀದಿಯ ಹಿಂಭಾಗದಲ್ಲಿದೆ. ಇದನ್ನು ಷೇಖ್ ರೌಜಾ ಎಂದು ಕರೆಯುವರು. ಈ ದರ್ಗಾವು ಮೂಲದಲ್ಲಿ ಸಂತನ ಗೋರಿ ಹಾಗೂ ಒಂದು ಚಿಕ್ಕ ಮಸೀದಿಯಿಂದ ಕೂಡಿತ್ತು. ನಂತರ ಈ ಸಂತನ ಸಮಾಧಿಯ ಪಕ್ಕಗಳಲ್ಲಿ ಕೆಲವು ಸಮಾಧಿಗಳು ಹಾಗೂ ಗೋರಿಗಳಿಂದ ಕೂಡಿಕೊಂಡು ಒಂದು ಸಂಕೀರ್ಣವಾಗಿ ಬೆಳೆಯಿತು. ಆ ಸಂಕೀರ್ಣಕ್ಕೆ ಒಂದು ಮಹಾದ್ವಾರ ಇರುವದು. ಇದನ್ನು ಬಿಜಾಪುರ ಆದಿಲ್‌ಷಾಹಿ ಸುಲ್ತಾನ ಯೂಸೂಫ್ ಆದೀಲ್ ಖಾನ್ ಕಟ್ಟಿಸಿದ್ದಾನೆ. ಬಹಮನಿ ರಾಜ್ಯದ ಆರಂಭದ ಸುಲ್ತಾನರ ಸಮಾಧಿಗಳು ಸಂತನ ದರ್ಗಾದ ದಕ್ಷಿಣಕ್ಕೆ ಇರುವದು. ಇಲ್ಲದೆ ಸಂತನ ಅನುಯಾಯಿಗಳ ಸಮಾಧಿಗಳು ದರ್ಗಾದ ಸುತ್ತಲು ಕಂಡುಬರುತ್ತಿದ್ದು ಈ ದರ್ಗಾ ಒಂದು ಧಾರ್ಮಿಕ ಕೇಂದ್ರವಾಗಿ ಬೆಳೆದು ಬಂದಿತು.

ಫಿರೋಜ ಶಾಹ (೧೩೩೭-೧೪೨೨)ನ ಕಾಲದಲ್ಲಿ ದೆಹಲಿಯಿಂದ ಗುಲ್ಬರ್ಗಾಕ್ಕೆ ಬಂದು ನೆಲೆಸಿದ ಹಜರತ್. ಫೆಜುದರಾಜ ಅಥವಾ ಹಜರತ್ ಖ್ವಾಜಾ ಬಂದೆ ನವಾಜ ಅವರು ನಾಡಿನ ಅಗ್ರಗಣ್ಯ ಸೂಫಿ ಸಂತರಲ್ಲಿ ಒಬ್ಬರಾಗಿದ್ದಾರೆ. ಬಂದೆ ನವಾಜ ದರ್ಗಾವು ಕೋಟೆಯ ಪೂರ್ವಕ್ಕೆ ಸುಮಾರು ೨ ಕಿ.ಮೀ. ದೂರದಲ್ಲಿದೆ. ಇದು ಒಂದು ದೊಡ್ಡ ಸಂಕೀರ್ಣ. ದಕ್ಷಿಣ ಭಾರತದಲ್ಲಿಯೇ ಅತಿ ಹೆಚ್ಚು ಹೆಸರುವಾಸಿಯಾದ ಈ ದರ್ಗಾವು ಬಹಮನಿ ಕಾಲದಿಂದಲೂ ಒಂದು ಪ್ರಮುಖ ಧಾರ್ಮಿಕ ಕೇಂದ್ರವಾಗಿ ಬೆಳೆದುಬಂದಿದೆ. ಬಹಮನಿ ಸುಲ್ತಾನರಲ್ಲದೆ. ದಖ್ಖಿನ್‌ದ ಇತರ ಸುಲ್ತಾನರ ಅಧಿಕಾರಗಳ ಸಮಾಧಿಗಳು ಇಲ್ಲಿ ಕಂಡುಬರುತ್ತವೆ. ಇದರ ಮಹಾದ್ವಾರವು ಮೊಘಲರ ಕಾಲದಲ್ಲಿ ನಿರ್ಮಿಸಲಾಗಿದ್ದು ಇಲ್ಲಿ ಕಂಡು ಬರುವ ಕಟ್ಟಡಗಳ ಸಮಾಧಿಗಳು, ವಿವಿಧ ಕಾಲಾವಧಿಯಲ್ಲಿ ನಿರ್ಮಿಸಿದವು. ಈ ಸಂಕೀರ್ಣ ಕುರಿತಾಗಿಯೇ ವಿಶೇಷ ಅಧ್ಯಯನದ ಅವಶ್ಯಕತೆ ಇದೆ.

*ಷಾಹ ಕಮಲ್ ಮುಜ್ರಾದ್ ದರ್ಗಾ* : ಇದು ಹಜರತ್ ಬಂದೇ ನವಾಜ ಅವರ ದರ್ಗಾದ ಆಗ್ನೇಯ ದಿಕ್ಕಿಗೆ ಸ್ವಲ್ಪ ದೂರದಲ್ಲಿದೆ. ಬಹಮನಿ ಕಾಲದಲ್ಲಿ ನೆಲೆಸಿದ್ದ ಈ ಸಂತನ ಘೋರಿ ಹಾಗೂ ಒಂದು ಮಸೀದಿ ಇಲ್ಲಿ ಕಂಡುಬರುತ್ತವೆ. ಈ ಕಟ್ಟಡಗಳಲ್ಲದೆ ಸಾಲಾಗಿ ಗುಮ್ಮಟಗಳಿಂದ ಕೂಡಿದ ಉದ್ದನೆಯ ಒಂದು ಕಟ್ಟಡ ಇಲ್ಲಿರುವದು. ಈ ಎಲ್ಲ ಕಟ್ಟಡಗಳಿಂದ ಕೂಡಿದ ಈ ಸಂಕೀರ್ಣ ಬಹಮನಿ ಕಾಲದಲ್ಲಿ ನಿರ್ಮಿತವಾಗಿರುವದು ಎಂದು ಇಲ್ಲಿಯ ವಾಸ್ತುಶೈಲಿಯ ಆಧಾರದ ಮೇಲೆ ಹೇಳಬಹುದು.

*ಬೀದರ*

ಗುಲ್ಬರ್ಗಾದಿಂದ ಉತ್ತರಕ್ಕೆ ಸುಮಾರು ೧೦೦ ಕಿ.ಮೀ. ದೂರದಲ್ಲಿರುವ ಬೀದರ ಇಂದು ಒಂದು ಜಿಲ್ಲಾ ಕೇಂದ್ರ. ಇದು ಬಹಮನಿಯವರ ಎರಡನೇಯ ರಾಜಧಾನಿ. ನೆರೆಯ ರಾಜ್ಯ ವಿಜಯನಗರದ ದಾಳಿಗಳಿಂದ ರಾಜಧಾನಿ ಸುರಕ್ಷಿತವಾಗಿಡಲು ಬಹಮನಿಯ ಸುಲ್ತಾನರು ಕ್ರಿ.ಶ. ೧೪೨೪ರಲ್ಲಿ ಗುಲ್ಬರ್ಗಾದಿಂದ ಬೀದರಕ್ಕೆ ವರ್ಗಾಯಿಸಿದರು. ಅತ್ಯಂತ ಆಯಕಟ್ಟಿನ ಸ್ಥಳವಾದ ಕೆಂಪು ಭೂಮಿಯ ಬಯಲಿನಲ್ಲಿರುವ ಬೀದರ ಮಧ್ಯಕಾಲೀನ ಕಾಲದ ಒಂದು ಸುಂದರವಾದ ನಗರವಾಗಿದೆ. ಇದನ್ನು ಅರಮನೆ ಆವರಣ ಹಾಗೂ ನಗರಗಳೆಂಬ ಎರಡು ಪ್ರಮುಖ ಭಾಗಗಳನ್ನಾಗಿ ವಿಂಗಡಿಸಹಹುದು ಈ ಎರಡು ಭಾಗಗಳು ಭದ್ರವಾದ ಕೋಟೆಗಳಿಂದ ಕೂಡಿವೆ (Yazdani 1947).

*ಅರಮನೆ ಆವರಣ* : ಸುಲ್ತಾನರು ಹಾಗೂ ಉನ್ನತ ಅಧಿಕಾರಿಗಳು ಅತ್ಯಂತ ಸುರಕ್ಷತವಾಗಿ ಇರುವದಕ್ಕೆ ವಿಶೇಷ ಆವರಣವನ್ನು ನಗರದ ಉತ್ತರಕ್ಕೆ ನಿರ್ಮಿಸಲಾಗಿದೆ. ಇದಕ್ಕೆ



ಪ್ರವೇಶಿಸಲು ಏಳು ದ್ವಾರಗಳಿವೆ. ಆವರಣದ ಸುತ್ತಲಿನ ಕೋಟೆಯು ಬುರುಜು, ಬತೇರಿ ಹಾಗೂ ಆಳವಾದ ಮೂರೂ ಕಂದಕಗಳಿಂದ ಭದ್ರಗೊಳಿಸಲಾಗಿದೆ. ಈ ಆವರಣದ ಪ್ರಮುಖ ಕಟ್ಟಡಗಳೆಂದರೆ ಶೋಲಾ-ಕಂಬದ ಮಸೀದಿ, ತಖ್ತ-ಮಹಲ್ ದಿವಾನ-ಈ-ಆಮ್, ರಂಗೀನ ಮಹಲ್, ಟರ್ಕಿಸ್ ಮಹಲ್, ಇತ್ಯಾದಿ. ಪರ್ಷಿಯಾ ಶೈಲಿಯ ಕಟ್ಟಡಗಳು ಇಲ್ಲಿ ಕಂಡುಬರುತ್ತವೆ. ಅರಮನೆ ಆವರಣದಿಂದ ನಗರಕ್ಕೆ ಪ್ರವೇಶಿಸಲು ಎರಡು ಬೃಹತ್ ದ್ವಾರಗಳಿವೆ. ಇವು ಗುಂಬಜ ದರ್‌ವಾಜ ಮತ್ತು ಷಾರ್ಜಾ ದರವಾಜ ಎಂದು ಕರೆಯಲ್ಪಡುತ್ತವೆ. ಷಾರ್ಜಾ ದರವಾಜದ ಮೇಲೆ ಬಹಮನಿ ರಾಜ್ಯದ ಲಾಂಛನಗಳಾದ ಹುಲಿ ಹಾಗೂ ಉದಯಿಸುತ್ತಿರುವ ಸೂರ್ಯನ ಶಿಲ್ಪಗಳು ಗಾರೆಯಲ್ಲಿ ಮಾಡಲಾಗಿದೆ.

**ನಗರ** : ಅರಮನೆಯ ಆವರಣದ ದಕ್ಷಿಣಕ್ಕೆ ಹೊಂದಿಕೊಂಡು ಇರುವ ನಗರ ಬಹು ವಿಸ್ತಾರದಿಂದ ಕೂಡಿದೆ. ನಗರದ ಸುತ್ತಲೂ ಕೋಟೆಯ ಗೋಡೆಯನ್ನು ನಿರ್ಮಿಸಲಾಗಿದೆ. ಗೋಡೆಯಲ್ಲಿ ಬುರುಜುಗಳು, ಬತೇರಿಗಳನ್ನು ಕಟ್ಟಲಾಗಿದೆ. ನಗರದ ಸುತ್ತಲಿನ ಕೋಟೆಯಲ್ಲಿ ಒಟ್ಟು ಆರು ದ್ವಾರಗಳಿವೆ. ನಗರವನ್ನು ಅನೇಕ ವಾರ್ಡುಗಳನ್ನಾಗಿ ವಿಂಗಡಿಸಲಾಗಿದೆ. ಅಗಲವಾದ ರಸ್ತೆಗಳು ಬಜಾರಗಳು ಇತರ ಸಾರ್ವಜನಿಕ ಕಟ್ಟಡಗಳಿಂದ ನಗರವನ್ನು ನಿರ್ಮಿಸಲಾಗಿದೆ. ನಗರದಲ್ಲಿ ಕಂಡು ಬರುವ ಪ್ರಮುಖ ಕಟ್ಟಡಗಳೆಂದರೆ ಜಮ್ಮಾ ಮಸೀದಿ ತಖ್ತ-ಈ-ಕಿರ್ಮಾನಿ, ಖಾನ್ಖಾ ಹವೇಲಿ, ಚೌಬಾರಾ ಚೌಕ್, ಮಹ್ಮದ ಗವಾನ ನಿರ್ಮಿಸಿದ ಮದರಸಾ ಇತ್ಯಾದಿ. ಇವುಗಳಲ್ಲಿ ಮಹ್ಮದ ಗವಾನನ ಮದರಸಾ ಉಲ್ಲೇಖನಾರ್ಹ ಇದು ಕ್ರಿ.ಶ. ೧೪೭೨ರಲ್ಲಿ ಬಹಮನಿ ರಾಜ್ಯದ ವಜೀರನಾಗಿದ್ದ ಮಹ್ಮದ ಗವಾನನು ನಿರ್ಮಿಸಿದನು. ಜಮ್ಮಾ ಮಸೀದಿ ನಗರದ ದಕ್ಷಿಣ ಭಾಗದಲ್ಲಿದೆ. ಇದು ಬಹಮನಿ ಕಾಲದಲ್ಲಿ ನಿರ್ಮಿತವಾದುದು. ತಖ್ತ-ಈ-ಕಿರ್ಮಾನಿ ಕಟ್ಟಡವು ಒಂದು ಬಂಗಲೆಯಾಗಿದ್ದು ಇಲ್ಲಿಯ ಗಾರೆಯ ವಿನ್ಯಾಸಗಳು ನೋಡುಗರನ್ನು ಆಕರ್ಷಿಸುತ್ತವೆ. ಇದು ಬಹಮನಿ ಕಾಲದ ನಗರದಲ್ಲಿಯ ನಿವಾಸಿಯ ಬಂಗಲೆಯನ್ನು ಪ್ರತಿನಿಧಿಸುವಂತಿದೆ. ನಗರದ ಪ್ರಮುಖ ರಸ್ತೆಗಳು ಕೂಡುವ ಸ್ಥಳದಲ್ಲಿ ಸಿಲಿಂಡರಿನಂತೆ ಒಂದು ವರ್ತುಲಾಕಾರದ ಕಟ್ಟಡವಿದ್ದು ಇದನ್ನು ಚೌಬಾರಾ ಚೌಕ್ ಎಂದು ಕರೆಯುವರು.

ನಗರ ಈಶಾನ್ಯಕ್ಕೆ ಸುಮಾರು ೩ ಕಿ.ಮೀ. ದೂರದಲ್ಲಿ ಅಸ್ತೂರು ಗ್ರಾಮದ ಬಳಿ ಬಹಮನಿ ಸುಲ್ತಾನರ ಗೋರಿಗಳು ಇರುವವು. ಇವುಗಳ ಸಮೀಪ ಸೂಫಿ ಸಂತ ಖಲೀಲ್ ಅಲ್ಲಾನ ಸಮಾಧಿ ಇರುವದು. ಸೂಫಿ ಸಂತರ ಹತ್ತಿರ ಸುಲ್ತಾನರ ಸಮಾಧಿಗಳು ಕಂಡುಬರುವದು ಬಹಮನಿ ಸುಲ್ತಾನರ ಕಾಲದ ಒಂದು ವಿಶೇಷ.

*ಫಿರೋಜಾಬಾದ*

ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಫಿರೋಜಾಬಾದವು ಬಹಮನಿ ಕಾಲದಲ್ಲಿ ನಿರ್ಮಿಸಿದ ಒಂದು ನಗರ. ಇದು



ಬೀದರ ಅರಮನೆ ಆವರಣ ತಖ್ತ ಮಹಲದ ದ್ವಾರ

ಭೀಮಾ ನದಿಯ ಎಡದಂಡೆಯ ಮೇಲೆ ವಿಶಾಲವಾದ ಪ್ರದೇಶದಲ್ಲಿ ನಿರ್ಮಿಸಲಾಗಿದೆ. ಕ್ರಿ.ಶ. ೧೪೦೦ರಲ್ಲಿ ಈ ನಗರದ ನಿರ್ಮಾಣ ಕಾರ್ಯ ಪ್ರಾರಂಭವಾಗಿ ಫಿರೋಜನ ಜೀವಿತಾವಧಿಯಲ್ಲಿ ಪೂರ್ಣಗೊಂಡಿತು ಈ ನೂತನ ನಗರದ ನಿರ್ಮಾಣದ ಹಿಂದಿನ ಉದ್ದೇಶ ನಮಗೆ ಸ್ಪಷ್ಟವಾಗಿ ಕಂಡುಬರುವುದಿಲ್ಲ; ಆದರೆ ಇತಿಹಾಸಕಾರರ ಪ್ರಕಾರ ಫಿರೋಜ ಷಾಹಾ ತನ್ನ ರಾಜಧಾನಿ




ಗುಲ್ಬರ್ಗಾವನ್ನು ಭೀಮಾ ನದಿಯ ದಂಡೆಯ ಮೇಲಿರುವ ಈ ನೂತನ ನಗರಕ್ಕೆ ಸ್ಥಳಾಂತರಿಸುವ ಉದ್ದೇಶ ಹೊಂದಿದ್ದನೆಂದು ತಿಳಿದುಬರುತ್ತದೆ. ಇನ್ನೂ ಕೆಲವು ಆಧಾರಗಳಿಂದ ಫಿರೋಜ ಷಾಹನು ತನ್ನ ಬಿಡುವಿನ ವೇಳೆಯಲ್ಲಿ ವಿಶ್ರಾಂತಿ ಪಡೆಯಲು ಈ ನಗರವನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಅಕ್ಬರನು ನಿರ್ಮಿಸಿದ ಫತೇಪುರ ಶಿಕ್ರಿಯಂತೆ ಫಿರೋಜ ಷಾಹನ ಕಾಲದ ಫಿರೋಜಾಬಾದ ಈ ನಗರವು ಒಂದು ಎಂದು ಅಭಿಪ್ರಾಯ ಪಡಬಹುದು (Michell & Eaton 1992).

ಭೀಮಾ ನದಿಯ ಎಡದಂಡೆಯ ಮೇಲೆರುವ ಈ ನಗರವು ಬುರುಜುಗಳಿಂದ ಕೂಡಿ ಭದ್ರವಾದ ಕೋಟೆಗೋಡೆಯಿಂದ ಕೂಡಿದೆ. ಇದು ಬಾಗಶಃ ಚೌಕಾಕಾರದಲ್ಲಿದೆ. ನಗರ ಹಾಗೂ ಅರಮನೆ ಆವರಣ ಎಂದು ಎರಡು ಪ್ರಮುಖ ಭಾಗಗಳನ್ನಾಗಿ ಇಲ್ಲಿ ನೋಡಬಹುದು.

**ಅರಮನೆ ಆವರಣ** : ಸುಲ್ತಾನರಿಗೆ ಹಾಗೂ ಉನ್ನತ ಅಧಿಕಾರಿಗಳಿಗೆ ಭದ್ರ ರಕ್ಷಣೆ ಒದಗಿಸಲು ಅರಮನೆಯ ಆವರಣ ವನ್ನು ನಗರದಿಂದ ಬೇರ್ಪಡಿಸಲಾಗಿವೆ. ಇದು ನಗರದ ಪಶ್ಚಿಮಕ್ಕೆ ನದಿಯ ದಂಡೆಗುಂಟ ನಿರ್ಮಿಸಲಾಗಿದೆ. ಈ ಅರಮನೆ ಆವರಣ ಆಯಾತಾರದಲ್ಲಿದೆ. ಇದರ ಸುತ್ತಲು ಎತ್ತರದ ಗೋಡೆಯನ್ನು ನಿರ್ಮಿಸಲಾಗಿದೆ.

ಆವರಣವನ್ನು ಪ್ರವೇಶಿಸಲು ಇದರ ಪೂರ್ವಕ್ಕೆ ಮಹಾದ್ವಾರ ವನ್ನು ನಿರ್ಮಿಸಲಾಗಿವೆ. ಈ ದ್ವಾರದ ಮೇಲೆ ಬಹಮುನಿ ರಾಜ್ಯದ ಲಾಂಛನವಾದ ಹುಲಿ ಹಾಗೂ. ಉದಯಿಸುತ್ತಿರುವ ಸೂರ್ಯನ ಶಿಲ್ಪವನ್ನು ಗಾರೆಯಲ್ಲಿ ಮಾಡಲಾಗಿದೆ. ಅರಮನೆಯ ಆವರಣದಲ್ಲಿ ಬಹಳಷ್ಟು ಕಟ್ಟಡಗಳು ನಾಶವಾಗಿದ್ದು ಅವುಗಳನ್ನು ಮೂಲ ರೂಪದಲ್ಲಿ ಗುರುತಿಸುವದು ಕಷ್ಟಸಾಧ್ಯ ಕಾರ್ಯ. ಬಹು ಅಂತಸ್ತಿನ ಕಟ್ಟಡಗಲಾಗಿದ್ದು ಇವುಗಳು ಅರಮನೆಗಳೆಂದು ಗುರುತಿಸಬಹುದು. ಸುಲ್ತಾನರು ಬಳಸುತ್ತಿದ್ದ ಸ್ನಾನದ ಗೃಹಗಳು (ಟರ್ಕಿಸ್ ಬಾಥ) ಇಲ್ಲಿ ಕಂಡು ಬರುತ್ತವೆ. ಇವುಗಳಲ್ಲದೆ. ಕುದುರೆಗಳ ಲಾಯ ಇತ್ಯಾದಿ ಕಟ್ಟಡಗಳು ಇಲ್ಲಿ ಕಂಡುಬರುತ್ತವೆ.

*ನಗರ* : ಫಿರೋಜಾಬಾದ ನಗರವು ವಿಶಾಲವಾಗಿದ್ದು ಇದಕ್ಕೆ ಸುತ್ತಲು ಕೋಟೆ ಗೋಡೆ ಇರುವದು ಕೋಟೆಯಲ್ಲಿ ಬುರುಜುಗಳನ್ನು ಗೋಡೆಯೊಂದಿಗೆ ಕಟ್ಟಲಾಗಿವೆ. ನಗರಕ್ಕೆ ಪ್ರವೇಶಿಸಲು ನಾಲ್ಕು ದಿಕ್ಕುಗಳಲ್ಲಿ ಹೆಬ್ಬಾಗಿಲುಗಳನ್ನು ಮಾಡ ಲಾಗಿದೆ. ಈ ದ್ವಾರಗಳಿಗೆ ವೈರಿಗಳು ನೇರವಾಗಿ ಪ್ರವೇಶವಿದ್ದಂತೆ ದ್ವಾರದ ಮುಂದೆ 'L' ಆಕಾರದಲ್ಲಿ ಗೋಡೆಯನ್ನು ನಿರ್ಮಿಸಲಾಗಿದೆ



ಫಿರೋಜಾಬಾದ್ ಅರಮನೆ ಅವಶೇಷ

ಫಿರೋಜಾ ಶಹನ ನಂತರ ಬಹಳ ಕಾಲ ಈ ನಗರವು ರಾಜ್ಯದ ಪ್ರಮುಖ ನಗರವಾಗಿ ಮುಂದುವರೆಯದಿದ್ದರಿಂದ ಈ ನಗರದಲ್ಲಿ ಹೆಚ್ಚಿನ ಸಂಖ್ಯೆಯ ವಸತಿಗೃಹಗಳು, ಸಾರ್ವಜನಿಕ ಕಟ್ಟಡಗಳು ಕಂಡುಬರುವುದಿಲ್ಲ. ನಗರದಲ್ಲಿ ಕಂಡುಬರುವ ಪ್ರಮುಖ ಕಟ್ಟಡ ಗಳೆಂದರೆ, ಸಭಾಂಗಣ, ಜಮ್ಮಾ ಮಸೀದಿ, ಸ್ನಾನಗೃಹ, ಭಾವಿಗಳು, ಇತ್ಯಾದಿ

ನಗರದ ಮದ್ಯದಲ್ಲಿ ಎರಡು ಅತಸ್ತಿನ ಕಟ್ಟಡವಿದ್ದು ಇದರ ಮುಂಭಾಗದಲ್ಲಿ ವಿಶಾಲವಾದ ಅಂಗಳವಿರುವದು. ಈ ಎರಡು ಅಂತಸ್ತಿನ ಕಟ್ಟಡ ಎತ್ತರದ ಕಮಾನಿನಿಂದ ಕೂಡಿದ್ದು. ಇದರ ಛಾವಣೆ ನಾಶವಾಗಿದೆ, ನಗರದ ಮಧ್ಯದಲ್ಲಿದ್ದು, ಮುಂಭಾಗದಲ್ಲಿ ಅಂಗಳದಿಂದ ಕೂಡಿದರಿಂದ ಈ ಕಟ್ಟಡ ಒಂದು ಸಭಾಂಗಣ ವಾಗಿರಬಹುದು. ಈ ಕಟ್ಟಡದ ಪಶ್ಚಿಮಕ್ಕೆ ಜಮ್ಮಾ ಮಸೀದಿ ಇದ್ದು ಇದು ಸುಲ್ತಾನರಿಗೂ ಹಾಗೂ ನಗರ ನಿವಾಸಿಗರಿಗೂ ಮಾಡಲಾದ ಮಸೀದಿಯಾಗಿದೆ. ಇಲ್ಲಿ ಪ್ರಾರ್ಥನೆ ಮುಗಿಸಿ ನಗರ ನಿವಾಸಿಗಳನ್ನು ಸಂದರ್ಶಿಸಲು ಸುಲ್ತಾನರು ಈ ಸಭಾಂಗಣದಲ್ಲಿ ನೆರೆಯುತ್ತಿದ್ದರೆಂಬುದು ನಮ್ಮ ಅಭಿಪ್ರಾಯ.

ಶುಕ್ರವಾರದ ಸಾಮೂಹಿಕ ಪ್ರಾರ್ಥನೆಗಾಗಿ ಮಾಡಲಾದ ಜಮ್ಮಾ ಮಸೀದಿಯು ಅರಮನೆಯ ಪೂರ್ವದ ಹೊರಗೋಡೆಗೆ ಹೊಂದಿಕೊಂಡು ಕಟ್ಟಲಾಗಿದೆ. ಇದರ ಪ್ರಾರ್ಥನ ಆವರಣ ಸಂಪೂರ್ಣವಾಗಿ ನಾಶವಾಗಿದ್ದು ಇದರ ಅಂಗಳದ ಗೋಡೆಗಳು, ಹಾಗೂ ದ್ವಾರ ಇನ್ನೂ ಸುಸ್ಥಿತಿಯಲ್ಲಿವೆ ಈ ಮಸೀದಿಯ ಮುಖ್ಯ ದ್ವಾರವು ಪೂರ್ವದಲ್ಲಿದ್ದು ಇದರ ಮೇಲ್ಭಾಗದಲ್ಲಿ ಗುಮ್ಮಟ ಇರುವದು. ಗುಮ್ಮಟದಿಂದ ಇರುವ ದ್ವಾರ ಗುಲ್ಬರ್ಗಾದ ಶಹಾಬಜಾರ ಮಸೀದಿಯಲ್ಲಿಯೂ ನಾವು ಕಾಣಬಹುದು. ಮಸೀದಿಯ ಪ್ರಾರ್ಥನಾ ಆವರಣ ಕಮಾನುಗಳಿಂದ ಕೂಡಿದ್ದು ಈಗ ನಾಶವಾಗಿದೆ. ಅರಮನೆಯ ಗೋಡೆಗೆ ಹೊಂದಿಕೊಂಡು ಕಟ್ಟಲಾದ ಈ ಮಸೀದಿಯು ಸುಲ್ತಾನರು ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸುವದಕ್ಕೆ ಅನುಕೂಲ ಮಾಡಲು ಮಸೀದಿಯ ಹಿಂಭಾಗದ ಗೋಡೆಯ ಪ್ರಾರ್ಥನಾಗೂಡಿನ (Mihrab) ಪಕ್ಕದಲ್ಲಿ ಒಂದು ಚಿಕ್ಕ ದ್ವಾರವನ್ನು ಮಾಡಲಾಗಿದೆ. ಇದೆ ವ್ಯವಸ್ಥೆಯನ್ನು ಗುಲ್ಬರ್ಗಾದ ಶಹಾಬಜಾರ ಮಸೀದಿಯಲ್ಲಿ ನಾವು ಗಮನಿಸ ಬಹುದು.

ಪಶ್ಚಿಮದ್ವಾರದ ಹೊರಭಾಗದಲ್ಲಿ ಗುಲ್ಬರ್ಗಾ ಕೋಟೆ ಯಲ್ಲಿರುವಂತೆಯೇ ರಸ್ತೆಯ ಇಕ್ಕಡೆಗಳಲ್ಲಿ ಚೌಕಾಕಾರದ ಕೋಣೆಗಳಿಂದ ಕೂಡಿದ ಬಜಾರ ಇರುವುದು. ಇದು ನಾಗರಿಕರಿಗೂ ಹಾಗೂ ಅರಮನೆಯ ಅಧಿಕಾರಿಗಳಿಗೂ ಅನುಕೂಲವಾಗುವಂತೆ ಮಾಡಲಾದ ಬಜಾರ ಎಂದು ತಿಳಿದುಬರುತ್ತದೆ. ಬಜಾರದ ಕೋಣೆಗಳು ಚೌಕಾಕಾರದಲ್ಲಿದ್ದು ಇವುಗಳ ಹೊರ ಹಾಗೂ ಒಳಗೋಡೆಗಳ ಮೇಲೆ ಗಾರೆಯಲ್ಲಿ ಮಾಡಲಾದ ವಿನ್ಯಾಸಗಳು ಕಂಡುಬರುತ್ತವೆ. ಪ್ರತಿ ಕೋಣೆಗಳ ಮೇಲೆ ಪಿರಾಮಿಡಾಕಾರದ ಛಾವಣಿಗಳಿವೆ.

ಈ ಫಿರೋಜಾಬಾದ ನಗರದಿಂದ ಉತ್ತರಕ್ಕೆ ಸುಮಾರು ಎರಡು ಕಿ.ಮೀ. ದೂರದಲ್ಲಿ ಖಲಿಫತ್ ಅಲ್-ರಹಮನ್ ಎಂಬ ಸೂಫಿ ಸಂತನ ದರ್ಗಾ ಇರುವದು. ಈ ಸಂತನು ಬಹಮನಿ

ಸುಲ್ತಾನರ ಕಾಲದಲ್ಲಿ ಇಲ್ಲಿ ನೆಲೆಸಿದ್ದನು. ಈ ದರ್ಗಾವು ಫಿರೋಜ ಶಹಾನ ಕಾಲದಲ್ಲಿ ನಿರ್ಮಿತವಾಗಿವೆ ಎಂಬ ಅಂಶ ಶಾಸನಗಳ ಆಧಾರದಿಂದ ತಿಳಿದುಬರುತ್ತಿದೆ. ಸೂಫಿಸಂತರ ದರ್ಗಾದ ಸಮೀಪದಲ್ಲಿಯೇ ಈ ನಗರ ನಿರ್ಮಾಣ ಮಾಡಿರುವದು ಒಂದು ಗಮನಿಸಬೇಕಾದ ಅಂಶ.

*ಸಗರ*

ಗುಲ್ಬರ್ಗಾ ಜಿಲ್ಲೆಯ ಶಹಪೂರ ತಾಲೂಕಿನ ಒಂದು ಗ್ರಾಮವಿದು. ಇದು ಪ್ರಾಚೀನ ಸಗರನಾಡು ಎಂಬ ಆಡಳಿತ ವಿಭಾಗದ ಕೇಂದ್ರಸ್ಥಾನವಾಗಿತ್ತು. ಇಲ್ಲಿಯೂ ಬಹಮನಿ ಕಾಲದ ಹಳೆಯ ನಗರವನ್ನು ಇತ್ತೀಚಿಗೆ ಶೋಧಿಸಲಾಗಿದೆ (Aruni 1996-97). ಸಗರದಲ್ಲಿ ೧೩ನೆಯ ಶತಮಾನದ ಸೂಫಿ ಸಂತ ಸರಮಸ್ತನ ದರ್ಗಾ ಇರುವದು. ದಖ್ಖನ್‌ದಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ದಾಳಿಗಳು ಪ್ರಾರಂಭಕ್ಕಿಂತಲೂ ಮುಂಚೆಯೇ ಈ ಸೂಫಿ ಸಂತನು ಸಗರಕ್ಕೆ ಆಗಮಿಸಿದ್ದನು. ಈ ಸಗರವು ದೆಹಲಿ ಸುಲ್ತಾನ ಮಹ್ಮದ-ಬಿನ್-ತಘಲಕ್‌ನ ಕಾಲದಲ್ಲಿ ಒಂದು ಪ್ರಾಂತ್ಯದ ಕೇಂದ್ರವಾಗಿತ್ತು. ತಘಲಕ್ ಸಾಮ್ರಾಜ್ಯದ ವಿರುದ್ಧ ದಂಗೆಯೆದ್ದು ಸ್ವತಂತ್ರ ರಾಜ್ಯ ಸ್ಥಾಪನೆ ಮಾಡಿದ ಬಹಮನಿ ಸುಲ್ತಾನರು ಈ ಕೇಂದ್ರವನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ಬಹಮನಿ ರಾಜ್ಯದ ದಕ್ಷಿಣಕ್ಕೆ ಇರುವ ಈ ಆಯಕಟ್ಟಿನ ಸಗರ ಗ್ರಾಮವು. ಆಯಾಕಟ್ಟಿನ ಸ್ಥಳವಾಗಿದ್ದರಿಂದ ಬಹಮನಿ ಸುಲ್ತಾನರು ತಮ್ಮ ರಾಜ್ಯದ ಒಂದು ಪ್ರಾಂತ್ಯದ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡಿದ್ದರು.




ಬಹಮನಿ ಸಗರ ನಗರ

ಬಹಮನಿ ಕಾಲದ ನಗರವು ಇಂದಿನ ಸಗರ ಗ್ರಾಮದಿಂದ ಪಶ್ಚಿಮಕ್ಕೆ ಇರುವದು. ಇದು ಚೌಕಾಕಾರದಲ್ಲಿದ್ದು ಇದರ ಸುತ್ತಲೂ ಕೋಟೆಯ ಗೋಡೆ ಇರುವದು. ನಗರದ ಕೋಟೆಯ ಗೋಡೆಯ ಮಣ್ಣಿನ ಗೋಡೆಯಾಗಿದ್ದು ಐದು ಮೀಟರ್ ದಪ್ಪ ಒಂಬತ್ತು ಮೀಟರ ಎತ್ತರವಾಗಿದೆ. ಈ ಗೋಡೆಯ ಮೇಲಿನ ಭಾಗ ನೈಸರ್ಗಿಕ ಕಾರಣಗಳಿಂದ ನಾಶವಾಗಿದೆ. ನಗರಕ್ಕೆ ನಾಲ್ಕು ದಿಕ್ಕುಗಳಲ್ಲಿ ದ್ವಾರಗಳಿವೆ. ಇವುಗಳಲ್ಲಿ ಪೂರ್ವದ ದ್ವಾರ ಇನ್ನೂ ಸುಸ್ಥಿತಿಯಲ್ಲಿದೆ. ಪೂರ್ವದ ದ್ವಾರವು ಎರಡು ಅಂತಸ್ತುಗಳಿಂದ ಕೂಡಿದ್ದು ಇದನ್ನು ಬಹಮನಿ ಸುಲ್ತಾನ ಫಿರೋಜ ಶಹಾ ಕ್ರಿ.ಶ. ೧೪೦೭ರಲ್ಲಿ ನಿರ್ಮಿಸಿದೆನೆಂದು ಈ ದ್ವಾರದ ಮೇಲಿನ ಶಾಸನಗಳಿಂದ ತಿಳಿದುಬರುತ್ತದೆ. (Yazdani 1935). ಈ ದ್ವಾರದ ಒಳ ಹಾಗೂ ಹೊರ ಗೋಡೆಗಳ ಮೇಲೆ ಗಾರೆಯಲ್ಲಿ ಜ್ಯಾಮಿತಿ ಆಕಾರದ ವಿನ್ಯಾಸಗಳನ್ನು ಮಾಡಲಾಗಿದೆ.

ಬಹಮನಿ ಕಾಲದ ನಗರದ ಮಧ್ಯದಲ್ಲಿ ಜಮ್ಮಾ ಮಸೀದಿ ಇರುವದು. ಇದು ಅತ್ಯಂತ ವಿಶಾಲವಾದ ಮಸೀದಿಯಾಗಿದ್ದು ಇನ್ನೂ ಸುಸ್ಥಿತಿಯಲ್ಲಿದೆ. ಮಸೀದಿಯನ್ನು ಪ್ರವೇಶಿಸಲು ಮೂರು ದಿಕ್ಕುಗಳಲ್ಲಿ ದ್ವಾರಗಳಿವೆ. ಮಸೀದಿಯ ಪ್ರಾರ್ಥನಾ ಆವರಣವು ಕಮಾನುಗಳಿಂದ ಕೂಡಿದೆ.

ಮಸೀದಿಯ ಪಕ್ಕದಲ್ಲಿ ಹಾಗೂ ನಗರದ ಇತರ ಕಡೆ ಹಳೆಯ ಕಟ್ಟಡಗಳ ಅವಶೇಷಗಳು ಕಂಡುಬರುತ್ತದೆ. ಇವು ಅಂದಿನ ಅರಮನೆ ಹಾಗೂ ಇತರ ಕಟ್ಟಡಗಳ ಅವಶೇಷಗಳಾಗಿವೆ. ಈ ನಗರದಿಂದ ಉತ್ತರಕ್ಕೆ ಸುಮಾರು ಎರಡು ಕಿ.ಮೀ. ದೂರದಲ್ಲಿ ಸೂಫಿ ಸಂತ ಸರಮಸ್ತನ ದರ್ಗಾ ಇರುವುದು. ಇಲ್ಲಿ ಬಹಮನಿ ಹಾಗೂ ಆದೀಲ ಶಾಹಿ ಸುಲ್ತಾನರ ಶಾಸನಗಳು ಇವೆ. ಈ ದರ್ಗಾದ ಹತ್ತಿರ ಬಹಮನಿ ಕಾಲದ ಒಂದು ಬಾವಿಯೂ ಇದೆ.



ಸಗರ ಕೋಟೆಯ ಪೂರ್ವದ ದ್ವಾರ

***ವಿಶ್ಲೇಷಣೆ*** : ಈ ಮೇಲೆ ವಿವರಿಸಿದ ನಾಲ್ಕು ನಗರಗಳು ಬಹಮನಿ ಸುಲ್ತಾನರ ಪ್ರಾರಂಭಿಕ ನಗರಗಳಾಗಿದ್ದು ಇವುಗಳಲ್ಲಿ ಅನೇಕ ಸಾಮ್ಯತೆಗಳನ್ನು ನಾವು ಗಮನಿಸಿಬಹುದು. ಈ ನಗರ ವಿನ್ಯಾಸಗಳಲ್ಲಿ ನಾವು ಪರ್ಷಿಯಾ ದೇಶದ ನಗರ ರಚನೆಯ ಅನುಕರಣೆಯನ್ನು ನಾವು ಇಲ್ಲಿ ಗಮನಿಸಬಹುದಾಗಿದೆ. ನಗರಗಳು ಸಾಮಾನ್ಯವಾಗಿ ಆಯಾತಾಕಾರ ಇಲ್ಲವೆ ಚೌಕಾಕಾರದಲ್ಲಿ ಕಂಡುಬರುತ್ತವೆ, ಇವುಗಳನ್ನು ವೈರಿಗಳಿಂದ ರಕ್ಷಿಸಲು ಭದ್ರವಾದ ಕೋಟೆಗಳಿಂದ ನಿರ್ಮಿಸಲಾಗಿವೆ. ಕೋಟೆಗಳು ಬರುಜು, ಬತೇರಿ ಕಂದಕಗಳಿಂದ ಕೂಡಿದ್ದು, ನಗರಗಳನ್ನು ಪ್ರವೇಶಿಸಲು ವಿಶೇಷ ಭದ್ರತೆಗಳಿಂದ ಕೂಡಿದ ದ್ವಾರಗಳನ್ನು ನಿರ್ಮಿಸಲಾಗಿವೆ. ಸುಲ್ತಾನರು ಹಾಗೂ ಉನ್ನತ ಅಧಿಕಾರಗಳಿಗೆ ವಿಶೇಷ ರಕ್ಷಣೆಗಾಗಿ ಅವರು ವಾಸಿಸುವ ಆವರಣಗಳನ್ನು ನಗರಗಳಿಂದ ಪ್ರತ್ಯೇಕಿಸಿರುವದು ಈ ನಗರಗಳಲ್ಲಿ ಕಂಡುಬರುತ್ತವೆ. ಅರಮನೆ ಆವರಣಗಳು ಅರಮನೆ, ಸ್ನಾನಗೃಹ, ಕಛೇರಿ, ಉಧ್ಯಾನ ಹಾಗೂ ಮಸೀದಿಗಳಿಂದ ಕೂಡಿವೆ. ಆದರೆ ಫಿರೋಜಾಬಾದ ನಗರದಲ್ಲಿ ಜಮ್ಮಾ ಮಸೀದಿಯನ್ನು ಅರಮನೆ ಆವರಣದ ಹೊರ ಗೋಡೆಗೆ ಹೊಂದಿಕೊಂಡು ನಿರ್ಮಿಸಲಾಗಿದ್ದು ಇದು ನಗರ ನಿವಾಸಿಗಳಿಗೂ ಹಾಗೂ ಸುಲ್ತಾನರಿಗೂ ಪ್ರಾರ್ಥನೆ ಗಾಗಿ ಮಾಡಲಾಗಿದೆ. ಈ ಮಸೀದಿಗೆ ಸುಲ್ತಾನರು ನೇರವಾಗಿ ಪ್ರಾರ್ಥನೆಗೆ ಬರುವದಕ್ಕೆ ಮಸೀದಿಯ ಹಿಂಭಾಗದ ಗೋಡೆಯಲ್ಲಿ ಒಂದು ಚಿಕ್ಕ ದ್ವಾರವನ್ನು ಸುಲ್ತಾನರು ನೇರವಾಗಿ ಪ್ರವೇಶಿಸಲು ಅನುಕೂಲತೆಯನ್ನು ಒದಗಿಸ ಲಾಗಿದೆ ಅರಮನೆ ಅವರಣದಲ್ಲಿ ಚಿಕ್ಕ ಕೆರೆ ಅಥವಾ ಕೆಲವು ಬಾವಿಗಳನ್ನು ನಿರ್ಮಿಸಿ ನೀರಿನ ವ್ಯವಸ್ಥೆಯನ್ನು ಮಾಡಲಾಗಿದೆ. ಈ ಆವರಣಗಳ ಮುಖ್ಯ ದ್ವಾರಗಳು ನಗರದಿಂದ ಇದ್ದು ಇವುಗಳ ಮೇಲೆ ರಾಜ್ಯದ ಲಾಂಛನವಾದ ಹುಲಿ ಹಾಗೂ ಉದಯಿಸುತ್ತಿರುವ ಸೂರ್ಯನ ಚಿತ್ರ ಕಂಡುಬರುತ್ತವೆ. ಬೀದರ ಹಾಗೂ ಫಿರೋಜಾ ಬಾದಗಳಲ್ಲಿ ಈ ಲಾಂಛನಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಈ ಕಾಲದ ನಗರವನ್ನು ಸಹ ವೈರಿಗಳಿಂದ ರಕ್ಷಿಸಲು ಭದ್ರವಾದ ಕೋಟೆ ಗೋಡೆಗಳನ್ನು ನಿರ್ಮಿಸಲಾಗಿವೆ. ನಗರಗಳನ್ನು ವಾರ್ಡ್‌ಗಳಂತೆ ರಸ್ತೆಗಳಿಂದ ವಿಂಗಡಿಸಲಾಗಿದೆ. ನಗರದ ಮುಖ್ಯ ವರ್ತುಲಗಳಲ್ಲಿ ಅಷ್ಟಕೋನಾಕಾರದ ಅಥವಾ ವರ್ತುಲಾಕಾರದ ಮಂಟಪಗಳು ಕಂಡುಬರುತ್ತವೆ. ಬೀದರನಲ್ಲಿ ಕಾಣುವ ಚೌಬಾರಾ ಚೌಕ್ ಇದಕ್ಕೆ ಉದಾಹರಣೆ. ಗುಲ್ಬರ್ಗಾದ ಕೋಟೆಯ ಪೂರ್ವಕ್ಕೆ ಇರುವ ಮಾರ್ಕೆಟ್‌ಚೌಕ್‌ದಲ್ಲಿಯೂ ಕಮಾನುಗಳಿಂದ ಕೂಡಿದ ವರ್ತುಲಾಕಾರದ ಕಟ್ಟಡವನ್ನು ನಾವು ಗಮನಿಸಬಹುದು. ನಗರಗಳ ಮುಖ್ಯ ಬೀದಿಗಳ ಇಕ್ಕಡೆಗಳಲ್ಲಿ ಕಮಾನಿಕಾರದ ಕೋಣೆಗಳಿಂದ ಕೂಡಿದ ಬಜಾರಗಳು ನಗರಗಳಲ್ಲಿ ಕಂಡುಬರುತ್ತವೆ. ಗುಲ್ಬರ್ಗಾ ಮತ್ತು ಬೀದರ ನಗರಗಳ ಮುಖ್ಯ ಬೀದಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಹಳೆಯ ಬಜಾರದ ಅಂಗಡಿಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಫಿರೋಜಾಬಾದದಲ್ಲಿ ಕೋಟೆಯ ಪಶ್ಚಿಮ ದ್ವಾರದ ಹೊರಗಡೆ ರಸ್ತೆಯ ಬದಿಯಲ್ಲಿ ಬಜಾರ ಇರುವದು ಇಲ್ಲಿ ಸ್ಮರಿಸಬಹುದು.

ಬಹಮನಿ ನಗರಗಳು ಸೂಫಿ ಸಂತರ ದರ್ಗಾಗಳ ಹತ್ತಿರ ರಚಿಸಿರುವದು ಗಮನಾರ್ಹ ಅಂಶ. ಬಹಮನಿ ಸುಲ್ತಾನರು ಸೂಫಿ ಸಂತರ ಪ್ರಭಾವಕ್ಕೆ ಒಳಗಾಗಿದ್ದರೆಂದು ಇವರ ಇತಿಹಾಸದಿಂದ ತಿಳಿದುಬರುತ್ತದೆ. ಆ ಕಾರಣಕ್ಕಾಗಿ ಈ ಕಾಲದ ನಗರ ರಚನೆಯಲ್ಲಿ ಸೂಫಿ ಸಂತರ ಪ್ರಭಾವ ಎದ್ದು ಕಾಣುತ್ತದೆ (Michell & Eaton 1992). ದರ್ಗಾಗಳ ದಕ್ಷಿಣಕ್ಕೆ ಅಥವಾ ಅವುಗಳ ಪಶ್ಚಿಮಕ್ಕೆ ನಗರಗಳನ್ನು ನಿರ್ಮಿಸಿರುವದು ನಮಗೆ ಸ್ಪಷ್ಟವಾಗಿ ಕಂಡು ಬರುತ್ತದೆ. ಗುಲ್ಬರ್ಗಾ ನಗರ ಹಾಗೂ ಕೋಟೆಗಳೂ ನಗರದ ಪ್ರಮುಖ ಸೂಫಿ ಸಂತ ಬಂದೆ ನವಾಜ ಅಥವಾ ಖ್ವಾಜಾ ಫೇಜುದರಾಜ ಅವರ ದರ್ಗಾಕ್ಕೆ ಪಶ್ಚಿಮಕ್ಕೆ ಹಾಗೂ ಷೇಖ್ ರೌಜಾ ದರ್ಗಾದ ದಕ್ಷಿಣಕ್ಕೆ ಇರುವದು. ಅದರಂತೆ ಫಿರೋಜಾಬಾದ ಮತ್ತು ಸಗರ ನಗರಗಳು ಸೂಫಿ ಸಂತರ ದರ್ಗಾದ ದಕ್ಷಿಣ ದಿಕ್ಕಿಗೆ ಇರುವದು. ಒಟ್ಟಿನಲ್ಲಿ ಬಹಮನಿ ನಗರಗಳ ರಚನೆಯನ್ನು ಗಮನಿಸಿದರೆ, ಮಧ್ಯಕಾಲದಲ್ಲಿ ಮಧ್ಯ ಏಶಿಯಾ ಅಥವಾ ದೆಹಲಿ ಸುಲ್ತಾನರ ಕಾಲದಲ್ಲಿ ರಚನೆಯಾದ ನಗರಗಳ ರಚನೆಯ ಅನುಕರಣೆಯನ್ನು ನಾವು ನೋಡಬಹುದು. ಮಧ್ಯ ಏಶಿಯಾದ ಹೆರಾಟ್ ಅಥವಾ ತಘಲಕ್ ಸುಲ್ತಾನ ರಾಜ್ಯದ ತಘಲಕಾಬಾದ, ಗುಜರಾತ ಸುಲ್ತಾನರ ಅಹ್ಮದಾಬಾದ, ಇತ್ಯಾದಿ ನಗರಗಳ ಮಾದರಿಯಲ್ಲಿ ಬಹಮನಿ ನಗರಗಳು ರಚನೆಯಾಗಿವೆ ಎಂಬ ಅಂಶ ಕಂಡುಬರುತ್ತದೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


Aruni, S.K., 1996-97, "Sagar : Provincial Headquarters of the Islamic Deccan" in *Bulletin of the Deccan College, PG&RI*, Vol. 56-57, pp. 219-29.

Aruni, S.K., 1998, *History and Culture of Surapura Samsthana, North Karnataka, A.D. 1650-1858,* [Ph.D. Thesis], Pune University, Pune.

Desai, Z.A., 1974, "Architecture of the Bahamanis" *in History of Medieval Deccan,* (eds. H. K. Sherwani, and P. M. Joshi), Vol. 2, Hyderabad. pp. 213-304.

Eaton, R. M., 1978, *Sufis of Bijapur 1300-1700,* Princeton University Press, Jersy.

Fischer, K., 1995, "Firozabad on the Bhima and its Environs" in *Islamic Culture,* Vol. 29 (4), pp. 246-55.

Mate, M. S., 1962, "Islamic Architecutre of the Deccan" *in Bulletin of the Deccan College, PG&RI,* Vol. 22., pp. 1-91.

Michell, George., 1992, *The Vijayanagara Courtly Style,* Manohar, New Delhi.

Michell, George., 1994, "Firuzabad-Revisited" *in Eastern Approaches : Essays on Asian and Archeology* (ed.- T. S. Maxwell) OUP, New Delhi. pp.

Michell, George, and R. Eaton., 1992, *Firuzabad : Palace City of the Deccan,* [Oxford Studies in Islamic Art-8], OUP, Oxford.

Michell, George & Mark Zebrowski., 1999; *Architecture and Art of the Deccan Sultanates* [The New Cambridge History of India I : 7], Cambridge University Press.

Paddaya, K., 1990, "Towards Medieval Archeology of Shorapur Doab, Deccan" in *Islamic Culture,* Vol. 44(203), pp. 75-112.

Yazdani, G., 1935, "Inscriptions of Shahapur, Gogi, and Sagar, Gulbarga District" *Epigraphia Indo-Moslemica* (1931-32), pp. 1-24.

Yazdani, G., 1947, *Bidar : its History and Monuments,* OUP, Oxford.

ಅರುಣಿ, ಎಸ್. ಕೆ., (೨೦೦೦), "ಬಹಮನಿ ವಾಸ್ತುಶಿಲ್ಪ - ಇತ್ತೀಚಿನ ಹೊಸ ಶೋಧನೆಗಳು" **ಸೂರ್ಯಕೀರ್ತಿ - ಡಾ|| ಸೂರ್ಯನಾಥ ಕಾಮತ್ ಅಭಿನಂದನ ಸಂಪುಟ** - ಸಂ. ಪಿ. ವಿ. ಕೃಷ್ಣಮೂರ್ತಿ ಮತ್ತು ಡಾ|| ಕೆ. ವಸಂತಲಕ್ಷ್ಮಿ, ಡಾ|| *ಸೂರ್ಯನಾಥ ಕಾಮತ್ ಅಭಿನಂದನಾ ಸಮಿತಿ,* ಬೆಂಗಳೂರು.

ಅರುಣಿ, ಎಸ್. ಕೆ., (೨೦೦೧), **ದಖನಿ ಚಿತ್ರಕಲೆ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

**ಕರ್ನಾಟಕ ರಾಜ್ಯ ಗ್ಯಾಸೆಟಿಯರ್,** ಗುಲ್ಬರ್ಗಾ ಜಿಲ್ಲೆ (ಸಂ. ಎಂ. ಬಿ. ಪಾಟೀಲ) ಕರ್ನಾಟಕ ಸರಕಾರ, ೧೯೯೭.

ಷೇಕ್ ಅಲಿ, ಬಿ, (ಸಂ) ೧೯೯೭, **ಕರ್ನಾಟಕ ಚರಿತ್ರೆ** ಮಾಲೆ-೪, (ಕ್ರಿ.ಶ. ೧೩೪೭-೧೭೬೦), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ। ಎಂ. ವೈ. ಸಾವಂತ*

# ಮಧ್ಯಕಾಲೀನ ಕರ್ನಾಟಕದ ನಗರೀಕರಣದಲ್ಲಿ ಕೋಟೆ - ಮಠಗಳ ಪಾತ್ರ

ಮಧ್ಯಕಾಲೀನ ಕರ್ನಾಟಕದ ವ್ಯವಸ್ಥೆಗಳಲ್ಲಿ ನಗರೀಕರಣ ಒಂದು ಇತಿಹಾಸದ ಮಹತ್ವದ ಘಟನೆ. ಅದರ ಮೂಲಭೂತ ಸಂಶೋಧನೆಯು ಈಗಿನ ಅವಶ್ಯಕತೆಗಳಲ್ಲಿ ಒಂದಾಗಿದೆ. ಭಾರತಕ್ಕೆ ಯುರೋಪಿಯನ್‌ರ ಆಗಮನದೊಂದಿಗೆ ನಮ್ಮ ದೇಶದಲ್ಲಿ ನಗರಗಳು ಹಿಂದಿನಿಂದ ಬೆಳೆದರೂ, ಅವುಗಳ ವಿಶೇಷಪ್ರಕ್ರಿಯೆ ಮಧ್ಯಕಾಲದಲ್ಲಿ ಪ್ರಾರಂಭವಾಯಿತೆಂದೇ ಹೇಳಬಹುದು. ನಗರ ಪ್ರದೇಶದ ಸಾಪೇಕ್ಷ ಬೆಳವಣಿಗೆಯ ಪ್ರಕ್ರಿಯೆಯೇ ನಗರೀಕರಣ. ಈ ಪ್ರಕ್ರಿಯೆಗೆ ಆರ್ಥಿಕ, ಸಾಮಾಜಿಕ, ಭೌಗೋಲಿಕ ಹಾಗೂ ರಾಜಕೀಯ ಅಂಶಗಳು ಮುಖ್ಯವಾಗಿರುತ್ತವೆ. ವ್ಹಿ. ಕೆ. ಠಾಕೂರ*[೧], ಆರ್. ಚಂಪಕಲಕ್ಷ್ಮಿ*[೨], ರಾಬರ್ಟ್ಸ್ ಮೆಕ್ ಎಡಾಮನ್*[೩], ಮೊದಲಾದ ವಿದ್ವಾಂಸರು ಈ ನಗರೀಕರಣಕ್ಕೆ ಅವಶ್ಯವಿರುವ ಅನೇಕ ಪೂರಕ ಅಂಶಗಳನ್ನು ವಿಶ್ಲೇಷಿಸಿದ್ದಾರೆ.

ಪ್ರಸ್ತುತ ಲೇಖನವು ನಗರೀಕರಣಕ್ಕೆ ಕೋಟೆಗಳ ಹಾಗೂ ಮಠಗಳ (ವೀರಶೈವ ಮಠಗಳ) ಕೊಡುಗೆಗಳಿಗೆ ಮಾತ್ರ ಪರಿಸೀಮಿತವಾಗಿದೆ. ಸರ್ವೇಸಾಮಾನ್ಯವಾಗಿ, ನಗರೀಕರಣದ ಪ್ರಕ್ರಿಯೆಗಳನ್ನು ಅಧ್ಯಯನ ಮಾಡುವಾಗ ಕೆಲವು ಪ್ರದೇಶಗಳಲ್ಲಿ ಔದ್ಯೋಗಿಕ ಹಾಗೂ ವಾಣಿಜ್ಯ ಚಟುವಟಿಕೆಗಳು ನಗರದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದುದು ಕಂಡುಬಂದಿದೆ. ಆದರೆ ಕೆಲವು ಪ್ರದೇಶಗಳಲ್ಲಿ ಕೋಟೆಗಳ ಹಾಗೂ ಮಠಗಳ ಅಸ್ತಿತ್ವವೂ ಕೂಡ ನಗರಗಳ ಬೆಳವಣಿಗೆಗೆ ಪೂರಕ ಅಂಶಗಳಾಗಿವೆ ಎಂಬುದೂ ಕೂಡ ಅಷ್ಟೇ ಸತ್ಯವಾದುದು.

**ಕೋಟೆಗಳು** : ವಿಜಯನಗರದ ಅರಸರು, ಬಹಮನಿ ಅರಸರು, ಮೊಘಲರು, ಹೈದರ ಆಲಿ ಮತ್ತು ಟಿಪ್ಪು ಸುಲ್ತಾನರು, ಮರಾಠರು ಮಧ್ಯಕಾಲೀನ ಕರ್ನಾಟಕವನ್ನು ಆಳಿದವರಲ್ಲಿ ಪ್ರಮುಖರು. ಅವರು ಹೋರಾಡಿ ಗಳಿಸಿದ ಸಂಸ್ಥಾನಗಳು ಇತಿಹಾಸದಲ್ಲಿ ಸೇರಿಹೋಗಿ ಇಂದು ಇಲ್ಲವಾದರೂ ಅವರು ತಮ್ಮ ಆಳ್ವಿಕೆಯಲ್ಲಿ ಕಟ್ಟಿಸಿದ ಭವ್ಯ ಕೋಟೆ-ಕೊತ್ತಲಗಳಿವೆ. ಕೆಲವು ನಶಿಸಿಹೋದರೂ ಅವು ಅಂದಿನ ಇತಿಹಾಸಕ್ಕೆ ಇಂದು ಮೂಕ ಸಾಕ್ಷಿಯಾಗಿ ನಿಂತಿವೆ.

ಮಧ್ಯಯುಗೀನ ಕರ್ನಾಟಕದ ನಗರೀಕರಣದಲ್ಲಿ ಕೋಟೆಗಳ ಪಾತ್ರ ಹಿರಿದಾದದ್ದು. ರಾಜಕೀಯ ಹಾಗೂ ಸೈನಿಕ ಕಾರ್ಯಗಳಿಗಿಂತ ಆರ್ಥಿಕ ಚಟುವಟಿಕೆಗಳನ್ನು ಗಮನಿಸಿದರೆ, ನಗರೀಕರಣದ ಪ್ರಕ್ರಿಯೆಯಲ್ಲಿ ಕೋಟೆಗಳ ಪಾತ್ರವನ್ನು ತಿಳಿದುಕೊಳ್ಳಬಹುದು. ಇದಕ್ಕೆ ಸಂಬಂಧಿಸಿದಂತೆ, ಎರಡು ಪ್ರಮುಖ ಅಂಶಗಳನ್ನು ಇಲ್ಲಿ ಗಮನಿಸಬಹುದಾಗಿವೆ.

೧. ಪಟ್ಟಣ ಪೇಟೆಗಳನ್ನು ಮತ್ತು ವ್ಯಾಪಾರಕೇಂದ್ರಗಳನ್ನು ರಕ್ಷಿಸುವುದು.
೨. ಮಾರುಕಟ್ಟೆಗಳಿಗೆ (ಸಂತೆ) ಕಾಳು-ಕಡ್ಡಿಗಳನ್ನು ವಿತರಣೆಗೆ ಸಾಗಿಸುವುದು.

ಹೀಗೆ ಕೋಟೆಗಳು ಪಟ್ಟಣಗಳನ್ನು ವ್ಯಾಪಾರಿಕ್ಷೇತ್ರಗಳ ಸಂಪತ್ತನ್ನು ರಕ್ಷಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದವು. ಕೋಟೆಗಳ ಒಳಗೆ ಅರಮನೆಗಳು, ಆಡಳಿತ ಕಚೇರಿಗಳು. ವಸತಿಗಳು ಇದ್ದರೆ, ಕೋಟೆಯ ಸುತ್ತ ಮುತ್ತ ಪೇಟೆಗಳು ಸ್ಥಾಪಿಸಲ್ಪಟ್ಟಿದ್ದರಿಂದ ಅಂಥಹ ಅನೇಕ ಪ್ರದೇಶಗಳು ಪಟ್ಟಣದ ಹಂತಕ್ಕೆ ತಲುಪಿದವು.

ಕೋಟೆಗಳ ನಗರ-ಲಕ್ಷಣಗಳನ್ನು (Urban features) ಅವುಗಳ ಸ್ಮಾರಕಗಳಿಂದ ಇಂದು ನಾವು ಗುರುತಿಸಬಹುದು. ಉದಾ: ಧಾರವಾಡದ ಕೋಟೆಯ ಒಳಗೆ ವಿವಿಧ ಕಟ್ಟಡ ಕಚೇರಿಗಳಿದ್ದವು. ಅವುಗಳೆಂದರೆ ತೋಫಖಾನಾ (ಶಸ್ತ್ರಾಗಾರ -Arsenal), ಸಿಲೆಖಾನಾ (ಶಸ್ತ್ರಶಾಲೆ-Armoury), ದಾರೂಖಾನಾ (ಮದ್ದಿನ ಮನೆ) ಜಾಮದರ ಖಾನಾ (ಸರಕಾರೀ ಖಜಾನೆ), ಜಕೀರಾ (ಭಂಡಾರ-Stores), ಕೋಠಿ (ಗುದಾಮು, ಉಗ್ರಾಣ - Godown) ಇತ್ಯಾದಿ. ಇದರ ಹೊರತಾಗಿ ದೇವಾಲಯಗಳು, ತೋಟಗಳು, ನೀರಿನ ಹೊಂಡಗಳು ಇದ್ದವು. ಅವುಗಳೆಲ್ಲ ಅಂದಿನ ನಗರ ಜೀವನದ ವಿಭಿನ್ನ ಅಂಗಗಳಾಗಿದ್ದವು.

ಕೋಟೆ ಹಾಗೂ ಮಾರುಕಟ್ಟೆಗಳ ನಡುವೆ ನೇರ ಸಂಪರ್ಕ ಏರ್ಪಡಿಸಲಾಗಿತ್ತು. ಕೋಟೆಗಳಲ್ಲಿ ದಾಸ್ತಾನು ಮಾಡಿದ ಕಾಳು - ಕಡ್ಡಿ, ದವಸ - ಧಾನ್ಯಗಳನ್ನು ಅವಶ್ಯಬಿದ್ದಾಗ ಪೇಟೆಗಳಿಗೆ ರವಾನಿಸಲಾಗುತ್ತಿತ್ತು. ಇದರಿಂದ ಅಭಾವ ಪರಿಸ್ಥಿಯಲ್ಲಿ ಬೆಲೆ ನಿಯಂತ್ರಣ ಸಾಧ್ಯವಾಗುತ್ತಿತ್ತು. ಮೇಲಾಗಿ ಧಾರವಾಡದಂತಹ ನಗರಗಳಲ್ಲಿ ಟಂಕಸಾಲೆ ಇದ್ದುದರಿಂದ ಅದರ ರಕ್ಷಣೆ ಕೂಡ ಆಗುತ್ತಿತ್ತು.

ವ್ಯಾಪಾರ ಹಾಗೂ ವಾಣಿಜ್ಯ ಕೇಂದ್ರಗಳನ್ನು ಪೇಟೆಗಳನ್ನು ರಕ್ಷಿಸುವಲ್ಲಿ, ಕೋಟೆಗಳು ಮಹತ್ವದ ಪಾತ್ರ ವಹಿಸಿವೆ. ಹೆದ್ದಾರಿಯ

*ಇತಿಹಾಸ ವಿಭಾಗ : ಕಟೆಲ್ ಆರ್ಟ್ಸ್ ಕಾಲೇಜು ಧಾರವಾಡ - ೫೮೦ ೦೦೧.

ಮೇಲೆ ಇರುವ ಕೋಟೆಗಳು ನಗರ ಮತ್ತು ಪೇಟೆಗಳಿಗೆ ಸಮೀಪ ಇದ್ದುದರಿಂದ ಅವುಗಳ ರಕ್ಷಣೆ ಸಾಧ್ಯವಾಯಿತು. ವೈರಿಗಳಿಂದ, ದರೋಡೆಖೋರರಿಂದ ರಕ್ಷಣೆ ಈ ಕೋಟೆಗಳಿಂದ ಸಾಧ್ಯವಾಯಿತು. ಉದಾ : ಬೆಳಗಾವಿ, ಕಿತ್ತೂರ ಧಾರವಾಡ ಕೋಟೆಗಳು. ದಂಗೆಯಂತಹ ಆಪತ್‌ಕಾಲೀನ ಸಮಯದಲ್ಲಿ ಕೋಟೆಯ ಸಿಬ್ಬಂದಿ ನಾಗರೀಕರ ರಕ್ಷಣೆ ಮಾಡುತ್ತಿತ್ತು. ಉದಾ : ಕ್ರಿ.ಶ. ೧೭೭೮ರಲ್ಲಿ ಧಾರವಾಡದಲ್ಲಿ ದಂಗೆ ಆದಾಗ ಕಿತ್ತೂರಿನ ಕೋಟೆಯ ಸಿಬ್ಬಂದಿಯನ್ನು ಕಳಿಸಲಾಗಿತ್ತು. ಹಾಗೆಯೇ ಹುಬ್ಬಳ್ಳಿಯಲ್ಲಿ ದಂಗೆ ನಡೆದಾಗ ಧಾರವಾಡ ಕೋಟೆಯ ಸಿಬ್ಬಂದಿಯನ್ನು ಕಳುಹಿಸಲಾಗಿತ್ತು.

ಇದೇ ರೀತಿ ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಇದ್ದ ಕೋಟೆಗಳು ಆ ಭಾಗವನ್ನು ರಕ್ಷಿಸುವುದರೊಂದಿಗೆ ಸಮುದ್ರ ಮಾರ್ಗದಿಂದ ನಡೆಯುವ ವ್ಯಾಪರಕ್ಕೆ ರಕ್ಷಣೆಯನ್ನು ಒದಗಿಸಿದವು. ಸದಾಶಿವಗಡ, ಅಂಕೋಲಾ, ಭಟ್ಕಳ ಇವೆಲ್ಲ ಉದಾಹರಣೆ ಗಳಂತಿವೆ.

ಕರ್ನಾಟಕದ ಮಧ್ಯಯುಗೀನ ಐತಿಹಾಸಿಕ ಬದಲಾವಣೆ ಗಳಲ್ಲಿ ಮಧ್ಯಪೂರ್ವದ ಅರಬ್ ವ್ಯಾಪಾರಸ್ಥರ ಅನುಕೂಲಕ್ಕಾಗಿ ಹೊಸಪೇಟೆಗಳಿಗಾಗಿ **ಪಡಮೂಲೆಯ** ಸ್ಥಳಗಳು ನಿರ್ಮಾಣ ಗೊಂಡವು. ಈ ಪಡಮೂಲೆ ಸ್ಥಳಗಳು ನಾಲ್ಕು ದಿಕ್ಕಿಗೆ ಹಿನ್ನಾಡುಗಳ ಉತ್ಪಾದನೆಯನ್ನು ಅವುಗಳ ಬೇಡಿಕೆಗಳನ್ನು ಪೂರೈಸುವ ದಾರಿಯಲ್ಲಿ ಸಮೃದ್ಧಿಯಾಗಿ ಬೆಳೆದುಕೊಂಡವು.

ಆಗ ಆ ವ್ಯಾಪಾರದ ಪಡಮೂಲೆಯ ಸ್ಥಳಗಳನ್ನು ರಕ್ಷಿಸುವ ಅವಶ್ಯಕತೆಯು ಉಂಟಾಯಿತು. ಅಲ್ಲಿನ ವ್ಯಾಪಾರವನ್ನು ಸರಕು-ಸಾಮಾನುಗಳನ್ನು ಹಣವನ್ನು ಜತನ ಮಾಡುವ ಕೆಲಸ ಈ ಕೋಟೆಗಳ ಸೈನ್ಯದ ಜವಾಬ್ದಾರಿ ಆಯಿತು.

ಮಧ್ಯಕಾಲೀನ ಕರ್ನಾಟಕದಲ್ಲಿ ವೀರಶೈವ ಮಠಗಳು ಅಧ್ಯಾತ್ಮಿಕ, ಸಾಂಸ್ಕೃತಿಕ, ಆರ್ಥಿಕ ರಾಜಕೀಯ ಹಾಗೂ ಶೈಕ್ಷಣಿಕ ಕೊಡುಗೆಗಳನ್ನು ನೀಡಿ, ಸಮಾಜದ ಸರ್ವತೋಮುಖ, ಅಭಿವೃದ್ಧಿಗೆ ಶ್ರಮಿಸಿ, ನಗರೀಕರಣಕ್ಕೆ ಹೊಸ ನಾಂದಿಯನ್ನು ಹಾಡಿದ್ದು ಕನ್ನಡ ನಾಡಿನ ಇತಿಹಾಸದಲ್ಲಿ ಚಿರಸ್ಮರಣೀಯ ಸಂಗತಿ.

*ಮಠಗಳು :* ವೀರಶೈವ ಮಠಗಳಲ್ಲಿ ಎರಡು ವಿಧಗಳಿವೆ. ಗುರುಮಠಗಳು ಹಾಗೂ ವಿರಕ್ತಮಠಗಳು. ಹಿರೇಮಠ, ಸಾಲೀಮಠ, ಓಲೆ ಮಠ ಮುಂತಾದವುಗಳು ಗುರುಪೀಠಗಳ ಶಾಖೆಗಳು. ಇವು ಕೇವಲ ಧಾರ್ಮಿಕ ಹಾಗೂ ಶೈಕ್ಷಣಿಕ ಪಾತ್ರಗಳನ್ನು ಮಾತ್ರ ಹೆಚ್ಚಾಗಿ ವಹಿಸಿವೆ. ಆದರೆ ವಿರಕ್ತಮಠಗಳು ಆರ್ಥಿಕವಾಗಿಯೂ ಪಾತ್ರವಹಿಸಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನಗರೀಕರಣಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿವೆ.

ವೀರಶೈವ ಸಮಾಜದ ಬಣಜಿಗರು, ಶೆಟ್ಟರು ಇತ್ಯಾದಿ. ಪಂಗಡದವರು ವ್ಯಾಪಾರಕ್ಕೆಂದು ಪಟ್ಟಣಕ್ಕೆ ಬಂದಾಗ ಅಥವಾ ಬೇರೆ ಸಂತೆಗಳಿಗೆ ಹೋದಾಗ ಅನಿವಾರ್ಯವಾಗಿ, ಅವರು ಮಠಕ್ಕೆ ಬಂದು ಉಳಿಯುತ್ತಿದ್ದರು. ಅದಕ್ಕೆ ಮುಖ್ಯ ಕಾರಣ ಅವರು ವೀರಶೈವದ ಕಟ್ಟಾ ಧರ್ಮಾನುಯಾಯಿಗಳಾಗಿದ್ದರು. ತಮ್ಮ ಧರ್ಮದ ಕ್ರಿಯೆಗಳನ್ನು ಗಟ್ಟಿಯಾಗಿ ಪಾಲಿಸುತ್ತಿದ್ದರು. ಗೃಹಸ್ಥ ರಾಗಿಯೂ ಕೂಡ ವೀರಶೈವ ತತ್ವಗಳನ್ನು ಕ್ರಿಯಾಶೀಲರಾಗಿ ಆಚರಿಸುತ್ತಿದ್ದರು. ಈ ಕಾರಣದಿಂದ ಮಠವೇ ಆಗ ಎಲ್ಲ ರೀತಿಯಿಂದ ಅವರಿಗೆ ಆಶ್ರಯಸ್ಥಾನವಾಗಿತ್ತು. ತಮ್ಮ ಚಕ್ಕಡಿ, ಕುದುರೆ, ಕತ್ತೆ ಮತ್ತು ಕಂಟಲಿ ಎತ್ತುಗಳನ್ನು ಮಠದ ಆವರಣದಲ್ಲಿ ಕಟ್ಟಿ ತಮ್ಮ ಸರಕುಗಳನ್ನು ರಕ್ಷಿಸಿಕೊಳ್ಳುತ್ತಿದ್ದರು. ಸ್ನಾನ ಪೂಜಾದಿ ಗಳನ್ನು ನಿರ್ವಹಿಸಿ ಗುರುಗಳ ಪಾದೋದಕ ಸ್ವೀಕರಿಸಿ ಉಂಡು ಮರಳಿ ಹೋಗುವಾಗ ಮಠಕ್ಕೆ ಕಾಣಿಕೆ ಸಲ್ಲಿಸುತ್ತಿದ್ದರು. ಆಗ ಕೆಲವು ಮಠಗಳ ಸುತ್ತಮುತ್ತ ವ್ಯಾಪಾರದ ಮಳಿಗೆಗಳು ನಿರ್ಮಾಣಗೊಂಡವು. ಅಲ್ಲಿ ಇವರು ತಮ್ಮ ಸರಕುಗಳನ್ನು ಇಡಲು ಮಾರಲು ಮೊದಲೇ ಅನುಮತಿ ಪಡೆಯುತ್ತಿದ್ದರು. ಹೀಗಾಗಿ ಬೇರೆ ಬೇರೆ ಪೇಟೆಗಳು ಸ್ಥಾಪಿಸಲ್ಪಟ್ಟ ಉತ್ತರ ಕರ್ನಾಟಕದಲ್ಲಿ ವ್ಯಾಪಾರೀಕರಣ, ನಗರೀಕರಣಗಳ ಪ್ರಕ್ರಿಯೆ ಆಗ ಪ್ರಾರಂಭ ವಾಯಿತು. ಅದು ಭದ್ರವಾಗಿ ಬೆಳೆದೂ ನಿಂತಿತು. ಉದಾ: ಧಾರವಾಡದ ಹಾವೇರಿ ಪೇಟೆ. ಕ್ರಮೇಣ ಮಠಗಳು ಆರ್ಥಿಕವಾಗಿ ಬೆಳೆದು ಪತ್ತಿನ ವ್ಯಾಪಾರ ಅಂದರೆ ಬಡ್ಡಿ ವ್ಯಾವಹಾರ ಪ್ರಾರಂಭಿಸಿದವು. ಸ್ವಾಮೀಜಿಗಳ ಮಧ್ಯಸ್ಥಿಕೆಯಲ್ಲಿ ಸಾಲ ನೀಡುವ ಪದ್ಧತಿ ಬೆಳೆಯಿತು. ಒಂದು ರೀತಿಯಲ್ಲಿ ಮಠಗಳು ಬ್ಯಾಂಕುಗಳ ಕಾರ್ಯ ನಿರ್ವಹಿಸುತ್ತಿದ್ದವೆಂದೇ ಹೇಳಬಹುದು. ಅನಧಿಕೃತವಾಗಿ ನಡೆದ ಈ ಚಟುವಟಿಕೆಗಳು ಗುರುಗಳ ಬಗೆಗಿನ ಭಕ್ತಿ, ನೈತಿಕ ಭಯದಿಂದ ಯಾವುದೇ ಕಾಗದ ಪತ್ರ, ಕರಾರುಗಳಿಲ್ಲದೆ ಈ ವ್ಯವಹಾರ ಅಂದು ನಡೆದದ್ದಾಗಿದೆ. ಇದೇ ಆರ್ಥಿಕ ವ್ಯವಹಾರ ನಿರಂತರ ನಡೆದಾಗ ಮಠಗಳು ಅನೇಕ ವ್ಯಾಪಾರಸ್ಥರಲ್ಲಿ ರಕ್ತ ಸಂಬಂಧದ ಜವಾಬ್ದಾರಿಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದುಂಟು. ಹೀಗಾಗಿ ಸುತ್ತ ಮುತ್ತಲಿನ ಗ್ರಾಮೀಣ ಪ್ರದೇಶದ ವ್ಯಾಪಾರಸ್ಥರು ಶಹರಕ್ಕೆ ಬಂದು ವಾಸಿಸಲೂ ಹತ್ತಿದರು. ಉತ್ತರ ಕರ್ನಾಟಕದ ಭಾಗದ ಪ್ರಮುಖ ನಗರಗಳಾದ ಬೆಳಗಾವ, ಧಾರವಾಡ, ಹುಬ್ಬಳ್ಳಿ, ಹಾವೇರಿ ಮುಂತಾದವು ಬೆಳೆಯಲಿಕ್ಕೆ ಈ ಮಠಗಳೂ ಕಾರಣ ಎಂದೇ ಹೇಳಬಹುದು. ಪೂರ್ವದ ಪ್ರದೇಶಗಳಿಗೆ ಪಶ್ಚಿಮ ಅರಣ್ಯ ಮತ್ತು ಘಟ್ಟದ ಪ್ರದೇಶಗಳಿಗೆ ಹಾವೇರಿಯು ಮಹತ್ವದ ಪಡಿಮೂಲೆಯ ಸ್ಥಳವಾಗಿತ್ತು. ಅಂದಿನ ಯುಗದಲ್ಲಿ ಸಮೀಪದ ಬ್ಯಾಡಗಿ ಮತ್ತು ಹಾವೇರಿಗಳು ವ್ಯಾಪಾರದಲ್ಲಿ ಪೈಪೋಟಿಯಲ್ಲಿದ್ದವು. ಈ ಪ್ರದೇಶಗಳಿಗೆ ಬರುತ್ತಿದ್ದ ವೀರಶೈವ ವ್ಯಾಪಾರಸ್ಥರ ಅನುಕೂಲಕ್ಕಾಗಿ ಹಾವೇರಿಯಲ್ಲಿ ಕನಿಷ್ಠ ೬ಳ ಮಠಗಳು ಇದ್ದ ಬಗ್ಗೆ ಆಖ್ಯಾಯಿಕೆಗಳು ಸಿಗುತ್ತವೆ. ಅದೇ ರೀತಿಯಲ್ಲಿ ಬ್ಯಾಡಗಿಯಲ್ಲಿಯೂ ಕೂಡ ಹಲವಾರು ದೊಡ್ಡ ಮಠಗಳು ಊರಿನ ಅಭಿವೃದ್ಧಿಗಾಗಿ ಶ್ರಮಿಸಿದ್ದುಂಟು. ಚಿತ್ರದುರ್ಗದ ಶಾಖಾ ಮಠವೊಂದು ಈಗಲೂ ಇಲ್ಲಿದೆ.

ಇನ್ನೊಂದು ಮಹತ್ವದ ಉದಾಹರಣೆ ಎಂದರೆ, ಹೊಸ ಹುಬ್ಬಳ್ಳಿಯ ನಿರ್ಮಾಣದ ಕಥೆ. ಗೋಕಾಕದ ಬಸಪ್ಪ ಶೆಟ್ಟರು ಆಗ ಒಂದು ಸಣ್ಣ ಊರಾಗಿದ್ದ ಹುಬ್ಬಳ್ಳಿಗೆ ಬಂದು ಸವಣೂರು ನವಾಬರಿಂದ ಸನದು ಪಡೆದು ಹೊಸ ಹುಬ್ಬಳ್ಳಿಯ ನಿರ್ಮಾಣಕ್ಕೆ ಕಾರಣವಾದರು. ವೀರಶೈವ ಬಣಜಿಗರು ತಮ್ಮ ವ್ಯಾಪಾರದ ಮಳಿಗೆಗಳನ್ನು ಇಲ್ಲಿ ಸ್ಥಾಪಿಸಿದರು. ಆನುಷಂಗಿಕವಾಗಿ ಇವರೆಲ್ಲರಿಗೂ ಬೇಕಾಗಿದ್ದ ಜಂಗಮ ಸನ್ನಿಧಾನಕ್ಕಾಗಿ ಹಲವಾರು ಮಠಗಳು ಆಗ ಸ್ಥಾಪಿಸಲ್ಪಟ್ಟವು. ಈಗ ಅಕ್ಕಿಹೊಂಡದಲ್ಲಿಯ ಹೊಸಮಠವು ಇದಕ್ಕೊಂದು ಪ್ರಬಲ ಉದಾಹರಣೆ. ಊರಲ್ಲಿಯ ಧರ್ಮನಿಷ್ಠ ವೀರಶೈವ ವ್ಯಾಪಾರಸ್ಥರಿಗಾಗಿ ಗುರು ಸನ್ನಿಧಾನದಂತೆ ಆಗ ಅನೇಕ ಮಠಗಳು ಸ್ಥಾಪಿಸಲ್ಪಟ್ಟವು.

*ಮಧ್ಯಯುಗದಿಂದ (೧೫೮೫-೧೮೨೪) ಬ್ರಿಟೀಷಯುಗದ ಪ್ರಾರಂಭದವರೆಗೆ ಕಿತ್ತೂರ ಸಂಸ್ಥಾನವು ಓರ್ವ ಸಾಗರಪ್ರಾಂತದ ರಾಜ್ಯವಾಗಿ ಕಂಗೊಳಿಸಿತು. ಕಿತ್ತೂರ ಸಂಸ್ಥಾನವು ಬಹುದೊಡ್ಡ ವ್ಯಾಪಾರಕೇಂದ್ರವಾಗಿದ್ದಿತು. ಸಂಸ್ಥಾನದ ಮುಖ್ಯ ಮುಖ್ಯ ಪಟ್ಟಣಗಳಾದ ಕಿತ್ತೂರ, ದೇವರ ಹುಬ್ಬಳ್ಳಿ, ಹಲಸಿಗೆ, ನಂದಗಡ, ಖಾನಾಪುರ, ನೇಸರಗಿ, ಬೈಲಹೊಂಗಲ ಇತ್ಯಾದಿ ಪಟ್ಟಣಗಳು ವಿವಿಧ ಸರಕುಗಳ ಅಂತರಾಷ್ಟ್ರೀಯ ವ್ಯಾಪಾರಕ್ಕಾಗಿ ಪ್ರಸಿದ್ಧವಾಗಿದ್ದುವು. ಈ ಎಲ್ಲ ಪಟ್ಟಣಗಳಲ್ಲಿಯೂ ವೀರಶೈವ ಬಣಜಿಗ ವ್ಯಾಪಾರಸ್ಥರಿಗಾಗಿ ಮಠಗಳಲ್ಲಿ ಆಶ್ರಯ ಸಂರಕ್ಷಣೆ ಮತ್ತು ವ್ಯವಹಾರದಲ್ಲಿ ಬರುತ್ತಿದ್ದ ತಂಟೆ ತಕರಾರುಗಳ ನಿರ್ಣಯಿಸುವ ಪಾತ್ರವನ್ನು ಈ ಮಠಗಳು ವಹಿಸಿದ್ದುಂಟು. ಹಾಗೆಯೇ ಸ್ವಾದಿ ಮತ್ತು ಕೆಳದಿ ಅರಸರ ಕಾಲದಲ್ಲಿ ಸಿರಸಿಯಲ್ಲಿ ೧೦ ಮಠಗಳು ಇದ್ದವು. ಅವುಗಳಲ್ಲಿ ಬಣ್ಣದ ಮಠ ಮತ್ತು ವಿರಕ್ತಮಠಗಳು ಈ ದಿಸೆಯಲ್ಲಿ ಮಹತ್ವದ ಪಾತ್ರ ವಹಿಸಿದ್ದವೆಂದೇ ಹೇಳಬಹುದು. ಗದುಗಿನ ತೋಂಟದಾರ್ಯ ಮಠ, ಅಥಣಿಯ ಶೆಟ್ಟರಮಠ, ಅಂಥಹದೇ ಪಾತ್ರವನ್ನು ವಹಿಸಿ ನಗರೀಕರಣಕ್ಕೆ ಕಾರಣವಾಗಿವೆ ಎಂಬುದಕ್ಕೆ ಅವು ಕೂಡ ಉದಾಹರಣೆಯಂತಿವೆ.*

ಮಠಗಳಿಗೆ ಅರಸರು ಸರದಾರರು ಜಮೀನುದಾರರು ವ್ಯಾಪಾರಸ್ಥರು ಭಕ್ತಿಯಿಂದ ನೀಡಿದ ಸ್ಥಿರಾಸ್ತಿ ಹಾಗೂ ಚರಾಸ್ತಿ ಹೇರಳವಾಗಿ ಇರುತ್ತಿದ್ದವು. ಮಠಗಳ ವಾರ್ಷಿಕ ಉತ್ಸವ ಸಮಯದಲ್ಲಿ ಮಠಮಾನ್ಯಗಳು ವ್ಯಾಪಾರ ಕೇಂದ್ರಗಳಾಗುತ್ತಿದ್ದವು.

ಇಂತು ಈ ವೀರಶೈವ ಪ್ರಮುಖ ಮಠಗಳು ತಮ್ಮ ಮುಖ್ಯ ಜವಾಬ್ದಾರಿಯಾಗಿದ್ದ ಧರ್ಮರಕ್ಷಣೆ, ಧರ್ಮಪ್ರಸಾರ, ಇವುಗಳೊಂದಿಗೆ ಅಂದಿನ ಸಮಾಜೋ - ಆರ್ಥಿಕ ವ್ಯವಸ್ಥೆಯಲ್ಲಿಯೂ ಬಲುದೊಡ್ಡ ಪಾತ್ರವನ್ನಾಡಿದ ಸಂಗತಿಯು ಈ ದೇಶದ ಸಮಾಜೋ - ಸಾಂಸ್ಕೃತಿಕ ಇತಿಹಾಸದಲ್ಲಿ ಬರೆಬೇಕಾದದ್ದು ಇಂದಿಗೂ ಬಂದಿಲ್ಲ. ಒಂದು ಜನಾಂಗದ ವಿವಿಧ ಕ್ಷೇತ್ರಗಳನ್ನು ಕ್ರೋಡೀಕರಿಸಿ ಈ ಮಠಗಳು ಆಗ ವಿವಿಧ ರೀತಿಯಲ್ಲಿ ತಮ್ಮ ಪಾತ್ರಗಳನ್ನು ಆಡುವುದರಲ್ಲಿ ಯಶಸ್ವಿಯಾಗಿವೆ. ಅಂದಿನ ಆರ್ಥಿಕ ಭದ್ರತೆ, ಸಾಮಾಜಿಕ ನ್ಯಾಯನಿರ್ಣಯ ರಾಜಕೀಯ ಒತ್ತಡಗಳ ಹೇರಿಕೆ, ಅಂತೆಯೇ ಆಧ್ಯಾತ್ಮಿಕ ಕ್ಷೇತ್ರಕ್ಕೂ ಈ ಮಠಗಳು ವಿಸ್ತರಿಸಿಕೊಂಡದ್ದು ಮಧ್ಯಯುಗದ ಉತ್ತರ ಕರ್ನಾಟಕದ ಒಂದು ಮಹತ್ವದ ಆಖ್ಯಾಯಿಕೆ.

ಈ ದಿಸೆಯಲ್ಲಿ ಸಂಘಟಿತ ಸಂಶೋಧನಾ ಕಾರ್ಯ ಈಗ ನಡೆಯಬೇಕಾದದ್ದು ಕ್ರಮ ಪ್ರಾಪ್ತ. ಮಧ್ಯಯುಗದ ಪಾಶ್ಚಾತ್ಯ ಕ್ರೈಸ್ತ ಮಠಗಳು ಆಗ ಮಾಡಿದ್ದ ಇಂಥಹದೇ ಚಟುವಟಿಕೆಗಳ ಕ್ರಮಬದ್ಧ ತೌಲನಿಕ ಅಭ್ಯಾಸವು ಈಗ ಅವಶ್ಯವಿದೆ. ಇದೇ ಸಂದರ್ಭ ಪರದೇಶದಿಂದ ವ್ಯಾಪಾರಕ್ಕೆ ಬಂದ ಮಹಮ್ಮದೀಯ ವರ್ತಕರ ವಾಸಕ್ಕಾಗಿ ಆಗ ಅವರವರ ದೇಶದ ಹೆಸರಿನಲ್ಲಿ ಮಸೀದಿಗಳನ್ನು ಅವರು ಸ್ಥಾಪಿಸಿದ್ದರು. ಇವೆಲ್ಲ ಈಗ ಅಭ್ಯಸನೀಯ.

ಹಾಗೆಯೇ ಮಠಗಳ ಪಾತ್ರದ ಬಗ್ಗೆ ಈಗ ಸಂಘಟಿತ ಸಂಶೋಧನೆಗಳು ಬರುವ ಅಗತ್ಯವಿದೆ. ಈ ಆಕರಗಳು ಕಾಲನಗರ್ಭದಲ್ಲಿ ಅಡಗಿ ಹೋಗುವ ಪೂರ್ವದಲ್ಲಿ ಸಂಶೋಧಕರು ಇತ್ತ ಗಮನಹರಿಸಬಹುದಾಗಿದೆ. ಈಗಲೂ ಅನೇಕ ಮಠಗಳಲ್ಲಿ ಅವರು ನೀಡಿದ ನ್ಯಾಯ-ನಿರ್ಣಯಗಳು, ಕಟ್ಟಳೆಗಳು ನಿರೂಪಗಳು, ಅಂತಹ ಇನ್ನೂ ಅನೇಕಾನೇಕ ದಾಖಲೆಗಳು ನಮಗೆ ಈ ಸುಪ್ರಸಿದ್ಧ ಮಠಗಳಿಂದ ದೊರೆಯುತ್ತಿದ್ದು ಅವುಗಳ ಪರಿವೀಕ್ಷಣೆ ಈಗ ಅಗತ್ಯವಿ**ದೆ.**



(ಈ ಲೇಖನವನ್ನು ಸಿದ್ಧ ಪಡಿಸುವಾಗ ಸಹಕರಿಸಿದ ಮತ್ತು ಅಗತ್ಯ ಮಾಹಿತಿ ಒದಗಿಸಿದ ಪ್ರೊ। ವ್ಹಿ. ಜಿ. ಮಾರೀಹಾಳರಿಗೆ ಕೃತಜ್ಞತೆಗಳು.)

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು


*1. Vijaya Kumar Thakur, ***Urbanisation in Ancient India*** (New Delhi, 1981)

*2. R. Champak Lakshmi, *Trade, Ideology and Urbanisation. South India 300 B. C. to 1300 A.D.* (New Delhi. 1965)

*3. Robert MOC Adams, *Evolution of Urban Society, Early Mesapotomia and Pre-Mispanic Mexico* (Chicago, 1965) cited in Champalakshmi.

*4. T. T. Mahajan : *Aspects of Agrarain & Urban History of the Marathas* (New Delhi 1991)

*5. Pune Archives : Karnataka Janau Rural no. 49.

*6. ವ್ಹಿ. ಜಿ. ಮಾರೀಹಾಳ, (೧೯೭೬), **ಕಿತ್ತೂರಿನ ಇತಿಹಾಸ**, ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ.

*7. ಬಿ. ಆರ್. ಹಿರೇಮಠ : **ಶಾಸನಗಳಲ್ಲಿ ಕರ್ನಾಟಕದ ವರ್ತಕರು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

ಡಾ| ಪಿ. ವಿ. ಕೃಷ್ಣಮೂರ್ತಿ*

# ಹೊಯ್ಸಳರ ಮಹಾಮಂಡಳೇಶ್ವರ ಪೂರ್ವಾದಿರಾಯರು

ಸಾಮ್ರಾಟರ ಕೈ ಕೆಳಗಿನ ಸಾಮಂತ, ಮಾಂಡಳಿಕ, ಮಹಾ ಮಂಡಳೇಶ್ವರ ಎಂಬುವ ಪ್ರಭುವರ್ಗದವರು; ಸಾಮಾನ್ಯವಾಗಿ ಒಂದು ನಿರ್ದಿಷ್ಟ ಪ್ರದೇಶದ ಸ್ಥಳೀಯ ಆಡಳಿತ ವ್ಯವಹಾರಗಳಲ್ಲಿ ಗಣನಾರ್ಹ ಪ್ರಭಾವವನ್ನು ಹೊಂದಿರುತ್ತಾರೆ. ವಾಸ್ತವವಾಗಿ ಇಂತಹ ಪ್ರಭುವರ್ಗದವರ ಆಗು-ಹೋಗುಗಳ ಮೇಲೆಯೇ ಅಧಿರಾಜರಾದ ಸಾಮ್ರಾಟರ ನೆಲೆ-ಬೆಲೆಗಳು ನಿರ್ಧರಿತ ವಾಗಿರುತ್ತವೆ.

ಅಂತೆಯೇ ಕಲ್ಯಾಣದ ಚಾಲುಕ್ಯ ಸಾಮ್ರಾಟರ ಮಹಾ ಮಂಡಳೇಶ್ವರರಾಗಿ ತಲೆಯೆತ್ತಿದ ಹೊಯ್ಸಳರು ಕಾಲಾಂತರದಲ್ಲಿ ಸ್ವತಂತ್ರರಾಗಿ, ತಾವೇ ಅನೇಕ ಸಾಮಂತ ಮಾಂಡಳೇಶ್ವರರಿಗೆ ಅಧಿಪತಿಗಳಾದರು. ಹೊಯ್ಸಳರ ಅಂತಹ ಮಹಾಮಂಡಳೇಶ್ವರಲ್ಲಿ ಇಂದಿನ ಬೆಂಗಳೂರು, ಕೋಲಾರ ಮತ್ತು ತಮಿಳುನಾಡಿನ ಧರ್ಮಪುರಿ ಜಿಲ್ಲೆಗಳಿಗೆ ಸೇರಿದ, ಅಂದರೆ ಪ್ರಾಚೀನ **ಗಂಗವಾಡಿ** ಪ್ರದೇಶದ ಮೊರಸುನಾಡು ಮತ್ತು ಮಾಸಂದಿನಾಡುಗಳ ಪ್ರದೇಶ ದಲ್ಲಿ ೧೨-೧೪ನೇ ಶತಮಾನದ ಅವಧಿಯಲ್ಲಿ ಪ್ರಬಲರಾಗಿದ್ದ 'ಪೂರ್ವಾದಿರಾಯರು'ಗಮನಾರ್ಹರಾಗಿದ್ದು ಅವರ ಇತಿವೃತ್ತವನ್ನು ಲಭ್ಯ ಶಾಸನಗಳ ಆಧಾರದಿಂದ ಪುನಾರಚಿಸುವ ಪ್ರಯತ್ನ ಈ ಲೇಖನದ ಆಶಯವಾಗಿದೆ.

**ಹಿನ್ನೆಲೆ** : ದಕ್ಷಿಣ ಕರ್ನಾಟಕದಲ್ಲಿ; ಪಲ್ಲವ, ಚಲುಕ್ಯ, ರಾಷ್ಟ್ರಕೂಟರಂತಹ ಸಾಮ್ರಾಜ್ಯಶಾಹಿ ಅರಸುಮನೆತನಗಳ ಆಳುವಿಕೆಯು ಹತ್ತನೆಯ ಶತಮಾನದ ಕೊನೆಯ ವೇಳೆಗೆ ಕಣ್ಮರೆಯಾಗುತ್ತಿದ್ದಂತೆ ಚೋಳ ಮತ್ತು ಕಲ್ಯಾಣದ ಚಾಲುಕ್ಯರು ತಲೆಯೆತ್ತಿದರು. ಕಲ್ಯಾಣದ ಚಾಲುಕ್ಯರ ಮಹಾಮಂಡಳೇಶ್ವರರಾಗಿ ಕಾವೇರಿಯ ಉತ್ತರ ಮತ್ತು ತುಂಗಭದ್ರೆಯ ದಕ್ಷಿಣಕ್ಕಿರುವ ಕರ್ನಾಟಕದ ಭೂ-ಭಾಗದಲ್ಲಿ ಹೊಯ್ಸಳರು ಪ್ರಬಲರಾದರು. ಅವರಲ್ಲಿ ಕ್ರಿ.ಶ. ೧೧೭೩ರಿಂದ ೧೨೨೦ರವರೆಗೆ ಹೊಯ್ಸಳ ರಾಜ್ಯವನ್ನು ಆಳಿದ ಇಮ್ಮಡಿ ಬಲ್ಲಾಳನ ಆಳ್ವಿಕೆಯ ಕಾಲ ಬಹುಮುಖ್ಯವಾದಾಗಿದೆ. ಈತ ತನ್ನ ತಾತನಾದ ವಿಷ್ಣುವರ್ಧನನು ಹಮ್ಮಿಕೊಂಡಿದ್ದ ಸ್ವತಂತ್ರ ರಾಜ್ಯದ ಕನಸನ್ನು ನನಸಾಗಿಸುವಲ್ಲಿ ಯಶಸ್ವಿಯಾದ. ಈತ ತನ್ನ ಆಳ್ವಿಕೆಯ ಅಂತಿಮ ವರ್ಷಗಳಲ್ಲಿ ಚೋಳರ ರಾಜಕೀಯದಲ್ಲಿ ತಲೆಹಾಕಬೇಕಾಯಿತು. ಚೋಳರ ದೊರೆಯಾದ ಮುಮ್ಮಡಿ ಕುಲೋತ್ತುಂಗನಿಗೆ ಈತ ತನ್ನ ಮಗಳಾದ ಸೋಮಲಾದೇವಿಯನ್ನು ಮದುವೆಮಾಡಿ ಕೊಟ್ಟಿದ್ದನು. ಚೋಳರು ಕೈಗೊಂಡ ಪಾಂಡ್ಯರ ವಿರುದ್ಧದ ಕಾಳಗಗಳಲ್ಲಿ ಈ ಇಮ್ಮಡಿ ವೀರಬಲ್ಲಾಳನ ಮಗನಾದ ಇಮ್ಮಡಿ ನರಸಿಂಹನು ನೆರವಾದನು. ಇಮ್ಮಡಿ ನರಸಿಂಹ (೧೨೨೦-೩೫) ತಮಿಳುನಾಡಿನಲ್ಲಿ ಪ್ರಬಲನಾದ. ಮುಂದೆ ಆತ ಶ್ರೀರಂಗಂ ಸಮೀಪದ ಕಣ್ಣಾನೂರಿನಲ್ಲಿ ತನ್ನ ಮಗನಾದ ಸೋಮೇಶ್ವರನ ಅಧೀನದಲ್ಲಿ ಒಂದು ಸೈನ್ಯವನ್ನು ಕೂಡ ಸಜ್ಜುಗೊಳಿಸಿದ. ಅನಂತರದಲ್ಲಿ ಕಣ್ಣಾನೂರು ಹೊಯ್ಸಳರ ಒಂದು ಉಪರಾಜಧಾನಿಯಾಯಿತು. ಕಾಲಾಂತರದಲ್ಲಿ ಚೋಳ ರಾಜ್ಯದ ಅಂದರೆ ಕಣ್ಣಾನೂರಿನ ಸುತ್ತಲಿನ ಪ್ರದೇಶ ಹೊಯ್ಸಳ ರಾಜ್ಯದ ಭಾಗವಾಯಿತು. ನರಸಿಂಹನ ಆಳ್ವಿಕೆಯ ಸುಮಾರು ೧೫ ವರ್ಷಗಳ ಕಾಲ ಹೊಯ್ಸಳ ರಾಜ್ಯ ದಕ್ಷಿಣದೆಡೆಗೆ ವಿಸ್ತಾರ ಕಂಡಿತು. ಆದರೆ ಮುಂದೆ ಪಾಂಡ್ಯರು ಪ್ರಬಲರಾದಾಗ ಹೊಯ್ಸಳರು ಹಿಂದಕ್ಕೆ ಸರಿಯಬೇಕಾಯಿತು. ಆ ವೇಳೆಗೆ ಗಂಗವಾಡಿ ಪ್ರದೇಶದಲ್ಲಿ ಹೊಯ್ಸಳರ ನೇರ ಆಳ್ವಿಕೆ ಕುಸಿತಗೊಂಡಿತ್ತು. ಆ ಪ್ರದೇಶದಲ್ಲಿ ಸ್ಥಳೀಯ ಆಡಳಿತವನ್ನು ನಡೆಸುತ್ತಿದ್ದ ಮಾಂಡಲಿಕರು ತಮ್ಮ ಅಧಿರಾಜರಾದ ಹೊಯ್ಸಳರನ್ನು ಅಷ್ಟಾಗಿ ಉಲ್ಲೇಖಿಸದೆ ತಮ್ಮ ತಮ್ಮ ಪ್ರದೇಶಗಳ ಮೇಲೆ ಹೆಚ್ಚು ಸ್ವತಂತ್ರವಾಗಿ ಅಧಿಕಾರ ನಡೆಸುತ್ತಿದ್ದುದನ್ನು ಕಾಣಬಹುದಾಗಿದೆ.

ಹೀಗೆ ಸ್ಥಳೀಯವಾಗಿ ಪ್ರಬಲರಾಗಿದ್ದ ರಾಜವಂಶೀಯ ಮನೆತನಗಳಲ್ಲಿ ಮುಳಬಾಗಲು ಕೋಲಾರ ಪ್ರದೇಶಗಳನ್ನು ಆಳುತ್ತಿದ್ದ ಇಳವಂಜಿ ಪ್ರಭುಗಳಾದ ಬ್ರಹ್ಮಾದಿರಾಯರು, ಚಿಂತಾಮಣಿ, ಕೋಲಾರ, ಶಿಡ್ಲಘಟ್ಟ ಪ್ರದೇಶಗಳನ್ನು ಆಳುತ್ತಿದ್ದ ಮೂಲತಃ ಗಂಗ ವಂಶೀಯರೇ ಆಗಿದ್ದ ಇತಿಹಾಸಕಾರರಿಂದ ತಮಿಳುಗಂಗರು ಎಂದು ನಾಮಾಂಕಿತರಾದ *ಗಂಗಪೆರುಮಾಳರು* ಹಾಗೂ ಆನೇಕಲ್, ಹೊಸಕೋಟೆ, ಮಾಲೂರು, ಬೆಂಗಳೂರು, ಹೊಸೂರು ತಾಲೂಕು ಪ್ರದೇಶಗಳನ್ನು ಆಳುತ್ತಿದ್ದ *ಕರ್ಕಡ* ಮಹಾರಾಜರು ಮತ್ತು ಮಹಾ ಮಂಡಳೇಶ್ವರ ತ್ರಿಭುವನಮಲ್ಲ **ಪೂರ್ವಾದಿರಾಯರು** ಮುಖ್ಯರಾಗಿ ಕಂಡುಬರುತ್ತಾರೆ.

## ಪೂರ್ವಾದಿರಾಯರ ಮೂಲ ಮತ್ತು ಆಳ್ವಿಕೆಯ ಪ್ರದೇಶ

ಪೂರ್ವಾದಿರಾಯರೆಂದು ತಮ್ಮನ್ನು ಕರೆದುಕೊಂಡ ಈ ವಂಶೀಯರ ಪ್ರಾಚೀನತಮ ಉಲ್ಲೇಖ ಚೋಳರಾಜ ಮೊದಲನೇ ಕುಲೋತ್ತುಂಗನ ೩೩ನೇ ಆಳ್ವಿಕೆಯ (ಕ್ರಿ. ಶ. ೧೧೦೩) ವರ್ಷಕ್ಕೆ ಸೇರಿದ್ದು, ಹೊಸೂರಿನ ಚಂದ್ರಚೂಡೇಶ್ವರ ದೇವಾಲಯದ

*ಜೆಬಿಜೆ-೫೧೦, ೧೨ನೇ ಕ್ರಾಸ್, ಮಾರತ್ತಹಳ್ಳಿ, ಬೆಂಗಳೂರು - ೫೬೦ ೦೩೭.

ಭಿತ್ತಿಯೊಂದರಲ್ಲಿರುವ ಶಾಸನದಲ್ಲಿ[*೧] ಬಂದಿದೆ. ಆ ಶಾಸನ ಬಹಳ ವಾಗಿ ತ್ರುಟಿತವಾಗಿದ್ದು, 'ಶಿವಬ್ರಾಹ್ಮಣ' ಮತ್ತು 'ಪೂರ್ವಾತಿ ರಾಜನ್' ಎಂಬ ಅಪೂರ್ಣ ಉಲ್ಲೇಖವನ್ನು ಮಾತ್ರ ಒಳ ಗೊಂಡಿದೆ. ಇದರಲ್ಲಿ ಉಕ್ತವಾಗಿರುವ 'ಪೂರ್ವಾತಿರಾಜನ್' ಯಾರು? ಎಂಬುದನ್ನು ನಿರ್ದುಷ್ಟವಾಗಿ ಗುರುತಿಸುವುದು ಕಷ್ಟವಾಗಿದೆ. ಆದರೆ ಚೋಳರ ಪೂರ್ವ ಕಾಲದಿಂದಲೂ 'ಪುರವುವರಿಯಾರ್' ಎನ್ನುವ ಗ್ರಾಮಾಂತರ ಪ್ರದೇಶಗಳಲ್ಲಿ ಭೂಮಿ ಕಾಣಿಗಳ ಲೆಕ್ಕಪತ್ರಗಳನ್ನು ತನಿಖೆ ಮಾಡುವ ಅಧಿಕಾರಿಗಳು ಇದ್ದರು. (ಇವರು ಇಂದಿನ ರೆವಿನ್ಯೂ ಇನ್ಸ್‌ಪೆಕ್ಟರ್‌ಗಳಿದ್ದಂತೆ.) ಇವರು ಸ್ಥಳೀಯ ಕನ್ನಡ ಜನರ ಬಾಯಲ್ಲಿ 'ಪೂರ್ವಾದಿರಾಯರ್' ಎನಿಸಿಕೊಂಡಿರಬೇಕು. ಇವರೇ ಮುಂದೆ ಅದರಲ್ಲೂ ಹೊಯ್ಸಳರ ಕಾಲದಲ್ಲಿ ಸ್ಥಳೀಯ ಮಹಾಮಂಡಲೇಶ್ವರರೆನಿಸಿಕೊಂಡಾಗ ತಮ್ಮನ್ನು ಪ್ರಾಚೀನಕ್ಕೆ ಕೊಂಡೊಯ್ಯುವ ಅಪ್ಯಾಯಮಾನವಾದ 'ಪೂರ್ವಾದಿ ರಾಯರು' ಎಂಬುದನ್ನು ತಮ್ಮ ವಂಶನಾಮವಾಗಿ ಸ್ವಸಂತೋಷ ದಿಂದ ಆಲಂಗಿಸಿಕೊಂಡರೆಂದೇ ಹೇಳಬೇಕು. ಶಾಸನಗಳಲ್ಲಿ ಇವರು ಪೂರ್ವಾದಿರಾಜರ್, ಪೂರ್ವಾದರಾಯರ್, ಪೂರಾದರಾಯರ್, ಪೂರ್ವಾದಿರಾಜರ್, ಪೂರ್ವಾದ ರಾಜರ್, ಪೂರ್ವಾದಿಯರ್, ಪೂವಾತ್ತರಾಯರ್, ಪೂರವಾದರಾಯಿರ್ ಎಂದು ಮುಂತಾಗಿಯೂ ಉಕ್ತರಾಗಿದ್ದಾರೆ.

'ಪೂರ್ವಾದಿರಾಜ' ಎಂಬುದು ಪೂರ್ವ + ಆದಿ + ರಾಜ ಎಂಬ ಮೂರು ಶಬ್ದಗಳಿಂದ ಕೂಡಿದ್ದು, ಪೂರ್ವ ಮತ್ತು ಆದಿ ಎಂಬುವು ಒಂದೇ ಅರ್ಥವುಳ್ಳವಾಗಿದ್ದು ದ್ವಿರುಕ್ತಿಯಾಗಿದೆ. ಪೂರ್ವಕಾಲದಿಂದ ಇದ್ದವರು-ಆದಿರಾಜರು ಎಂಬರ್ಥ ಗೋಚರಿಸು ತ್ತದೆ. ಹಾಗಾಗಿ ಇವರು ಹೊಯ್ಸಳರ ಕಾಲಕ್ಕಿಂತ ಹಿಂದಿನವರು ಎಂದಂತಾಗುತ್ತದೆ ಅಂದರೆ ಇವರು ಚೋಳ ಅಥವಾ ಅದಕ್ಕೂ ಪೂರ್ವದಿಂದಲೂ ಇದ್ದವರು ಎಂಬ ಅರ್ಥಬರುವ 'ಪೂರ್ವಾದಿ ರಾಯ' ಎಂಬ ವಂಶನಾಮವನ್ನು ಪಡೆದುಕೊಂಡರೆಂದು ಭಾವಿಸ ಬಹುದಾಗಿದೆ.

ಇವರ ಆಳ್ವಿಕೆಯ ಪ್ರದೇಶದಲ್ಲೇ ರಾಜ ರಾಜಕರಕಡ ಮಹಾರಾಯರ ಜೊತೆಜೊತೆಯಲ್ಲೇ ಇವರು ಉಲ್ಲೇಖವಾಗಿದ್ದು ಪೂರ್ವಾದಿರಾಯರೂ ಮೂಲತಃ ಗಂಗ ವಂಶೀಯರಾಗಿರ ಬೇಕೆನಿಸುತ್ತದೆ. ಹಾಗಾಗಿ ಪೂರ್ವಾದಿರಾಯ ಎಂಬುವ ಹೇಳಿಕೆಗೆ ಹೆಚ್ಚು ಅರ್ಥ ಬರುತ್ತದೆ.

ಪುರ್ವಾದಿರಾಯರನ್ನು ಪ್ರಸ್ತಾಪಿಸುವ ಶಾಸನಗಳು ಸು.ಕ್ರಿ.ಶ. ೧೧೦೩ರಿಂದ ಸು. ಕ್ರಿ.ಶ. ೧೩೧೮ರ ಅವಧಿಗೆ ಸೇರಿದ್ದು ಬೆಂಗಳೂರು ಜಿಲ್ಲೆಯ ಬೆಂಗಳೂರು ತಾಲೂಕಿನ ಹೊಂಗಸಂದ್ರ, ಯಲಹಂಕ; ಆನೇಕಲ್ ತಾಲೂಕಿನ ಜಿಗಣಿ, ಹಾರಗದ್ದೆ, ಬಿದುರುಗೆರೆ, ಹಳೇಹಳ್ಳಿ, ಮಾಯಸಂದ್ರ, ತಿಂಡ್ಲು; ಹೊಸಕೋಟೆ ತಾಲೂಕಿನ ತಟ್ಟನೂರು; ಕೋಲಾರ ಜಿಲ್ಲೆಯ ಮಾಲೂರು ತಾಲೂಕಿನ ಬೇಚಿರಾಕ್ ವೊಮ್ಮಸಂದ್ರ, ಚನ್ನರಾಯಪುರ, ಗೋಣೂರು ; ಮತ್ತು ಇಂದಿನ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು ತಾಲೂಕಿನ ಹೊಸೂರು, ಚೂಡಪುರ, ಅಲಸಾದನಹಳ್ಳಿ, ಬೆಳತೂರು, ಬೇರಿಕೆ ಮುಂತಾದ ಗ್ರಾಮಗಳಲ್ಲಿ ಕಂಡುಬಂದಿವೆ. ಈ ಪ್ರದೇಶ ಪ್ರಾಚೀನ ಗಂಗವಾಡಿ ರಾಜ್ಯದ ವ್ಯಾಪ್ತಿಯಲ್ಲೇ ಇದ್ದು ಪ್ರಮುಖವಾಗಿ ಮೊರಸುನಾಡು ಮತ್ತು ಮಾಸಂದಿನಾಡುಗಳನ್ನು ಒಳಗೊಂಡಿದ್ದ ಪ್ರದೇಶವಾಗಿತ್ತು. ಈ ನಾಡುಗಳು ಭೌಗೋಳಿಕವಾಗಿ ನೆರೆಹೊರೆಯವಾಗಿದ್ದು - ಇಂದಿಗೂ ಸಾಂಸ್ಕೃತಿಕ ಐಕ್ಯತೆಯುಳ್ಳ ಪ್ರದೇಶವಾಗಿವೆ. ಈ ಪ್ರದೇಶದಲ್ಲಿ ಗಂಗರ ಕಾಲದ ನೂರಾರು ವೀರಗಲ್ಲುಗಳು ಶಾಸನ ರಹಿತ ವಾಗಿಯೂ-ಸಹಿತವಾಗಿಯೂ ಇರುವುದು ಒಂದು ವಿಶೇಷ. ಆದರೆ ಹೊಯ್ಸಳರ ಕಾಲದಲ್ಲಿ ಅಂದರೆ; ಆರಂಭದಲ್ಲಿ ಹೊಯ್ಸಳ ವಿಷ್ಣುವರ್ಧನನ ಕಾಲದ ಶಾಸನಗಳು ಕ್ವಚಿತ್ತಾಗಿ ಕಂಡುಬಂದರೂ ಮುಂದೆ ಮುಮ್ಮಡಿ ಬಲ್ಲಾಳನ ಕಾಲದವರೆಗೂ ಹೊಯ್ಸಳರ ನೇರ ಆಳ್ವಿಕೆಯನ್ನು ಬಿಂಬಿಸುವ ಶಾಸನಗಳು ತೀರ ಕಮ್ಮಿ ಸಂಖ್ಯೆಯಲ್ಲಿವೆ. ಆದರೆ ಅದೇ ಅವಧಿಯಲ್ಲಿ ಪೂರ್ವಾದಿರಾಯರ ಶಾಸನಗಳು ಮಾತ್ರ ಗಣನಾರ್ಹ ಸಂಖ್ಯೆಯಲ್ಲಿ ಕಂಡುಬಂದಿದ್ದು; ಅವರು ಆ ಪ್ರದೇಶದ ಮೇಲೆ ಸಾಕಷ್ಟು ಪ್ರಮಾಣದ ಸ್ವಾಯತ್ತತೆಯನ್ನು ಪಡೆದು ಆಳ್ವಿಕೆ ನಡೆಸಿರುವ ಅಂಶ ಗಮನ ಸೆಳೆಯುತ್ತದೆ.

### ಶಾಸನೋಕ್ತ ಪೂರ್ವಾದಿರಾಯರು

ಹೊಸೂರಿನ ಚಂದ್ರ ಚೂಡೇಶ್ವರ ದೇವಾಲಯದಲ್ಲಿರುವ ಕ್ರಿ.ಶ ೧೨೬೧ ಶಾಸನವು[*೨] ತ್ರಿಭುವನಮಲ್ಲ ಪೂರ್ವಾದಿರಾಜ ಅತ್ತಿ ಆಳ್ವಾರನ ಮಗ ಧರ್ಮತ್ತಾಳ್ವರನನ್ನು ಪ್ರಸ್ತಾಪಿಸುತ್ತದೆ. ಅತ್ತಿ ಆಳ್ವಾರನಿಂದ ಶಿವುಡೈನಾಯನಾರ್ (ಚೂಡೇಶ್ವರ ದೇವರ) ದೇವಾಲಯುದಲ್ಲಿ ಸ್ಥಾಪಿಸಲ್ಪಟ್ಟ ಅಮ್ಮನವರಮೂರ್ತಿಯ ಪೂಜೆಗಾಗಿ ಗ್ರಾಮವೊಂದನ್ನು ದತ್ತಿ ಬಿಟ್ಟಿರುವುದನ್ನು ದಾಖಲಿಸಿದೆ. ಹದಿಮೂರನೆಯ ಶತಮಾನದ ಲಿಪಿಯಲ್ಲಿರುವ ಇನ್ನೊಂದು ಶಾಸನದಲ್ಲಿ[*೩] ತ್ರಿಭುವನಮಲ್ಲ ಪೂರ್ವಾದಿರಾಜನ ಮಗ ಅಟಿಗಿಯ ಪೆರುಮಾಳ್ ಅತ್ತಿಮಲ್ಲನ್ ಕುರುವನ್ದರಾಸನ್ ಎಂಬುವನು ಅದೇ ದೇವಾಲಯಕ್ಕೆ ಕೆಲವು ದತ್ತಿಗಳನ್ನು ಬಿಟ್ಟಿರುವ ಸಂಗತಿ ಇದೆ. ಕ್ರಿ.ಶ. ೧೨೭೧ರ ಮತ್ತೊಂದು ಶಾಸನವು[*೪] ಶ್ರೀಮಾಹೇಶ್ವರರು ಮತ್ತು ಪೂರ್ವಾದಿರಾಜರ್ ಶಿವಪಾದಶೇಖರ ಪೆರುಮಾಳ್ ಎಂಬುವ ಧರ್ಮತ್ತಾಳ್ವಾರನು ಶಿವಿಡನಾಯನಾರ್ ದೇವರ ಪೂಜಾ ಕೈಂಕರ್ಯಗಳಿಗಾಗಿ ದತ್ತಿ ಬಿಟ್ಟಿರುವುದನ್ನು ದಾಖಲಿಸಿದೆ. ಅಲಸಾದನಹಳ್ಳಿಯ ಕ್ರಿ.ಶ. ೧೨೭೫ರ ಶಾಸನದಲ್ಲೂ[*೫] ಪೂರ್ವಾದಿ ರಾಯರ್ ಧರ್ಮತ್ತಾಳ್ವಾರನ ಉಲ್ಲೆಖವಿದ್ದು ಅಮುದಮನಹಳ್ಳಿಯ ತಿರುಮಲ್ಲೈಯೀಶ್ವರ ಮುಡೈಯ ದೇವರಿಗೆ ಭೂದಾನವನ್ನು ನೀಡಿರುವುದು ದಾಖಲಾಗಿದೆ. ಈ ನಾಲ್ಕೂ ಮತ್ತು ಇತರ ಕೆಲವು ಶಾಸನಗಳನ್ನು ಒಟ್ಟಾರೆಯಾಗಿ ಪರಿಶೀಲಿಸಿದರೆ ಪೂರ್ವಾದಿ

ರಾಜವಂಶೀಯರ ನಾಲ್ಕು ಜನ ಅರಸರ ಹೆಸರುಗಳು ತಿಳಿದು ಬರುತ್ತವೆ.

ಕ್ರಿ.ಶ. ೧೨೪೩ರ ಸುಮಾರಿನ ಒಂದು ಶಾಸನದಲ್ಲಿ[*೬] ಪೂರ್ವಾದಿರಾಯ ಕಾಮತಾಟುವಾರ್‌ನ ಪ್ರಸ್ತಾಪ ಬಂದಿದೆ. ಕ್ರಿ.ಶ. ೧೨೬೨ರ ಸುಮಾರಿನ ಶಾಸನದಲ್ಲಿ[*೭] ಪೂರ್ವಾದಿರಾಯನಾದ ತಾಮತ್ತಾಳ್ವಾರ್ ಎಂಬುವನ ಪ್ರಸ್ತಾಪದೊಂದಿಗೆ ರಾಜರಾಜ ಕರ್ಕಡ ಮಹಾರಾಜ ಚೊಕ್ಕನಾಯಕನ ಉಲ್ಲೆಖವೂ ಬಂದಿದೆ. ಈ ಶಾಸನಗಳಲ್ಲಿ ಉಕ್ತರಾಗಿರುವ ಕಾಮತ್ತಾಟುವಾರ್ ಮತ್ತು ತಾಮತ್ತಾಳ್ವಾರ್ ಎಂಬುವರು ಅಭಿನ್ನರೆಂದು ತೋರುತ್ತದೆ ಹಾಗೂ **ತಾಮತ್ತಾಳ್ವಾರ್** ಎಂಬುದೆ ಸರಿಯಾದ ರೂಪವಿದ್ದು ಅದು ಮುಂದೆ ಧರ್ಮತ್ತಾಳ್ವಾರ್ ಎಂದು ಸಂಸ್ಕೃತಾನುಕರಣಕ್ಕೆ ಈಡಾಯಿತೆಂದು ಅನಿಸುತ್ತದೆ. ಕ್ರಿ.ಶ.೧೨೭೧ರ ಶಾಸನವೊಂದರಲ್ಲಿ[*೮] ಬಂದಿರುವ ಶಿವಪಾದಶೇಖರ ಪೆರುಮಾಳ್ ಧರ್ಮತ್ತಾಳ್ವಾರನನ್ನು ಕ್ರಿ.ಶ. ೧೨೬೨ರ ಶಾಸನದ ಕಾಮದೇವರ್ ಎಂಬುವವನೊಂದಿಗೆ ಸಮೀಕರಿಸಬಹುದೆಂದು ತೋರುತ್ತದೆ. ಹಾಗಾಗಿ ಧರ್ಮತ್ತಾಳ್ವಾರನ ಕೊನೆಯ ಕಾಲ ಕ್ರಿ.ಶ.೧೨೬೨ ಎಂದು ನಿರ್ಧರಿಸಬೇಕಾಗುತ್ತದೆ. ಈ ಧರ್ಮತ್ತಾಳ್ವಾರ್ ಅಥವಾ ತಾಮತ್ತಾಳ್ವಾರ್‌ನ ಪ್ರಸ್ತಾಪ ರಾಜರಾಜ ಕರ್ಕಡ ಮಹಾರಾಜ ಚೊಕ್ಕನಾಯಕನ ಜೊತೆ ಜೊತೆಯಲ್ಲೇ-ಒಂದೆರೆಡು ಶಾಸನಗಳಲ್ಲಿ[*೯] ಉಕ್ತವಾಗಿರುವುದು ಗಮನ ಸೆಳೆಯುತ್ತದೆ. ಈ ಪೂರ್ವಾದಿರಾಯರ ಆಳ್ವಿಕೆಯ ಪ್ರದೇಶದಲ್ಲೇ ಕ್ರಿ.ಶ. ೧೨೫೭ರಿಂದಲೇ ರಾಜರಾಜ ಕರ್ಕಡ ಮಹಾರಾಯ ವಂಶೀಯರ ಶಾಸನಗಳೂ[*೧೦] ಕಂಡುಬಂದಿವೆ. ಅವುಗಳು ಬೆಂಗಳೂರು ದಕ್ಷಿಣ ತಾಲೂಕಿನ ಹಗದೂರು, ಹೊಂಗಸಂದ್ರ, ತಲಗಟ್ಟಪುರ, ಬೇಗೂರು; ಆನೇಕಲ್ ತಾಲೂಕಿನ ಚೆಮ್ಮೇನಹಳ್ಳಿ, ಹಂದೇನಹಳ್ಳಿ; ಕನಕಪುರ ತಾಲೂಕಿನ ಹುಲ್ಲುಗೊಂಡನಹಹಳ್ಳಿ ಮುಂತಾದ ಗ್ರಾಮಗಳಲ್ಲಿವೆ. ರಾಜರಾಜ ಕರ್ಕಡ ಮಹಾರಾಯರು ಮತ್ತು ಪೂರ್ವಾದಿರಾಯರು ಮೂಲತಃ ಒಂದೇಮನೆತನಕ್ಕೆ ಸೇರಿದವರೇ? ಅಥವಾ ಭಿನ್ನರೇ? ಎಂಬುದನ್ನು ನಿರ್ಧಸಲು ಆಧಾರಗಳು ಸಾಲವು. ಆದರೆ ರಾಜರಾಜ ಕರ್ಕಡ ಮಹಾರಾಯರು ಗಂಗ ವಂಶೀಯರಿರಬೇಕೆಂದು ಮಾನ್ಯ ಬಿ. ಲೂಯಿಸ್ ರೈಸ್‌ರವರು ಕೆಲವು ಆಧಾರಗಳ ಹಿನ್ನೆಲೆಯಲ್ಲಿ ಅಭಿಪ್ರಾಯ ಪಟ್ಟಿದ್ದಾರೆ[*೧೧]. ಹಾಗಾಗಿ ಪ್ರಸ್ತುತ ಪೂರ್ವಾದಿ ರಾಯರು ತಮ್ಮನ್ನು ಪೂರ್ವ ಆದಿ ರಾಯರೆಂದು ಕರೆದು ಕೊಂಡಿರುವುದು, ಇವರೂ ಕೂಡ ಚೋಳಪೂರ್ವದ, ಗಂಗವಂಶಕ್ಕೆ ಸೇರಿದವರೆಂದು ಹೇಳಲು ಸಾಧ್ಯವಿದ್ದಂತಿದೆ. ಈ ಎರಡೂ ವಂಶೀಯರಲ್ಲಿ ತಾಮತ್ತಾಳ್ವಾರ್ ಮತ್ತು ಅತ್ತಿಆಳ್ವಾರ್ ಎಂಬುವ ಹೆಸರುಗಳು ಸಮಾನವಾಗಿ ಉಕ್ತಗೊಂಡಿವೆ.

ಕ್ರಿ.ಶ. ೧೩೦೦ರ ಹೊಸಕೋಟೆ ತಾಲೂಕು ತಟ್ಟನೂರಿನ ಶಾಸನದಲ್ಲಿ[*೧೨] ಅತ್ತಿಮಲ್ಲ ಎಂಬ ಪೂರ್ವಾದಿರಾಯ ವಂಶೀಯನ ಪ್ರಸ್ತಾಪ ಬಂದಿದೆ. ಕ್ರಿ.ಶ. ೧೩೧೬ಕ್ಕೆ ಸೇರಿದ ಆನೇಕಲ್ ತಾಲೂಕಿನ ಬಿದುರುಗೆರೆ ಗ್ರಾಮದ ಶಾಸನದಲ್ಲಿ[*೧೩] ತ್ರಿಭುವನ ಮಲ್ಲ ಪೂರ್ವಾದಿರಾಯ ಶೆಂಬಾಣ್ಣ್ಬ ಎಂಬುವವನ ಉಲ್ಲೇಖ ಬಂದಿದ್ದು, ಆತನನ್ನು ಯುದ್ಧವೀರರಲ್ಲಿ ಸೂರ್ಯನಂತಿರು ವವನೆಂದೂ, ವೈರಿಭಯಂಕರನೂ, ನಿರಾಶ್ರಿತರ ರಕ್ಷಕನೂ ಆದ ಸೇನಾನಾಯಕನೆಂದು ಹೊಗಳಿದೆ.

**ಪೂರ್ವಾದಿರಾಯರ ವಂಶವೃಕ್ಷ**




**ರಾಜರಾಜ ಕರಕಡ ಮಹಾರಾಯರ ವಂಶವೃಕ್ಷ**




## ಪೂರ್ವಾದಿರಾಯರ ಕಾಲದ ಸಮಾಜ

ಸಮಾನ ಸ್ವಭಾವಗಳುಳ್ಳ ಸಾಂಘಿಕವಾಗಿ ಸಂಬಂಧಗಳನ್ನು ಹೊಂದಿರುವ ವ್ಯವಸ್ಥೆಯನ್ನು 'ಸಮಾಜ' ಎಂದು ಕರೆಯುತ್ತಾರೆ. ಅಂತೆಯ ಅಂಥ ಸಾಮಾಜಿಕ ಸಂಬಂಧಗಳ ಬಲೆಯಾದ ಸಮಾಜ

ಮಾನವನ ಜೀವನ ಸಫಲತೆಗೆ ಅನಿವಾರ್ಯವಾದುದು. ಪ್ರಾಚೀನ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಧಾನ ಪಾತ್ರ ವಹಿಸಿದ್ದ ಅಂದಿನ ರಾಜಮಹಾರಾಜ, ಮಾಂಡಲಿಕ ಮೊದಲಾದವರು ತಮ್ಮ ಜೀವಿತ ಕಾಲದಲ್ಲಿ ನಿರ್ವಹಿಸಲೇಬೇಕಾದ ಪುಣ್ಯಕಾರ್ಯಗಳಲ್ಲಿ ಸಪ್ತಸಂತಾನಗಳಾದ ಪುತ್ರಸಂತಾನ, ತಟಾಕ ನಿರ್ಮಾಣ, ಧರ್ಮವಿವಾಹ, ದೇವಗೇಹ ನಿರ್ಮಾಣ, ಉದ್ಯಾನ ರಚನೆ, ಸದ್ಗ್ರಂಥ ರಚನೆ, ಧನನಿಕ್ಷೇಪ ಇವುಗಳ ಬಗ್ಗೆ ಸಹಜವಾಗಿ ಕಾರ್ಯ ಪ್ರವೃತ್ತರಾಗಿರುತ್ತಿದ್ದರು. ಅಂತೆಯೇ ಇಂತಹ ಪುಣ್ಯ ಕಾರ್ಯಗಳನ್ನು ನಿರ್ವಹಿಸುವಲ್ಲಿ ಪೂರ್ವಾದಿರಾಯರ ವಂಶೀಯರು ಸಾಕಷ್ಟು ಗಮನ ಕೊಟ್ಟಿರುವುದು ಅವರ ಶಾಸನಗಳ ಅವಲೋಕನದಿಂದ ಮನಗಾಣಬಹುದಾಗಿದೆ.

ಪೂರ್ವಾದಿರಾಯರು ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ದೇವಾಲಯಗಳ ರಚನೆ, ದೇವತಾಮೂರ್ತಿಗಳ ಸ್ಥಾಪನೆ, ಪೂಜಾ ಕೈಂಕರ್ಯಗಳಿಗೆ ಹಾಗೂ ಜೀರ್ಣೋದ್ಧಾರಕ್ಕೆ ವ್ಯವಸ್ಥೆ ಮಾಡಿದ್ದರು. ಜೊತೆಗೆ ಮಠ ಮಾನ್ಯಗಳ ಪೋಷಣೆ ಕಾರ್ಯವನ್ನು ಕೈಗೊಂಡಿದ್ದರು.

ಹೊಸೂರಿನ ಬೆಟ್ಟದ ಮೇಲಿನ ಚಂದ್ರಚೂಡೇಶ್ವರ ದೇವಾಲಯದಲ್ಲಿನ ದೇವಿಯ(ಮರಕತಾಂಬಾ) ಗುಡಿಯು ಪೂರ್ವಾದಿರಾಯ ಧರ್ಮತ್ತಾಳ್ವಾರನ ತಂದೆ ಅತ್ತಿಆಳ್ವರನಿಂದ ರಚಿಸಲ್ಪಟ್ಟಿತೆಂದು ಕ್ರಿ.ಶ. ೧೨೬೧ರ ಶಾಸನದಿಂದ[೧೪] ತಿಳಿಯುತ್ತದೆ. ಹೊಸೂರಿನಲ್ಲಿರುವ ಈಗಿನ ಕೋದಂಡರಾಮಸ್ವಾಮಿ ದೇವಾಲಯವು ಮೂಲತಃ ಒಂದು ಶೈವಸ್ಥಾನವಾಗಿದ್ದಿತು. ಅದು ಪೂರ್ವಾದಿರಾಯರಿಂದಲೇ ಸ್ಥಾಪಿಸಲ್ಪಟ್ಟ ಪೂರ್ವಾದಿರಾಜೇಶ್ವರ ಉಡೈಯಾರ್ ನಾಯನಾರ್ ಎಂಬ ಶಿವದೇವಾಲಯವಾಗಿದ್ದಿತು. ಅಲ್ಲೊಬ್ಬ 'ಶಿವಪಂಡಿತರ್' ಎಂಬ ಸ್ಥಾನಿಕರಿದ್ದ[೧೫] ಬಗ್ಗೆಯೂ ತಿಳಿಯುತ್ತದೆ. ಹಾಗೇ ಹೊಸೂರಿನ ಚಂದ್ರಚೂಡೇಶ್ವರ ದೇವಾಲಯದ ದ್ವಾರಪಾಲಕರ ಸ್ಥಾಪನೆಯು ಪುರ್ವಾದಿರಾಯರ ಮುದಲಿ(ಸೇನಾಪತಿ)ಯಾದ ಶಿಙುಪಿಳ್ಳೈ ಎಂಬುವ ನಿಂದಾಗಿದೆ ಯಲ್ಲದೆ ಆ ದ್ವಾರಪಾಲಕರ ಪೂಜೆಗೂ ದತ್ತಿ ಬಿಟ್ಟಿರುವ ವಿಶಿಷ್ಟ ಸಂಗತಿ ಗಮನ ಸೆಳೆಯುತ್ತದೆ.

ದೇವಾಲಯಗಳಲ್ಲಿ ನಡೆಯುವ ಪೂಜಾ ಕೈಂಕರ್ಯಗಳಿಗೆ ಸಂಬಂಧಿಸಿದಂತೆ ಕ್ರಿ.ಶ. ೧೨೬೧ರ ಪೂರ್ವಾದಿರಾಯ ಅತ್ತಿ ಆಳ್ವಾರನ ಮಗ ಧಮ್ಮತ್ತಾಳ್ವಾರನ ಶಾಸನವು[೧೬] ಶೆವಿಡನಾಯನಾರ್ ನಂಬಿರಾಟಿಯಾರ್ (ದೇವಿ)ರ ಆರಾಧನೆಗೆ ಕೊತ್ತಕಾಮಿಂಡನಪಳ್ಳಿ (ಕೊತ್ತಗೊಂಡನಹಳ್ಳಿ) ಗ್ರಾಮವನ್ನು ದತ್ತಿ ಬಿಟ್ಟಿರುವುದನ್ನು

ದಾಖಲಿಸಿದೆ. ಅದೇ ದೇವಾಲಯದಲ್ಲಿ ಪೂಜೆಗೆ ಅಗತ್ಯವಿದ್ದ ವಿವಿಧ ಪರಿಕರಗಳನ್ನೂ, ಹಗಲು ೫೦ ದೀಪಗಳು ರಾತ್ರಿ ೧೪ ದೀಪಗಳನ್ನು ಬೆಳಗಲು ಅಗತ್ಯ ದತ್ತಿಯನ್ನು[೧೭] ಶಿವ ಪಾದಶೇಖರ ಪೆರುಮಾಳ್ ಧರ್ಮತ್ತಾಳ್ವಾರನು ಕ್ರಿ.ಶ. ೧೨೭೧ರಲ್ಲಿ ವ್ಯವಸ್ಥೆ ಮಾಡಿದ್ದನು. ಆನೇಕಲ್ ತಾಲೂಕಿನ ಜಿಗಣಿ ಗ್ರಾಮದ ಕ್ರಿ.ಶ. ೧೩೦೭ ಶಾಸನವು[೧೮] ಅಲ್ಲಿನ ವರದರಾಜಸ್ವಾಮಿ ದೇವರಿಗೆ ಪಲ್ಲಕ್ಕಿ, ಛತ್ರಿ, ತಮಟೆ, ಖಡ್ಗ ಮುಂತಾದವುಗಳ ಮೂಲಕ ಸೇವೆ ಸಲ್ಲಿಸುವದಕ್ಕೂ ದತ್ತಿ ನೀಡಿರುವುದನ್ನು ದಾಖಲಿಸಿದೆ. ಹೀಗೆ ಪೂರ್ವಾದಿರಾಯರ ಕಾಲದಲ್ಲಿಯೂ ದೇವಾಲಯ ಸಂಸ್ಕೃತಿ ಅವಿರತವಾಗಿ ಮುನ್ನಡೆದಿರುವುದು ಕಂಡುಬರುತ್ತದೆ.

ಬಹುಮಟ್ಟಿಗೆ ದೇವಾಲಯದ ಅವಿಭಾಜ್ಯ ಅಂಗವಾಗಿ ಮಠಗಳು ಇರುತ್ತಿದ್ದವು. ಮಠಗಳಲ್ಲಿ ವಿದ್ವಾಂಸರಾದ ಯತಿಗಳು ನೆಲೆನಿಂತು ಶೈಕ್ಷಣಿಕ ಧಾರ್ಮಿಕ ಕಾರ್ಯಗಳಿಗೆ ಚಾಲನೆ ನೀಡುತ್ತಿದ್ದರು. ಕ್ರಿ.ಶ. ೧೨೯೧ರ ಶಾಸನವು[೧೯] ಶೆವಿಡಪಾಡಿಯಲ್ಲಿನ ಕೋಣವರ್‌ಗೆ ಕೋಣವರ್‌ಪಳ್ಳಿಯನ್ನು ಮಡುಪುವರಂ ಆಗಿ ನವೀಕರಿಸಿದ ಸಂಗತಿಯನ್ನು ದಾಖಲಿಸಿದೆ. ಕ್ರಿ.ಶ.೧೨೯೮ರ ಹೊಂಗಸಂದ್ರದ ಶಾಸನದಲ್ಲಿ[೨೦] ವೆಪ್ಪೂರ್ ಪಟ್ರುವಿಗೆ ಸೇರಿದ ವಮಯನ್ಪಳ್ಳಿ ಗ್ರಾಮವನ್ನು ಶೈವ ಸಾಮ್ರಾಟ ಶಿವಜ್ಞಾನಪಂಡಿತ ಸೆಂಬಿಜೀಯರ್ ಎಂಬುವರಿಗೆ ಮಡಪುರಂ ದತ್ತಿ ನೀಡಿರುವ ಉಲ್ಲೇಖ ಬಂದಿದೆ.

ಪುರ್ವಾದಿರಾಯರು ನೀಡಿರುವ ದಾನ ದತ್ತಿಗಳಲ್ಲಿ ಬ್ರಾಹ್ಮಣರಿಗೆ ನೀಡಿರುವ ದತ್ತಿಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಭಾರತೀಯರ ಪಾರಂಪರಿಕ ಬದುಕಿನಲ್ಲಿ ವಿಪ್ರವರ್ಗಕ್ಕೆ ವಿಶೇಷ ಗೌರವವಿದ್ದ ಸಂಗತಿ ಯಾವುದೇ ಕಾಲದ, ಪ್ರದೇಶದ ಶಾಸನಗಳನ್ನು ಅವಲೋಕಿಸಿದರೂ ಮನನವಾಗುತ್ತದೆ. ಷಟ್ಕರ್ಮ ನಿರತರಾದ ಬ್ರಾಹ್ಮಣರಿಗೆ ಅವರ ಜೀವನವು ಸುಗಮವಾಗಿ ಸಾಗಲೆಂದು ನೀಡುವ ದಾನ-ದತ್ತಿಗಳೇ ವಿಪ್ರಸಂಸ್ಥಾಪನ ಅಥವಾ ಬ್ರಹ್ಮದೇಯ ವೆನಿಸುವುದು. ಬ್ರಹ್ಮದೇಯಗಳ ಭಾಗವಾಗಿ ಅಗ್ರಹಾರಗಳ ಸ್ಥಾಪನೆ, ಅಲ್ಲಿನ ಮಹಾಜನರ ಪೋಷಣೆ ಮುಂತಾದವುಗಳು ಒಳಗೊಂಡಿರುತ್ತದೆ. ಅಂತೆಯೇ ಈ ನಿಟ್ಟಿನಲ್ಲಿ ಪೂರ್ವಾದಿರಾಯರು ಹಿಂದೆ ಬಿದ್ದವರಲ್ಲ. ಕ್ರಿ.ಶ. ೧೧೧೦೩ಕ್ಕೆ ಸೇರಿದ ಚೋಳರಾಜ ಮೊದಲನೇ ಕುಲೋತ್ತುಂಗನ ಶಾಸನದಲ್ಲೇ ಪೂರ್ವಾತಿರಾಜನ್ ಎಂಬ ಉಲ್ಲೇಖದೊಂದಿಗೆ ಶಿವಬ್ರಾಹ್ಮಣರ ಪ್ರಸ್ತಾಪ ಬಂದಿದೆ. ಹೊಸೂರು ತಾಲೂಕು ಚೂಡಪುರದ ಏಕಂಬರನಾಥದೇವಾಲಯದಲ್ಲಿನ ಕ್ರಿ. ಶ. ೧೨೫೭ರ ಶಾಸನವು[೨೧] ಶೆವಿಡಸಮುದ್ರಂ ಕೆರೆಯ ಕೆಳಗೆ ಬ್ರಾಹ್ಮಣರಿಗೂ ಒಂದು ಭಾಗವನ್ನು ದತ್ತಿ ಬಿಟ್ಟಂತೆ ತಿಳಿಸುತ್ತದೆ. ಕ್ರಿ.ಶ. ೧೨೬೨ ಮತ್ತು ಕ್ರಿ.ಶ. ೧೨೯೪ರ ಹೊಂಗಸಂದ್ರ[೨೨], ಕ್ರಿ.ಶ. ೧೨೬೫ರ ಹಂದೇನಹಳ್ಳಿ[೨೩], ಸು. ಕ್ರಿ.ಶ. ೧೩೦೦ರ ಹಾರಗದ್ದೆ[೨೪], ಕ್ರಿ.ಶ. ೧೨೭೪ರ ಮಾಯಸಂದ್ರ[೨೫]? ಹಳೇಹಳ್ಳಿ[೨೬]? ಹಾಗೂ ಹದಿಮೂರನೇ ಶತಮಾನದ ಬೆಳತೂರು[೨೭] ಕ್ರಿ.ಶ. ೧೩೦೩ (೧೨೪೩ ?)ರ ಚನ್ನರಾಯಪುರ[೨೮] ಗ್ರಾಮಗಳ ಶಾಸನಗಳಲ್ಲಿ ಮಹಾಜನರಿಗೆ, ಭಟ್ಟರಿಗೆ, ಬ್ರಾಹ್ಮಣರಿಗೆ ಭೂದಾನ ನೀಡಿರುವುದನ್ನು ದಾಖಲಿಸಲಾಗಿದೆ.

ಮಾನವ ಮಳೆಯ ನೀರನ್ನು ಸಂಗ್ರಹಿಸಿ ಅದನ್ನು ಕೃಷಿಗಾಗಿ ಬಳಸಿ ತನ್ನ ಉನ್ನತಿಯನ್ನು ಸಾಧಿಸಿಕೊಂಡದ್ದು ಅವನ ಜೀವನ ವಿಕಾಸ ಹಂತದಲ್ಲಿ ಒಂದು ಮೌಲಿಕವಾದ ಹಂತ. ಜೀವನದಿ-ಹೊಳೆಗಳ ಕೊರತೆಯಿರುವ ಪ್ರದೇಶಗಳಲ್ಲಿ ಕೆರೆ ಕಾಲುವೆಗಳ ರಚನೆ ಅನಿವಾರ್ಯ. ಪೂರ್ವಾದಿರಾಯರ ಆಳ್ವಿಕೆಯ ಕಾಲದಲ್ಲಿ ಅನೇಕ ಕೆರೆಗಳು ರಚನೆಗೊಂಡವು. ಅವುಗಳಲ್ಲಿ ಕ್ರಿ.ಶ. ೧೨೫೭ರ ಚೂಡಪುರ ಶಾಸನದಲ್ಲಿ[೨೯] ಮಾಸಂದಿನಾಡಿನ ಮದುಕಿಜ್‌ಯನ್ ಪಳ್ಳಿಗೆ ಸೇರಿದ ಆಮುದುಕೊಟ್ಬಂನ ವೇಣ್‌ಪುರ ಕಾರೈಕಾಳಿನ್ ಕಮ್ಮಾಡ್ಡೈ ಎಂಬುವವನಿಂದ ಶೆವಿಡಸಮುದ್ರಂ ಎಂಬ ಕೆರೆ ರಚನೆಯಾದ ಬಗ್ಗೆ ವಿವರವಿದೆ. ಕ್ರಿ.ಶ. ೧೨೬೫ರ ವೇಳೆಗಾಗಲೇ ಹಂದೇನಹಳ್ಳಿಯಲ್ಲಿ ಮಹಾಮಂಡಳೇಶ್ವರ ತ್ರಿಭುವನಮಲ್ಲ ರಾಜರಾಜ ಕರಕಡ ಮಹಾರಾಜನಿಂದ ಕೆರೆಯೊಂದು ರಚನೆಗೊಂಡಿದ್ದ ಸಂಗತಿ ಶಾಸನವೊಂದರಿಂದ ತಿಳಿದುಬರುತ್ತದೆ[೩೦]. ಸು.ಕ್ರಿ.ಶ. ೧೨೭೪ರ ಶಾಸನವು ಸೋಮಗವುಂಡನ್ ಮದಯ್ಯನ ಮಗ ವೈರನ್ ಎಂಬುವನಿಂದ ಕೆರೆಯೊಂದು ರಚನೆಯಾದುದನ್ನು ದಾಖಲಿಸಿದೆ. ಅದೇ ಸ್ಥಳದಲ್ಲಿ ಅಂದರೆ ಸೋಮಗೊಂಡನಹಳ್ಳಿಯಲ್ಲಿ ಮುಂದೆ ವಿಜಯನಗರದ ದೇವರಾಯನ ಕಾಲದಲ್ಲಿ ಸಂತೆಯೊಂದು ಏರ್ಪಾಟಾಯಿತು. ಈ ಶಾಸನಗಳು ದೊರೆತ ಸ್ಥಳದಲ್ಲಿ ಇಂದು ಸೋಮಗೊಂಡನಹಳ್ಳಿ ಎಂಬ ಗ್ರಾಮವಿಲ್ಲ, ಆದರೆ ಮಾಯಸಂದ್ರ ಎಂಬ ಹೆಸರಿನ ಸ್ಥಳವಿದೆ. ಶೆಂಬಾಣ್ಣ ಎಂಬುವ ಪೂರ್ವಾದಿರಾಜನು ಶಿವಸಮುದ್ರವೆಂಬ ಕೆರೆಗೆ ತೂಬನ್ನು ಮಾಡಿಸಿ ಕೊಟ್ಟ ವಿವರ ಕ್ರಿ.ಶ. ೧೩೧೬ರ ಬಿದುರುಗೆರೆ ಗ್ರಾಮದ ಕೆರೆಯ ತೂಬಿನ ಮೇಲಿನ ಶಾಸನದಿಂದ[೩೧] ತಿಳಿಯುತ್ತದೆ. ಹಾಗಾಗಿ ಆ ಕೆರೆಗೆ 'ಶಿವಸಮುದ್ರ' ಎಂಬ ಪರ್ಯಾಯನಾಮವಿದ್ದಂತಾಗುತ್ತದೆ. ಬೇರಿಕೆ ಸ್ಥಳದ ಶಿವಾಲಯಕ್ಕೆ ದತ್ತಿ ನೀಡಿರುವ ೧೩ನೇ ಶತಮಾನದ ಶಾಸನವೊಂದರಲ್ಲಿ[೩೨] ನುಳಂಬಸಮುದ್ರ ಮತ್ತು ಮಾಚ್ಚಸಮುದ್ರ ಎಂಬ ಹೆಸರಿನ ಕೆರೆಗಳ ಉಲ್ಲೇಖ ಬಂದಿದೆ. ಹೀಗೆ ಪೂರ್ವಾದಿರಾಯರ ಆಳ್ವಿಕೆಯ ಕಾಲದಲ್ಲಿ ಅವರ ಆಳ್ವಿಕೆಯ ಪ್ರದೇಶದಲ್ಲಿ ನೀರಾವರಿಗೆ ಸಂಬಂಧಿಸಿದ ಕೃಷಿಕಾರ್ಯ ಸಾಕಷ್ಟು ಪ್ರಗತಿಯಲ್ಲಿದ್ದಿತೆಂದು ತಿಳಿಯುತ್ತದೆ.

ಹೊಯ್ಸಳರ ಮಹಾಮಂಡಲೇಶ್ವರರಾದ ಪೂರ್ವಾದಿರಾಯರು ಪ್ರಾಚೀನ ಗಂಗವಾಡಿ ಪ್ರದೇಶಕ್ಕೆ ಸೇರಿದ ಮೊರಸುನಾಡು ಮತ್ತು ಮಾಸಂದಿನಾಡುಗಳ ಪ್ರದೇಶಗಳಲ್ಲಿ ೧೨ರಿಂದ ೧೪ನೇ ಶತಮಾನದ ಅವಧಿಯಲ್ಲಿ ಹೆಚ್ಚು ಸ್ವಾಯತ್ತತೆಯನ್ನು ಪಡೆದು ಬಹುಮಟ್ಟಿಗೆ ಸ್ವತಂತ್ರ ವ್ಯಕ್ತಿತ್ವವುಳ್ಳ ಮಂಡಳೇಶ್ವರರಾಗಿ, ಪ್ರಬಲರಾಗಿದ್ದು ಸಾಕಷ್ಟು ಜನೋಪಕಾರಿ ಕಾರ್ಯಗಳನ್ನು ನಿರ್ವಹಿಸಿದ್ದರು.

ಇವರು ಕೋಲಾರ ಪ್ರದೇಶದ ಪ್ರಾಯಶಃ ಗಂಗ ಪೆರಮಾಳ್ ವಂಶೀಯರಂತೆ ಪ್ರಾಚೀನ ಗಂಗವಂಶೀಯರ ಸಂತತಿಗೇ ಸೇರಿರಬೇಕೆಂಬ ಸಂಗತಿ ಅವರ ಶಾಸನಗಳ ಅಧ್ಯಯನದಿಂದ ಮನಗಾಣಬಹುದಾಗಿದೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. *ARIE,* 1969-70/B 282.
*೨. ಅದೇ, B261.
*೩. ಅದೇ, B297.
*೪. ಅದೇ, B262.
*೫. ಅದೇ 1970-70/B461.
*೬. **ಎಪಿಗ್ರಾಫಿಯ ಕರ್ನಾಟಕ**, ಸಂ. IX, ಮಾಲೂರು 78, (ರೈಸ್ ಆವೃತ್ತಿ).
*೭. ಅದೇ, ಸಂ, ಬೆಂಗಳೂರು 99.
*೮. *ARIE,* 1969-70/B262.
*೯. ಎ. ಕ. ಸಂ, IX, ಬೆಂಗಳೂರು 99, ಆನೇಕಲ್ 30.
*೧೦. ಅದೇ, ಬೆಂಗಳೂರು 98, 99, 100, 114, 115, 85b, ಆನೇಕಲ್ 41 ಮುಂತಾದವು.
*೧೧. ಅದೇ, ಪ್ರವೇಶಿಕೆ ಪು. (2).
*೧೨. ಅದೇ, ಹೊಸಕೋಟೆ 162a.
*೧೩. ಅದೇ, ಆನೇಕಲ್ 94.
*೧೪. *ARIE*, 1969-70/B261.
*೧೫. ಅದೇ, 1970-71/B488.
*೧೬. ಅದೇ, 1969-70/B261.
*೧೭. ಅದೇ, B262.
*೧೮. ಎ.ಕ. ಸಂ. IX, ಆನೇಕಲ್ 78.
*೧೯. *ARIE*, 1970-71/B 487.
*೨೦. ಎ.ಕ. ಸಂ. IX, ಬೆಂಗಳೂರು 98.
*೨೧. *ARIE* - 1970-71/B 483.
*೨೨. ಎ.ಕ. ಸಂ. IX, ಬೆಂಗಳೂರು 99, 100
*೨೩. ಅದೇ, ಆನೇಕಲ್ 41.
*೨೪. ಅದೇ, 68.
*೨೫. ಅದೇ, 45.
*೨೬. ಅದೇ, 46a.
*೨೭. *ARIE*-1970-71/B 471.
*೨೮. ಎ. ಕ. ಸಂ. IX, ಮಾಲೂರು 78.
*೨೯. *ARIE*, 1970-71/B483.
*೩೦. ಎ.ಕ. ಸಂ. IX, ಆನೇಕಲ್ 41.
*೩೧. ಅದೇ, 94.
*೩೨. *ARIE* - 1970-71/B474.

ಡಾ| ಭೋಜರಾಜ ಪಾಟೀಲ್*

# ಶಿವಶರಣೆ ಬಿಜ್ಜಮಹಾದೇವಿ ಇತಿವೃತ್ತ

*ಮಾಯಾವಿರಹಿತನಿಗೆ, ತಾಯಿ ತಾನಿಲ್ಲೆಂದು*
*ಒಯ್ಯಾರದಿಂದ ಮೊಲೆಯೂಡಿ ಸಲುಹಿದಾ*
*ತಾಯಿ ಅಮ್ಮವ್ವೆ ಶರಣಾಗು||*

- (ದೇವಿಯ ತ್ರಿವಿಧಿ)

ಹನ್ನೆರಡನೆಯ ಶತಮಾನದ ಪ್ರಾರಂಭಕಾಲದಲ್ಲಿ ಕರ್ನಾಟಕದಲ್ಲಿ ಆಗಿಹೋದ ಶಿವಶರಣೆಯರಲ್ಲಿ ಬಿಜ್ಜಮಹಾದೇವಿಯೂ ಓರ್ವಳು. ಪರಶಿವನನ್ನೇ ಶಿಶುವಾಗಿ ಪಡೆದು ತಾನದಕ್ಕೆ ತಾಯಿಯಾಗಿ ಪೋಷಿಸಿದಳೆಂಬ ಕಥೆಯ ಕಾರಣದಿಂದ ಇವಳು ಪ್ರಾಮುಖ್ಯ ಪಡೆದಿದ್ದಾಳೆ. ಮುಗ್ಧ ಭಕ್ತಿಗೆ ಇವಳೊಂದು ಶ್ರೇಷ್ಠ ನಿದರ್ಶನ. ಇಂಥ ಶರಣೆಯ ಚರಿತ್ರೆ ಮೇಲೆ ಹೊಸ ಬೆಳಕು ಬೀರುವುದೆ ಉದ್ದೇಶ.

ಬಿಜ್ಜಮಹಾದೇವಿಯ ಕುರಿತಂತೆ ಕನ್ನಡ ಶಿಷ್ಟಸಾಹಿತ್ಯದಲ್ಲಿ ಮೂರು ಸ್ವತಂತ್ರ ಕಾವ್ಯಗಳು ರಚನೆಯಾಗಿವೆಯಲ್ಲದೆ ಇತರ ಏಳು ಕಾವ್ಯಗಳಲ್ಲಿ ಆನುಷಂಗಿಕವಾಗಿ ಇವಳ ಚರಿತ್ರೆಯು ಉಕ್ತವಾಗಿದೆ. ಕನ್ನಡ ಜನಪದ ಸಾಹಿತ್ಯದಲ್ಲಿಯೂ ಒಂದು ಸ್ವತಂತ್ರ ಕಿರು ಕಾವ್ಯ ಹಾಗೂ ಒಂದು ಯಕ್ಷಗಾನ ಸೃಷ್ಟಿಯಾಗಿದೆ.

*ಚಾರಿತ್ರಿಕ ವಿವರಗಳು*

*೧. ಹರಿಹರಕವಿಯ 'ಅಮ್ಮವ್ವೆರಗಳೆ', ಬಿಜ್ಜಮಹಾದೇವಿ ಕುರಿತಂತೆ ಕನ್ನಡದ ಪ್ರಥಮ ಸ್ವತಂತ್ರ ಕಾವ್ಯ. ಹರಿಹರ ಈ ರಗಳೆಯಲ್ಲಿ ಎಲ್ಲಿಯೂ ಅಮ್ಮವ್ವೆಯನ್ನು ಬಿಜ್ಜಮಹಾದೇವಿ ಎಂದು ಕರೆದಿರುವುದಿಲ್ಲ. ಹರಿಹರ ಹೇಳುವಂತೆ ಅಮ್ಮವ್ವೆಯ ತಂದೆ ತಾಯಿಗಳು ಶಂಕರ - ಭಾಗೀರಥಿ. ಇವರು ಹಂಪೆಯ ಉತ್ತರದ ಬಿಜ್ಜಾವರದವರು. ಕವಿ ವಿಶೇಷವಾಗಿ ಶಿವನನ್ನು ನಾಗಭೂಷಣ ಸರ್ಪಭೂಷಣ ಎಂದು ಸ್ತುತಿಸಿದ್ದಾನೆ. ಅಮ್ಮವ್ವೆ ಶಿಶುವಿಗೆ 'ನಾಗೇಶ'ಎಂದು ಹೆಸರಿಡುತ್ತಾಳೆ. ಗಂಡನನ್ನು ಕಳೆದುಕೊಂಡು ರಾಟೆಯ ಕಾಯಕದಿಂದ ಜೀವಿಸುತ್ತಾಳೆ.*

*೨. ಹರಿಹರ ಕವಿಯ ಅನಂತರ ಒಂದು ಶತಮಾನದ ಮೇಲೆ ಅಂದರೆ ಕ್ರಿ.ಶ. ೧೨೯೦ರ ಸುಮಾರಿನಲ್ಲಿ ತ್ರಿಭುವನತಾತ 'ಅಮ್ಮವ್ವೆಯ ರಗಳೆ'ಯನ್ನು ಬರೆದಿರುತ್ತಾನೆ. ಈತನೂ ಅಮ್ಮವ್ವೆಯ ಊರನ್ನು ಬಿಜ್ಜಾವರವೆಂದು ಗುರುತಿಸಿ ಅದು ಅಗ್ರಹಾರವಾಗಿತ್ತೆಂಬ ವಿಶೇಷ ಸಂಗತಿಯನ್ನು ಹೆಚ್ಚಿನದಾಗಿ ಪ್ರಕಟಿಸುತ್ತಾನೆ.*

*೩. ಅಮ್ಮವ್ವೆ ಕುರಿತು ಮೂರನೆಯ ಸ್ವತಂತ್ರ ಕೃತಿ ಒಂದು ಸಾಂಗತ್ಯ ಕಾವ್ಯವಾಗಿದೆ. ಕವಿ ಬೆಣ್ಣೆಯ ದೇಶಿಕ. ಈತನ ಕಾಲ ಕ್ರಿ.ಶ. ೧೭೦೦. ಈ ಕೃತಿ ನನಗೆ ಪರಿಶೀಲನೆಗೆ ದೊರೆಯಲಿಲ್ಲ.*

*೪. ಭೀಮ ಕವಿಯ (ಕ್ರಿ.ಶ. ೧೩೬೯) ಬಸವ ಪುರಾಣವು ಅಮ್ಮವ್ವೆ ಕಥೆಯನ್ನು ಆನುಷಂಗಿಕವಾಗಿ ಹೇಳುವ ಪ್ರಥಮ ಪುರಾಣ ಕಾವ್ಯವಾಗಿದೆ. ಈ ಕವಿ ಬಿಜ್ಜಮಹಾದೇವಿಯ ತಂದೆ-ತಾಯಿ ದೇಶ-ಗ್ರಾಮ ಮುಂತಾದ ವಿವರಗಳ ಬಗೆಗೆ ಮೌನವಾಗಿದ್ದಾನೆ. ಅವಳ ಮುಗ್ಧ ಭಕ್ತಿ ಪ್ರದರ್ಶನವೆ ಕಾವ್ಯದ ಪರಮೋದ್ದೇಶ. ಇಲ್ಲಿ ಬಿಜ್ಜಮಹಾದೇವಿ ಹಾಗೂ ಅಮ್ಮವ್ವೆ ಎಂಬ ಎರಡೂ ಹೆಸರುಗಳು ಹೇಳಲ್ಪಟ್ಟಿವೆ.*

*೫. ೧೬ನೆಯ ಶತಮಾನದ ಉತ್ತರಾರ್ಧದಲ್ಲಿ ಆಗಿಹೋದ ಕವಿ ಸಿದ್ಧನಂಜೇಶ 'ಗುರುರಾಜ ಚಾರಿತ್ರ' ದಲ್ಲಿ ಬಿಜ್ಜ ಮಹಾದೇವಿಗೋಸಗ ಒಂದು ಪದ್ಯವನ್ನು ಮೀಸಲಿರಿಸಿದ್ದಾನೆ. ಆದರೆ ವಿವರಗಳು ಇಲ್ಲ.*

*೬. ಕ್ರಿ.ಶ. ೧೬೦೦ರಲ್ಲಿ ರಚಿತವಾದ ಉತ್ತರದೇಶದ ಬಸವಲಿಂಗ ಕವಿಯ ಕಥಾಸಾಗರ ಕೃತಿಯಲ್ಲಿ ಹರಿಹರನ ರಗಳೆಯ ಪ್ರಭಾವವನ್ನೇ ಕಾಣುತ್ತೇವೆ. ಬಿಜ್ಜಮಹಾದೇವಿಯ ಮೂಲ ಹೆಸರು 'ಅಮ್ಮವ್ವೆ'. ಹಾಗೂ ಅವಳು ವೀರಶೈವ ದೀಕ್ಷೆ ಹೊಂದಿದಳೆಂಬ ಎರಡು ಹೆಚ್ಚಿನ ವಿಚಾರಗಳನ್ನು ಇಲ್ಲಿ ಕಾಣುತ್ತೇವೆ. ಇವಳು ವಿವಾಹವಾಗಿ ತಿಂಗಳೊಂದು ಕಳೆಯುವುದರಲ್ಲಿಯೇ ಪತಿಯನ್ನಷ್ಟೇ ಅಲ್ಲ ತಂದೆ ತಾಯಿಗಳನ್ನು ಕಳೆದುಕೊಂಡಳೆಂದು ಹೇಳುತ್ತಾನೆ.*

*೭. ಕ್ರಿ.ಶ. ೧೬೭೨ರ 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ' ಕವಿ ಶಾಂತಲಿಂಗದೇಶಿಕ ಬಿಜ್ಜಮಹಾದೇವಿ ಕುರಿತು ಬರೆದ್ದಾನೆ. ಯಾವ ವಿಶೇಷಾಂಶಗಳು ಇದರಲಿಲ್ಲ.*

*೮-೯. ಮೇಲಿನ ಕಾವ್ಯಗಳಲ್ಲದೆ 'ಗಣಸಹಸ್ರ ನಾಮಾವಳಿ'ಯಲ್ಲಿ ಬಿಜ್ಜವ್ವೆ ಹೆಸರೂ 'ದೇವಿಯರ ತ್ರಿವಿಧಿ'ಯಲ್ಲಿ ಒಂದು ತ್ರಿಪದಿಯೂ ಕಂಡುಬರುತ್ತವೆ. ಇವುಗಳಲ್ಲಿ ಸಹ ಏನೂ ವಿಶೇಷವಿಲ್ಲ.*

*೧೦. ಅಮ್ಮವ್ವೆ ಅನಂತರ ಸು. ೬೦೦ ವರ್ಷಗಳು ಕಳೆದ ಮೇಲೆ ಆಗಿಹೋದ ಚನ್ನಪ್ಪಕವಿ 'ಶರಣಲೀಲಾಮೃತ' ದಲ್ಲಿ ಬಿಜ್ಜವ್ವೆ ಚರಿತ್ರೆಗೆ ಚಾರಿತ್ರಕವೆನಿಸುವಂಥ ಹೊಸ ಸಂಗತಿಗಳನ್ನು ಜೊಡಿಸುತ್ತಾನೆ.*

ಈ ಕವಿ ಹೇಳುವಂತೆ ಬಿಜ್ಜಮಹಾದೇವಿಯ ಮೂಲನಾಮ ಮಹಾದೇವಿ. ಅವಳು ಕುಂತಳ ಮೇಲುದೇಶದವಳು. ತಂದೆ ತಾಯಿಗಳನ್ನು ಹೆಸರಿಸುವುದಿಲ್ಲವಾದರೂ ಅವರು ನವಲಕ್ಷ ಸಂಪತ್ತು ಗಳಿಸಿದವರು. ಬಿಜ್ಜಮಹಾದೇವಿ ಮೀಸಲು ಕನ್ಯೆ. ಶಿಶುಗಳ ಮೇಲೆ ಅಪಾರ ಪ್ರೀತಿಯುಳ್ಳವಳು. ಶಿವ ಮತ್ತು ಜಂಗಮರ ಸೇವೆಯಲ್ಲಿ ಇರುವವಳು. ಶಿಶುರೂಪ ತಾಳಿಬಂದ ಶಿವನಿಗೆ

*ವಿಶ್ರಾಂತ ಪ್ರಾಚಾರ್ಯರು, ಹಂಸಬಾವಿ - ೫೮೧೧೦೯, ತಾ., ಹರೇಕೆರೆಯೂರು, ಜಿ., ಹಾವೇರಿ.

'ಹೇರೂರು ಬೊಮ್ಮ'ನೆಂದು ಹೆಸರಿಡುತ್ತಾಳೆ, ರೋಗಗ್ರಸ್ತ ಶಿಶುವನ್ನು ಗುಣಪಡಿಸಲು ಒಂದು ದ್ರವ್ಯ ವೆಚ್ಚಮಾಡಿದಳು.

*ಆಧುನಿಕ ಲೇಖಕರು*

ಕಳೆದ ಶತಮಾನದ ಪ್ರಾರಂಭಕಾಲದಲ್ಲಿ ಗ್ರಂಥಸಂಪಾದನೆ ಹಾಗ ಸಂಶೋಧನಾ ರಂಗಗಳಲ್ಲಿ ಕಾರ್ಯನಿರ್ವಹಿಸಿದ ಹೆಸರಾಂತ ಕನ್ನಡ ಗದ್ಯಲೇಖಕರಾದ ಲಿಂ. ಫ. ಗು. ಹಳಕಟ್ಟಿಯವರು ಹಾಗೂ ಸಾಹಿತ್ಯ ಚರಿತ್ರಕಾರರಾದ ತ.ಸು. ಶಾಮರಾಯರು ಹಾಗೂ ಸಂಶೋಧಕರಾದ ಪ್ರಾ. ಟಿ. ವಿ. ವೆಂಕಟಾಚಲಶಾಸ್ತ್ರೀಯವರು ಬಿಜ್ಜವ್ವೆ ಚರಿತ್ರೆಯನ್ನು ಗದ್ಯದಲ್ಲಿ ನಿರೂಪಿಸಿದ್ದಾರೆ. ಮೊದಲ ಈರ್ವರು ಲೇಖಕರು ಹರಿಹರನನ್ನು ಅನುಸರಿಸಿದ್ದಾರೆ. ಕವಿ ಹೇಳುವ 'ಬಿಜ್ಜವಾರ' ಊರನ್ನು ತಮಕೂರು ಜಿಲ್ಲೆಯ ಬಿಜ್ಜಾವರ ವೆಂದು ನಿರ್ಣಯಿಸಿರುವರಲ್ಲದೆ ಬಿಜ್ಜವ್ವೆಯಿಂದಲೇ ಆ ಊರಿಗೆ ಬಿಜ್ಜಾವರವೆಂದು ಹೆಸರು ಬಂದಿರುವುದಾಗಿ ತರ್ಕಮಾಡಿದ್ದಾರೆ. ಟಿ. ವಿ. ವೆಂಕಟಾಚಲಶಾಸ್ತ್ರೀ ಅವರು ಕರ್ನಾಟಕ ಕವಿಚರಿತ್ರೆಯಲ್ಲಿ ಹೇಳಲಾದ ಬಿಜ್ಜಳದೇವಿ (ಕ್ರಿ.ಶ. ೧೧೬೦) ಯನ್ನು ಬಿಜ್ಜ ಮಹಾದೇವಿಯೆಂದು ಒಪ್ಪಿದ್ದಾರೆ. ಕದಿರೆ ಕಾಯಕದ ಅಮ್ಮವ್ವೆಯೂ ಇವಳೂ ಅಭಿನ್ನರೆಂದು ನಿರ್ಣಯಿಸಿದ್ದಾರೆ. ಬಿಜ್ಜಮಹಾದೇವಿಯನ್ನು ವಚನಕಾರ್ತಿಯನ್ನಾಗಿಸಿರುವುದೂ ಇವರ ಒಂದು ವಿಶೇಷ.

ಬಿಜ್ಜಮಹಾದೇವಿ ಕುರಿತು ಬರೆದಂತ ಪ್ರಾಚೀನ ಕವಿಗಳನ್ನು ಹಾಗೂ ಆಧುನಿಕ ಗದ್ಯಲೇಖಕರನ್ನು ಹೊರತುಪಡಿಸಿದರೆ. ಲಿಂ. ಬಿ. ಎಸ್. ಗದ್ದಿಗಿಮಠರು ಸಂಪಾದಿಸಿರುವ 'ನಾಲ್ಕು ನಾಡಪದಗಳು' ಸಂಕಲನದಲ್ಲಿ ಬಿಜ್ಜಮಹಾದೇವಿ ಕುರಿತಂತೆ ಜನಪದ ಕಥನಕವನವೊಂದು ಇದೆ. ಇದರಲ್ಲಿ ಕಂಡುಬರುವ ಕೆಲವು ಸಂಗತಿಗಳು ಬಿಜ್ಜಮಹಾದೇವಿ ಚರಿತ್ರೆಗೆ ಹೊಸ ಬೆಳಕು ಚೆಲ್ಲುತ್ತವೆ.

ಜನಪದ ಕವಿ ಬಿಜ್ಜಮಹಾದೇವಿಯ ತಂದೆ-ತಾಯಿಗಳ ಹೆಸರು ಹೇಳುವುದಿಲ್ಲ. ಇವಳು ಕುಂತಳ ದೇಶದ ಶಿವಪುರದವಳು. ಬಿಚ್ಚರ ವಂಶಕ್ಕೆ ಸೇರಿದವಳು. ಹೆಸರು ಮಾಯಾದೇವಿ ಎನ್ನುತ್ತಾನೆ. ಈ ಸಂಗತಿಗಳು ಚರಿತ್ರೆಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿವೆ.

ಇದುವರೆಗೆ ಬಿಜ್ಜಮಹಾದೇವಿ ಚರಿತ್ರೆಗೆ ಸಂಬಂಧಿಸಿದಂತೆ ಉಪಲಬ್ದ ಸಂಗತಿಗಳಲ್ಲಿ ಹರಿಹರಕವಿ, ಜನಪದ ಕವಿ, ಚನ್ನಪ್ಪಕವಿ ಇವರು ಇತ್ತಂಥವು ಪರಿಶೀಲನಾರ್ಹವಾಗಿವೆ. ಈ ಮೂವರಲ್ಲಿ ಹರಿಹರನ ವಿವರಗಳು ಮಾತ್ರ ಬೇರೆಯಾಗಿವೆ. ಉಳಿದೀರ್ವರ ವಿವರಗಳು ಒಂದಕ್ಕೊಂದು ಪೂರಕವಾಗಿವೆ.

ಹರಿಹರ ಕವಿ ಮಹಾದೇವಿ ಹೆಸರಿಗೆ ವಿಶೇಷಣವಾಗಿರುವ 'ಬಿಜ್ಜ' ಪದವನ್ನು ಒಂದು ಊರ ಹೆಸರೆಂದು ಭಾವಿಸಿ ಅವಳ ಊರು ಬಿಜ್ಜಾವರವೆಂದು ಹೇಳಿದ್ದಾನೆ. ಹಾಗೂ ಅದು ಹಂಪಿಯಿಂದ ಉತ್ತರದಿಕ್ಕಿನಲ್ಲಿದೆಯೆಂದು ಸ್ಥಾನ ನಿರ್ದೇಶನ ಮಾಡುತ್ತಾನೆ. ಇದನ್ನೇ ಅನುಸರಿಸಿದ ಹಳಕಟ್ಟಿಯವರು ಬಿಜ್ಜಾವರ ಊರನ್ನು ತುಮಕೂರು ಜಿಲ್ಲೆಗೆ ಸೇರಿಸಿ ಹೇಳಿದರೆ. ತ. ಸು. ಶಾಮರಾಯರು ಮೈಸೂರು ದೇಶಕ್ಕೆ ಸೇರಿಸಿ ಹೇಳಿದ್ದಾರೆ. ಹರಿಹರ ಕವಿ ಬಿಜ್ಜಾವರ ಊರನ್ನು ಹಂಪಿಯ ಉತ್ತರ ದಿಕ್ಕಿನಲ್ಲಿರುವುದಾಗಿ ಹೇಳಿದ್ದರೂ ಇವರು ಅದನ್ನು ಗಮನಿಸಲೇ ಇಲ್ಲ. ಆದ್ದರಿಂದ ಹರಿಹರನನ್ನು ಅನುಸರಿಸಿಯೂ ಇವರ ಆಲೋಚನೆ ಬೇರೆ ಆಯಿತು. ಇವರು ಹೇಳುವ ಬಿಜ್ಜಾವರವು ಹಂಪಿಯಿಂದ ದಕ್ಷಿಣಕ್ಕೆ ಇದೆ. ಹರಿಹರನ ಹೇಳಿಕೆಗೆ ಇದು ತದ್ವಿರುದ್ಧವಾಯಿತು. ಈ ಕಾರಣದಿಂದ ಇವರು ಹೇಳುವ ಬಿಜ್ಜಾವರವು ಶರಣೆ ಬಿಜ್ಜಮಹಾದೇವಿಯ ಊರಾಗಲು ಸಾಧ್ಯವೇ ಇಲ್ಲ. ಆದರೆ ಬಿಜ್ಜಾವರಕ್ಕೆ ಸಮೀಪವಿರುವ ಸಿದ್ದಾಪುರ ಗ್ರಾಮದಲ್ಲಿ ಅಮ್ಮವ್ವೆಯ ಗುಡಿ ಇದೆಯೆಂದು ತಿಳಿದುಬಂದಿದೆ. ಈ ಅಮ್ಮವ್ವೆ, ಬಿಜ್ಜವ್ವೆಯಿಂದ ಬೇರೆಯಾದ ಮತ್ತೋರ್ವಳು ಆಗಿರುವಂತಿದೆ. ಹರಿಹರ ಕವಿಯ ವಿವರಗಳಲ್ಲಿ ಚರಿತ್ರೆಗಿಂತ ಕಲ್ಪನೆಗೇ ಹೆಚ್ಚಿನ ಆಸ್ಪದವಿರುವುದರಿಂದ ಉಳಿದೀರ್ವರು ಕೊಡುವ ವಿವರಗಳತ್ತ ಹೆಚ್ಚಿನ ಗಮನ ಹರಿಸ ಬೇಕಾಗುತ್ತದೆ. ಇದಕ್ಕೆ ಕಾರಣಗಳು ಇವೆ.

ಬಿಜ್ಜಮಹಾದೇವಿ ಚರಿತ್ರೆ ನಿರೂಪಿಸುವಲ್ಲಿ ಜನಪದಕವಿ ಹಾಗೂ ಚನ್ನಪ್ಪ ಕವಿ ಕೊಡುವ ಕುಂತಳ ಮೇಲುದೇಶ, ಶಿವಪುರ, ಬಿಚ್ಚವಂಶ, ಮೂಲ ಹೆಸರು ಮಾದೇವಿ ಎಂಬುದು ಪ್ರಮುಖ ಪಾತ್ರ ವಹಿಸುತ್ತವೆ. ಸಂಶೋಧನೆಯ ಈ ಹಂತದಲ್ಲಿ ನನ್ನ ಮಹಾಪ್ರಬಂಧ 'ನಾಗರಖಂಡ-೨೦ ಒಂದು ಅಧ್ಯಯನ', ನೆರವಿಗೆ ಬರುತ್ತದೆ.

ನಾಗರಖಂಡವು ಪ್ರಾಚೀನ ರಾಜಕೀಯ ಆಡಳಿತ ವಿಭಾಗ ಗಳಲ್ಲಿ ಬನವಾಸಿ ೧೨೦೦೦ ಮಂಡಲದಲ್ಲಿಯ ಒಂದು ಸುಪ್ರಸಿದ್ಧ ಕಂಪಣ. ಇಂಥ ನಾಗರಖಂಡವನ್ನು ಒಳಗೊಂಡ ಬನವಾಸಿ ಮಂಡಲವು ಕುಂತಳ ದೇಶದ ಮಂಡಲಗಳಲ್ಲಿಯೇ ಸುಪ್ರಸಿದ್ಧ ವಾದದ್ದು. ಬನವಾಸಿಗೆ ಹತ್ತಿಕೊಂಡೇ ಇರುವ ನಾಗರಖಂಡ ನಾಡು ಕುಂತಳದೇಶದ ಮೇಲ್ಭಾಗದಲ್ಲಿಯೇ ಬರುತ್ತದೆ (ಕುಂತಳ ದೇಶದ ಆರಂಭಿಕ ರಾಜಧಾನಿ ನಾಗರಖಂಡರ ಒಂದು ಗ್ರಾಮದ ಕುಪ್ಪಟೂರು ಆಗಿದ್ದಿತು). ಜನಪದ ಕವಿ ಹಾಗೂ ಚನ್ನಪ್ಪ ಕವಿಗಳು ಹೇಳುವ ಕುಂತಳ ದೇಶದ ಮೇಲ್ಭಾಗ ಇದೇ ಆಗಿದೆ. ಹರಿಹರ ಕವಿಯೂ ಹಂಪಿಯ ಉತ್ತರಕ್ಕೆ ಎಂದು ಹೇಳುವಾಗ ಉತ್ತರ ಪದವನ್ನು ಮೇಲ್ಭಾಗ ಎಂಬರ್ಥದಲ್ಲಿ ಬಳಸಿರುವ ಸಾಧ್ಯತೆಯೂ ಇಲ್ಲದಿಲ್ಲ. ಅಲ್ಲದೆ ಹರಿಹರಕವಿ ಶಿವನನ್ನು ವರ್ಣಿಸುವಾಗ ನಾಗ, ಸರ್ಪಗಳನ್ನು ವಿಶೇಷವಾಗಿ ಬಳಸಿರುವುದನ್ನೂ ಅಮ್ಮವ್ವೆ ಕೂಸಿಗೆ ನಾಗೇಶ ಎಂದೇ ನಾಮಕರಣ ಮಾಡುವುದನ್ನು ಗಮನಿಸಿದಾಗ ಕವಿಯು ನಾಗರಖಂಡವನ್ನೆ ಗಮನದಲ್ಲಿಟ್ಟುಕೊಂಡು ಹೇಳಿರುವನೋ ಎಂದು ಭಾಸವಾಗದಿರದು. ತುಮಕೂರು ಜಿಲ್ಲೆಯ ಬಿಜ್ಜಾವರವು ಕುಂತಳ ದೇಶದಲ್ಲಿ ಸೇರುವುದಿಲ್ಲವೆಂಬುದು ನಮಗೆ ತಿಳಿದಿರಬೇಕು.

ನಾಗರಖಂಡನಾಡಿನಲ್ಲಿ ಸಾಮಂತರಾಗಿ ಆಳಿದ ಹಲವಾರು ವಂಶಗಳಲ್ಲಿ ಒಂದು ವಂಶ ಬಿಚ್ಚರವಾಗಿದೆ. ಬಿಚ್ಚವಂಶದ ಚರಿತ್ರೆ ಬಾದಾಮಿ ಚಾಲುಕ್ಯ ದೊರೆ ಕೀರ್ತಿವರ್ಮನ ಕಾಲ (ಕ್ರಿ.ಶ.

೭೫೦)ದಿಂದಲೆ ಪ್ರಾರಂಭವಾಗುತ್ತದೆ. ಶಿಕಾರಿಪುರ ತಾಲೂಕ ಮಲ್ಲೇನಹಳ್ಳಿಯ ಶಿವಾಲಿ ಹಕ್ಕಲದ ಒಂದು ಹೊಸ ಗೋಸಾಸದಲ್ಲಿ **ಶ್ರೀ ದೋಸಿಯರನ್ನನವಾಸಿ ಪನ್ನಿಚ್ಛಾಸಿರಮನಾಳ್ವನ್ನು ವಿಚ್ಚಿರಾ ದೇವಮನ್ ಪೂಡಳ ರೂಪ**........ ಎಂದು ಶಾಸನ ಪಾಠವಿದೆ. ಇಲ್ಲಿಯ ವಿಚ್ಚಿರಾ ಎಂಬುದು ಬಿಚ್ಚಿರು ಎಂಬುದರ ಮೂಲ ರೂಪವೆಂಬಲ್ಲಿ ಸಂಶಯವೆ ಬಾರದು. ಆದೇ ಸ್ಥಳದ ಇನ್ನೂ ಮೂರು ಗೋಸಾಸಗಳಲ್ಲಿ ಬಿಚ್ಚ, ಬಿಚ್ಚರಾ ಎಂಬ ನೇರ ರೂಪಗಳನ್ನೇ ಕಾಣುತ್ತೇವೆ. ಬಿಚ್ಚ ಎಂಬುದು ಒಂದು ವಂಶವೆಂಬುದನ್ನು ಅಲ್ಲಿಯ ೫ನೇಯ ಗೋಸಾಸವು ಬಿಚ್ಚ ಬಿಚ್ಚರಾವಂಶ ಎಂದು ಪ್ರಕಟಿಸುವ ಮೂಲಕ ಸ್ಪಷ್ಟಪಡಿಸುತ್ತದೆ.

'ನಾಗರಖಂಡ -೨೦' ಮಹಾಪ್ರಬಂಧದಲ್ಲಿ ಬಿಚ್ಚರವಂಶದ ಬಗೆಗೆ ವಿಫುಲ ಮಾಹಿತಿ ದೊರೆಯುತ್ತದೆ. ಈ ವಂಶದವರು ಬಾರಂಗಿ ಗ್ರಾಮವನ್ನು ಆಳುತ್ತಿದ್ದುದಾಗಿ ಬಾರಂಗಿಯ ಅನೇಕ ಶಾಸನಗಳಿಂದ ತಿಳಿದು ಬರುತ್ತದೆ. ಈ ಗ್ರಾಮವು ಸದ್ಯ ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನಲ್ಲಿದೆ. ಈ ಗ್ರಾಮದ ಕ್ರಿ.ಶ. ೧೧೧೮ರ ಹಾಗೂ ಇತರ ಹಲವು ಶಾಸನಗಳ ನೆರವಿನಿಂದ ಬಿಚ್ಚರ ವಂಶಾವಳಿಯನ್ನು ಕೆಳಗಿನಂತೆ ಹೊಂದಿಸಿ ಕೊಡಬಹುದಾಗಿದೆ.

| | |
|---|---|
| ಬಿಚ್ಚರ ಎಋುಗ | ಕ್ರಿ.ಶ. ಸುಮಾರು ೯೫೭ |
| \| | |
| ಗುಲುಗ | ಕ್ರಿ.ಶ. ಸುಮಾರು ೧೦೫೦ |
| \| | |
| ಮಲ್ಲ | ಕ್ರಿ.ಶ. ಸುಮಾರು ೧೦೭೫ |
| \| | |
| ಚಟ್ಟ + (ಪ) ಚಟ್ಟವ್ವೆ | ಕ್ರಿ.ಶ. ಸುಮಾರು ೧೧೧೮ |
| \| | |
| ಚೌಡ | ಕ್ರಿ. ಶ. ಸುಮಾರು ೧೧೫೯ ರ ಪೂರ್ವ |
| \| | |
| ಕೇತಗಾವುಂಡ | ಕ್ರಿ. ಶ. ಸುಮಾರು ೧೧೫೯ |
| \| | |
| ಬೊಪ್ಪಗಾವುಂಡ | ಕ್ರಿ.ಶ. ಸುಮಾರು ೧೧೧೨? |

ಹಾವೇರಿ ಜಿಲ್ಲೆ ರಾಣಿಬೆನ್ನೂರು ತಾಲೂಕ ಹೂಲಿಹಳ್ಳಿಯ ಕ್ರಿ.ಶ. ೯೦೭ರ ಒಂದು ಶಾಸನವು ಕನ್ನೆದಾನ ಮಾಡಿದ ಬಿಚ್ಚರ ಕೊಂಡಂಮವನ್ನು ಉಲ್ಲೇಖಿಸಿದೆ. ಈ ವ್ಯಕ್ತಿ ಈ ವಂಶಾವಳಿಯ ಆದಿಯಲ್ಲಿ ಸೇರಬಹುದಾಗಿದೆ.

ಬಿಚ್ಚರು ಕಟ್ಟಾಶೈವರು. ಬಾರಂಗಿ ಶಾಸನಗಳು ಇದನ್ನು ದೃಢಪಡಿಸುತ್ತವೆ. ಇವಲ್ಲದೆ ಹಾವೇರಿ ತಾಲೂಕಿನ ಬಿದರಗಡ್ಡಿ ಗ್ರಾಮದ ಒಂದು ಶಾಸನದಲ್ಲಿ **ಸೋಮೇಶ್ವರ ದಾಸಿಯೆನಿಪಿನಂ ಬಿಚ್ಚರ** ....... ಎಂದು ಉಲ್ಲೇಖವಿದೆ. ಇದು ಸಹ ಮೇಲಿನ ಮಾತಿಗೆ ಒಂದು ಗಟ್ಟಿ ಆಧಾರವಾಗಿದೆ. ಬಿಚ್ಚರು ಬಾರಂಗಿ ಆಳುತ್ತಿದ್ದ ಕಾಲದಲ್ಲಿ ಕ್ರಿ.ಶ. ೧೧೧೮ ರಲ್ಲಿ ಇಲ್ಲಿ ಮಲ್ಲಿಕಾರ್ಜುನ ಶಿವಾಲಯ ನಿರ್ಮಾಣವಾಯಿತು. ಕ್ರಿಯಾಶಕ್ತಿ ಪಂಡಿತ ದೇವರು ಈ ಶಿವಾಲಯದ ಸ್ಥಾನಪತಿಗಳಾಗಿದ್ದರು. ಶೈವರಾದ ಬಿಚ್ಚರ ಹಾಗೂ ಈ ಕಾಳಾಮುಖ ಗುರುವಿನ ಪ್ರಭಾವದಿಂದಾಗಿ ಬಾರರಂಗಿ ಗ್ರಾಮವು ಆ ಕಾಲದಲ್ಲಿ ಪ್ರಮುಖ ಶೈವಕೇಂದ್ರವಾಗಿ ಮೆರೆಯಿತು. ಅಗ್ರಹಾರ ಬ್ರಹ್ಮಪುರಿಗಳು ಬ್ರಾಹ್ಮಣರ ಆಧೀನದಲ್ಲಿದ್ದ ಶಿಕ್ಷಣ ಕೇಂದ್ರವಾಗಿತ್ತು. 'ಶಿವಪುರ'ವು ಶೈವ ವಿದ್ವಾಂಸರ ಅಧೀನದಲ್ಲಿದ್ದ ಶಿಕ್ಷಣಾಕೇಂದ್ರವಾಗಿದ್ದಿತು. ಬಾರಂಗಿಯೂರು ಶೈವರ ಶಿಕ್ಷಣ ಕೇಂದ್ರವಾಗಿ **ಶಿವಪುರ** ಹೆಸರಿನಿಂದ ಸುಪ್ರಸಿದ್ದವಾಗಿತ್ತು ಕ್ರಿ.ಶ. ೧೧೧೮ರ ಬಾರಂಗಿಯದೇ ಆದ ಶಾಸನ ಈ ಮಾತನ್ನು ಸ್ಪಷ್ಟಗೊಳಿಸುತ್ತದೆ.

*ಭವವಸಥಂಗಳಿನಾಗಮ*
*ರವದಿಂ ಪ್ರಮಥರ್ಕಳಿಂದ ವಿಪ್ರಾದಿಗಳಿಂ*
*ದವನೀ ಸಂಸ್ತುತರಿಂದಂ*
*ಶಿವಪುರ ಭಾರಂಗಿಯೂರಸದಳ ಮೆಸಗುಂ॥*

ಈ ಪದ್ಯದಿಂದ ಬಾರಂಗಿಗೇ ಶಿವಪುರವೆಂಬ ಮತ್ತೊಂದು ಹೆಸರು ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ. ಕವಿ ತ್ರಿಭುವನ ತಾತ ಬಿಜ್ಜಮಹಾದೇವಿ ಊರು ಅಗ್ರಹಾರವಾಗಿತ್ತೆಂದು ಹೇಳಿದ್ದಾನೆ. ಶಿವಪುರವನ್ನೆ ಕವಿ ಅಗ್ರಹಾರವೆಂದು ಕರೆದಿರುವಂತಿದೆ. ಜನಪದ ಹಾಗೂ ಚನ್ನಪ್ಪ ಕವಿಗಳು ಹೇಳಿದ ಕುಂತಳ ಮೇಲುದೇಶದ ಶಿವಪುರವು ಬಾರಂಗಿ ಗ್ರಾಮವೆ ಆಗಿದೆ.

ಬಿಜ್ಜಮಹಾದೇವಿ ಹೆಸರಿನಲ್ಲಿ 'ಮಾದೇವಿ' ಎಂಬುದೇ ಮೂಲ ಹೆಸರೆಂದು ಇವರೀರ್ವರ ಕಾವ್ಯಗಳು ಹೇಳಿವೆ ಆದ್ದರಿಂದ 'ಬಿಜ್ಜ' ಎಂಬುದು ಅವಳ ವಂಶದ ಹೆಸರಾಗುತ್ತದೆ. ವಿಚ್ಚ. ಬಿಜ್ಜ. ಬಿಚ್ಚ ಶಬ್ದಗಳು ಒಂದೇ ಮೂಲದವು ಆಗಿರುವುದರಿಂದ ಇವುಗಳಲ್ಲಿ ಅರ್ಥವ್ಯತ್ಯಾಸವಾಗದು.

ಕುಂತಳ ಮೇಲುದೇಶ, ಶಿವಪುರ, ಬಿಚ್ಚವಂಶ ಎಲ್ಲವೂ ಬಾರಂಗಿ ಗ್ರಾಮಕ್ಕೆ ಸಂಬಂಧಿಸಿರುವುದು ಈವರೆಗಿನ ವಿವರಣೆಗಳಿಂದ ವ್ಯಕ್ತವಾಗಿರುವುದರಿಂದ ಬಿಜ್ಜಮಹಾದೇವಿ ನಿಸ್ಸಂಶಯವಾಗಿ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕ ಬಾರಂಗಿ ಗ್ರಾಮಕ್ಕೆ ಸೇರಿದವಳಾಗುತ್ತಾಳೆ.

ಇದೇ ಸಂಶೋಧನೆ ಮುಂದುವರಿಸಿದರೆ ಇನ್ನೂ ಹೆಚ್ಚಿನ ಸಂಗತಿಗಳು ಅವಳ ಚರಿತ್ರೆಗೆ ಸಂಬಂಧಿಸಿದಂತೆ ಆಶ್ಚರ್ಯಕರವಾಗಿ ಬಿಚ್ಚುತ್ತ ಹೋಗುತ್ತವೆ. ಅಲ್ಲದೆ ಬಿಜ್ಜಮಹಾದೇವಿ ಬಾರಂಗಿಯೂರಿಗೇ ಸೇರಿದವಳೆಂದು ಪುಷ್ಟಿಗೊಳ್ಳುತ್ತಲೇ ಹೋಗುತ್ತದೆ.

ಹಿಂದಿನ ವಿವರಣೆಗಳಿಂದ ಬಿಜ್ಜಮಹಾದೇವಿ ಸಾಮಾನ್ಯ ಮನೆತನದಿಂದ ಬಂದವಳಾಗಿರದೆ ಒಂದು ಭವ್ಯ ಪರಂಪರೆಯ

ಬಿಜ್ಜವಂಶದ ಸಾಮಂತ ಮನೆತನಕ್ಕೆ ಸೇರಿದವಳೆಂದು ಸಿದ್ಧವಾಗಿರುತ್ತದೆ. ಅಂತೆಯ ಚನ್ನಪ್ಪ ಕವಿ ಬಿಜ್ಜಮಹಾದೇವಿಯ ತಂದೆ ತಾಯಿ ನವಲಕ್ಷ ಸಂಪತ್ತು ಗಳಿಸಿದ್ದರೆಂದೂ ಮಾದೇವಿ ಕೂಸನ್ನು ಗುಣಪಡಿಸಲು ಒಂದು ಲಕ್ಷ ದ್ರವ್ಯ ಖರ್ಚು ಮಾಡಿದಳೆಂದು ಹೇಳಿರುವುದು ಈ ಹಿನ್ನೆಲೆಯಲ್ಲಿ ಅತ್ಯಂತ ಸಮಂಜಸವೆನಿಸುತ್ತದೆ. ಹರಿಹರ ಹಾಗೂ ಬಸವಲಿಂಗ ಕವಿಗಳು ಹೇಳುವ ಅವಳು ರಾಟಿಯ ಕಾಯಕದಿಂದ ಜೀವಿಸಿದ್ದಳೆಂಬ ಮಾತು ಬಿಜ್ಜವ್ವೆ ವೀರಶೈವ ದೀಕ್ಷೆ ಪಡೆದ ಬಾಳಿದ ಅಪರ ಜೀವನಕ್ಕೆ ಸಂಬಂಧಿಸಿರ ಬಹುದಾಗಿದೆ.

ಬಿಜ್ಜ ಮಹಾದೇವಿ ದೊಡ್ಡ ಸಾಮಂತ ಮನೆತನಕ್ಕೆ ಸೇರಿದವಳಾಗಿದ್ದರಿಂದಲೇ ಅವಳ ಚರಿತ್ರೆಗೂ ವಿಶೇಷ ಪ್ರಾಮುಖ್ಯತೆ ಹಾಗೂ ಪ್ರಚಾರ ದೊರೆತಿರಲೂಬಹುದಾಗಿದೆ.

ಬಿಜ್ಜಮಹಾದೇವಿ ಶಿವ ಹಾಗೂ ಜಂಗಮರ ಸೇವೆಯಲ್ಲಿ ಇದ್ದುದಾಗಿ ಚನ್ನಪ್ಪಕವಿ ಹೇಳುವ ಮಾತು ಅವಳ ಚರಿತ್ರೆಗೆ ಇನ್ನೂ ಹೆಚ್ಚಿನ ಅಂಶಗಳನ್ನು ಸೇರಿಸಲು ಪ್ರೇರೇಪಿಸುತ್ತದೆ. ಬಿಜ್ಜ ಮಹಾದೇವಿ ಜನಿಸಿದ ಕಾಲಕ್ಕಾಗಲೆ ಬಾರಂಗಿಯಲ್ಲಿ ಮಲ್ಲಿಕಾರ್ಜುನ ಶಿವಾಲಯ ನಿರ್ಮಾಣವಾಗಿರಬೇಕು. ಅಲ್ಲದೆ ಸ್ಥಾನಪತಿಗಳಾದ ಕ್ರಿಯಾಶಕ್ತಿ ಪಂಡಿತ ದೇವರು ಸ್ವತಃ ಪಂಡಿತರೂ ತಪಸ್ವಿಗಳು ಆಗಿದ್ದರಿಂದ ಅವರ ಪ್ರಭಾವವು ಆ ಪ್ರದೇಶದ ಜನರ ಮೇಲೆ ಸಾ ಕಷ್ಟು ಆಗಿರುವ ಸಾಧ್ಯತೆ ಇದೆ. ಆದ್ದರಿಂದ ನೂತನ ಶಿವಾಲಯಕ್ಕೆ ಜನರು ಭಕ್ತಿಭಾವದಿಂದ ಹೋಗಿ ಬರುವುದು ನಡೆದಂತಿದೆ. ಬಾರಂಗಿಯನ್ನಾಳಿದ ಬಿಜ್ಜರು ಸಾಮಂತ ದೊರೆಗಳಾಗಿದ್ದರಿಂದ ಅವರೊಂದಿಗೆ ಕ್ರಿಯಾಶಕ್ತಿ ಪಂಡಿತ ದೇವರ ಅನ್ಯೋನ್ಯ ಸಂಬಂಧವು ಬೆಳೆದಿರಬಹುದಾಗಿದೆ. ಬಿಜ್ಜವಂಶದವರಿಗೆ ಕ್ರಿಯಾಶಕ್ತಿ ಪಂಡಿತದೇವರು ಗುರುಸ್ಥಾನದಲ್ಲಿಯೂ ಇದ್ದಿರಬಹುದು. ಈ ಹಿನ್ನೆಲೆಯಲ್ಲಿ ಮಹಾದೇವಿ ಮಲ್ಲಿಕಾರ್ಜುನ ಶಿವಲಿಂಗದಲ್ಲಿ ಹಾಗೂ ಕ್ರಿಯಾಶಕ್ತಿ ಪಂಡಿತದೇವರಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟು ಸೇವೆ ಸಲ್ಲಿಸಿರುವಂತಿದೆ. ಈ ಸಂದರ್ಭ ಹಾಗೂ ಸನ್ನಿವೇಶಗಳು ಮಹಾದೇವಿಯನ್ನು ಆಧ್ಯಾತ್ಮ ಮಾರ್ಗದಲ್ಲಿ ಮುನ್ನಡೆಸಿವೆ. ಆದ್ದರಿಂದಲೆ ಚನ್ನಪ್ಪಕವಿ ಬಿಜ್ಜಮಹಾದೇವಿ ಮೀಸಲು ಕನ್ನೆಯಾಗಿದ್ದಳೆಂದು ಹೇಳಿದ್ದಾನೆ. ಮೀಸಲುಕನ್ನೆ ಎಂದಿರು ವುದರಿಂದ ದೇವಾಲಯದ ಸೇವೆಗಾಗಿಯೆ ಅವಳನ್ನು ಬಿಟ್ಟಿರುವ ಸಾಧ್ಯತೆಯೂ ಇದೆ. ಇದು ಅವರ ಮನೆತನದಲ್ಲಿ ಹೊಸದೇನೂ ಅಲ್ಲ. ಕ್ರಿ.ಶ. ಸುಮಾರು ೯೦೭ರಲ್ಲಿ ಇದ್ದ ಬಿಜ್ಜರ ಕೊಂಡಂಮ ಕನ್ನೆದಾನ ಮಾಡಿದ ಉಲ್ಲೇಖ ಹೂಲಿಹಳ್ಳಿ ಶಾಸನೋಕ್ತವಾಗಿರು ವುದನ್ನು ಹಿಂದೆ ಹೇಳಲಾಗಿದೆ. ಹರಿಹರ ಹಾಗೂ ಬಸವಲಿಂಗ ಕವಿಗಳು ಬಿಜ್ಜಮಹಾದೇವಿಯ ಮದುವೆ ಮಾಡಿಸಿ ಪತಿಯನ್ನು ತಂದೆ ತಾಯಿಗಳನ್ನು ತಿಂಗಳೊಪ್ಪತ್ತಿನಲ್ಲಿಯೇ ಶಿವಾಧೀನರನ್ನಾಗಿಸು ವುದು ಕೇವಲ ಕವಿ ಕಲ್ಪನೆಯನಿಸುತ್ತದೆ.

ಬಿಜ್ಜಮಹಾದೇವಿಯ ಮೂಲ ಹೆಸರು ಜನಪದ ಹಾಗೂ ಚನ್ನಪ್ಪಕವಿಗಳು ಹೇಳುವಂತೆ ಮಹಾದೇವಿ. ಇವಳಿಗೆ ಇದೇ ಹೆಸರನ್ನು ನಾಮಕರಣ ಮಾಡಲು ಕಾರಣವಾದ ಸಂದರ್ಭ ಏನಿರಬಹುದೆಂದು ಒಂದಿಷ್ಟುಯೋಚಿಸಿದರೆ ಬಾರಂಗಿಯಲ್ಲಿ ಮಲ್ಲಿಕಾರ್ಜುನ ಶಿವಾಲಯ ನಿರ್ಮಾಣವಾದ ಕಾಲದಲ್ಲಿಯೇ ಅಲ್ಲಿಯ ಸಾಮಂತ ದೊರೆಗೆ ಇವಳು ಜನಿಸಿದಂತಿದೆ. ಉಡುತಡಿಯ ಸುಮತಿ-ನಿರ್ಮಲಸೆಟ್ಟಿಯರು ಮಲ್ಲಿಕಾರ್ಜುನ (ಪರದೇಶಿ ಮಲ್ಲಪ್ಪ)ನ ಭಕ್ತರಾಗಿದ್ದರಿಂದಲೆ ಮಗಳಿಗೆ ಮಹಾದೇವಿಯೆಂದು ನಾಮಕರಣ ಮಾಡಿದಂತೆ ಬಾರಂಗಿ ಸಾಮಂತ ದೊರೆಯು ಮಾಡಿರ ಬಹುದಾಗಿದೆ. ಇದನ್ನು ನಾವು ಒಪ್ಪಿದಲ್ಲಿ ಬಿಜ್ಜಮಹಾದೇವಿ ಜನನ ಕಾಲವನ್ನು ಕ್ರಿ.ಶ. ಸುಮಾರು ೧೧೧೮ ಎಂದೂ ಆ ಕಾಲಕ್ಕೆ ಇದ್ದ ಸಾಮಂತ ದೊರೆ ಚಟ್ಟ ಹಾಗೂ ಆತನ ಪತ್ನಿ ಚಟ್ಟವ್ವೆಯನ್ನು ತಂದೆಯ ತಾಯಿಗಳೆಂದೂ ಒಪ್ಪಬೇಕಾಗುತ್ತದೆ.

ಚನ್ನಪ್ಪಕವಿ ಹಾಗೂ ಜನಪದ ಕವಿಗಳು ಕೊಟ್ಟ ಸೂಚನೆ ಗಳಿಂದ ಹಾಗೂ ನಾಗರಖಂಡ-೭೦ ಮಹಾ ಪ್ರಬಂಧದ ಆಧಾರದಿಂದ ಇಷ್ಟೊಂದು ಇತಿಹಾಸವನ್ನು ಬಿಜ್ಜಮಹಾದೇವಿ ಬಗೆಗೆ ಸದ್ಯ ರೂಪಿಸಬಹುದಾಗಿ**ದೆ**.



ಡಾ। ಬಸವರಾಜ ಮಲಶೆಟ್ಟಿ*

# ಬಸವಣ್ಣನ ಐಕ್ಯಸ್ಥಳ ಯಾವುದು?

ಬಿಜ್ಜಳನು ಹರಳಯ್ಯ ಮಧುವಯ್ಯಗಳಿಗೆ ಮರಣದಂಡನೆ ಶಿಕ್ಷೆ ವಿಧಿಸಿದ. ರೊಚ್ಚಿಗೆದ್ದ ಶಿವಶರಣರು ಬಿಜ್ಜಳನನ್ನು ಕೊಂದರು. ಕಲ್ಯಾಣದಲ್ಲಿ ಕ್ರಾಂತಿಯಾಯಿತು. ಶರಣ ಸಮೂಹ ತಮ್ಮ ರಕ್ಷಣೆಗಾಗಿ ಚೆನ್ನಬಸವಣ್ಣನ ನೇತೃತ್ವದಲ್ಲಿ ಉಳುವಿಗೆ, ಅಲ್ಲಮನ ನೇತೃತ್ವದಲ್ಲಿ ಒಂದು ಗುಂಪು ಶ್ರೀಶೈಲಕ್ಕೆ ಹೊರಟವು. ಬಸವಣ್ಣ ತನ್ನ ಸಾಧನಾಕ್ಷೇತ್ರ ಕೂಡಲಸಂಗಮಕ್ಕೆ ಬಂದು ಸಂಗಮನಾಥನಲ್ಲಿ ಐಕ್ಯನಾದನು. ಇದಿಷ್ಟು ವೀರಶೈವ ಪುರಾಣ ಕಾವ್ಯಗಳು ನಂಬಿಸಿಕೊಂಡುಬಂದಿರುವ ವಿಷಯ. ಆದರೆ ವಾಸ್ತವ ಸಂಗತಿ ಏನು? ಬಸವಣ್ಣನ ಕೂಡಲ ಸಂಗಮಕ್ಕೆ ಬಂದು ಐಕ್ಯನಾದನೆಂಬುದು ಪ್ರಶ್ನಾರ್ಹವಾಗಿದೆ. ಪಾಲ್ಕುರಿಕೆ ಸೋಮನಾಥ, ಹರಿಹರ, ಭಿಮಕವಿ, ಮೊದಲಾದ ವೀರಶೈವ ಕವಿಗಳು ಒಕ್ಕೊರಲಿನಿಂದ ಹೇಳಿರುವ ಬಸವಣ್ಣ ಸಂಗಮೇಶ್ವರನಲ್ಲಿ ಬೆರೆತು ಐಕ್ಯನಾದ ಎಂಬ ಸಂಗತಿಯನ್ನು ಪರೀಕ್ಷಿಸಿ ನೋಡಬೇಕಾಗಿದೆ. ವಾಸ್ತವವಾಗಿ ಕಲ್ಯಾಣಕ್ರಾಂತಿಯ ನಂತರ ಬಸವಣ್ಣನು ಕೂಡಲಸಂಗಮಕ್ಕೆ ಬಂದು ಐಕ್ಯನಾಗಿಲ್ಲ.

ಶರಣರು ಐಕ್ಯಹೊಂದಿದ ಸ್ಥಳಗಳನ್ನು ಜನತೆ ಅಂದಿನಿಂದಲೂ ಪವಿತ್ರ ಕ್ಷೇತ್ರಗಳೆಂದು ನಂಬಿ ಗೌರವಿಸುತ್ತ ಬಂದಿದೆ. ಉದಾಹರಣೆಗೆ ಉಳುವಿ ಮತ್ತು ಸೊಲ್ಲಾಪುರ. ಚೆನ್ನಬಸವಣ್ಣ ಉಳುವಿಯಲ್ಲಿ ಐಕ್ಯನಾದ ಸ್ಥಳದಲ್ಲಿ ಗದ್ದುಗೆ ನಿರ್ಮಿಸಿ ಪೂಜಿಸುತ್ತ ಬರಲಾಗಿದೆ. ಪ್ರತಿವರ್ಷ ಭಾರತ ಹುಣ್ಣಿಮೆಗೆ ಜಾತ್ರೆ ಸೇರುತ್ತದೆ. ಅದೇ ರೀತಿ ಸೊಲ್ಲಾಪುರದಲ್ಲಿರುವ ಸಿದ್ಧರಾಮನ ಗದ್ದುಗೆ ಪೂಜೆಗೊಳ್ಳಲ್ಪಡುತ್ತಿದೆ. ಈ ಶರಣರಿಬ್ಬರು ಇಲ್ಲಿ ಸಮಾಧಿಗೊಂಡ ಬಗ್ಗೆ ಜನತೆಗೆ ಅಚಲವಿಶ್ವಾಸವಿದೆ. ಪರಂಪರೆಯಿಂದ ಈ ವಿಶ್ವಾಸವನ್ನು ಉಳಿಸಿಕೊಂಡು ಬರಲಾಗಿದೆ. ಆದರೆ ಕೂಡಲ ಸಂಗಮದ ವಿಷಯವೇ ಬೇರೆಯಾಗಿದೆ.

ಇಂದು ಜಲಾಶಯದ ಮಧ್ಯೆ ಸಿಮೆಂಟ್ ಕೋಟೆಯ ತಳದಲ್ಲಿರುವ ಐಕ್ಯ ಮಂಟಪವು ಬಸವಣ್ಣನ ಸಮಾಧಿಸ್ಥಳವಲ್ಲ. ಇದು ಕೃಷ್ಣ ಮಲಪ್ರಭೆ ಸೇರುವಲ್ಲಿ ಭಕ್ತರು ನಿರ್ಮಿಸಿದ ಒಂದು ಮಾಮೂಲಿ ಮಂಟಪ. ನದಿಗಳ ಸಂಗಮ ಸ್ಥಾನದಲ್ಲಿ ಇಂಥ ಮಂಟಪಗಳಿರುವುದು ಸಾಮಾನ್ಯ. ಇದಕ್ಕೆ ಐಕ್ಯ ಮಂಟಪ ಎಂಬ ನಾಮಕರಣ ಇತ್ತೀಚಿಗೆ ಮಾಡಲಾಗಿದೆ. ಸ್ಥಳೀಯರು ಇದನ್ನು 'ಕೂಡಲಮುಖಿ' ಎಂದು ಕರೆಯುತ್ತಾರೆ. ಇಲ್ಲಿ ಬಸವಣ್ಣನು ಲಿಂಗ ಪೂಜೆ ಮಾಡಿಕೊಂಡನೆಂಬಷ್ಟಕ್ಕೆ ಮಾತ್ರ ಅವರ ನಂಬಿಕೆ ಗೌರವ. ಈ ಮಂಟಪವಾದರೋ ಶ್ರದ್ಧೆಯಿಂದ ಏಕಕಾಲಕ್ಕೆ ನಿರ್ಮಾಣವಾದುದಲ್ಲ. ಅದರ ನುಣುಪು ಕಲ್ಲಿನ ನಾಲ್ಕು ಕಂಬಗಳು ಚಾಲುಕ್ಯ ಶೈಲಿಯ ಯಾವುದೋ ದೇವಸ್ಥಾನದಿಂದ ತಂದಂಥವು. ಮೇಲಿನ ತೊಲೆ ಬೋದಿಗೆ ಭುವನೇಶ್ವರಿಗಳು ಒರಟು ಕಲ್ಲಿನ ರಚನೆಗಳು ಮತ್ತು ಆ ಮೇಲೆ ನಿರ್ಮಿಸಿದಂಥವು. ಮಂಟಪದ ಮಧ್ಯದಲ್ಲಿ ಬಂಡೆಗಲ್ಲಿನಲ್ಲಿ ಜಲಹರಿ ಕೊರೆದು ನಡುವೆ ಶಿವಲಿಂಗವನ್ನು ಕೂಡ್ರಿಸಲಾಗಿದೆ. ಇದು ವಿಶಾಲವಾದ ಹಾಸುಗಲ್ಲು. ಇಂದಿನ ಸಿಮೆಂಟ್ ಗೋಡೆ ನಿರ್ಮಿಸುವುದಕ್ಕಿಂತ ಸ್ವಲ್ಪ ಮೊದಲು ಅಲ್ಲಿಗೆ ಭೇಟಿ ನೀಡಿದ ತರಳಬಾಳು ಜಗದ್ಗುರು ಡಾ। ಶಿವಮೂರ್ತಿ ಶಿವಾಚಾರ್ಯ ಸ್ವಾಮೀಜಿಯವರು 'ಇದರ (ಐಕ್ಯಮಂಟಪದ) ಸುತ್ತ ರಕ್ಷಣೆಗೆಂದು ವೃತ್ತಾಕಾರದ ಗೋಡೆಯನ್ನು ನಿರ್ಮಿಸಲು ಸುಮಾರು ೨೦ ಅಡಿಗಳಿಗೂ ಹೆಚ್ಚು ಆಳವಾದ ತಳಪಾಯವನ್ನು ತೆಗೆದ ಸಂದರ್ಭದಲ್ಲಿ ನಾವು ನೋಡಿದಂತೆ ಮಂಟಪದ ಕೆಳಭಾಗವೆಲ್ಲವು ಗಟ್ಟಿ ಬಂಡೆಯಿಂದ ಕೂಡಿರುವುದರಿಂದ ಇಲ್ಲಿ ಸಮಾಧಿ ಇದೆಯೆಂಬುದನ್ನು ನಂಬುವುದಕ್ಕೆ ಆಗುವುದಿಲ್ಲ' ಎಂದು ಅಭಿಪ್ರಾಯ ಪಟ್ಟಿದ್ದಾರೆ. (ಕೂಡಲ ಸಂಗಮದ ಅಳಿವು ಉಳಿವು ಪುಟ XXXVII). ಇದು ನಂಬತಕ್ಕ ವಾಸ್ತವ ಸಂಗತಿ. ನಿಜವಾಗಿಯೂ ಇಲ್ಲಿ ಬಸವಣ್ಣ ಐಕ್ಯನಾಗಿದ್ದರೆ ಅಲ್ಲಿ ಸಮಾಧಿ ನಿರ್ಮಿಸಿ ಜನ ಪೂಜಿಸುತ್ತಿದ್ದರು ಮತ್ತು ಇದೇ ಬಸವಣ್ಣನ ಸಮಾಧಿ ಎಂದು ಹೇಳುತ್ತಿದ್ದರು. ಇಲ್ಲಿರುವುದು ಸಮಾಧಿಯಲ್ಲ. ಸ್ಥಳೀಯರು ಇದನ್ನು ಬಸವಣ್ಣನ ಸಮಾಧಿಸ್ಥಳವೆಂದು ಎಂದಿಗೂ ನಂಬಿಲ್ಲ.

ಈ ಕ್ಷೇತ್ರದ ಅಧಿದೇವತೆ ಸಂಗಮೇಶ್ವರ, ದೂರದೂರದ ಊರಿನವರಿಗೆಲ್ಲ ಸಂಗಮೇಶ್ವರನು ಮನೆದೇವರಾಗಿದ್ದಾನೆ. ಹರಕೆ ತೀರಿಸಲು ಭಕ್ತರು ನಿರಂತರವಾಗಿ ಬರುತ್ತಿರುತ್ತಾರೆ. ದವನದ ಹುಣ್ಣಿಮೆಯ ನಂತರ ಐದನೇ ದಿನಕ್ಕೆ ಜಾತ್ರೆ ಸೇರುತ್ತದೆ. ರಥೋತ್ಸವ ನಡೆಯುತ್ತದೆ. ಇದೆಲ್ಲ ಸಂಗಮೇಶ್ವರನ ಮೇಲೆ ಜನತೆ-ಇಟ್ಟಿರುವ ಅಪಾರ ಶ್ರದ್ಧೆ. ಇಲ್ಲಿ ಬಸವಣ್ಣನ ಪ್ರಸ್ತಾಪ ಬರುವುದೇ ಇಲ್ಲ. ಸಂಗಮೇಶ್ವರನಿಗೆ ಪೂಜೆ ಕಾಣಿಕೆ ಸಲ್ಲಿಸಿದ ಮೇಲೆ ಜನರು ಐಕ್ಯಮಂಟಪದತ್ತ ನಡೆಯುವರು. ಆಳವಾದ ಸಿಮೆಂಟ್ ಬಾವಿಯಲ್ಲಿರುವ ಈ ಮಂಟಪ ಬಸವಣ್ಣನದೆನ್ನುವ ಬಗ್ಗೆ ಪುರಾವೆ ಸಾಲದು. ಕೂಡಲ ಸಂಗಮ ಬಸವಣ್ಣನ ವ್ಯಕ್ತಿತ್ವದ

*ಹೊಸಪೇಟೆ, ವಿಜಯನಗರ ಕಾಲೇಜು - ೫೮೩ ೨೦೧.

ನಿರ್ಮಾಣದಲ್ಲಿ ಮಹತ್ವದ ಪಾತ್ರ ವಹಿಸಿದ್ದು ನಿಜ. ಅದೊಂದು ಅಗ್ರಹಾರವಾಗಿತ್ತು. ನೂರಾರು ಜನ ವಿದ್ವಾಂಸರು ಅಲ್ಲಿದ್ದರು. ಬಸವಣ್ಣನ ವಿದ್ಯಾರ್ಥಿಜೀವನ ಸಾರ್ಥಕವಾಗಲು ಅದು ಸಹಕರಿಸಿತು. ಬಸವಣ್ಣ ಕಲ್ಯಾಣಕ್ಕೆ ಹೋದ ನಂತರವೂ ಕೂಡಲ ಸಂಗಮದ ಘನತೆ ಹಾಗೇ ಇತ್ತು. ಇಲ್ಲಿಯ ಒಂದು ಶಿಲಾಶಾಸನ (ಕಾಲ ೧೮-೧೦-೧೧೬೦) ಕೂಡ, ಸಂಗಮವು ಒಂದು ಅಗ್ರಹಾರವಾಗಿದ್ದುದನ್ನು ಅಲ್ಲಿ ಸಾಧು ಸತ್ಪುರುಷರು ವಾಸವಾಗಿದ್ದುದನ್ನು, ಸಮೀಪದಲ್ಲಿದ್ದ ಆಚೇಶ್ವರ, ಕಾಲೇಶ್ವರ ದೇವರಿಗೆ ಚುಂಚಿನ ಆದಿಶೆಟ್ಟಿ ಮತ್ತು ಇತರ ವರ್ತಕರು ದಾನದತ್ತಿ ನೀಡಿದುದನ್ನು ತಿಳಿಸುತ್ತದೆ. ೧೧೬೦ ಎಂದರೆ ಬಸವಣ್ಣನು ಕಲ್ಯಾಣದಲ್ಲಿ ಕೀರ್ತಿ-ಯಶಸ್ಸುಗಳ ಶಿಖರಕ್ಕೇರಿದ್ದ ಕಾಲ. ಆದರೆ ಈ ಶಾಸನದಲ್ಲಿ ಬಸವಣ್ಣನ ಹಾಗೂ ಅವನ ಕ್ರಾಂತಿಕಾರಿ ವಿಚಾರಗಳ ವಾಸನೆಯೇ ಇಲ್ಲ. ಕೂಡಲ ಅಂದರೆ ಬಸವಣ್ಣನು ಕೂಡಲಸಂಗಮದಿಂದ ಹೊರಟು ಹೋದ ಮೇಲೆ ಯಾವ ಸಂಪರ್ಕವನ್ನೂ ಇಟ್ಟುಕೊಂಡಿಲ್ಲ. ಅವನು ತನ್ನ ಅಂಕಿತವಾಗಿ ಬಳಸಿಕೊಂಡ ಕೂಡಲ ಸಂಗಮದೇವನು ಮೂಲತಃ ಈ ಕ್ಷೇತ್ರದ ಲಿಂಗ ಸಂಗಮೇಶ್ವರನಾಗಿದ್ದರೂ ನಂತರದ ಅರ್ಥ ಬೇರೆಯಾಗಿದೆ. ನಿರಾಕಾರ ವಿಶ್ವವ್ಯಾಪಿ ಚೈತನ್ಯಶಕ್ತಿಗೆ ಸಂಕೇತವಾಗಿ ಇಷ್ಟಲಿಂಗ ರೂಪದಲ್ಲಿ ಕೂಡಲಸಂಗಮನಿದ್ದಾನೆ. ಅಂದಮೇಲೆ ಬಸವಣ್ಣನಿಗೆ ಸ್ಥಾವರದ ಸಂಗಮಕ್ಷೇತ್ರದ ಸೆಳೆತ ಇದ್ದಿರಲಿಲ್ಲ. ಅವನು ಭಾವುಕನಂತೆ ತನ್ನ ಅಂತ್ಯಕಾಲವನ್ನು ಇಲ್ಲಿ ಕಳೆಯಲು ಸಾಧ್ಯವೇ ಇಲ್ಲ. ಕಲ್ಯಾಣದಲ್ಲಿ ಕ್ರಾಂತಿ ಸಂಭವಿಸಿದ್ದು ೧೧೬೮ರಲ್ಲಿ. ಬಸವಣ್ಣನ ಅಂತ್ಯ ೧೧೮೫ರಲ್ಲಿ. ಮಧ್ಯದ ೧೭ ವರ್ಷಗಳವರೆಗೆ ಬಸವಣ್ಣ ಎಲ್ಲಿದ್ದ? ಹೇಗಿದ್ದ? ಇವು ನಿಗೂಢ ಪ್ರಶ್ನೆಗಳು. ಅವನು ಕೂಡಲ ಸಂಗಮದಲ್ಲಿ ಮಾತ್ರ ಇದ್ದಿರಲಿಲ್ಲ. ಇದಿದ್ದರೆ ಜನರ ನಂಬಿಗೆಯ ಪರಂಪರೆ ಇದನ್ನು ಖಚಿತ ಪಡಿಸುತ್ತಿತ್ತು.



ಹುಲಿಕುಂಟಿಮೂರ್ತಿ*

# ಶ್ರೀ ಕೃಷ್ಣದೇವರಾಯನ ಆಳ್ವಿಕೆಯ ಕಾಲ ಮತ್ತು ಆತನ ಜೀವಿತಾವಧಿ

ವಿಜಯನಗರ ಸಾಮ್ರಾಜ್ಯವನ್ನಾಳಿದ ಪ್ರಸಿದ್ಧ ಚಕ್ರವರ್ತಿ ಶ್ರೀ ಕೃಷ್ಣದೇವರಾಯ ಕ್ರಿ. ಶ. ೧೫೦೯ ರಿಂದ ಕ್ರಿ. ಶ. ೧೫೨೯ ಅಥವಾ ಕ್ರಿ. ಶ. ೧೫೩೦ರ ವರೆಗೆ ಆಳ್ವಿಕೆ ನಡೆಸಿದನೆಂದು ಎಲ್ಲಾ ಚರಿತ್ರಕಾರರ ಅಭಿಪ್ರಾಯ. ಆದರೆ ಶ್ರೀ ಕೃಷ್ಣದೇವರಾಯ ನಿಧನನಾದ ಸಂವತ್ಸರ, ಆತನ ಮತ್ತು ಅಳಿಯಂದಿರರಾದ ರಾಮರಾಯ, ತಿರುಮಲರಾಯ ಅವರುಗಳ ವಯೋಮಿತಿಗಳ ವಿಷಯ ಗಳಲ್ಲಿರುವ ಗೊಂದಲ ಇನ್ನೂ ಸಂಶಯಾಸ್ಪದವಾಗಿದೆ.

ಪೋರ್ಚುಗೀಸು ಯಾತ್ರಿಕ ನ್ಯೂನಿಜ್‌ನ ಪ್ರಕಾರ ಶ್ರೀ ಕೃಷ್ಣದೇವರಾಯ ಪಟ್ಟಕ್ಕೆ ಕ್ರಿ. ಶ. ೧೫೦೯ರಲ್ಲಿ ಬಂದಾಗ ೨೦ ವರ್ಷ ಮೇಲ್ಪಟ್ಟು ವಯಸ್ಸು ಇದ್ದಿತು. ಆತನ ಅಣ್ಣ ವೀರ ಭುಜಬಲರಾಯ ಅಥವಾ ನರಸಿಂಹರಾಯನ ಮಗನಿಗೆ ೮ ವರ್ಷ ವಯಸ್ಸು ಇದ್ದಿತು.

ವೀರಭುಜಬಲರಾಯ ಕ್ರಿ. ಶ. ೧೫೦೩ರ ಸುಮಾರಿಗೆ ತನ್ನ ತಂದೆ ನರಸನಾಯಕನ ನಿಧನಾನಂತರ ಪಟ್ಟಕ್ಕೆ ಬರುತ್ತಾನೆ. ನರಸನಾಯಕ ವಿಜಯನಗರ ಸಿಂಹಾಸನವನ್ನಾಕ್ರಮಿಸಿದರೂ, ಸಾಳ್ವ ನರಸಿಂಹನ ಎರಡನೇ ಮಗನ ಹೆಸರಿನಲ್ಲೇ ರಾಜ್ಯಾಧಿಕಾರ ನಡೆಸುತ್ತಿದ್ದನು. ತುಳುವ ವಂಶದ ಮೊದಲನೇ ಚಕ್ರವರ್ತಿ ಆಗಿ ವೀರಭುಜಬಲರಾಯನೇ ಆಳ್ವಿಕೆ ಪ್ರಾರಂಭಿಸುತ್ತಾನೆ.

ಕ್ರಿ. ಶ. ೧೫೦೯ ವರ್ಷಕ್ಕೆ ವೀರಭುಜಬಲ ನರಸಿಂಹ ರಾಯನಿಗೆ ೮ ವರ್ಷದ ಮಗನಿದ್ದನೆಂದರೆ ಆ ಮಗುವಿನ ಜನನ ಕ್ರಿ. ಶ. ೧೫೦೧ರ ಸುಮಾರಿಗೆ ಅಂದರೆ, ವೀರನರಸಿಂಹ ಪಟ್ಟಕ್ಕೆ ಬರುವುದಕ್ಕೆ ಮುಂಚಿತವಾಗಿಯೇ ಆಗಿರುತ್ತದೆ.

ನರಸನಾಯಕ ಕ್ರಿ. ಶ. ೧೫೦೩ರಲ್ಲಿ ನಿಧನವಾದಾಗ, ಆತನ ವಯಸ್ಸು ಸುಮಾರು ೭೦ ವರ್ಷ ಇರಬಹುದು ಎಂದು ಅಂದುಕೊಂಡರೆ ನರಸನಾಯಕ ಸಾಳ್ವ ನರಸಿಂಹರಾಯನ ಸೇನಾಧಿಪತಿಯಾಗಿ ಮತ್ತು ಸಾಳ್ವ ನರಸಿಂಹ ಚಂದ್ರಗಿರಿ ರಾಜ್ಯವನ್ನಾಳುವಾಗ ಮತ್ತು ವಿಜಯನಗರ ಸಿಂಹಾಸನವನ್ನು ಕ್ರಿ. ಶ. ೧೪೮೨ರ ಸುಮಾರಿಗೆ ಆಕ್ರಮಿಸಿಕೊಳ್ಳುವಾಗ ಬಹಳ ಸಹಾಯ ಮಾಡುತ್ತಾನೆ. ಈ ಕಾಲಕ್ಕೆ ನರಸನಾಯಕನಿಗೆ ೩೫ ವರ್ಷ ಅಥವಾ ೪೦ ವರ್ಷ ಇರಬಹುದೆಂದುಕೊಂಡರೂ, ನರಸನಾಯಕ ಕ್ರಿ. ಶ. ೧೪೩೪-೪೦ ಸುಮಾರಿಗೆ ಜನಿಸಿರಬಹುದೆಂದು ಊಹಿಸುವುದು ಸರಿ ಹೋಗುತ್ತದೆ.

ನಮಗೆ ತಿಳಿದಂತೆ, ನರಸನಾಯಕನಿಗೆ ತಿಪ್ಪಾಂಬಿಕೆ, ನಾಗಾಂಬಿಕೆ ಮತ್ತು ಓಬಲಾಂಬಿಕೆ ಎನ್ನುವ ಪತ್ನಿಯರಿದ್ದರು. ತಿಪ್ಪಾಂಬಿಕೆಗೆ ವೀರನರಸಿಂಹ, ನಾಗಾಂಬಿಕೆಗೆ ಶ್ರೀ ಕೃಷ್ಣರಾಯ ಮತ್ತು ಓಬಾಂಬಿಕೆಗೆ ಅಚ್ಯುತರಾಯ, ರಂಗರಾಯ ಎನ್ನುವ ಪುತ್ರರು ಜನಿಸಿದ್ದರು.

ಸುಮಾರು ೨೫ ವರ್ಷ (ಆಗಿನ ಕಾಲದಲ್ಲಿ ಈ ಅಂತರ ಇನ್ನೂ ಕಡಿಮೆ ಇರಬಹುದು) ಒಂದು ತಲೆಮಾರಿನ ಅಂತರ (Generation) ಅಂತ ಅಂದುಕೊಂಡರೆ ನರಸನಾಯಕನಿಗೆ ಕ್ರಿ. ಶ. ೧೪೬೦-೬೫ರ ಅವಧಿಯಲ್ಲಿ ವೀರನರಸಿಂಹ ಜನಿಸಿರ ಬೇಕು. ವೀರನರಸಿಂಹನಿಗೆ ನಿಧನವಾದಾಗ ೪೫ ಅಥವಾ ೫೦ ವರ್ಷ ಇರಬಹುದು. ಆತನಿಗೆ ೩೫ ವರ್ಷ ವಯಸ್ಸಿನ ನಂತರ ಪುತ್ರ ಜನನವಾಗಿರಬಹುದು.

ಹಾಗಲ್ಲದೆ, ನ್ಯೂನಿಜ್ ಹೇಳುವಂತೆ, ಶ್ರೀ ಕೃಷ್ಣದೇವ ರಾಯನಿಗೆ ಪಟ್ಟಕ್ಕೆ ಬಂದಾಗ ೨೦ ವರ್ಷ ಮೇಲ್ಪಟ್ಟು ವಯಸ್ಸು ಇದ್ದಿತೆಂದರೆ, ಆತನ ಮಲ ಸಹೋದರ ವೀರನರಸಿಂಹನಿಗೆ ನಿಧನದ ಸಮಯದಲ್ಲಿ ೪೫ ಅಥವಾ ೫೦ ವರ್ಷ ಇತ್ತೆಂದು ನಂಬುವುದು ಸರಿಯೆನಿಸುವುದಿಲ್ಲ. ವೀರ ನರಸಿಂಹನ ನಂತರ ಶ್ರೀ ಕೃಷ್ಣರಾಯನೇ ಜನಿಸಿರುವುದರಿಂದ, ಅವರಿಬ್ಬರ ವಯಸ್ಸಿನ ಅಂತರ ೨೫ ಅಥವಾ ೩೦ ವರ್ಷ ಇರುತ್ತದೆ, ಅಂತ ಅಂದುಕೊಳ್ಳುವುದು ಸಮಂಜಸವೆನಿಸುವುದಿಲ್ಲ; ಅಲ್ಲದೆ, ಅಂತರ ಸುಮಾರು ೫ ವರ್ಷ ಇರಬಹುದೆಂದರೆ ವೀರನರಸಿಂಹ ನಿಧನನಾದಾಗ ೨೫ ವರ್ಷ ಅಥವಾ ೨೮ ವರ್ಷದವರಾಗಿದ್ದಿರ ಬೇಕು. ಅಂದರೆ ಆತ ಕ್ರಿ. ಶ. ೧೪೮೦-೮೫ರ ಅವಧಿಯಲ್ಲಿ ಜನಿಸಿರಬೇಕು. ಆದರೆ ಇದು ಮುಂದೆ ಶ್ರೀ ಕೃಷ್ಣರಾಯನ ಜೀವಿತಾವಧಿಯ ವಿಷಯವಾಗಿ ಚರ್ಚಿಸಲ್ಪಡುವ ಸಂಗತಿಗಳಿಗೆ ಸರಿಹೊಂದುವುದಿಲ್ಲ. ಅದಲ್ಲದೆ ಕ್ರಿ. ಶ. ೧೪೮೦-೮೫ರಲ್ಲಿ ಜನನ ಎಂದರೆ, ಕ್ರಿ. ಶ. ೧೫೦೩ಗೆ ವೀರನರಸಿಂಹನಿಗೆ ೧೮ ಅಥವಾ ೨೩ ವಯಸ್ಸು ಆಗಿದ್ದು, ಆ ಸನ್ನಿವೇಶದಲ್ಲಿ ಅಂದರೆ ಕ್ರಿ. ಶ. ೧೫೦೩ಗೆ ಸಾಮ್ರಾಜ್ಯದಲ್ಲಿ ಸಾಳ್ವ ವಂಶದ ಮೇಲೆ ರಾಜಭಕ್ತಿ, ನಿಷ್ಠೆ ಮತ್ತು ತುಳುವ ನರಸನಾಯಕನ ಮೇಲೆ ವಿರೋಧ ಹೆಚ್ಚಿಗೆ ಇರುವಾಗ, ಮಹಾಮಂತ್ರಿ ತಿಮ್ಮರಸು ಅಂಥ ಅನುಭವವಿಲ್ಲದ ೧೮ ಅಥವಾ ೨೩ ವಯಸ್ಸಿನ ವೀರನರಸಿಂಹನನ್ನು ಸಿಂಹಾಸನದ ಮೇಲೆ ಕೂಡಿಸಲು ಸಾಧ್ಯವಿಲ್ಲ ಎಂದು ನಾವು ಊಹಿಸಬಹುದು.

*ಪ್ರವಾಚಕರು, ಅನ್ವಯಿಕ ಭೂವಿಜ್ಞಾನ ವಿಭಾಗ, ಸ್ನಾತಕೋತ್ತರ ಕೇಂದ್ರ, ಸಂಡೂರು.

ಅಂಥಾ ವಿಪತ್ಸಮಯದಲ್ಲಿ ಸಿಂಹಾಸನದಲ್ಲಿ ವಿರಾಜಮಾನ ರಾಗುವವರಿಗೆ ತಕ್ಕಮಟ್ಟಿಗೆ ಪ್ರಪಂಚಾನುಭವ, ರಾಜನೀತಿ ಕೌಶಲ ಇರಬೇಕಾಗುತ್ತದೆ. ಅದಲ್ಲದೆ ಸಿಂಹಾಸನಕ್ಕೆ ಬಂದಾಗ ೧೮, ೨೦ ವಯಸ್ಸು ಇತ್ತೆಂದರೆ ಆತನಿಗೆ ಪುತ್ರ ಜನನವಾದಾಗ ೧೬ ಅಥವಾ ೨೧ ವಯಸ್ಸು ಇರಬೇಕು. ಇದು ಕೂಡ ಶ್ರೀ ಕೃಷ್ಣರಾಯನ ಕಾಲದ ವಿಷಯಗಳಿಗೆ ಸರಿ ಹೊಂದುವುದಿಲ್ಲ. ಅದಲ್ಲದೆ ನರಸ ನಾಯಕನಿಗೆ ೪೫ ಅಥವಾ ೫೦ ವರ್ಷ ಆಗುವವರೆಗೆ ಸಂತಾನವಾಗಲಿಲ್ಲ ಅಂಥ ಊಹಿಸುವುದು ಸರಿ ಆಗುವುದಿಲ್ಲ.

ಆದ್ದರಿಂದ ನರಸನಾಯಕನಿಗೆ ೨೫ ಅಥವಾ ೩೦ ವರ್ಷ ವಯಸ್ಸಿನಲ್ಲಿ ಅಂದರೆ ಕ್ರಿ. ಶ. ೧೪೬೦-೬೫ ಅವಧಿಯಲ್ಲಿ ವೀರನರಸಿಂಹನ ಜನನವಾಗಿರಬೇಕು. ಸಾಳ್ವ ನರಸಿಂಹರಾಯ ವಿಜಯನಗರ ಸಿಂಹಾಸನವನ್ನು ಕ್ರಿ. ಶ. ೧೪೮೨ರ ಸುಮಾರಿಗೆ ವಶಪಡಿಸಿಕೊಳ್ಳುವ ಕಾಲಕ್ಕೆ ನರಸನಾಯಕ ಆತನ ಸೇನಾಧಿಪತಿ ಯಾಗಿ ಎಷ್ಟೋ ವರ್ಷಗಳಿಂದ ಇದ್ದು, ಸಿಂಹಾಸನ ಆಕ್ರಮಿಸುವಲ್ಲಿ ಸಾಳ್ವ ನರಸಿಂಹನಿಗೆ ಸಾಕಷ್ಟು ಸಹಾಯ ಮಾಡುತ್ತಾನೆ. ಆದ್ದರಿಂದ ಆತನ ವಯಸ್ಸು ಚಿಕ್ಕ ವಯಸ್ಸು ಆಗಿರಲಿಕ್ಕೆ ಸಾಧ್ಯವಿಲ್ಲ. ಮಧ್ಯ ವಯಸ್ಕನಾಗಿ ೪೦ರ ಮೇಲ್ಪಟ್ಟು ಇರಬಹುದಾಗಿರುತ್ತದೆ.

ವೀರನರಸಿಂಹ ಜನನ ಕ್ರಿ. ಶ. ೧೪೬೦-೬೫ರ ಅವಧಿ ಎಂಬುದನ್ನು ನಾವು ತರ್ಕಿಸಿದ ಮೇಲೆ, ಆತನ ಮಲ ಸಹೋದರ ಶ್ರೀ ಕೃಷ್ಣರಾಯನ ಜನನ ನಂತರ ೫ ವರ್ಷಗಳಲ್ಲಿ ಆಗಿರಬಹುದು. ಅಂತ ಅಂದುಕೊಳ್ಳಬಹುದು. ಅಂದರೆ ಶ್ರೀ ಕೃಷ್ಣರಾಯ ಕ್ರಿ. ಶ. ೧೪೬೫-೧೪೭೦ ಅವಧಿಯಲ್ಲಿ ಜನಿಸಿರಬಹುದು. ಅಂದರೆ ಶ್ರೀ ಕೃಷ್ಣರಾಯ ಕ್ರಿ. ಶ. ೧೫೦೯ರಲ್ಲಿ ಪಟ್ಟಕ್ಕೆ ಬರುವಾಗ, ಸುಮಾರು ೪೦-೪೫ ವಯಸ್ಸು ಆಗಿರಬಹುದು. ಮಹಾಮಂತ್ರಿ ತಿಮ್ಮರಸು ವೀರನರಸಿಂಹನ ೮ ವರ್ಷದ ಪುತ್ರನಿಗಿಂತ ಪ್ರಬುದ್ಧನಾದ ಸಮರ್ಥನಾದ ೪೦, ೪೫ ವಯಸ್ಸಿನ ಶ್ರೀ ಕೃಷ್ಣರಾಯನನ್ನೆ ಪಟ್ಟಕ್ಕೆ ಆಯ್ಕೆ ಮಾಡಿದನೆಂದು ಅಂದುಕೊಳ್ಳಬಹುದು.

ಈಗ ಮತ್ತೊಂದು ವಿಷಯ: ಶ್ರೀ ಕೃಷ್ಣರಾಯನ ಮಲ ಸಹೋದರರಾದ ಅಚ್ಯುತ, ರಂಗರನ್ನು, ತಿಮ್ಮರಸು ಶ್ರೀ ಕೃಷ್ಣ ರಾಯನ ಪಟ್ಟಾಭಿಷೇಕದ ನಂತರ ಚಂದ್ರಗಿರಿಗೆ ಕಳುಹಿಸಿ, ಗೃಹ ಬಂಧನದಲ್ಲಿ ಇರಿಸುವುದು. ಒಂದು ವೇಳೆ ಪಟ್ಟದ ಕಾಲಕ್ಕೆ ಶ್ರೀ ಕೃಷ್ಣರಾಯನಿಗೆ ೨೦ ವರ್ಷ ಮೇಲ್ಪಟ್ಟು ಮಾತ್ರ ಇದ್ದಿದ್ದರೆ ಆತನ ಸಹೋದರರಿಗೆ ೨೦ ವರ್ಷದೊಳಗೆ ವಯಸ್ಸಿರಬೇಕಾಗುತ್ತದೆ. ತಿಮ್ಮರಸು ಅವರನ್ನು ಚಂದ್ರಗಿರಿಗೆ ಕಳುಹಿಸುವ ಮುಖ್ಯೋದ್ದೇಶ ಅವರು ಪ್ರಬಲರಾಗಿರುವುದರಿಂದ ಮತ್ತು ಸಿಂಹಾಸನಕ್ಕಾಗಿ ಅವರಿಂದ ಶ್ರೀ ಕೃಷ್ಣರಾಯನಿಗೆ ಸ್ಪರ್ಧಿಗಳಾಗಬಾರದೆಂದು ಅವರು ಪ್ರಬುದ್ಧರಾಗಿರದೆ ಚಿಕ್ಕವರಾಗಿದ್ದರೆ, ಅವರು ಸಿಂಹಾಸನಕ್ಕೆ ಪ್ರತಿಸ್ಪರ್ಧಿಗಳೆಂದು ತಿಮ್ಮರಸು ಅಂದುಕೊಳ್ಳುವ ಪ್ರಮೇಯವೇ ಬರುತ್ತಿರಲಿಲ್ಲ.

ಅದಲ್ಲದೆ ನಾವು ವೀರನರಸಿಂಹ, ನರಸನಾಯಕರ ಜನನದ ಕಾಲವನ್ನು ಚರ್ಚಿಸುವಾಗ, ಶ್ರೀ ಕೃಷ್ಣರಾಯನ ನಂತರ ಆತನ ಮಲಸಹೋದರರು ಅಚ್ಯುತ, ರಂಗ; ೫, ೧೦ ವರ್ಷಗಳ ಅಂತರದಲ್ಲಿ ಜನಿಸಿದರೆಂದುಕೊಂಡರೆ ಅಚ್ಯುತ, ರಂಗ ಕ್ರಿ. ಶ. ೧೪೭೦-೮೦ರ ಅವಧಿಯಲ್ಲಿ ಜನಿಸಿರಬೇಕು. ಈ ರೀತಿ ಆದರೂ, ಶ್ರೀ ಕೃಷ್ಣರಾಯನ ಪಟ್ಟದ ಸಮಯದಲ್ಲಿ ಅಚ್ಯುತ, ರಂಗರ ವಯಸ್ಸುಗಳು ೩೫ ಅಥವಾ ೪೦ ವರ್ಷಗಳಿದ್ದು, ಪ್ರಬುದ್ಧ ರಾದ್ದರಿಂದಲೇ ಅವರನ್ನು ರಾಜಧಾನಿಯಿಂದ ಚಂದ್ರಗಿರಿಗೆ ಕಳುಹಿಸಿ ಶ್ರೀ ಕೃಷ್ಣದೇವರಾಯನ ಆಳ್ವಿಕೆ ಪೂರ್ತಿ ಗೃಹಬಂಧನದಲ್ಲಿ ಇಡಲಾಗಿತ್ತು.

ಆದರೆ ಇಲ್ಲಿ ಒಂದು ಪ್ರಶ್ನೆ ಬರುತ್ತದೆ. ನ್ಯೂನಿಜ್ ಶ್ರೀ ಕೃಷ್ಣರಾಯನನ್ನು ಪ್ರತ್ಯಕ್ಷ ಕಂಡವನಲ್ಲ. ಆತ ಶ್ರೀ ಕೃಷ್ಣರಾಯ ಪಟ್ಟಕ್ಕೆ ಬರುವಾಗ ೨೦ ವರ್ಷ ಮೇಲ್ಪಟ್ಟು ವಯಸ್ಸು ಇರಬಹುದೆಂದು ಬರೆದಿರುವನೆಂದರೆ - ಆ ವಿಷಯ ಸ್ವಲ್ಪ ಚರ್ಚಿಸಬೇಕಾಗುತ್ತದೆ. ಫೆರ್ನಾವೋ ನ್ಯೂನಿಜ್ ಕ್ರಿ. ಶ. ೧೫೩೬ ಅಥವಾ ಕ್ರಿ. ಶ. ೧೫೩೭ರ ಸುಮಾರಿಗೆ ವಿಜಯನಗರಕ್ಕೆ ಬಂದು, ತಾನು ಕೇಳಿ ತಿಳಿದು ಕೊಂಡದ್ದನ್ನು ಬರೆದವನು. ಆದರೆ, ಮತ್ತೊಬ್ಬ ಪೋರ್ಚುಗೀಸ್ ಯಾತ್ರಿಕ ಪಯಸ್ ಕ್ರಿ. ಶ. ೧೫೨೦ರ ಸುಮಾರಿಗೆ ಅಂದರೆ, ಶ್ರೀ ಕೃಷ್ಣರಾಯನ ಕಾಲದಲ್ಲಿ ಬಂದಿದ್ದವನು. ಪಯಸ್ ತನ್ನ ಬರಹದಲ್ಲಿ ಶ್ರೀ ಕೃಷ್ಣರಾಯನ ವಯಸ್ಸಿನ ವಿಷಯವಾಗಿ ಹೇಳುವುದಿಲ್ಲ.

ಆದ್ದರಿಂದ ಶ್ರೀಕೃಷ್ಣರಾಯನ ನಿಧನದ ನಂತರ ಬಂದ ಫೆರ್ನಾವೋ ನ್ಯೂನಿಜ್ ಕ್ರಿ. ಶ. ೧೫೩೬-೩೭ರಲ್ಲಿ ಬರೆದಿದ್ದು ತಾನು ಬರುವವರೆಗೆ ನಡೆದ ಚರಿತ್ರೆಯನ್ನು ಕೇಳಿ ತಿಳಿದುಕೊಂಡ ಮೇಲೆ ಶ್ರೀಕೃಷ್ಣರಾಯ ನಿತ್ಯ ವ್ಯಾಯಾಮದಿಂದ ದೇಹದಾರ್ಢ್ಯವನ್ನು ಇಟ್ಟುಕೊಂಡಿದ್ದನೆಂದ ಮೇಲೆ ಆತನು ಪಟ್ಟಕ್ಕೆ ಬರುವಾಗ ಇರುವ ವಯಸ್ಸಿಗಿಂತ ಚಿಕ್ಕವನಾಗಿ ಕಂಡಿರಬಹುದು. ಆ ನೆನಪು ೨೫ ವರ್ಷಗಳ ನಂತರ ದಂತಕಥೆಯಾಗಿ, ನ್ಯೂನಿಜ್ ಬರೆಯುವ ವೇಳೆಗೆ ಭಾವನಾತ್ಮಕವಾಗಿ ಶ್ರೀ ಕೃಷ್ಣರಾಯನನ್ನು ಹೇಳುವವರು ವರ್ಣಿಸಿರಬಹುದು.

ಈಗ ಮತ್ತೊಂದು ವಿಧದಲ್ಲಿ ಶ್ರೀ ಕೃಷ್ಣರಾಯನ ಜೀವಿತ ಕಾಲವನ್ನು ಚರ್ಚಿಸಬಹುದು.

ಶ್ರೀ ಕೃಷ್ಣರಾಯ ತನ್ನ ಇಬ್ಬರು ಕುಮಾರಿಯರನ್ನು ರಾಮರಾಯ ತಿರುಮಲರಾಯರಿಗೆ ಕೊಟ್ಟು ವಿವಾಹ ಮಾಡುತ್ತಾನೆ. ರಾಮರಾಯ ಕ್ರಿ. ಶ. ೧೫೬೫ರಲ್ಲಿ ತಾಳಿಕೋಟೆ ಯುದ್ಧದಲ್ಲಿ ಯುದ್ಧ ಮಾಡುವ ಕಾಲಕ್ಕೆ ೮೦ ವರ್ಷದ ಮುದುಕನಾಗಿದ್ದನೆಂದು ಹೇಳಲಾಗಿದೆ. ಕೌಟೋ ಹೇಳುವ ಪ್ರಕಾರ ರಾಮರಾಯ ೯೬ ವರ್ಷ ಮುದುಕನಾಗಿದ್ದರೂ ೩೦ ವರ್ಷದವನಂತೆ ಧೈರ್ಯಶಾಲಿ ಯಾಗಿದ್ದನಂತೆ (ಎ ಫರ್‌ಗಾಟನ್ ಎಂಪೈರ್ ಪುಟ - ೨೦೩) ವಯಸ್ಸು ಖಚಿತವಲ್ಲದಿದ್ದರೂ, ವೃದ್ಧನಾಗಿದ್ದನೆಂಬುದು ಚಾರಿತ್ರಿಕ ವಾಗಿಯಿದೆ. ಆದ್ದರಿಂದ ರಾಮರಾಯನ ವಯಸ್ಸು ತಾಳಿಕೋಟೆ

ಯುದ್ಧದ ವೇಳೆಗೆ ಕನಿಷ್ಠ ಪಕ್ಷ ಸುಮಾರು ೭೦-೭೫ ವರ್ಷಗಳಿರ ಬಹುದೆಂದು ನಾವು ಊಹಿಸಬಹುದು.

ಈಗ ಶ್ರೀ ಕೃಷ್ಣರಾಯ ಪಟ್ಟಕ್ಕೆ ಬಂದಾಗ (ಕ್ರಿ. ಶ. ೧೫೦೯) ೨೦ ವರ್ಷ ಮೇಲ್ಪಟ್ಟು ಮತ್ತು ಅಂದರೆ ಆತ ನಿಧನನಾದಾಗ ಸುಮಾರು ೪೫ ವರ್ಷದ ಒಳಗೆ ಇರಬೇಕು. ಶ್ರೀ ಕೃಷ್ಣರಾಯ ಒಂದು ವೇಳೆ ಕ್ರಿ. ಶ. ೧೫೬೫ರ ವರೆಗೆ ಬದುಕಿದ್ದಿದ್ದರೆ ಆತನ ವಯಸ್ಸು ಸುಮಾರು ೭೫ ವರ್ಷದ ಮೇಲೆ ಆಗುತ್ತದೆ. ಅಂದರೆ, ಕ್ರಿ. ಶ. ೧೫೬೫ ಸುಮಾರಿಗೆ ರಾಮರಾಯ ಮತ್ತು ಆತನ ಮಾವನಾದ ಶ್ರೀ ಕೃಷ್ಣದೇವರಾಯನ ವಯಸ್ಸುಗಳು ಬಹುಶಃ ಒಂದೇ ಅಂದರೆ ಒಂದು ೫ ವರ್ಷದ ವ್ಯತ್ಯಾಸದಲ್ಲಿ (Same age group) ಆಗುತ್ತದೆ.

ಹಾಗಿದ್ದಾಗ, ಶ್ರೀ ಕೃಷ್ಣದೇವರಾಯ ತನ್ನ ಮಗಳನ್ನು ತನ್ನಷ್ಟೇ ಅಥವಾ ಒಂದು ೫ ವರ್ಷ ಕಡಿಮೆಯಿರುವ ವರನಿಗೆ ಕೊಟ್ಟು ವಿವಾಹ ಮಾಡುತ್ತಾನೆ, ಅಂತ ಹೇಳುವುದು ಅಸಂಗತವಾಗುತ್ತದೆ. ಸಾಮಾನ್ಯವಾಗಿ ತಂದೆ ಮಗ ಅಥವಾ ಮಾವ, ಅಳಿಯ ಇವರಲ್ಲಿ ಕನಿಷ್ಠ ೨೦ ರಿಂದ ೨೫ ವರ್ಷದ ಅಂತರ ಇರುತ್ತದೆ. ಅಂದರೆ ಶ್ರೀ ಕೃಷ್ಣರಾಯ ಕ್ರಿ. ಶ. ೧೫೩೦ರಲ್ಲಿ ನಿಧನನಾದಾಗ ಅಳಿಯ ರಾಮರಾಯನಿಗೆ ೩೫ ವರ್ಷ ಅಥವಾ ೪೦ ವರ್ಷ ಇರಬಹುದು ಎಂದರೆ ಖಚಿತವಾಗಿ ಮಾವನಾದ ಶ್ರೀ ಕೃಷ್ಣದೇವರಾಯನಿಗೆ ೬೦-೬೫ ವರ್ಷ ವಯಸ್ಸು ಆಗಿರಬೇಕಾಗುತ್ತದೆ.

ಅದಲ್ಲದೆ, ಶ್ರೀ ಕೃಷ್ಣದೇವರಾಯ ಪಟ್ಟಕ್ಕೆ ಬಂದಮೇಲೆ ವಿವಾಹ ಮಾಡಿಕೊಂಡನೆಂದ ಮೇಲೆ ಆತನ ಇಬ್ಬರು ಪುತ್ರಿಯರು ಕ್ರಿ. ಶ. ೧೫೧೦ ರಿಂದ ೧೫೧೫ ಅವಧಿಯಲ್ಲಿ ಜನಿಸಿರಬೇಕು. ತನ್ನ ಮಕ್ಕಳಿಗೆ ೧೫ ವರ್ಷ ಆದ ಮೇಲೆ ಲಗ್ನ ಮಾಡಿದನೆಂದರೆ ಸುಮಾರು ಕ್ರಿ. ಶ. ೧೫೨೫-೧೫೩೦ ಅವಧಿಯಲ್ಲಿ ಲಗ್ನ ಮಾಡಿರಬೇಕು. ಈ ಅವಧಿಯಲ್ಲಿ ರಾಮರಾಯ ತಿರುಮಲರಾಯ ಅವರಿಗೆ ೩೫ ವರ್ಷ ಮೇಲ್ಪಟ್ಟು ಇದ್ದುದರಿಂದ ತನ್ನ ಮಗಳಿಗಿಂತ ೨೦ ವರ್ಷ ದೊಡ್ಡವನಿಗೆ ಕೊಡುವ ಅಗತ್ಯ ಶ್ರೀ ಕೃಷ್ಣದೇವ ರಾಯನಿಗೆ ಇಲ್ಲ.

ಇನ್ನು ರಾಮರಾಯ ನಾವು ಚರ್ಚಿಸಿದಂತೆ ಕ್ರಿ. ಶ. ೧೫೬೫ರ ವೇಳೆ ನಿಜವಾಗಿಯೂ ವೃದ್ಧನಾಗಿದ್ದನೆ? ಇಲ್ಲವೆ? -ಎನ್ನುವುದು.

ರಾಮರಾಯ ಶ್ರೀ ಕೃಷ್ಣರಾಯನ ಸೇವೆಗೆ ಬರುವುದಕ್ಕೆ ಮೊದಲು ಗೋಲ್ಕೊಂಡ ನವಾಬ ಕುತುಬ್‌ಷಾ ಸೇವೆಯಲ್ಲಿ ೩ ವರ್ಷಯಿದ್ದು ಸರಿ ಹೋಗದೆ ಬಿಟ್ಟು ವಿಜಯನಗರದ ಸೇವೆಗೆ ಬರುತ್ತಾನೆ. ಅದಲ್ಲದೆ ಶ್ರೀ ಕೃಷ್ಣರಾಯನು, ರಾಮರಾಯ, ತಿರುಮಲ ರಾಯರನ್ನು ಹಲವು ವರ್ಷಗಳು ನೋಡಿ ಪರೀಕ್ಷಿಸಿ ಯೋಗ್ಯರೆಂದು ತಿಳಿದುಕೊಂಡು ಆಮೇಲೆ, ತನ್ನ ಮಕ್ಕಳನ್ನು ಕೊಟ್ಟನೆಂದುಕೊಂಡರೆ, ರಾಮರಾಯ ಶ್ರೀ ಕೃಷ್ಣರಾಯನ ಆಸ್ಥಾನಕ್ಕೆ ಸುಮಾರು ಕ್ರಿ. ಶ. ೧೫೧೫ರ ಸುಮಾರಿಗೆ ಬಂದಿರಬಹುದು. ಇದಕ್ಕೆ ಮುಂಚೆ ಗೋಲ್ಕೊಂಡಾ ನವಾಬನ ಸೇವೆಯಲ್ಲಿ ೩ ವರ್ಷಯಿದ್ದನೆಂದು ಕೊಂಡರೆ ಕ್ರಿ. ಶ. ೧೫೧೦, ೧೫೧೧ ಸುಮಾರಿಗೆ ಗೋಲ್ಕೊಂಡ ದಲ್ಲಿರಬೇಕು. ನವಾಬನ ಸೇವೆಯಲ್ಲಿ ಸೇರಬೇಕಾಗಿದ್ದರೆ ರಾಮ ರಾಯನಿಗೆ ಕ್ರಿ. ಶ. ೧೫೧೦, ೧೫೧೧ರ ಸುಮಾರಿಗೆ ಕನಿಷ್ಠ ೨೦ ವರ್ಷಗಳಾದರೂ ಆಗಿರಬೇಕು. ಅಂದರೆ ರಾಮರಾಯ ಕ್ರಿ. ಶ. ೧೪೯೦ರ ಸುಮಾರಿಗೆ ಜನಿಸಿರಬಹುದಾಗಿದ್ದರೆ ಆತನಿಗೆ ಕ್ರಿ. ಶ. ೧೫೬೫ಕ್ಕೆ ೭೫ ವರ್ಷ ವಯಸ್ಸು ಆಗಿ ಚಾರಿತ್ರಿಕವಾಗಿ ತಾಳಿಕೋಟೆ ಯುದ್ಧದ ವೇಳೆಗೆ ವೃದ್ಧನಾಗಿದ್ದನೆಂದು ಹೇಳಿರುವುದು ಸರಿಹೋಗುತ್ತದೆ.

ಅಳಿಯ ರಾಮರಾಯನ ವಯೋಮಿತಿಯ ಆಧಾರದ ಮೇಲೆ ನೋಡಿದರೂ, ಶ್ರೀ ಕೃಷ್ಣರಾಯನಿಗೆ ಕ್ರಿ. ಶ. ೧೫೩೦ರಲ್ಲಿ ನಿಧನನಾದಾಗ ಸುಮಾರು ೬೦-೬೫ ವಯಸ್ಸು ಆಗಿರಬಹು ದಾಗಿದೆ. ಅಂಥ ನಾವು ಊಹಿಸಬಹುದು.

ಈ ಸಂದರ್ಭದಲ್ಲಿ ಮತ್ತೆ ಒಂದು ಪ್ರಶ್ನೆ ಬರುತ್ತದೆ. ಈಗಾಗಲೇ ನಾವು ತಿಳಿದಂತೆ ಶ್ರೀ ಕೃಷ್ಣರಾಯ ಪಟ್ಟಕ್ಕೆ ಬಂದ ಮೇಲೆ ಲಗ್ನವಾಗಿ, ತನ್ನ ಪುತ್ರಿಯರನ್ನು ಅವರಿಗಿಂತ ಸುಮಾರು ೨೦ ವರ್ಷ ಮೇಲ್ಪಟ್ಟು ವಯಸ್ಸು ಆಗಿರಬಹುದಾದ ರಾಮರಾಯ, ತಿರುಮಲರಾಯರಿಗೆ ಲಗ್ನ ಮಾಡಿ ಕೊಟ್ಟನೆನ್ನುವುದು ಅಸಂಗತ ವಾಗುತ್ತದೆ. ಅದಲ್ಲದೆ ಶ್ರೀ ಕೃಷ್ಣರಾಯನಿಗೆ ನಿಧನವಾದಾಗ ಸುಮಾರು ೬೦-೬೫ ವರ್ಷ ಎಂದರೆ, ಆತ ಪಟ್ಟಕ್ಕೆ ಬರುವಾಗ ಸುಮಾರು ೪೦ ವರ್ಷ ವಯಸ್ಸು ಆಗಿರಬೇಕು. ಅಂದರೆ ಆತನು ಪಟ್ಟಕ್ಕೆ ಬರೋ ವೇಳೆಗೆ ಲಗ್ನವಾಗಿ ಇಬ್ಬರು ಪುತ್ರಿಯರನ್ನು ಪಡೆದಿರಬೇಕು. ಅಂದರೆ ಅವರುಗಳು ಕ್ರಿ. ಶ. ೧೪೯೫-೧೫೦೦ ಅವಧಿಯಲ್ಲಿ ಜನಿಸಿರಬಹುದಾಗಿದೆ. ರಾಮರಾಯ ಗೋಲ್ಕೊಂಡ ನವಾಬನ ಸೇವೆ ಮುಗಿಸಿ, ವಿಜಯನಗರ ಸೇವೆಗೆ ಬಂದು, ಆತನ ಯೋಗ್ಯತೆಗಳನ್ನು ಗಮನಿಸುವ ವೇಳೆಗೆ ಶ್ರೀ ಕೃಷ್ಣರಾಯ ಪಟ್ಟಕ್ಕೆ ಬಂದು ಸ್ವಲ್ಪ ವರ್ಷಗಳಾಗಿರಬಹುದಲ್ಲದೆ ಆತನ ಪುತ್ರಿಯರಿಗೆ ೧೫ ಅಥವಾ ೨೦ ವರ್ಷಗಳ ಒಳಗೆ ಇದ್ದು, ಆ ವೇಳೆಗೆ ರಾಮರಾಯ, ತಿರುಮಲರಾಯ ಅವರುಗಳಿಗೆ ೨೦ ಅಥವಾ ೨೫ ವರ್ಷಗಳಾಗಿ, ವಯಸ್ಸಿನ ವ್ಯತ್ಯಾಸ ಉಂಟಾಗುವುದಿಲ್ಲ.

ರಾಬರ್ಟ್ ಸ್ಯೂಯೆಲ್ ತನ್ನ 'ಎ ಫರ್‌ಗಾಟನ್ ಎಂಪೈರ್' (A Forgotten Empire) ನಲ್ಲಿ ಹೇಳುವಂತೆ ಶ್ರೀ ಕೃಷ್ಣರಾಯನ ಮಗ ತಿರುಮಲರಾಯ ರಾಯಚೂರು ದಿಗ್ವಿಜಯ ಆದಮೇಲೆ ಅಂದರೆ ಕ್ರಿ. ಶ. ೧೫೨೦, ತರುವಾಯ ತನ್ನ ಚಿಕ್ಕ ವಯಸ್ಸಿನಲ್ಲಿ ವಿಷಪ್ರಾಶನದಿಂದ ಮರಣಿಸಿದ. ತದನಂತರ ಶ್ರೀ ಕೃಷ್ಣರಾಯ ಬಹುಕಾಲ ಬದುಕಲಿಲ್ಲ ಅಂತ ಹೇಳಲಾಗಿದೆ. ಈ ಮಗನ ಮರಣ ಕ್ರಿ. ಶ. ೧೫೨೪ರ ಸುಮಾರಿಗೆ ಸಂಭವಿಸಬಹುದಾಗಿದೆ.

ಶ್ರೀ ಕೃಷ್ಣರಾಯ ಕ್ರಿ. ಶ. ೧೫೩೦ರಲ್ಲಿ ನಿಧನವಾಗಿರು ವುದೆನ್ನುವುದಕ್ಕೆ ಕೂಡಾ ಕೆಲವು ತೊಡಕುಗಳಿವೆ. ಕ್ರಿ. ಶ. ೧೫೨೫ರ ಸುಮಾರಿಗೆ ಶ್ರೀ ಕೃಷ್ಣರಾಯನು ನಿಧನನಾಗಿರಬಹುದೆನ್ನುವುದಕ್ಕೆ

ಕೆಲವು ಶಾಸನಗಳಿವೆ. ಮತ್ತು ತೆಲುಗು ಭಾಷೆಯಲ್ಲಿ ಚಾಟು ಪದ್ಯಗಳಿವೆ (ಜಾನಪದ ಗೀತೆಗಳು ಎನ್ನೋ ಹಾಗೆ). ಸಾಮ್ರಾಜ್ಯದ ಕೆಲವು ಸ್ಥಳೀಯ ಅಧಿಕಾರಗಳು ಕೊಟ್ಟ ದಾನಪತ್ರ ವಿವರಗಳಿವೆ.

ಕ್ರಿ. ಶ. ೧೫೨೫ ಸಂವತ್ಸರದಲ್ಲಿ (ತಾರಣ ನಾಮ ಸಂವತ್ಸರ) ಶ್ರೀ ಕೃಷ್ಣರಾಯನ ಪುತ್ರನಾದ ತಿರುಮಲರಾಯ ರಾಜ್ಯ ಮಾಡುತ್ತಿರುವನೆಂದು ಒಂದು ಕನ್ನಡ ಶಾಸನವಿದೆ. ಇದೇ ರೀತಿ ಕ್ರಿ. ಶ. ೧೫೨೫ ರಿಂದ ೧೫೩೦ರ ಅವಧಿಗೆ ಅಳಿಯ ರಾಮರಾಯ ಮತ್ತು ಅಚ್ಯುತದೇವರಾಯ ಅವರುಗಳು ತಾವು ವಿಜಯನಗರ ಸಾಮ್ರಾಜ್ಯಾಧೀಶ್ವರರಾಗಿರುವರೆಂದು ಹೇಳುವ ಕೆಲವು ಶಾಸನಗಳಿವೆ.

ಆದರೆ ಇದೇ ಅವಧಿಯಲ್ಲಿ ಶ್ರೀ ಕೃಷ್ಣರಾಯನ ಅನೇಕ ಶಾಸನಗಳು ಸಿಗುತ್ತವೆ.

ಈ ಗೊಂದಲಕ್ಕೆ ತೆಲುಗು ಭಾಷೆಯಲ್ಲಿ ಖ್ಯಾತ ಸಾಹಿತಿ, ಸಂಶೋಧಕರಾಗಿದ್ದ ಕೀ. ಶೇ. ಕೊಮರ್ರಾಜು ವೆಂಕಟ ಲಕ್ಷ್ಮಣರಾವು ಅವರು ತಮ್ಮದೇ ಆದ ವಿವರಣೆ ಕೊಡುತ್ತಾರೆ. ಅವರ ಪ್ರಕಾರ ಶ್ರೀ ಕೃಷ್ಣರಾಯ ಕ್ರಿ. ಶ. ೧೫೨೫ರಲ್ಲಿ ನಿಧನನಾಗಿರಬಹುದೆಂದು ತದನಂತರ, ಆತನ ಮಗ ತಿರುಮಲರಾಯ, ಅಳಿಯ ರಾಮರಾಯ ಮತ್ತು ಮಲಸಹೋದರ ಅಚ್ಯುತರಾಯ, ವಿಜಯನಗರ, ಸಿಂಹಾಸನಾರೂಢರಾಗಲು ಪ್ರಯತ್ನಿಸಿದರೆಂದು ತಮಗೆ ಅನುಕೂಲವಾದಗಲೆಲ್ಲಾ ತಮ್ಮ ಹೆಸರಿನಲ್ಲಿ ಶಾಸನಗಳು ಹಾಕಿಸುತ್ತಿದ್ದರೆಂದು ಈ ೫ ವರ್ಷದ ಅವಧಿಯಲ್ಲಿ ಯಾರ ಅಧಿಕಾರವು ಸುಸ್ಥಿರವಾಗಿ ನಿಲ್ಲಲಿಲ್ಲವೆಂದು ತೋಚುತ್ತದೆ ಎಂದು ಬರೆಯುತ್ತಾರೆ. ರಾಬರ್ಟ್ ಸ್ಯೂಯೆಲ್ ಅವರು ತಮ್ಮ 'ಎ ಫರ್‌ಗಾಟನ್ ಎಂಪಯರ್' ಗ್ರಂಥವನ್ನು ಬರೆಯುವ ಕಾಲಕ್ಕೆ ತಿರುಮಲರಾಯ, ಅಳಿಯ ರಾಮರಾಯ, ಅಚ್ಯುತರಾಯರ ಶಾಸನಗಳು ಈ ಅವಧಿಗೆ ಸಂಬಂಧಿಸಿದವು, ಬೆಳಕಿಗೆ ಬಂದಿರಲಿಕ್ಕಿಲ್ಲವಾದ್ದರಿಂದ, ರಾಬರ್ಟ್ ಸ್ಯೂಯೆಲ್ ಶ್ರೀ ಕೃಷ್ಣರಾಯ ಕ್ರಿ. ಶ. ೧೫೩೦ರ ವರೆಗೆ ಜೀವಿಸಿದ್ದನೆಂದು ಬರೆದಿರಬಹುದೆನೋ ಅಂತಾ ಹೇಳುತ್ತಾರೆ.

ಇನ್ನೊಂದು ಅಭಿಪ್ರಾಯದಂತೆ, ಶ್ರೀ ಕೃಷ್ಣರಾಯ ಕ್ರಿ. ಶ. ೧೫೨೫ರಲ್ಲಿ ನಿಧನನಾಗಿರಬಹುದೆಂದು ತರುವಾಯ ಆತನ ಮಗ ಅಳಿಯ ಮತ್ತು ಮಲತಮ್ಮಂದಿರ ನಡುವೆ ಸಿಂಹಾಸನಕ್ಕಾಗಿ ನಡೆಯುತ್ತಿದ್ದ ಹೋರಾಟದ ಅವಧಿಯಲ್ಲಿ ಈ ಮೂರು ಕಡೆ ಇಲ್ಲದೆ ತಟಸ್ಥರಾಗಿದ್ದ ಸಾಮ್ರಾಜ್ಯದ ಕೆಲವು ಅಧಿಕಾರಿಗಳು ಗತಿಸಿದ ತಮ್ಮ ಪ್ರೀತಿಯ ಚಕ್ರವರ್ತಿ ಶ್ರೀ ಕೃಷ್ಣದೇವರಾಯನ ಹೆಸರಿನಲ್ಲೇ ಶಾಸನಗಳನ್ನು ಹೋರಾಟ ನಿಲ್ಲುವರೆಗೆ ಹಾಕಿಸಿರಬಹುದು.

ಶ್ರೀ ಕೃಷ್ಣರಾಯನು ತನ್ನ ಮಗ ತಿರುಮಲರಾಯ ಕ್ರಿ. ಶ. ೧೫೨೪ರ ಸುಮಾರು ೮ ವರ್ಷದ ಚಿಕ್ಕ ವಯಸ್ಸಿನಲ್ಲೇ ವಿಷಪ್ರಾಶನದಿಂದ ಮರಣಿಸಿದ್ದರಿಂದ, ಮಹಾಮಂತ್ರಿ ತಿಮ್ಮರಸು ಆತನ ಮಕ್ಕಳ ಮೇಲೆ ಸಂಶಯಗೊಂಡು ಅವರನ್ನು ಶಿಕ್ಷಿಸಿದನೆಂದು ಆ ದುಃಖದಲ್ಲಿ ತದನಂತರ ನಿಧನನಾದನೆಂದು ಇದುವರೆಗೆ ಲಿಖಿತವಾದ ಚರಿತ್ರೆ. ಆದರೆ ಕ್ರಿ. ಶ. ೧೫೨೫ರಲ್ಲಿ ಶ್ರೀ ಕೃಷ್ಣರಾಯನ ಮಗ ತಿರುಮಲನ ಶಾಸನವಿರುವುದರಿಂದ ತಿರುಮಲ ವಿಷಪ್ರಾಶನದಿಂದ ಮರಣಿಸಲಿಲ್ಲವೇ? ವಿಷಪ್ರಾಷಶನ ಮಾಡಿಸಿ ಹತ್ಯೆ ಮಾಡಲಿಕ್ಕೆ ಪ್ರಯತ್ನ ಪಟ್ಟದ್ದು, ಅಪರಾಧವಾಗಿದ್ದರಿಂದ, ತಿಮ್ಮರಸು ಮಂತ್ರಿ ಮಕ್ಕಳ ಮೇಲೆ ವಿರೋಧಿಗಳ ಪಿತೂರಿಯಿಂದ ಶ್ರೀ ಕೃಷ್ಣರಾಯ ಸಂಶಯಗೊಂಡು ಅವರನ್ನು ಶಿಕ್ಷಿಸಿರಬಹುದು. ಮತ್ತು ತದನಂತರ ಪಶ್ಚಾತ್ತಾಪಪಟ್ಟು, ಆ ದುಃಖದಲ್ಲಿ ಶೀಘ್ರವೇ ನಿಧನನಾಗಿರಬಹುದು. ತನ್ನ ಜೀವಿತ ಕಾಲದಲ್ಲೇ ಶ್ರೀ ಕೃಷ್ಣರಾಯ ತನ್ನ ಮಗ ತಿರುಮಲರಾಯನಿಗೆ ಪಟ್ಟ ಕಟ್ಟಿದ್ದರಿಂದ ಶ್ರೀ ಕೃಷ್ಣರಾಯನ ನಿಧನಾನಂತರ ಇನ್ನೂ ಚಿಕ್ಕವನಿದ್ದ ತಿರುಮಲರಾಯ, ಆತನ ಭಾವ, ಅಳಿಯ ರಾಮರಾಯ ಮತ್ತು ಮಲಚಿಕ್ಕಪ್ಪ ಅಚ್ಯುತರಾಯ ಸಿಂಹಾಸನಕ್ಕಾಗಿ ಹೋರಾಟ ನಡೆಸಿರಬಹುದೆ? ಕಡೆಗೆ ಈ ಹೋರಾಟದಲ್ಲಿ ತಿರುಮಲರಾಯ ಆತನ ಸಮರ್ಥಕರು ಹಿಂದೆ ಬಿದ್ದು ಅಥವಾ ಮರಣಿಸಿದ್ದು, ಆ ಸಮಯದಲ್ಲಿ ಜನರ ಅಭಿಪ್ರಾಯ ಗಮನಿಸಿ, ಅಚ್ಯುತರಾಯನ ಪರವಾಗಿ ರಾಮರಾಯ ಸಂಧಿ ಮಾಡಿಕೊಂಡಿರಬಹುದೆ? ವಿಷಪ್ರಾಶನದ ಅಪಾಯದಿಂದ ಪಾರಾಗಿ, ತಿರುಮಲ ಉಳಿದಿದ್ದರಬಹುದಾದರೂ ಹೇಗೆ?

ಇದಲ್ಲದೆ ಶ್ರೀ ಕೃಷ್ಣದೇವರಾಯನ ನಿಧನ ಕಾಲಕ್ಕೆ ಆತನ ೧೮ ತಿಂಗಳ ಮಗು ಗೋವಿಂದರಾಜು ಬದುಕಿದ್ದನೆಂದು ಆ ಮಗುವನ್ನು ಹುಚ್ಚುತಿರುಮಲ ಕೊಂದನೆಂದು ಹೇಳಲ್ಪಟ್ಟಿದೆ. ಬಹುಶಃ ಸಿಂಹಾಸನಕ್ಕಾಗಿ ನಡೆದ ಹೋರಾಟದಲ್ಲಿ ತಿರುಮಲರಾಯ ಹಿಂದೆ ಬಿದ್ದ ಅಥವಾ ಮರಣಿಸಿದ ಮೇಲೆ, ಹುಚ್ಚುತಿರುಮಲ ಗೋವಿಂದ ರಾಜನ ಪಕ್ಷ ವಹಿಸಿ, ಹೋರಾಟಕ್ಕಿಳಿದು ಕೊನೆಗೆ ಸೋತು, ಮಗುವನ್ನು ಹತ್ಯೆಗೈದು ತಾನು ಮರಣಿಸಿರಬಹುದು.

ಶ್ರೀ ಕೃಷ್ಣರಾಯ ನಿಧನನಾಗುವ ಸಮಯದಲ್ಲಿ ಅಚ್ಯುತ ರಾಯನಿಗೆ ಪಟ್ಟ ಕಟ್ಟಿರೆಂದು ಹೇಳಿದ್ದನೆಂದು, ಆದುದರಿಂದಲೇ ಅಚ್ಯುತರಾಯ ಪಟ್ಟಕ್ಕೆ ಬಂದನೆಂದು ಈಗ ತಿಳಿದಿರುವ ಚರಿತ್ರೆಯಿದೆ. ಆದರೆ ಮೇಲೆ ಚರ್ಚಿಸಿದ ಅಂಶಗಳ ದೃಷ್ಟಿಯಿಂದ ಕೂಡಾ ಇದನ್ನು ವಿವೇಚಿಸಬೇಕಾಗಿದೆ. ಸಿಂಹಾಸನಕ್ಕಾಗಿ ಹೋರಾಟ ನಡೆಸಿ, ಆಮೇಲೆ ಅಧಿಷ್ಠಿಸಿದ ಅಚ್ಯುತರಾಯ ಕೊನೆಗೆ ಸಮರ್ಥಿಸಿದ ಅಳಿಯ ರಾಮರಾಯ, ಮೇಲೆ ಹೇಳಿದಂತೆ ಪ್ರಚಾರ ಮಾಡಿಸಿರ ಬಹುದೇನೋ ಎನ್ನುವ ವಿಷಯ ಪರಿಶೋಧಿಸಬೇಕಾಗಬಹುದು.

ಈ ಎಲ್ಲ ವಿಷಯಗಳಲ್ಲಿರುವ ಗೊಂದಲ, ವ್ಯತ್ಯಾಸವನ್ನು ನೋಡಿದಾಗ ಈ ಕೆಳಗಿನ ಅಂಶಗಳಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ, ಚರ್ಚೆ ಅಗತ್ಯವಾಗಿದೆ ಏನೋ ಎಂದು ಅನಿಸುತ್ತದೆ ಹಾಗು ಆ ಸಮಸ್ಯೆಗಳಿಗೆ ಉತ್ತರ ಬೇಕೆನಿಸುತ್ತದೆ :

೧. ಶ್ರೀ ಕೃಷ್ಣರಾಯನ ಜೀವನದ ಅವಧಿ ಮತ್ತು ಪಟ್ಟಕ್ಕೆ ಬರುವಾಗ ಹಾಗು ನಿಧನನಾದಾಗ ಆಗಿದ್ದ ವಯಸ್ಸು.

೨. ಶ್ರೀ ಕೃಷ್ಣರಾಯನ ಅಳಿಯ ರಾಮರಾಯನ ವಯಸ್ಸು ತಾಳಿಕೋಟೆ ಯುದ್ಧ ಸಮಯಕ್ಕೆ.

೩. ಶ್ರೀ ಕೃಷ್ಣರಾಯ - ಅಳಿಯ ರಾಮರಾಯನ ವಯೋ ಮಿತಿಗಳು : ಮಾವ - ಅಳಿಯಂದಿರ ಸಂಬಂಧ ದೃಷ್ಟಿಯಿಂದ.

೪. ಶ್ರೀ ಕೃಷ್ಣರಾಯ ಕ್ರಿ. ಶ. ೧೫೨೫ರಲ್ಲಿ ಅಥವಾ ಕ್ರಿ. ಶ. ೧೫೩೦ರಲ್ಲಿ ನಿಧನನಾಗಿದ್ದನೇ?

೫. ಶ್ರೀ ಕೃಷ್ಣರಾಯನ ಮಗ ತಿರುಮಲ ವಿಷಪ್ರಾಶನದಿಂದ ಮರಣಿಸಿದನೇ ಅಥವಾ ಬದುಕಿ ಉಳಿದಿದ್ದು, ಶ್ರೀ ಕೃಷ್ಣರಾಯನ ತರುವಾಯ ನಡೆದ ಸಿಂಹಾಸನದ ಹೋರಾಟದಲ್ಲಿ ಮರಣಿಸಿದನೆ?

೬. ವೀರಭುಜಬಲರಾಯ ಅಥವಾ ವೀರನರಸಿಂಹರಾಯ ಕ್ರಿ. ಶ. ೧೫೦೯ರಲ್ಲಿ ಮರಣಿಸಿದಾಗ ಆತನ ವಯಸ್ಸು.

೭. ಶ್ರೀ ಕೃಷ್ಣರಾಯನ ಜನನ ಕ್ರಿ. ಶ. ೧೪೮೯ ಅಥವಾ ಕ್ರಿ. ಶ. ೧೪೭೫-೭೦ರಲ್ಲಿ ಆಯಿತೆನ್ನುವುದು.

೮. ಶ್ರೀ ಕೃಷ್ಣರಾಯನ ನಂತರ ಬದುಕುಳಿದ ೧೮ ತಿಂಗಳ ಮಗು ಗೋವಿಂದರಾಜ ನಿಜವಾಗಿ ಹುಚ್ಚು ತಿರುಮಲನಿಂದ ಹತನಾದನೇ?



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ರಾಬರ್ಟ್ ಸ್ಯೂಯೆಲ್., **ಎ ಫರ್‌ಗಾಟನ್ ಎಂಪೈರ್.**

*೨. ಶಿವಾನಂದ ಗುಬ್ಬಣ್ಣವರ, **ಕ್ಷಮಾಪತಿ ರಾಮರಾಯ** (ಕನ್ನಡ).

*೩. ಎ. ಎಸ್. ನಂಜುಂಡಸ್ವಾಮಿ, **ವಿಜಯನಗರ ಇತಿಹಾಸ** (ಕನ್ನಡ).

*೪. ಅ.ನ.ಕೃ - **ಅಭಯ ಪ್ರಧಾನ (ಕನ್ನಡ).**

*೫. ನೂತಲಪಾಟಿ ಪೇರರಾಜು, **ವಿಜಯನಗರ ಚರಿತ್ರಮು** (ತೆಲುಗು).

*೬. ಕೀ. ಶೇ. ಕೋಮರ್‍ರಾಜು - ವೆಂಕಟ ಲಕ್ಷ್ಮಣರಾವು, **ಲಕ್ಷ್ಮಣರಾಯ ವ್ಯಾಸಾವಳಿ** (ತೆಲುಗು) (ಪ್ರಥಮ ಸಂಪುಟಮು).

ಎಂ. ಬಿ. ಪಾಟೀಲ*

# ವಿಜಯನಗರ ಕಾಲದ ಸಂತೆಗಳು ಒಂದು (ವಾಣಿಜ್ಯಕ) ಅಧ್ಯಯನ

ಸಂತೆ ಅಥವಾ ಬಜಾರ್ ಎಂಬ ವಾಣಿಜ್ಯ ಪಾರಿಭಾಷಿಕ ಪದದ ಪರಿಕಲ್ಪನೆ, ಅರ್ಥವ್ಯಾಪ್ತಿ ಮತ್ತು ಉಪಯುಕ್ತತೆ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿರುವುದನ್ನು ಇತಿಹಾಸದ ಉದ್ದಕ್ಕೂ ಗಮನಿಸಬಹುದು. ವಾಣಿಜ್ಯ ಚಟುವಟಿಕೆಗಳ ವಿಕಾಸದ ವಿವಿಧ ಹಂತಗಳನ್ನು ಗುರುತಿಸುವಲ್ಲಿ ಸಂತೆಯನ್ನು ಪ್ರಾರಂಭದ ಮತ್ತು ಮೂಲಹಂತವೆಂದು ಗುರುತಿಸಬಹುದು. ವಾಣಿಜ್ಯ ಎಂಬ ಪದದ ಅರ್ಥ, ವ್ಯಾಪ್ತಿ ಬಹು ವ್ಯಾಪಕವಾಗಿದ್ದು ಅದು ಹತ್ತು ಹಲವಾರು ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಿರುವದು. ಆ ಚಟುವಟಿಕೆಗಳ ಒಂದು ಭಾಗವೇ ಸಂತೆ.

ಪ್ರಾಚೀನ ಮತ್ತು ಮಧ್ಯಕಾಲೀನ ಆರ್ಥಿಕ ಇತಿಹಾಸದ ಅವಲೋಕನದಿಂದ ಸಂತೆಗಳು ತಮ್ಮದೇ ಆದ ಆರ್ಥಿಕ, ವಾಣಿಜ್ಯಕ, ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಂಡು ಬಂದಿರುವುದನ್ನು ಗಮನಿಸಬಹುದು. ಸಂತೆಯು, ಮೂಲತಹ ಒಂದು ಸಮಷ್ಟಿಯ ಕೊಳ್ಳುವ ಮತ್ತು ಮಾರುವ ಆರ್ಥಿಕ ಚಟುವಟಿಕೆ, ಸಂತೆಗೆ ಒಂದು ಸೀಮಿತ ಅರ್ಥವ್ಯಾಪ್ತಿ ಮತ್ತು ಭೌಗೋಳಿಕ ವ್ಯಾಪ್ತಿ ಇದ್ದು ಈ ಲೇಖನದಲ್ಲಿ ಆಧುನಿಕ ವಾಣಿಜ್ಯದ ಅರ್ಥವ್ಯಾಪ್ತಿಯಲ್ಲಿ ಆ ಕಾಲದ ಸಂತೆಯ ಚಟುವಟಿಕೆಗಳನ್ನು ವಿಶ್ಲೇಷಿಸಲಾಗಿದೆ.

ದಕ್ಷಿಣ ಭಾರತದ ಇತಿಹಾಸದಲ್ಲಿ ವಿಜಯನಗರದ ಇತಿಹಾಸ (೧೩೩೬-೧೭೫೯) ಅತ್ಯಂತ ಮಹತ್ವದ ಅಧ್ಯಾಯ. ದಿವ್ಯ ಪರಂಪರೆಯ ಕಾಲ. ಸುಮಾರು ೪೦೦ ವರ್ಷಗಳ ಆಳ್ವಿಕೆಯ ನಾಲ್ಕು ಅರಸು ಮನೆತನಗಳನ್ನು ಒಳಗೊಂಡ ಈ ವಿಜಯನಗರ ಸಾಮ್ರಾಜ್ಯದ ಇತಿಹಾಸಕ್ಕೆ ಸಂಬಂಧಪಟ್ಟಂತೆ ಸುಮಾರು ಆರು ಸಾವಿರ ಶಾಸನಗಳು ದಕ್ಷಿಣ ಭಾರತದಲ್ಲಿ ಲಭ್ಯ ಇದ್ದು ಅವುಗಳಲ್ಲಿ ಸುಮಾರು ೨೫೦೦ ಶಾಸನಗಳು ಕರ್ನಾಟಕದ ವಿವಿಧ ಭಾಗಗಳಲ್ಲಿ ದೊರೆತ ಬಗ್ಗೆ ಇತ್ತೀಚಿನ ವರದಿಗಳಿಂದ ತಿಳಿದುಬರುವುದು. ಈ ಶಾಸನಗಳ ಪೈಕಿ ಸುಮಾರು ೨೦೦-೨೫೦ ಕನ್ನಡ ನಾಡಿನ ಶಾಸನಗಳಿಂದ ಆ ಕಾಲದ ಸಂತೆ, ಅವುಗಳ ರಚನೆ, ಅವು ಒಳಗೊಂಡ ವಿವಿಧ ವರ್ತಕ ಸಮುದಾಯ, ವರ್ತಕರ ಸಾಮಾಜಿಕ, ರಾಜಕೀಯ ವರ್ಚಸ್ಸು, ಸುಂಕ ಪದ್ಧತಿ, ಸಂತೆಯ ವ್ಯವಸ್ಥೆಗೆ ಪೂರಕವಾದಂತಹ ಇತರ ಅಂಶಗಳು ಅಂದರೆ ಹಣಕಾಸು, ಸಂಚಾರ ಸೌಲಭ್ಯ, ತೂಕ ಮತ್ತು ಅಳತೆ, ಆಮದು-ರಫ್ತು, ವರ್ತಕರ ನೀತಿ ಸಂಹಿತೆ, ವರ್ತಕರ ಸಂಘ ರಚನೆ, ವಿದೇಶ ವ್ಯಾಪಾರ ನೀತಿ ಮುಂತಾದ ಹತ್ತು ಹಲವಾರು ವಿಷಯ ತಿಳಿದುಬರುವುದು. ಬಹುಪಾಲು ಶಾಸನಗಳು ದಕ್ಷಿಣ ಕರ್ನಾಟಕದ ಭಾಗಗಳಲ್ಲಿ ಕಂಡು ಬರುವವು. ವಿಜಯನಗರ ಇತಿಹಾಸಕ್ಕೆ ಸಂಬಂಧಪಟ್ಟಂತೆ ಕೇವಲ ಶಾಸನಗಳಲ್ಲದೇ ಅನೇಕ ವಿದೇಶಿ ಪ್ರವಾಸಿಗರ ವರದಿಗಳು, ಸಮಕಾಲೀನ ವಿವಿಧ ಸಾಹಿತ್ಯ (ಗ್ರಂಥಗಳು, ಕಾವ್ಯಗಳು, ಜಾನಪದ ಸಾಹಿತ್ಯ ಮುಂತಾದವುಗಳು) ಈ ಅಧ್ಯಯನಕ್ಕೆ ಸಹಕಾರಿಯಾಗಿವೆ.

*ಮುಂದುವರೆದ ಹಳೆಯ ವ್ಯವಸ್ಥೆ ವಿವಿಧ ವರ್ತಕ ಸಮುದಾಯ*

ಸಂತೆ ವ್ಯಾಪಾರ ಒಂದು ನಿರಂತರ ಪ್ರಕ್ರಿಯೆ. ವಿಜಯನಗರದ ಕಾಲದಲ್ಲಿ ಹೊಯ್ಸಳರ ಕಾಲದ ಮತ್ತು ಅದರ ಹಿಂದಿನ ಪಾರಂಪರಿಕ ಸಂತೆಯ ವ್ಯವಸ್ಥೆ ಬಹುಪಾಲು ಮುಂದುವರೆಯಿತು. ಆದರೆ ಅದು ಅನೇಕ ಬದಲಾವಣೆಗಳಿಂದ ಕೂಡಿತ್ತು. ಪ್ರಾಚೀನ ಮತ್ತು ಮಧ್ಯಕಾಲೀನ ವರ್ತಕರ ಸಮುದಾಯವನ್ನು ಅವರು ನಿರ್ವಹಿಸುತ್ತಿದ್ದ ಕಾರ್ಯ ವೈಖರಿ, ಕಾರ್ಯವ್ಯಾಪ್ತಿ. ಅವರು ಹೊಂದಿದ್ದ ಸಾಮಾಜಿಕ ಮತ್ತು ರಾಜಕೀಯ ಘನತೆ ಗೌರವ ಇವುಗಳಿಂದ ಗವರೆ, ಹರದ, ಬಣಜಿಗ, ಬೇಹಾರಿ, ಶೆಟ್ಟಿ, ವೇಲಕಾರ (ಬಂದರು ಪ್ರದೇಶಗಳ ವರ್ತಕರು) ನಾನಾದೇಶಿ, ಉಭಯ ನಾನಾದೇಶಿ, ವಡ್ಡವ್ಯವಹಾರಿ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು. ವರ್ತಕರು ನಗರ ಪ್ರದೇಶಗಳಲ್ಲಿ ವಿಶೇಷವಾಗಿ ನೆಲೆಸಿದ್ದರು, ಇವರಲ್ಲಿ ಎಲ್ಲ ಮತದವರು ಇದ್ದರೂ, ಅವರಲ್ಲಿ ಜೈನರು ಹೆಚ್ಚಾಗಿದ್ದರು. ಈ ವ್ಯವಸ್ಥೆ ವಿಜಯನಗರ ಕಾಲದಲ್ಲಿಯೂ ಮುಂದುವರೆಯಿತು. ವಡ್ಡ ವ್ಯವಹಾರಿಗಳನ್ನು ಹಿರಿಯರು, ವೃದ್ಧರು, ದೊಡ್ಡವರೆಂದು ಗೌರವಿಸಲಾಗುತ್ತಿತ್ತು. ಇವರಲ್ಲಿ ಹಲವರು ರಾಜಪೂಜಿತರು, ರಾಜಾನುಗ್ರಹಯುಕ್ತರು ಆಗಿರುತ್ತಿದ್ದರು. ಕಲ್ಯಾಣ ಚಾಳುಕ್ಯರ ಕಾಲದಲ್ಲಿ ವಿರಳವಾಗಿದ್ದ ಈ ವರ್ತಕರ ಸಂಖ್ಯೆ ಹೊಯ್ಸಳ ಮತ್ತು ನಂತರದ ವಿಜಯನಗರ ಅರಸರ ಕಾಲದಲ್ಲಿ ಹೆಚ್ಚಾಯಿತು. ಇವರಲ್ಲಿ ಶೈವರು, ಜೈನರು ಇದ್ದರು. [೧೪೨೭ರ ವರೆಗಿನ ಶಾಸನಗಳಲ್ಲಿ ಈ ಬಗೆಯ ಉಲ್ಲೇಖ ದೊರೆಯುವುದು.] ವ್ಯಾಪಾರಿಗಳು ತಮ್ಮದೇ ಆದ ಸಂಘಗಳನ್ನು ಮಾಡಿಕೊಂಡಿದ್ದರು. ಅರಮನೆಗೆ ಮತ್ತು ಗುರು ಮನೆಗೆ ತೀರ ಹತ್ತಿರದವರಾಗಿದ್ದರು,

*ನಿವೃತ್ತ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್, ೩೫೬, ಶ್ರೀರೇಣುಕ, ಸಿ.ಟಿ. ಬೆಡ್, ೭ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೭೦.

ವ್ಯಾಪಾರದೊಂದಿಗೆ ಲೇವಾದೇವಿ ವ್ಯವಹಾರ ನಡೆಸುತ್ತಿದ್ದರು. ಅನೇಕರು ಸ್ಥಳೀಯ ಆಡಳಿತದ ಮುಖ್ಯಸ್ಥರು ಆಗಿದ್ದು ಪಟ್ಟಣದ ಶೆಟ್ಟಿಯರೂ ಸಹ ಆಗಿದ್ದರು. ವಿಶೇಷವಾದ ಸವಲತ್ತುಗಳನ್ನು ಅನುಭವಿಸುತ್ತಿದ್ದರು. ವಿಜಯನಗರ ಕಾಲದಲ್ಲಿ ಕರ್ನಾಟಕದ ಒಳನಾಡಿನ ಮತ್ತು ಹೊರನಾಡಿನ ವ್ಯಾಪಾರ ಉನ್ನತ ಮಟ್ಟದಲ್ಲಿ ಇತ್ತು. ಪೊರ್ತುಗೀಜರು, ಡಚ್ಚರು, ಇಂಗ್ಲೀಷರು, ಹೊರನಾಡಿನ ವ್ಯಾಪಾರದಲ್ಲಿ ಆಸಕ್ತರಾಗಿದ್ದರು.

*ಸಾಲುಮೂಲೆ ಬಣಜಿಗರು*

ವರ್ತಕರ ಸಮುದಾಯಗಳಲ್ಲಿ ವಿಜಯನಗರದ ಶಾಸನಗಳು ಪ್ರಮುಖವಾಗಿ ಸಾಲುಮೂಲೆ ಬಣಜಿಗರನ್ನು ಉಲ್ಲೇಖಿಸುತ್ತವೆ. ಸಾಲುಮೂಲೆ ಎಂಬ ಪದವು ಬಹುಶಃ ಅಂದಿನ ಬಣಜಿಗ ಸಮುದಾಯದಲ್ಲಿನ ಬಹು ಪ್ರಧಾನವಾಗಿದ್ದ ಉಪಜಾತಿ ಒಂದನ್ನು ಸೂಚಿಸುತ್ತಿರಬಹುದು? ಎರಡನೆ ಹರಿಹರನ ಬೇಲೂರಿನ ಶಾಸನವು ಇವರು ಮೂಲ ಭದ್ರೇಶ್ವರನ ಸಂತತಿಯವರಾದುದರಿಂದ ಸಾಲುಮೂಲೆ ಎಂಬ ವಿಶೇಷಣ ಬಂದಿರಬಹುದು? ಎರಡನೇ ಹರಿಹರನ ಬೇಲೂರಿನ ಶಾಸನವು ಸಾಲುಮೂಲೆ ಬಣಜಿಗ ವರ್ತಕರ ದೊಡ್ಡ ಸಭೆಯು ೧೩೮೨ರಲ್ಲಿ (ಹಾಸನ ಜಿಲ್ಲೆಯ ಬೇಲೂರು ಶಾಸನ) ನಡೆದುದನ್ನು ವಿವರಿಸುತ್ತದೆ. ವಿಜಯನಗರ ಕಾಲದಲ್ಲಿ ಈ ವರ್ತಕರು ಉತ್ತಮ ರೀತಿಯಲ್ಲಿ ಸಂಘಟಿತರಾಗಿದ್ದರು ಎಂದು ಶಾಸನಗಳಿಂದ ತಿಳಿದುಬರುವದು. ವೀರ ಬಣಜಿಗರು ೧೧ ಮತ್ತು ೧೨ನೇ ಶತಮಾನಗಳಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಪ್ರಧಾನವಾಗಿದ್ದರು. ಈ ಸಾಲುಮೂಲೆ ಬಣಜಿಗರು ವಿಶೇಷವಾಗಿ ಕೃಷಿ ಉತ್ಪನ್ನಗಳ ವಹಿವಾಟನ್ನು ಮುಖ್ಯವಾಗಿ ನಿರ್ವಹಿಸುತ್ತಿದ್ದರು. ಇವರು ವಿಜಯನಗರದಲ್ಲಿ ಸುಮಾರು ೨೬ ನಗರಗಳಲ್ಲಿ ಸಂತೆಗಳನ್ನು ಸ್ಥಾಪಿಸಿದ್ದರು. ಅವುಗಳೆಂದರೆ : ವಿಜಯನಗರ, ಹಸ್ತಿನಾವತಿ, ದೊರಸಮುದ್ರ, ಗುತ್ತಿ, ಪೆನುಕೊಂಡ, ಆದವಾನಿ, ಉದಯಗಿರಿ, ಚಂದ್ರಗಿರಿ, ಮುಳಬಾಗಿಲು, ಕಂಚಿ, ಪಡೆವೀಡು, ಚದುರಂಗಪಟ್ಟಣ, ಮಂಗಳೂರು, ಬಾರಕೂರು, ಹೊನ್ನಾವರ, ಚಂದಾವರ, ಚಂದ್ರಗುತ್ತಿ, ಅಣ್ಣಿಗೇರಿ, ಹುಲಿಗೆರೆ, ನಿಡುಗಲ್ಲು, ಚಿಮತನಕಲ್ಲು, ತರಿಯಕಲ್ಲು, ಆನೇಬಿದ್ದಸರಿ, ಕಲ್ಲೆಯ, ತೆರಕಣಾಂಬಿ ಮತ್ತು ಸಿಂಗಪಟ್ಟಣ. ಸಾಲುಮೂಲೆ ಬಣಜಿಗರು ತಮಿಳುನಾಡು ಮತ್ತು ಆಂಧ್ರಗಳೊಂದಿಗೂ ಸಂಪರ್ಕ ಇಟ್ಟುಕೊಂಡಿದ್ದರು. ಈ ಇಪ್ಪತ್ತಾರು ನಗರ ಸಂತೆಗಳಲ್ಲಿ ಪ್ರಮುಖ ಕೃಷಿ ಉತ್ಪನ್ನಗಳಾದ ಭತ್ತ, ಜೋಳ, ರಾಗಿ, ಬಾರ್ಲಿ, ಬರಗು, ಸಾವೆ, ಗೋದಿ, ಕಡಲೆ, ಎಳ್ಳು, ಅಗಸೆ, ಕುಸುಬೆ, ಹೆಸರು, ಉದ್ದು, ತೊಗರಿ, ಅಕ್ಕಿ, ಸಕ್ಕರೆ, ಎಣ್ಣೆ, ತುಪ್ಪ, ಉಪ್ಪು, ಬೆಲ್ಲ, ಅಡಿಕೆ, ವಿಳ್ಳೆದೆಲೆ, ಮೆಣಸು, ಅರಿಷಿಣ, ಈರುಳ್ಳಿ, ಜೀರಿಗೆ, ಸಾಸಿವೆ, ಕಬ್ಬು ಮುಂತಾದವು ಭಾರಿ ಪ್ರಮಾಣದಲ್ಲಿ ವಿನಿಮಯವಾಗುತ್ತಿದ್ದವು. ಕೃಷಿ ಉತ್ಪನ್ನಗಳ ವಿದೇಶ ವ್ಯಾಪಾರಕ್ಕೆ ಬಟ್ಕಳ, ಮಂಗಳೂರು. ಹೊನ್ನಾವರ ಬಂದರುಗಳಿಂದ ರಫ್ತಾಗುತ್ತಿದ್ದ ಅತ್ಯಂತ ಪ್ರಮುಖವಾದ ವಸ್ತು ಮೆಣಸು. ಅದಕ್ಕೆ ದೇಶದಲ್ಲಿ ಮತ್ತು ವಿದೇಶದಲ್ಲಿ ಬೇಡಿಕೆ ಇತ್ತು.

ರಾಜಕೀಯ ಸ್ಥಿರತೆಗೂ ಮತ್ತು ವ್ಯಾಪಾರ ಅಭಿವೃದ್ಧಿಗೆ ನೇರವಾದ ನಂಟು ಉಂಟು. ಒಂದನೇ ಬುಕ್ಕನ ಕಾಲದಲ್ಲಿ, ಇಮ್ಮಡಿ ದೇವರಾಯನ ಕಾಲದಲ್ಲಿ (೧೪೨೪-೧೪೪೬) ಸಾಮ್ರಾಜ್ಯದಲ್ಲಿ ರಾಜಕೀಯ ಸ್ಥಿರತೆ ಇತ್ತು. ನಾನಾದೇಶದ ವ್ಯಾಪಾರಸ್ಥರು ತಮ್ಮ ವ್ಯವಹಾರವನ್ನು ಮುಂದುವರೆಸಿದರು. ಅಲ್ಲದೇ ವಿಸ್ತರಿಸಿದರು ಎಂದು ತಿಳಿದುಬರುವುದು.

*ಪ್ರಮುಖ ವ್ಯಾಪಾರಿ ಕೇಂದ್ರಗಳು*

ಸುಮಾರು ೧೩೮೦ರಲ್ಲಿ ಅಂದರೆ ಎರಡನೆಯ ಹರಿಹರನ ಕಾಲದಲ್ಲಿ ವಿಜಯನಗರವಲ್ಲದೇ ದ್ವಾರಸಮುದ್ರ, ಪೆನುಗೊಂಡ, ಉದಯಗಿರಿ ಮತ್ತು ಬಂಕಾಪುರ, ಪ್ರಮುಖ ವ್ಯಾಪಾರಿ ಪಟ್ಟಣಗಳಾಗಿದ್ದವು. ಕಂಚಿಯು ವಿಜಯನಗರ ಸಾಮ್ರಾಜ್ಯದಲ್ಲಿ ಬಹು ಪ್ರಮುಖವಾದ ವ್ಯಾಪಾರ ಕೇಂದ್ರವಾಗಿತ್ತು. ಇವುಗಳಲ್ಲದೇ ಐಹೊಳೆ, ಬಾದಾಮಿ, ಕೊಪ್ಪಳ, ಬಸವಕಲ್ಯಾಣ, ರಾಯಭಾಗ ಬಳ್ಳಿಗಾವಿ, ಬನವಾಸಿ, ಕೋಲಾರ, ತಲಕಾಡು, ಬೆಂಗಳೂರು, ಅರಸೀಕೆರೆ, ಬಾಣಾವರ, ಲಕ್ಕುಂಡಿ ಮತ್ತು ಮಣ್ಣೆ ಇವು ಪ್ರಮುಖ ಒಳನಾಡು ವ್ಯಾಪಾರ ಕೇಂದ್ರಗಳಾಗಿದ್ದವು.

*ರಾಜಧಾನಿಯಲ್ಲಿಯ ಸಂತೆ*

ರಾಜಧಾನಿ ಹಂಪೆಯ ವಿವಿಧ ಚಟುವಟಿಕೆಗಳನ್ನು ಕೂಲಂಕಷವಾಗಿ ವರ್ಣಿಸಿದ ವಿದೇಶಿ ಪ್ರವಾಸಿಗರಿಂದ ಕೇವಲ ಸಂತೆಯು ಮಾತ್ರ ತಪ್ಪಿಸಿಕೊಳ್ಳಲು ಹೇಗೆ ಸಾಧ್ಯ? ವಿಜಯನಗರ ಸಾಮ್ರಾಜ್ಯವನ್ನು ಮತ್ತು ಅದರ ಪ್ರಕೃತಿ ಸಂಪತ್ತನ್ನು ಮುಕ್ತ ಕಂಠದಿಂದ ಕೊಂಡಾಡಿರುವ ವಿದೇಶಿ ಪ್ರವಾಸಿಗರು ಅಲ್ಲಿನ ಮಾರು ಕಟ್ಟೆಗಳಲ್ಲಿ ರಾಶಿಗಟ್ಟಲೆ ಮಾರುತ್ತಿದ್ದ ನಿಂಬೆ, ಕಿತ್ತಳೆ, ದ್ರಾಕ್ಷಿ, ದಾಳಿಂಬೆಗಳನ್ನು ಪಾಯಸ್(೧೫೨೦) ವರ್ಣಿಸಿರುವನು. ಇದೇ ಪ್ರವಾಸಿಯು ಮುಂದುವರೆದು "ಇಲ್ಲಿ ಮಾರಾಟವಾಗುವ ವಸ್ತುಗಳನ್ನು ನೋಡಿ ನನಗೆ ವರ್ಣಿಸಲು ಸಾಧ್ಯವಾಗಲಿಲ್ಲ ಈ ತರಹ ಹಸು ಎಮ್ಮೆಗಳನ್ನು ಮತ್ತೆಲ್ಲಿಯೂ ಕಾಣುವಂತಿಲ್ಲ, ದೊಡ್ಡ ಬೀದಿಗಳ ಎರಡೂ ಬದಿಗಳಲ್ಲಿ ಮಾರುತ್ತಿದ್ದ ನಾನಾ ವಿಧದ ಪದಾರ್ಥಗಳ ಅಂಗಡಿಗಳನ್ನು ಅಲ್ಲಿಯ ಮಾರಾಟದ ವೈಖರಿಯನ್ನು ಈ ಪ್ರವಾಸಿಯು ವರ್ಣಿಸುತ್ತ ಎಲ್ಲಿ ಜನರು ಇದನ್ನು ಉತ್ಪ್ರೇಕ್ಷೆ ಎಂದು ಭಾವಿಸುವರೋ ಎಂದು ತಾನೇ ಅನುಮಾನ ಪಡುವನು".

ವಿಜಯನಗರದ ಪೇಟೆಗಳಲ್ಲಿನ ಸುಂದರ ಗುಲಾಬಿ ಹೂವಿನ ವ್ಯಾಪಾರವನ್ನು ಕುರಿತಂತೆ ಅಬ್ದುಲ್ ರಜಾಕ್ (೧೪೪೩ ಏಪ್ರಿಲ್) ಈ ರೀತಿ ವಿವರಣೆ ನೀಡುವನು "ಗುಲಾಬಿ ವ್ಯಾಪಾರಿಗಳು ತಮ್ಮ ಅಂಗಡಿಗಳ ಮುಂದೆ ಎತ್ತರವಾದ ವೇದಿಕೆಗಳ ಮೇಲೆ ಎರಡೂ ಕಡೆ ಹೂವುಗಳ ರಾಶಿಯನ್ನು

ಹಾಕಿಕೊಂಡು ವ್ಯಾಪಾರ ಮಾಡುತ್ತಾರೆ. ಇಲ್ಲಿಯ ಜನರು ಗುಲಾಬಿ ಹೂಗಳು ಇಲ್ಲದಿದ್ದರೆ ಬದುಕುವಂತೆಯೇ ಕಾಣುವುದಿಲ್ಲ" ಎಂದು ಅಚ್ಚರಿ ಸೂಚಿಸಿರುವನು. ಅವನೇ ಮುಂದುವರೆದು ನಗರವು ಏಳು ಸುತ್ತಿನ ಕೋಟೆಗಳಿಂದ ಕೂಡಿದ್ದು ಮೂರನೇ ಮತ್ತು ಏಳನೆಯ ಸುತ್ತುಗಳ ನಡುವೆ ಅಂಗಡಿಗಳು, ಮಾರುಕಟ್ಟೆಗಳು ಒಂದಕ್ಕೊಂದು ಎದುರು ಬದುರಾಗಿ ಹೊಂದಿಕೊಂಡು ಇದ್ದವು. ಮಾರುಕಟ್ಟೆಯ ಮುಂಭಾಗ ವಿಶಾಲವಾದ ಗ್ಯಾಲರಿ ಮತ್ತು ಕಮಾನುಗಳಿಂದ ಕೂಡಿರುತ್ತಿತ್ತು ಎಂದು ವಿವರಿಸಿರುವನು". ತಮ್ಮ ವರ್ಣನೆಯನ್ನು ಕೇವಲ ಗುಲಾಬಿ ಹೂವಿನ ಮತ್ತು ಪಾನಸುಪಾರಿ (ಎಲೆ-ಅಡಿಕೆ) ಬಜಾರಿನ ಮಟ್ಟಿಗೆ ಸೀಮಿತಗೊಳಿಸದ ವಿದೇಶ ಪ್ರವಾಸಿಗಳು ಜನಸಾಮಾನ್ಯರ ದಿನ ನಿತ್ಯದ ಮಾರಾಟ ವಸ್ತುಗಳಾದ ಅಕ್ಕಿ ಮತ್ತು ಗೋದಿಯ ಸಂತೆಯನ್ನು ಕುರಿತು ಸಹ ವರ್ಣಿಸಿರುವರು.

ಪಯಸ್ ಹೇಳುವ ಪ್ರಕಾರ ವಿಜಯನಗರದಲ್ಲಿ ಒಂದು ಲಕ್ಷ ಮನೆಗಳಿದ್ದವು ಅಂದರೆ ವಿಜಯನಗರವು ಒಂದು ದೊಡ್ಡ ವ್ಯಾಪಾರ ಕೇಂದ್ರವಾಗಿತ್ತು ಎಂದು ತಿಳಿದುಬರುವದು. ('ಜನಸಂಖ್ಯೆ ಸುಮಾರು ೫ ಲಕ್ಷ ಇದ್ದಿರಬಹುದು') -

ವಿರುಪಾಕ್ಷ ದೇವಾಲಯದ ಎದುರಿಗೆ ಒಂದು ಸಂತೇಪೇಟೆ ಇತ್ತು. ವಿಜಯನಗರದ ಒಂದು ಪೇಟೆಗೆ ಅಚ್ಯುತರಾಯನ ಪೇಟೆ ಎಂದು, ಇನ್ನೊಂದು ಪೇಟೆಗೆ ಕೃಷ್ಣದೇವರಾಯನ ಪೇಟೆ ಎಂದು ಹೆಸರಿತ್ತು. ಇಲ್ಲಿ ಧಾನ್ಯಗಳ ಅಂಗಡಿಗಳು ಇದ್ದವೆಂದು ಶಾಸನಗಳಿಂದ ತಿಳಿದುಬರುವದು.

ಲೌಕಿಕ ಜೀವನ ಜಂಜಾಟವೆಂಬ ಸಂತೆಯಿಂದ ದೂರವಾದ ದಾಸರನ್ನೂ ವಿಜಯನಗರದ ಪೇಟೆ ಬೀದಿಗಳು, ಸಂತೆಗಳು ತನ್ನೆಡೆಗೆ ಸೆಳೆದಿವೆ. ಕನಕದಾಸರ (೧೬ನೇ ಶತಮಾನ) ಮೋಹನ ತರಂಗಿಣಿಯು ವಿಜಯನಗರದ ಸಂತೆಯನ್ನು ವೈಭವಿಕರಿಸುವುದು. ಐತಿಹಾಸಿಕ ಮತ್ತು ಸಾಹಿತ್ಯಕ ವರ್ಣನೆಗಳು ಒಂದಕ್ಕೊಂದು ಪೂರಕವಾಗಿರುವವು. ದಾಸರು ಕೆಲವು ವಾಸ್ತವ ಸಂಗತಿಗಳನ್ನು ಪ್ರವಾಸಿಗರಿಗಿಂತ ಹೆಚ್ಚು ವಿಷದವಾಗಿ ವಿವರಿಸಿರುವರು. ಪೇಟೆಯ ಭಾಗದ ಅಂಗಡಿಗಳು ಆಗಮಜ್ಞರು (ನಗರ ರಚನಾಶಾಸ್ತ್ರ ಬಲ್ಲವರು) ಜನರಿಗೆ ಅನುಕೂಲವಾಗುವಂತೆ ಬೇರೆ ಬೇರೆಯಾಗಿ ಹಂಚಿಕೊಟ್ಟ ಸ್ಥಳಗಳಲ್ಲಿ ಇದ್ದವು. ವಿಜಯನಗರ ಸಾಮ್ರಾಜ್ಯದ ಕೀರ್ತಿ ದೇಶ ವಿದೇಶಗಳಲ್ಲಿ ವ್ಯಾಪಿಸಿ ಜನರನ್ನು ಆಕರ್ಷಿಸುವುದಕ್ಕೆ ಅಲ್ಲಿನ ನಿರ್ಬಂಧರಹಿತ ಚಿನ್ನ ಮತ್ತು ರತ್ನಗಳ ವ್ಯಾಪಾರವೂ ಒಂದು ಕಾರಣ ಎಂದು ವಿದೇಶ ಪ್ರವಾಸಿಗರ ವರ್ಣನೆಗೆ ಪೂರಕವಾಗಿ ಸಮಕಾಲೀನ ಸಾಹಿತ್ಯ ಕೃತಿಗಳಿಂದ ವಿಷಯ ತಿಳಿದುಬರುವುದು.

### *ಸಾಗರ ವ್ಯಾಪಾರಿಗಳು*

ವಿಜಯನಗರದ ಅರಸರು ಒಳನಾಡಿನ ವ್ಯಾಪಾರದಷ್ಟೇ ಪ್ರೋತ್ಸಾಹವನ್ನು ಹೊರನಾಡಿನ ವ್ಯಾಪಾರಕ್ಕೂ ನೀಡಿದ್ದರು. ಹಿಂದಿನ ಅರಸುಮನೆತನಗಳಿಗಿಂತ ಈ ಕಾಲದಲ್ಲಿ ವಿದೇಶದ ವ್ಯಾಪಾರಕ್ಕೆ ಹೆಚ್ಚು ಒತ್ತು ಕೊಡಲಾಯಿತು ಮತ್ತು ಹೆಚ್ಚುತ್ತಿರುವ ವಿದೇಶಿ ವಸ್ತುಗಳ ಬೇಡಿಕೆ ಅದರಲ್ಲಿಯೂ ಯುದ್ಧದ ಮತ್ತು ಶ್ರೀಮಂತರ ಅವಶ್ಯಕತೆಗಳನ್ನು ಪೂರೈಸಲು ವಿಜಯನಗರದ ಅರಸರು ವಿದೇಶಿ ವ್ಯಾಪಾರವನ್ನು ಹೆಚ್ಚು ಪ್ರೋತ್ಸಾಹಿಸಿದರು. ಅದರಲ್ಲಿಯೂ ವಿಶೇಷವಾಗಿ ಎರಡನೆಯ ದೇವರಾಯ ಮತ್ತು ಕೃಷ್ಣದೇವರಾಯನ ಕಾಲದಲ್ಲಿ. ಈ ಕಾಲದ ಆಂಧ್ರದ ಶ್ರೀನಾಥಕವಿಯ "ಹರ ವಿಲಾಸಮು" ಕಾವ್ಯದಿಂದ ವೈಶ್ಯ ವರ್ತಕರು ಬೆಲೆ ಬಾಳುವ ವಸ್ತುಗಳನ್ನು ಹೊರದೇಶಗಳಿಂದ ಆಮದು ಮಾಡಿಕೊಂಡು ಅರಸರಿಗೆ, ಸರದಾರರಿಗೆ, ಮಾಂಡಲಿಕರಿಗೆ ಸರಬರಾಜು ಮಾಡುತ್ತಿದ್ದರು ಎಂದು ತಿಳಿದುಬರುವದು. ಆಗಿನ ಮುಖ್ಯ ಆಮದು ವಸ್ತುಗಳೆಂದರೆ ಪಂಜಾಬದಿಂದ ಕರ್ಪೂರ, ಶ್ರೀಲಂಕಾದಿಂದ ಆನೆಗಳು, ಅರಬ ದೇಶದಿಂದ ಕುದುರೆಗಳು, ಚೀನಾದಿಂದ ರೇಷ್ಮೆ ಮುಂತಾದವುಗಳು. ಈ ವ್ಯಾಪಾರಸ್ಥರ ಪ್ರಮುಖ ಗ್ರಾಹಕರಲ್ಲಿ ವಿಜಯನಗರದ ಅರಸರು, ಬಹಮನಿ ಸುಲ್ತಾನರು ಒರಿಸ್ಸಾದ ಗಜಪತಿ, ಕೊಂಡವೀಡುವಿನ ರೆಡ್ಡಿಗಳು ಮುಂತಾದವರು ಇದ್ದರೆಂದು ತಿಳಿದುಬರುವುದು.

### *ಕುಬೇರನಿಗೆ ಕಡಕೊಡುವ ಶ್ರೀಮಂತರು*

ಕನಕದಾಸರ ಮೋಹನ ತರಂಗಿಣಿಯಲ್ಲಿ ಸಾಗರ ವ್ಯಾಪಾರಿಗಳನ್ನು ಕುರಿತಂತೆ ಈ ರೀತಿ ವರ್ಣಿಸಲಾಗಿದೆ. "ಹಡಗಿನ ವ್ಯವಹಾರದಿಂದ ಗಳಿಸಿದ ಹಣವನ್ನು ಎಣಿಸಲಾರದವರಾಗಿ ಹೇರುಗಟ್ಟಲೇ ಅಳತೆಯ ಮಾನದಿಂದ ತೂಗಿಕೊಳ್ಳುತ್ತಿದ್ದರು. ಅಪೇಕ್ಷಿಸಿದರೆ ಧನಪತಿಯಾದ ಕುಬೇರನಿಗೆ ಕಡವನ್ನು ಕೊಡುವ ಯೋಗ್ಯತೆಯವರು ಆಗಿದ್ದರು" ಎಂದು ವಿವರಿಸಲಾಗಿದೆ. ಈ ವರ್ಣನೆ ಉತ್‌ಪ್ರೇಕ್ಷೆ ಎಂದು ಕಂಡರೂ ಸ್ಥಳೀಯ ವ್ಯಾಪಾರಿಗಳ ಸಂಪತ್ತನ್ನು ವೈಭವಿಕರಿಸುವುದಲ್ಲದೇ ರಾಜ್ಯದ ಆರ್ಥಿಕ ಸಮೃದ್ಧಿಯನ್ನು ಸೂಚಿಸುವುದು.

### *ಕಡಲ ತೀರದ ವಾಣಿಜ್ಯವೈಭವ*

೧೫೨೦ ರ ಸುಮಾರಿಗೆ ಕೃಷ್ಣದೇವರಾಯನ ಕಾಲದಲ್ಲಿ ಮತ್ತು ನಂತರದ ದಶಕಗಳಲ್ಲಿ ಪೋರ್ತುಗೀಜರು, ಡಚ್ಚರು ಇಂಗ್ಲೀಷರು ಗಮನಾರ್ಹ ವಾಣಿಜ್ಯ ಚಟುವಟಿಕೆಗಳಲ್ಲಿ ನಿರತರಾಗಿದ್ದರಲ್ಲದೇ ಬಟ್ಕಳ, ಕುಂದಾಪುರ, ಮಂಗಳೂರುಗಳಲ್ಲಿ ವ್ಯಾಪಾರ ಮಳಿಗೆಗಳನ್ನು ಪ್ರಾರಂಭಿಸಿದ್ದರು. ಬರ್ಮ, ಮಲಯಾ, ಚೀನ, ಅರೇಬಿಯಾ, ಪರ್ಶಿಯ, ದಕ್ಷಿಣ ಆಫ್ರೀಕ, ಪೋರ್ಚುಗಲ್ ಗಳೊಂದಿಗೆ ವಿಜಯನಗರವು ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಪಶ್ಚಿಮ ಕರಾವಳಿಯ ಕುಮಟಾ, ಅಂಕೋಲಾ, ಮಿರ್ಜಾನ, ಹೊನ್ನಾವರ, ಬಟ್ಕಳ ಕುಂದಾಪುರ, ಮಂಗಳೂರು, ಬಾರಕೂರು ಇವುಗಳ ಮೂಲಕ ವಿದೇಶಿ ವ್ಯಾಪಾರ ನಡೆಯುತ್ತಿತ್ತು. ಇವುಗಳಲ್ಲಿ ಬಟ್ಕಳವು ವಿದೇಶ ವ್ಯಾಪಾರದ ಪ್ರಮುಖ ಕೇಂದ್ರ ವಾಗಿತ್ತು ಎಂದು ಪಾಯಸ್ ವರ್ಣಿಸಿರುವನು. ಬಟ್ಕಳ ಮತ್ತು

ಚೀನಾ ದೇಶದ ಪಿಂಗಾಣಿ ವಸ್ತುಗಳಿಗೆ ವಿಜಯನಗರದಲ್ಲಿ ಬಹಳ ಬೇಡಿಕೆ ಇತ್ತು. ಚೀನಾ ನಡುವಿನ ವ್ಯಾಪಾರ ಶ್ರೀಲಂಕಾ ಮೂಲಕ ನಡೆಯುತ್ತಿತ್ತು. ಚೀನಾ ಮತ್ತು ವಿಜಯನಗರದ ಮಧ್ಯೆ ರಾಯಭಾರಿ ಸಂಬಂಧ ಇತ್ತು. ೧೩೭೪ರಲ್ಲಿ ಬುಕ್ಕನ ರಾಯಭಾರಿ ಚೀನಾಕ್ಕೆ ಹೋಗಿದ್ದನು. ಕೃಷ್ಣದೇವರಾಯನು ಪೋರ್ತುಗೀಜರಿಗೆ ಬಟ್ಕಳದಲ್ಲಿ ಕೋಟೆ ಕಟ್ಟಲು ಒಪ್ಪಿಗೆ ಕೊಟ್ಟನು. ೧೫೧೦ರಲ್ಲಿ ಅಲ್ಬುಕರ್ಕನು ಗೋವಾವನ್ನು ಬಿಜಾಪುರದಿಂದ ಗೆದ್ದುಕೊಂಡಾಗ ಕೃಷ್ಣದೇವ ರಾಯನು ಅವನನ್ನು ಅಭಿನಂದಿಸಿದನು. ನಂತರದ ಅರಸರೂ ಸಹ ಪೋರ್ತುಗಿಜರ ಸಂಗಡ ಒಳ್ಳೇ ವ್ಯಾಪಾರ ಸಂಬಂಧ ಇಟ್ಟುಕೊಂಡಿದ್ದರು.

*ಅರಸರ ಕುದುರೆ ವ್ಯಾಪಾರ*

ವಿಜಯನಗರದ ಅರಸರು ಮತ್ತು ಇತರರು ತಮಗೆ ಬೇಕಾಗುವ ಯುದ್ಧದ ಉತ್ತಮ ಕುದುರೆಗಳಿಗಾಗಿ ಪೋರ್ತು ಗೀಜರನ್ನು ಸಂಪೂರ್ಣವಾಗಿ ಅವಲಂಬಿಸಬೇಕಾಗಿತ್ತು. ಇದು ಪೋರ್ತುಗೀಜರ ಏಕಸ್ವಾಮ್ಯದ ವ್ಯಾಪಾರವೂ ಸಹ ಆಗಿತ್ತು. ೧೫೧೪ ರ ಸುಮಾರಿಗೆ ಕೃಷ್ಣದೇವರಾಯನು ಸುಮಾರು ೨೦,೦೦೦ ಪೌಂಡುಗಳ ಬೆಲೆಯ ಕುದುರೆಗಳನ್ನು ಕೊಳ್ಳುವ ಬೇಡಿಕೆಯನ್ನು ಸಲ್ಲಿಸಿದ್ದಾಗಿ ತಿಳಿದುಬರುವುದು. ಒಂದು ವಿಧದಲ್ಲಿ ಅರಸರ ಈ ಕುದುರೆ ವ್ಯಾಪಾರ ಅವರಿಗೆ ಲಾಭ ತರುತ್ತಿತ್ತು. ಪಶ್ಚಿಮ ದೇಶದ ಕುದುರೆಗಳನ್ನು ಅರಸರು ಸುಮಾರು ೧೦೦೦ ಪಗೋಡ(ಚಿನ್ನದ ನಾಣ್ಯ)ಗಳಿಗೆ ೧೨ ರಿಂದ ೧೫ ಕುದುರೆಗಳನ್ನು ಕೊಳ್ಳುತ್ತಿದ್ದರು. ಅರಸರು ದೇಶೀಯ ಕುದುರೆಗಳನ್ನು ಮಾಂಡಲಿಕರಿಗೆ ಮತ್ತು ಇತರರಿಗೆ ೧೦೦೦ ಪಗೋಡಗಳಿಗೆ ೫ ಕುದುರೆಗಳಂತೆ ಮಾರಾಟ ಮಾಡುತ್ತಿದ್ದರು. ಈ ಕುದುರೆ ವ್ಯಾಪಾರ ದಸರೆ ಹಬ್ಬದಲ್ಲಿ ಮಾಂಡಲಿಕರು ಅರಸರಿಗೆ ಕಪ್ಪ ಕಾಣಿಕೆ ಕೊಡುವಾಗ ಕುದುರುತ್ತಿತ್ತು ಎಂದು ತಿಳಿದುಬರುವುದು. ವಿಜಯನಗರದ ಪತನಾನಂತರ (೧೫೬೫) ಪೋರ್ತುಗೀಜರ ವ್ಯಾಪಾರ ತುಂಬಾ ಕಡಿಮೆ ಆಯಿತು. ಮೊದಲು ವಾರ್ಷಿಕ ೧೨೦ ರಿಂದ ೧೫೦ ಸಾವಿರ ಯೂರೋಪದ ಚಿನ್ನದ ನಾಣ್ಯಗಳಷ್ಟು ಇದ್ದ ವ್ಯಾಪಾರ ಕೇವಲ ೬,೦೦೦ ಕ್ಕೆ ಇಳಿಯಿತು. ಯುದ್ಧಾನಂತರ ಸ್ಥಳೀಯ ಮತ್ತು ವಿದೇಶಿ ವ್ಯಾಪಾರಿಗಳಿಗೆ ಯಾವುದೇ ರಕ್ಷಣೆ ಇಲ್ಲದಂತಾಯಿತು.

*ಸಂತೆಯ ಪ್ರಾಮುಖ್ಯತೆ*

ನಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಸಂತೆಗೆ ಒಂದು ವಿಶೇಷ ಮಹತ್ವ ಉಂಟು ಅಂತೆಯೇ ಸಂತೆ ಪದದ ಉಲ್ಲೇಖವನ್ನು 'ಲೌಕಿಕ' ಮತ್ತು 'ಪಾರಮಾರ್ಥಿಕ' ಅರ್ಥದಲ್ಲಿ ಬಳಸಲಾಗಿದೆ. (ಉದಾ: ವಚನ ಸಾಹಿತ್ಯ, ದಾಸ ಸಾಹಿತ್ಯ, ಸಂತರ ಹಾಡುಗಳು).

ಅನೇಕ ಗ್ರಾಮಗಳನ್ನು ನಗರಗಳನ್ನಾಗಿ ಪರಿವರ್ತಿಸಿ ಅಲ್ಲಿಯ ಹೆಚ್ಚಿನ ವ್ಯವಸಾಯ ಉತ್ಪನ್ನಗಳನ್ನು ಮಾರಲು ಸಂತೆಗಳನ್ನು ಪ್ರಾರಂಭಿಸಲಾಯಿತು. ೧೪ನೇ ಶತಮಾನದ ನಂತರ, ಇದುವರೆಗೆ ಅನುಭೋಗಕ್ಕಾಗಿ ಉತ್ಪಾದನೆಯಾಗುತ್ತಿದ್ದ ವ್ಯವಸಾಯ ಮತ್ತು ಇತರೆ ಉತ್ಪನ್ನಗಳನ್ನು ಮಾರಾಟಕ್ಕಾಗಿ ಉತ್ಪಾದನೆ ಪ್ರಾರಂಭವಾದ ನಂತರ ಒಳನಾಡು ಮತ್ತು ಹೊರನಾಡ ವ್ಯಾಪಾರದಲ್ಲಿ ಹೆಚ್ಚಳ ಉಂಟಾಯಿತು. ಇದು ವಿಸ್ತಾರಗೊಳ್ಳಲು ಅರ್ಥವ್ಯವಸ್ಥೆಗೆ ಪೂರಕವಾಗುವಂತೆ ಸಂತೆಗಳು, ಮಾರುಕಟ್ಟೆಗಳು ಹೆಚ್ಚಾದವು. ರಾಜರೇ ವ್ಯಾಪಾರದ, ಸಂತೆಗಳ, ಅಗತ್ಯವನ್ನು ಪ್ರಯೋಜನಗಳನ್ನು ಗುರುತಿಸಿದ್ದರು. ಸಮೀಪದ ನಗರಗಳ ವ್ಯಾಪಾರಿ ಸಂಘಗಳು ಪಟ್ಟಣಸ್ವಾಮಿಯ ಮಾರ್ಗದರ್ಶನದಲ್ಲಿ ವ್ಯಾಪಾರ ವ್ಯೆವಾಟನ್ನು ನಿರ್ವಹಿಸುತ್ತಿದ್ದವು. ನಾಡ ಮುಖ್ಯಸ್ಥ ನಾಡಗೌಡ ಅಥವಾ ಮಹಾ ಮಂಡಲೇಶ್ವರ ಇವರ ಅನುಮತಿಯನ್ನು ಪಡೆದು ಸಂತೆಗಳನ್ನು ಏರ್ಪಡಿಸಲಾಗುತ್ತಿತ್ತು. ಸಂತೆಗಳನ್ನು ಪ್ರಾರಂಭಿಸಿದ ವರ್ತಕರಿಗೆ ಅನೇಕ ಸೌಲಭ್ಯಗಳನ್ನು ಸ್ಥಳೀಯ ಸಂಸ್ಥೆಗಳು, ಅಧಿಕಾರಿಗಳು ನೀಡುತ್ತಿದ್ದರು. ಸಂತೆ ನಡೆಯುವುದರಿಂದ ಆ ಸ್ಥಳದ ಮಹತ್ವ ಹೆಚ್ಚುತ್ತಿತ್ತು. ಹಳ್ಳಿ ಬೆಳೆದು ಪಟ್ಟಣವಾಗುತ್ತಿತ್ತು. ಪಟ್ಟಣದ ಆಡಳಿತವನ್ನು ನೋಡಿಕೊಳ್ಳಲು ಪಟ್ಟಣಶೆಟ್ಟಿಯನ್ನು ನಿಯಮಿಸಲಾಗುತ್ತಿತ್ತು, ಒಂದಾನೊಂದು ಕಾಲದಲ್ಲಿ ಕೇವಲ ಸಾಮಾನ್ಯ ಗ್ರಾಮವಾಗಿದ್ದ ಹಳ್ಳಿಯು ಹೊಸದಾಗಿ ನಿರ್ಮಾಣವಾದ ಪೇಟೆ, ಮಾರುಕಟ್ಟೆ, ಸಂತೆಯ ಕಾರಣದಿಂದ ಅಥವಾ ಜಾತ್ರೆಯ ಕಾರಣದಿಂದ ಪ್ರಾಮುಖ್ಯತೆಯನ್ನು ಪಡೆದು ಊರಿನ ಹೆಸರು ಸಂತೆಯೊಂದಿಗೆ ಬೆರೆತಿರುವುದನ್ನು ಅನೇಕ ಉದಾಹರಣೆಗಳಿಂದ ತಿಳಿದುಬರುವುದು. ಬಹುಶಃ ಸಂತೆಯು ಪ್ರಾಮುಖ್ಯತೆಯನ್ನು ಪಡೆದಾಗ ಈ ಹೆಸರಿನ ಬದಲಾವಣೆ ಆಗಿರಬಹುದು ಅಥವಾ ಸಂತೆಯು ನಡೆಯುವ ಸ್ಥಳಕ್ಕೆ ಆ ಹೆಸರು ಬಂದಿರಬಹುದು.

ಉದಾ: ಶನಿವಾರಸಂತೆ, ಸೋಮವಾರಪೇಟೆ, ಕೊಡಲಿ ಪೇಟೆ, ವೀರರಾಜೇಂದ್ರಪೇಟೆ (ಕೊಡಗುಜಿಲ್ಲೆ). ಸಂತೆಬೆನ್ನೂರು, ಸಂತೆಸರಗೂರು, ಸಂತೆಮರಳ್ಳಿ ಮುಂತಾದವುಗಳು ಅನೇಕ ಸಂದರ್ಭಗಳಲ್ಲಿ ರಾಜರ ಪರಿವಾರದವರ ಹೆಸರಿನಿಂದ ಪಟ್ಟಣಗಳನ್ನು ನಿರ್ಮಿಸಿ ಅಲ್ಲಿ ಸಂತೆ ನಡೆಯುವ ವ್ಯವಸ್ಥೆ ಮಾಡಿರುವುದು ಶಾಸನಗಳಿಂದ ತಿಳಿದು ಬರುವುದು. ಉದಾ: ನಾಗಲಾಪುರ (ಹೊಸಪೇಟೆ) (೧೫೨೦) ವರದ ರಾಜಮ್ಮನ ಪೇಟೆ, ಕೆಂಪರಾಜಪಟ್ಟಣ, ತಿರುಮಲಾದೇವಿ ಪಟ್ಟಣ, ಬೊಮ್ಮರಸ ಪಟ್ಟಣ ಮತ್ತು ವಿಜಯಡಣ್ಣಾಯಕನ ಪಟ್ಟಣ.

ನಗರಗಳು ವಿಶಾಲವಾಗಿ ಬೆಳೆದಂತೆ ವಿವಿಧ ಬಡಾವಣೆ ಗಳಲ್ಲಿ ಬೇರೆ ಬೇರೆ ದಿವಸ ಸಂತೆ ನಡೆಯುವುದರಿಂದ ಆ ಪೇಟೆಗಳನ್ನು ಆಯಾ ದಿವಸ ನಡೆಯುವ ಸಂತೆಯ ಹೆಸರಿನಿಂದ ಅಥವಾ ಆ ಪೇಟೆಯನ್ನು ಕಟ್ಟಿಸಿದವರ ಹೆಸರಿನಿಂದ ಕರೆಯುವ ಪದ್ಧತಿ ಬಹುಶಃ ಪೇಶ್ವೆಯುವರ ಕಾಲದಲ್ಲಿ ರೂಢಿಯಲ್ಲಿ ಬಂದಿರುವುದು. ಸಾಮಾನ್ಯ ಸಂತೆಗಳಲ್ಲದೇ ವಿಶೇಷವಾದ ಧರ್ಮ

ಸಂತೆಗಳು ನಡೆಯುತ್ತಿದ್ದವು. ಕೆಲವು ಸಂತೆಗಳಲ್ಲಿ ಸರಕುಗಳ ಮೇಲೆ ಸಂತೆಸುಂಕ, ಮಾರಾಟ ತೆರಿಗೆ ವಿಧಿಸುತ್ತಿರಲಿಲ್ಲ. ಸಾಮಾನ್ಯವಾಗಿ ಸ್ಥಳೀಯ ಗ್ರಾಮದೇವತೆ ಅಥವಾ ಇತರ ಪ್ರಮುಖದೇವರ ವಾರದ ದಿವಸ ಸಂತೆಗಳನ್ನು ನಡೆಸುತ್ತಿದ್ದರು ಅದು ಇಂದಿಗೂ ರೂಢಿಯಲ್ಲಿ ಇರುವುದು. ವರ್ತಕರು ಸಂತೆ ಮೈದಾನದ ಮಧ್ಯದಲ್ಲಿ ದೇವಾಲಯ ನಿರ್ಮಿಸಿ ಆ ದೇವತೆಯ ವಾರದ ದಿವಸ ಸಂತೆ ನಡೆಸುತ್ತಿದ್ದರು. ಸಂತೆಯ ದಿವಸ ಸ್ಥಳೀಯ ಮಠ-ಮಾನ್ಯಗಳ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳ ದಾಸೋಹಕ್ಕೆ ವರ್ತಕರು ಮಾರಾಟ ಮಾಡುವ ವಸ್ತುಗಳನ್ನು ಪಸಿಗೆ(ಚಂದಾ)ರೂಪದಲ್ಲಿ ಸಂಗ್ರಹಿಸುವ ಪದ್ಧತಿ ಉತ್ತರ ಕರ್ನಾಟಕದ ಪ್ರಮುಖ ಸಂತೆಗಳಲ್ಲಿ ಕಂಡುಬರುವುದು.

***ಪೇಟೆಗಳು - ಅಂಗಡಿಗಳು***

ವಿಜಯನಗರದ ಕಾಲದಲ್ಲಿ ಪೇಟೆಗಳನ್ನು ಅವುಗಳ ಇರುವಿಕೆಯ ಆಧಾರದ ಮೇಲೆ ಹೊರಪೇಟೆ, ಒಳಪೇಟೆ ಮುಂತಾಗಿ ವಿಭಾಗಿಸಲಾಗಿತ್ತು. ಸಂತೆಯ ದಿವಸ ಸಂತೆಯು ಸಾಮಾನ್ಯವಾಗಿ ಹೊರಪೇಟೆಯಲ್ಲಿ ನಡೆಯುತ್ತಿತ್ತು. ಉಳಿದ ದಿನ ವ್ಯಾಪಾರ ಒಳಪೇಟೆಯಲ್ಲಿ ನಡೆಯುತ್ತಿತ್ತು. ವಿವಿಧ ವಸ್ತುಗಳ ಮಾರಾಟಕ್ಕೆ ಪ್ರತ್ಯೇಕವಾದ ಮಾರುಕಟ್ಟೆಗಳು ಇದ್ದವು. ಪ್ರತಿ ಒಂದು ಪೇಟೆಗೆ ನಾಲ್ಕು ದಿಕ್ಕಿನಲ್ಲಿ ಮೇರೆಗಳನ್ನು ಗೊತ್ತುಪಡಿಸಲಾಗುತ್ತಿತ್ತು. ಪೇಟೆಗಳ ಆಡಳಿತ ನಿರ್ವಹಣೆಯ ದೃಷ್ಟಿಯಿಂದ ಇದು ಉತ್ತಮ ವ್ಯವಸ್ಥೆಯಾಗಿತ್ತು. ಹಂಪೆಯ ೧೫೩೪ ರ ಶಾಸನದಲ್ಲಿ ಅಚ್ಯುತರಾಯ ಪೇಟೆಯ ಚತುಸ್ಸೀಮೆಯನ್ನು ಈ ರೀತಿ ಗೊತ್ತು ಪಡಿಸಲಾಗಿದೆ. (ಪಶ್ಚಿಮಕ್ಕೆ ಮತಂಗಪರ್ವತ, ಪೂರ್ವಕ್ಕೆ ತಿಪ್ಪರಾಜನ ತೋಟ, ಬಡಗ ತುಂಗಭದ್ರಾ ತೀರದ ಸೀತಾಕೊಂಡ, ತೆಂಕಣ ಭೂಪತಿಕೆರೆ ಇತ್ಯಾದಿ.)

ಸಂತೆಯ ಬಯಲಿನ ಅಂಗಡಿ ಸಂತೆಯ ದಿನ ಮಾತ್ರ ತೆರೆಯುತ್ತಿದ್ದವು. ಪೇಟೆಯ ಅಂಗಡಿಗಳು ಪ್ರತಿ ದಿನ ಕಾರ್ಯ ನಿರ್ವಹಿಸುತ್ತಿದ್ದವು. ಅಂಗಡಿಗಳಲ್ಲಿ ಹರದಗೇರಿ, ಸಾಮಾನ್ಯ ಅಂಗಡಿ, ಬಯಲು ಅಂಗಡಿ, ಧರ್ಮದ ಅಂಗಡಿ, ದೇವರ ಅಂಗಡಿ, ಮಾನ್ಯದ ಮುಂತಾದ ಪ್ರಭೇದಗಳು ಇದ್ದವು. ಧರ್ಮದ ಅಂಗಡಿ, ದೇವರ ಅಂಗಡಿ ಮತ್ತು ಮಾನ್ಯದ ಅಂಗಡಿಗಳಿಗೆ ಕರವಿನಾಯಿತಿ ಇತ್ತು. ವಿಜಯನಗರದ ಸಂತೆಯನ್ನು ಕುರಿತಂತೆ ಪಯಸ್: ಈ ರೀತಿ ವಿವರಿಸುತ್ತಾನೆ. "ಇಲ್ಲಿ ಪ್ರತಿದಿನ ಸಾಯಂಕಾಲ ಸಂತೆ ನಡೆಯುತ್ತಿತ್ತು. ಅಲ್ಲಿ ಸಾಮಾನ್ಯ ಕುದುರೆಗಳು, ಗಿಡ್ಡ ಜಾತಿಯ ಸವಾರಿ ಕುದುರೆಗಳು, ಹಣ್ಣು ಮತ್ತು ತೋಟದ ಬೆಳೆಗಳು ಮತ್ತು ಮರದ ವಸ್ತುಗಳು ಮಾರಾಟವಾಗುತ್ತಿತ್ತು. ಅಲ್ಲದೇ ಪ್ರತಿ ಶುಕ್ರವಾರ ಹಂದಿಗಳ, ಕೋಳಿಗಳ ಮತ್ತು ಒಣಗಿದ ಮೀನುಗಳ ಸಂತೆ ನಡೆಯುತ್ತಿತ್ತು (ಬಹುಶಃ ಇದು ಮುಸ್ಲೀಮ ಧರ್ಮಿಯರಿಗೆ ಇತರ ಮಾಂಸಾಹಾರಿಗಳಿಗೆ ಇದ್ದಿರಬಹುದು). ನಗರದ ಪ್ರತಿ ಒಂದು ಭಾಗದಲ್ಲಿ ಪ್ರತಿ ದಿವಸ ಸಂತೆ ನಡೆಯುತ್ತಿತ್ತು.

***ತೂಕ ಮತ್ತು ಅಳತೆ***

ವ್ಯಾಪಾರದ ಪ್ರಮುಖ ಸಾಧನಗಳಾದ ತೂಕ ಮತ್ತು ಅಳತೆಗಳಲ್ಲಿ ತುಂಬಾ ವೈವಿಧ್ಯತೆ ಇತ್ತು. ಇದು ಪ್ರದೇಶದಿಂದ ಪ್ರದೇಶಕ್ಕೆ ತುಂಬಾ ಬದಲಾಗುತ್ತ ಹೋಗುತ್ತಿತ್ತು. ವರ್ತಕರು ಇದರ ಲಾಭವನ್ನು ಪಡೆಯದೇ ಇರಲಿಲ್ಲ. ಈ ಸಾಂಪ್ರದಾಯಿಕ ಪದ್ಧತಿಯನ್ನು ಬದಲಾಯಿಸಲು ರಾಜರಿಗೂ ಕಷ್ಟವಾಗಿತ್ತು ಎಂದು ಟಿ. ವಿ. ಮಹಾಲಿಂಗಮ್ ಸೂಚಿಸಿರುವರು. ತೂಕಕ್ಕೆ ತ್ರಾಸ್ (ತಕ್ಕಡಿ), ಅಳತೆಗೆ ಬಳ್ಳ, ಕೊಳಗ, ಖಂಡಗ ಉಪಯೋಗಿಸುತ್ತಿದ್ದರು.

***ನಾಣ್ಯಗಳು***

ಹಿಂದಿನ ನಾಣ್ಯ ಪದ್ಧತಿ ಮುಂದುವರೆದರೂ ಎರಡನೆಯ ಹರಿಹರನ ಕಾಲದಲ್ಲಿ ಕಂದಾಯವನ್ನು ನಾಣ್ಯ ರೂಪದಲ್ಲಿ ವಸೂಲು ಮಾಡುವ ಪದ್ಧತಿ ರೂಢಿಯಲ್ಲಿ ಬಂದುದರಿಂದ ವಿವಿಧ ಮೌಲ್ಯದ ನಾಣ್ಯಗಳನ್ನು ಟಂಕಿಸುವುದು ಅನಿವಾರ್ಯವಾಯಿತು. ಕೃಷ್ಣದೇವ ರಾಯನು ಹೊಸ ಚಿನ್ನದ ನಾಣ್ಯ 'ದುರ್ಗಿ'ಯನ್ನು ಜಾರಿಯಲ್ಲಿ ತಂದನು. ಅಬ್ದುಲ್ ರಜಾಕ್‌ನು ಮೂರು ಬಗೆಯನ್ನು (ಚಿನ್ನ, ಬೆಳ್ಳಿ, ತಾಮ್ರ) ನಾಣ್ಯಗಳನ್ನು ಕುರಿತು ಹೇಳಿರುವನು. 'ಗದ್ಯಾಣ' ಮತ್ತು ಫೊನ್ ಪ್ರಮುಖ ನಾಣ್ಯಗಳಾಗಿದ್ದವು. ಅರಮನೆಯ ಪಕ್ಕದಲ್ಲಿಯೇ ಟಂಕಸಾಲೆ ಇತ್ತು ಎಂದು ಸಹ ವಿವರಿಸಿರುವನು.

***ತೆರಿಗೆ ಪದ್ಧತಿ :*** ಸಂತೆಗಳ ಮತ್ತು ಮಾರುಕಟ್ಟೆಗಳ ಸರಕುಗಳ ಮೇಲೆ ವಿಧಿಸುತ್ತಿದ್ದ ಕರಗಳ ಮೇಲಿಂದ, ಸಂತೆಗಳಲ್ಲಿ ಸಂಗ್ರಹಿಸಿದ ಪ್ರವೇಶ ಸುಂಕಗಳಿಂದ ರಾಜ್ಯ ಸರ್ಕಾರಕ್ಕೆ ಗಣನೀಯವಾದ ವರಮಾನ ಬರುತ್ತಿತ್ತು. ಒಟ್ಟಾರೆ ಹೇಳುವುದಾದರೆ ವಿಜಯನಗರದ ಅರಸರ ಕಾಲದಲ್ಲಿ ವರ್ತಕರು ಮತ್ತು ಇತರರು ಸಾಕಷ್ಟು ಪ್ರಮಾಣದಲ್ಲಿ ತೆರಿಗೆಯನ್ನು ಕೊಡುತ್ತಿದ್ದರು ಎಂದು ತಿಳಿದು ಬರುವುದು. ತೆರಿಗೆಯ ಜಾಲದಿಂದ ಹೊರಗೆ ಉಳಿದವರೇ ಇರಲಿಲ್ಲ ಎಂದು ಹೇಳಬಹುದು. ವ್ಯಾಪಾರಿ ವಸ್ತುಗಳ ಮೇಲೆ ಆಮದು ಸುಂಕ, ರಫ್ತುಸುಂಕ, ಮಾರಾಟ ತೆರಿಗೆ, ಜಕಾತಿ, ಸರ್ವೆ ಸಾಮಾನ್ಯವಾಗಿದ್ದವು. ಮದುವೆ ಮತ್ತು ವಿಧವಾ ವಿವಾಹಕ್ಕೂ (ಕೂಡಿಕೆ) ತೆರಿಗೆಯನ್ನು ವಿಧಿಸುತ್ತಿದ್ದರು (೧೪೯೬ ರ ಒಂದು ಶಾಸನ). ಯಾವುದೇ ವ್ಯಕ್ತಿಯು ವೃತ್ತಿ ತೆರಿಗೆಯಿಂದ ಹೊರಗೆ ಉಳಿದಿರಲಿಲ್ಲ. ವೃತ್ತಿ ತೆರಿಗೆಯನ್ನು ವೃತ್ತಿದಾರರ ಆದಾಯದ ಮೇಲೆ ಹಾಕದೇ ಕಸಬು ಆಧಾರದ ಮೇಲೆ ವಿಧಿಸಲಾಗುತ್ತಿತ್ತು. ಕಸಬುದಾರರು ಅಲ್ಲದೇ ಗ್ರಾಮದ ಮುಖ್ಯಸ್ಥರು, ಕುರುಬರು, ಆಯಗಾರರು ವೃತ್ತಿ ತೆರಿಗೆಯನ್ನು ನಗದು ರೂಪದಲ್ಲಿ ವರ್ಷಕ್ಕೆ ಒಂದು ಸಾರಿ ಕೊಡಬೇಕಾಗುತ್ತಿತ್ತು. ಆದರೆ ಅಳಿಯ ರಾಮರಾಯ ಮತ್ತು ಸದಾಶಿವ ಇವರ ಕಾಲದಲ್ಲಿ ಕ್ಷೌರಿಕರ ವೃತ್ತಿ ತೆರಿಗೆಯನ್ನು ರಾಜ್ಯಾದಂತ ತೆಗೆದುಹಾಕಿದ ಅನೇಕ ಉಲ್ಲೇಖಗಳು ದೊರೆಯುವವು. ರಾಜ್ಯದ ಒಟ್ಟು ಆದಾಯದಲ್ಲಿ ಬಹುಪಾಲು ವಾಣಿಜ್ಯ ತೆರಿಗೆ ಮತ್ತು ವೃತ್ತಿ ತೆರಿಗೆಯ ಮೂಲಗಳಿಂದ

ಸಂಗ್ರಹವಾಗುತ್ತಿತ್ತು. ಹೊಸದಾಗಿ ಪ್ರಾರಂಭವಾಗುವ ಸಂತೆಗಳಿಂದ ರಾಜ್ಯಕ್ಕೆ ಒಳ್ಳೆಯ ಆದಾಯ ಬರುತ್ತಿತ್ತು. ಲಾಭದ ಮೇಲೆ ಗೊತ್ತಾದ ಅವಧಿಗೆ ನಿಗದಿತ ಸುಂಕವನ್ನು ವ್ಯಾಪಾರಿಗಳು, ಅಂಗಡಿಕಾರರು, ಚಿಲ್ಲರೆ ವ್ಯಾಪಾರಿಗಳು ಕೊಡಬೇಕಾಗುತ್ತಿತ್ತು. ಕೈಗಾರಿಕೆಗಳ ಮೇಲೆ ನಿವ್ವಳ ಲಾಭದ ಮೇಲೆ ತೆರಿಗೆ ಹಾಕಲಾಗುತ್ತಿತ್ತು.

***ವಿವಿಧ ಹಂತದ ತೆರಿಗೆ***

ರಾಜ್ಯದ ಬೊಕ್ಕಸಕ್ಕೆ ಹೆಚ್ಚು ಆದಾಯ ಬರುವಂತೆ ವಿವಿಧ ಹಂತದ (ಮಲ್ಟಿಪಲ್) ತೆರಿಗೆಯನ್ನು ವಿಧಿಸಲಾಗುತ್ತಿತ್ತು. ನ್ಯೂನಿಜ್ ಹೇಳುವಂತೆ ನಾಗಲಾಪುರ (ಹೊಸಪೇಟೆ) ಒಂದರಿಂದಲೇ ಸುಮಾರು ೪೨,೦೦೦ ಪಗೋಡಗಳಷ್ಟು ಸುಂಕ ಸಂದಾಯ ವಾಗುತ್ತಿತ್ತು. ಸರ್ಕಾರ ಸುಂಕದ ಕಟ್ಟೆಗಳನ್ನು ಹರಾಜು ಹಾಕುತ್ತಿತ್ತು. ಸುಂಕದ ಕಟ್ಟೆಯ ಗುತ್ತಿಗೆದಾರರು ತಮ್ಮ ತಮ್ಮಲ್ಲಿ ಪೈಪೋಟಿ ನಡೆಸುತ್ತಿದ್ದರು ಎಂಬುದು ಶಿವಮೊಗ್ಗದ ಒಂದು ಶಾಸನದಿಂದ ತಿಳಿದುಬರುವುದು. ಬಿ. ಲುಯಿಸ್ ರಾಯಿಸ್ ಅವರ ಪ್ರಕಾರ ವ್ಯಾಪಾರಿ ವಸ್ತುಗಳ ಮೇಲೆ ಮೂರು ರೀತಿಯ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಸ್ಥಳ ಆದಾಯ (ಆಮದು ವಸ್ತುವಿನ ಮೇಲೆ ಮಾರಾಟ ತೆರಿಗೆ) ಮಾರ್ಗ ಆದಾಯ (ಜಕಾತಿ) ಮತ್ತು ಮಾಮೂಲಾದಾಯ (ರಫ್ತು ಸುಂಕ).

***ಸಂತೆಯ ಶಾಸನಗಳು***

ವಿಜಯನಗರದ ಕಾಲದಲ್ಲಿನ ಸಂತೆಗೆ ನೇರವಾಗಿ ಸಂಬಂಧ ಪಟ್ಟಂತಹ ಕೆಲವು ಆಯ್ದ ಶಾಸನಗಳ ಸಂಕ್ಷಿಪ್ತ ಪರಿಚಯವನ್ನು ಈ ಮೂಲಕ ವಿವರಿಸಲಾಗಿದೆ. ಬೆಂಗಳೂರು ಜಿಲ್ಲೆಯ ಆನೇಕಲ್ ತಾಲೂಕಿನ ಎರಡನೆ ದೇವರಾಯನ ೧೪೨೭ರ ಒಂದು ಶಾಸನ, ಸರ್ಜಾಪುರದ ೧೪೦೮ರ ಶಾಸನ, ಮತ್ತು ಮಾಯಸಂದ್ರದ ೧೪೧೨ರ ಶಾಸನಗಳು ಸಂತೆಯನ್ನು ಕುರಿತಂತೆ ಅನೇಕ ಮಾಹಿತಿ ನೀಡುವವು. ಅಂದರೆ ಸಂತೆ ನಡೆಸುವವರಿಗೆ ಉಚಿತ ಭೂಮಿ, ಪಟ್ಟಣಸ್ವಾಮಿ ಎಂಬ ಬಿರುದು, ವಡ್ಡ ವ್ಯವಹಾರಿ ಮತ್ತು ಉಭಯ ನಾನಾದೇಶಿಯರಿಗೆ ಹಲವು ವರ್ಷಗಳವರೆಗೆ ವಿವಿಧ ಸುಂಕಗಳಲ್ಲಿ ರಿಯಾಯಿತಿ ಮುಂತಾದವುಗಳು. ಆನೇಕಲ್ ತಾಲೂಕಿನ ಸೋಮ ಗೊಂಡನಹಳ್ಳಿಯಲ್ಲಿ ೧೪೧೨ರಲ್ಲಿ ಸಂತೆ ಪ್ರಾರಂಭ ಮಾಡಿ ಸ್ಥಳದ ಇಬ್ಬರು ಸಹೋದರರಿಗೆ ಪಟ್ಟಣಸ್ವಾಮಿಗಳನ್ನಾಗಿ ನೇಮಿಸಿ ನೀರಾವರಿ ಭೂಮಿಯನ್ನು ಸಂತೆ ನಡೆಸುವ ಸಲುವಾಗಿ ಜಹಗೀರು ಹಾಕಿಕೊಟ್ಟಿರುವ ವಿಷಯ ಶಾಸನದಿಂದ ತಿಳಿಯುವುದು. ಬೆಂಗಳೂರು ನಗರದ ಒಂದು ತೆಲಗು ಶಾಸನ ಅರವೀಡುವಂಶ, (೧೬೨೮) ವೀರರಾಮದೇವರಾಯನು ಮುತ್ಯಾಲುಪೇಟೆಯ ರಂಗನಾಥ ದೇವಾಲಯಕ್ಕೆ ವಿವಿಧ ನಾನಾದೇಶಿಯರಿಂದ (ಪೆನುಗೊಂಡೆ, ಬೆಂಗಳೂರು, ಗೂಳೂರು, ದೊಡ್ಡಬಳ್ಳಾಪುರ, ಚಿಕ್ಕನಾಯಕನಹಳ್ಳಿ) ದೇವಾಲಯಕ್ಕೆ ದಾನ ನೀಡಿದ ವಿವರ ದೊರೆಯುವುದು. ಆಗ ಇಮ್ಮಡಿ ಕೆಂಪೇಗೌಡ ಬೆಂಗಳೂರನ್ನು ಆಳುತ್ತಿದ್ದನು. ಅದರಂತೆ ದೊಮ್ಮಲೂರಿನ ಚೊಕ್ಕನಾಥ ದೇವಾಲಯದ ಶಾಸನ ಮತ್ತು ದೇವನಹಳ್ಳಿ ತಾಲೂಕಿನ ಹೂಡಿಯ ೧೩೩೨ರ ಶಾಸನ, ಬೆಂಗಳೂರಿನ ಬಳಿಯ ಬೇಗೂರಿನ ೧೪೦೨ರ ಶಾಸನವು ನಗರೇಶ್ವರ ದೇವಾಲಯಕ್ಕೆ ವರ್ತಕರು ನೀಡಿದ ದಾನವನ್ನು ವಿವರಿಸುವುದು. ಸರ್ಜಾಪುರದ ೧೪೦೮ರ ಶಾಸನವು ಸಂತೆ ಕಟ್ಟೆಯನ್ನು ನಿರ್ಮಿಸಿದ ಬಗ್ಗೆ ವಿವರಿಸುವುದು, ಮೈಸೂರು ಜಿಲ್ಲೆಯ ಕಳಲೆಯ ಶಾಸನವು ಗವರೆ, ಗಾತ್ರಿಗ ಮುಂತಾದ ವರ್ತಕರನ್ನು ಕುರಿತು ವಿವರಿಸಿದರೆ ಮಾಂಬಳ್ಳಿಯ ೧೩ನೇ ಶತಮಾನದ ಶಾಸನ ನಾನಾದೇಶಿಯರನ್ನು ಕುರಿತು ವಿವರಿಸುವುದು. ಉತ್ಪಾದಕರ ವಿನಿಮಯ ಸಂಘಗಳನ್ನು ಕುರಿತಂತೆ ಸುಮಾರು ೫೦ ಕ್ಕಿಂತ ಹೆಚ್ಚು ಶಾಸನಗಳ ಉಲ್ಲೇಖ ದೊರೆಯುವುದು. ಅವುಗಳಲ್ಲಿ ಬಹಳಷ್ಟು ಶಾಸನಗಳು ದಕ್ಷಿಣ ಕರ್ನಾಟಕದ ಜಿಲ್ಲೆಗಳಿಗೆ ಸೀಮಿತವಾಗಿವೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. **ಗ್ಯಾಸೆಟಿಯರ್ ಆಫ್ ಮೈಸೂರು ಮತ್ತು ಕೂರ್ಗ್.**, (೧೮೭೩), ಬಿ. ಎಲ್. ರಾಯಿಸ್.

*೨. **ಮೈಸೂರು ಗ್ಯಾಸೆಟಿಯರ್.**, ಭಾಗ ೨, (೧೯೩೦), ಸಿ. ಹಯವದನರಾವ್.

*೩. **ಎಫಿಗ್ರಾಫಿಯಾ ಕರ್ನಾಟಿಕಾ** ಸಂಪುಟಗಳು.

*೪. ಡಾ|| ಬಿ. ಆರ್. ಹಿರೇಮಠ., **ಶಾಸನಗಳಲ್ಲಿ ಕರ್ನಾಟಕದ ವರ್ತಕರು**, ಕ.ವಿ.ವಿ. ಧಾರವಾಡ.

*೫. ವಿಜಯನಗರದ ಇತಿಹಾಸ ವಿಚಾರಗೋಷ್ಠಿ ಪ್ರಬಂಧಗಳು, ೧೯೭೦ (ಅಪ್ರಕಟಿತ)

*೬. **ವಿಷಯ ವಿಶ್ವಕೋಶ.**, (೧೯೭೯), ಮೈಸೂರು ವಿ. ವಿ.

*೭. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂಪುಟಗಳು**, ೧೯೮೪.

*೮. ವಿಜಯನಗರ ಶಾಸನಗಳು, **ಸಂಪುಟ ೧ ಮತ್ತು ೨**, ಡಾ. ಬಿ. ಆರ್. ಗೋಪಾಲ.

*೯. **ಕರ್ನಾಟಕ ಚರಿತ್ರೆ**, ಸಂಪುಟ ೩, ಕನ್ನಡ ವಿಶ್ವವಿದ್ಯಾಲಯ, ಹಂಪೆ, ೧೯೯೭.

ಕಲ್ಲನಗೌಡ ತಿಪ್ಪನಗೌಡ ಪಾಟೀಲ್*

# ಹುಲಿಮನಿ ಆಟ ಒಂದು ಪ್ರಾಚೀನ ಪರಂಪರೆಯೆ?

ಈಗಿನ ಶತಮಾನಗಳಲ್ಲಿ ಓದುವ ಪಾಠಗಳು ಪ್ರಾಮುಖ್ಯ ಪಡೆದರೆ ಪುರಾತನ ಕಾಲದಿಂದಲೂ ಆಟಗಳು ಬದುಕಿನ ದಿಕ್ಕು ಬದಲಿಸುವ ಸೂಚಕಗಳಾಗಿದ್ದವು. ದ್ವಾಪರಯುಗದಲ್ಲಿ ಪಗಡೆಯಾಡಿ ಪಾಂಡವರು ಸೋತು ವನವಾಸಕ್ಕೆ ಹೊಗಿದ್ದುಂಟು. ಇವರಂತೆ ಎಷ್ಟೋ ರಾಜ ಮಹಾರಾಜರ ಗತಿಯೂ ಆಗಿದೆ. ಉದಾಹರಣೆಗೆ ಪಡೆಯದಣಿ ರಾವಬದ್ದೂರರು ಇತ್ಯಾದಿ ಪುಟ್ಟ ಸಂಸ್ಥಾನಿಕರು ಗೌಡ ದೇಶಾಯರು, ಇನ್ನು ಅನೇಕ ಜನಸಾಮಾನ್ಯರು ಈ ಪಗಡಿ ಆಟವನ್ನು ಆಡಿ ಸೋತು ಆಸ್ತಿ, ರಾಜಕೀಯ ಅಧಿಕಾರ ಶ್ರೀಮಂತಿಕೆ ಯನ್ನು ಕಳೆದುಕೊಂಡು ನಿರಾಶ್ರಿತರಾದ ಕಥೆಗಳುಂಟು.

ಆದರೆ ಈ ಹುಲಿಮನಿ ಆಟ ಅಂಥ ಆಟವಾಗದೆ ಮೋಜಿಗೂ ಒಗ್ಗಿಕೊಂಡು ಪುರಾತನತೆಯನ್ನು ಹೊಂದಿದೆ. ಇದನ್ನು ಬಿಡುವಿನ ವೇಳೆಯಲ್ಲಿ ಬೇಸರ ಕಳೆದುಕೂಳ್ಳಲಿಕ್ಕೆಂದು ವಿನೋದಕ್ಕಾಗಿ ಗೆಳೆಯರಲ್ಲಿ ಮಾವ ಅಳಿಯರ ನಡುವೆ ಹಬ್ಬ ಹರಿದಿನಗಳಲ್ಲಿ ಶ್ರೀಮಂತರಿಂದ ಹಿಡಿದು ಸಾಮಾನ್ಯರವರೆಗೆ ಆಡುತ್ತಿದ್ದಂಥ ಆಟವಿದು. ಈ ಆಟಕ್ಕೆ ಜಿದ್ದು ಇಲ್ಲಾ ಜಗಳವಂತೂ ಇಲ್ಲ. ಈ ಆಟಕ್ಕೆ ವಿಶಿಷ್ಟ ಬುದ್ಧಿಚಾಣಾಕ್ಷತೆ ಇದ್ದರೆ ಸಾಕು. ಆಟದ ವಿವರ : ಹುಲಿಮನಿ ಇದು ಕೋನ ಆಕಾರವಾಗಿ ಮೂರು ರೇಖೆ ಎಳೆದು ಮಧ್ಯ ಭಾಗದಿಂದ ಮೂರು ಗೆರೆಗಳನ್ನು ಅಡ್ಡ ರೇಖೆಯನ್ನು ಹಾಕಿ ಮೇಲೆ ಉಳಿದ ಭಾಗವೇ ಗುಡ್ಡವೆಂದು ಹೇಳವುದುಂಟು.

ಇನ್ನು ೩ ದೊಡ್ಡಗಾತ್ರದ ಅಡಕೆ ಬೆಟ್ಟದಂತ ಹರಳುಗಳು ಇವು ಹುಲಿಗಳು. ಇನ್ನು ೧ ಸಣ್ಣಗಾತ್ರ ೩ ಹರಳುಗಳು, ಹಸುಗಳಾಗಿ ಆಡುವಂತ ವ್ಯಕ್ತಿಗಳು. ಒಬ್ಬರು ಹುಲಿಗಳನ್ನು ಒಬ್ಬರು ಹಸುಗಳನ್ನು ಬಿಡುತ್ತಾ ಹೋಗುತ್ತಾರೆ. ಹುಲಿ ೩ ಅಡ್ಡ ಮನೆಗಳಲ್ಲಿ ಕೂಡುತ್ತವೆ ಹುಸುಗಳು ಒಂದೆ ಮನೆ ಹಿಡಿಯವುದು ಹುಲಿ ಆಡುವನು ಚಾಣಾಕ್ಷತೆಯಿಂದಾ ಹಸುಗಳನ್ನು ಕಚ್ಚುತ್ತಾ ಹೋದರೆ, ಹಸು ಆಡುವವನು ಸೋಲುತ್ತಾನೆ, ಇದರಂತೆ, ಹಸು ಒಂದು ಬಂದು ಹುಲಿಗೆ ಸಿಗದಂತೆ ಬಂದು ಮನೆಯಲ್ಲಿ ಕುಳಿತರೆ ಹುಲಿಗೆ ಜಾಗ




ಸಿಗದೆ. ಹುಲಿ ಸೋತು ಹೋದಂತೆ. ಹುಲಿ ಗಪ್ಪನೆ ಕೂಡುತ್ತದೆ. ಹೀಗೆ ಈ ಹುಲಿಮನಿ ಆಟದ ಕೌಶಲ್ಯ.

ಈ ಹುಲಿಮನಿಯನ್ನು ಹಿಂದೆ ಪುರಾತನಕಾಲದಲ್ಲಿ ಆಡಿದ ರೇಖಾಚಿತ್ರಗಳನ್ನು ನಾವು ಇಂದಿಗೂ ಕಾಣಬಹುದು. ಹಾಳು ಬಿದ್ದ ಊರುಗಳಲ್ಲಿ ಕಾಡುಗಳ ಬಂಡೆ ಕಲ್ಲಿನಲ್ಲಿ, ಊರ ಅಗುಸಿಯಲ್ಲಿ ದೊಡ್ಡ ಆಲದಮರದ ಅಡಿಯ ಹಾಸುಗೆ ಕಲ್ಲಿನಲ್ಲಿ, ಗುಡಿ ಒಳಭಾಗದಲ್ಲಿ, ಗರಡಿಮನೆ ಕಟ್ಟೆ ಮೇಲೆ, ಅಲ್ಲದೆ ರಾಜ ಮಹಾರಾಜರ ವಾಡೆಗಳಲ್ಲಿ ಕಾಣಬರುತ್ತವೆ. ಉದಾಹರಣೆಗೆ ಕಿತ್ತೂರ ಚೆನ್ನಮ್ಮನ ಕೋಟೆ ಮಧ್ಯಭಾಗದ ಆಲದ ಮರದ ಕಟ್ಟೆಯ ಮೇಲೆ ಇಂದಿಗೂ ರೇಖಾಚಿತ್ರಗಳನ್ನು ಕಾಣಬಹುದು. ಇಂದಿಗೂ ಮೋಜಿಗಾಗಿ ಹಳ್ಳಿ ಶಹರಗಳಲ್ಲಿ ಹುಲಿಯಾಟ ಆಡುವುದನ್ನು ಕಾಣಬಹುದು. ಇದು ಜಿದ್ದಿಗಲ್ಲ. ಕೇವಲ ಬುದ್ಧಿ ಚಾಣಾಕ್ಷತನಕ್ಕಾಗಿ ಆಡುವ ಹುಲಿಮನಿಯಾಟ. ಇನ್ನು ಇದರಂತೆ ಎರಡು ಹುಲಿ ಇಪ್ಪತ್ಮೂರು ಹಸುಹಳ್ಳಿನ ಆಟ. ಇದಕ್ಕೆ ಚಕ್ರಕೋಟಿ ಆಟವೆಂದು ಹೆಸರು. ಇದು ಕೂಡಾ ಹುಲಿಮನಿ ಆಟದಂತಿರುತ್ತದೆ. ಇನ್ನು ನಕ್ಷತ್ರ ಮನಿ ಆಟ. ಇದು ಒಬ್ಬರೇ ಆಡತಕ್ಕಂತಾ ಆಟ. ಇದಕ್ಕೆ ಜಿದ್ದು ಇಲ್ಲಾ ಜೊತೆಗಾರ ಬೇಕಿಲ್ಲ. ಇದು ಹತ್ತುಮನಿ ಆಟ. ಇದಕ್ಕೆ ಒಂಬತ್ತು ಹರಳುಗಳು ಬೇಕು. ಒಂದಕ್ಕೊಂದು ಕಡಿಯುತ್ತಾ ಹೋದರೆ ಕೊನೆಗೆ ಒಂದೆ ಹರಳು ಉಳಿದರೆ ತಮ್ಮಷ್ಟಕ್ಕೆ ತಾವೇ

*ಬೆಳಧಡಿ ಅಂಚೆ, ಗದಗ ಜಿಲ್ಲೆ.



ಹೆಮ್ಮೆ ಪಟ್ಟಿಕೊಳ್ಳುವ ಆಟವಿದು. ಇನ್ನು ಚೌಕಮನಿ ಆಟ, ನಾಲ್ಕು ಜನರು ಬೇಕಾಗುವ ಆಟವಿದು. ಇದಕ್ಕೆ ಕವಡೆ ಇಲ್ಲವೇ ಚಕ್ಕ (ಹುಣಶಿ ಪಿತ್ತ) ಬೇಕಾಗುವುದು. ಕವಡೆ ಪೂರ್ತಿ ನಾಲ್ಕು ಡಬ್ಬ ಬಿದ್ದರೆ ಎಂಟು ಸಂಖ್ಯೆ ಏರುತ್ತದೆ. ಇನ್ನು ಐದು ನಾಲ್ಕು ಬಿದ್ದರೆ ಚೌರಿಯಂತಲೂ ಆವಾಗ್ಗೆ ಆಟವಾಡುವಂತಾವನಿಗೆ ಹಳ್ಳು ಹಚ್ಚಲು ಚಾಲು ಆಗುವುದು. ಮನಿಗಳಿಗೆ ಈ ಚಕ್ಕದ ಆಟ ಮನಿಗಳ ರೇಖೆ ಚೌಕಾಕಾರ ಉಳ್ಳದ್ದು, ಇಪ್ಪತ್ತೈದು ಮನೆ ಹೊಂದಿರುತ್ತದೆ. ಮಧ್ಯದ ಮನಿಗೆ ಹಚ್ಚಿ ಹಳ್ಳಗಳು ಬಂದು ಸೇರಿದಾಗ ಆಟ ಮುಗಿಯುವದು. ಯಾರ ಹಳ್ಳುಗಳು ಮೊದಲು ಸೇರುತ್ತವೆಯೋ, ಅವರೆ ಗೆದ್ದಹಾಗೆ. ಅವನಿಗೆ ಉಳಿದ ಮೂರುಜನ ಆಟಗಾರರು ಸಂಭಾವನೆ ಕೊಡಬೇಕಾಗುತ್ತದೆ. ಇದು ಉತ್ತರ ಕರ್ನಾಟಕದಲ್ಲಿ ಬಹಳ ಕಾಲದಿಂದಲೂ ಚಾಲ್ತಿಗಿದೆ. ಈಗಿನವರಿಗೂ ತುಂಬ ಪ್ರಾಮುಖ್ಯ ವೆನಿಸಿದೆ. ಆಟವಾಡಲು ಸಿದ್ಧರಾಗುತ್ತಾರೆ. ಬಹುಶಃ ಹಿಂದೆ ಆದಿ ಮಾನವರಲ್ಲಿ ಬಹಳ ಹುರುಪಿನಿಂದ ಇಂಥ ಆಟವಾಡುವ ಪದ್ಧತಿ ಇತ್ತು ಎಂಬುದರ ಬಗ್ಗೆ ನಮಗೆ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಕಲ್ಲಿನ ಹಾಸು ಬಂಡೆಗಳಲ್ಲಿ ಇಂದಿಗೂ ಈ ಬಗೆಯ ರೇಖಾ ಚಿತ್ರಗಳು ಇಂದಿಗೂ ಇರುವುದೇ ಈ ಮಾತಿಗೆ ಪುರಾವೆ ಎನಿಸಬಹುದು.



ಡಾ. ಕೆ. ಎಂ. ಮೈತ್ರಿ*

# ರಾಜಗೊಂಡ ಬುಡಕಟ್ಟಿನ ಚರಿತ್ರೆ

ಭಾರತ, ಮೂಲತಃ ಬುಡಕಟ್ಟುಗಳ ದೇಶ. ಗೊಂಡ, ಕೋಲ ಮತ್ತು ಮುಂಗಡಗಳು ಭಾರತದ ಮೂಲ ಬುಡಕಟ್ಟುಗಳು, ಗೊಂಡರು ಭಾರತದ ಬುಡಕಟ್ಟುಗಳಲ್ಲಿಯೇ ಅತ್ಯಧಿಕ ಸಂಖ್ಯೆಯಲ್ಲಿರುವವರು. ಅವರಿಂದ ಕವಲೊಡೆದವರೇ ರಾಜ ಗೊಂಡರು. ಗೊಂಡ, ರಾಜಗೊಂಡರು ಗೊಂಡಾರಣ್ಯದ ಮೂಲಿಗರು. ದ್ರಾವಿಡ ಮೂಲದ ಗೊಂಡಿ ಇವರ ಮಾತೃಭಾಷೆ. ರಾಜಕೀಯ ಹಿನ್ನೆಲೆಯುಳ್ಳ ಗೊಂಡರಿಗೆ *ರಾಜಗೊಂಡ* ಎಂಬ ಹೆಸರು ಲಭ್ಯವಾಗಿದೆ.

*ರಾಜಗೊಂಡರ ಹಿನ್ನೆಲೆ* : ಮಧ್ಯಭಾರತದ ಗೊಂಡರು ಸಂಘಟಿತಗೊಂಡು ಬಹಳ ಹಿಂದೆಯೇ ಸಣ್ಣಪುಟ್ಟ ರಾಜ್ಯಗಳನ್ನು ಸ್ಥಾಪಿಸಿದರು. ಅವರಿಗೆ ಗೊಂಡಾವನದಲ್ಲಿ ೫೨ ಗಢ (ಕೋಟೆ) ಗಳನ್ನು ಕಟ್ಟಿ ಆಳಿದ ಚರಿತ್ರೆಯಿದೆ. ರಾಜರ ಪರಂಪರೆ ಮುಂದುವರಿದಂತೆ ರಾಜರು ಮತ್ತು ಅವರ ಸಂಬಂಧಿಗಳೆಲ್ಲ ರಾಜಗೊಂಡರೆಂದೇ ಗುರುತಿಸಲ್ಪಟ್ಟರು. ಕಾಡಾಡಿ, ಬೇಟೆ, ಪಶುಪಾಲನೆ, ಕೃಷಿ ಹಿನ್ನೆಲೆಯ ಗೊಂಡರು ರಾಜ್ಯಗಳನ್ನು ಸ್ಥಾಪಿಸಿದೊಡನೆ ತಮ್ಮ ಹಿನ್ನೆಲೆಯನ್ನು ಮರೆಯಲಿಲ್ಲ. ಇನ್ನು ಬಹುಸಂಖ್ಯಾತರು ತಮ್ಮ ಹಿಂದಿನ ಕಾಯಕವನ್ನೇ ಮುಂದು ವರೆಸುವವರಾಗಿದ್ದರು. ಪ್ರಕೃತಿಯ ರಹಸ್ಯಮಯ ಜ್ಞಾನ ಅವರಿಗಿತ್ತು. ಅವರು ಪ್ರಕೃತಿಯ ಆರಾಧಕರಾಗಿದ್ದರು. ನಿಸರ್ಗದಲ್ಲಿಯ ವನಸ್ಪತಿ ಗಳಲ್ಲಿಯ ನಿಗೂಢ ಶಕ್ತಿಯ ಅರಿವು ಅವರಲ್ಲಿಯ ಹಲವರಿಗಿತ್ತು. ಅವರು ನಾಟಿ ವೈದ್ಯರಾಗಿ ಹೊರಹೊಮ್ಮಿದರು. ರಾಜರಿಗೆ ಆಯುರ್ವೇದದ ವೈದ್ಯರಾದವರು ಕಾಲಾಂತರದಲ್ಲಿ ರಾಜವೈದ್ಯ ರಾದರು. ರಾಜರು ತಮ್ಮ ರಾಜ್ಯಗಳನ್ನು ಮುಸ್ಲಿಮರ ಆಕ್ರಮಣದಿಂದ ಕಳೆದುಕೊಂಡ ಮೇಲೆ ರಾಜರ ಆಸ್ಥಾನದಲ್ಲಿಯ ರಾಜವೈದ್ಯರು ನಿರ್ಗತಿಕರಾದಾಗ ಸಾಮಾನ್ಯ ಜನರಿಗೆ ಆಯುರ್ವೇದದ ವೈದ್ಯರಾಗಿ ತಮ್ಮ ವೈದ್ಯಕೀಯ ಸೇವೆಯನ್ನು ವಿಸ್ತರಿಸಿದರು. ಕಾಲಾಂತರದಲ್ಲಿ ರಾಜವೈದ್ಯರು ರಾಜಗೊಂಡರೆಂದು ಹೇಳಿಕೊಳ್ಳುತ್ತಿರುವುದರಿಂದ ಸಾರ್ವಜನಿಕರಿಂದ ರಾಜಗೊಂಡರೆಂದು ಕರೆಯಲ್ಪಟ್ಟರು.

*ಇದುವರೆಗಿನ ಅಧ್ಯಯನಗಳು* : ಭಾರತದಲ್ಲಿ ಇದುವರೆಗಿನ ಗೊಂಡ, ರಾಜಗೊಂಡರನ್ನು ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಅವುಗಳಲ್ಲಿ ಪುಚ್. ಎಸ್. ಅವರ **ಭೂಮಿಯಾ ಗೊಂಡ್ಸ ಆಫ್ ಈಸ್ಟರ್ನ್ ಮಂಡ್ಲಾ** (೧೯೬೦), ಬಿ. ಹೆಚ್. ಮೆಹತಾರವರ **ಗೊಂಡ್ಸ ಆಫ್ ಸೆಂಟ್ರಲ್ ಇಂಡಿಯನ್ ಹೈಲ್ಯಾಂಡ್ಸ್** (೧೯೮೪), ಎಂ. ಎಲ್. ಪಟೇಲರ **ಕಸ್ಟಮರಿ ಲಾಜ ಆಮಾಂಗ್ ಗೊಂಡ್ಸ ಆಫ್ ಮಧ್ಯ ಪ್ರದೇಶ** (೧೯೮೫), ಸೇತು ಮಾಧವರಾವ್ ಪಗಡಿಯವರ **ಆಮಾಂಗ್ ದಿ ಗೊಂಡ್ಸ ಆಫ್ ಆದಿಲಾಬಾದ್**, ಹೈಮೆನ್‌ಡ್ರಾಫ್‌ರ ದಿ ರಾಜಗೊಂಡದ್ಸ ಆಫ್ ಆದಿಲಾಬಾದ (೧೯೪೮), ಸಿರಾಜ ಉಲ್ ಹಸನ್‌ರ **ಕಾಸ್ಟ್ ಆಂಡ್ ಟ್ರೈಬ್ಸ್ ಆಫ್ ಹೆಚ್.ಇ. ಹೆಚ್.** ನಿಝಾಮ್ಸ **ಡೋಮಿನಿಯನ್ಸ** (೧೯೮೯), ಜಮಿರುಲ್ಲಾ ಷರೀಫರ **ಗೊಂಡ ಸಂಸ್ಕೃತಿ**, ಕೆ. ಎಂ. ಮೈತ್ರಿಯವರ **ಬೀದರ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯ ಒಂದು ಸಮಾಜಶಾಸ್ತ್ರೀಯ ಅಧ್ಯಯನ** (೧೯೯೪), ಕಾಳಿಗಿ ಬಂಡೆಪ್ಪನವರ **ಬೀದರ್ ಜಿಲ್ಲೆಯ ಗೊಂಡ ಕುರುಬರ ಅಧ್ಯಯನ** (೧೯೯೫), ಕೆ. ಎಸ್. ಸಿಂಗರ **ದಿ ಶೆಡೂಲ್ಡ ಟ್ರೈಬ್** (೧೯೯೪), ಇತ್ಯಾದಿ ಕೃತಿಗಳು ಅಮೂಲ್ಯ ಮಾಹಿತಿಗಳನ್ನು ಒದಗಿಸುತ್ತವೆ. ಜೊತೆಗ **ಮ್ಯಾನ್ ಇನ್ ಇಂಡಿಯಾ**, ಜನಗಣತಿಯ ವಿಶೇಷ ವರದಿಗಳು ಆಂಥ್ರಪಾಲಜಿಕಲ್ ಸರ್ವೇ ಆಫ್ ಇಂಡಿಯಾದ ಪ್ರಕಟಿತ ಕೃತಿಗಳಲ್ಲಿ ಗೊಂಡರನ್ನು ಕುರಿತ ವಿಶೇಷ ಅಧ್ಯಯನಗಳ ಫಲಿತಗಳು ಕಾಣಬಹುದಾಗಿದೆ. ನಾಗಪುರದಿಂದ ಪ್ರಕಟಗೊಳ್ಳುವ *ಗೊಂಡಾವಾನ ದರ್ಶನವು* ಗೊಂಡರ ವಿಶೇಷ ಮಾಸಿಕ ವಾಹಿನಿ ಯಾಗಿದೆ. ಆದರೆ ಇಲ್ಲಿ ಪ್ರಸ್ತಾಪಿಸಲಿರುವ ರಾಜಗೊಂಡರ ಬಗ್ಗೆ ಇದುವರೆಗೂ ಯಾವುದೇ ಅಧ್ಯಯನಗಳು ನಡೆದಿಲ್ಲವೆಂದು ಹೇಳಿದರೆ ತಪ್ಪಾಗದು.

*ರಾಜಗೊಂಡರ ವಲಸೆಯ ನೆಲೆಗಳು* : ರಾಜಾಶ್ರಯ ಕಳೆದುಕೊಂಡ ರಾಜವೈದ್ಯ ರಾಜಗೊಂಡರು ಉದರ ಪೋಷಣೆಗಾಗಿ ವಲಸಿಗರಾಗಿ ಕಾಲಾಂತರದಲ್ಲಿ ಈ ಕೆಳಕಂಡ ನೆಲೆಗಳಲ್ಲಿ ನೆಲೆ ಗೊಂಡರು. ಮಹಾರಾಷ್ಟ್ರ ರಾಜ್ಯದ ನಾಸಿಕ್‌ದ ಟಕ್ಕರ ಮೈದಾನದ ಪುಲೆನಗರ, ನಾಗಪುರದ ರಘೋಜಿನಗರ, ಅಮರಾವತಿ ಜಿಲ್ಲೆಯ ಅಕೋಲ ತಾಲೂಕಿನ ಮೃತಜಾಪುರ, ಕಾಜಲೇಶ್ವರ, ಹಿವರಖೇಡ, ಧೂಲಿಯ ಜಿಲ್ಲೆಯ ಮಾಳೆಗಾಂವ ಮತ್ತು ಉಪನಗರ, ಅಹಮದ್ ನಗರ ಜಿಲ್ಲೆಯ ಶ್ರೀರಾಂಪುರ, ಮುಂಬಯಿಯ ವಡಾಲಾ (ದಾದರ್), ಜಲಗಾಂ ಜಿಲ್ಲೆಯ ಪಾಚೋರ ರೈಲ್ವೆನಿಲ್ದಾಣ, ಲಾತೂರಿನ ವಿಕಾಸನಗರ, ಪುಣೆಯ ಶಿವಾಜಿನಗರ; ಆಂಧ್ರ ಪ್ರದೇಶದ ವಿಜಯವಾಡ ಜಿಲ್ಲೆಯ ಕಾಕಂಡಿ, ಹೈದ್ರಾಬಾದಿನ ಕುಕಟಪಲ್ಲಿ, ಅನಂತಪುರ, ಮಧ್ಯಪ್ರದೇಶ ರಾಜ್ಯದ ಖಾಂಡ್ವಾ ಜಿಲ್ಲೆಯ ಸುಧಾಮಪುರಿ, ಭೂಪಾಲ್, ಉಜ್ಜೈನ : ಕೇರಳದ

*ಪ್ರವಾಚಕರು, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.

ಕೋಯಿಮತ್ತೂರ್ : ರಾಜಸ್ಥಾನದ ಆಜ್ಮೀರ : ಗುಜರಾತ್ ರಾಜ್ಯದ ಭಾವನಗರ್ ಜಿಲ್ಲೆಯ ಕೆಶೋದ, ಅಹಮದಾಬಾದ್, ಉತ್ತರ ಪ್ರದೇಶದ ಬೇವಾಸ್ : ದೆಹಲಿ ಮತ್ತು ಕರ್ನಾಟಕ ರಾಜ್ಯದ ಬೀದರ್ ಹೊರವಲಯದ ಹಳ್ಳದಕೇರಿ, ಹರಿಹರ ತಾಲೂಕಿನ ಬೆಳ್ಳೋಡಿ ಮತ್ತು ಬೆಂಗಳೂರಿನ ಮಾರುತಿ ಸೇವಾನಗರ. ಭಾರತದಲ್ಲಿ ಸುಮಾರು ೨೦೦೦ ಕುಟುಂಬಗಳು ಮತ್ತು ಸುಮಾರು ೧೦,೦೦೦ ಜನಸಂಖ್ಯೆ ರಾಜಗೊಂಡರದಿರ ಬಹುದಾಗಿದೆ.

ಬೀದರಿನ ಹೊರವಲಯದ ರಾಜಗೊಂಡ ಕಾಲೊನಿಯಲ್ಲಿ ನೆಲೆಗೊಂಡ ರಾಜಗೊಂಡರು ತಮ್ಮ ಉದರ ಪೋಷಣೆಗಾಗಿ ಆಯುರ್ವೇದದ ವ್ಯಾಪಾರಕ್ಕಾಗಿ ಹೈದರಾಬಾದ್, ನಿಜಾಮಬಾದ್, ಬೊಂಗೀರ, ಆದಿಲಾಬಾದ್ ಉದಗೀರ, ನಾಂದೇಡ, ಚಂದ್ರಪುರ, ನಾಗಪುರ, ಲಾತೂರ, ಪೂಣೆ, ಪರಳಿ, ಪರಭಣಿ, ಗುಲ್ಬರ್ಗ, ಇತ್ಯಾದಿಗಳತ್ತ ಹಾಗೂ ಹರಿಹರ ತಾಲೂಕಿನ ಬೆಳ್ಳೊಡಿ ಗ್ರಾಮದಲ್ಲಿ ನೆಲೆಗೊಂಡ ರಾಜಗೊಂಡರು ಚಿತ್ರದುರ್ಗಾ, ಹೊಸಪೇಟೆ, ಗಂಗಾವತಿ, ಹರಪನಹಳ್ಳಿ, ಬಳ್ಳಾರಿ, ದಾವಣಗೆರೆ, ಚಿಕ್ಕಮಗಳೂರು, ಬಿಜಾಪುರ, ಬಾಗಲಕೋಟೆ, ಧಾರವಾಡ, ಮಂಗಳೂರು, ಹಾಸನ, ಗೋವಾ, ಇತ್ಯಾದಿಗಳತ್ತ ಮತ್ತು ಬೆಂಗಳೂರಿನ ಮಾರುತಿ ಸೇವಾನಗರದಲ್ಲಿ ನೆಲೆಗೊಂಡ ರಾಜಗೊಂಡರು ಬೆಂಗಳೂರು, ಕೇರಳ ತಮಿಳುನಾಡು ಪ್ರದೇಶಗಳಿಗೆ ವಲಸೆ ಹೋಗುವರು.

ಸಾಮಾನ್ಯವಾಗಿ ರಾಜಗೊಂಡರು ತಮ್ಮ ವಲಸೆಯನ್ನು ರೈಲ್ವೆ ರಹದಾರಿ ಇದ್ದೆಡೆಗೆ ಮುಂದುವರಿಸುವರು. ಕಾರಣ ಅವರೊಂದಿಗೆ ಸಾಗಲಿರುವ ಅವರ ಗುಡಾರ ರೈಲ್ವೆಯಲ್ಲಿ ಸಾಗಿಸಲು ಅನುಕೂಲವಾಗುವುದು. ಅಲ್ಲದೆ ರೈಲ್ವೆ ನಿಲ್ದಾಣದಲ್ಲಿಯ ನೀರು ಬಳಸಲು ಅನುಕೂಲವಾಗುವುದು. ಇದು ಇವರ ಆರ್ಥಿಕ ಜೀವನಕ್ಕೆ ತಕ್ಕುದಾಗಿರುವುದು. ಹಳ್ಳಿಗಳಿಗೂ ತಿಂಗಳುಗಟ್ಟಲೆ ಆರ್ಯವೇದದ ವ್ಯಾಪಾರಕ್ಕಾಗಿ ಕುಟುಂಬ ಸಮೇತ ಇವರು ವಲಸೆ ಹೋಗುವುದುಂಟು.

***ರಾಜಗೊಂಡರ ಸಾಮಾಜಿಕ ರಚನೆ*** : ಖೋಮಗಳಿಂದ ಕೂಡಿದ ರಾಜಗೊಂಡರ ಸಾಮಾಜಿಕ ರಚನೆ ಬಿಗಿಯಾಗಿದೆ. ಕುಲ, ಬಳಿ ಅಥವಾ ಬೆಡಗುಗಳಿಗೆ ಇವರು ಖೋಮಗಳೆಂದು ಕರೆಯುವರು. ಇನ್ನೊಂದು ಅರ್ಥದಲ್ಲಿ ಖೋಮವೆಂದರೆ ಮೂಲವಂಶ ಎಂದರ್ಥ. ರಾಜಗೊಂಡರ ಇಡಿ ಜನ ಸಮುದಾಯವನ್ನು ನಾಲ್ಕು ಸಮೂಹಗಳಲ್ಲಿ ಗುರುತಿಸಬಹುದು. ಇವರು ತಮ್ಮ ಸಮೂಹಗಳಿಗೆ 'ದೇವ'ಗಳೆಂದು ಕರೆಯುವರು. ಅವು ಚಾರದೇವ, ಪಾಂಚದೇವ, ಸಾದೇವ ಮತ್ತು ಸಾತದೇವಗಳು. ಈ ದೇವಗಳೇ ರಾಜಗೊಂಡರ ಮೂಲ ಬಂಧುತ್ವದ ಸಂಕೇತ ಗಳಾಗಿವೆ. ಮೂಲದಲ್ಲಿ ೧೨ ದೇವರುಗಳಿದ್ದು ಅನಂತರದಲ್ಲಿ ಕೇವಲ ನಾಲ್ಕು ದೇವಗಳಿಗೆ ಸೀಮಿತಗೊಳಿಸಿರುವ ಬಗ್ಗೆ **ಗೊಂಡಿ ಧರ್ಮದರ್ಶನ** ಗ್ರಂಥದಲ್ಲಿ ಉಲ್ಲೇಖವಿದೆ. ಚಾರದೇವದಲ್ಲಿ ೪, ಪಾಂಚದೇವದಲ್ಲಿ ೫, ಸಾದೇವದಲ್ಲಿ ೬ ಮತ್ತು ಸಾತದೇವದಲ್ಲಿ ೭ ಮೂಲ ಪುರುಷರಿದ್ದು ಇವರೇ ರಾಜಗೊಂಡರಿಗೆ ಮೂಲ ದೈವವಾಗಿದ್ದಾರೆ. ಇವರ ವಂಶಜರೇ ಈ ರಾಜಗೊಂಡರೆನ್ನಲು ಇಂದಿಗೂ ಇವರು ತಮ್ಮ ಬಂಧುತ್ವವನ್ನು ತಮ್ಮ ದೇವಗಳಿಂದಲೂ ಹಾಗೂ ಖೋಮಗಳಿಂದಲೂ ಗುರುತಿಸಿಕೊಳ್ಳುವುದು ಸಾಕ್ಷಿ ಯಾಗಿರುವುದು.

ಕರ್ನಾಟಕ ರಾಜಗೊಂಡರಲ್ಲಿ ಈ ನಾಲ್ಕು ದೇವರುಗಳಿಗೆ ಸಂಬಂಧಪಟ್ಟ ಖೋಮಗಳಿವೆ. ಪ್ರಸ್ತುತ (೨೦೦೦) ಸಮೀಕ್ಷೆಯ ಪ್ರಕಾರ ಸಾದೇವರ ೧೬೯ : ಚಾರದೇವರ ೩೨: ಸಾತದೇವರ ೨೦: ಹಾಗೂ ಪಾಂಚದೇವರ ೪: ಕುಟುಂಬಗಳು ಕರ್ನಾಟಕದಲ್ಲಿವೆ. ಸಾದೇವರದಲ್ಲಿಯ ಕುಟುಂಬಗಳು ಕರ್ನಾಟಕವಲ್ಲಿ ಹೆಚ್ಚಲು ಕಾರಣ ಆ ದೇವಗಳಲ್ಲಿಯ ಖೋಮಗಳು ಹಾಗೂ ಖೋಮ ಗಳಲ್ಲಿಯ ಕುಟುಂಬಗಳು ಹೆಚ್ಚಾಗಿರುವುದು. ಸಾದೇವದಲ್ಲಿಯ ಖೋಮ ಗಳೆಂದರೆ ರಾಯಸೀಡಂ ಅಥವಾ ಜಾಮಕಾರ (೭೩). ಉಇಕಾ (೭೯) ತಡಾಸಂ (೬) ವಡಕಡೆ ಆತ್ರಾಂ (೭) ಹಾಗೂ ಗೇಡಂ (೧) ಚಾರದೇವದಲ್ಲಿ ಕೇವಲ ಸೇಡ್ಮಾಕಿ (೩೨) ಸಾತದೇವದಲ್ಲಿ ಪುಸ್ನಾಕೆ (೧೪) ಮೇಶ್ರಾಂ (೨) ವಾಡವಿಯ (೩) ಧರ್ವೇ (೧) ಹಾಗೂ ಪಾಂಚದೇವರಲ್ಲಿ ಆಡಾ (೪) ಈ ಖೋಮಗಳು ಕರ್ನಾಟಕದಲ್ಲಿವೆ. ದೇವ ಹಾಗೂ ಖೋಮಗಳ ಕುಟುಂಬಗಳಿಗೆ ಸಂಬಂಧಿಸಿದಂತೆ ಅವರ ಜನಸಂಖ್ಯೆಯಲ್ಲಿಯೂ ಏರಿಳಿತಗಳಿವೆ.

***ರಾಜಗೊಂಡರ ಬಂಧುತ್ವ*** : ರಕ್ತ ಸಂಬಂಧದಿಂದ ಉಗಮ ಗೊಂಡ ಇವರ ಬಂಧುತ್ವ ಬಲಿಷ್ಠವಾಗಿದೆ. ವಾಸ್ತವದಲ್ಲಿ ಒಂದೇ ದೇವದಲ್ಲಿಯ ವಿವಾಹ ಸಂಬಂಧಕ್ಕೆ ನಿಷೇಧವಿದೆ. ಬೆಸ ದೇವಗಳಲ್ಲಿಯ ವಿವಾಹ ಸಂಬಂಧಕ್ಕೆ ಊನವಿಲ್ಲ. ಆದರೆ ಎಲ್ಲ ದೇವರುಗಳಲ್ಲಿಯ ಜನ ಸಮುದಾಯ ಒಂದೇ ನೆಲೆಯಲ್ಲಿ ಲಭ್ಯವಿರುವುದು ಕಷ್ಟ ಸಾಧ್ಯ. ಹಾಗಿದ್ದಲ್ಲಿ ಒಂದೇ ಅಥವಾ ಸಮ ದೇವದವರಾಗಿದ್ದರೂ ಭಿನ್ನ ಖೋಮಿನವರೊಂದಿಗೆ ಸಂಬಂಧ ಬೆಳೆಸಿರುವುದು ಕಂಡುಬಂದಿದೆ. ಇದು ವಾಸ್ತವದಲ್ಲಿ ಎಲ್ಲ ಕಡೆ ಕಂಡುಬರಲಿಕ್ಕಿಲ್ಲ. ಸಮ ದೇವದವರೆಲ್ಲ ಸೋದರ ಸಂಬಂಧಿಗಳು ಮತ್ತು ಬೆಸ ದೇವದವರೆಲ್ಲ ನೆಂಟರೆಂಬ ಭಾವನೆಯಿದೆ. ಇವರು ಸಾಮಾನ್ಯವಾಗಿ ತಮ್ಮನ್ನು ಗುರುತಿಸಿಕೊಳ್ಳುವಾಗ ತಮ್ಮ ಹೆಸರಿನೊಂದಿಗೆ ತಮ್ಮ ಖೋಮಿನ (ಕುಲದ ಅಥವಾ ಬಳಿಯ) ಹೆಸರು ಸೇರಿಸಿಕೊಂಡೆ ಗುರುತಿಸಿಕೊಳ್ಳುವ ರೂಢಿಯಿದೆ. ಉದಾ: ಶಾಮಬಾಬು ರಯಾಸೀಡಂ, ವಸಂತ ಜಾಮಕಾರ ಇತ್ಯಾದಿ. ಇಲ್ಲಿ ರಾಯಸೀಡಂ ಮತ್ತು ಜಾಮಕಾರ ಇವು ಇವರ ಖೋಮಿನ ಹೆಸರಾಗಿರುವುದನ್ನು ಗಮನಿಸಿಬಹುದು.

***ದೈವಾರಾಧನೆ*** : ರಾಜಗೊಂಡರು ತಮ್ಮ ಗೊಂಡಿ ಧರ್ಮದ ವಿಧಿವಿಧಾನಗಳಂತೆ ಸಂಸ್ಕಾರಗಳನ್ನು ದೈವಾರಾಧನೆಗಳನ್ನು ಮಾಡುವರು. ಗೊಂಡಿ ಧರ್ಮದರ್ಶನದ ಪ್ರಕಾರ ಗೊಂಡ,

ರಾಜಗೊಂಡರು ೧೨ ದೈವಗಳನ್ನು ೭೫೦ ಕುಲಗೋತ್ರಗಳನ್ನು ಹಾಗೂ ೨೨೫೦ ಕುಲಚಿಹ್ನೆಗಳನ್ನು ತಮ್ಮ ದೈವವೆಂದು ಆರಾಧಿಸುವವರಾಗಿದ್ದರು. ಆದರೆ ಇಂದು ಆ ಪ್ರಮಾಣದಲ್ಲಿ ಆರಾಧನೆ ಕಂಡುಬರುವುದಿಲ್ಲ. ಗೊಂಡರು, ರಾಜಗೊಂಡರು ಮೂಲತಃ ಸರ್ವಚೀನಾದಿಗಳು ಎಂಬುದನ್ನು ಇವರ ಕುಲಚಿನ್ಹೆಗಳು ಸಾಬೀತುಪಡಿಸುತ್ತವೆ. ಇಂದು ರಾಜಗೊಂಡರು ಫೆರಸಾಪೇನ್ (ಮಹಾದೇವ) ಬಾರಾದೇವ (ಬೀರದೇವ), ಭೀಮಲಪೇನ, ಮಹಾಕಾಳಿ, ಮರಿಯಮ್ಮ ಇತ್ಯಾದಿ ದೈವಗಳನ್ನು ಆರಾಧಿಸುವರು.

ರಾಜಗೊಂಡರು ಶಿವರಾತ್ರಿ, ದಶರಾ, ಹೋಳಿ, ಇತ್ಯಾದಿ ಹಬ್ಬಗಳನ್ನು ಆಚರಿಸುವರು, ಬೀದರಿನ ರಾಜಗೊಂಡರು ಶಿರವರಾತ್ರಿಯಿಡಿ ಉಪವಾಸ, ಭಜನೆ, ಕೀರ್ತನೆ, ಗೊಂಡಿ ನೃತ್ಯ ಮಾಡಿ ಮರುದಿನ ಸಾಮೂಹಿಕ ಭೋಜನ ಮಾಡುವರು. ಶಿವನನ್ನು ಪ್ರತಿಷ್ಠಾಪಿಸಿ ಶ್ರದ್ಧಾ ಭಕ್ತಿಯಿಂದ ಮಹಾದೇವನನ್ನು ಫೆರಸಾಪೆನೆಂದು ಆರಾಧಿಸುವರು. ಹರಿಹರದ ರಾಜಗೊಂಡರು ದಶರಾ ಹಬ್ಬವನ್ನು ಅತಿ ಉಲ್ಲಾಸ, ಸಂತಸ ಸಡಗರದಿಂದ ಅಚರಿಸುವರು. ದಶರಾ ಹಬ್ಬದಂದು ರಾತ್ರಿಯಿಡಿ ಸ್ತ್ರೀ ಪುರುಷರೆಲ್ಲರೂ ಗೊಂಡಿನೃತ್ಯ ಮಾಡಿ ಕುಣಿದಾಡುವರು.

*ಆರ್ಥಿಕ ಸಂಘಟನೆ :* ಕರ್ನಾಟಕದಲ್ಲಿಯ ರಾಜಗೊಂಡ ಅಲೆಮಾರಿ ಆದಿವಾಸಿಗಳು ಆರ್ಥಿಕವಾಗಿ ಬಹಳ ಬಡವರು. ಇವರ ವೇಷಭೂಷಣಗಳನ್ನು ನೋಡಿದೊಡನೆಯೇ ಇವರ ಆರ್ಥಿಕ ಪರಿಸ್ಥಿತಿಯ ಅರಿವಾಗುತ್ತದೆ. ಇವರು ಕೃಷಿ, ಕೂಲಿ ಹಾಗೂ ಪಶುಪಾಲನೆಯಲ್ಲಿ ತೊಡಗಿಕೊಂಡವರಲ್ಲ. ಇವರಿಗೆ ಇವರದ್ದೆ ಎಂಬ ಒಂದಿಂಚೂ ಭೂಮಿ ಇದ್ದಿಲ್ಲ. ಮೋಸದ ವ್ಯವಹಾರ ಇವರು ತಿಳಿದಿಲ್ಲ. ಜೀವನಕ್ಕಾಗಿ ಅಲೆದಾಟ ತಪ್ಪಿಲ್ಲ. ಇವರಲ್ಲಿಯ ಸಾಂಪ್ರಾದಾಯಿಕ ಆಯುರ್ವೇದ ಕಸಬಿನಲ್ಲಿ ಜಾತಿ ಪಂಚಾಯತಿಯ ಕಾನೂನುಗಳಲ್ಲಿ ಹಾಗೂ ನಂಬಿಕೆಗಳಲ್ಲಿ ಪರಿವರ್ತನೆ ತರುವವರೆಗೆ ಇವರಲ್ಲಿ ಆರ್ಥಿಕ ಸುಧಾರಣೆ ಕಷ್ಟ ಸಾಧ್ಯ.

ಗಿಡಮೂಲಿಕೆಗಳೇ ರಾಜಗೊಂಡರಿಗೆ ಜೀವನಾಧಾರ. ಅದಕ್ಕೆ ಇವರು 'ಜಡಿಬೂಟಿ' ಎಂದು ಕರೆಯುವರು, ಅಂದರೆ ಔಷಧ, ಗಿಡಮೂಲಿಕೆಗಳ ನಾರು ಬೇರುಗಳೆಂದು ಅರ್ಥ: ವಿಂಧ್ಯ, ಸಾತಪುರ, ನರ್ಮದಾ, ಗೋದಾವರಿ, ಇತ್ಯಾದಿ ನದಿ ಜಲಾನಯನ ಪ್ರದೇಶಗಳಿಂದ ಗಿಡಮೂಲಿಕೆಗಳನ್ನು ಇವರು ಸಂಗ್ರಹಿಸುತ್ತಾರೆ. ಅದು ಸಾಧ್ಯವಾಗದಿದ್ದಾಗ ಸ್ಥಳೀಯ ಆಯುರ್ವೇದಿಕ ಅಂಗಡಿಗಳಿಂದ ಖರೀದಿಸಿ ಔಷಧ ತಯಾರಿಸುವರು ಮತ್ತು ಸುತ್ತ ಮುತ್ತ ಮಾರಾಟ ಮಾಡುವರು. ಮಹಿಳೆಯರು ಮತ್ತು ವೃದ್ಧರು ತಾವಿರುವ ನಗರಗಳಲ್ಲಿಯೆ ರಸ್ತೆಗಳ ಬದಿಯಲ್ಲಿ ಗಿಡಮೂಲಿಕೆಗಳನ್ನು ಮಾರಾಟ ಮಾಡುವರು. ರಸ್ತೆಯ ಬದಿಯಲ್ಲಿ ಮಾರಾಟ ಮಾಡುವುದರಿಂದ ಈ ವ್ಯಾಪಾರಕ್ಕೆ ತಕ್ಕ ಪ್ರತಿಫಲ ಸಿಗುತ್ತಿಲ್ಲ. ಸರಕಾರಿ ಆಯುರ್ವೇದಿಕ ಚಿಕಿತ್ಸಾಲಯಗಳು ಆರಂಭಗೊಂಡಿವೆ. ಹೀಗಾಗಿ ಆಯುರ್ವೇದ ವ್ಯಾಪಾರದ ಮೇಲೆ ಅವಲಂಬಿಸಿರುವ ಇವರ ಕುಟುಂಬಗಳು ಕ್ಷೀಣಿಸುತ್ತಿವೆ. ಇಂದಿನ ಹೊಸ ಪೀಳಿಗೆ ಆಯುರ್ವೇದದ ಬದಲಾಗಿ ಕಿವಿ ಸ್ವಚ್ಛಗೊಳಿಸುವ ಮತ್ತು ವಾಹನಗಳ ಸ್ಪೈರಿಂಗ್ ವೈರ್ ಕೆಲಸಗಳಲ್ಲಿ ಹಾಗೂ ಚಿಕ್ಕ ಮಕ್ಕಳು ಬಿಸಾಡಿದ ಪ್ಲಾಸ್ಟಿಕ್ ಪೇಪರ್‌ಗಳನ್ನು ಆಯುವುದರಲ್ಲಿ ತೊಡಗಿದ್ದಾರೆ. ಇದು ಹೀಗೆ ಮುಂದುವರಿದರೆ ಈ ಬುಡಕಟ್ಟಿನಲ್ಲಿರುವ ಆಯುರ್ವೇದದ ಜ್ಞಾನ ಕೆಲವೇ ವರ್ಷಗಳಲ್ಲಿ ಮರೆಮಾಚುವುದರಲ್ಲಿ ಸಂಶಯವಿಲ್ಲ. ಹಾಗಾಗದಂತೆ ಯೋಜನೆಗಳನ್ನು ರೂಪಿಸಿ ಕಾರ್ಯಗತ ಗೊಳಿಸುವುದು ಅಗತ್ಯವಾಗಿದೆ.

ಕರ್ನಾಟಕದ ಅಧ್ಯಯನಕಾರರು ರಾಜಗೊಂಡರನ್ನು ಹಕ್ಕಿ ಪಿಕ್ಕಿಗಳೆಂದು ತಪ್ಪಾಗಿ ಗ್ರಹಿಸಿರುವರು. ಹಕ್ಕಿಪಿಕ್ಕಿ ಮತ್ತು ರಾಜಗೊಂಡರ ಬೆಡಗುಗಳಲ್ಲಿ ಯಾವುದೇ ಸಾಮ್ಯತೆಗಳಿಲ್ಲ. ಜೊತೆಗೆ ಈ ಎರಡು ಬುಡಕಟ್ಟುಗಳಲ್ಲಿಯ ಕಸಬು, ಭಾಷೆ, ಉಡುಗೆ ತೊಡುಗೆ ಹಾಗೂ ಹಿನ್ನೆಲೆಯಗಳಲ್ಲಿಯೂ ಸಾಮ್ಯತೆಗಳ ಸುಳಿವಿಲ್ಲ. ಇವೆರಡು ಪ್ರತ್ಯೇಕ ಬುಡಕಟ್ಟುಗಳಾಗಿರುವುದರಿಂದ ಅಧ್ಯಯನ ಕಾರರು ಇವುಗಳನ್ನು ಪ್ರತ್ಯೇಕವಾಗಿ ಅಧ್ಯಯನಿಸುವುದು ಸೂಕ್ತ.



ಡಾ. ಬಿ. ಬಿ. ಸುಧಾಮಣಿ*

# 'ಸಂಕೇತಿ' ಬ್ರಾಹ್ಮಣರ ವಲಸೆಯ ಕಾಲ

ಕರ್ನಾಟಕದ ಸ್ಮಾರ್ತಬ್ರಾಹ್ಮಣರ ಪಂಗಡಕ್ಕೆ ಸೇರಿರುವ ಸಂಕೇತಿಗಳು ಮೂಲತಹ ತಮಿಳುನಾಡಿನವರಾಗಿದ್ದಾರೆ. ಸುಮಾರು ಒಂದು ಸಾವಿರ ಕುಟುಂಬಗಳು ನಾಚಾರಮ್ಮ ಎಂಬ ಸ್ತ್ರೀಯ ನೇತೃತ್ವದಲ್ಲಿ ತಮ್ಮ ಮೂಲನೆಲೆಯನ್ನು ತೊರೆದು ದಕ್ಷಿಣ ಕರ್ನಾಟಕದ ಗ್ರಾಮಗಳಲ್ಲಿ ತಮ್ಮ ಹೊಸ ನೆಲೆಯನ್ನು ಕಂಡುಕೊಂಡರು. ಇವರು ಮುಖ್ಯವಾಗಿ ಕಾವೇರಿ, ಹೇಮಾವತಿ, ತುಂಗಭದ್ರಾ ನದಿಗಳು ಹರಿಯುವ ಸ್ಥಳಗಳಲ್ಲಿ ಹಾಗೂ ಕೆರೆಕಟ್ಟೆಗಳಿದ್ದು ನೀರಿನ ಸಂವೃದ್ಧಿ ಇರುವ ಸ್ಥಳಗಳನ್ನು ಆಯ್ಕೆ ಮಾಡಿಕೊಂಡರು. ಪ್ರಸ್ತುತ ಲೇಖನದಲ್ಲಿ ಸಂಕೇತಿಗಳು ಕರ್ನಾಟಕಕ್ಕೆ ವಲಸೆ ಬಂದಂತಹ ಕಾಲವನ್ನು ಗುರ್ತಿಸುವ ಪ್ರಯತ್ನ ಮಾಡಲಾಗಿದೆ.

ಮೊದಲನೆಯದಾಗಿ, ಟಿಪ್ಪುಸುಲ್ತಾನ್, ಮುಮ್ಮಡಿ ಕೃಷ್ಣರಾಜ ಒಡೆಯರು ಹಾಗೂ ಕಮೀಷನರುಗಳ ಆಳ್ವಿಕೆಯ ಕಾಲದಲ್ಲಿ ಸೇವೆಸಲ್ಲಿಸಿದ್ದ ಸಂಕೇತಿ ಬ್ರಾಹ್ಮಣ ಪಂಗಡಕ್ಕೆ ಸೇರಿದ್ದ ಅಂಚೆ ಭಕ್ಷಿ ತಿಪ್ಪಯ್ಯ ಇವರ ಕೌಟುಂಬಿಕ ಚರಿತ್ರೆಯು : ತಿಪ್ಪಯ್ಯನವರ ಪೂರ್ವಜರಾದ ತಿಮ್ಮಪ್ಪಯ್ಯ ಎಂಬಾತ ಕ್ರಿ.ಶ. ೧೬೨೯ರಲ್ಲಿ ತಿಪ್ಪೂರಿನ ಪಾಳೇಗಾರ ವೀರಭದ್ರರಾಜೇ ಅರಸನ ಬಳಿ ಮುಖ್ಯಮಂತ್ರಿ ಆಗಿದ್ದರು ಎಂಬುದಾಗಿ ಉಲ್ಲೇಖಿಸಿದೆ*[೧]. ಈ ಮಾಹಿತಿಯು ಸಂಕೇತಿಗಳ ವಲಸೆಯ ಕಾಲವನ್ನು ನಿರ್ಧರಿಸುವಲ್ಲಿ ಸಹಕಾರಿಯಾಗಿದೆ. ೧೬೨೯ರಲ್ಲಿ ತಿಮ್ಮಪ್ಪಯ್ಯ ಎಂಬಾತ ಪಾಳೆಯಗಾರನೊಬ್ಬನ ಬಳಿ ಮುಖ್ಯಮಂತ್ರಿ ಪದವಿಗಳಿಸಿದ್ದನೆಂದರೆ ಆತ ಆ ವೇಳೆಗಾಗಲೆ ತಿಪ್ಪೂರು ಪ್ರದೇಶದಲ್ಲಿ ಜನಪ್ರಿಯನಾಗಿದ್ದಿರಬೇಕು. ತನ್ನ ಬುದ್ಧಿವಂತಿಕೆ ಉನ್ನತ ವ್ಯಕ್ತಿತ್ವದಿಂದ ಆ ಪ್ರದೇಶದ ಜನಗಳ, ಪಾಳೇಗಾರನ ಗಮನ ಸೆಳೆದಿರಬೇಕು. ಏಕೆಂದರೆ ಅಪರಿಚಿತ ವ್ಯಕ್ತಿಯೊಬ್ಬನಿಗೆ ಮುಖ್ಯಮಂತ್ರಿಯಂತಹ ಜವಾಬ್ದಾರಿಯುತವಾದ ಹುದ್ದೆಯನ್ನು ಬಹುಶಃ ಕೊಟ್ಟಿರಲು ಸಾಧ್ಯವಿಲ್ಲ. ಹಾಗಾಗಿ ಸಂಕೇತಿ ಬ್ರಾಹ್ಮಣರು ಕ್ರಿ.ಶ. ೧೬೨೯ಕ್ಕೆ ಮೊದಲೇ ಕರ್ನಾಟಕಕ್ಕೆ ವಲಸೆ ಬಂದಿರಬೇಕು.

ಮೇಲಿನ ಹೇಳಿಕೆಗೆ ಪೂರಕವಾಗಿ ಕ್ರಿ.ಶ. ೧೫೨೩ರ ಶಾಸನವೊಂದು ಲಭ್ಯವಾಗಿದೆ*[೨]. ವಿಜಯನಗರದ ಪ್ರಸಿದ್ಧ ಅರಸು ಕೃಷ್ಣದೇವರಾಯನು ಕ್ರಿ.ಶ ೧೫೨೩ರಲ್ಲಿ ಇಂದು ಶಿವಮೊಗ್ಗ ಜಿಲ್ಲೆಗೆ ಸೇರಿರುವ ಮತ್ತೂರು - ಹೊಸಹಳ್ಳಿ ಗ್ರಾಮಗಳನ್ನು ೧೨೦ ವತ್ತಿಗಳನ್ನಾಗಿ ಮಾಡಿ ವಿದ್ವತ್ತುಳ್ಳ ಬ್ರಾಹ್ಮಣರಿಗೂ, ಆರಾಧ್ಯರಿಗೂ ಸರ್ವಮಾನ್ಯವಾಗಿ ನೀಡಿದನೆಂಬುದಾಗಿ ಈ ಶಾಸನ ಉಲ್ಲೇಖಿಸಿದೆ*[೩]. ಶಾಸನ ಪಾಠ ಅಧ್ಯಯನ ಮಾಡುವುದರ ಮೂಲಕ ಪ್ರತಿಗಾಹಿಗಳ ಹೆಸರು, ಗೋತ್ರ, ಸೂತ್ರ, ವೇದ, ಇವುಗಳ ಆಧಾರದ ಮೇಲೆ ಸುಮಾರು ೫೦ ಸಂಕೇತಿ ವಿದ್ವಾಂಸರುಗಳು ರಾಯನಿಂದ ವೃತ್ತಿಗಳನ್ನು ಪಡೆದಿದ್ದರೆಂದು ಗುರುತಿಸಬಹುದು*[೪]. ಇಂದಿಗೂ ಮತ್ತೂರು-ಹೊಸಹಳ್ಳಿ ಗ್ರಾಮಗಳು ಪ್ರಮುಖ ಸಂಕೇತಿ ನೆಲೆಗಳಾಗಿದ್ದು ಅವರು ತಮ್ಮ ಸನಾತನ ಧರ್ಮವನ್ನು ಉಳಿಸಿಕೊಂಡು ಬಂದಿರುವ ಮೂಲಕ ಹಾಗೂ ಸಂಸ್ಕೃತ ಭಾಷೆಯನ್ನು ದಿನನಿತ್ಯದ ವ್ಯವಹಾರಗಳಿಗೆ ಬಳಸುತ್ತಾ ದೇಶ-ವಿದೇಶಗಳ ವಿದ್ವಾಂಸರುಗಳ ಗಮನ ಸೆಳೆದಿದ್ದಾರೆ. ಹಿಗಾಗಿ ಕ್ರಿ.ಶ. ೧೫೨೩ಕ್ಕಿಂತ ಮೊದಲೇ ಸಂಕೇತಿಗಳು ತಮಿಳುನಾಡಿನಿಂದ ವಲಸೆ ಬಂದಿದ್ದರೆನ್ನಬಹುದು.

ಸಂಕೇತಿಗಳ ವಲಸೆಯ ಕಾಲವನ್ನು ಕ್ರಿ.ಶ.೧೩೭೬ಕ್ಕೆ ಕೊಂಡೊಯ್ಯಬಹುದಾದ ಮತ್ತೊಂದು ಶಾಸನವೇ ಅನುಗವಳ್ಳಿ ಶಾಸನವು*[೫]. ಆ ವರ್ಷ ತಮಿಳು ಭಾಷೆಯಲ್ಲಿರುವ ಕಂಬ ರಾಮಾಯಣವನ್ನು ವಾಚನ ಮಾಡುವ ತಮಿಳುನಾಡಿನ ವ್ಯಕ್ತಿಯೊಬ್ಬ ತನ್ನ ಮಗನೊಂದಿಗೆ ಅನುಗವಳ್ಳಿಯ ಶ್ರೀ ರಾಮ ದೇವಾಲಯದ ರಾಮನ ದರುಶನ ಮಾಡಿದುದನ್ನು ದಾಖಲಿಸಿದೆ. ಅಂದರೆ ಆ ವೇಳೆಗಾಗಲೇ ಅನುಗವಳ್ಳಿಯಲ್ಲಿ ತಮಿಳು ಭಾಷೆಯನ್ನಾಡುವ, ಆ ನಾಡಿನ ಜನರು ನೆಲೆಸಿದ್ದು ಅಲ್ಲಿಗೆ ತಮ್ಮ ನಾಡಿನ ವ್ಯಕ್ತಿಯೊಬ್ಬನನ್ನು ಆಗಮಿಸುವಂತೆ ಆಕರ್ಷಿಸಿದ್ದು ಅನುಗವಳ್ಳಿ ಸಂಕೇತಿಗಳ ಪ್ರಾರಂಭಿಕ ನೆಲೆಗಳಲ್ಲಿ ಒಂದು ಪ್ರಮುಖ ನೆಲೆಯಾಗಿತ್ತು ಎಂದಾಗುತ್ತದೆ. ಹಾಗೂ ಅಲ್ಲಿಯ ಶ್ರೀರಾಮ ದೇವಾಲಯದ ರಾಮದೇವರು ಅವರ ಮನೆತನದ ದೇವರಾಗಿದ್ದನು. ಇಂದಿಗೂ ಅನೇಕ ಸಂಕೇತಿ ಕುಟುಂಬಗಳಿಗೆ ಅನುಗವಳ್ಳಿರಾಮನು ಮನೆದೇವರೆನಿಸಿದ್ದು ಶ್ರೀರಾಮನವಮಿ ಇತ್ಯಾದಿ ವಿಶೇಷ ದಿನಗಳಲ್ಲಿ ಸೇವೆಸಲ್ಲಿಸುವ ಸಲುವಾಗಿ ಅನುಗವಳ್ಳಿಗೆ ಹೋಗಿ ಬರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿರುವ ಅಂಶ. ಅದೇ ರೀತಿ ಸಂಕೇತಿಗಳ ವಲಸೆಯ ಕಾಲವನ್ನು ಹದಿನಾಲ್ಕನೇ ಶತಮಾನದ ಪೂರ್ವಭಾಗಕ್ಕೆ ಕೊಂಡೊಯ್ಯ ಬಹುದಾದ ಮಾಹಿತಿಯೊಂದು ಲಭ್ಯವಿದೆ. ಸಂಕೇತಿ ಸಮುದಾಯಕ್ಕೆ ಸೇರಿದ ಆ ಕ್ಷೇತ್ರದಲ್ಲಿ ಹೆಚ್ಚಿನ ಕ್ಷೇತ್ರಕಾರ್ಯ ಕೈಗೊಂಡಿದ್ದ ಎಂ. ಕೇಶವಯ್ಯ ಎಂಬ ವಿದ್ವಾಂಸರು ತಮ್ಮ ಕೃತಿ 'Life of Nacharamma and her Migration' ಎಂಬುದರಲ್ಲಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ

*ಇತಿಹಾಸ ಅಧ್ಯಾಪಕರು, ಮಹಾರಾಣಿಯವರ ಮಹಿಳಾ ಕಲಾ ಮಹಾವಿದ್ಯಾಲಯ, ಮೈಸೂರು.

ಹಾಗೂ ಶೃಂಗೇರಿ ತಾಲೂಕಿಗೆ ಸೇರಿರುವ ಕ್ರಮವಾಗಿ ಲಿಂಗದಹಳ್ಳಿ ಹಾಗೂ ವಿದ್ಯಾರಣ್ಯಪುರ ಗ್ರಾಮಗಳನ್ನು ವಿಜಯ ನಗರದ ಸಂಗಮವಂಶದ ಅರಸರಾದ ಹರಿಹರ-ಬುಕ್ಕರು (೧೩೩೬-೧೩೭೭) ವಿದ್ವತ್ತುಳ್ಳ ಬ್ರಾಹ್ಮಣರಿಗೆ ನೀಡಿದರು ಎಂಬುದಾಗಿ ತಿಳಿಸಿದ್ದಾರೆ*[೬]. ಈ ಗ್ರಾಮಗಳು ಅಂದಿನಿಂದಲೂ ಸಂಕೇತಿಗಳ ಪ್ರಮುಖ ನೆಲೆಗಳಾಗಿ ಸಂಗಮವಂಶದ ಅರಸರರಿಂದ ವೃತ್ತಿಗಳನ್ನು ಪಡೆದವರಲ್ಲಿ ಸಂಕೇತಿ ಬ್ರಾಹ್ಮಣರೂ ಸೇರಿದ್ದರೆನ್ನುವುದಾಗುತ್ತದೆ. ಆ ಪ್ರದೇಶದ ಸಂಕೇತಿಗಳನ್ನು 'ಮಲೆನಾಡಿನ ಸಂಕೇತಿಗಳು' ಎಂಬುದಾಗಿ ಕರೆಯಲಾಗಿದೆ.

ಸಂಕೇತಿಗಳ ವಲಸೆಯ ಕಾಲವನ್ನು ಕ್ರಿ.ಶ. ೧೧ನೇ ಶತಮಾನಕ್ಕೆ ಕೊಂಡೊಯ್ಯಲು ಸಹಾಯಕವಾದ ಎರಡು ತಾಮ್ರಶಾಸನಗಳು ಕಲ್ಯಾಣಿ ಚಾಲುಕ್ಯರ ಪ್ರಸಿದ್ಧ ದೊರೆ ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿವೆ*[೮]. ಈ ಅರಸ ಕ್ರಿ.ಶ. ೧೦೮೭ ಹಾಗೂ ಕ್ರಿ.ಶ. ೧೧೨೩ರಲ್ಲಿ ಬರೆಸಿರುವ ಎರಡೂ ತಾಮ್ರಶಾಸನಗಳು ಒಂದೇ ವಿಷಯವನ್ನು ದಾಖಲಿಸಿವೆ*[೯]. ಈ ನೀಲಗುಂದ ಶಾಸನಗಳು ಆರನೇ ವಿಕ್ರಮಾದಿತ್ಯನು ಪಲ್ಲವಪಾಂಡ್ಯ ಎಂಬ ವ್ಯಕ್ತಿಯ ಕೋರಿಕೆಯ ಮೇರೆಗೆ ದ್ರಾವಿಡದೇಶದಿಂದ ಆಗಮಿಸಿದ ೩೦೦ ಬ್ರಾಹ್ಮಣೋತ್ತಮರಿಗೆ ವೃತ್ತಿಗಳನ್ನು ದಾನ ಮಾಡಿದುದಾಗಿ ತಿಳಿಸಿವೆ. ಶಾಸನಪಾಠದಲ್ಲಿ ಬರುವ 'ದ್ರಾವಿಡದೇಶಾಗತೇಭ್ಯೋ', 'ತ್ರಿಶತಸಂಖ್ಯಾಕೇಭ್ಯೋ' ಎಂಬೆರಡು ಅಂಶಗಳು ಅಂದರೆ ದ್ರಾವಿಡ ದೇಶದಿಂದ-ತಮಿಳುನಾಡಿನಿಂದ ಬಂದಂತಹ ೩೦೦ ಬ್ರಾಹ್ಮಣ ಕುಟುಂಬಗಳು ಎಂಬೆರಡು ಅಂಶಗಳು ಸಂಕೇತಿಗಳಿಂದಲೂ ನೀಲಗುಂದದ ವೃತ್ತಿಗಳಿಗೂ ಸಂಬಂಧ ಕಲ್ಪಿಸಲು ಸಹಕಾರಿಯಾಗಿವೆ. ಎಡ್ಗರ್ ಥರ್‌ಸ್ಟನ್‌ರವರು ತಮ್ಮ 'The Castes and Tribes of Southern India'*[೧೦] ಎಂಬ ಕೃತಿಯಲ್ಲಿ ತಮಿಳುನಾಡಿನಿಂದ ಕರ್ನಾಟಕಕ್ಕೆ ವಲಸೆ ಬಂದಿರುವ ಬ್ರಾಹ್ಮಣರಲ್ಲಿ ಬಹುಶಃ ಸಂಕೇತಿಗಳು ಪ್ರಥಮವಾಗಿ ಬಂದವರು ಎಂದು ಉಲ್ಲೇಖಿಸಿರುವುದನ್ನು ಇಲ್ಲಿ ಗಮನಿಸಬಹುದು. ಹಾಗೆಯೇ ಕರ್ನಾಟಕದ ಸಂಕೇತಿಗಳು ಇಂದಿಗೂ ೩೦೦ ಹಾಗೂ ೭೦೦ ಸಂಖ್ಯೆಗಳಿಗೆ ಹೆಚ್ಚು ಮಹತ್ವ ನೀಡುತ್ತಾರೆ. ಕ್ಷೇತ್ರಕಾರ್ಯದಿಂದ ಹಲವಾರು ವ್ಯಕ್ತಿಗಳ ಸಂದರ್ಶನದ ಮುಖೇನ ತಿಳಿದು ಬಂದಿರುವ ಅಂಶವೆಂದರೆ ಸಂಕೇತಿಗಳ ಪೂರ್ವಜರು ೭೦೦ ಹಾಗೂ ೩೦೦ರ ಎರಡು ಗುಂಪುಗಳಲ್ಲಿ ತಮ್ಮ ಮೂಲನೆಲೆಯನ್ನು ತೊರೆದರು. ಹಾಗಾಗಿ ಆ ಸಂಖ್ಯೆಗಳು ಅವರಿಗೆ ಮಹತ್ವವೆನಿಸಿವೆ. ಇವುಗಳ ಆಧಾರದ ಮೇಲೆ ನೀಲಗುಂದಕ್ಕೆ ಬಂದವರು ಸಂಕೇತಿಗಳೆಂದು ತಿಳಿಯಬಹುದಾದರೆ ಅವರ ವಲಸೆಯ ಕಾಲ ಕ್ರಿ.ಶ. ೧೦೮೭ ಎನ್ನಬಹುದು. ಆದರೆ ನೀಲಗುಂದಕ್ಕೆ ಬಂದ ೩೦೦ರ ಗುಂಪು ತಮಿಳುನಾಡನ್ನು ತೊರೆದು ಬಂದ ಸಂಕೇತಿಗಳ ಎರಡನೇ ಗುಂಪು ಎಂಬುದಾಗಿಯೂ ಇವರಿಗಿಂತ ಹನ್ನೆರಡು ವರ್ಷಗಳು ಮೊದಲೇ ಮೊದಲನೇ ಸಂಕೇತಿಗಳ ೭೦೦ರ ಗುಂಪು ಕರ್ನಾಟಕಕ್ಕೆ ಬಂದು ಹಾಸನ ಜಿಲ್ಲೆಯ ಕೌಶಿಕ ಗ್ರಾಮದಲ್ಲಿ ನೆಲೆಸಿದರೆಂಬ ಸಂಕೇತಿಗಳ ಮೌಖಿಕ ಪರಂಪರೆ ದಟ್ಟವಾಗಿ ಹರಡಿರುವ ಹಿನ್ನೆಲೆಯಲ್ಲಿ ಸಂಕೇತಿಗಳು ಬಹುಶಃ ಕ್ರಿ.ಶ. ೧೦೭೫ರಲ್ಲಿ ಕರ್ನಾಟಕಕ್ಕೆ ವಲಸೆ ಬಂದರೆಂಬುದಾಗಿ ತಿಳಿಯಬಹುದಾಗಿದೆ*[೧೧]. ಆದರೂ ಈ ವಿಷಯದ ಮೇಲೆ ಇನ್ನೂ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ. ಅಲ್ಲಿಯವರೆವಿಗೂ ಕ್ರಿ.ಶ. ೧೦೭೫ನ್ನು ಅವರ ವಲಸೆಯ ಕಾಲ ಎಂದು ಇಟ್ಟುಕೊಳ್ಳಬಹುದು.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. File No. 163, 1863, KSA, Vidhana Soudha Building, Bangalore; Keshavaiah, M., 'Life of Nacharamma', (Mysore: 1936), P. 66.

*೨. E. C. (os), Vol. 7, Part-1 Shimoga-26, 1523, 1523 A.D.

*೩. E. C. (os), Vol. 7. Ibid.

*೪. Ibid.

*೫. E. C. V (os), Anugavalli, 77, 1376 A.D., Hassan Dist, PP. 69-70.

*೬. Keshavaiah M., Life of Nacharamma, Ibid, PP. 68-69.

*೭. ಕರ್ನಾಟಕದ ಸಂಕೇತಿಗಳನ್ನು ಅವರು, ಪ್ರಾರಂಭದಲ್ಲಿ ನೆಲೆಸಿದ್ದ ಪ್ರದೇಶದ ಆಧಾರದ ಮೇಲೆ 'ಕೌಶಿಕ ಸಂಕೇತಿಗಳು,' 'ಬೆಟ್ಟದಪುರ ಸಂಕೇತಿಗಳು' ಹಾಗೂ ಲಿಂಗದಹಳ್ಳಿ ಅಥವಾ 'ಮಲೆನಾಡು' ಸಂಕೇತಿಗಳು ಎಂಬುದಾಗಿ ಕರೆಯಲಾಗಿದೆ.

*೮. Epigraphia India, Vol. XII, 1913-14, Calcutta (Reprint), 1123 A.D. 1087 A.D; P.154.

*೯. Ibid.

*೧೦. Thurston Edgar., Castes and Tribes of Southern India, Vol. 1 (Madras : 1909), P. 343.

*೧೧. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕರ್ನಾಟಕದ ಪ್ರಮುಖ ಸಂಕೇತಿ ಗ್ರಾಮಗಳಲ್ಲಿ ವೃದ್ಧರನ್ನು, ವಿದ್ವಾಂಸರನ್ನು ಸಂದರ್ಶಿಸಲಾಯಿತು. ಹಾಗೂ ತಮಿಳುನಾಡಿನಲ್ಲೇ ಇರುವ ಸಂಕೇತಿಗಳೂ ಕೂಡ ತಮ್ಮ ಪೂರ್ವಿಕರು ಕರ್ನಾಟಕಕ್ಕೆ ವಲಸೆ ಹೋದುದನ್ನು ತಿಳಿಸುತ್ತಾರೆ. ಎರಡೂ ರಾಜ್ಯಗಳಲ್ಲಿರುವ ಸಂಕೇತಿಗಳ ಮೌಖಿಕ ಪರಂಪರೆಯಲ್ಲಿ ಅವರ ಪೂರ್ವಿಕರ ವಲಸೆ ಎರಡು ಗುಂಪುಗಳಲ್ಲಾಯಿತೆಂಬ ವಿಷಯ ಸ್ಪಷ್ಟವಾಗುತ್ತದೆ.

ಡಾ|| ಎ. ಕೆ. ಶಾಸ್ತ್ರಿ*

# ಕನ್ಯಾ ವಿಕ್ರಯ ಪದ್ಧತಿ

ಭಾರತದ ಸಮಾಜ ವ್ಯವಸ್ಥೆಯ ಐತಿಹಾಸಿಕ ಬೆಳವಣಿಗೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಅನೇಕ ಒಳ್ಳೆಯ ಪದ್ಧತಿಗಳೊಂದಿಗೆ ಕೆಲವು ಅನಿಷ್ಟ ಪದ್ಧತಿಗಳೂ ಬೆಳೆದು, ಸಮಾಜದ ಸ್ವಾಸ್ಥ್ಯ ಕೆಟ್ಟಿದ್ದನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಅನಪೇಕ್ಷಿತ ವಿವಿಧ ಜಾತಿ ಮತ್ತು ಕೋಮುಗಳ ಮಧ್ಯೆ ಸಂಘರ್ಷ, ಮತೀಯ ಗಲಭೆ, ಹೆಣ್ಣು ಶಿಶು ಹತ್ಯೆ, ನರಬಲಿ, ಮೂಢನಂಬಿಕೆಗಳು, ವರದಕ್ಷಿಣೆ ಮುಂತಾದ ಸಾಮಾಜಿಕ ಪಿಡುಗುಗಳಿಂದಾಗಿ ಇತಿಹಾಸದುದ್ದಕ್ಕೂ ಈ ದೇಶದ ಪ್ರಜ್ಞಾವಂತ ಪ್ರಜೆಗಳು ನಾಚಿಕೆಯಿಂದ ತಲೆ ತಗ್ಗಿಸುವಂತಾಗಿದೆ. ಇಂಥ ಅನಿಷ್ಟ ಪದ್ಧತಿಗಳ ಯಾದಿಯಲ್ಲಿ 'ಕನ್ಯಾವಿಕ್ರಯ' ಪದ್ಧತಿಯನ್ನು ಸೇರಿಸಬಹುದು

ಪ್ರಾಚೀನ ಧರ್ಮಶಾಸ್ತ್ರ ಗ್ರಂಥಗಳು ಕನ್ಯಾವಿಕ್ರಯ ಪದ್ಧತಿಯನ್ನು ಖಂಡಿಸಿದ್ದನ್ನು ಗಮನಿಸಿದರೆ, ಪ್ರಾಚೀನ ಕಾಲದಲ್ಲಿಯೂ ಈ ಅನಿಷ್ಟ ಪದ್ಧತಿ ರೂಢಿಯಲ್ಲಿತ್ತೆಂಬುದು ತಿಳಿದು ಬರುತ್ತದೆ ಮನುಸ್ಮೃತಿ, ಅತ್ರಿಸ್ಮೃತಿ, ಆಪಸ್ತಂಬ, ವ್ಯಾಸಸ್ಮೃತಿ, ವೆಂಕಟೇಶೀಯ, ಮಹಾಭಾರತ, ಶ್ರೀದೇವೀ ಭಾಗವತ, ಯಾಜ್ಞವಲ್ಕ್ಯ, ಮಿತಾಕ್ಷರ, ಪರಾಶರ ಮಾಧವೀಯ, ಹೇಮಾದ್ರಿ, ಕೂರ್ಮ ಪುರಾಣ, ಸ್ಮೃತಿಸಾರ ಸಮುಚ್ಚಯ, ವ್ಯಾಸ, ಸ್ಮೃತಿತರಂಗಿಣಿ, ಮುಂತಾದ ಧರ್ಮ ಶಾಸ್ತ್ರ ಗ್ರಂಥಗಳಲ್ಲಿ ಕನ್ಯಾ ವಿಕ್ರಯ ನಿಂದ್ಯ ಎಂಬುದಾಗಿ ಉಲ್ಲೇಖಿಸಲಾಗಿದೆ. ಶಾಸ್ತ್ರಗ್ರಂಥಗಳಲ್ಲಿಯ ಕೆಲವು ದೃಷ್ಟಾಂತಗಳು*[1] ಇಂತಿವೆ:

*ನ ಕನ್ಯಯಾಃ ಪಿತಾ ವಿದ್ವಾನ್ ಗೃಹ್ಣೀಯಾತ್ ಶುಲ್ಕ ಮಣ್ವಪಿ।*
*ಗೃಹ್ಣನ್ ಶುಲ್ಕ ಹಿ ಲೋಭೇನ ಸ್ಯಾನ್ನರೋಪತ್ಯವಿಕ್ರಯೀ॥*
- ಮನುಸ್ಮೃತಿ

ತಿಳುವಳಿಕೆಯುಳ್ಳ ಕನ್ಯಾಪಿತನು ಅಣುಮಾತ್ರವೂ ಶುಲ್ಕವನ್ನು ಸ್ವೀಕರಿಸಬಾರದು. ಅತ್ಯಾಸೆಯಿಂದ ಶುಲ್ಕವನ್ನು ಸ್ವೀಕರಿಸುವವನು ಸಂತಾನವನ್ನು ಮಾರುವ ಮನುಷ್ಯನೆನಿಸುತ್ತಾನೆ.

ಅತ್ರಿಸ್ಮೃತಿಯಲ್ಲಿ

*ಕ್ರಯಕ್ರೀತಾ ಚ ಯಾ ಕನ್ಯಾ ಪತ್ನೀಸಾ ನ ವಿಧೀಯತೇ।*
*ತಸ್ಯಾ ಜಾತಾಃ ಸುತಾಸ್ತೇಷಾಂ ಪಿತೃಪಿಂಡೋ ನ ವಿದ್ಯತೇ॥*

ಯಾವ ಕನ್ಯೆಯು ಕ್ರಯಕ್ಕೆ ಕೊಳ್ಳಲ್ಪಟ್ಟಿದ್ದಾಳೋ, ಅವಳು (ಧರ್ಮ)ಪತ್ನಿಯಾಗುವುದಿಲ್ಲ. ಅವಳಲ್ಲಿ ಹುಟ್ಟಿದ ಮಕ್ಕಳು ಅವರ ಪಿತೃಸಂತಾನವಾಗುವುದಿಲ್ಲ.

ಆಪಸ್ತಂಬ ಸ್ಮೃತಿಯಲ್ಲಿ

*ಅನ್ಯೇನಾಪಿ ಹಿಶುಲ್ಕೇನ ಪಿತಾ ಕನ್ಯಾಂ ದದಾತಿ ಯಃ।*
*ಕೌರವೇ ಬಹುವರ್ಷಾಣಿ ಪುರೀಷಂ ಮಾತ್ರ ಮಶ್ನುತೇ॥*

ಯಾವ ತಂದೆಯು ಬೇರೆ ಬೇರೆ ಯಾವುದೇ ರೀತಿಯ ಶುಲ್ಕ ಸ್ವೀಕರಿಸಿ ಕನ್ಯೆಯನ್ನು ಕೊಡುತ್ತಾನೋ ಅಂಥವನು ಕೌರವ ನರಕದಲ್ಲಿ ಬಹು ವರ್ಷಗಳ ವರೆಗೆ ಮಲ-ಮೂತ್ರಗಳನ್ನು ಸೇವಿಸುತ್ತಿರುತ್ತಾನೆ.

ವೆಂಕಟೇಶೀಯದಲ್ಲಿ

*ಕನ್ಯಾ ಆಭರಣಂ ಮೌಲ್ಯಂ ಸಮರ್ಥಾಶ್ರಯ ಸೇವನೇ।*
*ಪರಸ್ಪರ ವಿವಾಹಶ್ಚ ವಿಕ್ರಯಶ್ಚೈವ ಪಂಚಧಾ॥*

ಕನ್ಯೆಗಾಗಿ ಕೊಡುವ ಆಭರಣ, ಹಣ, ಸಮರ್ಥ ಆಶ್ರಯ, ಸಮರ್ಥ ಸೇವೆ, ಕನ್ಯಾ ವಿನಿಮಯ ಇವು ಐದು ಪ್ರಕಾರದ ವಿಕ್ರಯಗಳೇ ಆಗಿವೆ.

ಮಹಾಭಾರತದಲ್ಲಿ

*ವಿಕ್ರೇತಾಸು ಹಿ ಯೇ ಪುತ್ರಾ ಭವಂತಿ ಪಿತುರೇವ ತೇ।*
*ಅಸೂಯವಂತೋ ಧರ್ಮಿಷ್ಠಾಃ ಪರಸ್ವಾದಾಯಿನಃ ಶಠಾ॥*

ತಂದೆಯಿಂದಲೇ ಮಾರಲ್ಪಟ್ಟ ಕನ್ಯೆಯರಲ್ಲಿ ಹುಟ್ಟಿದ ಮಕ್ಕಳು ಹೊಟ್ಟೆಕಿಚ್ಚಿನವರೂ, ಅಧರ್ಮಿಗಳೂ, ಪರಸ್ವಾಪಹಾರಿಗಳೂ, ವಂಚಕರೂ ಆಗುತ್ತಾರೆ.

*ಧರ್ಮಜ್ಞಾ ಧರ್ಮಶಾಸ್ತ್ರೇಷು ನಿಬದ್ಧಾ ಧರ್ಮಸೇತುಪು।*
*ಯೋಮನುಷ್ಯಃ ಸ್ವಕಂ ಪುತ್ರಂ ವಿಕ್ರೀಯ ಧನಮಿಚ್ಛತಿ*
*ಕನ್ಯಾಂ ವಾ ಜೀವಿತಾರ್ಥಾಯ ಯಃ ಶುಲ್ಕೇನ ಪ್ರಯಚ್ಛತಿ॥*
*ಸಪ್ತವಾರೇ ಮಹಾಘೋರೇ ನಿರಯೇಕಾಲ ಸಾಹ್ವಯೇ।*
*ಸ್ವೇದಂ ಮಾತ್ರಂ ಪುರೀಷಂ ಚ ತಸ್ಮಿನ್ ಮೂಢಃ ಸಮಶ್ನುತೇ॥*

ಧರ್ಮವನ್ನು ತಿಳಿದವರು ಧರ್ಮವೆಂಬ ಸೇತುವೆಯುಳ್ಳ ಧರ್ಮಶಾಸ್ತ್ರಗಳಲ್ಲಿ ಬಂಧಿತರಾಗಿರುತ್ತಾರೆ.

ಯಾವ ಮನುಷ್ಯನು ತನ್ನ ಮಗನನ್ನೇ ಮಾರಿ ಧನ ಸಂಪಾದನೆ ಮಾಡಲು ಇಚ್ಛಿಸುತ್ತಾನೋ, ಅಥವಾ ಜೀವನ ನಿರ್ವಹಣೆಗಾಗಿ ಕನ್ಯಾಶುಲ್ಕವನ್ನು ತೆಗೆದುಕೊಂಡು ಹೆಣ್ಣನ್ನು ಕೊಡುವನೋ ಅಂತಹ ಮೂಢನು (ಕುಂಭೀಪಾಕವೇ ಮೊದಲಾದ) ಏಳು ರೀತಿಯ ಭಯಂಕರವಾದ ಕಾಲಸೂತ್ರವೆಂಬ ಹೆಸರಿನ ನರಕದಲ್ಲಿ ಬಿದ್ದು ದೈಹಿಕ ವಿಸರ್ಜನೆಗಳನ್ನು ಸೇವಿಸುತ್ತಿರುತ್ತಾನೆ.

ಯಾಜ್ಞವಲ್ಕ್ಯ ಸ್ಮೃತಿ, ಮಿತಾಕ್ಷರಾ ಮತ್ತು ಪರಾಶರ ಮಾಧವೀಯಗಳಲ್ಲಿ

*ಟಿ.ಎನ್.ಎಸ್. ರೈಸ್ ಮಿಲ್ ಕೆಳಗೆ, ಶಿರಸಿ (ಉ.ಕ.) ೫೮೧ ೪೦೨.

*ವಿಕ್ರೀಯ ಕನ್ಯಕಾಂ ಗಾಂಚ ಕೃಚ್ಛ್ರಂ ಸಾಂತಪನಂ ಚರೇತ್।*

ಕನ್ಯೆಯನ್ನೂ ಆಕಳನ್ನು ಮಾರಿದರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ಸಾಂತಪನ ವ್ರತವನ್ನು(ಕಠೋರ ತಪಸ್ಸು) ಆಚರಿಸಬೇಕು.

*ನಾರೀಣಾಂ ವಿಕ್ರಯಂ ಕೃತ್ವ ಚರೇತ್ ಚಾಂದ್ರಾಯಣ ವ್ರತಮ್।*

ನಾರೀ ವಿಕ್ರಯವನ್ನು ಮಾಡಿದರೆ ಚಾಂದ್ರಾಯಣ ವ್ರತವನ್ನು ಆಚರಿಸಬೇಕು.

ಕೂರ್ಮಪುರಾಣದಲ್ಲಿ

*ವಸ್ತ್ರಾದಿ ಪಂಚಸಂಯುಕ್ತಾಂ ಅಲಂಕೃತ್ಯ ಸ್ವಕಾಂ ಸುತಾಂ।*
*ಕುಲಜಾಯ ಸುಶೀಲಾಯ ಸ್ನಾತಕ ವ್ರತ ಚಾರಿಣೇ॥*
*ಆರೋಗಾಯ ಸುವ್ರತಾಯ ಯೋದ ದ್ಯಾತ್ತಾಶ್ರುಷ್ವಮೇ।*
*ಪಿತರೋ ಮುಕ್ತಿ ಮಾಯಾಂತಿ ಸ್ವಯಂ ಚ ಬ್ರಹ್ಮಣಸ್ಪದಮ್॥*

ತನ್ನ ಮಗಳನ್ನು ವಸ್ತ್ರವೇ ಮೊದಲಾದ ಐದು ರೀತಿಯಿಂದ ಅಲಂಕರಿಸಿ ಸತ್ಕುಲ ಪ್ರಸೂತನಾದ, ಸದ್ಗುಣಿಯಾದ, ಬ್ರಹ್ಮ ಚರ್ಯಾನುಷ್ಠಾನ ತತ್ಪರನಾದ, ಆರೋಗ್ಯವಂತನಾದ, ನಿಯಮ ನಿರತನಾದ ವರನಿಗೆ ಯಾವನು ಕೊಡುತ್ತಾನೋ - ಅಂಥವನ ತಂದೆ - ತಾಯಿಗಳು ಮುಕ್ತಿಯನ್ನು ಹೊಂದುತ್ತಾರೆ. ಸ್ವತಃ ತಾನು ಬ್ರಹ್ಮಪದವಿಯನ್ನು ಹೊಂದುತ್ತಾನೆ - ಎಂದು ನನ್ನಿಂದ ಕೇಳಿ ತೀ ದುಕೋ.

*ಏತಸ್ಯ ವೈಪರೀತ್ಯೇವ ಪಿತರೋ ನಿರಯಂ ಗತಾಃ।*
*ಕುಂಭೀ ಪಾಕಂ ಸ್ವಯಂ ಯಾತಿ ಕನ್ಯಾವಿಕ್ರಯಣೇ ಫಲೇ॥*

ಇದಕ್ಕೆ ವಿರುದ್ಧವಾದರೆ ತಂದೆ-ತಾಯಿಗಳು ನರಕಕ್ಕೆ ಹೋಗುತ್ತಾರೆ. ಕನ್ಯಾವಿಕ್ರಯದ ಫಲವಾಗಿ ಸ್ವತಃ ತಾನು ಕುಂಭೀಪಾಕ ನರಕಕ್ಕೆ ಹೋಗುತ್ತಾನೆ.

ವೃದ್ಧ ವಸಿಷ್ಠ

*ಪುರಶ್ಚರಣ ಲಕ್ಷಂ ತು ಪಂಚಾಕ್ಷರ್ಯಾಃ ಪ್ರಕಾರಯೇತ್।*
*ಕನ್ಯಾವಿಕ್ರಯ ದೋಷೇಣ ಮುಚ್ಯತೇ ನಾತ್ರ ಸಂಶಯಃ॥*

ಲಕ್ಷ ಪಂಚಾಕ್ಷರಿ ಪುರಶ್ಚರಣವನ್ನು ಮಾಡಬೇಕು. ಆಗ ಕನ್ಯಾವಿಕ್ರಯದೋಷದಿಂದ ಮುಕ್ತನಾಗುತ್ತಾನೆ ಎಂಬಲ್ಲಿ ಸಂದೇಹವಿಲ್ಲ.

ಹೇಮಾದ್ರಿಯಲ್ಲಿ:

*ಜಾಮಾತುಃ ಅತಿರಾತ್ರಂ ಸ್ಯಾತ್ ಸಾ ವೈಕಂಕರಣೆ ಭವೇತ್।*

ಅವಳು ದಾಸಿಯಾದಾಳು ಎಂದು ಅಳಿಯನಿಂದ ಅತಿರಾತ್ರ ಯಜ್ಞವಾಗಬೇಕು.

ಹೀಗೆ, ಕನ್ಯಾವಿಕ್ರಯವು ದೋಷಪೂರಿತವಾದದ್ದೆಂದು ಧರ್ಮ ಶಾಸ್ತ್ರಗಳಲ್ಲಿ ಉಲ್ಲೇಖಿಸಲಾಗಿದೆ. ಕನ್ಯಾವಿಕ್ರಯಕ್ಕೆ ಪೂರಕವಾದ ಹೇಳಿಕೆಗಳು ಯಾವ ಧರ್ಮಶಾಸ್ತ್ರಗಳಲ್ಲೂ ಉಲ್ಲೇಖಗೊಂಡಿಲ್ಲ. ಪಾಪಕರ್ಮಗಳಿಗೆ ಪ್ರಾಯಶ್ಚಿತ್ತಗಳನ್ನೂ ಧರ್ಮಶಾಸ್ತ್ರಗ್ರಂಥಗಳಲ್ಲಿ ನಮೂದಿಸಲಾಗಿದೆ. ಅದೇ ರೀತಿ, ಕನ್ಯಾವಿಕ್ರಯ ಮಹಾ ಪಾಪಕೃತ್ಯ ಎಂದು ಪರಿಗಣಿಸಲ್ಪಟ್ಟರೂ, ಅಂಥ ಅಕೃತ್ಯ ನಡೆದಿದ್ದೇ ಆದಲ್ಲಿ, ಅದಕ್ಕೂ ಪ್ರಾಯಶ್ಚಿತ್ತ ವಿಧಿಸಿದ್ದನ್ನು ಮೇಲ್ಕಾಣಿಸಿದ ಕೆಲವು ದೃಷ್ಟಾಂತಗಳಿಂದ ಅರಿಯಬಹುದಾಗಿದೆ.

*ತರತಿ ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯದುತೇ।*

"ಯಾವನು ಅಶ್ವಮೇಧ ಯಜ್ಞವನ್ನು ಮಾಡುತ್ತಾನೋ ಅವನು ಕ್ರಮೇಣ 'ಬ್ರಹ್ಮಹತ್ಯಾದೋಷದಿಂದ ಪಾರಾಗುತ್ತಾನೆ" ಎಂಬುದಾಗಿ 'ಹೇಮಾದ್ರಿ'ಯಲ್ಲಿ ಉಲ್ಲೇಖಗೊಂಡಿದ್ದನ್ನು ಪ್ರಸ್ತುತದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಹತ್ತೊಂಬತ್ತನೇ ಶತಮಾನ ಮತ್ತು ಇಪ್ಪತ್ತನೇ ಶತಮಾನದ ಆದಿಯಲ್ಲಿಯೂ ಹವ್ಯಕ ಬ್ರಾಹ್ಮಣರಲ್ಲಿ ತೆರ ತೆಗೆದುಕೊಂಡು ಕನ್ಯಾ ಲಗ್ನ ಮಾಡುವ ಪದ್ಧತಿ ರೂಢಿಯಲ್ಲಿತ್ತೆಂಬುದು ಶ್ರೀಸ್ವರ್ಣವಲ್ಲೀ*[೨] ಮತ್ತು ಶ್ರೀರಾಮಚಂದ್ರಪುರ ಮಠದ ಚಾರಿತ್ರಿಕ ದಾಖಲೆಗಳಿಂದ ವಿದಿತವಾಗುತ್ತದೆ. ಇಂಥ ವಿವಾಹ ಶಾಸ್ತ್ರ ಸಮ್ಮತವಲ್ಲ ಎಂಬುದಾಗಿ, ಹವ್ಯಕ ಮಠಾಧೀಶರು ಅಪ್ಪಣೆ ಕೊಡಿಸಿದ್ದು ಗಮನಾರ್ಹ ಸಂಗತಿ. ತೆರಾ (ತೆರ) ತೆಗೆದುಕೊಂಡು ಕನ್ಯಾಲಗ್ನ ಮಾಡುವದು ಶಾಸ್ತ್ರ ವಿರೋಧವಾಗಿರುವದರಿಂದ, ಅಂಥವರಿಗೆ ಬಹಿಷ್ಕಾರ ಹಾಕಬೇಕಾಗಿ ಮಂಜುಗುಣಿ ಅರ್ಚಕ ವೆಂಕಭಟ್ಟ, ಮುಂತಾದ ಸೀಮೆ ಸಮಸ್ತರಿಗೆ ಸ್ವರ್ಣವಲ್ಲೀ ಮಠದ ಶ್ರೀಸರ್ವಜ್ಞೇಂದ್ರಸರಸ್ವತೀಸ್ವಾಮಿಗಳು ಶಾ.ಶ.೧೭೯೧ (ಕ್ರಿ.ಶ.೧೮೬೯) ಪ್ರಮೋದ ಸಂವತ್ಸರದಲ್ಲಿ ಬರೆಸಿ ಪಾಲಿಸಿದ ನಿರೂಪ,*[೩] ತೆರಾ ತೆಗೆದುಕೊಂಡು ಲಗ್ನ ಮಾಡುವದು ಅಶಾಸ್ತ್ರವಾಗಿರುವದರಿಂದ, ಇನ್ನಾದರೂ ವರ್ಣಾಶ್ರಮಕ್ಕೆ ವಿರೋಧವಾಗದ ರೀತಿ, ಕನ್ಯಾಕ್ಕೆ ೮ ವರ್ಷವಾದ ಕೂಡಲೇ ಉತ್ತಮವುಳ್ಳ ಕುಲದವರಿಗೆ ಪಾಣಿಗ್ರಹಣ ಲಗ್ನ ಮಾಡಿ ಕೊಡಬೇಕಾಗಿ ಸ್ವರ್ಣವಲ್ಲೀ ಮಠದ ಶ್ರೀಗಂಗಾಧರೇಂದ್ರ ಸರಸ್ವತಿಗಳು ಮಂಜುಗುಣಿ ದೇವಸ್ಥಾನದ ಅರ್ಚಕ ಪುಟ್ಟಭಟ್ಟರಿಗೆ ಮತ್ತು ಸೀಮೆಯ ವೈದಿಕ ಗೃಹಸ್ಥರಿಗೆ ಕ್ರಿ.ಶ. ೧೮೮೩ರಲ್ಲಿ ಬರೆಸಿ ಪಾಲಿಸಿದ ನಿರೂಪ,*[೪] ವರ್ಣಾಶ್ರಮ ಧರ್ಮಾಚರಣೆಯಲ್ಲಿ ನ್ಯೂನಾತಿರಿಕ್ತ ಉಂಟಾಗಿರುವದರಿಂದ ಅನಾಚಾರಗಳು ಬೆಳೆಯುತ್ತವೆ. ಶಾಸ್ತ್ರ ವಿರುದ್ಧವಾಗಿ ಯಾರೂ ನಡೆಯಬಾರದೆಂದು ಶ್ರೀ ಗಂಗಾಧರೇಂದ್ರ ಸರಸ್ವತಿಗಳು ಶಿರಸಿ, ಸಿದ್ದಾಪುರ, ಯಲ್ಲಾಪುರ, ಅಂಕೋಲೆ, ಮುಂತಾದ ತಾಲೂಕು ನಿವಾಸಿಗಳಾದ ಹವ್ಯಕ ಬ್ರಾಹ್ಮಣ ಮಂಡಲಿಯವರಿಗೆ ಶಾ.ಶ.೧೮೦೮, ವ್ಯಯ, ವೈಶಾಖ ಶು.೧೪, ಸೋಮವಾರ(೧೭-೫-೧೮೮೬) ಬರೆಸಿದ ನಿರೂಪ,*[೫] ಕನ್ಯಾವಿಕ್ರಯ ದೋಷ ನಿವಾರಣೆ ಕುರಿತು, ಸೋದಾ, ಕರೂರು, ಶಿರಸಿ, ಶಿವಳ್ಳಿ, ಬಾಳೂರು, ಶಾಂತಪುರ, ಮಂಜುಗುಣಿ, ಮತ್ತಿಘಟ್ಟ, ದೇವನಹಳ್ಳಿ, ಇಸಳೂರು, ತೋಟಸೀಮೆ, ಬನವಾಸಿ, ಬದನಗೋಡ, ಯಲ್ಲಾಪುರ, ಭರತನಹಳ್ಳಿ, ಕುಳಿನಾಡು,

ಚಿನ್ನಾಪುರ, ಮೆಣಸೆ, ಗೋಣಸರು, ಉಳವೆ, ಕಿಸಲವಾಡ ಸೀಮೆಗಳ ವೈದಿಕ ಗೃಹಸ್ಥರು ಶ್ರೀ ಗಂಗಾಧರೇಂದ್ರ ಸರಸ್ವತಿಗಳಿಗೆ ಶಾ.ಶ. ೧೮೨೨, ಶಾರ್ವರಿ, ವೈಶಾಖ ಬ.೨, ಬುಧವಾರ (೧೬-೫-೧೯೦೦) ಬರೆದ ಬಿನ್ನವತ್ತಳೆ,*[೬] ಮುಂತಾದವುಗಳು ಸದರಿ ವಿಷಯದ ಮೇಲೆ ಬೆಳಕು ಬೀರುತ್ತವೆ.

ಹವ್ಯಕ ಕನ್ಯಾವಿಕ್ರಯ ನಿವಾರಣೆಗೆ ಸಂಬಂಧಿಸಿ ಶ್ರೀಮತ್ಸೋಂದಾ ಸ್ವರ್ಣವಲ್ಲೀ ಮಠದ ಶ್ರೀಸರ್ವಜ್ಞೇಂದ್ರ ಸರಸ್ವತೀ ಸ್ವಾಮಿಗಳ ಮತ್ತು ವ್ಯಯ ಸಂವತ್ಸರದ ಆಷಾಢ ಶು.೪, ಚಂದ್ರವಾರದಂದು(೫-೭-೧೮೮೬),*[೭] ಯಲ್ಲಾಪುರ ಸೀಮೆಯ ಹವ್ಯಕ ಬ್ರಾಹ್ಮಣರು ಏಕಮತಸ್ಥರಾಗಿ ತಮ್ಮ ಜಾತಿಜನರಲ್ಲಿ ಪ್ರಾಚೀನ ಪದ್ಧತಿಗೆ ಹಾಗೂ ಶಾಸ್ತ್ರಕ್ಕೆ ವಿರುದ್ಧವಾಗಿರುವ ಕನ್ಯಾವಿಕ್ರಯ ಮುಂತಾದ ಅನಾಚಾರಗಳು ನಡೆಯಬಾರದೆಂದು ಕವಡಿಕೆರೆ ಶ್ರೀ ದುರ್ಗಾಮ್ಮ ದೇವಸ್ಥಾನದಲ್ಲಿ ಸಭೆ ಸೇರಿ ಯೋಗ್ಯ ಉಪಾಯಗಳನ್ನು ಕುರಿತು ಠರಾವುಗಳನ್ನು ಅಂಗೀಕರಿಸಿದ್ದು ಕಂಡು ಬರುತ್ತದೆ. ಹದಿಮೂರು ತರದ ಧರ್ಮವಿರುದ್ಧ ಕನ್ಯಾವಿಕ್ರಯ ಕುರಿತು ಪ್ರಸ್ತಾಪಿಸಲಾಗಿದೆ. ಅವು ಯಾವುವೆಂದರೆ-"....ಅಲ್ಲಂಕಾರ ಮೂಲ್ಲ ಕಂನ್ಯದಾನ*[೮] - ಕಂನ್ಯಾ ಮೂಲ್ಲ ಕಂನ್ಯದಾನ -ವಿಕ್ರಿತ್ತ ಕಂನ್ಯ ಮೂಲ್ಲ ಕಂನ್ಯಾದಾನ - ಭೂಮೂಲ್ಲ ಕಂನ್ಯದಾನ - ಭೂಧನ ಮೂಲ್ಲ ಕಂನ್ಯಾದಾನ - ಕೃಷಿಮೂಲ್ಲ ಕಂನ್ಯಾದಾನ - ರುಣಮುಕ್ತ ಕಂನ್ಯದಾನ ಕಪಟಾಪಹ್ರುತ್ತ ಕಂನ್ಯಾದಾನ - ಬಲ್ಲತ್ಕಾಕ್ರ ಕಂನ್ಯದಾನ - ಭೂಧನಗ್ರಹ ಮೂಲ್ಲ ಕಂನ್ಯದಾನ - ಪರಕ್ಕಂನ್ಯ ಅಪಹ್ರುತ್ತ ದ್ವಿಕಂನ್ಯಾಮೂಲ್ಲ ಕಂನ್ಯಾದಾನ. ಧರ್ಮಕಲ್ಯಾಣವನ್ನು ಮಾಡಿಕೊಡಲು ಸಾಮರ್ಥ್ಯವಿಲ್ಲದವನೂ ಕೂಡ ವರನ ಕಡೆಯಿಂದ ಯಾವ ಐವಜುಗಳನ್ನೂ (ಕಿಮ್ಮತ್ತು) ಸ್ವೀಕರಿಸದೆ, ಜಾತಿ ಜನರಲ್ಲಿ ದೇಶಾವರಗಳ ಮಾಡಿ, ದಾನ ವಿವಾಹವನ್ನೇ ಮಾಡಬೇಕು, ಧರ್ಮವಿವಾಹಗಳನ್ನು ಮಾಡದೆ, ಶಾಸ್ತ್ರ ವಿರುದ್ಧ ವಿವಾಹ ಮಾಡಿದವನಿಗೆ, ಮತ್ತು ಮಾಡಿಸಿಕೊಂಡವನಿಗೆ ಅದಕ್ಕೆ ಅನುಮೋದನ ಕೊಟ್ಟವನಿಗೆ ಮತ್ತು ವಿವಾಹ ಮಾಡಿಸಿದ ಪುರೋಹಿತನಿಗೆ ಪ್ರಾಯಶ್ಚಿತ್ತಗಳನ್ನು (ಮಹಾಯಾತ್ರಾ, ಜಾತಿತ್ಯಾಗ) ಮತ್ತು ಶ್ರೀ ಗುರುಮುದ್ರಾ ಉಲ್ಲಂಘನ ಅಪ್ಪಣೆ ಶಾಸನವನ್ನು ವಿಧಿಸಲಾಗಿದೆ. ಆದ್ದರಿಂದ ಧರ್ಮಕನ್ಯಾದಾನ ವಿವಾಹಗಳನ್ನೇ ಮಾಡಬೇಕೆಂದು ನಿರ್ಣಯಿಸಲಾಯಿತು. ಹವ್ಯಕರು ಕೃಷಿಗೆ ಗಮನ ಕೊಟ್ಟು, ಜ್ಞಾನಾರ್ಜನೆ ಮಾಡಿ, ವೇದಶಾಸ್ತ್ರ ಪುರಾಣಗಳನ್ನು ಓದಿ, ಸ್ವಧರ್ಮ ಆಚಾರ ನಡ್ಡೆಸಿ, ಕೀರ್ತಿ ಸಂಪಾದಿಸಬೇಕೆಂಬ ಅಂಶಗಳನ್ನೂ ಸದರಿ ದಾಖಲೆಯಲ್ಲಿ ನಮೂದಿಸಲಾಗಿದೆ. ಹವ್ಯಕ ಬ್ರಾಹ್ಮಣ ಜಾತಿ ಸ್ತ್ರೀಯರು ಮತ್ತು ವಿಧವೆಯರು ವ್ಯಾಪಾರ ಮುಂತಾದ್ದರ ಬಗ್ಗೆ ಬಾಜಾರಕ್ಕೆ ಹೋಗುವದಾಗಲಿ, ಅಲ್ಲಿ ವಸತಿ ಮಾಡುವದಾಗಲಿ ಮನ್ನಾನೆ ತಿರುಗಾಡುವದಾಗಲಿ, ಗುರು ಆಜ್ಞಾ ಉಲ್ಲಂಘನೆ ಆಗಿತ್ತೆಂಬ ಅಂಶವೂ ದಾಖಲೆಯಲ್ಲಿ ಉಲ್ಲೇಖ ಗೊಂಡಿದೆ.

ಈ ದಿಶೆಯಲ್ಲಿ, ಶ್ರೀ ಸೋಂದಾಸ್ವರ್ಣವಲ್ಲೀ ಮಹಾ ಸಂಸ್ಥಾನದ ಆಡಳಿತ ಕಮಿಟಿಯವರು ಸಮಸ್ತ ವೈದಿಕ ಗೃಹಸ್ಥರಿಗೆ ಬರೆದ ವಿನಂತಿ ಪತ್ರದಲ್ಲಿಯ ಕೆಲವು ಅಂಶಗಳು ಗಮನಾರ್ಹವಾಗಿವೆ:

*"ನಂಮ ಹವೀಕ ಜನರ ಪೈಕಿ ಕೆಲವರು ತೆರಾ ತಕ್ಕೊಂಡು ತಂಮ ಕಂನೆಯರಂನ್ನು ವಿವಾಹ ಮಾಡಿಕೊಡುತ್ತಾರೆ. ಇದು ಧರ್ಮಕ್ಕೂ, ನೀತಿಗೂ ವಿರುದ್ಧವಾದ ಮತ್ತು ಧರ್ಮಶಾಸ್ತ್ರಗಳಿಂದ ಬಹುಪರಿಯಿಂದ ನಿಷೇಧಿಸಲ್ಪಟ್ಟ ಅನಾಚಾರವಾಗಿರುತ್ತದೆ. ಹ್ಯಾಂಗದರೆ - ಕನ್ಯಾವಿಕ್ರಯತೋ ದೋಷೋ ಮಹಾನೇಷಃ ಪ್ರಕೀರ್ತಿತಃ॥ ಪತಂತಿ ಪಿತರಃ ಸ್ವರ್ಗಾತ್ಕನ್ಯಾ ವಿಕ್ರಯದೋಷತಃ ॥೧॥ ಕ್ರಯಕ್ರೀತಾಚಯಾ ಕನ್ಯಾನಸಾ ಪತ್ನ್ಯೈ ಭಿಧೀಯತೆ॥ತಸ್ಯಾಂ ಜಾತಾಃ ಸುತಾಸ್ತೆಷಾಂ ಪಿತೃಪಿಂಡಂ ನವಿದ್ಯತೆ॥೨॥ ಕ್ರೀತಾ ದ್ರವ್ಯೇಣ ಯಾನಾರೀನಸಾಪತ್ನೀ ವಿಧೀಯತೆ॥ ನಸಾದೈವೆ ನಸಾಪಿತ್ನ್ಯೇದಾಸೀಂ ತಾಂ ಕವಯೋ ವಿದುಃ ॥೩॥ ಮಾತಾ ಭಕ್ಷಯತೇಗಾತ್ರಂ ಪಿತಾ ಭಕ್ಷಯತೇ ಶಿರಃ ॥ ಬಂಧುಭಿರ್ಭಕ್ಷ್ಯತೇ ಬಾಹುಃ ಶೇಷಶ್ಚೈವೇ ತರ್ರೈರ್ಜನೈಃ॥೪॥ ಕನ್ಯಾವಿಕ್ರಯದಿಂದ ಅನೇಕ ದೋಷಗಳು ಬರುತ್ತವೆಂದು ಹೇಳಲ್ಪಟ್ಟಿದೆ. ಕನ್ಯಾವಿಕ್ರಯ ದೋಷದಿಂದ ಪಿತೃಗಳು ಸ್ವರ್ಗದಿಂದ ಅಧಃ ಪತನವನ್ನು ಹೊಂದುತ್ತಾರೆ. ಕಂನಿಕೆಯನ್ನು ಕ್ರಮಕೊಟ್ಟು ತೆಗೆದು ಕೊಂಡರೆ ಆ ಕಂನಿಕೆಯು ಪತ್ನೀ (ಹೆಂಡತಿ) ಎಂದು ಅನ್ನಿಸಿಕೊಳ್ಳು ವದಿಲ್ಲ. ಮತ್ತು ಅಂಥವಳಲ್ಲಿ ಹುಟ್ಟಿದ ಹುಡುಗರು ಪಿತೃಗಳಿಗೆ ಪಿಂಡದಾನ ಮಾಡಲಿಕ್ಕೆ ಯೋಗ್ಯರಾಗುವದಿಲ್ಲ. ದೇವ ಪಿತೃಕಾರ್ಯಗಳಲ್ಲಿ ಕ್ರಯ (ತೆರೆ) ಕೊಟ್ಟು ತಕ್ಕೊಂಡು ಬಂದ ಸ್ತ್ರೀಯು ಪತ್ನಿಎಂತ ವ್ಯವಹರಿಸಲಿಕ್ಕೆ ಯೋಗ್ಯಳಾಗುವದಿಲ್ಲ. ಇಷ್ಟೇ ಅಲ್ಲ; ಅವಳನ್ನು ಬುದ್ಧಿವಂತರು (ಬಲ್ಲಾದವರು) ದಾಸೀ ಎಂದು ತಿಳಿದುಕೊಳ್ಳುತ್ತಾರೆ. ಇಂಥಾ ಕಂನಿಕೆಯ ಶರೀರ (ಮುಂಡ)ವನ್ನು ತಾಯಿಯೂ, ತಲೆಯನ್ನು (ರುಂಡವನ್ನು) ತಂದೆಯೂ, ತೋಳನ್ನು ಬಂಧುಗಳೂ, ಉಳಿದ ಭಾಗವನ್ನು ಇತರೇ ಜನರೂ ಭಕ್ಷಿಸುತ್ತಾರೆ ಎಂಬ ವಗೈರೆ ಅನೇಕ ಧರ್ಮಶಾಸ್ತ್ರ ವಚನಗಳ ಮೂಲಕ ಇಂಥಾ ಲಗ್ನವು ಕೇವಲ ಧರ್ಮಶಾಸ್ತ್ರ ವಿರುದ್ದವಾದದ್ದಲ್ಲದೆ ವ್ಯವಹಾರದಲ್ಲಿ ಸಹಾ ಇಂಥ ವಿವಾಹವನ್ನು ಮಾಡಿದವರು ಮತ್ತು ಮಾಡಿಕೊಂಡವರು ಅತಿಶಯ ದಾರಿದ್ರಾವಸ್ಥೆವ ಹೀನಸ್ಥಿತಿಗೆ ಬಂದದ್ದು ಅನುಭವಸಿದ್ಧವದೆ..."* ಈ ಎಲ್ಲ *ದುಷ್ಪರಿಣಾಮಗಳನ್ನು ತಿಳಿದು ಇಂಥ ನಿಷಿದ್ಧವಾದ ಅನಾಚಾರದ ವಿವಾಹವನ್ನು ಬಂದು ಮಾಡುವ ಬಗ್ಗೆ ಈ ಹಿಂದೆ ಅನೇಕ ಪ್ರಯತ್ನಗಳು ನಡದಾಗ್ಯೂ; ಉದ್ದೇಶವು ನೆರವೇರದೇ ಇದ್ದುದರಿಂದ, ಆಡಳಿತ ಕಮಿಟಿಯ ಠರಾವು ಮತ್ತು ಶ್ರೀಮುಖವನ್ನು ಜನರಿಗೆ ಮೇಲಿಂದ ಮೇಲೆ ಓದಿ ಹೇಳುವಂತೆ ವೈದಿಕ ಗೃಹಸ್ಥರನ್ನು ವಿನಂತಿಸಿಕೊಳ್ಳಲಾಯಿತು. "...ತೆರಾ ತಕ್ಕೊಂಡು ಲಗ್ನ ಮಾಡಿಕೊಡುವ ಮತ್ತು ತೆರಾ ಕೊಟ್ಟು ಲಗ್ನ ಮಾಡಿಕೊಳ್ಳುವ ಜನರಲ್ಲಿ ಅಂಥಾ ಲಗ್ನದಲ್ಲಿ ಹೋಗಿ ಊರಕೇರಿ ನೆರೆಹೊರೆಯ ಜನರು ಯಾವ ತರದಿಂದಲೂ ಸಹಾಯ ಮಾಡುವದನ್ನು ವೈದಿಕರು ಅಂಥಾ ವಿವಾಹ ಸಾಗಿಸಲಿಕ್ಕೆ ಹೋಗುವದನ್ನು ದೃಢನಿಶ್ಚಯದಿಂದ ಬಂದುಮಾಡಿ ಸದರಿ ವಿವಾಹಗಳ ಮತ್ತು ಅವುಗಳನ್ನು ಮಾಡುವ ವ ಮಾಡಿಕೊಳ್ಳುವ ಜನರ ಕುರಿತು ತಂಮ ತಿರಸ್ಕಾರವನ್ನು ತೋರಿಸುತ್ತಿರುವದು ಮತ್ತು ಪ್ರತಿವಬ್ಬನು ತಂನ ಸಾಮರ್ಥ್ಯಕನುಸರಿಸಿ ತಂನಿಂದಾದಷ್ಟರ ಮಟ್ಟಿಗೆ ಈ ತರದ*

ವಿವಾಹಗಳನ್ನು ಮಾಡದಂತೆ ಜನರಿಗೆ ಉಪದೇಶ ಮಾಡಿ ಜನರ ಮನಸ್ಸನ್ನು ಇಂಥಾ ವಿವಾಹಗಳನ್ನು ಮಾಡುವ ಪ್ರವೃತ್ತಿಯಿಂದ ತಿರಿಗಿಸಲಿಕ್ಕೆ ಪ್ರಯತ್ನ ಮಾಡುತ್ತಿರುವದು ಪ್ರತಿವಬ್ಬನ ಕರ್ತವ್ಯವೆಂದು ತಿಳಿದು ಅದರಂತೆ ವರ್ತಿಸಬೇಕೆಂದು ವಿನಂತಿ ಇರುತ್ತದೆ.

*(ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ। ಸಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ) ಶ್ರೇಷ್ಠರು ಹ್ಯಾಗೆ ಹ್ಯಾಗೆ ಮಾಡುತ್ತಾರೋ ಅದರಂತೆ ಬೇರೆ ಸಾಮಾನ್ಯ ಜನರು ಸಹಾ ಮಾಡುವದರಿಂದ ತಂಮ ಕೃತ್ಯದಿಂದ ಪ್ರತ್ಯಕ್ಷ ಯಾ ಅಪ್ರತ್ಯಕ್ಷ ರೀತಿಯಿಂದ ಇಂಥಾ ನಿಷಿದ್ಧವ ಅನಾಚಾರದ ಕೃತ್ಯಗಳನ್ನು ಮಾಡಲಿಕ್ಕೆ ತಮಗಿಂತಲೂ ಕಡಿಮೇ ತರದ ಜನರಿಗೆ ಉತ್ತೇಜನ ಬರದಂತೆ ಇಂಥಾ ಪ್ರಸಂಗಗಳಲ್ಲಿ ತಮ್ಮ ಆಚರಣೆಗಳ ನಿಡುವದು ಮತ್ತು ಇಂಥಾ ಅನಾಚಾರಗಳನ್ನು ಒಂದುಮಾಡಲಿಕ್ಕೆ ಯತ್ನಿಸುವದು ಶೀಮೆ ವ ಭಾಗಿಗಳೊಳಗಿನ ಪ್ರತಿವಬ್ಬ ಪ್ರಮುಖ ಗೃಹಸ್ಥ ವ ವೈದೀಕರ ವಿಶೇಷ ಕರ್ತವ್ಯವಿದ್ದು ಆ ಪ್ರಕಾರ ವ್ಯವಸ್ಥೆ ಮಾಡುವ ಜವಾಬದಾರಿಯು ಅವರ ಮೇಲೆ ವಿಶೇಷ ಇರುತ್ತದೆಂದು ಬಲ್ಲಾದವರಿಗೆ ವಿಶೇಷ ಸೂಚಿಸುವ ಆಗತ್ಯವಿಲ್ಲ...." ಎಂಬುದಾಗಿ ವಿನಂತಿಪತ್ರದ ಅಂತ್ಯದಲ್ಲಿ ನಮೂದಿಸಲಾಗಿದೆ.*

ಹವ್ಯಕ ಬ್ರಾಹ್ಮಣರ ಇನ್ನೊಂದು ಪ್ರಮುಖ ಮಠವಾದ ಶ್ರೀಮದ್ರಾಚಂದ್ರಾಪುರ ಮಠಾಧಿಸ್ಥಾನದಿಂದಲೂ ಮೇಲಿನಂಥದೇ ವಿನಂತಿ ಪತ್ರವನ್ನು ಎಲ್ಲ ಹವ್ಯಕದ್ರಾವಿಡ ಬ್ರಾಹ್ಮಣರಿಗೆ ಕಳುಹಿದ್ದನ್ನು ಗಮನಿಸಬಹುದಾಗಿದೆ. "....ವಿಕ್ರಯರೂಪವಾದ ಕನ್ಯಾದಾನವು ನಿಂದ್ಯವಾದದ್ದೆಂದು ಎಷ್ಟೋ ಧರ್ಮಶಾಸ್ತ್ರಗಳ ಉದಾಹರಣೆಗಳಿಂದ ಚನ್ನಾಗಿ ಬೋಧಿಸಿ, ಇನ್ನು ಮುಂದೆ ಹಾಗೆ ತಮ್ಮ ಶಿಷ್ಯರು ಅಂಥಾ ದುಸ್ಕರ್ಮದಲ್ಲಿ ಪ್ರವೃತ್ತರಾಗಿ ನಡಿಯಕೂಡದೆಂತಲೂ, ಒಂದು ವೇಳೆ ಅದಕ್ಕೆ ತಪ್ಪಿದರೆ ಶ್ರೀ ಸಂಸ್ಥಾನದಿಂದ ವಿಧಿಸುವ ಯೋಗ್ಯ ಶಿಕ್ಷೆಗೆ ಒಳಪಟ್ಟಾರೆಂತಲೂ ಚನ್ನಾಗಿ ಬೋಧಿಸಿದ್ದಕ್ಕೆ, ಆ ಸಭೆಯವರೂ ಸಹ ಇನ್ನು ಮುಂದೆ ಹಾಗಿನ ಕೆಲಸ ತಾವು ಮಾಡುವದಿಲ್ಲವೆಂತಲೂ, ಹಾಗೆ ಮಾಡಿದರೆ ತಾವು ಶ್ರೀಸಂಸ್ಥಾನದ ಆಜ್ಞೆಗೆ ಒಳಪಟ್ಟಿರುತ್ತೇವೆಂತಲೂ, ಸವಿನಯವಾಗಿ ಒಪ್ಪಿ ಕೊಂಡಿರುತ್ತಾರೆ...." ಎಂಬುದಾಗಿ ಶ್ರೀಧಾರೇಶ್ವರ ಕ್ಷೇತ್ರದಲ್ಲಿ ಜರುಗಿದ ಸಭೆಯಲ್ಲಿ ತಿಳಿಸಲಾಯಿತು. ಇಂಥ ಅಕೃತ್ಯಗಳು ಬೇರೆ ಬೇರೆ ಧರ್ಮಶಾಸ್ತ್ರಗಳ ಪ್ರಕಾರ ಹೀಗೆ ನಿಂದ್ಯವಾದವುಗಳು ಎಂಬುದನ್ನೂ ಸದರಿ ಪತ್ರದಲ್ಲಿ ನಮೂದಿಸಲಾಗಿದೆ.

ಒಟ್ಟಿನಲ್ಲಿ, ಕನ್ಯಾವಿಕ್ರಯ ಧರ್ಮವಿರುದ್ಧ ಎಂಬುದಾಗಿ ಸಕಲ ಧರ್ಮಶಾಸ್ತ್ರಗ್ರಂಥಗಳು ಉಲ್ಲೇಖಿಸಿದ್ದನ್ನು ಸ್ಪಷ್ಟವಾಗಿ ಗುರುತಿಸ ಬಹುದಾಗಿದೆ. ಕನ್ಯಾವಿಕ್ರಯದಿಂದಾಗಿ ಎಂತೆಂಥ ದೋಷ ಗಳುಂಟಾಗಿ ನರಕ ಪ್ರಾಪ್ತವಾಗುತ್ತದೆ, ಇಂಥ ಅನಿಷ್ಟ ಘಟನೆ ನಡೆದಿದ್ದೇ ಆದಲ್ಲಿ, ಅವುಗಳಿಗೆ ತಕ್ಕ ಪ್ರಾಯಶ್ಚಿತ್ತಗಳೇನು, ಎಂಥ ವರನಿಗೆ ಕನ್ಯೆಯನ್ನು ವಿವಾಹ ಮಾಡಿಕೊಡಬೇಕು, ಕನ್ಯಾವಿಕ್ರಯ, ಪ್ರಕಾರಗಳು, ಹವ್ಯಕ ಬ್ರಾಹ್ಮಣರು ಕೃಷಿಗೆ ಗಮನಕೊಟ್ಟು, ಜ್ಞಾನಾರ್ಜನೆ ಮಾಡಿ, ವೇದ ಶಾಸ್ತ್ರ ಪುರಾಣಗಳನ್ನು ಓದಿ, ಸ್ವಧರ್ಮ ಆಚಾರ ನಡೆಸಿ, ಕೀರ್ತಿ ಸಂಪಾದಿಸಬೇಕಾಗಿ ಮಠಾಧೀಶರ ಅಪ್ಪಣೆ, ಮುಂತಾದ ಅನೇಕ ಸಂಗತಿಗಳು ತಿಳಿದುಬರುತ್ತವೆ. ಕನ್ಯಾವಿಕ್ರಯ ಪದ್ಧತಿ ಇಪ್ಪತ್ತನೇ ಶತಮಾನದ ಆದಿಯಲ್ಲೂ ಮುಂದುವರೆದಿದ್ದು ಕಂಡುಬರುತ್ತದೆ. ದೇಶದಲ್ಲಿ ಸ್ವಾತಂತ್ರ್ಯಾಂದೋಲನ ಅಂತಿಮ ಘಟ್ಟ ತಲುಪಿದೊಡನೆ, ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ರಂಗಗಳಲ್ಲಿ ಗಣನೀಯ ಬದಲಾವಣೆ ಗಳುಂಟಾಗಿದ್ದರಿಂದ ಕೆಲವು ಅನಿಷ್ಟ ಪದ್ಧತಿಗಳು ತಮ್ಮಷ್ಟಕ್ಕೆ ತಾವೇ ನಶಿಸಿದವು. ಆದರೂ, ಸ್ವಾತಂತ್ರ್ಯೋತ್ತರ ಕಾಲದಲ್ಲಿ ವಿವಿಧ ಜಾತಿ ಮತ್ತು ಕೋಮುಗಳ ಮಧ್ಯ ಘರ್ಷಣೆ, ಹಿಂಸೆ, ದಬ್ಬಾಳಿಕೆ, ವರದಕ್ಷಿಣೆ ಪಿಡುಗು, ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆ ಮುಂತಾದ ಅಹಿತಕರ ಬೆಳವಣಿಗೆ, ವಿಪರ್ಯಾಸವೆಂದೇ ಹೇಳಬೇಕಾಗುತ್ತದೆ. ಒಟ್ಟಿನಲ್ಲಿ, ಒಂದು ಅನಿಷ್ಟ ತೊಲಗಿದೊಡನೆ. ಅನೇಕ ಇತರ ಅನಿಷ್ಟಗಳು ಸ್ವಾಸ್ಥ್ಯವನ್ನು ಕೆಡಿಸಲು ಪ್ರಾರಂಭಿಸುತ್ತವೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಪ್ರಸ್ತುತ ಲೇಖನದಲ್ಲಿ ನಮೂದಿಸಲಾದ ಶಾಸ್ತ್ರಗ್ರಂಥಗಳಲ್ಲಿಯ ಶ್ಲೋಕಗಳನ್ನು ರಾಮಚಂದ್ರಾಪುರ ಮತ್ತು ಸ್ವರ್ಣವಲ್ಲೀ ಮಠಗಳ ದಾಖಲೆಗಳಲ್ಲಿ ಉಲ್ಲೇಖಿಸಲಾಗಿದ್ದು, ಅವುಗಳ ಕನ್ನಡಾನುವಾದ ಮಾಡುವಲ್ಲಿ, ಮಿತ್ರರಾದ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕ ಆರ್.ವಿ. ಶಾಸ್ತ್ರಿ ಅವರು ನೀಡಿದ ಸಹಕಾರವನ್ನು ಕೃತಜ್ಞತೆಗಳೊಂದಿಗೆ ಸ್ವೀಕರಿಸಿರುವೆ.

*೨. ಸ್ವ.ದಾ. (ಶ್ರೀಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು, ಕರ್ನಾಟಕ ರಾಜ್ಯಪತ್ರಾಗಾರ) ೨೩೧,೨೩೨,೨೪೬,೨೮೧,೪೯೨,೪೯೪,೪೯೬.

*೩. ಸ್ವ.ದಾ. ೪೯೨

*೪. ಸ್ವ.ದಾ. ೪೯೪

*೫. ಸ್ವ.ದಾ. ೪೯೬

*೬. ಸ್ವ.ದಾ. ೨೪೬

*೭. ಸ್ವ.ದಾ. ೨೩೧

*೮. ಆದರೆ ಇದಕ್ಕೆ ವಿರುದ್ಧವಾಗಿ, ಸಾಲಂಕೃತಕನ್ಯಾದಾನವನ್ನು ಬೌಧಾಯನರು ಪ್ರತಿಪಾದಿಸಿದ್ದಾರೆ.

*೯. ಸ್ವ.ದಾ. ೨೮೧

ಗುರುಮೂರ್ತಿ ಪೆಂಡಕೂರು*

# ಕರ್ನಾಟಕದ ಕೋಮಟಿಗ ಜನಾಂಗ

ಕರ್ನಾಟಕ ಮತ್ತು ಆಂಧ್ರದಲ್ಲಿ ವೈಶ್ಯರು ಅಥವಾ ಕೋಮಟಿಗರನ್ನು ಆರ್ಯವೈಶ್ಯರೆಂತಲೂ, ಕೋಮಟಿಗರೆಂತಲೂ, ಸೆಟ್ಟರೆಂತಲೂ ಕರೆಯುತ್ತಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಬೃಹತ್ ನಿಘಂಟಿನ ಪ್ರಕಾರ ಕೋಮಟಿ ಒಂದು ಜನಾಂಗ. ಕನ್ನಡ ಕಾವ್ಯ ನಾಟಕಗಳಲ್ಲಿ, ಶಾಸನಗಳಲ್ಲಿ, ಗಾದೆಗಳಲ್ಲಿ ಜನಪದ ಕಥನಕಾವ್ಯಗಳಲ್ಲಿ ಮತ್ತು ರೂಢಿಯಲ್ಲಿ ಈ ಜನಾಂಗವನ್ನು ಕೋಮಟಿಗರೆಂದೇ ಗುರುತಿಸಿದ್ದಾರೆ.

೧ *ಕೋಮಟಿಯನುಮತದಿ ಮರುಳಾಗಿ ಶಿವನುಂ ತನಯನಂ ಕಾಮಿಸಿ ಕೊಲಿಸಿದನು (ಬಸವಪುರಾಣ)*

೨ *ಸಿರಿವಂತ ಕೋಮಟಿಗ ಮಲ್ಲಿಸೆಟ್ಟೆಯುಮೆಂಬ ಹರದಂಗೆ (ಗುರುರಾಜಚಾರಿತ್ರ)*

೩ *ಕೋಮಟಿಗನಾ ಕಪಿಲನಂ ಪಿಡಿದು ಭೂವರಂಗೆ ವೈರವೆರಸೀಯಲ್ (ಕೊಟ್ಟೂರು ಬಸವೇಶ್ವರ ಪೌರಾಣವು)*

೪ *ಬೇಡಿದುದನು ಕೊಟ್ಟಪೆವೆಂದು ಸೇವೆ ಮಾಡಿಸಿಕೊಂಡು ಭಟರನು ಖೋಡಿಗಳೆವ ಕೋಮಟಿಗ ದೊರೆಗಳ ಬಿಟ್ಟು ಕೂಡಿತು ವೀರರಾಮನಿಗೆ (ಕುಮಾರವ್ಯಾಸ ಸಾಂಗತ್ಯ)*

೫ *ಆನಘನೀತನ ಮಹಿಮೆಯಂ ನೋಡವೇಳ್ಕೆಂದು ವಿನಯದಿಂ ಕೋಮಟಿಗನಾಲಯಕೆ ಬಸವೇಶನೊಡಗೊಂಡು ನಡೆತಂದನು (ಗುರುರಾಜ ಚಾರಿತ್ರ)*

- ಎಂದು ಹಳಗನ್ನಡ ಕಾವ್ಯದಲ್ಲಿ ಉಲ್ಲೇಖಗಳಿವೆ. ಸೆಟ್ಟರು ಎಂಬುದು ವೃತ್ತಿನಾಮವಾಗಿ ಬಣಜಿಗರು, ಕುರುಹಿನವರು ಮತ್ತು ಇತರರು ಉಪಯೋಗಿಸುತ್ತಿರುವುದರಿಂದ ಈ ಜನಾಂಗಕ್ಕೆ ಕೋಮಟಿಗರೆಂದಾಗಲೀ, ಕೋಮಟಿ ಸೆಟ್ಟರೆಂದಾಗಲೀ ಕರೆಯುವುದು ಸೂಕ್ತ.

*ವೈಶ್ಯರು ನಮ್ಮ ರಾಜ್ಯದಲ್ಲಿ ಆರ್ಯವೈಶ್ಯರೆಂದು ಕರೆದು ಕೊಳ್ಳುತ್ತಾರೆ. ಹಿಂದೆ ಅವರು ಆಂಧ್ರದಿಂದ ವಲಸೆ ಬಂದಿರ ಬಹುದೆಂದೂ ಅಭಿಪ್ರಾಯ ಪಡಲಾಗಿದೆ. ಉತ್ತರ ಕರ್ನಾಟಕ ಗೆಝೆಟಿಯರ್‌ನಲ್ಲಿ ಇವರು ಅಚ್ಚ ಕನ್ನಡಿಗರು ಮತ್ತು ಇವರ ಜನ್ಮ ಭಾಷೆ ಕನ್ನಡ ಎಂದು ಹೇಳಲಾಗಿದೆ.*

ಕೋಮಟಿಗರು ವಂಶಪಾರಂಪರ್ಯವಾಗಿ ಉದ್ಯೋಗ, ವ್ಯಾಪಾರ ಮತ್ತು ವಾಣಿಜ್ಯದಲ್ಲಿರುವವರು. ಹಣ ಪ್ರಧಾನವಾದ ಸಮಾಜವಾದ್ದರಿಂದ ಅವರು ಸಹಜವಾಗಿ ಹಣಕಾಸಿನ ವ್ಯವಹಾರ ದಲ್ಲಿ ಬಿಗುವಿನ ಸ್ವಭಾವದವರು. ರೂಢಿಯಲ್ಲಿ - ಕೋಮಟಿಗ ಮೋಸ ಹೋಗುವುದಿಲ್ಲ, ಮೋಸ ಹೋದರೆ ಹೇಳುವುದಿಲ್ಲ. ಕೋಮಟಿ ಕೊಡ; ಜೀನ ಬಿಡ; ಕೋಮಟಿ ವರಹ ಕೊಟ್ಟರೂ ಕೋಮಟಿ ಸಾಕ್ಷಿ ನಂಬಕೂಡದು; ಅವರು ಲೋಭಿಗಳು, ಜಿಪುಣರು ಎಂಬ ಮಾತುಗಳಿವೆ;

ಆದರೆ ಕಷ್ಟಾರ್ಜಿತವಾದ ಸಂಪತ್ತನ್ನು ಕಾಪಾಡಿ ಸಮಾಜದ ನಾನಾ ಸೇವೆಗಳಿಗೆ ದಾನಧರ್ಮ ಮಾಡುತ್ತಾ ಬಂದಿರುವುದು ಕಾಣಬರುತ್ತದೆ.

ಬೇಲೂರಿನ ಶಾಸನವೊಂದರಲ್ಲಿ - ಬೇಲೂರ ಕೋಮಟಿಗನ ಮಂನಾರಿಸಿದವನ ಸೇವಾರ್ಥ - ಎಂದು ಉಲ್ಲೇಖಿಸಲಾಗಿದೆ. (ಎಕ.೧೫ ಬೇಲೂರು ೨೬೮. ಕ್ರಿ.ಶ.೧೨೮೯)

ಈ ಜನಾಂಗದವರು ಬಹುತೇಕ ಚಿನ್ನ ಬೆಳ್ಳಿ ವ್ಯಾಪಾರ, ಹಣಕಾಸಿನ ಲೇವಾದೇವಿ, ಎಣ್ಣೆ, ಅಕ್ಕಿ, ಜವಳಿ ಗಿರಣಿಗಳು, ಕಾಫಿ, ಏಲಕ್ಕಿ, ಮುಂತಾದ ಬೆಳೆಗಾರರೂ, ಖಾದ್ಯವಸ್ತು ತಯಾರಕರೂ ಆಗಿರುತ್ತಾರೆ. ಕರ್ನಾಟಕದಲ್ಲಿ ಚಲನಚಿತ್ರ ನಿರ್ಮಾಣ, ವಿತರಣೆ ಮತ್ತು ಪ್ರದರ್ಶನ, ಮುದ್ರಣ, ಪ್ರಕಾಶನ ಮತ್ತು ಪುಸ್ತಕ ಮಾರಾಟದಲ್ಲಿಯೂ, ಕಲ್ಯಾಣ ಮಂಟಪ ನಿರ್ಮಾಣ, ನಿರ್ವಹಣೆ ಮುಂತಾದ ವ್ಯವಹಾರದಿಂದ ಮೊದಲಾಗಿ ಸಣ್ಣ ಪೆಟ್ಟಿಗೆ ಅಂಗಡಿವರೆಗೆ ನಾನಾ ಉದ್ಯೋಗದಲ್ಲಿ ನಿರತರು. ನಮ್ಮ ರಾಜ್ಯದ ಜನಸಂಖ್ಯೆಯ ಶೇಕಡಾ ೧ಕ್ಕಿಂತ ಕಡಿಮೆ ಇರುವ ಇವರು ಮುಂದುವರಿದ ಜನಾಂಗವೆಂದು ಪರಿಗಣಿತವಾಗಿರುವುದರಿಂದ ಸರಕಾರದ ನೆರವು ಪ್ರೋತ್ಸಾಹಗಳಿಂದ ವಂಚಿತರಾದ ಕಾರಣ ಸ್ವಯಂಕೃಷಿಯಿಂದ ಬದುಕುತ್ತಿದ್ದಾರೆ.

ಡಾ: ಶಂ.ಬಾ.ಜೋಶಿ ಅವರು ಕೋಮಟಿಗ ಪದವನ್ನು ಕೊಂ+ಅಟಿಗ ಅಂದರೆ ಕೊಂಡು ಮಾರುವವನು ಎಂದು ನಿರ್ವಚನ ಮಾಡಿದ್ದಾರೆ. ತೆಲುಗು ಭಾಷಾತಜ್ಞರು ಕೋಮಟಿಗ ಎಂದರೆ ಕೊನುನಮ್ಮುನಟ್ಟಿವಾಡು - ಕೊನು ಅಮ್ಮು ಅಟ್ಟಿವಾಡು - ಕೊನಮ್ಮಟಿವಾಡು - ಕೋಮಟಿ ಎಂದು ತರ್ಕಿಸಿದ್ದಾರೆ. ಆದರೆ ಕೋಮಟಿಗರ ಪವಿತ್ರ ಗ್ರಂಥವಾದ ಶ್ರೀ ಕನ್ಯಕಾಪರಮೇಶ್ವರೀ ಪುರಾಣದಲ್ಲಿ 'ಗಾಂ' ಪಾಲನೇನ ಮತಿರ್ಯ್ಬದ್ಧಿರಸ್ಯಸಃ ಗೋಮತಿಃ ಎಂದರೆ ಗೋವುಗಳ ಲಾಲನೆ ಪಾಲನೆಯಲ್ಲಿ ಪ್ರೀತಿ ಆಸಕ್ತಿ ಉಳ್ಳವನು ಗೋಮತಿ ಎನ್ನುಲಾಗಿದೆ. ಗೋಮತಿ - ಗೋಮತ ವಾಗಿ - ಕೋಮಟಿಗ ಆಗಿದೆಯೆಂದು ಅಭಿಪ್ರಾಯ. ಋಗ್ವೇದದಲ್ಲಿ - 'ಗಾಂ' ವೇದವಚನಾನಿ ಪಾಲನೇನ ಮತಿರ್ಯ್ಬದ್ಧಿರ್ಯಸ್ಯಸಃ ಆಚರಣೇ ವೈಶ್ಯಧರ್ಮಪರಾಃ ಎಂದು ಹೇಳಲಾಗಿದೆ. ಗೋ ಪರಿಪಾಲನೆ

*ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ.

ಮಾಡುವವರು ಗೋಮಠ ನಡೆಸುವವರು ವೈಶ್ಯರು ಎಂದಾಗಿದೆ. ಅಮರಕೋಶದಲ್ಲಿ ಕೂಡಾ ಗವಾಂ ಮಠಾಃ ಗೋಮಠಾಃ ಎಂದಿದ್ದಾರೆ.

ಭಾರತದ ಎಲ್ಲಾ ಪ್ರಾಂತಗಳಲ್ಲಿ ವೈಶ್ಯರಿದ್ದಾರೆ. ಉತ್ತರದಲ್ಲಿ ಬಿರ್ಲಾ, ಗುಪ್ತಾ, ಲೋಹಿಯಾ, ಬನಿಯಾ, ಬಜಾಜ್, ಅಗರ್‌ವಾಲ್, ಮಾಹೇಶ್ವರೀ ಗಾಂಧಿ ಮುಂತಾದ ನೂರಕ್ಕೂ ಹೆಚ್ಚು ವಿಭಾಗಗಳಿವೆ. ಅಲ್ಲಿಯವರು ಪೂರ್ವತಃ ವಿಷ್ಣು ಭಕ್ತರು, ಆದ್ದರಿಂದ ಅವರು ತಮ್ಮನ್ನು ವೈಷ್ಣವ ಜನ, ವೈಷ್ಣೋಯಿ ಎಂದು ಕರೆದರು. ದಕ್ಷಿಣದ ಪಕ್ಕಾ ದ್ರಾವಿಡ ಪಂಗಡವಾದ ಕೋಮಟಿಗರನ್ನು ಅವರು ತಮ್ಮವರೆಂದು ಭಾವಿಸುವುದಿಲ್ಲ. ೧೯೨೫ರಲ್ಲಿ ಶೃಂಗೇರಿ ಮಠಾಧೀಶರು 'ವೈಶ್ಯವೇದೋಕ್ತ ಕ್ರಿಯಾ ವಿಚಾರ ವ್ಯವಸ್ಥಾ' ಎಂಬ ಗ್ರಂಥವನ್ನು ಪ್ರಕಟಿಸಿ ಕಲಿಯುಗದಲ್ಲಿ ಕ್ಷತ್ರಿಯರೂ ಇಲ್ಲ ವೈಶ್ಯರೂ ಇಲ್ಲ, ಬ್ರಾಹ್ಮಣರನ್ನು ಬಿಟ್ಟರಿಗೆ ಅನ್ಯರಿಗೆ ಯಾಗ ಯಜನದ ಅಧಿಕಾರವಿಲ್ಲ. ಇತರರೆಲ್ಲಾ ಶೂದ್ರರು ಎಂದು ಪ್ರತಿಪಾಸಿದರು. ಈ ಗ್ರಂಥವನ್ನು ಪರಿಶೀಲಿಸುವ ಸಲುವಾಗಿಯೇ ಆಂಧ್ರ ಕರ್ನಾಟಕ ಕೋಮಟಿಗರು ಗದಗ - ಬೆಟಗೇರಿ ನಗರದಲ್ಲಿ ಸಮ್ಮೇಳನವನ್ನು ನಡೆಸಿದರು. ಬಹುಭಾಷಾ ಪಂಡಿತರೂ, ವೇದಶಾಸ್ತ್ರ ಆಗಮ ವಿದಿತರಾದ ಶ್ರೀ ಆತ್ಮೂರಿ ಲಕ್ಷ್ಮೀನರಸಿಂಹ ಸೆಟ್ಟರು ಶೃಂಗೇರಿ ಪೀಠದವರ ಗ್ರಂಥವನ್ನು ಆಧಾರ ಸಹಿತ ಖಂಡಿಸಿ, ಯಾಗಾದಿಗಳನ್ನು ತಾವೇ ನಡೆಸಿ 'ಸೋಮಯಾಜಿ' ಎಂದು ಬಿರುದು ಧರಿಸಿದರು. ಅಂದಿನಿಂದ ಶೃಂಗೇರಿ ಪೀಠದವರು ನಮಗೆ ಗುರುಗಳಲ್ಲ, ಅವರು ಸಂಚಾರ ಬಂದಾಗ ಯಾರೂ ಅವರ ಪಾದಪೂಜೆ ಮಾಡಬಾರದು ಕಾಣಿಕೆ ನೀಡಬಾರದು ಎಂದು ತೀರ್ಮಾನಿಸಲಾಯಿತು. ತತ್ಫಲವಾಗಿ ಹಳೇ ಮೈಸೂರು ಪ್ರಾಂತದ ಅನೇಕ ಕಡೆ ವೇದ ಪಾಠಶಾಲೆಗಳನ್ನು ಪ್ರಾರಂಭಿಸಿ ವೈಶ್ಯರು ಪೌರೋಹಿತ್ಯ, ದೇವತಾಪೂಜೆಗಳಲ್ಲಿ ಶಿಕ್ಷಣ ಪಡೆದು ಬ್ರಾಹ್ಮಣರಿಗೇ ಮಿಸಲಿದ್ದ ಕೆಲಸಗಳನ್ನು ತಾವೇ ನಿರ್ವಹಿಸ ತೊಡಗಿದರು. ಪಂಡಿತ ಈಶ್ವರಗುಪ್ತರೂ, ಶ್ರೀ ಟೀಕಾ ವೆಂಕಟಾಚಲ ಶೆಟ್ಟರೂ, ಅಜ್ಜಂಪುರದ ಶ್ರೀನಿವಾಸ ಸೆಟ್ಟರೂ ಧಾರ್ಮಿಕ ಜೀವನಕ್ಕೆ ಬೇಕಾದ ಸಾಹಿತ್ಯವನ್ನು ಕನ್ನಡದಲ್ಲಿ ನಿರ್ಮಿಸಿದರು. ಈಗಲೂ ನಾನಾ ಕಡೆಗೆ ವೈಶ್ಯ ಪುರೋಹಿತರೇ ಷೋಡಶ ಕರ್ಮಗಳನ್ನು ನೆರವೇರಿಸುತ್ತಾರೆ.

ವೈಶ್ಯರಲ್ಲಿ ಮೂರು ಮುಖ್ಯ ವಿಭಾಗಗಳಿವೆ. ಅವು ಪರಸ್ಪರ ಸಂಬಂಧಗಳಿಲ್ಲದಿರುವುದರಿಂದ ಪ್ರತ್ಯೇಕ ಜಾತಿಗಳಂತೆಯೇ ಆಗಿವೆ. ಅವುಗಳೆಂದರೆ, ಗವರ, ತುಪ್ಪದ ಮತ್ತು ತ್ರೈವರ್ಣಿಕ ಅಥವಾ ಎಣ್ಣೆಯ ಪಂಗಡಗಳು. ಗವರ ಮಂಗಡದವರು ಶಿವನ ಸತಿಯಾದ ಗೌರಿಯ ಸಂಬಂಧದಿಂದ ತಾವೇ ಶ್ರೇಷ್ಠರೆಂದು ಭಾವಿಸುತ್ತಾರೆ. ಗವರ ವೈಶ್ಯರು ಆಂಧ್ರದ ಶ್ರೀಕಾಕುಳಂ ಮುಂತಾದ ಕಡೆ ಬಹು ಸಂಖ್ಯೆಯಲ್ಲಿ ಕಾಣಬಹುದು. ಅಲ್ಲಿ ಕಳಿಂಗದಿಂದ ಕೃಷ್ಣದೇವರಾಯರ ಕಳಿಂಗ ದಿಗ್ವಿಜಯದ ಕಾಲದಲ್ಲಿ ವಲಸೆ ಬಂದ ಮಾಂಸಾಹಾರಿಗಳಾದ ಕಳಿಂಗ ವೈಶ್ಯರಿದ್ದಾರೆ. ಕೋಮಟಿಗರು ಮುಖ್ಯವಾಗಿ ಶಿವಾರಾಧಕರು ಅವರ ಅರಾಧ್ಯ ದೈವವೆಂದರೆ ಶ್ರೀ ನಗರೇಶ್ವರಸ್ವಾಮಿ ಮತ್ತು ಶ್ರೀ ಕನ್ಯಕಾಪರಮೇಶ್ವರಿದೇವಿ; ಶ್ರೀದೇವಿ, ಭೂದೇವಿ ಸಮೇತ ಶ್ರೀ ಜನಾರ್ದನಸ್ವಾಮಿಯನ್ನು ಪೂಜಿಸುತ್ತಾರೆ. ಜಾನಪದರು 'ಮಾತಂಗಿ'ಯನ್ನೇ ಕೋಮಟಿಗರು ಕನ್ನಿಕೆಯೆಂದು ಪೂಜಿಸುತ್ತಾರೆ ಎಂದು ಹಾಡುತ್ತಾರೆ. ಕೋಮಟಿಗರು ಶಾಖಾಹಾರಿಗಳು, ವಿಧವಾ ವಿವಾಹ ಮತ್ತು ವಿವಾಹ ವಿಚ್ಛೇದನ ಸಲ್ಲದು, ಮೃತರಿಗೆ ಅಗ್ನಿ ಸಂಸ್ಕಾರ ಮಾಡುತ್ತಾರೆ.

ಉತ್ತರ ಕರ್ನಾಟಕದ ಕೋಮಟಿಗರಿಗೆ ಕನ್ನಡವೇ ಮನೆ ಮಾತು, ವ್ಯವಹಾರದ ಮಾಧ್ಯಮ. ಕೆಲವರ ಮನೆಮಾತು ತೆಲುಗು ಇರಬಹುದು. ವಿಜಯನಗರ ಸಾಮ್ರಾಜ್ಯದ ಕಾಲದವರೆಗೆ ಭಾಷೆಗಳು ಜನರನ್ನು ಒಗ್ಗೂಡಿಸುವ ಸಾಧನಗಳಾಗಿದ್ದವು. ಭಾಷಾ ಭೇದವೆ ಇರಲಿಲ್ಲವೆನ್ನಬಹುದು. ವ್ಯಾಪಾರಸ್ಥರು ನಿತ್ಯ ವ್ಯವಹಾರ ಕ್ಕಾಗಿ ಅನೇಕ ಭಾಷೆಗಳನ್ನು ಕಲಿಯಬೇಕಾಗುತ್ತದೆ. ಈ ಭಾಗದವರು ಸಂಕೇಶ್ವರದ ಸ್ವಾಮಿಯೊಬ್ಬರಿಗೆ ನಡಕೊಳ್ಳುತ್ತಿದ್ದರಂತೆ. ಬಹುಜನರು ಬಳ್ಳಾರಿ ಜಿಲ್ಲೆಯ ನಾರಾಯಣದೇವರಕೆರೆ ಗ್ರಾಮದ ಕಬೀರ ಭಾಸ್ಕರಾಚಾರ್ಯರಿಗೆ ಶಿಷ್ಯರಾಗಿದ್ದರು. ಜನಾಂಗದ ಸಮಸ್ಯೆಗಳು, ಧಾರ್ಮಿಕ ತಂಟೆಗಳು ಕುಟುಂಬದ ಕಲಹಗಳು ಕೂಡಾ ಅವರ ಸಮ್ಮುಖದಲ್ಲಿ ಇತ್ಯರ್ಥವಾಗುತ್ತಿದ್ದವಂತೆ. ಅವರೆ ಸುಪ್ರೀಂ ಕೋರ್ಟು. ಕೋಮಟಿಗರಲ್ಲಿ ಸಗೋತ್ರ ಸಂಬಂಧ ನಿಷಿದ್ಧ. ಇರುವ ೧೦೧ ಗೋತ್ರಗಳಲ್ಲಿ ಸಂಬಂಧಗಳು ನಡೆಯುತ್ತದೆ. ಸೋದರ ಮಾವನ ಮಗಳನ್ನು ಮದುವೆಯಾಗಲೇ ಬೇಕೆಂಬ ಕಟ್ಟಳೆಯಿತ್ತು. ಇವರು ಮದ್ಯ ಮಾಂಸಗಳ ಸಂಪರ್ಕ ಮಾಡುವುದಿಲ್ಲ. ಬಹುತೇಕ ಬ್ರಾಹ್ಮಣರನ್ನು ಅನುಸರಿಸಿ ಜಾತಕ ಸೂತಕಾದಿ ಕರ್ಮಗಳನ್ನು ಮಾಡುತ್ತಾರೆ. ಉಪನಯನವಾದ ಮೇಲೆ ಸಂಧ್ಯಾವಂದನೆ, ಗಾಯತ್ರೀ ಜಪ ಮಾಡುವ ಸಂಪ್ರದಾಯವಿದೆ.

ಕೋಮಟಿಗರಿಗೆ ಓದು, ಬರಹ, ಲೆಕ್ಕ ಪ್ರಧಾನವಾದ್ದರಿಂದ ಮಕ್ಕಳನ್ನು ತಪ್ಪದೇ ಶಾಲೆಗೆ ಕಳಿಸುತ್ತಾರೆ. ಕೂಡಿಸುವ, ಕಳೆಯುವ, ಹೆಚ್ಚಿಸುವ, ಭಾಗಿಸುವ, ಶೇಕಡಾವಾರು ಕಂಡು ಹಿಡಿವ ಲೆಕ್ಕಗಳನ್ನುಬಾಯಿಂದಲೇ ಮಾಡುತ್ತಾರೆ. ಕಾರವಾರ ಜಿಲ್ಲೆಯಲ್ಲಿ ಬೇರೆ ಪ್ರಾಂತದಿಂದ ವಲಸೆ ಬಂದ ಭಾಟಿಯಾ, ಕಾಲವಾಡಿ, ಬಾವಕುಳೆ, ಪೆಚಣೀಕರ, ಅಗರವಾಲ, ಸೆಟ್ಟಿ, ಜೆಟ್ಟಿ ಎಂಬ ವೈಶ್ಯರಲ್ಲದೇ ಮಾಂಸಾಹಾರಿಗಳಾದ ಕನ್ನಡ ವೈಶ್ಯರೂ ಇದ್ದಾರೆ. ಕಪ್ಪು ಬಣ್ಣದವರೂ, ಕುಳ್ಳರೂ, ದೃಢಕಾಯರೂ ಆದ ಇವರು ನಾನಾ ಉದ್ಯೋಗ ಮಾಡುತ್ತಾರೆ. ಬಹುತೇಕ ಕೊಂಕಣಿ ನಡಾವಳಿಯ ಈ ಗುಂಪುಗಳಿಗೆ ಬ್ರಾಹ್ಮಣರೇ ಗುರುಗಳು.

ಕನ್ನಡ ಜಾನಪದ ವಿಶ್ವಕೋಶದಲ್ಲಿ ಕೋಮಟಿಗರ ಬಗ್ಗೆ ವಿಸ್ತೃತವಾಗಿ ಬರೆಯಲಾಗಿದೆ. ಅಧ್ಯಯನ, ಯಜ್ಞ, ದಾನ, ಕೃಷಿ, ಪಶುಪಾಲನೆ, ವಾಣಿಜ್ಯಗಳೇ ಕೋಮಟಿಗರಿಗೆ ಗೊತ್ತಾಗಿದ್ದ ಷಟ್ಕರ್ಮಗಳೆಂದು ಹೇಳಲಾಗಿದೆ. ಅಲ್ಪ ಸ್ವಲ್ಪ ಮಾರ್ಪಾಡು

ಗಳೊಂದಿಗೆ ಮತ್ತು ಕಾಲ ಪ್ರವಾಹದಲ್ಲಿ ಸೇರಿಕೊಂಡ ಕೆಲ ವಿಶಿಷ್ಟ ಸಂಪ್ರದಾಯ, ಕ್ರಿಯೆ ಮತ್ತು ಆಚರಣೆಗಳೊಂದಿಗೆ ಕೋಮಟಿಗರು ಬ್ರಾಹ್ಮಣರ ಮೇಲ್ಪಂಕ್ತಿಯಲ್ಲೇ ತಮ್ಮ ಧಾರ್ಮಿಕ ಜೀವನ ನಡೆಸಿದ್ದಾರೆ.

ಕೋಮಟಿಗರ ಧರ್ಮಗ್ರಂಥವಾದ ಶ್ರೀ ಕನ್ಯಕಾಪರಮೇಶ್ವರೀ ಪುರಾಣದಲ್ಲಿ ಹೇಳಿರುವ ತತ್ವಗಳೆಂದರೆ ೧. ವರ್ಣಾಶ್ರಮ ಧರ್ಮದ ಪರಿಪಾಲನೆ, ೨. ಸ್ತ್ರೀಯರ ಪಾವಿತ್ರ್ಯ, ೩. ಆಸೆ, ಭಯ, ಆಮಿಷಗಳಿಗೆ ಬಲಿಯಾಗಿ ಧರ್ಮಭ್ರಷ್ಟರಾಗಬಾರದು. ೪. ರಾಜನು ದುಷ್ಟನಾದರೆ ಖಂಡಿಸಬೇಕು - ದಂಡಿಸಬೇಕು ಅವಶ್ಯವಾದರೆ ಆತ್ಮಾಹುತಿಗೆ - ಜೀವತೆರಲು ಸಿದ್ಧರಾಗಬೇಕು. ಮುಖ್ಯವಾದ ಮಾತೆಂದರೆ ಶ್ರೀ ಕನ್ಯಕಾಂಬೆಯು ಹೊಸ ಮತ ಸ್ಥಾಪಿಸಲಿಲ್ಲ. ಆಕೆ ವೇದ ಮತವನ್ನೇ ಪ್ರತಿಪಾದಿಸಿದಳು. ಧರ್ಮವೆಂದರೆ ಭಕ್ತಿ ಶ್ರದ್ಧೆಯ ಭಾಗವತ ಧರ್ಮ, ತ್ಯಾಗ, ಆತ್ಮ ನಿವೇದನೆ ಮತ್ತು ಪಾವಿತ್ರ್ಯವೇ ಜೀವನ ಎಂದು ಸಾರಿದಳು. ಧರ್ಮ ಸಂಕರವನ್ನು ವಿರೋಧಿಸಿದಳು. ಆಕೆಯನ್ನು ಬಲಾತ್ಕಾರದಿಂದ ಕೊಂಡೊಯ್ಯಲು ಬಂದ ವಿಷ್ಣುವರ್ಧನನನ್ನು ವಿರೋಧಿಸಿ ೧೦೨ ಗೋತ್ರದ ದಂಪತಿಗಳು ತಮ್ಮನ್ನು ತಾವು ಅಗ್ನಿಗೆ ಸಮರ್ಪಿಸಿಕೊಂಡರು. ಅವರೊಂದಿಗೆ ಅಗ್ನಿ ಪ್ರವೇಶ ಮಾಡಿದ ೧೦೨ ಯುವಕರ ಸಂತತಿಯವರೇ ವೀರ ಮುಷ್ಠಿಗಳೆಂದು ಕರೆಯಲ್ಪಡುತ್ತಿದ್ದಾರೆ. ಸಮಸ್ತ ವೈಶ್ಯರು ಕನ್ಯಕಾಂಬೆಯ ತ್ಯಾಗದ ಈ ಗಾಥೆಯನ್ನು ಪವಿತ್ರ ಭಾವನೆಯಿಂದ ಸ್ಮರಿಸುತ್ತಾರೆ, ವಿಶ್ವಸಿಸುತ್ತಾರೆ.

ಆಂಧ್ರದ ಗೋದಾವರಿ ಜಿಲ್ಲೆಯ ಪೆನುಗೊಂಡ, ವನಂಪಲ್ಲಿ, ನಾಗಸಮುದ್ರ ಮುಂತಾದ ಸ್ಥಳಗಳಲ್ಲಿ ಈ ಪುರಾಣದ ಘಟನೆಗಳನ್ನು ಗುರುತಿಸಲಾಗಿದೆ. ಕನ್ಯಕಾಂಬೆಯ ಆತ್ಮಾಹುತಿಯ ಪ್ರಸಂಗವು ನಡೆದು ಸಾವಿರ ವರ್ಷಗಳಾದವೆಂದು ಹೇಳುತ್ತಾರೆ. ಐತಿಹ್ಯಗಳೇ ಇದಕ್ಕೆ ಆಧಾರ.

ಕಾಲಮಾನ ಪರಿಸ್ಥಿತಿಗೆ ಅನುಸರಿಸಿ ಎಲ್ಲ ಜನಾಂಗಗಳಂತೆ ಕೋಮಟಿಗರೂ ಬದಲಾಗಿ ಸೀಮೋಲ್ಲಂಘನ ಮಾಡಿದ್ದಾರೆ. ಸಣ್ಣಸಣ್ಣ ವ್ಯಾಪಾರಗಳಿಂದ ಬೃಹತ್ ಉದ್ದಿಮೆಗಳೆಡೆಗೆ, ಹಳ್ಳಿ ಪಳ್ಳಿಗಳಿಂದ ನಗರಗಳೆಡೆಗೆ, ದೇಶ ವಿದೇಶಗಳೆಡೆಗೆ ಅವರು ನಡೆದಿದ್ದಾರೆ. ಜಾತಿಯ ಚೌಕಟ್ಟನ್ನು, ಸೋದರಿಕೆ ಸಂಬಂಧದ ಪರಿಧಿಯನ್ನು ದಾಟಿ ಅನೇಕರು ಅಂತರ್ಜಾತೀಯ, ಅಂತರ ಜನಾಂಗೀಯ ಸಂಬಂಧಗಳನ್ನು ಮಾಡಿದ್ದಾರೆ. ಈ ದೇಶದ ಅನ್ಯಾನ್ಯ ನಗರಗಳಲ್ಲಲ್ಲದೇ ವಿದೇಶಗಳಲ್ಲಿ ನೆಲೆಸುತ್ತಿದ್ದಾರೆ. ವೈದ್ಯರೂ, ಇಂಜಿನಿಯರರೂ, ಅಧಿಕಾರಿಗಳೂ, ವಕೀಲರೂ, ನ್ಯಾಯಾಧೀಶರೂ, ತಂತ್ರಜ್ಞರೂ ಆಗುತ್ತಿರುವ ಹೊಸ ಪೀಳಿಗೆಯ ಜನರು ಪ್ರತಿಭೆಗೆ ತಕ್ಕ ಅವಕಾಶ ಮತ್ತು ಅನುಕೂಲಗಳ ಅನ್ವೇಷಣೆಯಲ್ಲಿ ಎಲ್ಲೆಲ್ಲಿಗೋ ಹೊರಟಿದ್ದಾರೆ. ಜಾತಿ ಉಪಜಾತಿಗಳ ಗೊಂದಲದ ರಾಜಕಾರಣದಲ್ಲಿ ಮಾತ್ರ ಕೋಮಟಿಗರಿಗೆ ಅವಕಾಶ ಸಾಕಷ್ಟು ಸಿಕ್ಕಿಲ್ಲ. ಕರ್ನಾಟಕದಲ್ಲಿ ಶ್ರೀಪಾಮಡಿಸುಬ್ಬರಾಯಸೆಟ್ಟರೂ, ಶ್ರೀ ಬಿ. ಇ. ರಾಮಯ್ಯನವರೂ; ಶ್ರೀಮತಿ ನಾಗಮ್ಮ ಕೇಶವ ಮೂರ್ತಿ ಅವರು ಮಾತ್ರ ಸಚಿವರಾಗಿದ್ದರು.

ಸಾಹಿತ್ಯ ಕ್ಷೇತ್ರದಲ್ಲಿ ದಿವಂಗತ ಶ್ರೀ ಕಾಶಿವಿಶ್ವನಾಥ ಸೆಟ್ಟರು ಬುದ್ಧ ಚರಿತ ಮಹಾಮಧು ಎಂಬ ಮಹಾಕಾವ್ಯವನ್ನು ರಚಿಸಿದ್ದಾರೆ. ತಿಪಟೂರಿನ ಶ್ರೀ ಟಿ. ಎಸ್. ನಾಗರಾಜ ಸೆಟ್ಟರು ಮಕ್ಕಳ ಸಾಹಿತ್ಯದಲ್ಲಿ ಶ್ರೀ ಗುರುಮೂರ್ತಿ ಪೆಂಡಕೂರು ಅವರು ಪ್ರವಾಸ ಸಾಹಿತ್ಯ, ಅನುವಾದ ಸಾಹಿತ್ಯದಲ್ಲೂ ಪ್ರಸಿದ್ಧರಾಗಿದ್ದಾರೆ. ಕೋಮಟಿಗರು ರಾಜ್ಯದ ಅನೇಕ ಕಡೆ ಪ್ರಸಿದ್ಧ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಹಿರಿಯರು ಸ್ಥಾಪಿಸಿದ ವೈಶ್ಯಾ ಬ್ಯಾಂಕ್, ಇತ್ತೀಚಿನ ಗ್ಲೋಬಲ್ ಟ್ರಸ್ಟ್ ಬ್ಯಾಂಕ್ ಅವರ ಚತುರತೆಗೆ ಸಾಕ್ಷಿ. ಈಚೆಗೆ ಅನೇಕರು ಸಾಹಿತ್ಯ ರಂಗದಲ್ಲಿ, ಲಲಿತ ಕಲೆಗಳಲ್ಲಿ, ಗಮಕ, ಸಂಗೀತ ನೃತ್ಯಗಳಲ್ಲಿ, ವೇದ ಶಾಸ್ತ್ರ ಅಧ್ಯಯನದಲ್ಲಿ ತೊಡಗುತ್ತಿದ್ದಾರೆ. ಬಳ್ಳಾರಿಯ ರಾಘವರೊಂದಿಗೆ ನಾಟಕರಂಗದಲ್ಲಿ ಪ್ರಸಿದ್ಧರಾದ ಶ್ರೀ ಭೀಮಪ್ಪಸೆಟ್ಟರೂ, ಪ್ರಸಿದ್ಧ ವಕೀಲರಾದ ಹೊಸಪೇಟೆಯ ಶ್ರೀ ಮುದುಗಲ್ ವೆಂಕೋಬಸೆಟ್ಟರೂ ದಾವಣಗೆರೆಯ ಪ್ರಸಿದ್ಧ ಉದ್ದಿಮೆದಾರರಾದ ರಾಜನಹಳ್ಳಿ ಹನುಮಂತಪ್ಪ ಮುದ್ದುರಾಯಪ್ಪ, ಸಮಾಜಸೇವಾ ಧುರೀಣರಾದ ಶ್ರೀ ಸಾಸಲ ಶ್ರೀನಿವಾಸಸೆಟ್ಟಿ, ದಾನವೀರರಾದ ಶ್ರೀ ಗಂಗಾವತಿ ವೆಂಕೋಬಣ್ಣ, ಪೆಂಡಕೂರು ವಿರುಪಣ್ಣ, ಬಂಡ್ರಿರಾಘಪ್ಪ, ಮುಂತಾದವರೂ, ಬೆಂಗಳೂರು ಮೈಸೂರಿನ ಅನೇಕ ಗಣ್ಯರೂ, ಮೈಸೂರಿನಲ್ಲಿ ಅನೇಕ ದಶಕಗಳ ಕಾಲ ಪತ್ರಿಕೆ ನಡೆಸಿದ ಗೋಪಾಲಕೃಷ್ಣ ಸೆಟ್ಟರೂ, ಅಜ್ಜಂಪುರದ ಗೀತಾಮಿತ್ರ ಪತ್ರಿಕೆಯ ಶ್ರೀನಿವಾಸಸೆಟ್ಟರೂ, ರಾಜ್ಯಮಟ್ಟದ ಅನೇಕ ಸಂಘ ಸಂಸ್ಥೆಗಳ ಆದ್ಯ ಪ್ರವರ್ತಕರಾದ ಶ್ರೀ ಕುಸುಮಾ ಸುಬ್ಬರಾಯಸೆಟ್ಟರೂ ವಿಮಾನ ಉಡ್ಡಯನ ಸಾಹಸಿ ಎಸ್. ವಿ. ಸೆಟ್ಟಿ ಮತ್ತೆ ಹಲವಾರು ಅನಾಮಿಕರು ಈ ಜನಾಂಗದ ಪುಣ್ಯ ಪುರುಷರು.

ಸದ್ಯ ಪ್ರತಿಯೊಂದು ಊರಿನಲ್ಲಿ ಈ ಜನರು "Two Merchants and Watches will never agree" ಎಂಬ ಗಾದೆಯನ್ನು ಸುಳ್ಳುಮಾಡಿ ಸಂಘಟಿತರಾಗುತ್ತಿದ್ದಾರೆ. ತಮ್ಮ ದೇವಾಲಯ, ಕಲ್ಯಾಣ ಮಂಟಪ, ಮಹಿಳಾ ಸಂಘ, ಯುವಜನ ಸಂಘಗಳ ಮೂಲಕ ವ್ಯಕ್ತಿತ್ವ ನಿರ್ಮಾಣದಲ್ಲಿ ತೊಡಗಿದ್ದಾರೆ. ರಾಜ್ಯ ಮಟ್ಟದ ಆರ್ಯವೈಶ್ಯ ಮಹಾಸಭೆ, ಮಹಿಳಾ ಮಹಾಸಭೆ, ಯುವಜನ ಮಹಾಸಭೆಗಳು ಜನಾಂಗ ಜಾಗರಣಗೊಳಿಸುವಲ್ಲಿ, ಪ್ರೇರಣೆ ನೀಡುವಲ್ಲಿ ನಿರತವಾಗಿವೆ. ಕಲ್ಯಾಣ ನಿಧಿ ಛಾರಿಟಬಲ್ ಟ್ರಸ್ಟ್ ಬಡ ವಿದ್ಯಾರ್ಥಿಗಳಿಗೆ ಶಿಷ್ಯ ವೇತನ ನೀಡುವಲ್ಲಿ, ಕಷ್ಟದಲ್ಲಿರುವ ಕುಟುಂಬಗಳಿಗೆ ಸ್ವಯಂ ಉದ್ಯೋಗದ ಸದುಪಾಯ ಕಲ್ಪಿಸುವಲ್ಲಿ ದುಡಿಯುತ್ತಿದೆ. ವಿದೇಶದಿಂದ ಮರಳಿದ ಶ್ರೀ ಕೆ. ಎಸ್. ಉಮಾಪತಿಯವರು ಗ್ರಂಥಾಲಯ ಚಳುವಳಿಯನ್ನು ನಾಡಿನಾದ್ಯಂತ ನಡೆಸುತ್ತಿದ್ದಾರೆ.

ಎಲ್ಲಾ ಜನಾಂಗಗಳಿಗಿರುವಂತೆ ಕೋಮಟಿಗರಿಗೂ ಒಂದು

ಜನಾಂಗೀಯ ಸಂಸ್ಥೆಯ ಒಬ್ಬ ಗುರುವಿನ ಅವಶ್ಯಕತೆಯಿತ್ತು. ಹಿಂದಿನ ಮಠಮಾನ್ಯಗಳು ತೆರೆಮರೆಗೆ ಸರಿದಿದ್ದರಿಂದ, ಬ್ರಾಹ್ಮಣ ಮಠಗಳವರು ತಕ್ಕ ಮಾನ್ಯತೆ ನೀಡದ ಕಾರಣ, ಹಿರಿಯರೆಲ್ಲಾ ಸೇರಿ ಇತ್ತೀಚೆಗೆ ವಾಸವೀ ಪೀಠವನ್ನು ಸ್ಥಾಪಿಸಿದರು. ಆದವಾನಿಯ ಆಗರ್ಭ ಶ್ರೀಮಂತ ಮನೆತನದಲ್ಲಿ ಜನಿಸಿ, ಬಾಲ್ಯದಲ್ಲಿಯೇ ಸನ್ಯಾಸ ಸ್ವೀಕರಿಸಿ, ಸರ್ವಸಂಗ ಪರಿತ್ಯಾಗಿಯಾಗಿ ಸಾಧನೆಯಲ್ಲಿ ತೊಡಗಿದ್ದ ಶ್ರೀ ಚಂದ್ರಶೇಖರಾನಂದಗಿರಿ ಸ್ವಾಮಿ ಅವರನ್ನು ಪ್ರಥಮ ವೈಶ್ಯ ಗುರುಗಳೆಂದು ಪೀಠಾರೋಹಣ ಮಾಡಿಸಿದರು. ಮಠ, ಸಿಂಹಾಸನ, ಕಿರೀಟ, ಪಲ್ಲಕ್ಕಿ, ಕಾಣಿಕೆ ಮುಂತಾದವುಗಳನ್ನು ವಿರೋಧಿಸುವ ಈ ತಪಸ್ವಿಗಳು ನಾಡಿನಾದ್ಯಂತ ಜನರಿಗೆ ಹಿತವಚನ ನೀಡುತ್ತಾ ಮೇಲ್ಪಂಕ್ತಿಯಲ್ಲಿದ್ದಾರೆ. ಅತ್ಯಂತ ಸರಳರೂ, ಪರಿಶುದ್ಧರೂ, ಆದ ಸ್ವಾಮಿಜಿ ನಿಜವಾದ ತಪಸ್ವಿಗಳೆನಿಸಿದ್ದಾರೆ. ತೆಲುಗು ಮಾತೃ ಭಾಷೆಯಾದರೂ ಅಪ್ಪಟ ಬಳ್ಳಾರಿ ಕನ್ನಡದಲ್ಲಿ ಅವರು ಮಾಡುವ ಪ್ರವಚನಗಳು ಜನಪ್ರಿಯವಾಗಿವೆ.

*ಜನಸಂಖ್ಯಾದೃಷ್ಟಿಯಿಂದ ಅಲ್ಪಸಂಖ್ಯಾತರಾದರೂ ತಮ್ಮ ವರ್ಚಸ್ಸಿನಿಂದ ತುಂಬಾ ಪ್ರಭಾವಿಯಾದ ಈ ಜನಾಂಗದವರು ಎಲ್ಲ ರಂಗಗಳಲ್ಲಿ ಅದ್ಭುತ ಪ್ರಗತಿ ಸಾಧಿಸುತ್ತಿದ್ದಾರೆ. ಶಾಂತ ಸ್ವಭಾವದ, ಹೊಂದಿಕೊಳ್ಳುವ ಗುಣದ, ಸೇವಾ ಮನೋಭಾವದ ಇವರು ಸಂಪತ್ತಿನ ನಿರ್ಮಾಣದಲ್ಲಿ, ಸಮಾಜದಲ್ಲಿ ಸರಿಯಾದ ವಾತಾವರಣ ನಿರ್ಮಿಸುವಲ್ಲಿ ನಿರತರಾಗಿದ್ದಾರೆ. ಉತ್ತರದಲ್ಲಿ ವೀರಶೈವ ಮಠಗಳಿಗೂ, ದಕ್ಷಿಣದಲ್ಲಿ ಬ್ರಾಹ್ಮಣ ಮಠಗಳಿಗೂ, ಅವರು ಭಕ್ತರು. ಬೆಂಗಳೂರಿನವರು ಮೂರು ನಾಮ ಧರಿಸಿದರೆ, ತುಮಕೂರಿನವರು ಒಂದೇ ನಾಮ ಧರಿಸುತ್ತಾರೆ. ಬಳ್ಳಾರಿಯಿಂದ ಉತ್ತರಕ್ಕಿರುವವರು ವಿಭೂತಿ ಧರಿಸುತ್ತಾರೆ. ಕೆಲವರಂತೂ ಕಪ್ಪು ಸಾದದ ತಿಲಕವಿಡುತ್ತಾರೆ. ಅಷ್ಟೇಕೆ ಜನಿವಾರದ ಜೆತೆಗೆ ಇಷ್ಟ ಲಿಂಗವನ್ನು ಧರಿಸುತ್ತಾರೆ.*

ಗುಬ್ಬಿ ವೀರಣ್ಣನವರ ಸದಾರಮೆಯ ಸೆಟ್ಟರಾಗಲೀ, ಪುಟ್ಟಣ್ಣ ಕಣಗಾಲರ ರಂಗನಾಯಕಿಯ ಗೊಗ್ಗರು ದನಿಯ ಸೆಟ್ಟರಾಗಲಿ ಅನಕೃ, ತರಾಸು, ಬೀಚಿ ಕಾದಂಬರಿ ಲೋಕದ ವಿಲಾಸೀ ಸೆಟ್ಟರಾಗಲೀ, ಈಗ ಅಪರೂಪ. ಈಗ ಹೆಸರಿನಿಂದಾಗಲೀ, ವೇಷ ಭೂಷಣಗಳಿಂದಾಗಲೀ, ದನಿಯಿಂದಾಗಲೀ, ಸೆಟ್ಟರನ್ನು ಪ್ರತ್ಯೇಕವಾಗಿ ಗುರುತಿಸುವುದು ಅಸಾಧ್ಯ. ಇಪ್ಪತ್ತೊಂದನೆಯ ಶತಮಾನಕ್ಕೆ ತಕ್ಕಂತೆ ಹೊಸರೀತಿಯ ಜನಾಂಗವಾಗಿದ್ದಾರೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. **ವೈಶ್ಯ ವೇದೋಕ್ತ ಕ್ರಿಯಾವಿಚಾರ ವ್ಯವಸ್ಥಾ**, ೧೯೨೬, ಶೃಂಗೇರಿ ಪೀಠ.
*೨. **ವೈಶ್ಯ ವೇದೋಕ್ತ ಕ್ರಿಯಾವಿಚಾರ ವ್ಯವಸ್ಥಾ**, ಖಂಡನಮುಲು, ೧೯೨೮, ಕುಸುಮಾ ಸುಬ್ಬರಾಯಸೆಟ್ಟಿ.
*೩. **ಕಲಾ ಕ್ಷತ್ರಿಯ ವೈಶ್ಯ ಸದ್ಭಾವ ಮಂಡನಂ**, ಕಾಶಿ ಸುದರ್ಶನಾನಂದ ಸ್ವಾಮಿ, ೧೯೨೬.
*೪. **ಶ್ರೀ ಕರ್ನಾಟಕ ವಚನ - ಕನ್ಯಕಾ ಪುರಾಣ**, ಬೇಲೂರು ಕೇಶವದಾಸರು, ೧೯೩೪.
*೫. **ಶ್ರೀ ಕನ್ಯಕಾ ಪರಮೇಶ್ವರೀ ಪುರಾಣ** - ಸ್ಕಾಂದ ಪುರಾಣದಿ ಊರುಜೋಪಾಖ್ಯಾನ, ತೆಲುಗಿನಿಂದ ಕನ್ನಡಕ್ಕೆ ಅನುವಾದ, ಗುರುಮೂರ್ತಿ ಪೆಂಡಕೂರು.
*೬. **ವೈಶ್ಯಧರ್ಮ ಪ್ರಕಾಶಿಕಾ** - ಆತ್ಮೂರಿ ಲಕ್ಷ್ಮೀನರಸಿಂಹ ಸೋಮಯಾಜಿ, ೧೮೯೦.
*೭. **ಆರ್ಯ ವೈಶ್ಯ ಧರ್ಮ** - ಶ್ರೀ.ಬಿ.ಪುಟ್ಟಸ್ವಾಮಯ್ಯ.
*೮. **ಮುಂಬಯಿ ಪ್ರಾಂತದ - ಕರ್ನಾಟಕ ಭಾಗದ ಗಟಿಯರ್** - ವೆಂ. ರಂ. ಕಟ್ಟಿ, ೧೮೯೩.
*೯. **ಶಬ್ದ ರತ್ನಾಕರ**, ಬಿ. ಸೀತಾರಾಮಾಚಾರ್ಯುಲು, ೧೮೮೫.
*೧೦. **ಸೂರ್‍ಯಾರಾಯಾಂಧ್ರ ನಿಘಂಟು**, ಸಂಪುಟ ೨, ೧೯೮೯.
*೧೧. **ಕನ್ನಡ - ಕನ್ನಡ ನಿಘಂಟು**, ಕ.ಸಾ.ಪ. ಸಂ.೨, ೧೯೭೬.
*೧೨. **ಕರ್ನಾಟಕ ರಾಜ್ಯ ಗೆಝೆಟಿಯರ್**, ಭಾಗ ೧, ೧೯೮೪, ಸಂ. ಡಾ: ಸೂರ್ಯನಾಥ ಕಾಮತ್.
*೧೩. **ಕನ್ನಡ ಜಾನಪದ ವಿಶ್ವಕೋಶ**, ಸಂ.೧, ೧೯೮೫, ಸಂ. ಡಾ: ಚಂದ್ರಶೇಖರ ಕಂಬಾರ.
*೧೪. **ಜಾತ್ರೆಗಳು**, ಎಸ್.ಎಸ್.ಹಿರೇಮಠ, ೧೯೯೩.
*೧೫. **ಜೋಂಕಣಿ ಮುನೆಪ್ಪ** - ಸಿ. ಎಸ್. ದ್ವಾರಕನಾಥ್, ಲಂಕೇಶ್ ಪತ್ರಿಕೆ ದೀಪಾವಳಿ ಸಂಚಿಕೆ, ೧೯೮೬.
*೧೬. *Mysore Castes & Tribes*, Vol. IV.
*೧೭. **ನಾರಾಯಣದೇವರ ಕೆರೆ**, ಧೃವನಾರಾಯಣ.

ಡಾ. ಕೆ. ಜಿ. ವಸಂತ ಮಾಧವ*

# ಮಲೆಯಾಳಂ ಸಾಹಿತ್ಯದಲ್ಲಿ ಕರ್ನಾಟಕದ ಕರಾವಳಿ ಮತ್ತು ಮಲೆನಾಡು ಸಂಸ್ಕೃತಿ

ಕ್ರಿ.ಶ. ಹದಿನಾಲ್ಕನೆ ಶತಮಾನದಿಂದ ಹದಿನೆಂಟನೇ ಶತಮಾನದ ಅಂತ್ಯದವರೆಗಿನ ಮಲೆಯಾಳಂ ಸಾಹಿತ್ಯ ಕೃತಿಗಳಲ್ಲಿ ವ್ಯಕ್ತವಾದ ಕರ್ನಾಟಕದ ಕರಾವಳಿ ಮತ್ತು ಮಲೆನಾಡ ಸಾಂಸ್ಕೃತಿಕ ಸಂಗತಿಗಳನ್ನು ತಿಳಿಸುವುದು ಈ ಪ್ರಬಂಧದ ಉದ್ದೇಶ. ಈ ಶತಮಾನಗಳ ಅವಧಿಗಳಲ್ಲಿ ಕೇರಳದಲ್ಲಿ ವಿಶಿಷ್ಟವಾದ ಸಾಹಿತ್ಯ ಕೃತಿಗಳು ಉದಯವಾದವು. ಇವುಗಳನ್ನು ಮಲೆಯಾಳಂ ಸಾಹಿತ್ಯ ಕೃತಿಗಳು ಮತ್ತು ಪಾಟ್ಟುಗಳೆಂದು ಹೆಸರಿಸಲಾಗಿವೆ. ಮನೋರಂಜನೆಗಾಗಿ ರಚಿತವಾದ ಹಾಡುಗಳನ್ನು ಪಾಟ್ಟುಗಳೆಂದು ಕರೆಯುತ್ತಾರೆ. ಇವುಗಳು ಕನ್ನಡದ ಹಾಡುಗಳು ಮತ್ತು ತುಳುವಿನ ಪಾಡ್ದನಗಳಂತೆ ಇವೆ. ಈ ಕೃತಿಗಳಲ್ಲಿ ಎಲ್ಲೂ ಇವುಗಳ ಕರ್ತರ ಹೆಸರು ನಮೂದಿಸಲಿಲ್ಲ. ಇವು ಮೌಖಿಕವಾಗಿದ್ದು, ಇವುಗಳು ಎಷ್ಟರಮಟ್ಟಿಗೆ ಮೂಲ ರೂಪದಲ್ಲಿದೆ ಎಂದು ನಿರ್ಧರಿಸುವುದು ಕಷ್ಟ. ಆದರೆ ಭಾಷೆ ಸರಳವಾಗಿದ್ದು ಅರ್ಥಗರ್ಭಿತವಾಗಿವೆ.*[೧] ಈ ಪಾಟ್ಟುಗಳಲ್ಲಿ ದೈನಂದಿನ ಜನಜೀವನದ ಮಾಹಿತಿಗಳು ಸಿಗುತ್ತವೆ. ಇಷ್ಟಲ್ಲದೇ ಆಗಿನ ಕಾಲದ ಜನರ ನಂಬಿಕೆಗಳ ಚಿತ್ರಣವೂ ಈ ಪಾಟ್ಟುಗಳಲ್ಲಿ ಮೂಡಿಬಂದಿವೆ. ಇಂತಹ ಕೆಲವು ಪಾಟ್ಟುಗಳಲ್ಲಿ ಕರಾವಳಿ ಕರ್ನಾಟಕ ಮುಖ್ಯವಾಗಿ ತುಳುನಾಡು ಮತ್ತು ಇದಕ್ಕೆ ಹೊಂದಿಕೊಂಡಿದ್ದ ಮಲೆನಾಡುಗಳ ಜನಜೀವನ ಮತ್ತು ಇದಕ್ಕೆ ಮಲೆಯಾಳಿಗಳ ಪ್ರತಿಕ್ರಿಯೆಗಳು ವ್ಯಕ್ತವಾಗಿವೆ.

ಈ ಮಲೆಯಾಳಿ ಪಾಟ್ಟು ಅಧ್ಯಯನವು ಆಕಸ್ಮಿಕ (casual). ಇಲ್ಲಿ ಹೇಳಿದ ಮಲೆಯಾಳಂ ಪಾಟ್ಟುಗಳ ಅಧ್ಯಯನವು ಆಂಗ್ಲ ಭಾಷೆ ಮತ್ತು ಕನ್ನಡ ಭಾಷೆಗಳ ತರ್ಜುಮೆಗಳು-ಇವುಗಳ ಸಂಗ್ರಹ ಮತ್ತು ಭಾಷಾಂತರಗಳನ್ನು ಕೇರಳೀಯ ವಿದ್ವಾಂಸರು ಮಾಡಿದ್ದಾರೆ. ಇಂತಹವರಲ್ಲಿ ಪ್ರಮುಖರಾರೆಂದರೆ ಅಚ್ಯುತ ಮೆನನ್, ವಿಷ್ಣು ನಂಬೂದರಿ, ರಾಘುವನ್, ಕೆ. ಕೆ. ಎಸ್. ಕುರುಪ್, ಶ್ರೀ ಕುಮಾರ, ಗೀಸ್ಮಲತಾ, ಇಷ್ಟಲ್ಲದೆ ಸುಶೀಲಾ ಉಪಾಧ್ಯಾಯ ಮತ್ತು ವೆಂಕಟರಾಜ ಪುಣೆಂಚತ್ತಾಯರು ಮಲೆಯಾಳಿ ಪಾಟ್ಟುಗಳನ್ನು ಅಧ್ಯಯನಿಸಿದ್ದಾರೆ. ಕೆಲವು ಪಾಟ್ಟುಗಳ ಕುರಿತಾಗಿ ಇ.ಎಂ.ಎಸ್. ನಂಬೂದರಿಪಾಡರು ವಿಮರ್ಶಾತ್ಮಕವಾಗಿ ಟಿಪ್ಪಣಿಗಳನ್ನು ಬರೆದಿದ್ದಾರೆ.*[೨] ನಮ್ಮ ಅಧ್ಯಯನದಲ್ಲಿ ತಚ್ಚೋಳಿ ಚಂದು ಚೆರಿಯ ಆರೋಮಣ್ಣಿ, ಪುತ್ತೂರು ಕುಂಞಪ್ಪನ್ ಚೇಗವರ್, ಕಲರಿ ಪಾಟ್ಟು ಗಮನಾರ್ಹ. ಪಯ್ಯನೂರು ಪಾಟ್ಟು ತೋಟಂ ಪಾಟ್ಟು ತುಳುವೀಶನ ಪಾಟ್ಟು, ಕುರತ್ತಿ ತೋಟ್ಟಂ ಪಾಟ್ಟು ಕುಂಡೋವರ ಚಾಮುಂಡಿ ತೆಯ್ಯ ಕಥೆಗಳು ಇನ್ನೂ ಹೆಚ್ಚಿನ ಮಾಹಿತಿಗಳನ್ನು ನೀಡಿವೆ. ರಾಜಕೀಯ ಅಧ್ಯಯನ ದೃಷ್ಟಿಯಲ್ಲಿ ಈ ಪಾಟ್ಟುಗಳ ಮಾಹಿತಿ, ಮಿತಿಗಳನ್ನು ಹೊಂದಿದೆ.

### *ಕೋಟೆಗಳ ಮಾಹಿತಿ*

ಕೆಲವು ಪಾಟ್ಟುಗಳು ಮಲಬಾರ ಮತ್ತು ತುಳುನಾಡಿನ ಕೋಟೆಗಳ ಐತಿಹಾಸಿಕ ಮಾಹಿತಿಗಳನ್ನು ನೀಡುತ್ತವೆ. ಮಾಡಾಯಿ ಮತ್ತು ಒಳಪಟ್ಟಣಗಳು*[೩] ಮಲೆಯಾಳಿಗರ ಕೋಟೆಗಳೆಂದು ಉಳಿದ ಕೋಟೆಗಳು ತುಳುನಾಡಿನವುಗಳೆಂದು ತಿಳಿಸಿದ್ದು ಗಮನಾರ್ಹ. ಇನ್ನು ತುಳುನಾಡಿನ ಕೋಟೆಗಳ ವಿಚಾರವನ್ನು ಒಂದು ಪಾಟ್ಟು ಈ ರೀತಿ ತಿಳಿಸುತ್ತದೆ:

*ತುಳುನಾಡಿನ ಕೋಟ್ಟೋಡು ಮಲ್ಲಡಿಪಾನ್*
*ಉಲಗತ್ತಿ ಲಾರುಮೆ ಇಲ್ಲ ಪೇಕಿ*
*ಎನ್ನುಡೆ ಅಮ್ಮಾವನ್ ಕುಂಞ ಮಾಮ್‌ನ್*
*ತುಳುನಾಡ ಕೋಟ್ಟೋಡು ತೋಟ್ಟುಪ್ಪೋಯೆ*
*ಕಳಚ್ಚದಿಯಾಲೆ ಪೋಗಲೇಣಂ*
*ನೇರಿಟ್ಟು ಚೆನ್ನಾಲ್ ಕಡನ್ನು ಕೂಡಾ*

ತುಳುನಾಡ ಕೋಟೆಯೊಡನೆ ಕಾಳಗ ಮಾಡುವವರು ಈ ಲೋಕದಲ್ಲಿ ಯಾರು ಇಲ್ಲ. ನನ್ನ ಮಾವನಾದ ಕುಂಞ ಮಾಮನೇ ತುಳುನಾಡ ಕೋಟೆ ಮುಂದೆ ಸೋತು ಹೋದ. ಕಪಟೋಪಾಯದಿಂದಲೇ ಹೋಗಬೇಕು. ನೇರವಾಗಿ ಒಳಹೋದರೆ ದಾಟುವುದೇಕಷ್ಟ. ಇದೇ ಪಾಟ್ಟು ಮುಂದುವರಿಯುತ್ತಾ

*ಪೆಣ್ಣನ್ನುಂ ಚೊಲ್ಲಿ ಮರಿಪ್ಪಾನ್ ಪೊಂಡಾ,*
*ತುಳುನಾಡನ್ ಕೋಟ್ಟೋಡು ಜಯಿಚ್ಚೋರಾರುಂ?*
*ಈ ಲೋಕತ್ತಂಜಮೆಯಿಲ್ಲ ಪುತ್ರಾ*

ಹೆಣ್ಣೆಂದು ಹೇಳಿ ಸಾಯಬೇಡ. ತುಳುನಾಡ ಕೋಟೆಯನ್ನು ಗೆದ್ದವರು ಈ ಲೋಕದಲ್ಲಿ ಯಾರೂ ಇಲ್ಲ.*[೪] ಒಟ್ಟಿನಲ್ಲಿ ಈ ವೀರ ಕತೆ ಮತ್ತು ಪಾಟ್ಟುಗಳಿಂದ ತಿಳಿದು ಬರುವ ಐತಿಹಾಸಿಕ ಸಂಗತಿಗಳಾವುವೆಂದರೆ ತುಳುನಾಡಿನಲ್ಲಿ ಅಭೇದ್ಯವಾದ ಕೋಟೆಗಳಿದ್ದು ಇವುಗಳನ್ನು ತಮ್ಮ ವಶ ತೆಗೆದುಕೊಳ್ಳುವ ಯತ್ನಗಳನ್ನು ಮಲೆಯಾಳಿಗರು ನಡೆಸಿ ವಿಫಲರಾಗುತ್ತಿದ್ದರು.*[೫] ಇದನ್ನು ಸಮಕಾಲೀನ ವಿದೇಶಿ ದಾಖಲೆಗಳು ಸ್ಪಷ್ಟೀಕರಿಸುತ್ತವೆ.*[೬]

*ಅರಾಧನಾ, ಪಾವಂಜೆ, ಹಳೆಯಂಗಡಿ, ದ. ಕನ್ನಡ.

***ಆಡಳಿತ ವಿಭಾಗ : ಪಟ್ಟಣಗಳು***

ಆಗ ತುಳುನಾಡಿನ ಆಡಳಿತ ವಿಭಾಗಗಳಾದ ನಾಡು ನಾಟುವಳಿ ದೇಶಂ, ದೇಶಾವಳಿ ಪಟ್ಟಣ, ಪಾಲಂಗಳನ್ನು ಈ ಪಾಟ್ಟುಗಳು ಅಲ್ಲಲ್ಲಿ ಉಲ್ಲೇಖಿಸಿವೆ. ಉದಾ : ಚಾಮುಂಡೆತ್ತೆಯಂ ನಲ್ಲಿ ಕುಂಬಳಂ ಮುಬಾಯಿರಂ ಪಟ್ಟಣ ಮಂಗಳಾಪುರಂ ಪಟ್ಟಣಂ ಮಂಜೂರ ಪಾಲಂ (ಮಂಜೇಶ್ವರ ಸೇತುವೆ) ಕಾಂಞರೊಟ್ಟಂಗಳ ಉಲ್ಲೇಖವಿದೆ. ಪುತ್ತೂರು ವೀಡು ಅಡೂರು ಮಧೂರು ಮಲೆ ನಾಡುಗಳ ವಿಚಾರ ಕೆಲವು ಪಾಟ್ಟುಗಳಲ್ಲೂ ಉಲ್ಲೇಖವಿದೆ.*೭

***ವಾಣಿಜ್ಯ - ವ್ಯಾಪಾರ, ಕೃಷಿ***

ಮಲೆಯಾಳಂ ಪಾಟ್ಟುಗಳಲ್ಲದೆ ಈ ಭಾಷೆಯ ಮಧ್ಯ ಕಾಲೀನ ಸಾಹಿತ್ಯ ಕೃತಿಗಳಲ್ಲೂ ಕೂಣವರ ಮತ್ತು ಕೇರಳದೊಂದಿಗಿರುವ ಆರ್ಥಿಕ ಸಂಬಂಧಗಳ ವಿಷಯಗಳು ಅಲ್ಲಲ್ಲಿ ಮೂಡಿಬಂದಿವೆ. ಇಲ್ಲಿ ತಿಳಿಸಿದ ಆರ್ಥಿಕ ಸಂಗತಿಗಳು ಉಪಯುಕ್ತ ವಾಗಿವೆ ಈ ಕಾವ್ಯಗಳು ಮಣಿ ಪ್ರವಾಳ*೮ ವರ್ಚಸ್ಸಿಗೆ ಒಳಗಾಗಿವೆ. ಇವುಗಳನ್ನು ಚಂಪು ಮತ್ತು ಸಂದೇಶ ಕಾವ್ಯಗಳೆಂದು ವಿಂಗಡಿಸಿವೆ. ಇಂತಹ ಮಲೆಯಾಳಿ ಕಾವ್ಯ ಉನ್ನಿಲ್ ಸಂದೇಶಂನಲ್ಲಿ (ಈ ಕಾವ್ಯವು ೧೪ನೇ ಶತಮಾನದ ಅಂತ್ಯದಲ್ಲಿ ರಚಿತವಾದದ್ದು) ಘಟ್ಟದ ಮೇಲಿಂದ (ಕರ್ನಾಟಕ) ಅಕ್ಕಿ, ಬಟ್ಟೆಗಳು, ಒಣಮೆಣಸಿನ ಕಾಯಿಗಳನ್ನು ಕುದುರೆ ಮೇಲೆ ಹೇರಿಕೊಂಡು ಕೇರಳದ ಕರಾವಳಿಗಳಿಗೆ ಬಂದು ಇಲ್ಲಿಂದ ಕರಿಮೆಣಸಿನ ಅದಲು ಬದಲು ವ್ಯಾಪಾರ ನಡೆಸುತ್ತಿರುವುದು ಉಕ್ತವಾಗಿವೆ. ಇಂತಹ ವಾಣಿಜ್ಯ ಕೇಂದ್ರಗಳಲ್ಲಿ ವೈನಾಡಿನಲ್ಲಿರುವ ಮೂರುಡೂರು (Murudur) ಮುಖ್ಯವಾಗಿತ್ತು ಎಂದು ಹೇಳಿದೆ. ಇಷ್ಟಲ್ಲದೆ ಈ ನಗರವು ವ್ಯಾಪಾರ ವ್ಯವಹಾರಗಳಲ್ಲಿ ಮಂಗಳಾಪುರಂ ಮತ್ತು ದ್ವಾರಸಮುದ್ರಗಳನ್ನು ಮೀರಿಸಿತ್ತು.*೯ ಒಟ್ಟಿನಲ್ಲಿ ದ್ವಾರ ಸಮುದ್ರ ಮತ್ತು ಮಂಗಳಾಪುರಗಳ ವಾಣಿಜ್ಯ ಮಾಹಿತಿಗಳ ಕುರಿತಾಗಿ ಈ ಕಾವ್ಯದಿಂದಲೆ ತಿಳಿದು ಬರುತ್ತದೆ.

ಅನಂತಪುರ ವರ್ಣನೆ*೧೦ ಎಂಬ ಕಾವ್ಯದಲ್ಲಿ ಅನಂತಪುರ (ತಿರುವನಂತಪುರ)ದಲ್ಲಿ ಗೌಡರು ತುಳುವರು ಪಂಡಿಕ್ಕಿರರು ಇತ್ಯಾದಿಯವರು ವ್ಯಾಪಾರಗಳನ್ನು ನಡೆಸುತ್ತಿದ್ದರೆಂಬ ಸಂಗತಿ ಇದೆ. ಇನ್ನು ಕೆಲವು ಕಾವ್ಯಗಳಲ್ಲಿ ಹಡಗಿನ ಮುಖಾಂತರ ಕೇರಳೀಯರು ವ್ಯಾಪಾರಗಳನ್ನು ಕರ್ನಾಟಕದ ಕರಾವಳಿಯ ರೇವುಗಳೊಂದಿಗೆ ನಡೆಸುತ್ತಿರುವುದನ್ನು ತಿಳಿಸಿವೆ. ಈ ಸಾಗರೋತ್ತರ ವ್ಯಾಪಾರದಲ್ಲಿ **ಮರಕಾಲ** ಪರಿಣೆತರೆಂದು ಇವರ ಹಡಗನ್ನು ಮರಕಾಲಂ ಎಂದು ಕರೆದಿದೆ.*೧೧ ಈ ಮರಕಾಲರ ವಾಣಿಜ್ಯ ಕ್ಷೇತ್ರಗಳು ಮಂಗಳಾಪುರ, ವಾಲಕೂರು (ಬಾರಕೂರು) ಬಸ್ರೂರು, ಭಟ್ಕಳ ಮತ್ತು ಕಾಸರಗೋಡು (ಉ. ಕನ್ನಡ ಜಿಲ್ಲೆ) ಯವರೆಗೆ ವಿಸ್ತಾರವಾಗಿವೆ.*೧೨

ಮಲೆಯಾಳಿಗರ ವಿವಿಧ ನೌಕೆಗಳಾದ ಪಟ್ಟೆಮಾರ, ಪೇರು ಮಂಜಿಗಳು ಬೇಕಲ, ಕಾಸರಗೋಡು, ಮಂಜೇಶ್ವರ ಮಂಗಳಾಪುರ, ವಾಲಕೂರು, ಬಸ್ರೂರು ರೇವುಗಳಿಗೆ ಬಂದು ಇಲ್ಲಿಂದ ಅಕ್ಕಿ ತೆಂಗಿನಕಾಯಿ ಶುಂಠಿಗಳನ್ನು ತೆಗೆದುಕೊಂಡು ಹೋಗುತ್ತಿರುವುದನ್ನು ಕೆಲವು ಪಾಟ್ಟುಗಳಲ್ಲಿ ಹೇಳಿವೆ.

ಈ ಪಾಟ್ಟುಗಳಲ್ಲಿ ಕೃಷಿಕರ ದೈನಂದಿನ ನೋವು ನಲಿವು ಮತ್ತು ಅವರು ಆಗಿಂದಾಗ್ಗೆ ಎದುರಿಸುತ್ತಿರುವ ಕಷ್ಟಗಳನ್ನು ವಿವರ ವಾಗಿ ತಿಳಿಸುತ್ತವೆ. ಉದಾ : ಕೃಷಿಪ್ಪ ಪಾಟ್ಟುವಿನಲ್ಲಿ ಸ್ಥಳೀಯ ರೈತರು ನೈಸರ್ಗಿಕ ಅನಾಹುತ ಮತ್ತು ಇವರ ಧನಿಗಳ ದಬ್ಬಾಳಿಕೆಗೆ ತುತ್ತಾಗಿ ಸಂಕಟ ಪಡುತ್ತಿರುವುದನ್ನು ಹೇಳಿದೆ. ಇಷ್ಟಲ್ಲದೆ ಮಲಬಾರಿನ ರೈತರು ತುಳುನಾಡಿಗೆ ಬಂದು ಇಲ್ಲಿ ತೆರಿಗೆ ಕೊಡಲಾಗದೇ ಕೂಲಿಯಾಳುಗಳಾಗಿ ದುಡಿಯುತ್ತಿರುವುದನ್ನು ಉಲ್ಲೇಖಿಸಿದೆ.*೧೩

***ಸಾಮಾಜಿಕ ಧಾರ್ಮಿಕ ಮತ್ತು ವಲಸೆ ಹೋಗುವಿಕೆ***

ಸಾಮಾಜಿಕ ಜೀವನದಲ್ಲಿ ಜಾತಿ ಕಟ್ಟುಗಳು ಕಠಿಣವಾಗಿದ್ದರೂ ವೀರರಿಗೆ ಮನ್ನಣೆ ಇದ್ದಿತು. ವೀರರಾರಾಧನೆಯೇ ಆಗಿನ ತುಳುನಾಡಿನಲ್ಲಿ ಹೆಚ್ಚು ಪ್ರಚಲಿತವಿದ್ದಿತ್ತೆಂದು ಮಲೆಯಾಳಿ ಪಾಟ್ಟುಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಇದರಿಂದಾಗಿ ತುಳುನಾಡಿನಲ್ಲಿ ಗರಡಿಗಳು ಉದ್ಭವವಾದವು. ಈ ಗರಡಿಗಳಲ್ಲಿ ವಿದ್ಯೆ ಕಲಿಯಲು ಕೇರಳದಿಂದ ಬರುವ ಸಂಗತಿಗಳು ಕೆಲವು ಪಾಟ್ಟುಗಳಲ್ಲಿವೆ. ಉದಾ : ಚೆರಿಯ ಆರೋಮಣಿ ಅನುಕರಣೆಯಾಗಿ ಕಪ್ಪುಳ್ಳಿ ಪಾಲಾಟು ಕೋಮನ ತೋತ್ತನಲ್ಲಿ ಮಲೆಯಾಳಿ ವೀರಯೋಧರು ತಮ್ಮ ಬಾಲ್ಯದಲ್ಲಿ ಅಕ್ಷರ ವಿದ್ಯಾಭ್ಯಾಸ ಮುಗಿದ ನಂತರ ಗರಡಿಗೆ ಸಂಬಂಧಿಸಿದ ಹೆಚ್ಚಿನ ಶಿಕ್ಷಣಕ್ಕಾಗಿ ತುಳುನಾಡಿಗೆ ಬರುತ್ತಿದ್ದರು.*೧೪ ಇಷ್ಟಲ್ಲದೇ ತುಳುನಾಡಿನಿಂದ ಗರಡಿ ಆಚಾರ್ಯರನ್ನು ಕೇರಳಕ್ಕೆ ಕರೆಯಿಸಿ (ಮುಖ್ಯವಾಗಿ ಮಲಬಾರ) ಶಿಕ್ಷಣ ಕೊಡಿಸುತ್ತಿದ್ದರು. ತುಳುನಾಡಿನ ಗರಡಿಯಲ್ಲಿ ಕಲಿತವೀರರಿಗೆ ಮಲಬಾರ ಪ್ರದೇಶದಲ್ಲಿ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗುತ್ತಿತ್ತು. ತುಳುನಾಡಿನ ಗರಡಿ ಆಚಾರ್ಯರಿಂದ ಕೇರಳೀಯ ವೀರರು ಇಪ್ಪತ್ತೆರಡು ಅಡವುಗಳನ್ನು ಅದಕ್ಕೆ ಸಂಬಂಧಿಸಿದ ತಯಾರಿಗಳನ್ನು ಅಭ್ಯಾಸ ಮಾಡುತ್ತಿದ್ದುದನ್ನು ತುಚ್ಚೋಳಿ ಚಂದು ಪಾಟ್ಟುವಿನಲ್ಲಿ ಹೇಳಿದ್ದು ಗಮನಾರ್ಹ. ಇಲ್ಲಿ ಕಲಿತ ಮಲ್ಲ ವಿದ್ಯೆ ತುಳುನಾಡ ವಿದ್ಯೆಯೆಂದು ಕೇರಳೀಯರು ಕರೆಯುತ್ತಿದ್ದು, ಇದನ್ನು ಅಭ್ಯಾಸ ಮಾಡಲು ಮೂರು ವರ್ಷಗಳ ಕಾಲಾವಧಿ ಬೇಕಾಗಿತ್ತೆಂದು ಪಾಟ್ಟು ಪಾಟ್ಟುಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ.*೧೫ ಕೆಲವು ಪಾಟ್ಟುಗಳಲ್ಲಿ ಈಳವರು ಪೊಲಿಯಾರ ವಿಚಾರ ಮಾಹಿತಿಗಳನ್ನು ನೀಡುತ್ತವೆ. ಒಂದು ಪಾಟ್ಟುವಿನಂತೆ ಈ ಈಳವರು ಸಿಂಹಳದಲ್ಲಿದ್ದರೆಂದು ತಿಳಿಸಿ ಇವರನ್ನು ಪೆರುಮಾಳರಸ ಕರೆಸಿಕೊಂಡನೆಂದೂ, ನಂತರ ಇವರನ್ನು ಮನ್ನಿಸಿ **ಕೊಡಟನಾಟು** ಮತ್ತು ತುಳುನಾಡಿನ ಕಡೆಗೆ ವಲಸೆ ಹೋಗುವಂತೆ ಪ್ರೋತ್ಸಾಹಿಸಿದನು. ಆದರೆ ಕರೆಸಿಕೊಂಡ ಈಳವರನ್ನು ಪೆರುಮಾಳನು

ಯಾವ ಕಾರಣದಿಂದ ಕೊಡಟ ಮತ್ತು ತುಳುನಾಡಿಗೆ ವಲಸೆ ಹೋಗುವಂತೆ ಏಕೆ ಪ್ರೋತ್ಸಾಹಿಸಿದ? ಎಂದು ತಿಳಿಸುವುದಿಲ್ಲ. ಅದೇ ರೀತಿ ಪೆರುಮಾಳ ಯಾಕೆ ಈಳವರನ್ನು ಕರೆಸಿಕೊಂಡ? ಎಂಬುದನ್ನು ಸ್ಪಷ್ಟೀಕರಿಸಲು ವಿಫಲವಾಗಿವೆ.*[೧೬] ಈಳವರು ಆರ್ಥಿಕವಾಗಿ ಬಲಿಷ್ಠರಾಗಿದ್ದು, ಸಮಾಜದಲ್ಲಿ ಗಣನೀಯ ಸ್ಥಾನವನ್ನು ಪಡೆಯುತ್ತಿದ್ದರೆಂದು ಪುತ್ತೂರಂ ಪಾಟ್ಟುಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ.*[೧೭] ಕೋಳಿ ಅಂಕಂ, ನಾಟಕ ಶಾಲೆ, ಕುತ್ತು ಮಾಡು (ರಂಗ ಮಂಟಪ) ಕೂಡಿಯಾಟ್ಟಂ, ಚಾಕ್ಯಾರ ಕೂತ್ತು (ದೇವಾಲಯದಲ್ಲಿ ನಡೆಸುವ ನೃತ್ಯ ನಾಟಕ)ಗಳು ತುಳುವರನ್ನು ಆಕರ್ಷಿಸುತ್ತಿತ್ತೆಂದು ಪಾಟ್ಟುಗಳ ಅಧ್ಯಯನವು ದೃಢೀಕರಿಸುತ್ತದೆ.*[೧೮]

ಮಾಪಿಳ್ಳೆ ಪಾಟುಗಳಲ್ಲಿ ಮಾಪಿಳ್ಳೆಯವರ ವ್ಯಾಪಾರ ವಹಿವಾಟು ತಿಳಿಸುವುದರೊಂದಿಗೆ ಇವರಲ್ಲಿ ಸತಿ ಹೋಗುವುದನ್ನು ತಿಳಿಸುವುದು ಗಮನಾರ್ಹ. ಇದು ನಡೆದದ್ದು ಕಾಸರಗೋಡು ಪ್ರದೇಶದ ತುಳುನಾಡಿನಲ್ಲಿ.*[೧೯]

*ಧಾರ್ಮಿಕ ಜೀವನ*

ಮಲೆಯಾಳಿ ಪಾಟ್ಟುಗಳಲ್ಲಿ ತುಳುನಾಡಿನ ಗ್ರಾಮ ಜನರ ಧಾರ್ಮಿಕ ಜೀವನದ ಕುರಿತಾಗಿ ಅತ್ಯಂತ ಕುತೂಹಲಕರ ಸಂಗತಿಗಳು ಬೆಳಕಿಗೆ ಬಂದಿವೆ. ಮುಖ್ಯವಾಗಿ ಇಲ್ಲಿ ಗಮನಿಸುವಂತಾದ್ದು ತ್ಯೇಯಂ ಮತ್ತು ತುಳುನಾಡಿನ ದೆಯಾಂಗಳ ಹೊಂದಾಣಿಕೆ. ಕೆಲವು ಗ್ರಾಮದೇವತೆಗಳು ಕೇರಳದಿಂದ ತುಳುನಾಡಿಗೂ ಮತ್ತು ತುಳುನಾಡಿನಿಂದ ಕೇರಳಕ್ಕೆ ವಲಸೆ ಹೋಗಿ ಒಂದು ವಿಶಿಷ್ಟವಾದ ತ್ಯೇಯಂ ಅಥವಾ ದೈಯಾಂಗಳಾದದ್ದು ಇವುಗಳ ಪೂಜಾ ವಿಧಾನಗಳು ರಂಗು ರಂಗಾಗಿ ನಡೆದು ಇವುಗಳ ಪೂಜೆಯಲ್ಲಿ, ಕೇರಳ ವರ್ಗದ ತುಳು ಮಲೆಯಾಳಿಗಳು ಸಹಭಾಗಿಯಾದ ವಿವರಣೆಗಳು ಪಾಟ್ಟುವಿನಲ್ಲಿ ಸಾಕಷ್ಟು ಇವೆ.*[೨೦] ದೈಯೋಂ ಕುಳ ಮತ್ತು ತ್ರೆಯ್ಯಂಗಳ ಆರಾಧನೆಗಳಲ್ಲಿ ತುಳುವರು ಮತ್ತು ಮಲೆಯಾಳಿಗಳಾದ ಕೋಪಳರು ಮಲಯರು, ನೆಕ್ಕೆರರು ಸಹಭಾಗಿಗಳಾಗಿ ಭಾಗವಹಿಸುವುದನ್ನು ನೋಡಬಹುದು. ಇನ್ನೊಂದು ಗಮನಾರ್ಹ ಸಂಗತಿಯೇನೆಂದರೆ ಇಲ್ಲಿ ದೈವಗಳು ದ್ವಿಭಾಷಿಯಾಗುತ್ತಾರೆ. ಹೇಳುವ ಪಾಡ್ದನ ತುಳು ಆಗಿದ್ದರೆ ಭೂತಾವೇಷದ ನಂತರ ಬಂದ ನುಡಿಕಟ್ಟು ಮಲೆಯಾಳಂ. ಇದು ಮುಖ್ಯವಾಗಿ ಪೆರಾಜೆಯ ಕರಿಭೂತ ಕಟ್ಟುವ ತುಳು ಅಜಿಲರು ಆಚರಿಸುತ್ತಾರೆ.*[೨೧]

ಇಷ್ಟಲ್ಲದೆ ಕೇರಳದಿಂದ ತೈಯಂಗಳ ತುಳುನಾಡಿಗೂ, ಮತ್ತು ಮಲೆನಾಡಿಗೂ ವಲಸೆ ಹೋದದ್ದು ಅದೇ ರೀತಿ ವಿಷ್ಣು ಮೂರ್ತಿ ಮತ್ತು ಕಲ್ಲುರ ಬಾತುಕುಟ್ಟಿಯಾಗಿ ತುಳುನಾಡಿನಿಂದ ಮಲಬಾರಿಗೆ ಬಂದದನ್ನು ತಿಳಿಸುವ ಪಾಟ್ಟುಗಳಿವೆ. ಉದಾ ಕುರತಿ ದೈವವು ಆಯಿರಂ ಪಟ್ಟಣ, ಮುವಾಯಿರ ಪಟ್ಟಣ, ಇಕ್ಕೇರಿ, ಇಕ್ಕೇರಿ ತಾನಂ, ಉಳ್ಳಾಲ ಇಳವತ್ತೂರು ತುಳುನಾಟ, ಮಳನಾಟ, ಮಂಗಳಾಪುರಂ, ಮಂಜುಟ್ಟಿರ (ಮಂಜೇಶ್ವರ) ಮತ್ತು ಬೇಕಲಗಳಲ್ಲಿ ಸಂಚರಿಸಿದುದನ್ನು ಕುರುತ್ತಿ ಪಾಟ್ಟುವಿನಲ್ಲಿ ತಿಳಿಸಿದೆ. ಮಲಬಾರಿನ ನಾಯರ ದೈವ ಇಕ್ಕೇರಿಗೆ ಹೋಗಿ ಅಲ್ಲಿ ನೆಲಸಿ ಕಾಲಕ್ರಮೇಣ ಉಳ್ಳಾಕಳು ಆಗಿ ಸುಳ್ಯ ಸೀಮೆಗೆ ಬಂದ ವಿವರವು ಜಾನಪದ ಗೀತೆಗಳಲ್ಲೂ ಇವೆ.*[೨೨] ಜಾನಪದ ನೃತ್ಯಗಳಾದ ಯಕ್ಷಗಾನ ಮತ್ತು ಕೇರಳದ ಕಥಕಳಿಯ ಸಾಮ್ಯತೆಗಳು ತುಳು ಮತ್ತು ಮಲೆಯಾಳಿಗರ ಸಂಪರ್ಕದಿಂದಾಗಿರಬೇಕೆಂದು ತುಳು ಪಾಡ್ದನ ಮತ್ತು ಮಲೆಯಾಳಂ ಪಾಟ್ಟುಗಳ ಅಧ್ಯಯನವು ಸೂಚಿಸುತ್ತವೆ. ಮಲೆಯಾಳಂ ಪಾಟ್ಟುಗಳಲ್ಲಿ ವ್ಯಕ್ತವಾದ ಮುಖ್ಯ ಸಂಗತಿ ಯಾವುದೆಂದರೆ ವಿವಿಧ ಜಾತಿ ಮತ್ತು ಜನಾಂಗದ ಮತ್ತು ಅವರು ಆರಾಧಿಸುವ ದೈವಂಗಳು ವಲಸೆ ಹೋಗುತ್ತಿರುವುದು. ಮಲಬಾರಿನಿಂದ ದೈವಗಳು ಕೊಡಗು, ಗಟ್ಟದಮೇಲಿನ ಪ್ರದೇಶಗಳಿಗೂ ವಲಸೆ ಹೋಗುತ್ತಿದ್ದವು. ಇದೇ ರೀತಿ ಘಟ್ಟದ ಮೇಲಿಂದಲೂ ದೈವಗಳು ಮಲಬಾರಿಗೆ ಬರುತ್ತಿದ್ದವು. ಇದರಿಂದಾಗಿ ಒಂದು ವಿಶಿಷ್ಟಮಯವಾದ ಸಂಸ್ಕೃತಿ ಈ ಪರಿಸರದಲ್ಲಿ ಬೆಳೆಯಿತು. ಇದನ್ನು ವಿಶಿಷ್ಟಮಯವಾದ ಕೃಷಿ ಜನಾಂಗದ ಸಂಸ್ಕೃತಿಯೆಂದು ಇ.ಎಂ.ಎಸ್. ಅವರು ವ್ಯಾಖ್ಯಾನಿಸಿದ್ದಾರೆ.*[೨೩] ಕ್ರಮೇಣ ಇದು ಕೃಷಿ ಜನರ ಜಾಗೃತಿಗೆ ಕಾರಣವಾಯಿತ್ತೆಂದು ಇವರು ವಾದಿಸಿದ್ದಾರೆ. ಕೆಲವು ಮಲೆಯಾಳಿ ಪಾಟುಗಳಲ್ಲಿ ಕರ್ನಾಟಕ ಮತ್ತು ತುಳುನಾಡಿನ ದೇವಾಲಯಗಳ ಮಾಹಿತಿಗಳನ್ನು ತಿಳಿಸುತ್ತವೆ. ಉದಾ, ತುಳುವೀರನ್ ಪಾಟುಗಳಲ್ಲಿ, ಉಡುಪಿಯಲ್ಲಿಯ ಕೃಷ್ಣ, ಭಗವತಿ ಮತ್ತು ಶಾಸ್ತಾರ ಆರಾಧನೆ, ಅಡ್ದೂರು ದೇವ ಮದ್ದೂರು ದೇವ ಅನಂತಪುರ ಮತ್ತು ಕುಂಡೋರ ಚಾಮುಂಡಿ ತೈಯ್ಯಂನಲ್ಲಿ ದೈವವು ಕುಂಬಳೆಯ ಕುಂಟಾರದಿಂದ ಕೊಡಗಿನ ಕಾವೇರಿ ತೀರ್ಥ ಸಂದರ್ಶನ ಮಾಡಿದ್ದ ಮಾಹಿತಿಗಳು ಇವೆ.*[೨೪]

*ಉಪಸಂಹಾರ*

ಮಲೆಯಾಳಂ ಪಾಟುಗಳು ರಾಜಕೀಯ ಸ್ಥಿತಿಗತಿಗಳನ್ನು ತಿಳಿಸುವಲ್ಲಿ ಎಡವಿದರೂ ತುಳುನಾಡಿನ ಕೋಟೆಗಳ ವಿಚಾರ ತಿಳಿಯುವಲ್ಲಿ ಉಪಕಾರಿಯಾಗಿವೆ.

ವಾಣಿಜ್ಯ, ವ್ಯಾಪಾರ ಮತ್ತು ಧಾರ್ಮಿಕ ಜೀವನಗಳು ಕರ್ನಾಟಕದಲ್ಲಿ ಹೇಗೆ ನಡೆಯುತ್ತಿವೆ ಎಂಬುದರ ಕುರಿತಾಗಿ ಕೆಲವು ಅಪೂರ್ವ ಮಾಹಿತಿಗಳನ್ನು ಮಲೆಯಾಳಂ ಪಾಟು ಮತ್ತು ಇವರ ಮಧ್ಯಕಾಲೀನ ಇದೇ ಭಾಷೆಯ ಸಾಹಿತ್ಯ ಕೃತಿಗಳು ನೀಡುತ್ತವೆ. ಇದು ಕರ್ನಾಟಕ ಸಾಂಸ್ಕೃತಿಕ ಇತಿಹಾಸ ತಿಳಿಯುವಲ್ಲಿ ಒಂದು ಹೊಸ ಆಯಾಮವನ್ನು ನೀಡುತ್ತವೆ. ಮಲೆಯಾಳಂ ಪಾಟುಗಳಲ್ಲಿ ಎಲ್ಲೂ ಕಾಸರಗೋಡು ಕೇರಳವೆಂದು ಹೇಳಿಲ್ಲ. ಇದಕ್ಕೆ ಪ್ರತಿಯಾಗಿ ಈ ಪ್ರದೇಶ ತುಳುನಾಡು ಎಂದು ಕರೆದು, ಇದರ ವಿಸ್ತಾರ ಗೋಕರ್ಣದವರೆಗೂ ಹಬ್ಬಿತ್ತೆಂದು ತಿಳಿಸುತ್ತದೆ. ಈ ಪ್ರದೇಶದಲ್ಲಿ ತನ್ನದೇ ಆದ ಸಂಸ್ಕೃತಿ ಹೊಂದಿ ಇದು ಕೇರಳದ ಸಾಂಸ್ಕೃತಿಕ

ಜೀವನದೊಂದಿಗೆ ಒಂದು ರೀತಿಯಲ್ಲಿ ಸಂಪರ್ಕವನ್ನು ಇಟ್ಟುಕೊಂಡಿರುತ್ತದೆಂದು ಈ ಪಾಟ್ಟುಗಳ ಅಧ್ಯಯನವು ಸೂಚಿಸುತ್ತದೆ. ಒಟ್ಟಿನಲ್ಲಿ ಕರಾವಳಿ ಕರ್ನಾಟಕದಲ್ಲಿ ಒಂದು ವಿಲಕ್ಷಣ ಸಂಸ್ಕೃತಿ, ಇದ್ದಿತ್ತೆಂದು ಮಲೆಯಾಳಿ ಪಾಟುಗಳು ಗುರುತಿಸಿವೆ. ಆದರೆ ರಾಜಕೀಯವಾಗಿ ಈ ಪ್ರದೇಶವು ಕರ್ನಾಟಕ ದೊಂದಿಗೆ ಇದ್ದಿತ್ತು.



(ಈ ಲೇಖನ ತಯಾರಿಸುವಲ್ಲಿ ಇನ್ನೂ ಹೆಚ್ಚಿನ ಮಾಹಿತಿಗಳನ್ನು ಶ್ರೀ ವೆಂಕಟರಾಜ ಪುಣಿಂಚತ್ತಾಯರು ನೀಡಿದ್ದಾರೆ. ಇವರೆಲ್ಲರಿಗೂ ಈ ಲೇಖಕರು ತುಂಬು ಹೃದಯದ ಕೃತಜ್ಞತೆಯನ್ನು ನೀಡುತ್ತಾರೆ.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಡಾ। ಸುಶೀಲ ಉಪಾಧ್ಯಾಯ., (೧೯೯೮), **ದಕ್ಷಿಣ ಭಾರತ ಜಾನಪದ**, (ಉಡುಪಿ, ಪು. ೨೦೩).

*೨. ಆರ್ ಶ್ರೀ ಕುಮಾರ್ - (ಅಪ್ರಕಟಿತ ಪಿ. ಎಚ್‌ಡಿ. ಪ್ರಬಂಧ ಕೇರಳ ವಿಶ್ವವಿದ್ಯಾಲಯ ತ್ರಿವೆಂಡರಮ್ ೧೯೯೭, ಪು. ೯-೧೦)

i. Ballada of North Malabar (Madras 1956) KKN Kurup, *The cult of Teyyam and Hero worship in Kerala* , Calcutta 1973.

ii. *Aryana Dravidian Elements in Malabar folklore,* (Trivandrum 1977). Kalarippayatt Trivandrum 1977. Sri Kumar ಪೂರ್ವೋಕ್ತ Grismalatha

iii. *Trade and Markets in Kerala as reflected in Malayalam literature,* C 13th to 15th centuries. (M. Phil Thesis Calicut University 1990) ಸುಶೀಲಾ ಉಪಾಧ್ಯಾಯ ಪೂರ್ವೋಕ್ತ : ವೆಂಕಟರಾಯ ಪುಣಿಂಚತ್ತಾಯ - ತುಳು ನಡೆನುಡಿ (ಉಡುಪಿ ೧೯೯೮) E.M.S. Nambudripad Kerala Yesterday Today and tomorrow Calcutta 1966.

*೩ ಶ್ರೀ ಕುಮಾರ, ಅದೇ, ಪು. ೧೫೨ ಕೇರಳದ ಕೆಲವು ಇತಿಹಾಸಗಾರರ ಅಭಿಪ್ರಾಯದಂತೆ ಕಾಸರಗೋಡಿನ ಕೋಟೆಗಳನ್ನು ಕೊಲಸ್ತೇರಿ ಅರಸರು ಕಟ್ಟಿದ್ದರೆಂದೂ, ಇವುಗಳನ್ನು ಕೆಳದಿ ನಾಯಕರು ಪುನರ್ ರಚಿಸಿದರು. ಆದರೆ ಕೇರಳದ ಪಾಟ್ಟುಗಳು ಈ ವಾದವನ್ನು ಅಲ್ಲಗಳೆಯುತ್ತವೆ.

*೪. ತಚ್ಚೋಳಿ ಚಂದು ಪಾಟ್ಟು ನೋಡಿ. ವೆಂಕಟರಾಜ ಪುಣಿಂಚತ್ತಾಯ ಪೂರ್ವೋಕ್ತ ಪು. ೪೦.

*೫. ಅದೇ, ಶ್ರೀ ಕುಮಾರ ಪುರ್ವೋಕ್ತ ಪು. ೬೮-೬೯.

*೬. Alexandar Hamilton : New Account of East Indies Vol I (London 1930) p. 160.

*೭. ವೆಂಕಟರಾಜ ಪುಣಿಂಚತ್ತಾಯ - ಅದೇ ಪು. ೫೧-೫೩ ಶ್ರೀ ಕುಮಾರ ಅದೇ ಪು. ೧೪; ಆದರೆ ಈ ಪಾಟುಗಳ ಕರ್ತರಿಗೆ ನಾಮ ಮತ್ತು ವ್ಯತ್ಯಾಸ ತಿಳಿಸುವಲ್ಲಿ ಎಡವಿದ್ದಾರೆ. ಪಾಟ್ಟುಗಳ ಉಕ್ತವಾದ ಕಾಂಞ ರೋಟ (ಕಾಸರಗೋಡು), ಕ್ರಿ. ಶ. ೬೪೧ ಅರೇಬಿಕ್ ಶಾಸನದಲ್ಲಿ ತಿಳಿಸಿದ **ಕಾಂಚರಕೂಟದ** ರೂಪಾಂತರವಾಗಿರಬೇಕು. ಇದನ್ನು ಪೋರ್ಚುಗೀಸ್ ದಾಖಲೆಗಳಲ್ಲಿ ಕನೊರ್ಟ ಎಂದು **ಹೇಳಿದೆ.** Journal of Epigraphical Society XXV p. 54-57.

*೮. ಮಲೆಯಾಳಂ ಮತ್ತು ಸಾಂಸ್ಕೃತಿಕ ಮಧುರ ಸಂಗಮದಿಂದಾದ ಕಾವ್ಯಗಳು. ಇದರ ಪ್ರವರ್ತಕರು ಆರ್ಯವಂಶದ ನಂಬೂದರಿ ಬ್ರಾಹ್ಮಣರು. ಮಲೆಯಾಳ ಶಬ್ದಗಳ ಸಂಸ್ಕೃತೀಕರಣ ಸಂಸ್ಕೃತದಂತೆ ವಿಶ್ಲೇಷಣೆ ವಿಶೇಷಗಳ ಹೊಂದಾಣಿಕೆ ಇತ್ಯಾದಿಗಳು ಈ ಶೈಲಿಯ ವೈಶಿಷ್ಟ್ಯ. ಇದರ ಪ್ರಯೋಗದಲ್ಲಿ ಗಮನಿಸಬೇಕಾದ್ದು ಭಾಷಾಶಬ್ದಗಳು ಜನಸಾಮಾನ್ಯರಲ್ಲಿ ಬಹಳ ಮಟ್ಟಿಗೆ ಬಳಕೆಯಲ್ಲಿರುವುದಾಗಿರಬೇಕು. ಮತ್ತು ಅಕ್ಷರಗಳು ಕೋಮಲವಾಗಿರಬೇಕು. ವಿವರ ನೋಡಿ ಸುಶೀಲಾ ಪಿ. ಉಪಾಧ್ಯಾಯ, ಪೂರ್ವೋಕ್ತ, ಪು. ೨೧೩.

*೯. ಗೀಸ್ಮಲತಾ., ಪೂರ್ವೋಕ್ತ ಪು. ೫೧.

*೧೦. ಈ ಕಾವ್ಯವು ಹದಿನಾಲ್ಕನೆ ಶತಮಾನದ ಆದಿಭಾಗದಲ್ಲಿ ರಚಿತವಾಯಿತ್ತೆಂದು ಸುರ್ಯನಾಡ ಕುಂಜನ್ ಪಿಳ್ಳೆಯವರು ಅಭಿಪ್ರಾಯ ಪಡುತ್ತಾರೆ. ಇದರ ಹಸ್ತ ಪ್ರತಿ ತ್ರಿವಾಂಕೂರು ಪ್ರಾಚೀನ ಹಸ್ತ ಪ್ರತಿ ಭಂಡಾರದಲ್ಲಿದೆ. ಗ್ರೀಸ್ಮಾಲತಾ, ಅದೇ ಪು. ೬೧.

*೧೧. ಇದೇ ಪು. ೫೦.

*೧೨. ಈ ಮರಕಾಲರು ಸಾಗರೋತ್ತರ ವ್ಯಾಪಾರ ನಡೆಸಲು ಕರ್ನಾಟಕ ಕರಾವಳಿಯ ರೇವುಗಳಿಗೆ ಬರುತ್ತಿದ್ದನ್ನು ೧೪ನೆಯ ಶತಮಾನದ ಅಂತ್ಯದಲ್ಲಿ ರಚಿಸಿದ ಮೂಸಿಕ ವಂಶಕಾವ್ಯದ ತಿಳಿಸಿದ್ದು ಗಮನಾರ್ಹ. ಉನ್ನಿ ಸಂಪಾದಿಸಿದ ಮೂಸಿಕಾವಂಶ (ತ್ರಿವೆಂದ್ರರಂ) ಪು. ೨೦೫ ಹೊನ್ನಾವರದಲ್ಲಿ ಮರಕಾಲದಿದ್ದದ್ದನ್ನು ಕಾಯಿಕಿಣಿ ಶಾಸನವು ಸಮರ್ಥಿಸುತ್ತದೆ. ನೋಡಿ **ಕರ್ನಾಟಕ ಶಾಸನ** (ಸಂ. ೧) ಸಂಖ್ಯೆ ೪೮, ೧೯೩೯-೪೦, ಪು. ೧೧೦-೧೧೨.

*೧೩. ಶ್ರೀ **ಕುಮಾರ** - ಅದೇ ಪು. ೭ ವೆಂಕಟರಾಜ ಪುಣಿಂಚತ್ತಾಯ, ಅದೇ, ಪು. ೧೫ ನೈಸರ್ಗಿಕ ಅನಾಹುತಗಳಲ್ಲಿ ಚಂದ್ರಗಿರಿ ನದಿಯ ನೆರೆಯು ಒಂದಾಗಿವೆ.

*೧೪. ವೆಂಕಟರಾಜ ಪುಣಿಂಚತ್ತಾಯ - ಅದೇ, ಪು. ೪೨-೪೩ KKN Kurup Kalaripajait, p. 13.

*೧೫. ವೆಂಕಟರಾಜ ಪುಣಿಂಚತ್ತಾಯ, ಅದೇ, ಪು. ೪೨. ಇಂತಹ ಗರಡಿಗಳು ಕೇರ್ನಾಲಿನಲ್ಲಿದೆ ಎಂದು ಇಲ್ಲಿ ಜಟ್ಟಿ ಯುದ್ಧ ಮಾಡಿ ಸತ್ತದನ್ನು ತಿಳಿಸುವ ಒಂದು ಶಾಸನ ಇಲ್ಲಿ ಸಿಕ್ಕಿದೆ. ಇದು ಕ್ರಿ. ಶ. ೧೬೩೦ ಕಾಲದ್ದಾಗಿರುತ್ತದೆ. ಇದರ ಸಮೀಪದಲ್ಲಿ ಮಲೆಯಾಳಿ ಜಟ್ಟಿಗನ ದೈವಸ್ಥಾನವಿದೆ. ಈ ಶಾಸನದ ಇರುವಿಕೆಯನ್ನು ಶ್ರೀ ಜೆ. ಅಚ್ಯುತ ಹೆಬ್ಬಾರ ಕೇರ್ಗಾಲು ಪತ್ತೆ ಹಚ್ಚಿದ್ದಾರೆ.

*೧೬. ಶ್ರೀ ಕುಮಾರ - ಅದೇ ಪು. ೯೬-೯೭, ಈ ಘಟನೆ ಅಚಾರಿತ್ರ್ಯಕವೆಂದು ಇ.ಎಂ.ಎಸ್. ನಂಬೂದರಿಪಾದರು ತಿಳಿಸಿದ್ದಾರೆ. ನೋಡಿ ಇವರ ಗ್ರಂಥ Today and Tomorrow ಪು. ೨೪-೨೫. ಈ ಜನಾಂಗದ ಇತಿಹಾಸ ನೋಡಿ ಟಿ. ಕೆ. ರವೀಂದ್ರನ್ *'New Light on Ilavas of Pre - Christian era'*, Journal of Kerala Studies Trivandrum Jan. 1974, Vol. I P. 359-368.

*೧೭. ಶ್ರೀ ಕುಮಾರ್, ಅದೇ ಪು. ೧೮೧.

*೧೮. ವೆಂಕಟರಾಜ ಪುಣಿಂಚತ್ತಾಯ ಅದೇ ಪು. ೪೧, ಸುಶೀಲಾ ಉಪಾಧ್ಯಾಯ, ಅದೇ. ಪು. ೨೧೫.

*೧೯. ಶ್ರೀ ಕುಮಾರ್, ಅದೇ, ಪು. ೧೪.

*೨೦. K. K. N. Krupa., **The cult of Teyyam and Hero worship** ಪು. ೫೦, ೫೨, ೫೯ ಇದೇ **Aryan Dravidian Elements in Malabar Folklore** ಪು. ೧೪-೧೬. ವೆಂಕಟರಾಜ ಪುಣಿಂಚತ್ತಾಯ, ಅದೇ. ಪು. ೪೮, ೫೫, ೬೧. ಚಂದ್ರಶೇಖರ ದಾಮ್ಲೆ : ಜಾತ್ರೆಗಳ ಒಂದು ಜಾನಪದೀಯ ಅಧ್ಯಯನ (ಉಡುಪಿ ೧೯೯೭) ಪು. ೮-೧೦೮.

*೨೨. K. K. N. Krupa., **Aryan and Dravidian Elements** ಪು. ೨೬-೨೭. ವೆಂಕಟರಾಜ ಪುಣಿಂಚತ್ತಾಯ, ಅದೇ, ಪು. ೪೯, ೫೪, ಎಸ್. ಚಂದ್ರಶೇಖರ ಮುನ್ನೂರೊಕ್ಕಲನ್ನು ಕಾಯುವ ದೈವ ಪು. ೨೧-೨೨.

*೨೩. ಇ.ಎಂ.ಎಸ್. ನಂಬೂದರಿಪಾಡ, ಅದೇ, ಗ್ರಂಥ ಪು. ೪೮-೪೯. ಇನ್ನೂ ಹೆಚ್ಚಿನ ವಿವರ K. K. N. Krupa., "Pesant Migrations in Tuluva during the late Medieval period. A study of folklore sources" The Karnataka Historical Reveiw XXVI Dharwad, 1992 p.p. 47-51.

*೨೪. ವೆಂಕಟರಾಜ ಪುಣಿಂಚತ್ತಾಯ ಅದೇ ಪು. ೫೦-೫೧.

**ಉಪಕಾರ ಸ್ಮರಣೆ :**

i. ಡಾ। ಕೆ. ಕೆ. ಎನ್. ಕುರುಪ, ಉಪಕುಲಪತಿ ಕಲ್ಲಿಕೋಟೆ ವಿಶ್ವವಿದ್ಯಾಲಯ, ಅವರು ಈ ಲೇಖನ ಬರೆಯಲು ಹಲವಾರು ಉಪಯುಕ್ತ ಮಾಹಿತಿಗಳನ್ನು ಒದಗಿಸಿದ್ದಾರೆ.

ii. ಕೆ. ಕೆ. ಕುಸುಮನ್ - ಇತಿಹಾಸ ಪ್ರಾಧ್ಯಾಪಕ ಕೇರಳ ವಿಶ್ವವಿದ್ಯಾನಿಲಯ ತಿರುವನಂತಪುರಂ.

iii. ಭಾರತೀಯ ಇತಿಹಾಸ ಸಂಶೋಧನಾ ಮಂಡಳಿ ನವದೆಹಲಿ, ಈ ಸಂಸ್ಥೆಯ ಆರ್ಥಿಕ ಸಹಾಯವು ಈ ಲೇಖನ ತಯಾರಿಸುವಲ್ಲಿ ಬಹಳ ಸಹಕಾರಿಯಾಗಿದೆ.

ಡಾ। ಕೆ. ರವೀಂದ್ರನಾಥ*

# ಕನ್ನಡ ವಿ. ವಿ. ಹಸ್ತಪ್ರತಿ ಭಂಡಾರದ ಎರಡು ಉದ್ಧರಣೆಗಳು

ವೀರಶೈವ ಸಾಹಿತ್ಯವನ್ನು ಇಲ್ಲಿಯವರೆಗೆ ವಿಷಯ ಪ್ರಧಾನ ದೃಷ್ಟಿಯಿಂದ ಅರ್ಪಣ, ಅರ್ಚನ, ಅನುಭವ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಹಾಗೂ ಸಕೀಲ ಸಾಹಿತ್ಯವೆಂದು ವಿದ್ವಾಂಸರು ವರ್ಗೀಕರಿಸಿ ಅಧ್ಯಯನಗೈದಿದ್ದಾರೆ. ಈ ಎಲ್ಲಾ ರೂಪಗಳ ಜೊತೆಗೆ ಚಿತ್ರಪ್ರಧಾನವಾದ ಉದ್ಧರಣೆ ಸಾಹಿತ್ಯ ವೀರಶೈವರ ಸಾಹಿತ್ಯ ಶಾಸ್ತ್ರ ಹಾಗೂ ಚಿತ್ರ ಪರಂಪರೆಗೆ ವಿನೂತನ ಹಾಗೂ ಅಪೂರ್ವ ಕೊಡುಗೆಯಾಗಿದೆ. ಪ್ರಸ್ತುತ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರದಲ್ಲಿ ಉದ್ಧರಣೆ ಪಟಲ ಗಳಿದ್ದು ಚಿತ್ರ ಸಾಹಿತ್ಯಕ್ಕೆ ಹಾಗೂ ವೀರಶೈವ ತತ್ವಸಾಹಿತ್ಯಕ್ಕೆ ಮಹತ್ವ ನೀಡುವ ಈ ಎರಡು ಉದ್ದರಣೆಗಳ ಪರಿಚಯ ಈ ಲೇಖನದ ಉದ್ದೇಶ.

ಉದ್ದರಣೆಗಳು : ಉದ್ಧರಣೆ ಪಟಲ ಹಾಗೂ ಉದ್ಧರಣೆಯ ವಾಚ್ಯ ಎಂದು ಎರಡು ರೀತಿಯಲ್ಲಿ ಬೆಳೆದು ಬಂದಿವೆ. ಕೆಲವೊಂದು ತಾಳೆಗರಿ ಹಾಗೂ ಕಾಗದ ಹಸ್ತ ಪ್ರತಿಗಳಲ್ಲಿ ಚಿತ್ರ ಮತ್ತು ವಾಚ್ಯ (ಪಠ್ಯ) ಜೊತೆ ಜೊತೆಗೆ ಇದ್ದು ಇನ್ನು ಕೆಲವು ಕಡೆ ಕೇವಲ ಚಿತ್ರಗಳಿರಬಹುದು ಇಲ್ಲವೇ ವಾಚ್ಯಗಳಿಂದ ಮಾತ್ರ ಪ್ರತ್ಯೇಕ ಗೊಂಡಿರುವುದು ಕಂಡುಬರುತ್ತದೆ. ಈ ಲೇಖನದ ಪರಿಚಿತ ಎರಡು ಉದ್ಧರಣೆಗಳು ವಾಚ್ಯ ಹಾಗೂ ಚಿತ್ರಗಳಿಂದ ಪ್ರತ್ಯೇಕ ಗ್ರಂಥಗಳಿಂದ ಬಿಡಿ ಬಿಡಿಯಾಗಿ ದೊರಕಿವೆ.

***ಅರ್ಥ*** : ಉತ್+ಹರಣ ಎಂಬ ಎರಡು ಪದಗಳಿಂದ ಉದ್ಧರಣ ಪದ ನಿಷ್ಪತ್ತಿಯಾಗಿದ್ದು ಉತ್ ಎಂದರೆ ಮೇಲೆ, ಮುಂದೆ, ಮಿಗಿಲು (ಉರ್ಧ್ವ) ಎಂಬಿತ್ಯಾದಿ ಅರ್ಥಗಳಿವೆ. ಹರಣ ಎಂದರೆ ಅಪಹರಿಸು, ತೆಗೆದುಕೊಂಡು ಹೋಗು, ಒಯ್ಯು ಎಂಬರ್ಥಗಳಿವೆ. ಹೀಗಾಗಿ ಉದ್ಧರಣ ಎಂದರೆ ಉದ್ಧರಿಸು, ಮೇಲಕ್ಕೆತ್ತು, ಬಂಧನ ದಿಂದ ಮುಕ್ತಗೊಳಿಸು, ಪರಿಪೂರ್ಣ ಹಂತಕ್ಕೆ ಮುಟ್ಟಿಸು ಎಂಬಿತ್ಯಾದಿ ಅರ್ಥಗಳು ಪ್ರಾಪ್ತವಾಗುತ್ತವೆ. ಅಂದರೆ ಅಧೋ ಮುಖಿಯಾದ ಜೀವಿಯನ್ನು ಉರ್ಧ್ವಮುಖಿಗೊಳಿಸುವ ಉತ್ಕರ್ಷಕ ವಾದ ಸಾಹಿತ್ಯವಾಗಿದೆ.

***ಲಕ್ಷಣ*** : ಪೂಜ್ಯ ಡಾ. ಶ್ರೀ ಜ. ಚ. ನಿ. ಅವರು ಈ ಸಾಹಿತ್ಯದ ಕೆಲವು ಲಕ್ಷಣವನ್ನು ಹೀಗೆ ತಿಳಿಸುತ್ತಾರೆ*೧.

*೧. ಉದ್ಧರಣೆ ಸಾಹಿತ್ಯ ವಾಚ್ಯವೂ (ವಾಙ್ಮಯ) ಹೌದು; ವರ್ಣಮಯ (ಬಣ್ಣ)ವೂ ಹೌದು. ಅಂದರೆ ಶ್ರವ್ಯ ಸಾಹಿತ್ಯವೂ ಆಗಿದೆ. ದೃಶ್ಯ ಸಾಹಿತ್ಯವೂ ಆಗಿದೆ*

*೨. ರೂಪದ ದೃಷ್ಟಿಯಿಂದ ಅಂಕಿ, ಅಕ್ಷರ, ವರ್ಣ ಪ್ರಧಾನ ಸಾಹಿತ್ಯ*

*೩. ಸಮನ್ವಯ ದೃಷ್ಟಿಯಿಂದ ಸಾಂಖ್ಯ-ಯೋಗ-ಮೀಮಾಂಸಾ ಹಾಗೂ ಜ್ಯೋತಿಷ್ಯಗಳ ಲಕ್ಷಣವುಳ್ಳ ಸಾಹಿತ್ಯ.*

*೪. ವಿಶೇಷವಾಗಿ ಅಂಕಿ -ಸಂಖ್ಯೆಗಳಿಗೆ ತತ್ವದೀಕ್ಷೆ ಮತ್ತು ಸಾಹಿತ್ಯ ದೀಕ್ಷೆ ನೀಡಿದ ಸಾಹಿತ್ಯ.*

*೫. ಸಾಂಕೇತಿಕ ದೃಶ್ಯ ಸಾಹಿತ್ಯ, ಸಂವಹನಶೀಲ ಸಾಹಿತ್ಯ.*

***ಉದ್ದೇಶ*** : ವೀರಶೈವ ತತ್ವಸಿದ್ಧಾಂತಗಳಾದ ಭಕ್ತಿ, ಅಷ್ಟಾವರಣ, ಜಂಗಮ, ಶೂನ್ಯಲಿಂಗ, ಮಹಾಲಿಂಗ, ಭಾವಲಿಂಗ, ನವಚಕ್ರ, ಪಂಚೀಕರಣ, ಷಡಕ್ಷರಿ, ಬಸವಾಕ್ಷರ, ಪ್ರಣಾಮ, ಕುಂಡಲಿನಿ ಮುಂತಾದ ವಸ್ತು ಸ್ವರೂಪಗಳ ವಿನ್ಯಾಸವನ್ನು ಸೂಚ್ಯವಾಗಿ ಸಂಕೇತಿಸುವುದೇ ಉದ್ದರಣೆ ಪಟಲಗಳ ಆಶಯವಾಗಿದೆ. ಚಿತ್ರ ವಿನ್ಯಾಸದ ವಿವರಣೆಯನ್ನು ವಾಚ್ಯವಾಗಿ ನಿರೂಪಿಸಲಾಗಿದೆ. ಕಾರ್ಯ ಕಾರಣಗಳೆಂದು ಏಕಕಾಲಕ್ಕೆ ಅರಿಕೆಗೆ ಬರುತ್ತವೆ. ಬೀಜದಂತಿರುವ ಅದೃಶ್ಯಕಾರಣದ ಅಂದರೆ ಮೂಲ ವಸ್ತುವಿನ ಮತ್ತು ಅಂಕುರ (ವೃಕ್ಷ)ದಂತಿರುವ ದೃಶ್ಯದ (ಕಾರ್ಯ ಅಥವಾ ವರ್ಣ) ಪ್ರಜ್ಞೆಯುಂಟಾಗುತ್ತದೆ. ಸೂಚ್ಯ, ಉದ್ಧರಣೆ ಸೂತ್ರವಾದರೆ, ವಾಚ್ಯ, ಉದ್ಧರಣೆ ಭಾಷ್ಯದಂತಿರುತ್ತದೆ. ವರ್ಣ ವಿನ್ಯಾಸದ ಉದ್ಧರಣೆಯ ಅಧ್ಯಯನ ಆರಾಧನಗಳಲ್ಲಿ ನೇತ್ರ, ಮನ, ಪ್ರಾಣಗಳ ಧಾರಣವಾಗುತ್ತದೆ ಆಗಿ ಉದಾತ್ತೀ ಕರಣವಾಗುತ್ತದೆ*೨. ಒಂದು ದೊಡ್ಡ ಗ್ರಂಥವಾಗಬಹುದಾದಷ್ಟು ವಿಷಯವ್ಯಾಪ್ತಿಯನ್ನು ಒಂದು ಉದ್ಧರಣೆ ಒಳಗೊಂಡಿರುತ್ತದೆ. ಬಯಲಲ್ಲಿ ರಚನೆಯಾದ ಒಂದು ಶಿವಾಲಯ ನಿರ್ಮಾಣದ ಹಿಂದಿರುವ ಶ್ರಮ ಇಲ್ಲಿರದಿದ್ದರೂ ಅಲ್ಲಿಯ ಶಿವಾಲಯದ ಮಹತ್ವಕ್ಕಿಂತ ಹೆಚ್ಚಿನದನ್ನು ಉದ್ಧರಣೆಗಳು ನಿವೇದಿಸುತ್ತವೆ. ಸಮಾಧಾನಿ, ಸಮಚಿತ್ತ, ಸಮಜ್ಞಾನಮತಿಗಳಾಗ ಬೇಕೆಂಬುದನ್ನು ಸಾರಿಹೇಳುವುದೇ ಉದ್ಧರಣೆ ಸಾಹಿತ್ಯದ ಉದ್ದೇಶ.

***ಉಗಮ*** : ಉದ್ಧರಣೆ ಸಾಹಿತ್ಯದ ಉಗಮ, ಆಗಮಗಳಿಂದ ಎಂದು ಪೂಜ್ಯ ಶ್ರೀ ಜ. ಚ. ನಿ. ಅವರು ಅಭಿಪ್ರಾಯ ಕೊಡುತ್ತಾರೆ. ಅದಕ್ಕೆ ಅವರು ಕೊಡುವ ಕಾರಣ ಆಗಮಗಳಲ್ಲಿ ಉದ್ಧರಣೆಗಳ ಚಿತ್ರಗಳಿವೆ. ವರ್ಣವಿನ್ಯಾಸದ ನಿರೂಪಣೆಯಿದೆ; ಮಂತ್ರಾಕ್ಷರ ವಿನ್ಯಾಸವಿದೆ ಎಂದು ಮುಂತಾಗಿ ತಿಳಿಸುತ್ತ ವಾತುಲ ಶುದ್ಧಾಖ್ಯ ತಂತ್ರದ ನಿದರ್ಶನವನ್ನು ನೀಡುತ್ತಾರೆ. ಮುಂದುವರಿದು

*ಅಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.



ಪಾರಮೇಶ್ವರ ತಂತ್ರ, ಸೂಕ್ಷ್ಮ ತಂತ್ರ, ಮಂತ್ರಮಹೋದಧಿ ಶಿವರಹಸ್ಯ,ಅನಾದಿವೀರಶೈವ ಸಾರಸಂಗ್ರಹ, ವೀರಶೈವಾಚಾರ ಪ್ರದೀಪಿಕೆ ಮುಂತಾದ ಕೃತಿಗಳಲ್ಲಿ ಚಕ್ರ ವಿಧಿ ವಿಧಾನಗಳಿರುವುದನ್ನು ಗಮನಕ್ಕೆ ತರುತ್ತಾರೆ. ಆದರೆ ಇವುಗಳ ಉಗಮವನ್ನು ಅಗಮಗಳಲ್ಲಿ ಹುಡುಕುವುದಕ್ಕಿಂತ ಬಸವಾದಿ ಪ್ರಮಥರ ವಚನಗಳಿಂದಲೇ ನೋಡುವುದು ಸೂಕ್ತವೆಂದು ತೋರುತ್ತದೆ.

ಉದಾಹರಣೆಗೆ 'ಅನಾದಿ ಭಕ್ತನ ಉದ್ಧರಣೆವಾಚ್ಯ'ದ ಪ್ರಾರಂಭದಲ್ಲಿ 'ಶ್ರೀ ವೀರಶೈವ ಸಿದ್ಧಾಂತ ಸ್ಥಾಪನಾಚಾರ್ಯರಪ್ಪ ಆದ್ಯರನುಮತದಿಂದ ಉದ್ಧರಿಸಿದ, ಕುಟಿಲ ಕುಹಕ ಯಂತ್ರ ತಂತ್ರಗಳಲ್ಲದ ಶಿವಜ್ಞಾನ ಸಾಧನವಪ್ಪ, ಶಿವಮಂತ್ರನ್ಯಾಸ ಶಿವತತ್ತ್ವ ಸ್ಥಾಪಿತ ಶಿವಲಿಂಗಾಂಗ ಸಂಬಂಧ ಪ್ರತಿಪಾದಕಾಗಮ ಗ್ರಂಥಾರ್ಥ ವಾಚ್ಯಗಳಿಂದ ಕೆಲವು ವಚನಗಳಿಂದ ಸಂಗ್ರಹಿಸಿದ ಉದ್ಧರಣೆ ಪಟಲವಿದು, ಶಿವಲಿಂಗಾಂಕಿತ ಶಾಸನವಿದು ಶಿವಶರಣ ರವಧರಿವುದು.'

ಈ ಮೇಲಿನ ಉದ್ಧರಣೆಕಾರನ ಹೇಳಿಕೆಯನ್ನು ಗಮನಿಸಿದಾಗ ಪ್ರತಿಪಾದಕಾಗಮ ಗ್ರಂಥಾರ್ಥವಾಚ್ಯ..........ಎಂಬ ಮಾತುಗಳಿಂದ ಹಾಗೂ ಪಟಲಪದ ಆಗಮ ಸಂಪ್ರದಾಯ ಪ್ರಯೋಗ ಪದವೆಂದು, ಸಂಸ್ಕೃತವಾಕ್ಯ ಉದ್ಧೃತಗಳನ್ನು ನೀಡಿ ಡಾ. ಶ್ರೀ ಜ. ಚ. ನಿಯವರು ಇದರ ಉಗಮವನ್ನು ಆಗಮಗಳ ಕಡೆಗೆ ಒಯ್ಯುತ್ತಾರೆ.

ನಮಗೆ ದೊರೆತ ಇಲ್ಲಿಯವರೆಗಿನ ಉದ್ಧರಣೆಗೆ ಪಟಲಗಳಲ್ಲಿ ಶ್ರೀ ಷ. ಬ್ರ. ಸದಾಶಿವ ಶಿವಾಚಾರ್ಯರು ಗಿರಿಯಾಪುರ ಇವರ 'ಆತ್ಮೋದ್ಧರಣ ಸಾಹಿತ್ಯ' ಎಂಬ ಪ್ರತಿ. ಮತ್ತೊಂದು ಮಹಾಲಿಂಗೋದ್ಧರಣೆಯ ವಾಚ್ಯವು' ಎಂಬುದು. ಇನ್ನೂ ಅಪ್ರಕಟಿತ ಸ್ಥಿತಿಯಲ್ಲಿರುವ ಸಾವಿರಾರು ಉದ್ಧರಣೆ ಸಾಹಿತ್ಯದ ಹಸ್ತ ಪ್ರತಿಗಳು ನಾಡಿನಲ್ಲಿ ಸಿಗುವ ಸಾಧ್ಯತೆಯಿದೆ. ನನ್ನ ಗಮನಕ್ಕೆ ಬಂದಂತೆ ಶ್ರೀ ತೋಂಟದಾರ್ಯ ಮಠ ಗದಗ-ಡಂಬಳ, ಮೈಸೂರು ವಿಶ್ವವಿದ್ಯಾಲಯ ಹಸ್ತಪ್ರತಿ ಭಂಡಾರ, ಧಾರವಾಡ ವಿಶ್ವವಿದ್ಯಾಲಯ ಹಸ್ತಪ್ರತಿ ಭಂಡಾರ ಹಾಗೂ ವೈಯುಕ್ತಿಕವಾಗಿ ಶ್ರೀ ತೋಟನಗೌಡ ಅಮರಪ್ಪಗೌಡ ಪೊಲೀಸ್ ಪಾಟೀಲ, ಸಾ॥ ಬನ್ನಿಕೊಪ್ಪ, ಕೊಪ್ಪಳ ಜಿಲ್ಲೆ ಹಾಗೂ ಶ್ರೀ ಶರಣ ಬಸವರಾಜು ಬಿಸರಳ್ಳಿ, ಸಾ॥ ಕೊಪ್ಪಳ ಮುಂತಾದವರ ಮನೆ-ಮಠಗಳಲ್ಲಿ ದೊರೆಯುವುದರಿಂದ ಉದ್ಧರಣೆ ಸಾಹಿತ್ಯ ಹೇರಳವಾಗಿ ರಚನೆಗೊಂಡಿದೆ. ಕ್ರಿ. ಶ. ೧೫ನೆಯ ಶತಮಾನದಿಂದೀಚೆಗೆ ಉದ್ಧರಣೆಗಳು ರಚನೆಗೊಂಡಿದ್ದು ಬಸವಾದಿ ಪ್ರಮಥರ ವಚನೇತರ ಸಾಹಿತ್ಯ ಪ್ರಕಾರಗಳಾದ ಕರಣ ಹಸಿಗೆ, ಮಿಶ್ರಾರ್ಪಣ, ಘಟಚಕ್ರ, ಮುಂತಾದವುಗಳಲ್ಲಿಯ ಪಂಚ ಭೂತಂಗಳುತ್ಪತ್ತಿ, ಪಂಚೀಕೃತಿ ಪಂಚವಿಂಶತಿ, ಶರಣಾರ್ಪಣ, ಭಾವಾರ್ಪಣ ಹಾಗೂ ಕಾಯಾರ್ಪಣ ಅವುಗಳಲ್ಲಿಯ ಬೀಜಾಕ್ಷರ ಗಳಲ್ಲದೆ ಬಸವಾಕ್ಷರ ಉದ್ಧರಣೆಗಳನ್ನು ಗಮನಿಸಿದರೆ ಬಸವಾದಿ ಪ್ರಮಥರ ತತ್ವಸಿದ್ಧಾಂತವೇ ಈ ಸಾಹಿತ್ಯದ ಉಗಮಕ್ಕೆ ಪ್ರೇರಣೆ ಯಾಗಿರಬೇಕೆಂಬುದು ನನ್ನ ತಿಳುವಳಿಕೆ*.

*ಕನ್ನಡ ವಿ.ವಿ. ಭಂಡಾರ ಎರಡು ಉದ್ಧರಣೆಗಳ ರೂಪ-ಸ್ವರೂಪ :* ಹಸ್ತಪ್ರತಿ ಭಂಡಾರದಲ್ಲಿ ಸಂರಕ್ಷಿಸ್ಪಟ್ಟ ಎರಡು ಉದ್ಧರಣೆಗಳು ಸ್ವರೂಪದ ದೃಷ್ಟಿಯಿಂದ ಒಂದು ಪುಸ್ತಕ ರೂಪದಲ್ಲಿ; ಇನ್ನೊಂದು ಊಟಕ್ಕೆ ಕುಳಿತುಕೊಳ್ಳುವಾಗ ಹಾಸುವ ಚಾಪೆಯಂತೆ ಸುರುಳಿಯಾಕಾರದಲ್ಲಿದೆ. ಪುಸ್ತಕ ರೂಪದಲ್ಲಿ ದೊರೆತ ಪ್ರತಿ ಕಂಪ್ಲಿ ಕಲ್ಗುಡಿ ಸಿದ್ಧಪ್ಪ (ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕು)ನವರ ಮನೆಯಲ್ಲಿ ದೊರೆತರೆ; ಎರಡನೆಯ ಸುರುಳಿಯಾಕಾರದ ಪ್ರತಿ ಹಲಗಾಪುರದ ಕರಣಂ ಲಕ್ಷ್ಮರಾವ್ (ಬಳ್ಳಾರಿ ಜಿಲ್ಲೆ ಹಗರಿ ಬೊಮ್ಮನಹಳ್ಳಿ ತಾಲುಕು) ಅವರ ಮನೆಯಲ್ಲಿ ದೊರೆತಿದೆ.

ಪುಸ್ತಕ ರೂಪದಲ್ಲಿರುವ ಉದ್ಧರಣೆಯ ಪಟಲ ೧೩" ಉದ್ದ ×೧೦.೫" ಅಗಲ ಇದ್ದು ೩೨ ಸಚಿತ್ರಗಳನ್ನೊಳಗೊಂಡ ಸುಂದರ ಪ್ರತಿ. ಎಡಬಲ ಹಾಳೆಗಳಲ್ಲಿ ಚಿತ್ರಗಳನ್ನು ಬಿಡಿಸಿರುವುದ ರಿಂದ ಒಂದರ ಬಣ್ಣ ಇನ್ನೊಂದಕ್ಕೆ ಅಂಟಿಕೊಳ್ಳ ಬಾರದಂತೆ ಮಧ್ಯದಲ್ಲಿ ಬಿಳಿ ಬಟ್ಟೆಯನ್ನು ಹಾಕಲಾಗಿದೆ. (ಆಲ್‌ಬಂಬಿನಲ್ಲಿ ಟ್ರೇಸಿಂಗ್ ಸೀಟ್ ಹಾಕಿದಂತೆ) ರಕ್ಷಾಪುಟವನ್ನು ಜಮುಖಾನ ಬಟ್ಟೆಯಿಂದ ಹೊಲಿಯಲಾಗಿದೆ. ಎಡಭಾಗವನ್ನು ಉದ್ದಗೊಳಿಸಿ ಬಲಭಾಗದ ರಕ್ಷಾಪುಟವನ್ನು ವ್ಯಾಪಿಸಿಕೊಂಡು ಕಡತದ ರೂಪದಲ್ಲಿ ಕಟ್ಟಲಾಗಿದೆ. ಅದರಿಂದ ಹಸ್ತಪ್ರತಿಯನ್ನು ಭದ್ರವಾಗಿ ಕಟ್ಟಲು ಅನುಕೂಲವಾಗುತ್ತದೆ. ಸುಮಾರು ೨೦೦-೨೫೦ ವರ್ಷಗಳ ಪ್ರಾಚೀನತೆಯಿರುವ ಈ ಪ್ರತಿಯ ಕ್ರ. ಸಂ. ೩೮೧ ನಂಬರಿನಿಂದ ಸಂರಕ್ಷಿಸಲ್ಪಡುತ್ತದೆ. ೧೩ ಪುಟಗಳ ವ್ಯಾಪ್ತಿಯನ್ನೊಂದಿದೆ. ಅರಿಷಿಣ, ಉರಿಮಂಜ ಬಣ್ಣಗಳನ್ನು ಹೆಚ್ಚು ಬಳಸಲಾಗಿದ್ದು ಕಂದು ಬಣ್ಣ ವಿರಳವಾಗಿ ಬಳಕೆಗೊಂಡಿದೆ. ಕಪ್ಪು ಬಣ್ಣದ ಬಳಕೆ ಇಲ್ಲದ್ದು ವಿಶೇಷ.

ಸುರುಳಿಯಾಕಾರದಲ್ಲಿರುವ ಇನ್ನೊಂದು ಉದ್ಧರಣೆಯು ೨೬೪" ಉದ್ದ × ೧೨" ಅಗಲ ಇದ್ದು. ೩೦ ಚಿತ್ರಗಳನ್ನೊಳ ಗೊಂಡಿದೆ. ತುಂಬಾ ಜೀರ್ಣಸ್ಥಿತಿಯಲ್ಲಿದ್ದ ಈ ಪ್ರತಿಯ ಬೆನ್ನಿಗೆ ಹೊಸದಾಗಿ ಕೆಂಪು ಬಟ್ಟೆಯನ್ನು ಅಂಟಿಸಿ ದುರಸ್ತಿಗೊಳಿಸಲಾಗಿದೆ. ಮೊದಲಿನ ೫ ಚಿತ್ರಗಳು ಹರಿದುಹೋಗಿದ್ದು ಸಿನಿಮಾ ರೀಲಿನಂತೆ ಏಕ ಪ್ರಕಾರವಾಗಿ ಉದ್ಧರಣೆ ಪಟಲಗಳನ್ನು ಬಿಡಿಸಲಾಗಿದೆ. ಸಾಮಾನ್ಯವಾಗಿ ಹಳ್ಳಿಯಲ್ಲಿ ಹಿರಿಯರು ಇವುಗಳಿಗೆ ನಂದಿಪಟ



ವೆಂದು ಕರೆಯುತ್ತಾರೆ. ಪ್ರಾಯಶಃ ವೃಷಭನ ಚಿತ್ರವಿರುವುದರಿಂದ (ವೃಷಭೋದ್ಧರಣೆ) ಆ ಹೆಸರು ಬಂದಿರಬಹುದು.

ಈ ಎರಡು ಉದ್ಧರಣೆಯ ಪಟಲಗಳಿಗೆ ಸಂಬಂಧಿಸಿದಂತೆ (ಕ್ರಿ. ಶ. ೩೮೦) ಕಂಪ್ಲಿ ಕಲ್ಗುಡಿ ಸಿದ್ಧಪ್ಪ ಅವರ ಮನೆಯಲ್ಲಿ ದೊರೆತ ಉದ್ಧರಣೆ ವಾಚ್ಯದ ಕಾಗದ ಹಸ್ತಪ್ರತಿ ಸುಸ್ಥಿಯಲ್ಲಿದ್ದು ೩೯ ಪುಟಗಳಲ್ಲಿ ೨೩ ಉದ್ಧರಣೆಗಳ ವಿವರಣೆಯನ್ನು ಪರಿಚಯಿಸಲಾಗಿದೆ. ಕೊನೆಯಲ್ಲಿ 'ಪ್ಲವಂಗ ಸಂವತ್ಸರದ ಚೈತ್ರ ಶುದ್ಧ ೨ ಯಿಂದುವಾರದಲ್ಲು ಬೆಂಗಳೂರಲ್ಲಿ ಇರುವ ಕೋಟಿ ಲಿಂಗಶಾಸ್ತ್ರಿ ಕುಮಾರ ಶರಭಯ್ಯನವರು ಬರೆದು ಕೊಟ್ಟದ್ದು, ಕಂಪಲಿಯಲ್ಲಿ ಇರುವ ಕಲ್ಲುಗುಡಿ ದೊಡ್ಡಪ್ಪನವರಿಗೆ ಉದ್ಧರಣೆ ವಾಚ್ಯದ ವಹಿ ರುಜು ರುಜು' ಎಂದು ಲಿಪಿಕಾರ ಬರೆದ ಕಾಲ ಹಾಗೂ ತನ್ನ ಮಾಹಿತಿಯನ್ನು ನೀಡಿದ್ದಾನೆ. ೧೨" × ೯.೫" ಅಳತೆಯಲ್ಲಿರುವ ಇದು ಗದ್ಯ ಪ್ರಕಾರವನ್ನು ಒಳಗೊಂಡಿದೆ. ರಕ್ಷಾಪುಟದ ಮೇಲಿನ ೩೮೧ರ ಉದ್ಧರಣೆಯಂತೆ ದಪ್ಪನೆಯ ಕೆಂಪುಬಟ್ಟೆಯಿಂದ ಹೊಲಿಯಲ್ಪಟ್ಟ ಅಂಚಿನ ಸುತ್ತಲೂ ಜರಿಬಟ್ಟೆಯನ್ನು ಅಲಂಕಾರಕ್ಕಾಗಿ ಹೆಣೆಯಲ್ಪಟ್ಟಿದೆ.

**ಮಹತ್ವ :**

೧ ವಸ್ತು ನಿರ್ದೇಶನ ಇಲ್ಲಿಯ ಮೂಲ ಉದ್ದೇಶವಾಗಿದ್ದರೂ ವ್ಯಕ್ತಿ ನಿರ್ದೇಶಕಗಳಾಗಿ ಬೆಳೆದು ಬಂದಿರುವುದರಿಂದ ಗುರು-ಜಂಗಮ ಮುಂತಾದವುಗಳ ಪರಿಚಯಕ್ಕೆ ಸಹಕಾರಿ ಯಾಗುತ್ತವೆ.

೨. ಕಲೆ-ಸಾಹಿತ್ಯ ಸಂಸ್ಕೃತಿಗಳ ತ್ರಿವೇಣಿ ಸಂಗಮವಾದ ಉದ್ಧರಣೆಗಳು ಚಿತ್ರಕಲಾ ಪರಂಪರೆಗೆ ವೀರಶೈವರ ಕೊಡುಗೆಯಾಗಿ ನಿಂತಿವೆ. ಹೀಗಾಗಿ ಬಣ್ಣಗಾರಿಕೆಯಲ್ಲಿ ತತ್ವವನ್ನು ಬಣ್ಣಿಸುವ ತಂತ್ರಗಾರಿಕೆ ಕಲಾರಾಧನೆಗೆ ಮತ್ತೊಂದು ಕೌಶಲ್ಯವಾಗಿದೆ. ಸಾಹಿತ್ಯ ಸಂಸ್ಕೃತಿಯ ಪ್ರತಿನಿಧಿಗಳಾದ ಉದ್ಧರಣೆಗಳು ವೀರಶೈವದ ಕೆಲವು ಸಂಸ್ಕಾರಗಳ ಹಿಂದಿರುವ ವೈಚಾರಿಕತೆಯನ್ನು ಬಿಚ್ಚಿ ತೋರಿಸುತ್ತವೆ. ಉದಾಹರಣೆ ಅನಾದಿ ಜಂಗಮೋದ್ಧರಣೆ ಗಮನಿಸಿದರೆ ಷಡಕ್ಷರಿ ಮಂತ್ರದ ಬೀಜಾಕ್ಷರಗಳಾದ 'ಓಂ=ತಲೆಯಲ್ಲಿ ನ=ಎಡದ ಭುಜದಲ್ಲಿ, ಮಃ ಬಲದ ಬುಜದಲ್ಲಿ, ಶಿ=ನಾಭಿ ಕೆಳಭಾಗದಲ್ಲಿ, ವಾ=ಬಲಗಾಲಿನ ಮಂಡೆಯಲ್ಲಿ, ಯ=ಎಡಗಾಲಿನ ಮಂಡೆಯ ಲ್ಲಿದ್ದು, ಶರಣಪ್ರಸಾದ ತೆಗೆದುಕೊಳ್ಳುವಾಗ ಜಂಗಮರ ಆ ಭಾಗಗಳನ್ನು ಪತ್ರಿ-ಪುಷ್ಪ-ಗಂಧಗಳಿಂದ ಪೂಜಿಸುವುದರ ಹಿಂದಿರುವ ಉದ್ದೇಶ ವ್ಯಕ್ತಿ ರೂಪದ ಜಂಗಮ ಪೂಜೆಯಲ್ಲಿ ಬದಲಾಗಿ ತತ್ವ ರೂಪದ ಬೀಜಾಕ್ಷರಗಳನ್ನು ಹಾಗೆಯೇ ಅಖಂಡತ್ವವೇ ಭಕ್ತನ ಸ್ವರೂಪ, ಪರಿಪೂರ್ಣತ್ವವೇ ಗುರು ವೈಶಿಷ್ಟ್ಯ ಪ್ರಕಾಶತ್ವವೇ ಜಂಗಮ ಗುಣ ಹಾಗೂ ಪರಮಾನಂದವೇ ಪ್ರಸಾದದ ಲಕ್ಷಣವೆಂದು ಅರ್ಥವಂತಿಕೆಯಿಂದ ವ್ಯಾಖ್ಯಾನಿಸಿದ್ದಾರೆ.

೩. ಭೂತಕಾಲದ ಮನ (ಸ್ಮೃತಿ), ವರ್ತಮಾನದ ಬುದ್ಧಿ ಹಾಗೂ ಭವಿಷ್ಯತ್ತಿನ ಭಾವಗಳನ್ನು ಕೇಂದ್ರೀಕರಿಸುವ ಸುಚಿತ್ತ-ಸಚಿತ್ರ ಸಾಹಿತ್ಯವಾದ್ದರಿಂದ ಜೀವನದಲ್ಲಿ ಅವಧಾನ ಭಕ್ತಿ-ನಿಷ್ಠೆಗೆ ಪ್ರೇರಕ ವಾಗಿದೆ; ಉದ್ಧರಣೆ ಸಾಹಿತ್ಯ.

೪. ಜ್ಯೋತಿಷ್ಯ, ಸೂತ್ರ, ಗದ್ಯ, ಚಿತ್ರ, ಪದಪುಂಜ, ರೇಖೆ, ಭಾಷ್ಯ, ಶಾಸ್ತ್ರ, ಗಣಿತ ಮುಂತಾದ ರೂಪ-ಸ್ವರೂಪಗಳ ಸಮಗ್ರತೆ ಯನ್ನು ಇವುಗಳಿಂದರಿಯಲು ಸಾಧ್ಯವಿದೆ. ಶಿವಶರಣರು ಹಾಕಿಸಿದ ಈ ಶಿವಲಿಂಗಾಂಕಿತ ಶಾಸನಗಳೆಂಬ ಉದ್ಧರಣೆಗಳು ಉಪೇಕ್ಷೆಗೆ ಈಡಾಗಿದ್ದು ಇವುಗಳ ಸಂಗ್ರಹ ಸಂರಕ್ಷಣೆ ಹಾಗೂ ವಿಶ್ಲೇಷಣೆಗಳು ತೀವ್ರವಾಗಿ ನಡೆಯಬೇಕಾಗಿರುವುದು ಅಪೇಕ್ಷಣೀಯ.



## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು


*೧. **ಗೌರವ.** ಪ್ರೊ. ಎಸ್. ಎಸ್. ಭೂಸನೂರ ಮಠ ಅಭಿನಂದ ಗ್ರಂಥ, (ಸಂ.) ಡಾ. ಬಿ. ವ್ಹಿ. ಶಿರೂರ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ತೋಂಟದಾರ್ಯ ಮಠ, ಗದಗ, ಪುಟ ೧೫೪-೧೬೭.

*೨. ಅದೇ., (ಪ್ರೊ. ಎಸ್. ಎಸ್. ಭೂಸನೂರ ಮಠ ಅಭಿನಂದನ ಗ್ರಂಥ) ಸಂ: ಡಾ. ವ್ಹಿ. ಶಿರೂರ, ವೀರಶೈವ ಅಧ್ಯಯನ ಸಂಸ್ಥೆ; ಶ್ರೀ ತೋಂಟದಾರ್ಯ ಮಠ, ಗದಗ, ಪುಟ : ೧೫೫.

ಡಾ|| ಬಿ. ನಂಜುಂಡಸ್ವಾಮಿ*

# ಕಾಲಜ್ಞಾನ ರಚನೆ ಮಾಡಿದ ನೀಲಮ್ಮ ಯಾರು?

ಕಳೆದ ನೂರೈವತ್ತು ವರ್ಷದಿಂದ ಕನ್ನಡ ನಾಡಿನ ಶಾಸನಗಳು, ಹಸ್ತಪ್ರತಿಗಳು ಲಿಖಿತ ಕಾಗದ ಪತ್ರಗಳ ಅಧ್ಯಯನ ನಡೆಯುತ್ತಾ ಇದ್ದರೂ ಇನ್ನು ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ಕಂಡು ಕೊಳ್ಳಬೇಕಾಗಿದೆ. ಅಂತಹ ಸಮಸ್ಯೆ "ಕಾಲಜ್ಞಾನ" ರಚನೆ ಮಾಡಿದ ನೀಲಮ್ಮನ ಬಗ್ಗೆಯೂ ಉಂಟಾಗಿದೆ.

ಕವಿ ಚರಿತ್ರೆಕಾರರು ಬಸವಣ್ಣನವರ ಧರ್ಮಪತ್ನಿ ನೀಲಾಂಬಿಕೆ ಅಥವಾ ನೀಲಮ್ಮನವರ ವಿಷಯವನ್ನು ಈ ರೀತಿ ಬರೆದಿದ್ದಾರೆ. ನೀಲಮ್ಮನ ಕಾಲ ಸು. ೧೧೬೦. ಈಕೆ ಪ್ರಸಾದ ಸಂಪಾದನೆ ಯನ್ನು, ಒಂದು ಕಾಲಜ್ಞಾನವನ್ನೂ ಬರೆದಿರುವಂತೆ ತಿಳಿದುಬರುತ್ತದೆ. ಇವಳು ವೀರಶೈವ ಕವಿ. ಬಸವನ ಸೋದರ ಮಾವನಾದ ಬಲದೇವ ಮಂತ್ರಿಯ, ತಮ್ಮನಾದ ಸಿದ್ದಣ್ಣ ಮಂತ್ರಿಯ ಮಗಳು. ಈಕೆಗೆ ಬಸವನು ಸಂಗಮೇಶ್ವರನ ಕೈಯಲ್ಲಿ ದೀಕ್ಷೆ ಕೊಡಿಸಿ ಈಕೆಯನ್ನು ಮದುವೆಯಾದನು. ನೀಲಮ್ಮನ ಸ್ತೋತ್ರ, ನೀಲಾಂಬಿಕೆ ಪಂಚ ವಿಂಶಂತಿ, ನೀಲಮ್ಮನ ತ್ರಿವಿಧಿ ಮೊದಲಾದ ಗ್ರಂಥಗಳು ಇವಳ ಸ್ತುತಿ ರೂಪಕವಾಗಿದೆ, ಎಂದಿದ್ದಾರೆ. ಕನ್ನಡ ನಾಡಿನ ಹಿರಿಯ ಹಸ್ತಪ್ರತಿ ತಜ್ಞರಾದ ಎಸ್. ಶಿವಣ್ಣನವರು, ಸಹಸ್ರಾರು ಹಸ್ತಪ್ರತಿಗಳನ್ನು ಪರಿಶೀಲಿಸಿದ್ದಾರೆ. ಕರ್ನಾಟಕ ಸರಕಾರದ ಸಾಹಿತ್ಯ ಅಕಾಡೆಮಿಯ ಮುತ್ತಿನಹಾರ ಮಾಲೆಯಲ್ಲಿ ೧೯೮೮ರಲ್ಲಿ ಎಸ್. ಶಿವಣ್ಣನವರು "ಹೊಸ ವಚನಗಳು" ಗ್ರಂಥದ ಪ್ರಸ್ತಾವನೆಯಲ್ಲಿ ನೀಲಮ್ಮನ ಬಗ್ಗೆ ಈ ಮಾಹಿತಿ ನೀಡಿದ್ದಾರೆ. "ಬಸವಣ್ಣನವರ ವಿಚಾರ ಪತ್ನಿ. ಕಾಲ ೧೨ ನೆಯ ಶತಮಾನ. 'ಸಂಗಯ್ಯ' ಅಂಕಿತದ ೧೨೬ ವಚನಗಳು ಪ್ರಕಟಿತ. ಪ್ರಸ್ತುತ ಸಂಕಲನದಲ್ಲಿ ಈಕೆಯ ೧೬೧ ಅಪ್ರಕಟಿತ ವಚನಗಳಿವೆ. ಕವಿಚರಿತೆಕಾರರು "ಪ್ರಸಾದ ಸಂಪಾದನೆ" ಎಂಬ ಕೃತಿ ಈಕೆಯದೆಂದು ಹೆಸರಿಸಿದ್ದಾರೆ. ಕೃತಿ ಅಲಭ್ಯ. ಈಕೆಯ ಬಗೆಗೆ ಕನ್ನಡ-ಸಂಸ್ಕೃತಗಳಲ್ಲಿ ಸ್ತೋತ್ರರೂಪವಾದ ಹಲವಾರು ಕೃತಿಗಳಿವೆ" ಎಂದಿದ್ದಾರೆ.

ಕಾಲಜ್ಞಾನ ಸಂಗ್ರಹ ಭಾಗ ೧ನ್ನು ಶಾಸ್ತ್ರ ಶುದ್ಧವಾಗಿ ಪ್ರಕಟಿಸಿದ ಕೀರ್ತಿ ದೇವನೂರು ಮಠದ ಲಿಂ|| ಶಿವಬಸವ ಸ್ವಾಮಿಗಳವರದು. ಮೈಸೂರಿನ ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯದಿಂದ ೧೯೪೬ರಲ್ಲಿ ಪ್ರಕಟಗೊಂಡು, ಈ ಗ್ರಂಥದಲ್ಲಿ i. ಸಂಗನ ಬಸವರಾಜ ದೇವರ ಕಾಲಜ್ಞಾನ ವಚನ ii. ಪ್ರಭುದೇವರ ಕಾಲಜ್ಞಾನ ವಚನ iii. ಚೆನ್ನಬಸವೇಶ್ವರ ದೇವರ ಕಾಲಜ್ಞಾನ iv. ನಂಜೇಶನ ಕಾಲಜ್ಞಾನ v. ಕರಸ್ಥಲದ ನಾಗಲಿಂಗಯ್ಯನ ಕಾಲಜ್ಞಾನ vi. ರುದ್ರಮುನಿಸ್ವಾಮಿ ಕಾಲಜ್ಞಾನ vii. ಎಮ್ಮೆ ಬಸವಣ್ಣನ ಕಾಲಜ್ಞಾನ viii. ನೀಲಮ್ಮನ ಕಾಲಜ್ಞಾನ ಪ್ರಕಟ ವಾಗಿವೆ.

ಎಮ್ಮೆಬಸವಣ್ಣನ ಮತ್ತು ನೀಲಮ್ಮನ ಬಗ್ಗೆ ಪರಿಚಯ ವಾಕ್ಯ ಗಳನ್ನು ಬರೆದಿರುವ ಶಿವಬಸವ ಸ್ವಾಮಿಗಳು, ಕವಿಚರಿತ್ರೆಕಾರರು ಬರೆದ ವಿಷಯವನ್ನು ಚರ್ಚಿಸಿದ್ದಾರೆ. ನೀಲಮ್ಮನ ಬಗ್ಗೆ ಬರೆಯುವಾಗ ಕೆಲವು ವಚನಗಳನ್ನು ರಚಿಸಿರುತ್ತಾರೆ ಎಂದಿದ್ದಾರೆ. "ನೀಲಮ್ಮನ ಕಾಲಜ್ಞಾನ" ಎಂದ ತಕ್ಷಣ ಲಿಂ|| ಶಿವಬಸವ ಸ್ವಾಮಿಗಳ ಗಮನವೆಲ್ಲ ಬಸವಣ್ಣನವರ ಧರ್ಮಪತ್ನಿ ಕಡೆ ಹೋದ್ದರಿಂದ ಆ ಬಗ್ಗೆ ಅವರು ವಿಶೇಷವಾಗಿ ಗಮನಿಸಲಿಲ್ಲ ವೆನಿಸುತ್ತದೆ.

"ಎಮ್ಮೆ ಬಸವನ ಕಾಲಜ್ಞಾನ ಸಾಹಿತ್ಯ" ಶಾಸ್ತ್ರ ಶುದ್ಧವಾಗಿ ಹಂಪೆ ಕನ್ನಡ ವಿಶ್ವವಿದ್ಯಾನಿಲಯದಿಂದ ಪ್ರಕಟಿಸಿದ ಡಾ|| ಎಫ್. ಟಿ. ಹಳ್ಳಿಕೇರಿಯವರು, ಪ್ರಕಟಿತ ಕಾಲಜ್ಞಾನ ಸಾಹಿತ್ಯದ ಜೊತೆಗೆ ಈವರೆಗೂ ಅಚ್ಚಾಗದೆ ಹಸ್ತಪ್ರತಿಯಲ್ಲಿ ಇದ್ದ ಹೆಚ್ಚಿನ ಕಾಲಜ್ಞಾನ ಸಾಹಿತ್ಯವನ್ನು ಶಾಸ್ತ್ರ ಶುದ್ಧವಾಗಿ ಪ್ರಕಟಿಸಿ ಐತಿಹಾಸಿಕ ವಿಷಯಗಳನ್ನು ಸಂಗ್ರಹಿಸಿ, ಪ್ರಸ್ತಾವನೆ ಬರೆದು ಅನುಬಂಧದಲ್ಲಿ, ಎಮ್ಮೆ ಬಸವನ ಕುರಿತ ತಾಮ್ರಶಾಸನ, ಸಿದ್ಧನಂಜೇಶನ ಗುರುರಾಜ ಚಾರಿತ್ರದಲ್ಲಿ ಬರುವ ಎಮ್ಮೆಬಸವನ ವಿವರಗಳು, ಈ ಹಿಂದೆ ಎಸ್. ಶಿವಣ್ಣನವರು 'ಬಸವಪಥ' ಸಂಪುಟ ೩ ಸಂಚಿಕೆ ೩ ೧೯೮೧ರಲ್ಲಿ ಪ್ರಕಟಿಸಿದ ಕುಡಿತಿನಿ (ಎಮ್ಮೆ) ಬಸವೇಶನ ದಂಡಕ ಮತ್ತು ಎಮ್ಮೆ ಬಸವನ ಕಾಲಜ್ಞಾನದ ಪದ್ಯಸೂಚಿ, ಹೆಚ್ಚಿಗೆ ದೊರೆತ ಕಾಲಜ್ಞಾನದ ಪದ್ಯಸೂಚಿ, ನಾಮಸೂಚಿಯನ್ನು ಕೊಟ್ಟಿದ್ದಾರೆ. ಆದರೆ ನೀಲಮ್ಮ ಯಾರು? ಎಮ್ಮೆಬಸವಣ್ಣನ ಕಾಲಜ್ಞಾನ ದಲ್ಲಿ ಆಕೆಯ ಕಾಲಜ್ಞಾನ ಸೇರಿದ್ದು ಹೇಗೆ? ಲಿಂ|| ಶಿವಬಸವ ಸ್ವಾಮಿಗಳು ಕವಿ ಪರಿಚಯದಲ್ಲಿ ಬರೆದ ವಿಷಯ, ಇವು ಡಾ|| ಎಫ್. ಟಿ. ಹಳ್ಳಿಕೇರಿಯವರಲ್ಲಿ ಬಂದಿಲ್ಲ.

ಎಮ್ಮೆ ಬಸವಣ್ಣನ ಪತ್ನಿ ನೀಲಮ್ಮನ ಬಗ್ಗೆ ಸಿದ್ಧನಂಜೇಶನ ಗುರುರಾಜ ಚಾರಿತ್ರ ಸಂಧಿ ೧೩, ೧೦೦-೧೦೧ ಪದ್ಯಗಳಲ್ಲಿ ಸ್ಪಷ್ಟವಾದ ಮಾಹಿತಿ ಇದೆ.

*ಪಂಡಿತ್ ತಾರಾನಾಥ್ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಗಾಯಿತ್ರಿ ಟಾಕೀಸ್ ಪಕ್ಕ, ಬಿ. ಹೆಚ್. ರಸ್ತೆ, ತುಮಕೂರು - ೫೭೨ ೧೦೨.

ಎಂದಿನಂತಯ್ಯನಾ ರಾಜಬೀದಿಯೊಳು ಕೋ
ಎಂದು ಕೊಗುತ ಡಂಗುರವ ಹೊಯ್ದು ಸಾರುತಿರೆ
ಬಂದುದೀ ಪಟ್ಟಣಕೆ ಕೇಡು ದಿಟದಿಟವೆಂದು ನಿಶ್ಚಯಿಸಿದರು ಸಕಲರು
ಬಂದ ಭಕ್ತರು ಬಸವಣಯ್ಯನರ್ಧಾಂಗಿಗಂ
ವಂದಿಸುತ ಕೇಳಲಾತನ ಮಾತು ಹುಸಿಯಲ್ಲ
ಮುಂದೆ ಹಂಪೆಯ ಗೋಪರಕ್ಕಳಿವು ತಪ್ಪದು. ಸುವ್ವಿ
ಎಂದೊನಕೆವಾಡ ॥೧೦೦॥

* * * *

ಹಾಡುತ್ತ ಕುಟ್ಟುತಿರಲೊಬ್ಬಯ್ಯ ಭಿಕ್ಷೆಯಂ
ಬೇಡಬರೆ ನೆಗಹಿದೊನಕೆಯ ಬಿಟ್ಟು ಭಿಕ್ಷೆಯಂ
ನೀಡುತಿರೆ ವನಕೆಯಂತರದಲ್ಲಿ ನಿಂದಿರ್ದುದಾ ವ್ಯಾಸ ಕರವ ನೆಗಹೆ
ನಾಡೆ ನಂದೀಶ್ವರಂ ತಡೆದು ನಿಲಿಸಿದ ತೆರಂ
ರೂಢಿಗಚ್ಚರಿಯೆಂದು ಸರ್ವಜನರೆಲ್ಲ ಕೊಂ
ಡಾಡೆ ದಂಪತಿಗಳೊಪ್ಪಿರ್ದರೆಂದೊರೆದನಾ ನಂಜೇಶ ಚೆದ್ದೀಶನು ॥೧೦೧॥

ಎಂದಿನಂತೆ ಆ ಅಯ್ಯನು ರಾಜಬೀದಿಯಲ್ಲಿ ಕೂಗುತ್ತ ಡಂಗುರ ಹೊಯ್ಯಲು, ಎಲ್ಲರೂ ಪಟ್ಟಣಕ್ಕೆ ಕೇಡು ದಿಟವೆಂದು ನಿಶ್ಚಯಿಸಿದರು. ಬಸವಯ್ಯನ ಅರ್ಧಾಂಗಿ, 'ಆತನ ಮಾತು ಹುಸಿಯಲ್ಲ', ಹಂಪೆಯ ಗೋಪುರಕ್ಕೆ ಅಳಿವು ತಪ್ಪದು ಸುವ್ವೀ, ಎಂದು ಒನಕೆವಾಡು ಹಾಡುತ್ತ ಕುಟ್ಟುತ್ತಿರಲು ಜಂಗಮನು ಭಿಕ್ಷೆಗೆ ಬರಲು ನೆಗಹಿದೊನಕೆಯನ್ನು ಅಂತರಂಗದಲ್ಲಿ ನಿಲ್ಲಿಸಿ, ಒನಕೆ ಯಾವ ರೀತಿ ನಿಂತಿತ್ತು ಅಂದರೆ : ವ್ಯಾಸ ಕಾಶಿಯ ಗಂಗಾನದಿ ತೀರದಲ್ಲಿ ಹರಿ ಸರ್ವೋತಮತ್ವವನ್ನು ಕೈ ಎತ್ತಿ ಹೇಳಿದಾಗ ನಂದೀಶ್ವರ ಅವನ ಭುಜಸ್ತಂಭನ ಮಾಡಿದ್ದು, ಆಗ ಅವನ ಕೈ ಹೇಗೆ ನಿಂತಿತ್ತು, ಆ ತರಹ ಒನಕೆ ಅಂತರಿಕ್ಷದಲ್ಲಿ ನಿಂತಿತ್ತು. ಆಗ ಆ ನೀಲಮ್ಮ ಒಳಗಲ್ಲಿನಲ್ಲಿ ಇದ್ದ ಅಕ್ಕಿಯನ್ನು ಭಿಕ್ಷೆ ಬೇಡಲು ಬಂದ ಜಂಗಮರಿಗೆ ನೀಡಿದಳು.

ಇದು ಮೇಲಿನ ಎರಡು ಪದ್ಯದ ಒಟ್ಟು ಭಾವಾರ್ಥ. ಆ ಭತ್ತವನ್ನು ಕುಟ್ಟುವಾಗ ಹೇಳಿದ ಕಾಲಜ್ಞಾನವೇ ಮುದ್ರಿತವಾಗಿರುವ ಕಾಲಜ್ಞಾನ. ಇಲ್ಲಿ ಸ್ಪಷ್ಟವಾಗಿ ಎಮ್ಮೆಬಸವಣ್ಣನ ಪತ್ನಿ ಕಾಲಜ್ಞಾನ ವನ್ನು ಉಸುರಿದ್ದು ಸ್ಪಷ್ಟವಾಗಿದೆ. ಎಮ್ಮೆ ಬಸವಣ್ಣನ ಕಾಲಜ್ಞಾನದ ಕಡೆಯಲ್ಲಿ ನೀಲಮ್ಮನ ಕಾಲಜ್ಞಾನ ಪ್ರಾರಂಭವಾಗುವ ಮುಂಚೆ ಇರುವ ಗದ್ಯ ಆಕೆ ಏಕೆ ಕಾಲಜ್ಞಾನವನ್ನು ಹೇಳಬೇಕಾಯಿತು ಎಂಬುದನ್ನು ತಿಳಿಸುತ್ತದೆ. ಆ ಭಾಗವನ್ನು ಯಥಾವತ್ತಾಗಿ ಉಲ್ಲೇಖಿಸಲಾಗಿದೆ.

॥ವಚನ॥

ಈ ರೀತಿಯಲ್ಲಿ ಸಾರುತ್ತ ಇರಲಾಗಿ, ದೊರೆಗಳು ನಿರ್ಬಂಧನವಂ ಮಾಡುತ್ತಿರೆ ವಿದ್ಯಾನಗರದ ಪ್ರಜೆ ಪ್ರಭುಗಳು ಬೆರಗಾಗಿ ಯೋಚನೆಗೊಂಡು, ಬಸವಣ್ಣನ ಮಠಕ್ಕೆ ಬಂದು ನಿಂದಿರಲು, ಆ ನೀಲಲೋಚನೆಯು ಭಕ್ತರಿಗೆ ಎದುರಾಗಿ ಬಂದು ನಮಸ್ಕಾರವಂ ಮಾಡಿ ಕುಳ್ಳಿರಿಸಿ, ರಾಜಾನ್ನದ ನೆಲ್ಲಂ ತಂದು ಒರಳಿಗೆ ಹಾಕಿ ತಳಸಿ ಪಾಡುತಿರ್ದಳದೆಂತೆನೆ.

ಎಮ್ಮೆಬಸವಣ್ಣನ ಮಠದಲ್ಲಿ ಎಮ್ಮೆಬಸವಣ್ಣನ ಪತ್ನಿ, ದೊರೆ ತನ್ನ ಗಂಡನನ್ನು ನಿರ್ಬಂಧ ಮಾಡಿದ್ದರಿಂದ, ತಾನೆ ಒರಳಲ್ಲಿ ಭತ್ತವನ್ನು ಹಾಕಿಕೊಂಡು ಕುಟ್ಟುತ್ತಾ ಕಾಲಜ್ಞಾನವನ್ನು ಹೇಳಿದ್ದು ಈ ಮೇಲಿನ ಗದ್ಯದಿಂದ ಸ್ಪಷ್ಟವಾಗುತ್ತದೆ. ನೀಲಮ್ಮನ ಕಾಲಜ್ಞಾನದ ಎರಡನೇ ಪದ್ಯ ನೋಡಿ.

ಮಾತಂಗ ವಳಿದಾವು ಮನ್ಮಥ ಕೆಟ್ಟಾವು।
ಆತನ ಮಾತು ಹುಸಿಯಲ್ಲ ಸುವ್ವಿ।
ಆತನ ಮಾತು ಹುಸಿಯಲ್ಲ ಹಂಪೆಯ
ಗೋಪುರವೆಲ್ಲಾ ಲಯವೆದ್ದೂ ಸುವ್ವಿ ॥೨॥

ನಂಜನಗೂಡು ರಾಘವೇಂದ್ರ ಸ್ವಾಮಿಗಳ ಮಠದ ಸಂಗ್ರಹದಲ್ಲಿ ಇರುವ ತಾಮ್ರಶಾಸನಗಳಲ್ಲಿ ಎಮ್ಮೆ ಬಸವೇಂದ್ರನಿಗೆ ಸಂಬಂಧಪಟ್ಟ ಒಂದು ತಾಮ್ರ ಶಾಸನವಿದೆ. ಈ ಶಾಸನ ಹಿಂದೆ ೧೯೪೪ ಎಂ.ಎ.ಆರ್.ನಲ್ಲಿ ಪ್ರಕಟವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿರುವ E.C.III ನಂಜನಗೂಡು ೧೧೫ನೇ ಶಾಸನವಾಗಿ ಅಚ್ಚಾಗಿದೆ. ೯೫ ಸಾಲಿನ ನಾಗರಿ ಲಿಪಿಯು ಈ ಶಾಸನದಲ್ಲಿ ಎಮ್ಮೆಬಸವೇಂದ್ರನನ್ನು "ವೀರಶೈವಾಗಮಜ್ಞಯೆ" ಎಂದು ಕರೆಯಲ್ಪಟ್ಟಿದೆ. ಈ ಶಾಸನದ ಕಾಲ "ಅಬ್ಧ್ಯಂಗಾಮ್ನಾಯ ಶೀತಾಂಶುಗಣಿತೇ ಶಕವತ್ಸರೆ। ಶುಭಕೃದ್ವತ್ಸರೇ ಮಾಸೀಮಾಘೇ ಭಾರ್ಗವವಾಸರೇ। ಕೃಷ್ಣಪಕ್ಷೇ ಚತುರ್ದಸ್ಯಾಂ ಸಿವರಾತ್ರ್ಯಾಂ ಮಹಾತಿಥೌ।" ಎಂದು ಶಾಸನದಲ್ಲಿ ಲಿಖಿಸಲ್ಪಟ್ಟಿದೆ. ಇದು ಶಾ.ಶಕ ೧೪೬೪ ಶುಭಕೃತ್ ಸಂವತ್ಸರ ಮಾಘ ಬ ೧೪ ಶಿವರಾತ್ರಿ ಶುಕ್ರವಾರ. ಈ ಕಾಲಮಾನ ಇಂಗ್ಲೀಷ್ ತೇದಿ ಕ್ರಿ. ಶ. ೧೫೪೩ ಫೆಬ್ರವರಿ ೨ ಶುಕ್ರವಾರ ಮಹಾಶಿವರಾತ್ರಿಗೆ ಸರಿ ಹೊಂದುತ್ತದೆ.

ಶಾಸನದಲ್ಲಿ ಎಮ್ಮೆಬಸವಣ್ಣನವರು ಜಾಂಬೂನದಿ ತೀರ ದಲ್ಲಿ ದಿವ್ಯ ಕೋದಂಡ ಜಂಬುನಾಥ ಸ್ವಾಮಿಯ ಪ್ರಭಾವದಿಂದ ತ್ರಿಕಾಲಜ್ಞಾನವನ್ನು ಪಡೆದಿದ್ದರು. ಶ್ರೀಕಂಠನ ಪರಮ ಭಕ್ತರು. ನಿರಹಂಕಾರರು. ಲೋಕಹಿತವೇ ಅವರ ಪರಮಗುರಿ. ವೀರಶೈವಾಗಮಜ್ಞರು, ಅರಿಷಡ್ವರ್ಗಾದಿ ಅಂತಃಶತ್ರುಗಳನ್ನು ಜಯಿಸಿ ತಪಸ್ಸಿನಲ್ಲಿ ನಿರತರಾಗಿದ್ದವರು ಎಂದಿದೆ. ಈ ಶಾಸನದಲ್ಲಿ ಎಮ್ಮೆ ಬಸವೇಂದ್ರರರು ಪರಮ ವಿರಕ್ತರೆ, ವಿವಾಹಿತರೆ ತಿಳಿಯುವುದಿಲ್ಲ. ಶಾಸನದಲ್ಲಿ "ಶಿಷ್ಯ ಪ್ರಶಿಷ್ಯ ಸಂಭೋಗ್ಯಂ ಕಮಾದಾಚಂದ್ರತಾರಕಂ" ಎಂದಿದೆ. ನಾವು ಕೊಟ್ಟ ಕೊಡುಗೆ ತಮ್ಮ ಶಿಷ್ಯ ಪ್ರಶಿಷ್ಯರು ಆಚಂದ್ರಾರ್ಕವಾಗಿ ಅನುಭವಿಸಲಿ ಎಂದಿರುವುದರಿಂದ, ಇವರು

ಪರಮ ವಿರಕ್ತರೆ ಇರಬಹುದು ಎಂದು ಅನುಮಾನ ಬರಬಹುದು. ವೀರಶೈವ ಮಠ ಪರಂಪರೆಯಲ್ಲಿ ಎರಡು ಪ್ರಮುಖವಾದ ಪರಂಪರೆ ಇದೆ. ಒಂದು ಪುತ್ರವರ್ಗ; ಇನ್ನೊಂದು ಶಿಷ್ಯ ವರ್ಗ. ಎಮ್ಮೆ ಬಸವೇಂದ್ರರರು ಪುತ್ರವರ್ಗ ಪರಂಪರೆಗೆ ಸೇರಿರುವ ಸಾಧ್ಯತೆ ಇದೆ. ತಂದೆಯ ಹಿರಿಯ ಮಗನಿಗೆ ಪಟ್ಟವಾಗಿ ಅವನಿಗೆ ಮಠದ ಎಲ್ಲಾ ಆಡಳಿತ ಹಕ್ಕು ಬರುತ್ತದೆ. ಅವನನ್ನು ಕರಸಂಜಾತ ಶಿಷ್ಯ ಎಂದು ಸಹ ಗಣಿಸುತ್ತಾರೆ. ಇಂತಹ ಒಂದು ಪರಂಪರೆಯ ಮಠಗಳು ಹಲವು ಇದ್ದು ಇಂದಿಗೂ ಬಳ್ಳಾರಿಯಲ್ಲಿರುವ "ಮರಿಸ್ವಾಮಿಗಳ ಮಠ" ಪುತ್ರವರ್ಗ ಪರಂಪರೆ ಮಠವಾಗಿದೆ. ಷಟ್‌ಸ್ಥಲಬ್ರಹ್ಮ ಮರಿಸ್ವಾಮಿಗಳ ಸಮಾಧಿ ಪಕ್ಕ ಅವರ ಸಹಧರ್ಮಿಣಿಯವರ ಸಮಾಧಿಯನ್ನು ಮಾಡಲಾಗಿದೆ. ಎಮ್ಮೆ ಬಸವೇಂದ್ರ ಮಠ ಪರಂಪರೆಯ ಕಾಗದ ಪತ್ರಗಳು, ಅವರ ಕುರುಹು ಇರುವ ಅವರಿಗೆ ನೇರವಾಗಿ ಸಂಬಂಧ ಇರುವ ಮಠ ಮಾನ್ಯಗಳಲ್ಲಿ ಕ್ಷೇತ್ರಕಾರ್ಯ ಮಾಡಿದರೆ ಇನ್ನು ಹೆಚ್ಚಿನ ವಿಷಯ ಲಭ್ಯವಾಗುತ್ತದೆ. ಸ್ವಲ್ಪ ಕಷ್ಟಪಟ್ಟರೆ ಈ ನೀಲಮ್ಮನವರ ಸಮಾಧಿಯು ಗೊತ್ತಾಗಬಹುದು.

ಈ ಮೇಲಿನ ಅಧ್ಯಯನದಿಂದ ಕಾಲಜ್ಞಾನ ಬರೆದ ನೀಲಮ್ಮ ೧೬ನೇ ಶತಮಾನದ ಮಹಿಳೆ, "ಎಮ್ಮೆ ಬಸವೇಂದ್ರ"ರ ಧರ್ಮಪತ್ನಿ ಹೊರತು ಹನ್ನೆರಡನೇ ಶತಮಾನದ ಬಸವೇಶ್ವರರ ಧರ್ಮಪತ್ನಿ ನೀಲಮ್ಮ ಅಲ್ಲ, ಎಂದು ಸ್ಪಷ್ಟವಾಗಿ ಹೇಳಬಹುದು. ಎಮ್ಮೆ ಬಸವೇಂದ್ರ ರಚಿಸಿರುವ "ಬಿಲ್ಲಮರಾಯನ ಸಾಂಗತ್ಯ" ಕೃತಿ ಅಚ್ಚಾದರೆ ಆ ಕೃತಿಯ ಸೂಕ್ಷ್ಮ ಅಧ್ಯಯನದಿಂದ ನೀಲಮ್ಮನ ಬಗ್ಗೆ ಇನ್ನು ಹೆಚ್ಚಿನ ವಿಷಯ ಗೊತ್ತಾಗಬಹುದು.



ಡಾ|| ಜಿ. ವಿ. ಕಲ್ಲಾಪುರ*

# ಕೆಳದಿ ಸಂಶೋಧನಾಲಯದಲ್ಲಿರುವ ಶಿವತತ್ತ್ವ ರತ್ನಾಕರಂ ಹಸ್ತಪ್ರತಿ

ಹಸ್ತ ಪ್ರತಿಗಳು ನಾಡಿನ ಸಾಂಸ್ಕೃತಿಕ, ಐತಿಹಾಸಿಕ, ಧಾರ್ಮಿಕ, ವೈದ್ಯಕ ಮುಂತಾದ ಹಲವಾರು ಅಮೂಲ್ಯ ವಿಚಾರಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುವ ಅತ್ಯಂತ ಬೆಲೆ ಬಾಳುವ ವಸ್ತುವಾಗಿವೆ. ಕಾಗದದ ಆವಿಷ್ಕಾರಕ್ಕೆ ಮೊದಲು ಪ್ರಕೃತಿದತ್ತವಾದ ತಾಳೆ ಮರದ ಗರಿಗಳನ್ನು ಸಂಸ್ಕರಿಸಿ ಬೇಕಾದ ಆಕಾರಕ್ಕೆ ಕತ್ತರಿಸಿ ಬೇಕಾದ ಅಳತೆಯ ಕಟ್ಟುಗಳನ್ನು ಸಿದ್ಧಪಡಿಸಿಕೊಂಡು ಕೃತಿಗಳನ್ನು ಕೊರೆಯುತ್ತಿದ್ದರು. ಕಾಗದದ ಆವಿಷ್ಕಾರದ ನಂತರ ತಾಳೆ ಯೋಲೆಗಳ ಬರವಣಿಗೆ ನಿಂತುಹೋಯಿತು. ಆದರೆ ಕಾಗದ ಹಸ್ತಪ್ರತಿಗಳಿಗಿಂತ ತಾಡೋಲೆ ಹಸ್ತಪ್ರತಿಗಳು ಧೀರ್ಘಕಾಲ ಬಾಳಿಕೆ ಬರುತ್ತಿವೆ. ಅವುಗಳಿಗೆ ಹುಳ, ಗೆದ್ದಲು ಇತ್ಯಾದಿಗಳು ಲಗ್ಗೆ ಹಾಕದಂತೆ ಕಾಪಾಡಿಕೊಂಡು ಬರಬೇಕು. ನಾಡಿನ ಪ್ರತಿಷ್ಠಿತ ಸಂಶೋಧನಾಲಯವಾದ ಕೆಳದಿ ಸಂಶೋಧನಾಲಯದಲ್ಲಿ ೭೦೦ಕ್ಕೂ ಅಧಿಕ ತಾಳೆಯೋಲೆ ಹಸ್ತ ಪ್ರತಿಗಳು ಮತ್ತು ೮೦೦ಕ್ಕೂ ಅಧಿಕ ಕಾಗದ ಹಸ್ತಪ್ರತಿಗಳಿದ್ದು ಅವುಗಳನ್ನು ಸಾಂಪ್ರದಾಯಿಕ ಹಾಗೂ ವೈಜ್ಞಾನಿಕ ವಿಧಾನಗಳಿಂದ ಸಂರಕ್ಷಿಸಲಾಗುತ್ತಿದೆ.

ಕೆಳದಿ ಸಂಶೋಧನಾಲಯದಲ್ಲಿ ಅಮೂಲ್ಯವಾದ ಹಸ್ತ ಪ್ರತಿ ಸಂಗ್ರಹವಿದ್ದು ಅವುಗಳ ಸಂಪಾದನೆ ಹಾಗೂ ಪ್ರಕಟಣೆಯನ್ನು ಸಂಸ್ಥೆಯು ಮಾಡುತ್ತಾ ಬಂದಿದೆ. ಇತ್ತೀಚಿನ ನಮ್ಮ ಸರ್ವೇಕ್ಷಣದಲ್ಲಿ ಉಡುಪಿ ಜಿಲ್ಲೆಯ ಕೊಲ್ಲೂರಿನ ಮೂಕಾಂಬಿಕ ದೇವಾಲಯದಲ್ಲಿ ಕೆಳದಿ ಹಿರಿಯ ಬಸಪ್ಪನಾಯಕ ರಚಿಸಿದ 'ಶಿವತತ್ತ್ವ ರತ್ನಾಕರಂ' ಹಸ್ತಪ್ರತಿಯ ಎರಡು ಗರಿಗಳು ಲಭಿಸಿವೆ. ಈ ಹಸ್ತಪ್ರತಿಯನ್ನು ಈ ಹಿಂದೆ ಸಂಪಾದಿಸಿ ಪ್ರಕಟಿಸಿರುವ ಯಾವ ಗ್ರಂಥಗಳಲ್ಲಿಯೂ ಬಳಸಿಕೊಂಡಿಲ್ಲ. ಅವರುಗಳೆಂದರೆ : ಶ್ರೀ ಬಿ. ರಾಮರಾವ್ ಮತ್ತು ವಿದ್ವಾನ್ ಪಿ. ಸುಂದರ ಶಾಸ್ತ್ರಿಯರ್ ಸಂಪಾದಿಸಿದ್ದು ಮದ್ರಾಸಿನ ಬಿ. ಎಂ. ನಾಥ್ ಕಂಪನಿಯಿಂದ ಪ್ರಕಟವಾಗಿದೆ. ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯವು ಪ್ರಕಟಿಸಿರುವ ಮೂರು ಸಂಪುಟಗಳು (೧೯೬೪,೧೯೬೯, ೧೯೮೫). ಇತ್ತೀಚೆಗೆ ೧೯೯೯ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರು ಈ ಮೇಲಿನ ಸಂಪುಟಗಳ ಕನ್ನಡಾನುವಾದ ಮಾಡಿಸಿ ಎರಡು ಸಂಪುಟಗಳಲ್ಲಿ ಪ್ರಕಟಿಸಿದೆ*. ಮದ್ರಾಸ್ ಹಾಗೂ ಮೈಸೂರಿನಿಂದ ಪ್ರಕಟವಾಗಿರುವ ಸಂಪುಟಗಳಲ್ಲಿ ಈ ಕೆಳಕಾಣಿಸಿರುವ ಹಸ್ತಪ್ರತಿಗಳನ್ನು ಉಪಯೋಗಿಸಿಕೊಳ್ಳಲಾಗಿದೆ.

೧ 'ಕ' - ಎನ್. ಪಿ. ೨೫೫೭ ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು.

೨. 'ಖ' - ಎನ್. ಎ. ೪೬ ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು.

೩. 'ಗ' - ಮದ್ರಾಸ್ ಓರಿಯಂಟಲ್ ಸಂಸ್ಥೆಯ ಕಾಗದ ಹಸ್ತ ಪ್ರತಿ.

ಈ ಮೇಲಿನ ಹಸ್ತ ಪ್ರತಿಗಳು ೩೦ ಸೆ.ಮೀ ಉದ್ದ ಹಾಗೂ ೫ ಸೆ.ಮೀ. ಅಗಲ ಅಳತೆಯದ್ದಾಗಿದ್ದು ಕೆಳದಿ ಸಂಶೋಧನಾಲಯದ ಹಸ್ತಪ್ರತಿ ೧೬ ಸೆ.ಮೀ. ಉದ್ದ ಮತ್ತು ೪.೫ ಸೆ.ಮೀ. ಅಗಲ ಅಳತೆಯದು. ಇದರಲ್ಲಿ ಲಿಪಿ ನಂದಿನಾಗರಿ. ಭಾಷೆ ಸಂಸ್ಕೃತ. ACC. N. 764

ಕೆಳದಿ ಸಂಶೋಧನಾಲಯದಲ್ಲಿನ ಹಸ್ತಪ್ರತಿ ಕೊಲ್ಲೂರಿನ ಮೂಕಾಂಬಿಕಾ ದೇವಾಲಯದಲ್ಲಿ ಲಭಿಸಿದ್ದು, ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದವರು ಇಲ್ಲಿಂದ ಹಲವಾರು ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಾರೆ. ಅವುಗಳ ವಿಂಗಡಣೆ ಇನ್ನೂ ಆಗದಿರುವುದರಿಂದ ಆ ಹಸ್ತಪ್ರತಿಯ ಉಳಿದ ಭಾಗ ನೋಡಲು ಅಸಾಧ್ಯವಾಗಿದೆ. ಪ್ರಸ್ತುತ ಲಭ್ಯವಿರುವ ಪಾಠವನ್ನು ಇಲ್ಲಿ ಕೊಡಲಾಗಿದ್ದು ಇದು ಪಾಠಾಂತರವನ್ನು ಗುರುತಿಸಲು ಸಹಾಯಕವಾಗಬಹುದಾಗಿದೆ.

ಕೆಳದಿ ವಸ್ತು ಸಂಗ್ರಹಾಲಯದಲ್ಲಿನ ಹಸ್ತಪ್ರತಿ ಕೇವಲ ಎರಡು ಗರಿಗಳನ್ನು ಮಾತ್ರ ಹೊಂದಿದೆ. ಶಿವತತ್ತ್ವರತ್ನಾಕರದ ಐದನೇ ಕಲ್ಲೋಲದ ತೃತೀಯ ತರಂಗದ ೫೦ ರಿಂದ ೭೨ನೇ ಶ್ಲೋಕಗಳು ಮಾತ್ರ ಲಭ್ಯವಾಗಿದ್ದು,ಶುಭಾಶುಭ ಸ್ವಪ್ನ ಫಲಗಳ ನಿರೂಪಣೆಯ ವಿವರಗಳಿವೆ. ಅಂತ್ಯದಲ್ಲಿ 'ಇತಿ ಶ್ರೀ ಶಿವತತ್ತ್ವರತ್ನಾಕರ ಪಂಚಮಕಲ್ಲೋಲೆ. ಶುಭಾಶುಭ ಸ್ವಪ್ನ ಫಲನಿರೂಪಣಂ ನಾಮ ತೃತೀಯಸ್ತ ರಂಗಃ' ಎಂದಿದೆ.

(೮ನೇ ಗರಿಯ ಮುಂಭಾಗ)

೧.... ಚಾಪಿ ದೃಷ್ಟ್ವಾ ಸಂತಾನಮೂಪ್ನುಯಾತ್।
ಶಂಖಚಕ್ರಧ್ವಜಾದೀನಿ ತಾಲವೃಂತಂ ಚ ಚಾಮರಮ್ ||೫೦||

* ಈ ಕಾರ್ಯಕ್ಕೆ ಕೆಳದಿ ವಸ್ತು ಸಂಗ್ರಹಾಲಯವು, ಸಹಾಯ ಪಡೆದಿರುವುದನ್ನು ಮರೆಯುವಂತಿಲ್ಲ.

*ಕೆಳದಿ ವಸ್ತು ಸಂಗ್ರಹಾಲಯ ಕೆಳದಿ, ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ - ೫೭೭ ೮೦೧.

ರಕ್ತ ಶುಭಂ ಚ ಸಂಪೂರ್ಣಂ ಪಶ್ಯನ್ನಿಧಿಮವಾಪ್ನುಯಾತ್।
ಘೃತಂ ಚ ಪಾಯಸಂ ಸಕ್ತೂನ ಕ್ಷೀರಂ ವಾ ಶರ್ಕರಾ ದಧಿ
॥೫೧॥
ಆಮ್ರಾಧಿಕಂ ಫಲಂ ವಾಪಿ ಭಕ್ಷಯನ್ ಸುಖಮಾಪ್ನುಯಾತ್॥
ವೇದಾದಿಪುಣ್ಯಶಬ್ದಾಂನಾಂ ಶ್ರವೆ[2] ಚ ಧನಾಗಮಃ ॥೫೨॥
ದೇವದ್ವಿಜಗುರುಸ್ತ್ರೀ ಭಿರ್ಭಾಷಣಂ ಚ ಶುಭಂ ವಿದುಃ।
ಆತ್ಮನಶ್ಚಾಭಿಷೇಕ : ಸ್ಯಾತ್ ಕ್ಷೀರಾದ್ಯೈದ್ರ ವಿಣಪ್ರದಃ ॥೫೩॥
ಶಕಟಂ ಚ ಗಾವಂ ಚೈವ ಪ್ರಾಸಾದಂ ಶಿಬಿಕಾಂ ತಥಾ।
ಫಲಕಂ ಚ ರಥಂ ವಾಪಿ ದಿಷ್ಣ್ಯಂ ಚಾರೋಹಯೇದ್ಯದಿ
॥೫೪॥
ಸುಸ್ವಪ್ನಾ ಯದಿ[3] ಸಂಪ್ರೋಕ್ತಾ: ಸಂಗ್ರಹೇಣ ಮಯಾಧುನಾ।
ಅಥಾತ್ರಾವಸರೇ ದೃಷ್ಟೇ ದುಃಸ್ವಪ್ನೇ ಫಲಮುಚ್ಯತೇ ॥೫೫॥
॥ಶುಭಮಸ್ತು॥[4]
ಶುನಃ ಸೃಗಾಲಾನ್ ಗೃಧ್ರಾಂಶ್ಚ ಪಿಶಾಚಾನ್ ಕೃಷ್ಣ ಕೀಟಕಾನ್।
ಸ್ವಪ್ನೇ ತು ಯದಿ ವೀಕ್ಷೇತ ನರಃ ಶೋಕವಾಪ್ನುಯಾತ್
॥೫೬॥
******
(೮ನೇ ಗರಿಯ ಹಿಂಭಾಗ)
ಕಾಕಂ ಗೃದ್ಧ್ರಂ ವಟೇ ಶ್ಯೇನಂ ಪಿಶಾಚಂ ವ್ಯಾಥ ರಾಕ್ಷಸಮ್।
ಪತಂತಂ ಪತಿತಂ ವಾಪಿ ದೃಷ್ಟ್ವಾ ವ್ಯಸನಮಾಪ್ನುಯತ್
॥೫೮॥
ಕೃಷ್ಣಕೀಟಂ ಚ ಗಾಂ ಕೃಷ್ಣಾಂ ಪಶ್ಯನ್ ಭಯಮವಾಪ್ನು
ಯಾತ್।
ಆರೋಹಣಂ ತಥಾ ತೇಷಾಂ ಸ್ಪರ್ಶಶ್ಚಾತಿ ಭಯಪ್ರದಃ
॥೫೯॥
ಅಶ್ವಮುಷ್ಟ್ರಂ ಖರಂ ವಾಪಿ ಮಹಿಷಂ ಶ್ವಾನಮೇವ ಚ।
ಕೃಷ್ಣಸ್ತ್ರಿಯಶ್ಚ ಯಃ ಸ್ವಪ್ನೇ ಪಶ್ಯೇಚ್ಛೋಕಮವಾಪ್ನುಯಾತ್
॥೬೦॥
ದೇವತಾ ಯತ್ರ ನೃತ್ಯಂತಿ ಹಸಂತಿ ಚ ರುದಂತಿ ಚ।
ಆಸ್ಫೋಟಯಂತಿ ಧಾವಂತಿ ಸ ದೇಶಸ್ತು ವಿನಶ್ಯತಿ ॥೬೧॥
ರಕ್ತಾಂಬರಧರಾ ನಾರೀ ರಕ್ತಗಂಧಾನುಲೇಪನಾ।
ಎಷಗೂಹತಿ ಯಂ ಸ್ವಪ್ನೇ ಸಾ ರಾತ್ರಿಸ್ತಸ್ಯ ಪಶ್ಚಿಮಾ ॥೬೨॥
ರಕ್ತಮಾಲ್ಯಾಂಬರಧರೋ ಯೋ ಗಚ್ಚೇದ್ದಕ್ಷಿಣಾಂ ದಿಶಂ।
ಕೃಷ್ಣಾಂ ಸ್ತ್ರಿಯಂ ಕರೇ ಗೃಹ್ಣನ್ಮರಣಂ ತಸ್ಯ ನಿರ್ದಿಶೇತ್
॥೬೩॥
ಕಪಿಲಾಮೂರ್ಧ್ವಕೇಶೀಂ ಚ ಸ್ವಪ್ನಾಂತೇ ಯಸ್ತು ಪಶ್ಯತಿ।
ಶರೀರಪತನಂ ತಸ್ಯ ಪ್ರಧಾನಪುರಷಸ್ಯವಾ ॥೬೪॥
ಚಾಂಡಾಲಾನ್ ಪತಿತಾನ್ ಮ್ಲೇಚ್ಛಾನ್ ದುರ್ವರ್ಗಾನ್
ಭಿಷಣಾನಪಿ।
ಶ್ವಾಪದಾನ್ ಕೃಷ್ಣ ಸರ್ಪಾಂಶ್ಚ ದೃಷ್ಟ್ವಾಮರಣ ಮಾಪ್ನು
ಯಾತ್
॥೬೫॥
******
(೯ನೇ ಗರಿಯ ಮುಂಭಾಗ)
ಮಧು[5] [6] [7] ನ ತೈಲೇನಾನ್ಯೇನ ವಾ ಯದಿ।
ಅಭ್ಯಜ್ಯ ಯೋ ವಿಭುಧ್ಯೇತ ರೋಗಂ ತಸ್ಯ ವಿನಿರ್ದಿಶೇತ್
॥೬೬॥
ಅಭಿದ್ರವ [8] [9] [10] ಶೃಂಗಿಣೋ ದಂಷ್ಟ್ರಿಣೋಽಪಿ ವಾ॥
ವಾನರೋ ವಾ ವರಾಹೋ ವಾ ತಸ್ಯ ಸ್ಯಾದವ್ಯಸನಂ
ಮಹತ್ ॥೬೭॥
ಪೂರ್ಣ ಕುಂಭ [11] [12] ಪಶ್ಯನಭೋಕಮವಾಪ್ನುಯಾತ್।
ಆದಿತ್ಯಂ ವಾಥ ಚಂದ್ರಂ ವಾ ವಿಗತದ್ಯುತಿಕಂ ಯದಿ ॥೬೮॥
ನಿಪತಶ್ಚಾಪಿ ನಕ್ಷತ್ರಂ ತಾರಕಶ್ಚಾಪಿ ವಾ ಯದಿ।
ವೀಕ್ಷೇತ ಮಾನವಃ ಸ್ವಪ್ನೇ ಮರಣಂ ಶೋಕಮವಾಪ್ನುಯಾತ್
॥೬೯॥
ನದೀಂ ಥಾಷ್ಕಾಂ ಸಮುದ್ರಂ ವಾ ಶುಷ್ಕಾಂ ಪುಷ್ಕರಣೀಂತಥಾ।
ಯಶ್ಚಕ್ಷುಪಾ ನರಃ ಪಶ್ಯೇತ ಸ್ವಪ್ನೇ ತಸ್ಯ ಧನಕ್ಷಯಃ ॥೭೦॥
ಕೇಶಾ ಯಸ್ಯ ವಿಶೀರ್ಯಂತೇ ದಂತಾ ಯಸ್ಯ ಪತಂತಿ ವಾ
ಸಂತಾಪಂ ಬಂಧುನಾಶಂ ಚ ವ್ಯಸನಂ ಚ ವಿನಿರ್ದಿಶೇತ್
॥೭೧॥
ಎವಮಾದಿಕದುಃ ಸ್ವಪ್ನದರ್ಶನೇ ತು ಪ್ರತಿಕ್ರಿಯಾ।
ಅಕೀರ್ತನಂ ಪುನಃ ಸ್ವಾಪಃ ಶ್ರವಣೇ ಗೋಶ್ಚ ಕೀರ್ತನಂ
॥೭೨॥
ಎವಂ ಸುಸ್ವಪ್ನದುಸ್ವಪ್ನ ಫಲಾನ್ಯುಕ್ತಾನಿ ತೇ ಮಯಾ।

******
(೯ನೇ ಗರಿಯ ಹಿಂಭಾಗ)

ಇತಿ ಶ್ರೀ ಶಿವತತ್ತ್ವರತ್ನಾಕರೇ ಪಂಚಮಕಲ್ಲೋಲೆ ಶುಭಾಶುಭಫಲ ನಿರೂಪಣಂ ನಾಮ ತೃತೀಯಸ್ತರಂಗ.

**ಸುಸ್ವಪ್ನ ಫಲ**

ಬೀಜಗಳು ಮೊಳಕೆಯೊಡೆಯುವುದನ್ನು ಕನಸಿನಲ್ಲಿ ಕಂಡರೆ ಸಂತಾನವನ್ನು ಪಡೆಯುವನು; ಶಂಖ, ಚಕ್ರ, ಧ್ವಜ, ತಾಳಪತ್ರದ ತೊಟ್ಟಿ, ಚಾಮರ, ಕೆಂಪುಮಡಕೆ ಇವುಗಳನ್ನು ನೋಡಿದವನು ನಿಧಿಯನ್ನು ಪಡೆಯುತ್ತಾನೆ; ತುಪ್ಪ, ಪಾಯಸ, ಹಿಟ್ಟು, ಹಾಲು, ಸಕ್ಕರೆ, ಮೊಸರು, ಮಾವು, ಮುಂತಾದ ಹಣ್ಣುಗಳನ್ನು ತಿಂದಂತೆ ಕನಸು ಬಿದ್ದರೆ ಸುಖವನ್ನು ಹೊಂದುತ್ತಾನೆ; ವೇದಾದಿ ಪುಣ್ಯ

2. ಶ್ರವಣೇ, 3. ಇತಿ, 4. ದುಃ ಸ್ವಪ್ನ ಫಲಾನಿ, 5. ನಾ, 6. ವಾಥ್, 7. ವಾಜ್ಯೇ, 8. ಂತಿ, 9. ಯಂ.ಹಿ, 10. ಸ್ವಪ್ನೇ, 11. ವಿನಾಶಂ, 12. ಚ

ಶಬ್ದಗಳು ಕೇಳಿದರೆ ಧನಲಾಭ; ದೇವತೆಗಳು, ಬ್ರಾಹ್ಮಣರು, ಆಚಾರ್ಯರು, ಹೆಂಗಸರು ಇವರೊಡನೆ ಮಾತನಾಡಿದರೆ ಶುಭಫಲ. ಹಾಲಿನ ಅಭಿಷೇಕ ಕಂಡರೆ ಧನಲಾಭ; ಗಾಡಿ, ಆನೆ, ಅರಮನೆ, ಪಲ್ಲಕ್ಕಿ ಮರದ ಪೀಠ, ಮಹಡಿ ಮನೆ ಹೇರಳ ಧನಲಾಭ ಹಾಗೂ ಆರೋಗ್ಯ ಸೂಚಕಗಳಾಗಿವೆ.

### *ದುಃಸ್ವಪ್ನ ಫಲ*

ನಾಯಿಗಳು, ನರಿಗಳು, ಹದ್ದುಗಳು, ಪಿಶಾಚಿಗಳು, ಕಪ್ಪು ಹುಳಗಳು, ಕಂಡರೆ ದುಃಖ; ಕಾಗೆ ಹದ್ದು, ಆಲದ ಮರದ ಮೇಲೆ ಕುಳಿತ ಗಿಡುಗ, ಪಿಶಾಚಿ, ರಾಕ್ಷಸ ಬೀಳುತ್ತಿರುವುದು ಕಂಡರೆ ಸಂಕಟ ಹಾಗೂ ಭಯದ ಸಂಕೇತ; ಕುದುರೆ, ಒಂಟೆ, ಕತ್ತೆ, ಕೋಣ, ನಾಯಿ, ಕಪ್ಪು ಬಣ್ಣದ ಹೆಂಗಸು ಇವುಗಳನ್ನು ಕನಸಿನಲ್ಲಿ ಕಂಡರೆ ಶೋಕ; ಯಾರ ಸ್ವಪ್ನದಲ್ಲಿ ದೇವತೆಗಳು ನಕ್ಕು, ಕುಣಿದು, ಅತ್ತು, ಗಟ್ಟಿಯಾಗಿ ಹೊಡೆದುಕೊಂಡು ಓಡಾಡುತ್ತಾರೋ ಆ ರಾಜನ ದೇಶ ನಾಶವಾಗುವುದು. ಕೆಂಪು ಬಟ್ಟೆ ಧರಿಸಿದ ಸ್ತ್ರೀಯನ್ನು ಕನಸಿನಲ್ಲಿ ಅಪ್ಪಿಕೊಂಡರೆ ಅವಳಿಗೆ ಅದೇ ಕಡೆ ರಾತ್ರಿ; ಕೆಂಪು ಬಟ್ಟೆಗಳನ್ನು ಧರಿಸಿ ದಕ್ಷಿಣ ದಿಕ್ಕಿಗೆ ಹೋಗುತ್ತ ಕಪ್ಪು ಹೆಂಗಸಿನ ಕೈ ಹಿಡಿದುಕೊಂಡಿರುತ್ತಾನೋ ಅವನು ಸಾಯುತ್ತಾನೆಂದು ಫಲ ಹೇಳಬೇಕು; ಕನಸಿನ ಅಂತ್ಯದಲ್ಲಿ ಕೆಂಪು ಹಳದಿ ಬಣ್ಣದವಳು ಅಥವಾ ತಲೆ ಕೂದಲನ್ನು ಮೇಲಕ್ಕೆ ಎತ್ತಿ ಕಟ್ಟಿಕೊಂಡಿರುವವಳನ್ನು ಕಂಡ ರಾಜನು ಸತ್ತು ಹೋಗುತ್ತಾನೆ; ಚಂಡಾಲರು, ನೀತಿಪತಿತರು, ಮ್ಲೇಚ್ಛರು, ಕೆಟ್ಟ ಬಣ್ಣದವರು, ಭಯಂಕರರು, ಕಾಡುಪ್ರಾಣಿಗಳು, ಕಾಳಿಂಗ ಸರ್ಪಗಳು, ಇವನ್ನು ಕಂಡರೆ ಸಾವು; ಜೇನುತುಪ್ಪ, ತುಪ್ಪ, ಎಣ್ಣೆ ಇವುಗಳಲ್ಲೊಂದರಲ್ಲಿ ಅಭ್ಯಂಜನ ಮಾಡಿ ಎದ್ದರೆ ಸಾವು; ಕೊಂಬುಳ್ಳ ಪ್ರಾಣಿಗಳು, ಕೋರೆದವಡೆಗಳುಳ್ಳ ಪ್ರಾಣಿಗಳು, ಕೋತಿ, ಹಂದಿ ಇವು ಅಟ್ಟಿಸಿಕೊಂಡು ಬಂದಂತೆ ಕನಸು ಕಂಡರೆ ಅತೀವ ಸಂಕಟವಾಗುತ್ತದೆ; ಪೂರ್ಣಕುಂಭ ಒಡೆದು ಹೋಗುವುದು, ಕಾಂತಿಯಲ್ಲದ ಸೂರ್ಯ ಚಂದ್ರರನ್ನು ನೋಡುವುದು, ನಕ್ಷತ್ರ, ಉಲ್ಕೆಗಳು ಬೀಳುವುದನ್ನು ಕಂಡರೆ, ಒಣಗಿದ ನದಿ, ಬತ್ತಿದ ಸಮುದ್ರ, ಕೊಳ, ಕೂದಲುಗಳು, ಹಲ್ಲುಗಳು ಬಿದ್ದಂತೆ ಕನಸು ಕಂಡರೆ ತೀವ್ರ ಸಂತಾಪ ಅಥವಾ ಸಾಯುವರೆಂದು ಫಲ ಹೇಳಬೇಕು. ಇಂಥ ದುಃಸ್ವಪ್ನಗಳನ್ನು ಕಂಡಲ್ಲಿ ಇದಕ್ಕೆ ಪರಿಹಾರವೇನೆಂದರೆ ಬೇರೆಯವರಿಗೆ ಇವನ್ನು ಹೇಳಕೂಡದು. ಮತ್ತೆ ಮಲಗಬೇಕು ಬೇರೆಯವರು ಹೇಳಿದ್ದನ್ನು ತಾನೇನಾದರು ಕೇಳಿದಲ್ಲಿ ಗೋ ದರ್ಶನ ಮಾಡಬೇಕು.

### *ಉಪಸಂಹಾರ*

ಶಿವತತ್ವರತ್ನಾಕರವು ಕೆಳದಿ ಬಸವಪ್ಪನಾಯಕನಿಂದ ರಚಿಸಲ್ಪಟ್ಟ ಸಂಸ್ಕೃತದ ವಿಶ್ವಕೋಶ ಕೃತಿಯಾಗಿದೆ. ಪ್ರಸ್ತುತ ದೊರೆತಿರುವ ಹಸ್ತ ಪ್ರತಿಯ ಲಿಪಿ ಶೈಲಿಯನ್ನು ಗಮನಿಸಿದರೆ ಕ್ರಿ.ಶ. ೧೭ನೇ ಶತಮಾನದ ನಂದಿನಾಗರಿಯದ್ದಾಗಿದೆ. ಬಹುಶಃ ಕೆಳದಿ ಆಸ್ಥಾನ ಕವಿಗಳು ಅಥವಾ ಲಿಪಿಕಾರರು ಇದನ್ನು ಪ್ರತಿಮಾಡಿಕೊಂಡಿರಬಹುದೆಂದು ಊಹಿಸಬಹುದಾಗಿದೆ. ಕೆಳದಿ ಸಂಶೋಧನಾಲಯವು ಸರ್ವೇಕ್ಷಣೆಯಲ್ಲಿ ಸಂಗ್ರಹಿಸಿರುವ ಶಿವತತ್ವರತ್ನಾಕರದ ಹಸ್ತ ಪ್ರತಿಯ ಪ್ರಮಾಣದ ಉಳಿದ ಭಾಗಗಳು, ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದವರು ಸಂಗ್ರಹಿಸಿದ ಕಟ್ಟುಗಳಲ್ಲಿ ಸೇರಿಕೊಂಡಿರಬಹುದೆಂದು ಊಹಿಸಲಾಗಿದೆ. ಕೊಲ್ಲೂರು ಮೂಕಾಂಬಿಕೆ ದೇವಿಯೂ ಕೆಳದಿ ಅರಸರ ಕುಲದೇವರಾಗಿದ್ದು, ದೇವಿಯ ದರ್ಶನದಿಂದ ಆರಂಭಿಸಿ ಈ ಅರಸರು ವಿವಿಧ ಸೇವೆ ನಡೆಸಿದ ಕುರಿತು ಪುರಾತತ್ವದಿಂದ, ಕೆಳದಿ ನೃಪವಿಜಯದ ಕೃತಿಯವರೆಗೆ ಅಪಾರ ಸಾಮಗ್ರಿಗಳು ಲಭಿಸಿವೆ. ರಾಜಧಾನಿ ಈ ಕ್ಷೇತ್ರವು ಸಮೀಪವಾಗಿದ್ದುದರಿಂದಲೂ ಕೆಳದಿ ಬಸಪ್ಪನಾಯಕನ ಸ್ವಹಸ್ತಾಕ್ಷರ ಅಥವಾ ತನ್ನ ಆಸ್ಥಾನ ಕವಿಯಿಂದ ಇದನ್ನು ಲಿಪಿಸಿರಬಹುದೇ ಎಂಬ ಸಂದೇಹ ಕಾಡುತ್ತಿದ್ದು ಈ ನಿಟ್ಟಿನಲ್ಲಿ ಇದೊಂದು ಅಪೂರ್ವ ಹಸ್ತಪ್ರತಿಗಳ ಸಾಲಿನಲ್ಲಿ ಸೇರಲು ತುಂಬಾ ಅರ್ಹವಾಗಿದೆ.



(ಈ ಪ್ರಬಂಧ ರಚನೆಗೆ ಪ್ರೋತ್ಸಾಹ ನೀಡಿದ ಶ್ರೀ ಕೆಳದಿ ಗುಂಡಾಜೋಯಿಸರಿಗೆ ಅಭಿನಂದನೆಗಳು. ಪ್ರಬಂಧ ಮಂಡಿಸಲು ಅವಕಾಶ ಕಲ್ಪಿಸಿಕೊಟ್ಟಿರುವ ವಿಶ್ವಸ್ಥ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳಿಗೆ ಕೃತಜ್ಞತೆಗಳು.)

ಡಾ. ಎಫ್. ಟಿ. ಹಳ್ಳಿಕೇರಿ*

# ಸಾಂಘಿಕಶಾಸ್ತ್ರ ಕುರಿತ ಒಂದು ಹಸ್ತಪ್ರತಿ

ಲೋಕ ವ್ಯವಹಾರಕ್ಕೆ ಸಂಬಂಧಿಸಿದಂತೆ - ಕನ್ನಡದಲ್ಲಿ ಹಲವಾರು ಕೃತಿಗಳು ಪ್ರಾಚೀನ ಕಾಲದಿಂದಲೂ ರಚನೆಗೊಳ್ಳುತ್ತ ಬಂದಿವೆ. ಗೃಹವಾಸ್ತು, ವೈದ್ಯಕೀಯ, ಗಜಶಾಸ್ತ್ರ, ಹಯಶಾಸ್ತ್ರ, ಗಾರ್ಧಪಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಕಾಮಶಾಸ್ತ್ರ, ಶಕುನಶಾಸ್ತ್ರ, ಸೂಪಶಾಸ್ತ್ರ ಮುಂತಾದವುಗಳು ಲೌಕಿಕಶಾಸ್ತ್ರ ಕೃತಿಗಳಾಗಿವೆ. ಮಮ್ಮಟನು ತನ್ನ ಕಾವ್ಯ ಪ್ರಕಾಶದಲ್ಲಿ.

> 'ಶಕ್ತಿರ್ನಿಪುಣತಾ ಲೋಕಶಾಸ್ತ್ರ ಕಾವ್ಯಾದ್ಯವೇಕ್ಷಣಾತ್
> ಕಾವ್ಯಜ್ಞ ಶಿಕ್ಷಯಾಭ್ಯಾಸ ಇತಿ ಹೇತುಸ್ತದುದ್ಭವೇ'

ಅಂದರೆ ಪ್ರತಿಭೆಯ ಜೊತೆಗೆ ಲೋಕಶಾಸ್ತ್ರಗಳ ಪರಿಚಯ ಕಾವ್ಯಾಭ್ಯಾಸ, ಬಹುಶ್ರುತತ್ವಗಳೂ ಕೂಡಾ ಕಾವ್ಯೋದ್ಭವದ ಕಾರಣಗಳೆನಿಸುತ್ತವೆ. ಕನ್ನಡ ಕವಿಗಳಿಗೆ ಇವೆರಡೂ ಇದ್ದುದರಿಂದ ಅವರು ಉತ್ತಮ ಕಾವ್ಯಗಳನ್ನು ಶಾಸ್ತ್ರಗಳನ್ನೂ ರಚಿಸಿದರು. ಪಂಡಿತರು ಪ್ರತಿಭಾನ್ವಿತರೂ ಆಗಿದ್ದರು. ಕನ್ನಡದಲ್ಲಿ ಕಾವ್ಯಸೃಷ್ಟಿಯೊಡನೆ ಲೋಕೋಪಯೋಗಿ ಶಾಸ್ತ್ರಗ್ರಂಥಗಳ ರಚನೆಯೂ ಸಾಕಷ್ಟಾಗಿತ್ತೆಂಬುದಕ್ಕೆ ಭಟ್ಟಾಕಳಂಕ ತನಗಿಂತ ಹಿಂದೆ ಲಭ್ಯವಾದ ಸಾಹಿತ್ಯರಾಶಿಯನ್ನು ಉಲ್ಲೇಖಿಸುತ್ತಾನೆ. ಹೀಗಾಗಿ ಕನ್ನಡದಲ್ಲಿ ಲೌಕಿಕಶಾಸ್ತ್ರ ಕೃತಿಗಳು ನಿರಂತರವಾಗಿ ರಚನೆಗೊಳ್ಳುತ್ತ ಬಂದಿವೆ. ಅವುಗಳ ಸಾಲಿಗೆ ಪ್ರಸ್ತುತ ಸಾಂಘಿಕಶಾಸ್ತ್ರ ಕೃತಿಯೂ ಸೇರುತ್ತದೆ.

*ಹಸ್ತ ಪ್ರತಿಯ ಸ್ವರೂಪ:* ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಭಾಂಡಾರದ ೩೧೧ನೆಯ ಕ್ರಮಾಂಕದ ಕಾಗದ ಪ್ರತಿ ಇದಾಗಿದೆ. ಇತ್ತೀಚಿನ ಕಾಗದ (Note Book)ದ ಮೇಲೆ ಬರೆಯಲಾಗಿದ್ದು ೮.೫"×೪" ಆಕಾರದಲ್ಲಿದೆ. ಮುಖಪುಟದಲ್ಲಿ ಸಮಾಜಶಾಸ್ತ್ರ (Sociology) ಅಥವಾ ಸಾಂಘಿಕಶಾಸ್ತ್ರವೆಂದು ನಮೂದಿಸಲಾಗಿದೆ. ಗದ್ಯ ಬರವಣಿಗೆಯನ್ನೊಳಗೊಂಡ ಈ ಕೃತಿಯ ೩೮೮ ಪುಟಗಳಲ್ಲಿ ವೈವಿಧ್ಯಮಯವಾದ ವಿಷಯಗಳನ್ನು ನಿರೂಪಿಸುತ್ತದೆ. ಹೊಸಪೇಟೆಯ ಸರಕಾರಿ ತರಬೇತಿ ಶಾಲೆಯಲ್ಲಿದ್ದ ಶ್ರೀ ಎಚ್. ಎಂ. ಕೊಟ್ರಯ್ಯ (ಬಹುಶಃ ಇವರು ಶಿಕ್ಷಕರಾಗಿದ್ದಿರಬಹುದು)ನವರು ೩೦-೭-೧೯೩೫ರಲ್ಲಿ ಈ ಕೃತಿಯನ್ನು ರಚಿಸಿದ ಬಗೆಗೆ ಆರಂಭದಲ್ಲಿ ಉಲ್ಲೇಖಿಸಲಾಗಿದೆ. ಹಸ್ತಪ್ರತಿ ತುಂಬಾ ತ್ರುಟಿತಗೊಂಡಿದ್ದು. ಕಾಗದದ ಅಂಚುಗಳು ಹರಿದಿವೆ.

*ಕೃತಿಯ ಸ್ವರೂಪ :* ಆರಂಭದಲ್ಲಿ ಕೃತಿಯ ಮಹತ್ವವನ್ನು ಲೇಖಕರು ಸ್ಪಷ್ಟಪಡಿಸಿದ್ದಾರೆ: 'ಪ್ರಸ್ತುತ ಪ್ರಪಂಚದಲ್ಲಿ ಅನೇಕ ನೂತನ ಪರಿಸ್ಥಿತಿಗಳು ಬರೆಯಲ್ಪಟ್ಟಿರುವುದರಿಂದ ಜನರು ಪ್ರತಿನಿತ್ಯವೂ ಅನೇಕ ಬದಲಾವಣೆಗಳನ್ನು ಮಾಡುತ್ತಿರುವರು. ಮುಖ್ಯವಾಗಿ ಐಕ್ಯಮತ್ಯದಿಂದ ಸಾಂಘಿಕ ಜೀವನವನ್ನು ಅಭಿವೃದ್ಧಿಮಾಡುವ ಮತ್ತು ಸೌಕರ್ಯ ಒದಗಿಸುವ ಮಾರ್ಗಗಳನ್ನು ಹುಡುಕುತ್ತಾ ಅವುಗಳನ್ನು ಆಚರಣೆಯಲ್ಲಿ ತರಲು ಪ್ರಯತ್ನಿಸುತ್ತಿರುವುದು. ಕಾರಣ ಪ್ರತಿ ಮನುಷ್ಯನು ತನ್ನ ಸುತ್ತ ಮುತ್ತಲಿದ್ದ ಪರಿಸ್ಥಿತಿಗಳನ್ನು ವಿಶದವಾಗಿ ಗ್ರಹಿಸಿ, ಅವುಗಳನ್ನು ಅಭಿವೃದ್ಧಿ ಮಾಡಲು ಪ್ರಯತ್ನಿಸಬೇಕು. ಈ ರೀತಿ ಜನರು ಸಂಘ ಶ್ರೇಯಸ್ಸಿಗಾಗಿ ಮಾಡಿಕೊಂಡ ಏರ್ಪಾಡುಗಳು, ಆಚಾರ ನೇಮಗಳ ವಿಚಾರವಾಗಿ ನಮ್ಮ ಸಾಂಘಿಕಶಾಸ್ತ್ರವು ಚರ್ಚಿಸುತ್ತದೆ. ಈ ಅಂಶಗಳ ವಿಚಾರವು ಸಂಘೋದ್ಧಾರಕರಿಗೂ, ಉಪಾಧ್ಯಾಯರಿಗೂ, ಹುಡುಗರಿಗೂ ಅತಿ ಅವಶ್ಯಕವಾದದ್ದು'. ಈ ಮೇಲಿನ ಮಾತುಗಳನ್ನು ಗಮನಿಸಿದಾಗ ಮನುಷ್ಯನ ಪ್ರತಿನಿತ್ಯದ ಬದುಕಿನ ಮಾರ್ಗವನ್ನು ಕಂಡುಕೊಳ್ಳಲು ಈ ಕೃತಿಯು ನೆರವನ್ನು ನೀಡುತ್ತದೆ ಎಂಬ ಆಶಯವನ್ನು ಲೇಖಕರು ಹೊಂದಿದ್ದಾರೆ.

ಮೊದಲನೆಯದಾಗಿ 'ಗೃಹನಿರ್ಮಾಣ' ಕುರಿತು ವಿವರಿಸಲಾಗಿದೆ. ಅದರಲ್ಲಿ ಗೃಹನಿರ್ಮಾಣಕ್ಕೆ ಬೇಕಾದ ಪರಿಸರ ಸಾಮಗ್ರಿಗಳು, ಬೆಳಕಿನ ವ್ಯವಸ್ಥೆ, ಗಾಳಿಯ ಮಹತ್ವ ವಿದ್ಯಾಸೌಕರ್ಯಗಳು ಇತ್ಯಾದಿ ಸಂಗತಿಗಳ ಬಗೆಗೆ ಚರ್ಚಿಸಲಾಗಿದೆ. ಮನೆಯಲ್ಲಿ ಗಾಳಿಯು ಬರಬೇಕಾದರೆ, ಕಿಡಕಿಗಳನ್ನು ಹೇಗೆ ಹಚ್ಚ ಬೇಕೆಂಬುದರ ಬಗೆಗೆ ಅತ್ಯಂತ ವೈಜ್ಞಾನಿಕವಾಗಿ ಲೇಖಕ ಹೇಳಿದ್ದಾನೆ. ಆತನ ಮಾತಿನಲ್ಲೇ ಹೇಳುವುದಾದರೆ 'ನಾವು ಆರೋಗ್ಯವಾಗಿರಬೇಕಾದರೆ ಯಥೇಚ್ಛವಾಗಿ ಪ್ರಾಣವಾಯುವು ಬೇಕು. ಕಾರಣ ಮನೆಗಳಲ್ಲಿ ವಿಶೇಷವಾಗಿ ಗವಾಕ್ಷಿಗಳು, ಗಾಳಿಯ ಜಗಲುಗಳು, ಬಾಗಿಲುಗಳು ಎದುರು ಬದರಾಗಿ ಇದ್ದಲ್ಲಿ ಗಾಳಿಯು ಧಾರಾಳವಾಗಿ ಪ್ರವೇಶಿಸಿ ಕೆಟ್ಟ ಗಾಳಿಯನ್ನು ಹೊರಕ್ಕೆ ತಳ್ಳುವುದು. ಹೆಚ್ಚಾಗಿ ದಕ್ಷಿಣದಲ್ಲಿರುವ ವರಾಂಡ ಕಿಟಕಿಗಳು ಇರುವುದು ಶ್ರೇಯಸ್ಕರವಾದದ್ದು' ಒಂದು ವೇಳೆ ಮನೆಯಲ್ಲಿ ಗಾಳಿಯು ಬರದಿದ್ದರೆ, ಅದರಿಂದಾಗುವ ತೊಂದರೆಗಳನ್ನು ಸಹ ಹೇಳಲಾಗಿದೆ. ನಮ್ಮ ಶರೀರಕ್ಕೆ ಪ್ರಾಣವಾಯುವು ಸಿಗದೆ ಹೋದರೆ ಕೆಮ್ಮು, ಉಬ್ಬಸ, ತಲೆನೋವು, ಅಜೀರ್ಣ, ರಕ್ತಹೀನತೆ, ಮೂರ್ಛೆ, ನಿದ್ರಾಭಂಗ, ವಾಂತಿ ಮುಂತಾದ ರೋಗಗಳು ಬರಬಹುದೆಂದು ಹೇಳಲಾಗಿದೆ.

*ಅಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.

ಹಾಗೆಯೇ ಮನುಷ್ಯನಿಗೆ ಬರುವ ಹಲವಾರು ರೋಗಗಳ ಲಕ್ಷಣ, ಅವುಗಳನ್ನು ಶಮನಗೊಳಿಸಬೇಕಾದ ವಿಧಾನಗಳನ್ನು ಸಹ ವಿವರಿಸಲಾಗಿದೆ. ಉದಾಹರಣೆಗೆ ನಾರುಹುಣ್ಣಿನ ಬಗೆಗೆ ಹೇಳುತ್ತಾ ಇದೊಂದು ಅಂಟುರೋಗವಾಗಿದ್ದು, ಈ ಹುಣ್ಣನ್ನು ಹೋಗಲಾಡಿಸ ಬೇಕಾದರೆ ಇಳಿಯುವ ಬಾವಿಗಳನ್ನು ಸೇದುವ ಬಾವಿಗಳನ್ನಾಗಿ ಮಾಡುವುದು, ನೀರಿನಲ್ಲಿ ಕಾಲಿಡಬಾರದು, ನೀರನ್ನು ಕಾಯಿಸಿ ಸೋಸಿ ಕುಡಿಯಬೇಕು.

ಬ್ಯಾಂಕು, ಸಹಕಾರ ಸಂಘ ಸಂಸ್ಥೆಗಳನ್ನು ಸ್ಥಾಪಿಸುವ ಉದ್ದೇಶ ಅವುಗಳಿಂದಾಗುವ ಪ್ರಯೋಜನಗಳನ್ನು ಸಹ ತಿಳಿಸಲಾಗಿದೆ. ಜೊತೆಗೆ ಶಾಲೆ (School)ಯ ವಾತಾವರಣ, ಉಪಾಧ್ಯಾಯರ ಕರ್ತವ್ಯ, ಅವರ ಸಂಖ್ಯೆ ಮತ್ತು ಅರ್ಹತೆ, ಶಾಲೆಗಳಿಂದಾಗುವ ಲಾಭಗಳನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಒಬ್ಬ ಉಪಾಧ್ಯಾಯನ (Teacher) ಅರ್ಹತೆಗಳನ್ನು ಸುಧೀರ್ಘವಾಗಿ ಚರ್ಚಿಸುತ್ತಾ, ಆತ ಉಲ್ಲಾಸಭರತನೂ, ಅಪರಿಮಿತವಾದ ತಾಳ್ಮೆಯನ್ನೂ ಸದಾ ಓದುವ ಹವ್ಯಾಸವನ್ನು ರೂಢಿಸಿಕೊಂಡಿರಬೇಕು.

ಈ ಕೃತಿಯ ಮತ್ತೊಂದು ಮಹತ್ವದ ಭಾಗ ಶರೀರಶಾಸ್ತ್ರವನ್ನು ಕುರಿತಂಥ ವಿಚಾರ. ಮಾನವನ ಶರೀರದ ಅವಯವಗಳನ್ನು ಹೇಳುತ್ತಾ ಅವುಗಳ ಲಕ್ಷಣಗಳನ್ನು ಗುರುತಿಸಲಾಗಿದೆ. ಪಿತ್ತಕೋಶ, ಮೂಳೆಗಳು ಆಹಾರ ಜೀರ್ಣಾಂಗಗಳು, ಜಠರ, ಅನ್ನನಾಳ ಮುಂತಾದವುಗಳನ್ನು ವಿವರವಾಗಿ ತಿಳಿಸಲಾಗಿದೆ. ವೃಕ್ಷಶಾಸ್ತ್ರವೆಂಬ ಭಾಗದಲ್ಲಿ ದ್ವಿದಳ ಬೀಜಗಳ ಸ್ವರೂಪ, ಲಕ್ಷಣಗಳನ್ನು ಹೇಳುತ್ತಾ ತೋಟ ಹೇಗಿರಬೇಕು ಎಂಬುದರ ಬಗೆಗೆ ಒಂದು ನಕ್ಷೆಯ (Map) ಮೂಲಕ ಸ್ಪಷ್ಟಪಡಿಸಲಾಗಿದೆ. ಒಂದು ಶಾಲಾತೋಟ (School Garden)ವನ್ನು ನಿರ್ಮಿಸಬೇಕಾದರೆ ಸ್ಥಳ ನಿರ್ಧಾರ, ಸಂರಕ್ಷಣೆಯ ವಿಧಾನಗಳನ್ನು ಮೊದಲು ತಿಳಿದುಕೊಂಡಿರಬೇಕೆಂದು ಈ ಕೃತಿ ಹೇಳುತ್ತದೆ. ಕೊನೆಯಲ್ಲಿ ಜಂತುಶಾಸ್ತ್ರವೆಂಬ ಭಾಗದಲ್ಲಿ ಚತುಷ್ಪದಗಳು (ದನ, ಕುರಿ, ಎತ್ತು) ಸರಿಸೃಪಗಳು (ಹಲ್ಲಿ, ಹಾವು, ಕಪ್ಪೆ) ಸಾಮಾನ್ಯ ಕೀಟಗಳು, ಸೂಕ್ಷ್ಮಜೀವಾಣುಗಳು ಮತ್ತು ಅವುಗಳ ಹಾವಳಿಗಳನ್ನು ತಿಳಿಹೇಳಲಾಗಿದೆ.

ಹೀಗೆ ಈ ಕೃತಿಯ ಮನೆ, ಶಾಲೆ, ಸಮಾಜ, ಸಂಘ-ಸಂಸ್ಥೆ ತೋಟಗಾರಿಗೆ ಮಳೆ-ಬೆಳೆ, ಹೊಲ, ಶರೀರಶಾಸ್ತ್ರ, ವೃಕ್ಷಶಾಸ್ತ್ರ, ಜಂತುಶಾಸ್ತ್ರ ಇತ್ಯಾದಿ ಲೋಕ ವ್ಯವಹಾರಕ್ಕೆ ಸಂಬಂಧಿಸಿದಂತೆ, ಸಮೃದ್ಧವಾದ ಮಾಹಿತಿಯನ್ನು ನೀಡುತ್ತದೆ. ಹೀಗಾಗಿ ಈ ಕೃತಿಯು ಜನಸಾಮಾನ್ಯರನ್ನು ಗಮನದಲ್ಲಿಟ್ಟುಕೊಂಡು ರಚನೆಯಾಗಿದೆ. ಸಾಂಘಿಕ ಜೀವನವನ್ನು ನಡೆಸುವಂಥ ಸಂದರ್ಭದಲ್ಲಿ ಪ್ರತಿಯೊಬ್ಬ ಮನುಷ್ಯನೂ ತಿಳಿದಿರಬೇಕಾದ ನಿಯಮಗಳನ್ನು ಸುಧೀರ್ಘವಾಗಿ ಹೇಳಲಾಗಿದೆ. ಒಟ್ಟಿನಲ್ಲಿ ಸಾಂಘಿಕಶಾಸ್ತ್ರ ಎಂಬ ಈ ಅಪ್ರಕಟಿತ ಕೃತಿಯು ಕನ್ನಡ ಲೌಕಿಕ ಶಾಸ್ತ್ರ ಸಾಹಿತ್ಯಕ್ಕೊಂದು ಹೊಸ ಸೇರ್ಪಡೆ ಎಂದು ಹೇಳಬಹುದು.



[ಕನ್ನಡ ವಿ. ವಿ. ಹಸ್ತ ಪ್ರತಿಶಾಸ್ತ್ರ ವಿಭಾಗದ ಅಧ್ಯಾಪಕರಾದ ಡಾ. ಎಫ್. ಟಿ. ಹಳ್ಳಿಕೇರಿ ಹಾಗೂ ಡಾ. ಕೆ. ರವೀಂದ್ರನಾಥ ಅವರು ಹಸ್ತಪ್ರತಿ ಸರ್ವೇಕ್ಷಣೆಗಾಗಿ ಕ್ಷೇತ್ರಕಾರ್ಯ ಕೈಗೊಂಡಾಗ ಹಡಗಲಿ ಸಮೀಪದ ಪಶ್ಚಿಮಕಾಲ್ವಿ ಗ್ರಾಮದ ಎ. ಎಂ. ಬಸವರಾಜ ಎಂಬುವರ ಮನೆಯಲ್ಲಿ ಈ ಪ್ರತಿ ದೊರಕಿದೆ.]

ಕೆಳದಿ ಗುಂಡಾಜೋಯಿಸ್*

# ಕೆಳದಿ ಇತಿಹಾಸ - ಪುನರ್ಮೌಲ್ವೀಕರಣದ ಅವಶ್ಯಕತೆ

ಹೊಸ ಇತಿಹಾಸದ ರಚನೆ ಮಾಡುವಷ್ಟೇ ಮುಖ್ಯವಾಗಿ ಹಳೆಯ ಚರಿತ್ರೆಯ ಸಂಪುಟಗಳಲ್ಲಿರುವ ಅಮೌಲ್ಯಾತ್ಮಕ ಅಂಶಗಳ ಇತಿಹಾಸದ ಭಾಗಗಳನ್ನು ತಿದ್ದುವ ಅವಶ್ಯಕತೆ ಇದೆಯೆಂದು "ಮಲೆನಾಡು ಕರ್ನಾಟಕ ಅರಸು ಮನೆತನಗಳು" ವಿಚಾರ ಸಂಕಿರಣದ ಉದ್ಘಾಟನಾ ಸಮಾರಂಭದಲ್ಲಿ ಹಂಪಿ ಕನ್ನಡ ವಿ. ವಿ. ಕುಲಪತಿ ಡಾ. ಎಂ. ಎಂ. ಕಲ್ಬುರ್ಗಿರವರು ಅಧ್ಯಕ್ಷತೆ ವಹಿಸಿ ಮಾತನಾಡಿದರು. ಈ ಹಿನ್ನೆಲೆಯಲ್ಲಿ ದಕ್ಷಿಣ ಭಾರತದ ಅನೇಕ ರಾಜಮನೆತನದ ಇತಿಹಾಸದಲ್ಲಿ ಕೆಳದಿ ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ಜನ ಸಾಮಾನ್ಯರೂ ಉನ್ನತ ಆದರ್ಶ ಪರಂಪರೆ ಹೊಂದಿದ್ದು ಈವರೆಗಿನ ಅವುಗಳ ಅಧ್ಯಯನಾದಿಗಳನ್ನು ಮತ್ತಷ್ಟು ವೈಜ್ಞಾನಿಕವಾಗಿ ಮಾರ್ಪಡಿಸುವಲ್ಲಿ ಕೆಳದಿ ಚರಿತ್ರೆಯ ಪುನರ್ಮೌಲ್ವೀಕರಣದ ಅಗತ್ಯತೆ ಕುರಿತಂತೆ ಪ್ರಸ್ತಾಪಿಸಲಾಗಿದೆ.

### ಕೆಳದಿ ರಾಜ್ಯದ ಜನ ಸಾಮಾನ್ಯರ ಸಂಸ್ಕೃತಿ

ಸಮಕಾಲೀನ ಐರೋಪ್ಯ ಚರಿತ್ರೆಕಾರರ ಉಲ್ಲೇಖನದಲ್ಲಿ ಹಳ್ಳಿಯ ರೈತಾಪಿ ವರ್ಗದಿಂದ ಆರಂಭಿಸಿ ಜನ ಸಾಮಾನ್ಯರು ಸಾಂಸ್ಕೃತಿಕವಾಗಿ ಹೇಗೆ ಬಾಳಿದರೆಂಬುದನ್ನು ಈ ಕೆಳಗೆ ಒಂದೆರಡು ಮಾದರಿಗಳನ್ನು ನೀಡಬಹುದು.

..... The subjects of this country observe the laws so well, that Robbery or Murder are hardly heard of among them. And a stranger may pass through the country without being asked where he is going, or what business he has ......

**Alexander Hamilton**

"They have constituted laws and observe them obediently".....

**John Fryer**

........ "I have no where in India seen so much honesty and veracity as among the country people of Nagara (Capital of Keladi State). The ryots of Nagara (Keladi state) have always prided themselves on their Nationality"......

**Sloakes**

ಸ್ಲೋಕ್ಸ್‌ರವರ ಹಲವು ಮೂಲ ದಾಖಲೆಗಳು ಕೆಳದಿ ಇತಿಹಾಸ ಸಂಶೋಧನಾಲಯದ ಹಸ್ತಪ್ರತಿ ವಿಭಾಗದಲ್ಲಿ ಕಂಡು ಬರುತ್ತವೆ. ಕೆಳದಿ ರಾಣಿ ಚೆನ್ನಮ್ಮಾಜಿಯು ಮೊಗಲ್ ಬಾದಷಹನನ್ನು ಎದುರಿಸುವಾಗ ರಾಜ್ಯದ ರೈತನೊಬ್ಬನು ದೇಶಪ್ರೇಮದಿಂದ ಜಾನುವಾರುಗಳಿಗೆ ಉಚಿತವಾಗಿ ಮೇವು ಒದಗಿಸಿದ ದಾಖಲೆಯು ಷಿಕಾರಿಪುರದ ಶಾಸನದಲ್ಲಿರುವುದನ್ನು ರೈಸ್‌ರವರು ದಾಖಲಿಸಿದ್ದಾರೆ.*೧

### ಕೆಳದಿ ಇತಿಹಾಸದ ವೈಶಿಷ್ಟ್ಯತೆ

ಭಾರತದ ಯಾವ ಸಂಸ್ಥಾನಕ್ಕೂ ಕಡಮೆಯಿಲ್ಲದಂತೆ ಕೆಳದಿ ಇತಿಹಾಸ - ಸಂಸ್ಕೃತಿ ದೇಶ-ವಿದೇಶಗಳಲ್ಲಿ ವೈವಿಧ್ಯತೆಯನ್ನು ಪಡೆದಿದೆ. ಕ್ರಿ. ಶ. ೧೫೧೫-೪೬ರಲ್ಲಿ ಆಳಿದ ಸದಾಶಿವನಾಯಕನು ಬಿಜಾಪುರ, ಗೋಲ್ಕೊಂಡ, ಅಹಮ್ಮದ್‌ನಗರ, ಕಲ್ಬುರ್ಗಿ, ಬಿದರೆ ಪ್ರಾಂತಗಳನ್ನು ಜಯಿಸಿ ವಿಜಯನಗರಕ್ಕೆ ಅಧೀನಪಡಿಸಿದನು. ೧೫೪೬-೫೮ರಲ್ಲಿ ದೊಡ್ಡಸಂಕಣ್ಣನು ದೆಹಲಿಯ ಬಾದಷಹನಲ್ಲಿದ್ದ ಅಂಕುಶ ಖಾನನನ್ನು ಸೋಲಿಸಿದನು. ಕಾಶಿಯಲ್ಲಿ ಜಂಗಮವಾಡಿ ಮಠಕ್ಕೆ ದಾನಾದಿಗಳನ್ನಿತ್ತ, ಕಪಿಲಧಾರಾತೀರ್ಥ ಜೀರ್ಣೋದ್ಧಾರ ಮಾಡಿದ ಮುಂತಾದ ಈತನ ಸಾಧನೆಗಳನ್ನು ಶಾಸನಗಳು ಹೇಳುತ್ತಿವೆ. ಹಿರಿಯ ವೆಂಕಟಪ್ಪನಾಯಕನು (೧೫೮೩-೧೬೨೯) ಮಂಗಳೂರಿನಲ್ಲಿ ಪೋರ್ಚುಗೀಸರನ್ನು ಹಿಮ್ಮೆಟ್ಟಿಸಿದನು. ಈತನ ಕಾಲದಲ್ಲಿ ೧೬೨೩ರಲ್ಲಿ ಕೆಳದಿ ರಾಜ್ಯಕ್ಕೆ ಭೇಟಿ ನೀಡಿದ ಇಟಲಿ ಪ್ರವಾಸಿ ಪಿಯತ್ರೋಡೆಲ್ಲವಲ್ಲೆಯ ಪ್ರವಾಸಿ ಕಥನಗಳು ರಾಜ್ಯದ ಜನ ಸಾಮಾನ್ಯರ ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಇತಿಹಾಸವನ್ನು ತಿಳಿಸುತ್ತವೆ. ಕೆಳದಿ ಸಂಶೋಧನಾಲಯ ಇಟಲಿಯ ತ್ರಿಯೇಸ್ಥೆ ವಸ್ತು ಸಂಗ್ರಹಾಲಯದಿಂದ ಮಾಹಿತಿ ತರಿಸಿ ರಾಯಚೂರಿನಲ್ಲಿ ಜರುಗಿದ ಕ.ಇ. ಸಮ್ಮೇಳನದಲ್ಲಿ ಪ್ರಬಂಧ ಸಾದರಪಡಿಸಿದೆ. ೧೬೨೯-೧೬೪೫ ರಲ್ಲಿ ಆಳಿದ ವೀರಭದ್ರ ನಾಯಕನ ಕಾಲದಲ್ಲಿ ೧೬೩೭ ರಂದು ಕೆಳದಿ ಅರಮನೆಯ ಪತ್ರಾಗಾರಕ್ಕೆ ಭೇಟಿ ನೀಡಿದ್ದ ಇಂಗ್ಲೆಂಡಿನ ಪೀಟರ್ ಮಂಡಿಯು ಸಂಗ್ರಹಿಸಿದ ವರದಿಯು ರಾಜ್ಯದ ಆರ್ಥಿಕ ಸಾಮಾಜಿಕ ಪರಿಸ್ಥಿತಿಯನ್ನು ತಿಳಿಸುತ್ತದೆ. ಭಾರತ ಸರಕಾರದ ಪತ್ರಾಗಾರ ಇಲಾಖೆ ಮಹಾ ನಿರ್ದೇಶಕ ಡಾ. ಶೈಲನ್ ಘೋಷ್‌ರವರು ಮಧ್ಯಕಾಲೀನ ಇತಿಹಾಸದಲ್ಲಿ ಇದೊಂದು ಅಪೂರ್ವ ಆಕರವೆಂದು ೧೯೬೨ ರಂದು ಸರಕಾರದ ಹೊತ್ತಿಗೆಯಲ್ಲಿ ಪ್ರಕಟಿಸಿದ್ದಾರೆ. ಇದರ ಪಳೆಯುಳಿಕೆಯೊಂದು ಕೆಳದಿ ಸಂಶೋಧನಾಲಯದಲ್ಲಿದೆ. ಪ್ರಸಿದ್ಧನಾದ ಕೆಳದಿ ಶಿವಪ್ಪನಾಯಕನು ಕೇರಳದ

*ಗೌರವಕ್ಯೂರೇಟರ್, ಕೆಳದಿ ಮ್ಯೂಸಿಯಂ, ಕೆಳದಿ, ಸಾಗರ ತಾ. ೫೭೭೪೦೧.

ಕಣ್ಣಾನೂರಿನವರೆಗೂ ಸಾಧಿಸಿದ ರಾಜ್ಯವಿಸ್ತರಣೆ, ರೈತರ ಭೂಸುಧಾರಣೆ, ವಿಜಯನಗರದ ಅಂತ್ಯಕಾಲದಲ್ಲಿ ವಿಜಯ ನಗರವನ್ನು ಉದ್ಧರಿಸಿದುದು ಯಾವ ಅಧಿಪತಿಯೂ ತೋರಿಸದೇ ಇರುವ ಔದಾರ್ಯ ಗುಣಗಳಾಗಿವೆ. ಕೆಳದಿ ಶಿವಪ್ಪನಾಯಕನ ಪ್ರಾಚೀನ ವರ್ಣಚಿತ್ರವೊಂದು ಬೆನಾರೆಸ್‌ನಲ್ಲಿದೆ. ಮೊಟ್ಟ ಮೊದಲು ಇದನ್ನು ದಿ॥ ಶಾಂತವೇರಿ ಗೋಪಾಲಗೌಡರು ತಿಳಿಸಿ ಉಪಕರಿಸಿದರು. ಸಕ್ಕರೇಪಟ್ಟಣದ ಶ್ರೀರಂಗನಾಥಸ್ವಾಮಿಗೆ ಕೆಳದಿ ಅರಸರು ನೀಡಿದ ಚಿನ್ನದ ಆಭರಣವೊಂದೂ ಸರಕಾರದ ಖಜಾನೆಯಲ್ಲಿದೆ. ಪ್ರಸಿದ್ಧ ರಾಣಿ ಚೆನ್ನಮ್ಮಾಜಿ ಮರಾಠೆ ಸರದಾರ ಶಿವಾಜಿಯು ಮೋಸವೆಸಗಿದ್ದರೂ ಗಣನೆಗೆ ತಾರದೆ ಆತನ ಮಗ ರಾಜಾರಾಮನನ್ನು ದೆಹಲಿ ಬಾದಷಹ ಔರಂಗಜೇಬಿನ ಉಪಟಳದಿಂದ ಪಾರು ಮಾಡಿ ಬಾದಷಹನ ಸೈನ್ಯವನ್ನೇ ಎದುರಿಸಿದುದು ಭಾರತದ ಇತಿಹಾಸದಲ್ಲಿಯೇ ಪ್ರಮುಖವಾದುದು. ಕನ್ನಡ ನಾಡಿಗೆ ಹೆಮ್ಮೆಯುಂಟುಮಾಡಿದ ಈಕೆಯನ್ನು ಮಹಾರಾಷ್ಟ್ರ ಸ್ಮರಿಸುವುದು ಆದ್ಯ ಕರ್ತವ್ಯ. ಪೂನಾ ಇತಿಹಾಸ ಸಂಶೋಧನಾ ಮಂಡಳದಲ್ಲಿಯೂ ಕೆಳದಿ-ಮರಾಠಾ ಕುರಿತ ಆಕರ ಸಾಮಗ್ರಿಗಳಿವೆ. ಹಿರಿಯ ಬಸಪ್ಪನಾಯಕನು ಸ್ವಯಂ ಕವಿ ವಿದ್ವಾಂಸ. ಈತನ 'ಶಿವತತ್ತ್ವರತ್ನಾಕರ' ಉಜ್ವಲ ಕೃತಿಯಾಗಿದ್ದು ಇದನ್ನು ಜರ್ಮನಿ ಭಾಷೆಯಲ್ಲಿ ಪ್ರಕಟಿಸಲು ನ್ಯಾಷನಲ್ ಮ್ಯೂಜಿಯಂ ಮಹಾ ನಿರ್ದೇಶಕರಾಗಿದ್ದ ಡಾ. ಶಿವರಾಮಮೂರ್ತಿರವರು ಭಾಷಾಂತರಿಸಿದ್ದರು. ಕೆಳದಿ ಸಂಶೋಧನಾಲಯ ಪ್ರಕಟಿಸಿದ ಇಂಗ್ಲೀಷ್ ಮೌಲ್ಯಾತ್ಮಕ ಕೃತಿ ದೇಶ-ವಿದೇಶದ ಮೆಚ್ಚುಗೆ ಪಡೆದಿದೆ. ಕನ್ನಡ ವಿಶ್ವವಿದ್ಯಾಲಯ ಕನ್ನಡದಲ್ಲಿ ಭಾಷಾಂತರಿಸಿ ಪ್ರಕಟಿಸಿದೆ. ಇಮ್ಮಡಿ ಸೋಮಶೇಖರನಾಯಕನು ದೆಹಲಿ ಮೊಗಲರು ಪ್ರಾರ್ಥಿಸಿಕೊಂಡಂತೆ ಅವರು ಕಿರುಕುಳ ನೀಡಿದ್ದರೂ ಗಣನೆಗೆ ತಾರದೆ ಆ ವಂಶವನ್ನು ಉದ್ಧರಿಸಿ ತುಮಕೂರಿನ ಸಿರಾ ಪ್ರಾಂತ್ಯ ಉಳಿಸಿಕೊಟ್ಟನು. ಕೇರಳದ ಕಣ್ಣಾನೂರು ಪೂರ್ತಿ ಈತನಿಗೆ ಅಧೀನವಾಗಿದ್ದ ಅಪೂರ್ವ ಮಾಹಿತಿಯೊಂದು ಬ್ರಿಟಿಷರ ಪತ್ರಾಗಾರದಲ್ಲಿದೆ. ಮಹಾಜನ್ ವರದಿಗೆ ಕನ್ನಡ ಭಾಗವನ್ನು ಗುರುತಿಸುವಲ್ಲಿ ಅಪೂರ್ವ ದಾಖಲೆ ಇದಾಗಿದೆ.

### *ಕೆಳದಿಯ ಧಾರ್ಮಿಕ ಧೋರಣೆ*

ಕೆಳದಿ ಅರಸರ ಧರ್ಮಸಮನ್ವಯದ ಬಗೆಯನ್ನು ಯಾವ ಸರಕಾರಗಳೂ ಅನುಸರಿಸುವಂತಿವೆ. ಈ ಅರಸರು ವೀರಶೈವರಾಗಿದ್ದರೂ ಅದ್ವೈತ, ದ್ವೈತ, ಜೈನ, ಇಸ್ಲಾಂ, ಕ್ರೈಸ್ತ ಧರ್ಮಕ್ಕೆ ಉದಾರವಾಗಿ ನೀಡಿದ ಆಶ್ರಯಗಳೇ ಇದಕ್ಕೆ ಸಾಕ್ಷಿ. ಅದ್ವೈತ ಪಂಥದ ಶೃಂಗೇರಿ ಮಠವನ್ನು ಉದ್ಧರಿಸಿ 'ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ' ಬಿರುದನ್ನು ಪಡೆದರು. ಉಡುಪಿ ಶ್ರೀ ಕೃಷ್ಣ ದೇವಾಲಯದ ಪ್ರತಿಷ್ಠೆ ಕಾಲದಲ್ಲಿ ಒದಗಿದ ಶತ್ರುಗಳ ಉಪಟಳವನ್ನು ನಿವಾರಿಸಿ, ಉತ್ಸವ ನೆರವೇರಿಸಿ ಗರ್ಭಗುಡಿಗೆ ತಾಮ್ರದ ತಗಡು ಹಾಕಿಸಿ, ಉತ್ತಾರ ನೀಡಿದರು. ಈಗ ಇವು ಕಣ್ಮರೆಯಾಗಿವೆ. ಜೈನಕೇಂದ್ರ ಮೂಡಬಿದರೆ ದೇವಾಲಯವನ್ನು ಜೀರ್ಣೋದ್ಧರಿಸಿದರು. ಇದರ ಶಾಸನ ಲಭಿಸಿದೆ. ಇಸ್ಲಾಂ ಧರ್ಮದವರಿಗೆ ನಿರ್ಮಿಸಿಕೊಟ್ಟ ಮಸೀದಿ ಈಗಲೂ ಕೌಲೇದುರ್ಗ, ಹಳೇನಗರದಲ್ಲಿರುವುದನ್ನು ಮೈಸೂರು ವಿಶ್ವ ವಿದ್ಯಾಲಯದ ಶ್ರೀ ಮಹಮ್ಮದ್ ಶರೀಫ್‌ರವರು ತೋರಿಸಿ ಕೊಟ್ಟಿದ್ದಾರೆ. ಕ್ರೈಸ್ತರಿಗೆ ಇಗರ್ಜಿಗಳನ್ನು ನಿರ್ಮಿಸಲು ಸಹಾಯವಿತ್ತಿರುವುದನ್ನು ಮಂಗಳೂರಿನ ಕ್ರೈಸ್ತ ಪಾದ್ರಿ ಡಾ. ಪಿಂಟೋ ಹಾಗೂ ಡಾ. ಕುಟಿನ್ಹೋರವರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧದಲ್ಲಿ ವಿಶದೀಕರಿಸಿದ್ದಾರೆ.*[೨] ವಿಧರ್ಮೀಯರು ಈ ಅರಸರಿಗೆ ಅನೇಕ ಕಿರುಕುಳವಿತ್ತರೂ ವಿಚಲಿತರಾಗದೆ ಧರ್ಮ ಸಹಿಷ್ಣುತೆಯಿಂದ ಆಯಾಧರ್ಮೀಯರಿಗೆ ಧಾರ್ಮಿಕವಾಗಿ ಕ್ಷೋಭೆಯುಂಟಾಗದಂತೆ ಆಡಳಿತ ನಡೆಸಿದ ಇವರ ಬಗೆ ಈಗಿನ ಹಾಗೂ ಮುಂದಿನ ಪೀಳಿಗೆಗೆ ಆದರ್ಶಪ್ರಾಯವಾದುದು. ಪ್ರಾಚೀನ ಹಸ್ತಪ್ರತಿಗಳ ಸರ್ವೇಕ್ಷಣೆಯಲ್ಲಿ ಲಭಿಸಿದ ಭಾಷಾಪತ್ರಿಕೆಯೊಂದೂ ಈ ದಿಸೆಯಲ್ಲಿ ಗಮನಾರ್ಹವಾದುದು.*[೩]

### *ಶಾಸನಗಳು ಮತ್ತು ಸಾಹಿತ್ಯ*

ಯಾವ ದೊರೆಗೂ ಕಡಮೆಯಿಲ್ಲದಂತೆ ಕೆಳದಿ ಅರಸರು ಗಣನೀಯ ಪ್ರಮಾಣದಲ್ಲಿ ನೀಡಿದ ಶಾಸನಗಳ ಸಂಪತ್ತು ಗಮನಾರ್ಹವಾದುದು. ಈಗಾಗಲೇ ಮುನ್ನೂರಕ್ಕೂ ಹೆಚ್ಚು ಶಾಸನಗಳು ಪ್ರಕಟವಾಗಿದ್ದು, ಹೆಚ್ಚು ಕಡಮೆ ಇಷ್ಟೇ ಸಂಖ್ಯೆಯ ಇನ್ನಷ್ಟು ಶಾಸನಗಳೂ ಲಭಿಸಿದ್ದು ದ್ವಿತೀಯ ಸಂಪುಟವೂ ಸಿದ್ಧವಾಗುತ್ತಿದೆ. ತುಮಕೂರಿನ ಸೀಬಿಯಲ್ಲಿಯೂ ಇವರ ಶಾಸನಗಳೂ ಲಭಿಸಿವೆ. ಪ್ರೊ. ಸಾಲೆತೊರೆ ಅವರು ಮದರಾಸಿನ ಫೋರ್ಟ್‌ಸೆಂಟ್‌ಜಾರ್ಜ್ ವಸ್ತುಸಂಗ್ರಹಾಲಯದಲ್ಲಿಯೂ ಈ ಕುರಿತು ಸರ್ವೇಕ್ಷಣೆ ನಡೆಸಿದ್ದರು. ಉತ್ತರ ಭಾರತದಲ್ಲಿನ ಬೆನಾರೆಸ್‌ನಲ್ಲಿ ಕೆಳದಿ ಅರಸರ ಶಾಸನಗಳಿರುವುದು ಗಮನಾರ್ಹ ವಾದುದೆಂದು ಶಾಸನ ತಜ್ಞ ಡಾ. ಗಾಯಿ ಹಾಗೂ ಡಾ. ಕೆ. ವಿ. ರಮೇಶ್ ಅಭಿಪ್ರಾಯಪಟ್ಟಿದ್ದಾರೆ. ಒಟ್ಟಿನಲ್ಲಿ ಶಾಸನ ಸಂಪತ್ತಿನ ಇತಿಹಾಸದಲ್ಲಿಯೂ ಕೆಳದಿ ಅರಸರ ಸಾಧನೆ ಹಿರಿದಾದುದು.

ಸಾಹಿತ್ಯ ಸಂಪತ್ತಿನಲ್ಲಿಯೂ ಈ ಅರಸರು ಹಿಂದೆ ಬಿದ್ದಿಲ್ಲವೆಂಬುದನ್ನು ಡಾ. ಸಾ. ಶಿ. ಮರುಳಯ್ಯ ಹಾಗೂ ಡಾ. ಜಿ. ವಿ. ಕಲ್ಲಾಪುರ್ ಅವರು ಮಹಾಪ್ರಬಂಧದಲ್ಲಿ ತೋರಿಸಿ ಕೊಟ್ಟಿದ್ದಾರೆ. ಅಪ್ರಕಟಿತ ಸಾಹಿತ್ಯ ಹಸ್ತಪ್ರತಿಗಳು ಕೆಳದಿ ಸಂಶೋಧನಾಲಯದಲ್ಲಿ ಪ್ರಕಟಣೆಗೆ ಎದುರು ನೋಡುತ್ತಿವೆ. ಲಂಡನ್‌ನಲ್ಲಿರುವ ಇಂಗ್ಲೀಷಿನ ಕೆಳದಿ ನೃಪವಿಜಯ, ಅಲಹಾಬಾದಿನಲ್ಲಿರುವ ಕೆಳದಿ ಅರಸರ ಕಾಲದ ಗೀತಗೌರೀವರ, ಪೂನಾದಲ್ಲಿರುವ ಕೆಳದಿ ಬಸವರಾಜನ ಸುಭಾಷಿತ ಸುರದ್ರುಮ, ಯಕ್ಷಗಾನದ ಚಂದ್ರಹಾಸ ಚರಿತ್ರೆ ಮುಂತಾದುವು ಪ್ರಕಟಣೆಗೆ ಎದುರು ನೋಡುತ್ತಿವೆ. ಕೆಳದಿ ಅರಸರು ಯಕ್ಷಗಾನಕ್ಕೆ ನೀಡಿದ

ಪ್ರೋತ್ಸಾಹವನ್ನು ಡಾ. ಶಿವರಾಮ ಕಾರಂತರ ಕೃತಿಯಲ್ಲಿ ಅವಲೋಕಿಸಬಹುದು. ಕೆಳದಿ ಲಿಂಗಣ್ಣಕವಿಯ ಹಲವಾರು ಕೃತಿಗಳನ್ನು ಕೆಳದಿ ಸಂಶೋಧನಾಲಯ ಸಿದ್ಧಪಡಿಸುತ್ತಿದ್ದು ಪ್ರಕಟಣೆಗಾಗಿ ಕಾಯುತ್ತಿವೆ.

***ಕೆಳದಿ ಇತಿಹಾಸ ಸಂಶೋಧನೆಗಳು***

ಸ್ವಾತಂತ್ರ್ಯ ಪೂರ್ವದಿಂದಲೂ ಕೆಳದಿ ಇತಿಹಾಸಕ್ಕೆ ಸೂಕ್ತ ಗಮನ ಒದಗಿಲ್ಲ. ಎಂ. ಎಸ್. ಪುಟ್ಟಣ್ಣನವರ "ಇಕ್ಕೇರಿ ಸಂಸ್ಥಾನದ ಚರಿತ್ರೆ", "ಇಕ್ಕೇರಿ ಪಾಳೆಯಗಾರರು", "ಬಿದನೂರು ಸಂಸ್ಥಾನದ ಚರಿತ್ರೆ", "ಬಿದನೂರು ಪಾಳೆಯಗಾರರು" ನಗರ ಸಂಸ್ಥಾನದ ಚರಿತ್ರೆ ಎಂದೆಲ್ಲಾ ಕರೆದಿರುವುದು ಸೀಮಿತ ನೆಲೆ ಎನ್ನುವಂತಾಗಿ ಬಿಟ್ಟಿದೆ. ಪೀಟರ್ ಆಲ್ವಾರಿಸ್ ಹಾಗೂ ಡಾ. ಸ್ವಾಮಿನಾಥನ್ ರವರೂ ಇದಕ್ಕೆ ಹೊರತಾಗಿಲ್ಲ. ಮೈಸೂರು ಸಂಸ್ಥಾನದ ಚರಿತ್ರೆಯ ನಿರೂಪಣಕಾರರು ಮೈಸೂರು ಒಡೆಯರು ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದಾಗ "ಮೈಸೂರು ಸಂಸ್ಥಾನದ ಚರಿತ್ರೆ", "ಮೈಸೂರು ಒಡೆಯರ ಇತಿಹಾಸ"ವೆಂದೇ ದಾಖಲಿಸಿಕೊಂಡು ಬಂದಿದ್ದಾರೆ. ವಿಜಯನಗರ ಚಕ್ರವರ್ತಿಗಳು ಹಂಪೆಯಿಂದ ಆಡಳಿತ ನಡೆಸಿದರೂ ವಿಜಯನಗರ ಚಕ್ರವರ್ತಿಗಳೆಂದೇ ಪ್ರಸಿದ್ಧರಾಗಿದ್ದಾರೆ. ಕೆಳದಿಗೂ ಇದೇ ಬಗೆಯ ಮೌಲ್ಯ ಒದಗಬೇಕಿತ್ತು. ಪಾಳೆಯಪಟ್ಟು ಆಳುವ ಕೇಂದ್ರಗಳಲ್ಲಿ ಮಾತ್ರ ಪಾಳೆಯಗಾರರ ಹೆಸರುಗಳು ಇತಿಹಾಸದಲ್ಲಿ ಸರ್ವವೇದ್ಯ. ಉದಾ : ಮಧುಗಿರಿ ಪಾಳೆಯಗಾರರು, ತರೀಕೆರೆ ಪಾಳೆಯಗಾರರು, ಹರಪನಹಳ್ಳಿ ಪಾಳೆಯಗಾರರು, ಚಿತ್ರದುರ್ಗ, ಹಾಗಲ್ವಾಡಿ ಇತ್ಯಾದಿ.*[೪]

***ಕೆಳದಿ ಧರ್ಮಸಂಸ್ಥಾನ***

ಕೆಳದಿ ನೃಪವಿಜಯದ ಪ್ರಥಮಾಶ್ವಾಸದಲ್ಲಿ - *ವ|| ಇಂತಪ್ಪ ರಾಜಲಾಂಛನೋಪಯುಕ್ತಮಾದ ಬಿರುದುಗಳುಮನಿತ್ತು ಮನ್ನಿಸಿ ತದಾರಭ್ಯ ಕೆಳದಿ ಮೂಲ ಸಂಸ್ಥಾನದ ಮನ್ನೆಯ ಚೌಡಪ್ಪ ನಾಯಕನೆಂದು ಕರೆವುದೆಂದು ನಿಯಾಮಿಸಿ ಪ್ರಖ್ಯಾತಮಪ್ಪಂತು ನಾಲ್ಗಡೆಯೊಳಿರ್ಪ ಮನ್ನೆಯರ್ಗಂ ರಾಯಸಮಂ ಬರೆಸಿ ಸಂಗಡಮುಚಿತಮಪ್ಪ ಗುರಿಮಾನಿಸರಂ ಪ್ರಯಾಣವನೊಡರ್ಚಿಸಿ ನೀವುಂ ನಿಮ್ಮ ಮೂಲ ಸಂಸ್ಥಾನಮಂ ಸಾರ್ದೆರೆದು ಮಾಗಣೆಯ ಪ್ರಜೆ ಪರಿವಾರಮಂ ಕಾಣಿಸಿಕೊಂಡು ರಾಜಮುದ್ರಾಧಿಕಾರದ ಬಣ್ಣುಗುಂದದಂತಾಣೆ ಘೋಷಣೆಯಂಕೆ ಝುಂಕೆ ನಾಣ್ಯ ರಾಯಸ ಮುಂತಾದುವಂ ನಡೆಸಿಕೊಂಡೆಮಗುಂಟಾದೆಮ್ಮ ಕಾರ್ಯಂಗಳೆಲ್ಲಂ ನಿಮ್ಮ ಕಾರ್ಯಂಗಳೆ ಸರಿಯೆಂಮ ಬಗೆದೀ ಪ್ರಕಾರದೊಳ್ ನಿರ್ಭೇದಮಾಗಿ ವರ್ತಿಸುತ್ತುಂ ಸುಖಮಿರ್ಪುದೆಂ ದೊರೆದವರಿರ್ವರ್ಗಮುಚಿತಮಪ್ಪ ದಿವ್ಯತರ ನವರತ್ನಖಚಿತ ಸ್ವರ್ಣಾಭರಣಾಂಬರ ತಾಂಬೂಲಂಗಳನಿತ್ತಾದರಿಸಿ ತೆರಳ್ಚಲತ್ಯಂತ ಹರ್ಷಿತರಾಗಿ....*[೫]*

*ವ|| ಶಿವಪ್ಪನಾಯಕರ ಜೇಷ್ಠ ಕುಮಾರ ಭದ್ರಪ್ಪ ನಾಯಕರ್ಗೆ ಪುತ್ರಾವಾವೆಯಾದ ಕಾರಣಮಾಭದ್ರಪ್ಪನಾಯಕರನುಜನಾದ ತಮಗೆ ವಲ್ಲಭನಾದ ಸೋಮಶೇಖರನಾಯಕರ್ಗಂ ಪುತ್ರಾವಾವೆಯೇ ಆದುದರಿಂದಮಾ ಮರಿಯಪ್ಪಶೆಟ್ಟರ ಕುಮಾರ ಬಸವಪ್ಪನವರ್ ಕೆಳದಿ ಧರ್ಮಸಂಸ್ಥಾನದ ರಾಜತ್ವಕ್ಕರ್ಹರಹುದೆಂದು ಬಸವಪ್ಪನವರಂ ರಾಜತ್ವಕ್ಕೆ ನಿಲಿಸಬೇಕೆಂದು ನಿಶ್ಚಯಂಗೈದು ಸರ್ವಜನ ಸಮ್ಮತಿಯಿಂದಮಾ ಬಸವಪ್ಪನವರ್ಗೆ ಕೆಳದಿ ನೃಪಾಲ ಬಸವಪ್ಪನಾಯಕರೆಂದು ನಾಮಕರಣಮಂ ರಚಿಸಿ.......*

*ಕೆಳದಿ ಅರಸರ ಶಾಸನಗಳಲ್ಲಿ *[೬]- ಶ್ರೀ ಮದ್ದೆಡವ ಮುರಾರಿ ಕೋಟೆ ಕೋಳಾಹಳ ವಿಶುಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ ಶಿವಗುರುಭಕ್ತಿಪರಾಯಣರಾದ ಕೆಳದೀ ಸದಾಶಿವರಾಯ ನಾಯಕರ ವಂಶೋದ್ಭವರಾದ ಸಂಕಂಣನಾಯಕರ ಪ್ರಪೌತ್ರರು ಸಿದಪ್ಪನಾಯಕರ ಪೌತ್ರರು ಶಿವಪ್ಪನಾಯಕರ ಪುತ್ರರು ಸೋಮಶೇಖರ ನಾಯಕರ ಧರ್ಮಪತ್ನಿಯರಾದ ಚೆಂನಂಮಾಜಿಯವರೂ ಇತ್ಯಾದಿಯಾಗಿ ಇರುವಲ್ಲಿ -*

*"ಎಲ್ಲಿಯೂ "ಇಕ್ಕೇರಿ ಸಂಸ್ಥಾನ", "ಬಿದನೂರು ಸಂಸ್ಥಾನ" ಎಂದು ಹೇಳಿಕೊಳ್ಳದೆ ಕೆಳದಿ ಸಂಸ್ಥಾನದ ಹೆಸರಿನಲ್ಲಿ ಆಡಳಿತ ನಡೆಸಿ ಶಾಸನಗಳನ್ನು ಕೂಡ ನೀಡಿರುವುದನ್ನು ಗಮನಿಸಬೇಕಾಗಿದೆ.*

*ಕೆಳದಿ ಬಸವರಾಜನ ಶಿವತತ್ವರತ್ನಾಕರ ೫ನೇ ಕಲ್ಲೋಲ ೨ನೇ ತರಂಗ ಶ್ಲೋಕ ೧-೧೨; ೨೦-೨೭ಗಳಲ್ಲಿ ಕೆಳದಿ ದೇಶವೆಂದು ಉಲ್ಲೇಖಿಸಿದೆ.*

ತಮಿಳುನಾಡಿನಲ್ಲಿದ್ದ ಆನಂದ ರಂಗ ಪಿಳ್ಳೆಯ ತಮಿಳು ಭಾಷೆಯ ದಿನಚರಿಯಲ್ಲಿ*[೭] ಹೇಳಿರುವುದಂತಿದೆ :

"Bednur (Keladi) is a large state and should be treated with as much respect as the Raja of Mysore".

ಇದರ ಪ್ರಕಾರ ಕೆಳದಿಯು ಭಾರತದ ಇತಿಹಾಸದಲ್ಲಿ ಪಾಳೆಯಪಟ್ಟಿಗಿಂತಲೂ ಸಂಸ್ಥಾನದ ಸ್ಥಾನಮಾನವನ್ನು ಹೊಂದಿದ್ದು ಈ ಕಾರಣದಿಂದಲೇ ಪೂನಾ ವಿಶ್ವವಿದ್ಯಾಲಯದ ಡಾ. ಚಿಟ್ನೀಸ್ ಹಾಗೂ ಪ್ರೊ. ದೀಕ್ಷಿತ್‌ರವರು ಇದಕ್ಕೆ ಮಹತ್ವ ನೀಡಿ "Keladi Polity" ಎಂದು ಶೀರ್ಷಿಕೆಯಿತ್ತು ಕೃತಿ ರಚಿಸಿದ್ದಾರೆ. ಕೆಳದಿ ಸಂಸ್ಥಾನದ ಅಧೀನದಲ್ಲಿ ಸುಮಾರು ನಲವತ್ತು ಪಾಳೆಯಪಟ್ಟು ಇರುವುದನ್ನು ಸ್ಥಿರೀಕರಿಸಿದ್ದಾರೆ.*[೮] ಇದನ್ನು ಮನಗಂಡ ವಿದ್ವಾಂಸರ ಗಮನವು ಈಚೆಗೆ ಕೆಳದಿ ಇತಿಹಾಸದೆಡೆಗೆ ಬರುತ್ತಿರುವುದು ಶುಭ ಸಂಕೇತ.

***ಪುನರ್ಮೌಲ್ಯೀಕರಣದೊಂದಿಗೆ ಕೆಳದಿ ಚರಿತ್ರೆ ಸಂಪುಟ***

Bibliography on Keladi History*[೯] ಯಲ್ಲಿ ಕಂಡು ಬಂದಂತೆ ಸುಮಾರು ೪೦೦ಕ್ಕೂ ಹೆಚ್ಚು ಕೃತಿಗಳು ಕೆಳದಿ ಇತಿಹಾಸವನ್ನು ಕೊಟ್ಟು ಬೆಳಕು ಕಂಡಿವೆ. ಬೊಂಬಾಯಿ, ಪುಣೆ, ಮದರಾಸು, ಧಾರವಾಡ, ಮೈಸೂರು, ಕುವೆಂಪು ವಿಶ್ವವಿದ್ಯಾಲಯಗಳಲ್ಲಿ ಸುಮಾರು ೧೫ ಮಹಾಪ್ರಬಂಧಗಳು ಈ ದಿಸೆಯಲ್ಲಿ ಹೊರಬಂದಿವೆ. ಇನ್ನೂ ಬರುತ್ತಲೇ ಇವೆ. ಲಂಡನ್‌ನ ಡಾ. ಬಿಯರ್‌ಸ್ಟೆಯಿನ್, ಜಪಾನ್‌ನ ಡಾ. ಮಸಾಹಿಕೋ

ಸಾಟೋರವರು, ಜರ್ಮನಿಯ ಕಲಾತಜ್ಞೆ ಶ್ರೀಮತಿ ಸೋರಿ, ತಂಜಾವೂರಿನ ಪುರಾತತ್ವ ವಿದ್ವಾಂಸರು ಈ ಇತಿಹಾಸ - ಸಂಸ್ಕೃತಿ ಕುರಿತು ಪ್ರಕಟಿಸಿದ್ದಾರೆ. ಇಟಲಿಯ ಡಾ. ತಿಝಿಯಾನ ರಿಪೆಪಿರವರೂ ಕೆಳದಿ ಸಾಹಿತ್ಯವನ್ನೇ ಅಧ್ಯಯಿನಿಸುತ್ತಿದ್ದಾರೆ.

ಕೆಳದಿ ಇತಿಹಾಸ-ಸಂಸ್ಕೃತಿಯನ್ನರಿಯಲು ಅಧ್ಯಯನಶೀಲರಿಗೆ ಕನ್ನಡ ಮತ್ತು ಇಂಗ್ಲೀಷಿನಲ್ಲಿ ಮೌಲ್ಯಾತ್ಮಕ ಸಂಪುಟದ ಕೊರತೆಯೊಂದು ಬಾಧಿಸುತ್ತಿದೆ. ಪ್ರೊ. ಜಿ. ಎಸ್. ಹಾಲಪ್ಪನವರು ಬಹು ಹಿಂದೆಯೇ ಇದನ್ನು -

"Unfortunately a comprehensive history of Keladi has not been compiled, although there are abundant sources. History is to be interpreted and reinterpreted to make the nation sensitive and strong. Historical research has made wonderful progress in Maharashtra and elsewhere; but here in Karnataka many brilliant pages of our past history are still to be written. Many glorious chapters of the history of our country will remain in obscurity as long as the apathy towards it continues."

- ಈ ರೀತಿ ಎಚ್ಚರಿಸಿದ್ದಾರೆ. ಕೆಳದಿ ಇತಿಹಾಸ ಸಂಸ್ಕೃತಿ ಕುರಿತು ಕೈಗೊಳ್ಳಬೇಕಾದ ಸಂಶೋಧನೆ ವಿಪುಲವಾಗಿದೆ. ಹಂಪೆಯ "ಕನ್ನಡ ಅಧ್ಯಯನ" ಸಂಪುಟದಲ್ಲಿ ಇವುಗಳ ವಿವರಣೆಯನ್ನು ಅವಲೋಕಿಸಬಹುದಾಗಿದೆ.*೧೦

***ಉಪಸಂಹಾರ***

ಸ್ವಾತಂತ್ರ್ಯ ಪೂರ್ವದಲ್ಲಿ ವಿವಿಧ ರೀತಿಯ ಬೌದ್ಧಿಕ ಧಾಳಿಗೆ ಒಳಗಾಗಿ ಕಣ್ಮರೆಯಾಗುತ್ತಿದ್ದ ಕೆಳದಿ ಇತಿಹಾಸ ಸಂಸ್ಕೃತಿ ಕುರಿತಂತೆ ಯಥಾವತ್ತಾಗಿ ಮುಂದಿನ ಪೀಳಿಗೆಗೆ ವಿಶದೀಕರಿಸುವುದು ಅಗತ್ಯವಿದೆ. ಪಾಳೆಯಪಟ್ಟಿಗಿಂತಲೂ ಮಹತ್ವವಾದ, ಹಾಗೂ ಇತರೆ ರೀತಿಗಳಲ್ಲಿ ಪ್ರಬಲವಾದ ಕೆಳದಿ ಇತಿಹಾಸವನ್ನು ಅಧ್ಯಯನ ಮಾಡಿದಷ್ಟೂ ವೈವಿಧ್ಯಪೂರ್ಣವಾದ ಸಾಮಗ್ರಿಗಳು ಬೆಳಕು ಕಾಣುತ್ತಿರುವುದು ಕೆಳದಿ ಇತಿಹಾಸ ಸಂಶೋಧನಾಲಯದಲ್ಲಿ ಕಂಡುಕೊಳ್ಳಬಹುದು.

***ಕೆಳದಿ ಇತಿಹಾಸದಿಂದ ಕಲಿಯಬೇಕಾದ ಪಾಠಗಳು***

ಕೆಳದಿ ರಾಣಿ ಚೆನ್ನಮ್ಮಾಜಿಯು ತನ್ನ ಮಗ ಬಸವರಾಜನಿಗೆ ನೀಡಿರುವ ಉಪದೇಶ ವಾಕ್ಯಗಳು ಮನನೀಯವಾದುವು. ಕೆಳದಿ ಅರಸರ ಧಾರ್ಮಿಕ ಧೋರಣೆ ಈಗಿನ ಜಾತ್ಯಾತೀತ ನೀತಿಯಲ್ಲಿ ಗಮನಾರ್ಹವಾಗಿದೆ. ತಮ್ಮ ಸ್ವಾರ್ಥಮೀರಿ ಸಾಮ್ರಾಜ್ಯ ರಕ್ಷಿಸಲು ವಿಜಯನಗರಕ್ಕೆ ಗೋವಾದಿಂದ ಆರಂಭಿಸಿ ಬಿಜಾಪುರ, ಅಹ್ಮದ್ ನಗರ, ಕಲ್ಬುರ್ಗಿ ಮುಂತಾದ ಪ್ರಾಂತ್ಯಗಳನ್ನು ಅಧೀನವಾಗಿಸಿ ದುದಲ್ಲದೆ ವಿಜಯನಗರ ಅಂತ್ಯಕಾಲದಲ್ಲಿ ಶಿವಪ್ಪನಾಯಕನು ಶ್ರೀರಂಗರಾಯನನ್ನು ಉದ್ಧರಿಸಿದುದು ಆದರ್ಶನೀಯವಾದುದು.

ಮರಾಠೆ ಸರದಾರ ಶಿವಾಜಿಯು ನೀಡಿದ್ದ ಕಿರುಕುಳವನ್ನು ಗಣನೆಗೆ ತಾರದೆ ಅವನ ಮಗ ರಾಜಾರಾಮನನ್ನು ರಕ್ಷಿಸಿ ಮಹಾರಾಷ್ಟ್ರವನ್ನು ಉಳಿಸಿದುದು ಕೆಳದಿಯ ತಾಳ್ಮೆಗೆ ಹೆಸರಾಗಿದೆ.

ಔರಂಗಜೇಬನು ಉಪಟಳ ನೀಡಿದ್ದರೂ ಮೊಗಲರ ವಂಶದ ಅಂತ್ಯಕಾಲದಲ್ಲಿ ಆ ದೊರೆಯು ವಂಶವನ್ನು ಪುನರು ದ್ಧರಿಸಲೂ ಕೆಳದಿ ಸೋಮಶೇಖರ ನಾಯಕನನ್ನು ಪ್ರಾರ್ಥಿಸಲು ತುಮಕೂರಿನ ಸೀರ್ಯವನ್ನು ಪುನರುದ್ಧರಿಸಿದುದು, ಹೈದರನೊಂದಿಗೆ ಸವಣೂರು ನವಾಬನು ಕೆಳದಿ ಪರವಾಗಿ ಹೋರಾಡಿದುದನ್ನು ಉದಹರಿಸಬಹುದು.

i. ಕ್ರೈಸ್ತರು ಹಿಂದೆ ಹಿಂಸೆ ನೀಡಿದ್ದರೂ ಡಾ. ಪಿಂಟೋರವರು ನುಡಿದಂತೆ ಉದಾರಿಗಳಾಗಿ ಅವರಿಗೆ ಆಶ್ರಯ ನೀಡಿದುದು.
ii. ವಿಕೇಂದ್ರೀಕರಣ ನೀತಿಯಂತೆ ಆಯಾ ಪಾಳೆಯಪಟ್ಟು ಗಳಲ್ಲಿರುವ ಸಮಸ್ಯೆ ಬಗೆಹರಿಸಿ ಅವರಿಗೇ ಹಿಂದಿರುಗಿಸಿ ದುದು.
iii. ದೇಶದ ಜನಸಾಮಾನ್ಯರಿಗೂ, ರೈತರಿಗೂ ಯಾವ ಕಿರುಕುಳವೂ ಇಲ್ಲದಂತೆ ರಾಜಾದಾಯವನ್ನು ಹೆಚ್ಚಿಸಿ, ದೇಶಭಕ್ತಿಯುಂಟಾಗುವಂತೆ ಮಾಡಿದುದು.
iv. ಸಾಹಿತ್ಯ - ಸಂಸ್ಕೃತಿ ಕಲೆಗಳನ್ನು ಅಭಿವೃದ್ಧಿಪಡಿಸಿದುದು.

- ಇವುಗಳೆಲ್ಲವನ್ನೂ ಈಗಿನ ಪ್ರಜಾಪ್ರಭುತ್ವಕ್ಕೆ ಹೋಲಿಸಿ ದಲ್ಲಿ ಈ ಅರಸರ ಸಾಧನೆಯ ಹಿರಿಮೆ ವ್ಯಕ್ತವಾಗುವುದು.

***ಅನುಬಂಧ***

*ದಿ|| ಎಂ. ಎಸ್. ಪುಟ್ಟಣ್ಣನವರು ತಮ್ಮ ಪೀಠಿಕೆಯಲ್ಲಿ (೩.೬.೧೯೨೮) ಪಾಳೆಯಪಟ್ಟಿಗಿಂತಲೂ ಕೆಳದಿಯು ದೊಡ್ಡ ರಾಜ್ಯವ ಚರಿತ್ರೆಯೆಂದು ವರ್ಣಿಸಿ ಉಪಸಂಹಾರದಲ್ಲಿ ಖೇದದಿಂದ ಹೀಗೆ ನುಡಿದಿದ್ದಾರೆ.*

*ಈ ಪ್ರಕಾರ ೧೭೬೩ರಲ್ಲಿ ಇಕ್ಕೇರಿ ಸಂಸ್ಥಾನ ಹೋಯಿತು. ತಮ್ಮ ಸ್ವಸಾಮರ್ಥ್ಯದಿಂದ ಆದಿಯಲ್ಲಿ ರಾಜ್ಯವನ್ನು ಕಟ್ಟಿನಿಂತಂಥಾ ವಂಶವು ವಿಜಯನಗರ ಚಕ್ರಾಧೀಶ್ವರರಾದ ಕೃಷ್ಣದೇವರಾಯದಲ್ಲಿ ಮಹಾಪರಾಕ್ರಮವನ್ನು ತೋರಿ ಅವರ ದಯಕ್ಕೆ ಪಾತ್ರರಾಗಿ ಕೆಳದಿ ಸಂಸ್ಥಾನವನ್ನು ಮಾಡಿದಂಥಾ ಮೂಲಪುರುಷರಾದ ವೀರರ ವಂಶ; ರಾಜ್ಯಪರಿಪಾಲನೆ ಮಾಡುವ ಪ್ರಭುವಾದಾಗ್ಯೂ ಸಾಧಾರಣ ಜಂಗಮನಂತೆ ಭಸ್ಮ ರುದ್ರಾಕ್ಷಿ ಕಾವಿಶಾಲಿಯನ್ನು ಧರಿಸಿ ದೇಶಾಟನೆ ಮಾಡುತಾ ದಿಳ್ಳಿಗೆ ಹೋಗಿ ಅಲ್ಲಿ ದೇಹವಾರ್ಢ್ಯದಿಂದ ಪ್ರಮತ್ತನಾಗಿ ಅಲ್ಲಿನ ದೊರೆಗಳಿಗೂ ಕೂಡ ಭೀತಿಗೆ ಆಸ್ಪದನಾಗಿ ಗರ್ವದಿಂದ ಮೆರೆಯುತಿದ್ದ ಅಂಕುಶಖಾನನೆಂಬ ನರರಾಕ್ಷಸನ ಸೊಂಟಕ್ಕೆ ಸರಿಯಾಗಿ ತನ್ನ ಕೈಪಟ್ಟಾ ಕತ್ತಿಯಿಂದ ಅತ್ಯಂತ ಚಮತ್ಕಾರವಾಗಿ ಹೊಡೆದು ನಿಮಿಷಾರ್ಧದಲ್ಲಿ ಕತ್ತರಿಸಿ ಖ್ಯಾತಿಯನ್ನು ಪಡೆದ ಮಹಾಪರಾಕ್ರಮಶಾಲಿಯಾದ ದೊಡ್ಡಸಂಕಣ್ಣನಾಯಕನ ವಂಶ; ತಮ್ಮ ಸ್ವಂತ ಶೌರ್ಯದಿಂದ ವಿಶೇಷವಾಗಿ ರಾಜ್ಯವನ್ನು ಸಂಪಾದಿಸಿ ಸೀಮೆ ಯನ್ನು ವಿಸ್ತರಿಸಿ ತುರುಕರ ಹಾವಳಿಯನ್ನು ಅಡಗು ಮೆಟ್ಟಿಕೊಂಡು ಆಳಿದ ರಾಜರುಗಳ ವಂಶ; ಸ್ವಂತ ಪರಾಕ್ರಮದಿಂದ ಅನೇಕ*

*ಯುದ್ಧಗಳಲ್ಲಿ ಜಯವನ್ನು ಹೊಂದಿ ಶ್ರೀರಂಗಪಟ್ಟಣವನ್ನು ಜಯಿಸಿ ಕೊಳ್ಳಬೇಕೆಂದು ಭಾರಿ ದಂಡಿನೊಡನೆ ವಿಜಯ ಯಾತ್ರೆಗಾಗಿ ಬಂದು ಸ್ಥಳದಲ್ಲಿ ನಡೆದ ಗಲಭೆಯ ಉದ್ದಿಶ್ಯವಾಗಿ ಹಿಂತಿರುಗಿ ಹೋಗಿ ಅಲ್ಲಿ ದುಷ್ಪರ ಗಲಭೆಯನ್ನು ಅಡಗಿಸಿ ಕಂದಾಯದ ಸಿಸ್ತು ಮೊದಲಾದ್ದನ್ನು ನಿರ್ಣಯ ಮಾಡಿ ಕೀರ್ತಿಯನ್ನು ಹೊಂದಿದ ಧೀರನಾದ ಶಿವಪ್ಪನಾಯಕನ ವಂಶ; ಹಲವು ಸಣ್ಣ ರಾಜವಾಡೆಗಳಲ್ಲಿಯೂ, ದೊಡ್ಡ ಸಂಸ್ಥಾನೀಕರಲ್ಲಿಯೂ ಹುಟ್ಟಿದ್ದ ಪರಸ್ಪರ ಕದನಗಳನ್ನೂ ಮಧ್ಯಸ್ಥರ ಮೂಲಕ ತೆಪ್ಪಗೆ ಮಾಡಿ ತಾವೂ ಹೊಸ ಸೀಮೆಗಳನ್ನು ಸಂಪಾದಿಸಿಕೊಂಡ ದೊರೆಗಳ ವಂಶ; ಪೂರ್ವದಿಂದಲೂ ಹೆಚ್ಚಿಕೊಂಡು ರಾಜ್ಯಕ್ಕೆಲ್ಲಾ ಇಲ್ಲದ ಕಷ್ಟವನ್ನು ಉಂಟುಮಾಡುತಾ ಇದ್ದ ತುಂಟರ ದೌಷ್ಟ್ಯವನ್ನು ನಾಶಮಾಡಿ ದೇಶವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಧರ್ಮದಿಂದ ಆಳುತಾ ತನ್ನ ಮರೆ ಹೊಕ್ಕ ಕೊಲ್ಹಾಪುರದ ರಾಜಾರಾಮನನ್ನು ಕಾಪಾಡಿ, ಹೊಸ ಗವಲೆಂದು ಹರಿಸಿಕೊಂಡು ಬಂದ ಔರಂಗಸೇಬನ ದಂಡನ್ನೂ ಪರಾಕ್ರಮದಿಂದ ಸೋಲಿಸಿ ಓಡಿಸಿದಂಥಾ ರಾಣಿ ಚನ್ನಮ್ಮಾಜಿಯ ವಂಶ; ಅನೇಕ ಜೋಗಿ ಜಂಗಮರಿಗೆ ಬ್ರಾಹ್ಮಣರಿಗೆ ಶಾಶ್ವತವಾದ ಸ್ವಾಸ್ಥ್ಯಗಳನ್ನು ಕೊಟ್ಟು ಕಾಪಾಡಿ ಲೆಕ್ಕವಿಲ್ಲದಷ್ಟು ಜನ ಮಹಾಪಂಡಿತರುಗಳಿಗೆ ಮುಖ್ಯಾಶ್ರಯ ಸ್ಥಾನವಾಗಿ, ಉತ್ತಮವಾದ ಗ್ರಂಥಗಳನ್ನು ಬರೆಯಿಸಿ ಪ್ರಸಿದ್ಧಿಯನ್ನು ಪಡೆದ ವಂಶ - ಇಂಥಾ ಇಕ್ಕೇರಿ ದೊರೆಗಳ ವಂಶವು ಇಲ್ಲಿಗೆ ನಿರ್ಮೂಲವಾಯಿತು.*೧೧*

ಹೈದರನು ಹೈದರನಗರವೆಂಬ ಬಿದನೂರನ್ನು ರಾಜಧಾನಿ ಯಾಗಿರಿಸಿಕೊಂಡು ಇಡೀ ಕೆಳದಿ ರಾಜ್ಯದೊಂದಿಗೆ ಇನ್ನಷ್ಟು ಪ್ರಾಂತ್ಯಗಳನ್ನು ಕೈವಶ ಮಾಡಿಕೊಂಡು ಆಳುವ ಉತ್ಕಟೇಚ್ಛೆ ಹೊಂದಿದ್ದನು. ಈ ರೀತಿ ಒಂದು ವೇಳೆ ಆಗಿದ್ದಿದ್ದರೆ ಅಥವಾ ಕೆಳದಿಗೆ ಧಾಳಿಯಾಗದಿದ್ದಿದ್ದರೆ ದಕ್ಷಿಣ ಭಾರತದಲ್ಲಿ ಕೆಳದಿ ರಾಜ್ಯದ ಇತಿಹಾಸ-ಚರಿತ್ರೆಗೆ ಮತ್ತಷ್ಟು ಪ್ರಮುಖ ಸ್ಥಾನ ಲಭಿಸುವಂತಾ ಗುತ್ತಿತ್ತೆಂದು ಪೀಟರ್ ಆಲ್ವಾರಿಸ್ ಆದಿಯಾಗಿ ಡಾ. ಚಟ್ನೀಸ್, ಪ್ರೊ. ದೀಕ್ಷಿತ್, ಡಾ. ಕಾಮತ್ ಮುಂತಾದವರು ಅಭಿಪ್ರಾಯ ಪಟ್ಟಿದ್ದಾರೆ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. EC VII, Sk 79.

*೨. ಡಾ. ಪಿಯುಸ್ ಫಿಡೆಲಿಸ್ ಪಿಂಟೋ., (೧೯೯೯), **ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ ಕ್ರಿ. ಶ. ೧೫೦೦-೧೭೬೩**; ಸಮನ್ವಯ ಪ್ರಕಾಶನ; ಮಂಗಳೂರು.

*೩. ನನ್ನ ಸಂಶೋಧನೆಯಲ್ಲಿ ಕಂಡುಬಂದ ತಿಗಳಾರಿ ಓಲೆಗರಿ ಹಸ್ತಪ್ರತಿ.

*೪. 'ಎಪ್ಪತ್ತೇಳು ಪಾಳೆಯಗಾರರು'; ಪ್ರೊ. ಲಕ್ಷ್ಮಣ್ ತೆಲಗಾವಿ; **ಇತಿಹಾಸ ದರ್ಶನ** ಸಂ/೩ ಸಂ/೧ ೧೯೮೮. ಮತ್ತು ಡಾ. ಡಿ. ಎನ್. ಯೋಗೀಶ್ವರಪ್ಪ ಇವರ "ಪಾಳೆಯಗಾರ ಪದಪ್ರಯೋಗ ಒಂದು ಟಿಪ್ಪಣಿ" ಲೇಖನ. ಎಂ. ಎಸ್. ಪುಟ್ಟಣ್ಣನವರೂ ತಮ್ಮ ಕೃತಿಯಲ್ಲಿ ಕೆಳದಿ ಸಂಸ್ಥಾನ, ಕೆಳದಿ ದೊರೆ, ಕೆಳದಿ ಅರಸರು ಎಂಬುದಾಗಿಯೇ ಕರೆದಿದ್ದಾರೆ. ಪು. ೫೧, ೭೩, ೫೯, ೧೧೬. ಹೀಗಿದ್ದೂ "ಇಕ್ಕೇರಿ ಸಂಸ್ಥಾನದ ಚರಿತ್ರೆ" ಎಂಬ ಶೀರ್ಷಿಕೆ ಚರ್ಚಾಸ್ಪದವಾಗಿದೆ. ಇದೇ ಕೃತಿಯಲ್ಲಿ ಗ್ರಂಥಕರ್ತರೇ ಇದು ದೊಡ್ಡ ರಾಜ್ಯದ ಇತಿಹಾಸವೆಂದೂ ಹೇಳಿದ್ದಾರೆ. ಪೀಠಿಕೆ ಹಾಗೂ ಅನುಬಂಧ ನೋಡಿ. **ಸತ್ಯಶುದ್ಧ ಕಾಯಕ** ಸಂ.-೯ ಸಂ.೧-೪; The Polygar system in the Tamil country; Its origin and growth by C. S. Srinivasachary, M.A., IHRC XI PP 100-106.

*೫. ಕೆ.ನ್ಯ.ವಿ. I ಆ.; ಅದೇ IX ಆ.

*೬. **ಕೆಳದಿ ಅರಸರ ಶಾಸನ ಸಂಪುಟ**; -(ಸಂ), ಡಾ. ಕೆ. ಜಿ. ವೆಂಕಟೇಶ ಜೋಯಿಸ್; ಶ್ರೀ ತೋಂಟದಾರ್ಯ ಮಠ ಗದಗ.

*೭. **ಇತಿಹಾಸ ದರ್ಶನ** ಸಂ ೧೩/೧೯೯೮ ಪುಟ ೨೪ ನೋಡಿರಿ.

*೮. The Feudatory chiefs under Bednur (Keladi); Dr. K. N. Chitnis; *Bulletin of the Deccan College Research,* Poona. Vol. XXXI pt I 1970-71 pt II 1971-72, 1973.

*೯. Bibliography on Keladi History; Dr. Venkatesh Jois, ICHR, New Delhi.

*೧೦. ಕನ್ನಡ ಅಧ್ಯಯನ ಚಳಿ ಸಂಚಿಕೆ, Vol VI ೨ ಪು. ೧೧೩; ಕನ್ನಡ ವಿಶ್ವವಿದ್ಯಾಲಯ ಹಂಪಿ, ನೋಡಿರಿ.

*೧೧. ಎಂ. ಎಸ್. ಪುಟ್ಟಣ್ಣ., **ಇಕ್ಕೇರಿ ಸಂಸ್ಥಾನದ ಚರಿತ್ರೆ**; ಪು. ೧೫೩-೧೫೪.

ಪ್ರೊ. ಎಂ. ಧ್ರುವನಾರಾಯಣ*

# ಹೈದರಾಬಾದ್ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಆಂದೋಲನ

## (೧೮೦೦-೧೯೪೮ ಸೆಪ್ಟೆಂಬರ್ ೧೭)

ವ್ಯಾಪಾರಕ್ಕೆಂದೇ ಬಂದಿದ್ದ ಬ್ರಿಟಿಷರು ಕ್ರಿ. ಶ. ೧೮೦೦ ರಿಂದ ತಮ್ಮ ಸಾಮ್ರಾಜ್ಯದ ತಳಪಾಯವನ್ನು ವಿವಿಧ ಒಪ್ಪಂದಗಳ ಮೂಲಕ ಭಾರತದ ೬೦೦ ರಾಜ್ಯಗಳ ರಾಜರನ್ನು ತಮ್ಮ ಆಧೀನದಲ್ಲಿರಿಸಿಕೊಂಡು ತಮ್ಮ ಸಾಮ್ರಾಜ್ಯಕ್ಕೆ ಭದ್ರ ಬುನಾದಿಯನ್ನೇ ನಿರ್ಮಿಸಿದರು. ಹಾಗೆ ಬ್ರಿಟಿಷರ ಜಾಲಕ್ಕೆ ಹೈದರಾಬಾದ್ ಸಂಸ್ಥಾನವೂ ಬಲಿ ಬಿದ್ದುದು ಸಹಜ. ಆದರೆ ಬ್ರಿಟಿಷರೆದುರು ನಮ್ಮವರ ಸ್ವಾತಂತ್ರ್ಯ ಹೋರಾಟ ನಿರಂತರವೇ ಆಗಿತ್ತು.

ನಾವು ಇಲ್ಲಿ ಗಮನಿಸಲೇಬೇಕಾದ ಒಂದು ಅಂಶ ಎಂದರೆ ಭಾರತೀಯರಾಗಿ ತಮ್ಮ ಸ್ವಾತಂತ್ರ್ಯಕ್ಕೆಂದೇ ಮೊದಲಿನಿಂದಲೂ ಹಿಂದೂ ಮತ್ತು ಮುಸಲ್ಮಾನರು ಕೂಡಿಯೇ ವಿದೇಶೀಯರಾದ ಬ್ರಿಟಿಷರೊಂದಿಗೆ ಹೋರಾಟ ನಡೆಸಿದ್ದು. ಭಾರತದ ವಿಭಜನೆಯು ನಮ್ಮ ಇತಿಹಾಸದ ದುರಂತ. ಈ ಒಂದು ಹಿನ್ನೆಲೆಯಲ್ಲಿ ನನ್ನ ಪ್ರಬಂಧವನ್ನು ಹೈದರಾಬಾದ ಸಂಸ್ಥಾನಕ್ಕೆ ಮಾತ್ರ ಸೀಮಿತವಾಗಿದೆ.

ಕ್ರಿ. ಶ. ೧೭೨೭ ಸೆಪ್ಟಂಬರ್ ೧೩ ರಂದು ಮೊದಲನೆಯ ಪೇಶ್ವೆಯಾದ ಬಾಜೀರಾಯ ಮುಸಲ್ಮಾನರ ಮೇಲೆ ದಾಳಿ ನಡೆಸಿ ವಿಜಯ ಸಾಧಿಸಿದ. ಅದರಂತೆಯೇ ಸ್ವತಂತ್ರ ಭಾರತದ ಸೈನ್ಯ ಕ್ರಿ. ಶ. ೧೯೪೮ ಸೆಪ್ಟೆಂಬರ್ ೧೩ ರಂದು ನಿಜಾಮರ ವಿರುದ್ಧ (ದಾಳಿ) ಅಂದರೆ ಪೋಲೀಸ್ ಕಾರ್ಯಾಚರಣೆ ನಡೆಸಿ ನಿಜಾಮರನ್ನು ಬಗ್ಗು ಬಡಿದು ಹೈದರಾಬಾದ್ ಸಂಸ್ಥಾನಕ್ಕೆ ಸ್ವಾತಂತ್ರ್ಯ ದೊರಕಿಸಿ, ಅದನ್ನು ಭಾರತದೊಂದಿಗೆ ವಿಲೀನ ಗೊಳಿಸಿತು. ಈ ಅವಧಿಯ ಹಲವಾರು ಹೋರಾಟಗಳನ್ನು ಮಾತ್ರ ಇಲ್ಲಿ ಗುರುತಿಸಿರುವೆ. ಹೀಗಾಗಿ ಇದನ್ನು ಸಮಗ್ರ ಹೋರಾಟದ ಚಿತ್ರಣ ಎಂದು ಭಾವಿಸಬಾರದು.

ಕ್ರಿ.ಶ. ೧೮೦೦ ಅಕ್ಟೋಬರ್ ೧೨ ರಂದು ಹೈದರಾಬಾದ್ ನಿಜಾಮನು ಈಸ್ಟ್ ಇಂಡಿಯಾ ಕಂಪೆನಿಯವರೊಂದಿಗೆ ಒಂದು ಒಪ್ಪಂದಕ್ಕೆ ಸಹಿ ಹಾಕಿ ತನ್ನ ಸ್ವಾತಂತ್ರ್ಯವನ್ನೇ ಕಳೆದುಕೊಂಡ. ಏಕೆಂದರೆ ಅಂದಿನಿಂದ ಈ ಅರಸು ಬ್ರಿಟಿಷರ ಆದೇಶಗಳನ್ನು ಪರಿಪಾಲಿಸುವುದು ಕಡ್ಡಾಯವಾಯಿತು. ಈ ಒಪ್ಪಂದದಿಂದ ಹೈದರಾಬಾದ್ ಸಂಸ್ಥಾನದ ಪ್ರಜೆಗಳು ಸಂತುಷ್ಟರಾಗಿರಲಿಲ್ಲ ಎಂಬುದನ್ನು ನಾವು ರಾವ್‌ರಂಭಾ ಮತ್ತು ನೂರ್‌ಉಲ್ - ಉಮ್ರಾ ಅವರ ಕಾರ್ಯ ಚಟುವಟಿಕೆಗಳಿಂದ ಅರಿಯಬಹುದು.*೧

ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣದ ನಂತರ ಮೈಸೂರಿನ ಆಡಳಿತದಲ್ಲಿದ್ದ ರಾಯಚೂರು ಜಿಲ್ಲೆಯ ಕೊಪ್ಪಳ ಪ್ರಾಂತವನ್ನು ಮತ್ತೆ ನಿಜಾಮನಿಗೆ ಮರಳಿಸಲಾಯಿತು. ಈ ನೆಲದಿಂದಲೇ ಮೊದಲನೆಯ ಸ್ವಾತಂತ್ರ್ಯ ಸಂಗ್ರಾಮ ಬ್ರಿಟಿಷ ವಿರುದ್ಧ ಆರಂಭವಾಯಿತು ಎಂದರೆ ಅತಿಶಯೋಕ್ತಿಯಾಗಲಾರದು. ಏಕೆಂದರೆ ಕ್ರಿ. ಶ. ೧೮೧೯ರಲ್ಲಿಯೇ ಪ್ರಮುಖ ಜಹಗೀರದಾರನಾಗಿದ್ದ ವೀರಪ್ಪನು ಬಂಡೆದ್ದು ಕೊಪ್ಪಳ ಹಾಗೂ ಬಹದ್ದೂರಬಂಡೆ ಕೋಟೆಗಳನ್ನು ವಶಪಡಿಸಿಕೊಂಡ*೨ ಆದರೆ ಬ್ರಿಟಿಷರ ಪಡೆಗಳು ಈ ಕೋಟೆಗಳಿಗೆ ಮುತ್ತಿಗೆ ಹಾಕಿ ವೀರಪ್ಪನ ಬಂಡಾಯವನ್ನು ಅಡಗಿಸಿ ಅವನನ್ನು ದಸ್ತಗಿರಿ ಮಾಡಲಾಯಿತು.

ಕ್ರಿ. ಶ. ೧೮೨೦ರಲ್ಲಿ ಬೀದರ್ ಜಿಲ್ಲೆಯ ಉದ್ದೀರ್‌ನಲ್ಲಿ ದಂಗೆ ಎದ್ದು ವಿರೋಧಿಸಿದವರೆಂದರೆ ಶಿವಲಿಂಗಪ್ಪ, ತಿರುಮಲ ರಾವ್ ಮತ್ತು ಮೇಘಶ್ಯಾಮ ಮುಂತಾದವರು.*೩ ಇದೇ ಪುಸ್ತಕದಿಂದ ತಿಳಿದುಬರುವ ಮತ್ತೊಂದು ವಿಷಯ ಎಂದರೆ ಅಂದು ವಿಜಾಪುರವು ಔರಂಗಾಬಾದ್ ಜಿಲ್ಲೆಯಡಿಯಲ್ಲಿದ್ದು ಈ ಭಾಗದ ಬಿಲ್ ಜನಾಂಗದವರು ದಂಗೆ ಎದ್ದು ಸರಕಾರವನ್ನು ೧೮೨೨ ರಿಂದ ೧೮೫೭ರ ಅವಧಿಯವರೆಗೂ ವಿರೋಧಿಸಿದ್ದರು. ಕ್ರಿ. ಶ. ೧೮೨೭ರಲ್ಲಿ ಮೋಮಿನಾಬಾದ್‌ನಲ್ಲಿಯ ಸೈನಿಕ ಪಡೆಯವರು ಬ್ರಿಟಿಷರ ವಿರುದ್ಧ ದಂಗೆ ಎದ್ದಿದ್ದರು. ಈ ದಂಗೆಕೋರರು ಕರ್ನಲ್ ಡೇವಿಸ್ ಎಂಬ ಬ್ರಿಟಿಷ್ ಸೇನಾಧಿಕಾರಿಯನ್ನು ಗುಂಡಿಕ್ಕಿ ಕೊಂದರು.*೪ ಕ್ರಿ. ಶ. ೧೮೪೧ರಲ್ಲಿ ರಾಯಚೂರು ಜಿಲ್ಲೆಯ ದೇವದುರ್ಗ ಮತ್ತು ಮಕ್ತಲ್ ಪ್ರದೇಶಗಳಲ್ಲಿಯ ಅರಬ ಸೈನಿಕರು ದಂಗೆ ಎದ್ದರು. ಈ ದಂಗೆಯ ಮುಖಂಡನೆಂದರೆ ಖೊಹರಾನ್ ಎಂಬ ಅರಬ ಸೈನಿಕ. ಇವರಿಗೆ ಬಾದಾಮಿ ಪ್ರದೇಶದಿಂದ ಸಹಾಯ ಒದಗಿಸಿದ್ದ ರಂತೆ. ಆದರೆ ಈ ದಂಗೆಯನ್ನು ಅಡಗಿಸಲಾಯಿತು. ಇದರಂತೆಯೇ ಮೆಹಬೂಬ್ ನಗರ ಜಿಲ್ಲೆಯಲ್ಲಿಯ ಕೋಳೀಕೊಂಡಾದಲ್ಲಿ ಕ್ರಿ. ಶ. ೧೮೪೫ರಲ್ಲಿ ದಂಗೆ ನಡೆದು ಅದನ್ನೂ ಅಡಗಿಸಲಾಯಿತು. ಹೀಗೆ ಹೈದರಾಬಾದ್ ಸೇನೆಯಲ್ಲಿ ಬ್ರಿಟಿಷರ ವಿರೋಧ ಅನೇಕ ಬಾರಿ ದಂಗೆಗಳೆದ್ದು ಅಂತಿಮವಾಗಿ ೧೮೫೭ರ ಕ್ರಾಂತಿಗೆ ದಾರಿ ಮಾಡಿಕೊಟ್ಟಿರುವುದು ಮುಖ್ಯ ಗಮನಿಸಬೇಕಾದ ಸಂಗತಿ ಎಂದರೆ ತಪ್ಪಾಗಲಾರದು.*೫

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಚ್ಚಳಿಯದೇ ಇರುವ ಸಂವತ್ಸರ ಎಂದರೆ ೧೮೫೭. ಬ್ರಿಟಿಷರ ವಿರುದ್ಧದ ಮೊದಲನೆಯ ಸ್ವಾತಂತ್ರ್ಯ ಸಂಗ್ರಾಮವೆಂದೇ ಪರಿಗಣಿಸಲಾಗಿದೆ. ಈ ಒಂದು ಸಂವತ್ಸರದಲ್ಲಿ ಭಾರತದಲ್ಲಿ ಆಸೇತು-ಹಿಮಾಲಯದವರೆಗೆ ಹೋರಾಟ ನಡೆದಿದ್ದು ಈಗ ಅದು ಇತಿಹಾಸದ ಗರ್ಭ ಸೇರಿದೆ. ಈ ಅವಧಿಯಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿ ಅದೂ ಕನ್ನಡಿಗರ

*೧೦/೨, ೧೩ನೇ ಕ್ರಾಸ್, ೨ನೇ ಬ್ಲಾಕ್ ಜಯನಗರ, ಬೆಂಗಳೂರು - ೫೬೦ ೦೧೧.

ನೇತೃತ್ವದಲ್ಲಿ ನಡೆದ ಹೋರಾಟಗಳೆಂದರೆ ಕೊಪ್ಪಳದಲ್ಲಿ ನಡೆದ ಮುಂಡರಿಗಿ ಭೀಮರಾಯರ ಸಮರ ಮತ್ತು ಇವರೊಂದಿಗೆ ಜತೆಯಾಗಿ ಹೋರಾಡಿದ ಹಮ್ಮಿಗೆ ದೇಶಾಯಿಯವರು. ದಕ್ಷಿಣ ಭಾರತದಲ್ಲಿ ಸ್ವಾತಂತ್ರ್ಯ ಸಮರದ ಕಿಡಿ ಮೊದಲಿಗೆ ಹಾರಿದ್ದು ಇಲ್ಲಿಂದಲೇ ಎಂದರೆ ಅಚ್ಚರಿಯೇನೂ ಅಲ್ಲ. ಅವರ ವಿವರಗಳನ್ನು ಇಲ್ಲಿ ಸ್ಥಳಾಭಾವದಿಂದ ನೀಡಲಾರೆ. ಕೊಪ್ಪಳದಂತೆ ಮಳಖೇಡ ದಲ್ಲಿಯೂ ದಂಗೆಯಾದುದನ್ನು ನಾವು ಸ್ಮರಿಸಬಹುದು. ಕೊಪ್ಪಳದ ದಂಗೆಯ ಸನ್ನಿವೇಶಗಳನ್ನು ನಾವು ಭೀಮರಾಯನ ಮೇಲೆ ರಚಿಸಲಾದ ಲಾವಣಿಯಿಂದ ಅರಿಯಬಹುದು. ಇದೇ ಸಂವತ್ಸರದಲ್ಲಿ ಸುರಪುರದ ರಾಜಾವೆಂಕಟಪ್ಪ ನಾಯಕನೂ ಬ್ರಿಟಿಷರ ವಿರುದ್ಧ ಬಂಡೆದ್ದನು. ನಾವು ಇಲ್ಲಿ ಸ್ಮರಿಸಲೇಬೇಕಾದ ಮತ್ತೊಂದು ಸಂಗತಿ ಎಂದರೆ ಸುರಪುರ ಬೇಡರ ಸಾಹಸ ಮತ್ತು ಧೈರ್ಯ. ಸಾಮ್ರಾಟ ಅವರಂಗಜೇಬನಿಗೆ ಚಳ್ಳೆ ಹಣ್ಣನ್ನು ತಿನಿಸಿದವರು ಈ ಬೇಡರು. ಹೀಗಾಗಿ ಔರಂಗಜೇಬನು ಸುರಪುರದ ರಾಜನೊಂದಿಗೆ ಮೈತ್ರಿ ಬೆಳೆಸಿ ತನ್ನ ರಕ್ತ ಹಸ್ತವನ್ನು ಮೂಡಿಸಿದ ಒಪ್ಪಂದದ ಪತ್ರವನ್ನು ನಾವು ಸುರಪುರದ ಅರಮನೆಯಲ್ಲಿ ಇಂದಿಗೂ ಕಾಣಬಹುದು. ಮತ್ತೊಂದು ಸಂಗತಿ ಎಂದರೆ ಕ್ರಿ. ಶ. ೧೮೧೮ರಲ್ಲಿಯೇ ಸುರಪುರದ ರಾಣಿ ಈಶ್ವರಮ್ಮ ಬ್ರಿಟಿಷರನ್ನು ವಿರೋಧಿಸಿದ್ದಳು. ವೆಂಕಟಪ್ಪ ನಾಯಕ ತನ್ನ ಸೈನ್ಯದೊಂದಿಗೆ ಬ್ರಿಟಿಷರನ್ನು ವಿರೋಧಿಸಿದ್ದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಹೈದರಾಬಾದ್ ಸಂಸ್ಥಾನವು ಭಾರತದ ರಾಜಕೀಯ ರಂಗದಲ್ಲಿ ಅತಿಮಹತ್ವದ ಪಾತ್ರವನ್ನು ತನ್ನ ಭೌಗೋಲಿಕ ಪರಿಸ್ಥಿತಿಯಿಂದ ಹೊಂದಿರುವುದನ್ನು ಅಲ್ಲಗಳೆಯಲಾಗದು. ಉತ್ತರ, ದಕ್ಷಿಣ ಹಾಗೂ ಪೂರ್ವ ಮತ್ತು ಪಶ್ಚಿಮ ಭಾರತಗಳಿಗೆ ಹೈದರಾಬಾದ ನಗರವು ಕೇಂದ್ರ ಬಿಂದುವಾಗಿದೆ. ಹೀಗಾಗಿ ಇದಕ್ಕೆ ಅಧಿಕ ಮಹತ್ವ, ಬಹುಶಃ ಈ ಒಂದು ಅಂಶವನ್ನು ಅರಿತೇ ಮೊಹಮ್ಮದ್ ಬಿನ್ ತೊಘಕ್ ತನ್ನ ರಾಜಧಾನಿಯನ್ನು ದೆಹಲಿಯಿಂದ, ದೇವಗಿರಿಗೆ ವರ್ಗಾಯಿಸಿರಬಹುದು.

ಕ್ರಿ. ಶ. ೧೮೫೭ರ ದಂಗೆ ಸಮಯದ ಘಟನೆಗಳು : ಬೊವೆನಪಲ್ಲಿಯಲ್ಲಿ ಇರಿಸಲಾದ ಸೈನಿಕ ತುಕಡಿಯಿಂದ ಅನೇಕರು ಅಸಂತೃಪ್ತಿಗೊಂಡಿದ್ದರು. ಇದರ ಪರಿಣಾಮವೇ ಜುಲೈ ೧೭, ೧೮೫೭ರಲ್ಲಿ ಹೈದರಾಬಾದ್ ನಗರದ ರೆಸಿಡೆನ್ಸಿ ಪ್ರದೇಶದ ಮೇಲೆ ದಾಳಿ ಮಾಡಲಾಯಿತು. ಸುಮಾರು ೫೦೦೦ ಜನ ರೊಂದಿಗೆ ತುರಬಜ್‌ಖಾನ್ ಈ ದಾಳಿಯನ್ನು ನಡೆಸಿದ. ಆದರೆ ಬ್ರಿಟಿಷರ ಬಂದೂಕುಗಳ ಬಲ ಅಧಿಕವಾಗಿತ್ತು. ಈ ದಾಳಿಯಲ್ಲಿ ಹಿಂದೂ-ಮುಸಲ್ಮಾನ ಭೇದ ಭಾವವಿರದೇ ಮಾತೃ ಭೂಮಿಯ ಸ್ವಾತಂತ್ರ್ಯಕ್ಕೆ ಹೋರಾಟ ನಡೆಸಿದರು. ನಾವು ಸ್ಮರಿಸಲೇಬೇಕಾದ ವಿಷಯ ವೆಂದರೆ, ಮುಸಲ್ಮಾನರೂ ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಕರೆ ನೀಡಿದ್ದರು. ಈ ಸಂಗತಿಯನ್ನು ನಾವು ಹೈದರಾಬಾದ ನಗರದಲ್ಲಿಯ ಮಕ್ಕಾಮಸೀದೆಯಲ್ಲಿ ಮೌಲಿ ಅಲ್ಲಾಉದ್ದೀನ್ ಅವರ ಭಾಷಣಗಳಿಂದ ಅರಿಯಬಹುದು. ಆದರೆ ಇವರ ವಿರುದ್ಧ ಮೊಕದ್ದಮೆ ಹೂಡಿ ನಂತರ ಇವರನ್ನು ಅಂಡಮಾನ್ ದ್ವೀಪಕ್ಕೆ ಕಳಿಸಲಾಯಿತು. ಅಲ್ಲಾಉದ್ದೀನ್ ಹಾಗೂ ತುರಬಜ್‌ಖಾನ್ ಅವರ ಸೇವೆಯನ್ನು ಮರೆಯಲಾಗದು. ರಾಜಾವೆಂಕಟಪ್ಪ ನಾಯಕನು ಮಿರಜ್, ಕೊಲ್ಹಾಪುರ ನರಗುಂದ, ಕೊಪ್ಪಳ ಮುಂತಾದ ಪ್ರದೇಶಗಳೊಂದಿಗೆ ಸಂಪರ್ಕ ಹೊಂದಿದ್ದ. ಆದರೆ ಅವರು ತುಂಬಾ ಅವಸರದಿಂದ ಹೈದರಾಬಾದಿಗೆ ದಂಡೆತ್ತಿ ಹೋಗಬಾರದಿತ್ತು. ನಿರೀಕ್ಷಿತ ಫಲ ಬೇರೆ ಆಗಿತ್ತು. ಹೈದರಾಬಾದಿ ನೊಂದಿಗೆ ಅಖಿಲ ಭಾರತದ ಹೋರಾಟದ ಧುರೀಣರಾದ ತಾಂತ್ಯಾಟೋಪಿಯ ರಾಯಭಾರಿಗಳಾದ ಮಸ್ತಾನ್ ಮೀಯಾ ಜೌವಳಾ ಜಾಹಗೀರನಾಗಿದ್ದ ಸೋನೋಜೀ ಪಂಡಿತರು ಹೈದರಾಬಾದಿನಲ್ಲಿದ್ದು ಬಂಡಾಯಕ್ಕೆ ಸಹಕರಿಸಿದರು. ರಾಜಾರಾಯ್ ರಾಯನ್ ಸೇವೆಯಲ್ಲಿದ್ದ ಸೋನೋಜಿ ನಾನಾ ಸಾಹೇಬಗೆ ಒಂದು ಪತ್ರ ಬರೆದಿದ್ದು ಸಾಹಸದ ಸಂಗತಿಯಾಗಿದೆ. ಇವರು ಬರೆದ ಪತ್ರವನ್ನು ರಂಗರಾವ್ ಪಾಗೆ ಎಂಬುವನು ನಾನಾ ಸಾಹೇಬ್ ಫಡವನ್ನೀಸರಿಗೆ ತಲುಪಿಸಿ, ಅವರಿಂದ ಪತ್ರಗಳನ್ನು ಪಡೆದು, ದೇಶದ ವಿವಿಧ ಭಾಗಗಳಲ್ಲಿದ್ದ ಕ್ರಾಂತಿಯ ನಾಯಕರಿಗೆ ತಲುಪಿಸಿದ.

ಕ್ರಿ. ಶ. ೧೮೫೯ರಲ್ಲಿ ಹೈದರಾಬಾದಿನಲ್ಲಿ ಒಂದು ದರಬಾರನ್ನು ಮಾರ್ಚ್ ೧೫ರಂದು ಏರ್ಪಡಿಸಲಾಗಿತ್ತು. ಈ ದರಬಾರಿಗೆ ರೆಸಿಡೆಂಟ್ ಡೇವಿಡ್‌ಸನ್ ಆಗಮಿಸಿದ್ದ, ಸಭೆಯ ನಂತರ ಡೇವಿಡ್‌ಸನ್ ಮತ್ತು ಹೈದರಾಬಾದ್ ಸಂಸ್ಥಾನದ ಪ್ರಧಾನಿಯವರು ಒಟ್ಟಾಗಿ ಹೊರ ಬಂದ ಸಮಯದಲ್ಲಿ ಜಾಹಂಗೀರ್‌ಖಾನ್ ಮದ್ದಿನಿಂದ ತುಂಬಿದ ಬಂದೂಕವನ್ನು ಡೇವಿಡ್ ಸನ್ ಮೇಲೆ ಚಲಾಯಿಸಿದ ಆದರೆ ಅದು ಗುರಿ ತಪ್ಪಿ ನೌಕರನ ಮೇಲೆ ಸಿಡಿದಾಗ, ತನ್ನ ಕೈಯಲ್ಲಿಯ ಖಡ್ಗದಿಂದ ಡೇವಿಡ್ ಸನ್‌ಗೆ ಇರಿಯಲು ಹೋದ, ಅಷ್ಟರಲ್ಲಿ ಭದ್ರತಾ ಪಡೆಯವರು ಧಾವಿಸಿ ಬಂದು ಅವನನ್ನು ವಶಕ್ಕೆ ತೆಗೆದುಕೊಂಡರು. ಹೀಗೆ ನಾವು ೧೮೭೯ ಅವಧಿಯಲ್ಲಿ ಪೂನಾದ ವಾಸುದೇವ ಬಲವಂತ ಫಢಕೆ ಇಸ್ಮಾಯಿಲ್‌ಖಾನ್ ಮುಂತಾದವರ ಹೋರಾಟವನ್ನು ಕಾಣಬಹುದು. ಇದರಂತೆಯೇ ರಂಗರಾವ್ ಅವರ ಪಿತೂರಿ, ಭಾಲ್ಕಿಯ ಪಿತೂರಿ, ಕಮ್ಮಮ್ ಜಿಲ್ಲೆಯಲ್ಲಿ ನಡೆದ ರಂಪಾ ದಂಗೆಯನ್ನೂ ಸ್ಮರಿಸಬಹುದು. ಹೀಗೆ ಹೈದರಾಬಾದಿನಲ್ಲಿಯ ಕಾರ್ಯ ಚಟುವಟಿಕೆಗಳಿಂದಾಗಿ ೧೮೮೩ರ ಹೊತ್ತಿಗೆ ಸಾರ್ವಜನಿಕ ರಲ್ಲಿ ಜಾಗೃತಿ ಮುಡಿ ಸ್ವಾತಂತ್ರ್ಯಾಂದೋಲನಕ್ಕೆ ನಾಂದಿಯಾಯಿತು. ಈ ಅವಧಿಯಲ್ಲಿ ಜಾಮಾಲ್ ಉದ್ದೀನ್ ಅಫ್‌ಘನಿ ಅವರ ಚಟುವಟಿಕೆಗಳು ಸ್ಮರಣೀಯವಾಗಿದ್ದವು.*[೬]

ಭಾರತದ ರಾಷ್ಟ್ರೀಯ ಕಾಂಗ್ರೆಸ್ ಜಾರಿಯಲ್ಲಿ ಬಂದ ದಿನದಿಂದ, ಸ್ವಾತಂತ್ರ್ಯ ಹೋರಾಟಕ್ಕೆ ಒಂದು ನೂತನ ಆಯಾಮವೇ ದೊರಕಿತು. ಕಾಂಗ್ರೆಸಿನ ಹಿರಿಯ ನಾಯಕರಾದ, ಗೋಖಲೆ, ತಿಲಕ್ ಮುಂತಾದವರ ಮುಂಚೂಣಿಯಲ್ಲಿ ಜನತೆಗೆ ಪ್ರೋತ್ಸಾಹ ದೊರಕಿತು. ಗಾಂಧೀಜಿಯವರ ಆಗಮನದಿಂದ ಸ್ವಾತಂತ್ರ ಹೋರಾಟವು ಸಾಮಾನ್ಯ ಜನತೆಗೂ ತಲುಪಿ, ದೇಶದ

ಸಮಸ್ತ ಜನತೆ ಆಂದೋಲನದಲ್ಲಿ ಭಾಗವಹಿಸುವಂತಾಯಿತು. ಹೈದರಾಬಾದ್ ಸಂಸ್ಥಾನಕ್ಕೂ ಈ ಗಾಳಿ ಬೀಸಿತು. ಆಂದೋಳನ ದಿಂದಾಗಿ ಪತ್ರಿಕಾ ಪ್ರಪಂಚದಲ್ಲಿ ಮಾರ್ಪಾಟುಗಳಾಗಿ ಹೋರಾಟಕ್ಕೆ ನೂತನ ಆಯಾಮವನ್ನೇ ನೀಡಿದವು. ಈ ಹಿನ್ನೆಲೆಯಲ್ಲಿ ಕ್ರಿ. ಶ. ೧೮೮೦ರಲ್ಲಿ ಮೊಹಿಬ್ ಹುಶೇನ್ ಎಂಬುವರು "ಮುವಾಲ್ಲಿಮ್ ಎಷಫೀಕ್" (Muallim-e-shafiq) ಎಂಬ ಪತ್ರಿಕೆಯನ್ನು ಸ್ಥಾಪಿಸಿದರು. ಅಂದಿನ ದಿನಗಳಲ್ಲಿ ಹೈದರಾಬಾದಿನಲ್ಲಿಯೇ ನೆಲೆಸಿದ್ದ ಜಮಾಲುದ್ದೀನ್ ಆಫ್‌ಘಾನಿಯವರು ತಮ್ಮ ಲೇಖನಿಯ ಮೂಲಕ ಜನರನ್ನು ಬಡಿದೆಬ್ಬಿಸಿದರು. ಕ್ರಿ. ಶ. ೧೮೮೩ರಲ್ಲಿ ಸಯ್ಯದ್ ಅಖಿಲ್ ಅವರು "ಹಜಾರ್ ದಾಸ್ತಾನ್"ನನ್ನು ಹೊರಡಿಸಿ ನಂತರ, ೧೮೮೫ರಲ್ಲಿ ಅದನ್ನು ದಿನ ಪತ್ರಿಕೆಗೆ ಪರಿವರ್ತಿಸಿದರು. ಹೀಗೆ ಉರ್ದು ಮತ್ತು ಆಂಗ್ಲ ಪತ್ರಿಕೆಗಳು ಬ್ರಿಟಿಷರ ಭಾರತ ವಿರೋಧೀ ಧೋರಣೆಗಳನ್ನು ಟೀಕಿಸತೊಡಗಿದರು. ಪ್ರಸಿದ್ಧ "ಇಲ್‌ಬರ್ಟ್ ಬಿಲ್ಲ್" ಬಗೆಗೂ ಭಾರತದ ನಿಲುವನ್ನು ಪ್ರತಿಪಾದಿಸಿದರು. ಪತ್ರಿಕಾ ವ್ಯವಸಾಯದೊಟ್ಟಿಗೆ, ಆರ್ಯ ಸಮಾಜ, ಗಣೇಶಉತ್ಸವ, ಸ್ವದೇಶೀ ಆಂದೋಲನಗಳೂ ಹೈದರಾಬಾದ್ ಸಂಸ್ಥಾನದಲ್ಲಿ ನುಸುಳಿ ಬಂದು ಜನರಲ್ಲಿ ಜಾಗ್ರತಿ ಯನ್ನುಂಟು ಮಾಡಿದವು. ಈ ಉತ್ಸವಗಳ ಪರಿಣಾಮದಿಂದಲೇ ವಾಚನಾಲಯ, ಪುಸ್ತಕ ಭಂಡಾರ, ಶಾಲೆಗಳು, ಸಂಘ ಸಂಸ್ಥೆಗಳು ತಲೆ ಎತ್ತಿದವು.

ಪ್ರಮುಖ ಸಂಘ ಸಂಸ್ಥೆ ಶಾಲೆಗಳೆಂದರೆ : ವಿವೇಕವರ್ದಿನಿ ಶಾಲೆ, ನೂತನ ವಿದ್ಯಾಲಯ, ಹಮದರ್ದ್ ಶಾಲೆ, ಕುಕ್ಕನೂರಿನ ಗುರುಕುಲ ಕೇಂದ್ರಗಳು. ಗ್ರಂಥ ಭಂಡಾರಗಳೆಂದರೆ, ಕೃಷ್ಣದೇವ ರಾಯ ಗ್ರಂಥಾಲಯ, ಮರಾಠಿ ಗ್ರಂಥ ಸಂಗ್ರಹಾಲಯ ಮುಂತಾದವು ಹೈದರಾಬಾದ್ ಸಂಸ್ಥಾನವು ಖಿಲಾಫತ್ ಚಳವಳಿ, ಮಧ್ಯ ಪೂರ್ವ ದೇಶದ ರಾಜಕೀಯ ಆಂದೋಲನಕ್ಕೆ ಒಲವು ತೋರಿದ್ದು ಅಲ್ಲದೆ ಹಣ ಸಂಗ್ರಹಿಸಿ ಹೋರಾಟಕ್ಕೆ ಬೆಂಬಲ ನೀಡಿದ್ದನ್ನೂ ಸ್ಮರಿಸಬಹುದು. ಈ ಅವಧಿಯಲ್ಲಿ ಸಂಸ್ಥಾನದಲ್ಲಿಯ ಮುಖಂಡರೆಂದರೆ : ಮುಲ್ಲಾ ಅಬ್ದುಲ್ ಖಯಾಂ, ಮೊಹಮದ್ ಮುರ್ತೂಜಾ, ಕೇಶವರಾವ್ ಕೊರಟ್ಕರ, ಶ್ರೀ ವಾಮನ ನಾಯಕ್, ಅಘೋರನಾಥ ಚಟ್ಟೋಪಾಧ್ಯಾಯ, ಅವರ ಪುತ್ರಿಯಾದ ಸರೋಜಿನಿ ನಾಯ್ಡು ಮುಂತಾದವರು. ನಂತರದ ಅವಧಿಯಲ್ಲಿ ಪಂಡಿತ ತಾರಾನಾಥ ಮುಂತಾದವರು ಜನಜಾಗೃತಿಗೆ ಕಾರಣರಾದರು. ಇದಲ್ಲದೆ ಸಂಸ್ಥಾನಕ್ಕೆ ಭೇಟಿ ನೀಡಿದ ನಾಯಕ ರೆಂದರೆ ಕ್ರಾಂತಿಕಾರಿ ಬಾಲಕೃಷ್ಣ ಹರಿಚಾಪೇಕರ್, ಬಾಬಾ ಸಾಹೇಬ್ ಮುಂತಾದವರು.

ನಾಸಿಕನಲ್ಲಿ ಜಾಕ್‌ಸನ್‌ನನ ಕೊಲೆ, ಗಣೇಶ ಉತ್ಸವ, ಆರ್ಯಸಮಾಜ ಉಸ್ಮಾನಿಯಾ ವಿಶ್ವವಿದ್ಯಾಲಯದ ಸ್ಥಾಪನೆ, ೧೯೧೯ರಲ್ಲಿ ಸ್ಥಾಪನೆಗೊಂಡ ಆಡಳಿತ ಸಭೆ, ಖಿಲಾಫತ್ ಚಳವಳಿ, ಪರದೇಶೀ ಬಟ್ಟೆಗಳ ಬಹಿಷ್ಕಾರ ಮುಂತಾದ ಘಟನೆಗಳು ಜನರ ಮೇಲೆ ತುಂಬಾ ಪ್ರಭಾವ ಬೀರಿದ ಅಂಶಗಳು. ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯು ವಿದ್ಯಾವಂತರನ್ನು ಆಕರ್ಷಿಸಿತು. ಈ ದಿಶೆಯಲ್ಲಿ ನಾವು ಸ್ಮರಿಸಬಹುದಾದ ಒಂದು ಘಟನೆ ಎಂದರೆ ಕ್ರಿ. ಶ. ೧೮೮೮ರ ಅಕ್ಟೋಬರ್ ತಿಂಗಳಲ್ಲಿ ಸಿಕಂದರಾಬಾದಿನಲ್ಲಿ ನಡೆದ ಒಂದು ಸಾರ್ವಜನಿಕರ ಸಭೆ. ಈ ಸಭೆಯಲ್ಲಿ ಸುಮಾರು ೨೦೦೦ ಜನರು ಸೇರಿದ್ದರು. ಸಭೆಯಲ್ಲಿ ಭಾಗವಹಿಸಿದ ಪ್ರಮುಖರೆಂದರೆ, ರಾಮಚಂದ್ರ ಪಿಳ್ಳೆ, ಇಡ್ಲಾಜೀ ಸೂರಾಬ್ಜೀ ಚಿನೋಯ್, ಹಾಜಿ ಸಜ್ಜನ್‌ಲಾಲ್, ದೂನ್ದಗಲ್ ಕೃಷ್ಣಮ ಬೆಜೊನ್ಜಿ ಅದರ್ಜೆ, ಚಿರಕೊಂಡ ರಾಮಚಂದ್ರಯ್ಯ, ಗಂಗಾಭೀಷ್ಮ, ವೇಣುಗೋಪಾಲ ಪಿಳ್ಳೆ, ಇಸ್ಮಾಯಿಲ್ ಸಾಹೇಬ್, ಡಾನಬೀಖಾನ್ ಮುಂತಾದವರು.*[೭] ಕ್ರಿ. ಶ. ೧೮೮೯ರಲ್ಲಿ ಸಿಕಂದರಾಬಾದಿನ ಮೆಹಬೂಬ್ ಕಾಲೇಜಿನ ಆವರಣದಲ್ಲಿ ಗುಲಾಂ ದಸ್ತಗಿರಿ ಅವರ ಅಧ್ಯಕ್ಷತೆಯಲ್ಲಿ ಎರಾಡ್ಲೆನಾರ್ಟ್ವ್‌ನ್ ಅವರು ರಾಷ್ಟ್ರೀಯ ಕಾಂಗ್ರೆಸ್ ಬಗೆಗೆ ಸಾರ್ವಜನಿಕ ಭಾಷಣ ಮಾಡಿದರು.*[೮]

ಕ್ರಿ. ಶ. ೧೯೧೧ರಲ್ಲಿ ಮೆಹಬೂಬ್ ಆಲೀಖಾನ್ ಅವರ ಮರಣದಿಂದಾಗಿ ಅವರ ಪುತ್ರ ಉಸ್ಮಾನ್ ಆಲೀಖಾನ ಅವರು ಸಿಂಹಾಸನಕ್ಕೆ ಬಂದರು. ಉಸ್ಮಾನ್ ಆಲೀಖಾನನು ಧರ್ಮಾಂಧ ನಾಗಿದ್ದ ತೀವ್ರವಾದಿಯಾಗಿದ್ದು ಧಾರ್ಮಿಕ ನಡತೆಗೆ ಪ್ರಸಿದ್ಧನಾಗಿದ್ದ. ದಕ್ಷಿಣ ಭಾರತದಲ್ಲಿ ಮುಸಲ್ಮಾನ ಸಾಮ್ರಾಜ್ಯ ಒಂದನ್ನು ಸ್ಥಾಪಿಸಬೇಕೆಂಬ ಹಿರಿಯಾಕೆಯನ್ನೂ ಹೊಂದಿದ್ದ. ಆದರೆ ರಾಜ್ಯದ ಬಹು ಸಂಖ್ಯಾತರು ಹಿಂದೂಗಳು ಎಂಬುದೇ ಅವನಿಗೆ ಹೊಳೆದಿರಲಿಲ್ಲ; ಏಕೆಂದರೆ ೧೯೪೧ರ ಜನ ಗಣತಿಯಂತೆ ನಿಜಾಂ ಸಂಸ್ಥಾನದ ಒಟ್ಟು ಜನಸಂಖ್ಯೆ ೧೬೩.೩೮ ಲಕ್ಷ. ಅದರಲ್ಲಿ ೮೦% ಹಿಂದೂಗಳು ಮೂರು ಪ್ರಮುಖ ಭಾಷೆಗಳು ತೆಲುಗು, ಮರಾಠಿ, ಕನ್ನಡ, ಉರ್ದು ಬಲ್ಲವರು ಅಲ್ಪಸಂಖ್ಯಾತರು. ಆದರೂ ಆಡಳಿತ ಭಾಷೆ ಉರ್ದು ಹಾಗೂ ಆಡಳಿತಗಾರರು ಮುಸಲ್ಮಾನರು. ಈ ರಾಜ್ಯಕ್ಕೆ ತನ್ನದೇ ಆದ ನಾಣ್ಯ, ರೈಲು, ಅಂಚೆಗಳಿದ್ದವು. ಭಾರತದಲ್ಲಿ ಅತಿ ದೊಡ್ಡ ಸಂಸ್ಥಾನವೆಂದರೆ ಹೈದರಾಬಾದ್ ಸಂಸ್ಥಾನ. ಈ ಎಲ್ಲಾ ಕಾರಣಗಳಿಂದ ನಿಜಾಮ್ ಉಸ್ಮಾನ್ ಆಲೀಖಾನನಿಗೆ ಆಡಳಿತದ ಮದ. ಇದು ದುರಾಡಳಿತಕ್ಕೆ ನಾಂದಿಯಾಯಿತು. ಈ ದುರಾಡಳಿತದ ಪರಿಣಾಮ, ನಾಗರಿಕ ಹಕ್ಕುಗಳ ಅಭಾವ, ಸಂಘ, ಪತ್ರಿಕೆಗಳ ಸ್ವಾತಂತ್ರ್ಯಹರಣ; ಇದರಿಂದಾಗಿ ಪ್ರಜೆಗಳು ಸಂಕಷ್ಟಕ್ಕೆ ಗುರಿಯಾದರು. ಈ ಎಲ್ಲಾ ಕಾರಣಗಳಿಂದ ಬೇಸತ್ತಿದ್ದ ಪ್ರಜೆಗಳು, ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ವೇದಿಕೆಗಳನ್ನು ನಿರ್ಮಿಸಿಕೊಂಡು ಹೋರಾಟಕ್ಕೆ ಅಣಿಯಾದರು. ಈ ದಿಶೆಯಲ್ಲಿ ಹುಟ್ಟಿದ ಪ್ರಮುಖ ಸಂಘ ಸಂಸ್ಥೆ, ವೇದಿಕೆಗಳೆಂದರೆ ವಿದ್ಯಾವರ್ಧಕ ಮಹಾಸಭೆ ಮಾನವೀಯ ಕೂಟ, ಕರ್ನಾಟಕ ಪರಿಷತ್, ಆಂಧ್ರಪರಿಷತ್, ಮಹರಾಷ್ಟ್ರ ಪರಿಷತ್, ರಾಜ್ಯದ ಚರಿತ್ರೆಯ ಸ್ಮರಣೀಯ ಸಂಗತಿಯೊಂದು ರಾಯಚೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ನಡೆಯಿತು. ಅದೆಂದರೆ ಅಲ್ಲಿ ಸೇರಿದ್ದ ಧುರೀಣರು ಹೈದರಾಬಾದ್ ರಾಜ್ಯ ಕಾಂಗ್ರೆಸ್ ಸಭೆಯನ್ನು ಸ್ಥಾಪಿಸುವ ನಿರ್ಣಯ ಸ್ವೀಕರಿಸಿ ೧೯೩೮ರಲ್ಲಿ ಅದನ್ನು

ಅಸ್ತಿತ್ವಕ್ಕೆ ತಂದರು. ಈ ಸಭೆಯ ಧುರೀಣರು ಎಂದರೆ; ಜಿ. ರಾಮಾಚಾರು, ಜನಾರ್ಧನ ರಾವ್ ದೇಶಾಯಿ, ಕಾಶವಾನ್ಕರ ಶ್ರೀನಿವಾಸ ರಾಯರು, ಜಿ. ಎಸ್. ವೇವರಟಿ, ಪಿ. ಕೃಷ್ಣರಾಯರು, ಸಿದ್ದವ್ವನಹಳ್ಳಿ ಕೃಷ್ಣಶರ್ಮ ಮುಂತಾದವರು. ಆದರೆ ಈ ಸಭೆ ಜಾರಿಗೆ ಬರುವ ಮುನ್ನವೇ ನಿಜಾಮ ಸರಕಾರ ಇದನ್ನು ನಿಷೇಧಿಸಿತು. ಇದರಿಂದಾಗಿ ರಾಷ್ಟ್ರೀಯ ಚಳವಳಿಗೆ ಅಧಿಕ ಪ್ರೋತ್ಸಾಹ ದೊರಕಿತು ಎಂದೇ ಹೇಳಬೇಕು. ನಿಜಾಮರ ಆಜ್ಞೆಯನ್ನು ವಿರೋಧಿಸಿ ಪ್ರಥಮ ಕಾಂಗ್ರೆಸ್ ಸತ್ಯಾಗ್ರಹ ಸುಲ್ತಾನ್‌ಬಜಾರ್‌ನಲ್ಲಿ ನಡೆದು ಸ್ವಾಮಿ ರಮಾನಂದರು ದಸ್ತಗಿರಿಗೆ ಗುರಿಯಾದರು. ಈ ಸತ್ಯಾಗ್ರಹ ೧೮ ದಿನಗಳವರೆಗೆ ಜರುಗಿ ಅನೇಕ ಧುರೀಣರು ಜೈಲು ಸೇರಿದರು. ಉಸ್ಮಾನಿಯಾ ವಿಶ್ವವಿದ್ಯಾಲಯದ ಹಾಸ್ಟೆಲಿನಲ್ಲಿಯ ವಿದ್ಯಾರ್ಥಿಗಳು ಜಗನ್ನಾಥರಾವ್ ಚಂದ್ರಿಕೆಯವರ ನೇತೃತ್ವದಲ್ಲಿ ವಂದೇಮಾತರಂ ಚಳವಳಿ ಮಾಡಿ ಆಂದೋಲನಕ್ಕೆ ಮೆರಗು ನೀಡಿದರು. ಇದರಿಂದಾಗಿ ರಾಜ್ಯಾದ್ಯಂತ ತರುಣರು ಆಂದೋಲನಕ್ಕಿಳಿದರು.

ಈ ಯಾವ ಘಟನೆಗಳಿಂದಲೂ ಕಣ್ಣು ತೆರೆಯದೇ ಹೋದ ನಿಜಾಮನು ಇತ್ತೆಹಾದುಲ್ ಮುಸ್ಲಿಂ ಸಂಸ್ಥೆಗೆ ಬೆಂಬಲ ನೀಡಿ, ರಾಜ್ಯದ ಅಧಿಕ ಸಂಖ್ಯೆಯ ಹಿಂದೂಗಳಿಗೆ ವಿರುದ್ಧ ಗಸ್ತಿಫರ್ಮಾನನ್ನು ಜಾರಿಗೊಳಿಸಿದ. ಇದರಿಂದಾಗಿ ರಾಜಕೀಯ, ಧಾರ್ಮಿಕ ಹಾಗೂ ಸಾಮಾಜಿಕ ಚಟುವಟಿಕೆಗಳು ನಡೆಯದಂತಾಗಿ, ಉಸಿರು ಕಟ್ಟುವ ವಾತಾವರಣ ನಿರ್ಮಾಣಗೊಂಡಿತು. ಆದರೂ ಜನರು ಸಂಸ್ಥಾನದ ಹೊರಗಡೆಯಿಂದ ಆಂದೋಳನ ನಡೆಸಿ ನಿಜಾಮರನ್ನು ಪ್ರತಿಭಟಿಸಿದರು. ಈ ಮಧ್ಯೆ ಪ್ರಪಂಚದ ಎರಡನೇ ಮಹಾ ಯುದ್ಧದಿಂದಾಗಿ ಬ್ರಿಟಿಷರು, ಭಾರತಕ್ಕೆ ಸ್ವಾತಂತ್ರ್ಯ ನೀಡುವ ನಿಲುವನ್ನು ಪ್ರಕಟಿಸಿದರು. ಯುದ್ಧಕ್ಕೆ ಮುಂಚೆ ನಡೆದ "ಭಾರತ ಬಿಟ್ಟು ತೊಲಗಿರಿ" ಸತ್ಯಾಗ್ರಹವು ಪ್ರಖರವಾಗಿತ್ತು. ಇದರಲ್ಲಿ ದೇಶದ ಮಹಾನ್ ನಾಯಕರೆಲ್ಲರೂ ದಸ್ತಗಿರಿಗೆ ಗುರಿಯಾದರು. ಅದರಂತೆಯೇ ಹೈದರಾಬಾದಿನ ಧುರೀಣರೂ ಸೆರೆಮನೆ ಸೇರಿದರು.

೧೯೪೫ರಲ್ಲಿ ಯುದ್ಧ ಮುಕ್ತಾಯಗೊಂಡು ನಡುಗಾಲ ಸರಕಾರವೊಂದು ಜಾರಿಗೆ ಬಂದು, ೧೯೪೭ ಆಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯವನ್ನು ಪಡೆಯಿತು.

ನಿಜಾಮ ಸಂಸ್ಥಾನದ ಪ್ರಜೆಗಳು ಈ ಸ್ವಾತಂತ್ರ್ಯವನ್ನು ಒಂದು ವರ್ಷದ ನಂತರ ಪಡೆಯಬೇಕಾದುದು ಶೋಚನೀಯ. ಈ ಒಂದು ವರ್ಷದಲ್ಲಿ ಪ್ರಜೆಗಳು ಅಪಾರ ಕಷ್ಟನಷ್ಟಗಳನ್ನು ಎದುರಿಸಬೇಕಾಯಿತು. ಇದಕ್ಕೆ ಕಾರಣ ಎಂದರೆ ಕಾಶೀಮ್ ರಜ್ವಿ ಎಂಬ ಮತಾಂಧ ಮೂರ್ಖ ವಕೀಲ. ನಿಜಾಮನನ್ನು ಕಪಿಮುಷ್ಟಿಯಲ್ಲಿರಿಸಿಕೊಂಡ ಈ ಧೂರ್ತ, ಕೆಂಪುಕೋಟೆಯ ಮೇಲೆ ಆಸಫ್‌ಜಾಹಿ ಧ್ವಜವನ್ನು ಹಾರಿಸುವ ಕನಸನ್ನು ಕಂಡಿದ್ದ. ಆದರೆ ೧೯೪೮ ಸೆಪ್ಟೆಂಬರ್ ೧೩ರ ಮಧ್ಯೆ ರಾತ್ರಿ ಭಾರತ ಸರಕಾರ ತನ್ನ ಪೋಲೀಸ್ ಕಾರ್ಯಾಚರಣೆ ಆರಂಭಿಸಿ, ೧೭ ಬೆಳಗ್ಗೆ ಹೈದರಾಬಾದ್ ನಗರ ಪ್ರವೇಶಿಸಿ ಹೈದರಾಬಾದ್ ಸಂಸ್ಥಾನವನ್ನು ಮುಕ್ತಗೊಳಿಸಿ ಮಂಗಳ ಹಾಡಿ ಪ್ರಜೆಗಳ ಕನಸಾಗಿದ್ದ ಹೈದರಾಬಾದ್ ವಿಮೋಚನೆಗೊಂಡು, ನಿಜಾಮನ ಕಪಿಮುಷ್ಟಿಯಿಂದ ಬಿಡುಗಡೆ ಮಾಡಿತು. ವಂದೇ ಮಾತರಂ, ಭಾರತ ಮಾತಾ ಕೀ ಜೈ ಘೋಷಗಳ ಮಧ್ಯೆ ಸಂಸ್ಥಾನವು ಸ್ವಾತಂತ್ರ್ಯ ಗಳಿಸಿತು.

| | |
|---|---|
| ಛೀನ್ ಸಕ್ತೆ ಹೈನಹೀ | ಪರ್ ನ ಚೊಡೆಂಗೇ ಕಭೀ ಹಮ್ |
| ಸರಕಾರ ವಂದೇ ಮಾತರಂ | ಮಂತ್ರ ವಂದೇ ಮಾತರಂ |
| ಹಮ್‌ಗರೀಬೋಂಕೇ ಗಲ್ಲೇಕಾ | ಮಂತ್ರ ವಂದೇ ಮಾತರಂಹೈ |
| ಹಾರ್ ವಂದೇ ಮಾತರಂ | ತಂತ್ರ ವಂದೇಮಾತರಂ |
| ಹಾಥ್‌ಮೇ ಬೇಡೀ ಗಲೇ ಮೇ | ಹಮಗರೀಬಾಂಕೇಗಲೇಕಾ |
| ಭೋಂಕ್ ದೇಶೂಲಿ ಚಢಾ | ಹಾರವಂದೇ ಮಾತರಂ |

ಈ ಬಗೆಯ ಶ್ರೀ ಸಾಮಾನ್ಯನ ವಂದೇ ಮಾತರಂ ಕನಸು ನನಸಾಯಿತು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*1. Abhishankar's Freedom struggle in Hyderabad, Vol. I, p. 18.
*2. -do- Vol. I p. 101.
*3. Major R. G. Benton, A History of the Hyderabad emtingent by p. 85-87.
*4. -do- Vol. I, p. 115
*5. -do- Vol. I, p. 181
*6. -do- Vol. II.
*7. -do- Vol. III. p. 12.
*8. -do- Vol. III. p. 15.

೧. *ರಾಯಚೂರು ಜಿಲ್ಲೆಯ ಸ್ವಾತಂತ್ರ್ಯಾಂದೋಲನ*, ಧ್ರುವನಾರಾಯಣ.
೨. *೧೮೫೭ರ ಸ್ವಾತಂತ್ರ ಯುದ್ಧ*, ರಂಗನಾಥ ದಿವಾಕರ.
೩. *ನೆನಪಿನ ಪುಟಗಳು*, ರಾ. ಗು. ಜೋಷಿ.
೪. *೧೮೫೭ ಅರ್ಥಾತ್ ಬಂಡಾಯದ ಇತಿಹಾಸ*, ಕೃ. ಗೋ. ಜೋಷಿ.
೫. *The Indian war of Independence 1857*, V.D. Savarkar.

ಪ್ರೊ. ವಸಂತಕುಷ್ಟಗಿ*

# ಚಿಂಚೋಳಿ, ಕುಕನೂರಿನ ಗುರುಕುಲ ಶಾಲೆಗಳು ಮತ್ತು ರಾಷ್ಟ್ರೀಯ ಆಂದೋಲನ

೨೦ನೆಯ ಶತಮಾನದ ಮೊದಲ ಶತಕದಲ್ಲಿ ಮಹಾತ್ಮಾ ಗಾಂಧೀಜಿಯವರು ಸಾರಿದ ಅಸಹಕಾರ ಚಳುವಳಿಯ ಮೂಲಕ ಭಾರತ ದೇಶದಲ್ಲಿ ರಾಷ್ಟ್ರೀಯ ಶಿಕ್ಷಣದ ಬೆಳ್ಳಿಚಿಕ್ಕಿ ಮೂಡಿ ಆಪ್ಯಾಯಮಾನವಾಗಿ ತಂಗಾಳಿಯು ಬೀಸತೊಡಗಿತು. ಲೋಕಮಾನ್ಯ ತಿಲಕರು ಈ ರಾಷ್ಟ್ರೀಯ ಶಿಕ್ಷಣಾಂದೋಲನದ ನೇತಾರರಾಗಿ ಜನಜಾಗೃತಿಯನ್ನುಂಟುಮಾಡಿದರು. ಪ್ರಜಾರಾಜ್ಯಕ್ಕೆ ನಾಂದಿ ಹಾಕುವ ಸ್ವಾತಂತ್ರ್ಯವನ್ನು ದೇಶಕ್ಕೆ ತಂದುಕೊಡುವಲ್ಲಿ ರಾಷ್ಟ್ರೀಯ ಶಿಕ್ಷಣದ ಅವಶ್ಯಕತೆಯನ್ನು ಕುರಿತು ದೇಶಾದ್ಯಂತ ಅಭಿಪ್ರಾಯ ಮೂಡಿಸಿ ರಾಷ್ಟ್ರೀಯ ಶಾಲೆಗಳ ನಿರ್ಮಾಣಕ್ಕೆ ಪ್ರೇರಣೆಯಾದರು. ಹದಗೆಟ್ಟ ಸ್ಥಿತಿಯ ನಿರ್ಮೂಲನಕ್ಕೆ ಕಾರಣೀಕರ್ತರಾದರು. ಇವರ ಜೊತೆಗೆ ಕರ್ನಾಟಕ ಕುಲಪುರೋಹಿತ ಆಲೂರ ವೆಂಕಟರಾಯರೂ ಹೆಗಲಿಗೆ ಹೆಗಲುಕೊಟ್ಟು ದುಡಿದರು.

ರಾಷ್ಟ್ರೀಯ ಶಿಕ್ಷಣದ ಬೆಳಗಿನ ಈ ತಂಗಾಳಿಯು ನಿಜಾಂ ಸಂಸ್ಥಾನದ ಭಾಗಕ್ಕೂ ಬೀಸಿ ಜಾಗೃತಿಯನ್ನುಂಟು ಮಾಡುವಲ್ಲಿ ಸಿದ್ಧಿಯನ್ನು ಪಡೆಯಿತು. ೧೯೦೭ರಲ್ಲಿ ಕಲಬುರಗಿಯಲ್ಲಿ ನೂತನ ವಿದ್ಯಾಲಯವು ಆರಂಭವಾಯಿತು. ತತ್‌ಪರಿಣಾಮವಾಗಿ ಚಿಂಚೋಳಿ ಜಾಗೀರಿಯಲ್ಲಿಯ ಚಿಂಚೋಳಿಯಲ್ಲಿ ಹಾಗು ಕೊಪ್ಪಳ ಜಾಗೀರಿಯಲ್ಲಿಯ ಕುಕನೂರಿನಲ್ಲಿ ರಾಷ್ಟ್ರೀಯ ಶಾಲೆಗಳು ಜನ್ಮತಾಳಿದುವು. ಆ ಶಾಲೆಗಳು ಸ್ವಾತಂತ್ರ್ಯದ ಆಂದೋಲನವನ್ನು ಜಾಗೃತಗೊಳಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದುವು.

ಈ ಎರಡೂ ಶಾಲೆಗಳು ಗ್ರಾಮಾಂತರ ಪ್ರದೇಶಗಳಲ್ಲಿ ಗುರುಕುಲೋಪಾದಿಯಲ್ಲಿ ರೂಪುಗೊಂಡಂತಹವು. ಏಕೆಂದರೆ ಇಲ್ಲಿ ರಾಷ್ಟ್ರಧರ್ಮ, ರಾಷ್ಟ್ರ ಸಂಸ್ಕೃತಿ, ರಾಷ್ಟ್ರದ ಇತಿಹಾಸಗಳ ಬಗ್ಗೆ ಒತ್ತು ನೀಡಿದ ಪಠ್ಯಕ್ರಮವನ್ನು ರೂಪಿಸಿಕೊಳ್ಳಲಾಗಿತ್ತು. ಅಂದಿನ ಜಾಗೀರದಾರರ ಹಾಗು ನಿಜಾಂ ಆಡಳಿತ ಶಾಹಿಗಳ ಸಹಕಾರ ಸಹಾನುಭೂತಿಗಳನ್ನು ಬಹಿರಂಗದಲ್ಲಿ ಪಡೆಯುತ್ತ, ಅಂತರಂಗದಲ್ಲಿ ಅರ್ಥಾತ್ ಒಳವಲಯದಲ್ಲಿ ರಾಷ್ಟ್ರೀಯ ಜಾಗೃತಿಗೇ ಒತ್ತುಕೊಡುವ ಶಿಕ್ಷಣ ಕ್ರಮವನ್ನು ರೂಪಿಸಿಕೊಂಡು ಭಾರತ ಸ್ವಾತಂತ್ರ್ಯ ಹಾಗು ನಿಜಾಂ ಸಂಸ್ಥಾನದ ವಿಮೋಚನೆಗಾಗಿ ಬೇಕಾಗುವ ಎಲ್ಲ ಮನೋದಾರ್ಢ್ಯವನ್ನು, ವಿಶೇಷವಾಗಿ ಯುವಕರಲ್ಲಿ ರೂಪಿಸುವ ಪ್ರಸನ್ನ ಶಿಕ್ಷಣವನ್ನು ಅಲ್ಲಿ ಪ್ರದಾನ ಮಾಡಲಾಗುತ್ತಿತ್ತು.

ಇಂಥ ಶಿಕ್ಷಣವನ್ನು ನೀಡುತ್ತಿದ್ದ ಚಿಂಚೋಳಿಯಲ್ಲಿಯ ಶಾಲೆಯ ಹೆಸರು "ಉಸ್ಮಾನಿಯಾ ಮಿಡ್ಲ್ ಸ್ಕೂಲ್ ರಾಷ್ಟ್ರೀಯ ವಿದ್ಯಾಲಯ"; ಕೊಪ್ಪಳ ಜಾಗೀರಿಗೆ ಸಂಬಂಧಪಟ್ಟ ಕುಕನೂರಿನಲ್ಲಿಯ ಶಾಲೆಯ ಹೆಸರು, "ವಿದ್ಯಾನಂದ ಗುರುಕುಲ ಶಾಲೆ". ಇವೆರಡೂ ರಾಷ್ಟ್ರೀಯ ಶಿಕ್ಷಣವನ್ನು ಪ್ರದಾನ ಮಾಡಿದ ಶಾಲೆಗಳು - ಗುರುಕುಲಗಳು. ಇವೆರಡೂ ಗ್ರಾಮಗಳಲ್ಲಿ ಈ ಹಿಂದೆ ಅಗ್ರಹಾರಗಳಿದ್ದುವು ಎಂಬುದಕ್ಕೆ ದಾಖಲೆಗಳಿವೆ. ಈ ಗ್ರಾಮಗಳು ತ್ರಿ-ಬಗೆಯ ಆಡಳಿತದ ಆಕ್ರಮಣಗಳಿಗೆ ತುತ್ತಾಗಿದ್ದ ಪ್ರದೇಶಗಳೂ ಕೂಡ. ಮೊದಲನೆಯದಾಗಿ ಈ ಭೂಪ್ರದೇಶದ ಮೂಲದ ಮಟ್ಟದಲ್ಲಿ ಜಾಗೀರದಾರರ ಹಿಡಿತ. ಎರಡನೆಯದಾಗಿ ಆ ಜಾಗೀರದಾರರು ನಿಜಾಂನ ಹಿಡಿತದಲ್ಲಿದ್ದುದರಿಂದ ಆ ನಿಜಾಂನ ಹಿಡಿತ ಮೂರನೆಯದಾಗಿ ಆ ನಿಜಾಂನು, ಇಡೀ ಭರತ ಖಂಡವನ್ನೇ ಆಗ ಆಳುತ್ತಿದ್ದ ಬ್ರಿಟಿಷರ ವಶದಲ್ಲಿಯೇ ಇದ್ದುದರಿಂದ ಆ ಬ್ರಿಟಿಷ್‌ರ ಹಿಡಿತ - ಈ ರೀತಿ ಮುಪ್ಪರಿಯಲ್ಲಿ ಇಂಥ ಜಾಗೀರಿ ಪ್ರದೇಶಗಳು ಕಗ್ಗತ್ತಲೆಯ ಖಂಡಗಳಾಗಿದ್ದುವು. ಇಂಥ ಪ್ರದೇಶಗಳಲ್ಲಿ ಶಿಕ್ಷಣ ಕ್ರಾಂತಿಯ ಮುಖಾಂತರ ರಾಷ್ಟ್ರೀಯ ಜಾಗೃತಿಯನ್ನುಂಟು ಮಾಡಿ ದೇಶಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟ ದಿಸೆಯಲ್ಲಿ ಇಂಥ ಸಮಾನಧರ್ಮಿಶಾಲೆಗಳು ಆ ಕಾಲದಲ್ಲಿ ಮಹತ್ವದ ಕಾರ್ಯಗಳನ್ನು ಎಸಗಿವೆ. ಈ ಬಗ್ಗೆ ದೊರೆತಿರುವ ಅಧಿಕೃತ ಮಾಹಿತಿಗಳನ್ನು ಸಂಗ್ರಹಿಸಿ ೨೦ನೆಯ ಶತಮಾನದ ಮೊದಲ ದಶಕಗಳಲ್ಲಿಯ ಚಿಂಚೋಳಿ ಮತ್ತು ಕುಕನೂರಿನ ಗುರುಕುಲ ಶಾಲೆಗಳ ಪಾತ್ರವನ್ನು ಅಧಿಕೃತವಾಗಿ ದಾಖಲುಗೊಳಿಸುವುದೇ ಈ ಸಂಶೋಧನಾ ಪ್ರಬಂಧದ ಉದ್ದೇಶ.

### *ರಾಷ್ಟ್ರೀಯ ಆಂದೋಲನ*

ಆಸಫ್‌ಜಾಹಿ ನಿಜಾಂರ ಆಡಳಿತಕ್ಕೆ ಹೈದರಾಬಾದ ಸಂಸ್ಥಾನವು ಕ್ರಿ. ಶ. ೧೭೨೪ ರಿಂದ ೧೭ನೆಯ ಸೆಪ್ಟೆಂಬರ್ ೧೯೪೮ರ ವರೆಗೆ ಸುಮಾರು ೨೨೪ ವರ್ಷಗಳ ಕಾಲ ಒಳಪಟ್ಟಿತ್ತು. ಈ ಸಂಸ್ಥಾನದಲ್ಲಿ ತೆಲಂಗಾಣದ ಎಂಟು ಜಿಲ್ಲೆಗಳು, ಮರಾಠವಾಡಾದ ಐದು ಜಿಲ್ಲೆಗಳು ಹಾಗು ಕರ್ನಾಟಕದ ಮೂರು ಜಿಲ್ಲೆಗಳು ಹೀಗೆ ೧೬ ಜಿಲ್ಲೆಗಳು ಸಮಾವೇಶವಾಗಿದ್ದುವು. ಕರ್ನಾಟಕದ ಜಿಲ್ಲೆಗಳೆಂದರೆ ಕಲಬುರಗಿ ಬೀದರ ಮತ್ತು ರಾಯಚೂರು (ಈಗಿನ ಕೊಪ್ಪಳ ಜಿಲ್ಲೆಯೂ ಸೇರಿ) - ಈ

*ಎಂಐಯ್‌ಜಿ ೨೬, ಆದರ್ಶನಗರ, ಮೊದಲ ಹಂತ, ಕಲಬುರಗಿ - ೫೮೫ ೧೦೫.

ಪ್ರದೇಶವನ್ನು ಹೈದರಾಬಾದ ಕರ್ನಾಟಕವೆಂದೇ ಗುರುತಿಸಲಾಗುತ್ತದೆ. ಇದೇ ಪ್ರದೇಶದ ಕಲಬುರಗಿ ಜಿಲ್ಲೆಯಲ್ಲಿ ಚಿಂಚೋಳಿಯು ಬರುತ್ತದೆ. ರಾಯಚೂರು ಜಿಲ್ಲೆಯಲ್ಲಿ ಕುಕನೂರು ಬರುತ್ತದೆ. (ಈಗ ಕೊಪ್ಪಳ ಜಿಲ್ಲೆಯಲ್ಲಿದೆ; ಕೊಪ್ಪಳವೂ ಕೂಡ ಅಂದಿನ ರಾಯಚೂರು ಜಿಲ್ಲೆಗೆ ಸೇರಿದ್ದು); ಈ ಭಾಗದಲ್ಲಿ ಉರ್ದು ಫಾರ್ಸಿ ಇಂಗ್ಲಿಷ್ ಮರಾಠಿ ಮತ್ತು ತೆಲುಗು ಭಾಷೆಗಳು ವಿಶೇಷತಃ ಆಡಳಿತಾತ್ಮಕ ಒತ್ತಡವನ್ನು ಹಾಕಿದ್ದರಿಂದ, ನೆಲದ ಭಾಷೆ ಕನ್ನಡ ಮುದುಡಿಕೊಂಡೇ ಬದುಕುತ್ತ ಬಂದಿತು. ಇದಲ್ಲದೆ ಜಾಗೀರಿ, ಸಂಸ್ಥಾನ ಹಾಗು ದಿಲ್ಲಿಯಲ್ಲಿಯ ಇಂಗ್ಲಿಷ್ ಆಡಳಿತ - ಇವುಗಳ ಮುಪ್ಪುರಿಯಲ್ಲಿ ಜನ ತತ್ತರಿಸಿಹೋಗಿತ್ತು. ಹೀಗಾಗಿ ೧೮೫೭ರಲ್ಲಿ ಭಾರತ ಸ್ವಾತಂತ್ರ್ಯದ ಮೊದಲನೆಯ ಸಂಗ್ರಾಮವು ಸಿಡಿದೆದ್ದಾಗ ಹೈದರಾಬಾದ ಕರ್ನಾಟಕ ಭಾಗವು ಮುಂಚೂಣಿಯಲ್ಲಿಯೇ ಇದ್ದು ಚಿಂಚೋಳಿ ಮತ್ತು ಕುಕನೂರು ಗ್ರಾಮಗಳು ತಮ್ಮ ತಮ್ಮ ಪಾತ್ರವನ್ನು ಘನಿಷ್ಠವಾಗಿ ಸಂಭಾಳಿಸಿದವು. ನಿಜಾಂನು ಸ್ವಾಯತತ್ತೆಯ ಬಗ್ಗೆ ಕನಸು ಕಂಡಾಗಲೂ ಈ ಗ್ರಾಮಗಳು ಮುಂಚೂಣಿಯಲ್ಲಿಯೇ ಇದ್ದು, ಅದನ್ನು ಬಗ್ಗು ಬಡಿಯಲು ಹೋರಾಡಿದುವು. ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಟ್ಟು ಬ್ರಿಟಿಷರು ಕಾಲ್ತೆಗೆವಾಗ 'ಯಥಾಸ್ಥಿತಿ ಒಪ್ಪಂದ'ವನ್ನು ಬಿಟ್ಟು ಹೋದರು. ಆಗ ಸಾರ್ವಭೌಮತ್ವಕ್ಕಾಗಿ ಮನಸ್ಸಿನ ಮಂಡಿಗೆ ಮಾಡಿದ ಕೊನೆಯ ನಿಜಾಂನು ೧೫.೮.೧೯೪೭ ರಿಂದ ೧೭.೯.೧೯೪೮ರ ವರೆಗೆ ಭಾರತೀಯತ್ವದ ಮೂಲತತ್ವಗಳಿಗೆ ಕೊಡಲಿಪೆಟ್ಟಾಗತೊಡಗಿದಾಗ ಅರಾಜಕತೆ ಉಂಟಾದಾಗ ಈ ಗ್ರಾಮದ ಜನತೆಯು ಧೀರೋದಾತ್ತರಾಗಿ ಹೈದರಾಬಾದ ಸಂಸ್ಥಾನದ ಮುಕ್ತಿಗಾಗಿ ಹೋರಾಡಿದರು. ಇದಕ್ಕೆ ವಿಶೇಷ ಪ್ರೇರಣೆ ದೊರೆತದ್ದು ಇಂತಹ ಗ್ರಾಮಗಳಲ್ಲಿದ್ದ ರಾಷ್ಟ್ರೀಯ ಶಾಲೆಗಳ ಪ್ರಭಾವವೇ ಕಾರಣ.

***ಚಿಂಚೋಳಿ***

ಚಿಂಚೋಳಿಯು ಕಲಬುರಗಿ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದ್ದರೂ ಅದೊಂದು ದೊಡ್ಡ ಗ್ರಾಮ. ಮುಲ್ಲಾಮಾರಿ ನದಿಯ ಎಡದಂಡೆಯ ಮೇಲೆ ಇದೆ. ಹಿಂದೆ ಈ ಇಡೀ ತಾಲ್ಲೂಕು ನವಾಬ ಆಲಂ ಅಲಿಕೈರೊಜ್‌ನ ಜಾಗೀರಿಗೆ ಒಳಪಟ್ಟಿತ್ತು. ಆದರೆ ಒಟ್ಟು ಹಿಡಿತ ಆಸಫ್‌ಜಾಹಿ ನಿಜಾಂನದೇ ಇತ್ತು. ಹೀಗಿದ್ದು ಚಿಂಚೋಳಿಯ ದೇಶಮುಖರು ರಾಜಾ ಶ್ರೀ ಧರ್ಮಪಾಲ ಸಂಸ್ಥಾನ ಎಂಬ ಹೆಸರಿನವರಿದ್ದರು. ಅವರೂ ಕೂಡ ಸ್ವಾತಂತ್ರ್ಯ ಪೂರ್ವದಲ್ಲಿಯೇ ರಾಷ್ಟ್ರೀಯ ಶಿಕ್ಷಣ ಪ್ರಸಾರಕ್ಕೆ ಹೆಗಲುಕೊಟ್ಟವರು.

***ಉಸ್ಮಾನಿಯಾ ಮಿಡ್ಲಸ್ಕೂಲ್ ರಾಷ್ಟ್ರೀಯ ವಿದ್ಯಾಲಯ ಚಿಂಚೋಳಿ :*** ಚಿಂಚೋಳಿಯಲ್ಲಿಯೂ, ಹೈದರಾಬಾದ ಸಂಸ್ಥಾನದ ಉಳಿದೆಲ್ಲ ಭಾಗಗಳಲ್ಲಿದ್ದಂತೆ, ಶಿಕ್ಷಣದ ಬಗ್ಗೆ ೨೦ನೆಯ ಶತಮಾನದ ಆರಂಭದಲ್ಲಿಯೂ ಶೋಚನೀಯ ಸ್ಥಿತಿಯು ನಡೆದು ಬಂದಿತ್ತು. ಗುಡಿಗುಂಡಾರಗಳಲ್ಲಿ ಮೋಡಿಲಿಪಿಯ ಮೂಲಕ ಶಿಕ್ಷಣ ಪ್ರದಾನವಾಗುತ್ತಿತ್ತು. ಕನ್ನಡವು ಮರೆತ ಭಾಷೆಯಾಗತೊಡಗಿತ್ತು. ಮಸೀದಿ ದರ್ಗಗಳಲ್ಲಿ ಉರ್ದು ಅರಬ್ಬಿ ಭಾಷೆಗಳ ಮೂಲಕ ಧಾರ್ಮಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು. ಬಹುತೇಕ ದನಕಾಯುವುದೇ ಎಳೆಯರ ಉದ್ಯೋಗವಾಗಿತ್ತು. ಶಿಕ್ಷಿತರು ನಗಣ್ಯ ಸಂಖ್ಯೆಯಲ್ಲಿದ್ದರೂ, ಕಲಿತು ವಿದ್ಯಾವಂತರಾದವರೆಲ್ಲ ಸರಕಾರಿ ಭಾಷೆ ಉರ್ದು, ವ್ಯಾವಹಾರಿಕ ಭಾಷೆ ಮರಾಠಿಯ ಪ್ರಭಾವಕ್ಕೆ ಒಳಗಾಗಿದ್ದರು. ಹೀಗಾಗಿ ಕಲಬುರಗಿ ಬೀದರ ಭಾಗಗಳಲ್ಲಿ ಮರಾಠಿ ಪತ್ರಿಕೆಗಳ ಪ್ರಭಾವ ಅಧಿಕವಾಗಿತ್ತು.

ಕಲಬುರಗಿ ಆಗ ಸೂಭಾ ಆಗಿದ್ದು ಕಲಬುರಗಿ ರಾಯಚೂರು ಬೀದರ ಜಿಲ್ಲೆಗಳ ಜೊತೆಯಲ್ಲಿ ಮರಾಠವಾಡಾದ ಉಸ್ಮಾನಾಬಾದ ಕೂಡ ಈ ಸೂಭಾಕ್ಕೆ ಸೇರಿತ್ತು - ಹೀಗಾಗಿ ಉಸ್ಮಾನಾಬಾದ ಲಾತೂರ ಕಡೆಯಿಂದ ಲೋಕಮಾನ್ಯ ತಿಳಕರ ರಾಷ್ಟ್ರೀಯ ಜಾಗೃತಿ ಹಾಗು ಜನಚೈತನ್ಯದ ಗಾಳಿ ಕಲಬುರಗಿ ವಿಭಾಗದಲ್ಲಿ ಪಸರಿಸಲು ಸಾಧ್ಯವಾಯಿತು. ಲೋಕಮಾನ್ಯ ತಿಲಕರ ಮೇಲಿನ ಖಟ್ಲೆಗಳು, ಫಡ್ಕೆ ಹಾಗು ಚಾಫೇಕರ್ ಬಂಧುಗಳ ಕ್ರಾಂತಿಕಹಳೆ, ವೀರಸಾವರ್ಕರ ಪ್ರಭಾವವು ಈ ಭಾಗದಲ್ಲಿ ಗಾಢವಾಗಿ ಮೂಡಿತು. ತುಳಜಾಪುರ, ಗಾಣಗಾಪುರ ಕ್ಷೇತ್ರಗಳಿಗೆ ಮುಂಬಯಿ ಪ್ರಾಂತ್ಯದ ಜನರು ವಿಶೇಷವಾಗಿ ಯಾತ್ರೆ ಬರುತ್ತಿದ್ದರಿಂದ ಅವರ ಸಂಪರ್ಕದಲ್ಲಿ ರಾಷ್ಟ್ರೀಯ ಪ್ರಜ್ಞೆ, ರಾಷ್ಟ್ರೀಯ ಆಂದೋಲನ ಕುರಿತು ಜಾಗೃತಿ ಪ್ರಸರಣ ಹೊಂದಿತು. ಹೀಗಾಗಿ ಮೊತ್ತ ಮೊದಲಿಗೆ ಕಲಬುರಗಿಯಲ್ಲಿ ನೂತನ ವಿದ್ಯಾಲಯ ರಾಷ್ಟ್ರೀಯ ಶಾಲೆಯು ೧೯೦೭ರಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಶಾಲೆಯ ಸ್ಥಾಪನೆಯ ಜೊತೆಯಲ್ಲಿಯೇ ರಾಷ್ಟ್ರೀಯ ಹಬ್ಬವಾದ ಗಣೇಶೋತ್ಸವದ ಆಚರಣೆಯು ಆರಂಭವಾಯಿತು. ಈ ವಾತಾವರಣದ ನಿಕಟ ಸಂಬಂಧವನ್ನು ಚಿಂಚೋಳಿಯ ಪ್ರಥಮ ವಕೀಲರಾಗಿದ್ದ ಸ್ವರ್ಗೀಯ ವೆಂಕಟರಾವ್ ಕಿಶನ್‌ರಾವ್ ಕುಲಕರಣಿಯವರು ಇಟ್ಟುಕೊಂಡಿದ್ದು ತತ್ ಪರಿಣಾಮವಾಗಿ ಚಿಂಚೋಳಿಯಲ್ಲಿ ರಾಷ್ಟ್ರೀಯತೆಯ ಬಗ್ಗೆ ರಾಷ್ಟ್ರೀಯ ಶಿಕ್ಷಣದ ಬಗ್ಗೆ ಚಿಂತನ ಮಂಥನಗಳಿಗೆ ಅವರು ಅವಕಾಶ ಮಾಡಿಕೊಟ್ಟರು.

ಈ ಹಿನ್ನೆಲೆಯಲ್ಲಿ ಕ್ರಿ. ಶ. ೧೯೧೧, ಚಿಂಚೋಳಿಯ ಇತಿಹಾಸದಲ್ಲಿ ಹಾಗು ಆಸಫಜಾಹಿ ನಿಜಾಂರ ಇತಿಹಾಸದಲ್ಲಿ ಒಂದು ಮಹತ್ವದ ವರ್ಷ. ಆರನೆಯ ನಿಜಾಂನಾಗಿದ್ದ ಮಹಬೂಬ ಅಲಿ ಪಾಷಾ ನಿಧನನಾಗಿ ಏಳನೆಯ ನಿಜಾಂನಾದ ಮೀರ ಉಸ್ಮಾನ ಅಲಿ ಬಹಾದ್ದೂರ ಸಿಂಹಾಸನಕ್ಕೆ ಬಂದಿದ್ದ. ಆತನ ಕೃಪಾದೃಷ್ಟಿಯನ್ನು ಪಡೆದುಕೊಂಡು, ರಾಷ್ಟ್ರೀಯ ಆಂದೋಲನದ ಜಾಗ್ರತಿಗೆ ಅಂತಹ ಶಿಕ್ಷಣವನ್ನು ಗುಪ್ತವಾಗಿ ಪ್ರದಾನ ಮಾಡುವತ್ತ ರಾಷ್ಟ್ರೀಯ ವಿದ್ಯಾಲಯವನ್ನು ಇದೇ ವರ್ಷ ಚಿಂಚೋಳಿಯಲ್ಲಿ ಆರಂಭಿಸಲಾಯಿತು. ಈ ಎರಡೂ ದೃಷ್ಟಿಗಳನ್ನು ಸರಿದೂಗಿಸಿಕೊಂಡು ಈ ರಾಷ್ಟ್ರೀಯ ವಿದ್ಯಾಲಯಕ್ಕೆ 'ಉಸ್ಮಾನಿಯಾ ಮಿಡ್ಲಿಸ್ಕೂಲ್' ಎಂಬ

ಹೆಸರನ್ನು ಬಹುಮುಂದಾಲೋಚನೆಯಿಂದ ನೀಡಿ ಗುರಿಸಾಧನೆಯಲ್ಲಿ ಈ ಶಾಲೆಯ ಸಂಸ್ಥಾಪಕರು ಚಾಣಾಕ್ಷತೆಯನ್ನು ಮೆರೆದರು. ಈ ರಾಷ್ಟ್ರೀಯ ಶಾಲೆಯ ಸಂಸ್ಥಾಪನೆಯು ವೆಂಕಟರಾವ್ ಕಿಶನರಾವ್ ಕುಲಕರಣಿಯವರ ನೇತೃತ್ವದಲ್ಲಿ ನಡೆದರೂ ಅವರ ಜೊತೆಯಲ್ಲಿ ಅನಂತ ಕೃಷ್ಣಾಚಾರ್ಯ ಆವಂಚಿ, ರಾಮಾಚಾರ್ಯ ಚಂಕಾರ, ನರಸಿಂಹಾಚಾರ್ಯ ಮೂಲಿ, ಚೆನ್ನಮಲ್ಲಪ್ಪ ಕಲಬುರಗಿ, ಸಿದ್ಧಪ್ಪ ಕಲಬುರಗಿ ಹಾಗು ಭೀಮಶೆಟ್ಟಿ ಪಾಟೀಲ ಮೊದಲಾದವರು ಸಂಸ್ಥಾಪಕ ಸದಸ್ಯರಾಗಿ ಆ ಶಾಲೆಯ ಧ್ಯೇಯೋದ್ದೇಶಗಳನ್ನು ಈಡೇರಿಸುವಲ್ಲಿ ಸಿಂಹಬಲವಾಗಿ ನಿಂತರು. ಶಾಲೆಯ ಆರಂಭದಲ್ಲಿ ಇವರಲ್ಲಿ ಅನೇಕರು ಗೌರವ ಶಿಕ್ಷಕರಾಗಿ ಕಾರ್ಯನಿರ್ವಹಿಸಿದರು.

ಮುಂದೆ ೨೦ನೆಯ ಶತಮಾನದ ಇಪ್ಪತ್ತರ ದಶಕದಲ್ಲಿ ಕನ್ನಡದ ಕೂಗು ಚಿಂಚೋಳಿಗೂ ಬಂದು ಕೇಳಿಸತೊಡಗಿತು. ಆಗ ಚಿಂಚೋಳಿಯ ಉಸ್ಮಾನಿಯಾ ಮಿಡ್ಲಸ್ಕೂಲ ರಾಷ್ಟ್ರೀಯ ವಿದ್ಯಾಲಯದಲ್ಲಿ ಕನ್ನಡ ಮಾಧ್ಯಮವು ಆರಂಭವಾಯಿತು. ಧಾರವಾಡದಿಂದ ದತ್ತಾತ್ರೇಯ ಬೆಟಗೇರಿ ಹಾಗು ಯೋಗೀಂದ್ರಾ ಚಾರ್ಯ ಅಷ್ಟಪ್ರತ್ರೆಯವರು ಕನ್ನಡ ಮಾಧ್ಯಮದ ಶಿಕ್ಷಕರಾಗಿ ಸೇವೆ ಸಲ್ಲಿಸಲು ಬಂದರು. ಅವರ ಜೊತೆಯಲ್ಲಿ ಅದೇ ಶಾಲೆಯ ಹಳೆಯ ವಿದ್ಯಾರ್ಥಿ ಶ್ರೀನಿವಾಸಾಚಾರ್ಯ ಆವಂಚಿ, ಶ್ರೀನಿವಾಸಾ ಚಾರ್ಯ ತಬ್ಬಿ, ಭೀಮಸೇನಾಚಾರ್ಯ ಅಗ್ನಿಹೋತ್ರಿ, ಡಾ।। ಶೇಷಗಿರಿರಾವ್ ಮೊದಲಾದವರು ಆಗ ಶಿಕ್ಷಕರಾಗಿ ಸೇವೆ ಸಲ್ಲಿಸಲು ಮುಂದಾದರು. ಅನಂತರ ಬೆಂಗಳೂರಿನ ಶ್ರೀ ಬಿ. ಆರ್. ಶ್ರೀನಿವಾಸರಾಯರು ಮುಖ್ಯೋಪಾಧ್ಯಾಯರಾಗಿ ಬಂದರು. ಆಗ ವಿದ್ಯಾರ್ಥಿಗಳ ಇಂಗ್ಲಿಷ್ ಭಾಷೆಯ ಮಟ್ಟದಲ್ಲಿ ಮಹತ್ವಪೂರ್ಣ ಸುಧಾರಣೆಯು ಬಂದಿತು.

ಕ್ರಿ. ಶ. ೧೯೨೪ರಲ್ಲಿ ಈ ರಾಷ್ಟ್ರೀಯ ಶಾಲೆಯ ಶಿಕ್ಷಕರಿಂದಲೇ ಸಂಚಾಲಿತವಾದ ಭಾರತ ವಾಚನಾಲಯವು ಆರಂಭವಾಗಿ, ವಿದ್ಯಾರ್ಥಿಗಳ ಹಾಗು ಸಾಮಾಜಿಕರಲ್ಲಿ ಓದುವ ಹವ್ಯಾಸವನ್ನು ಬೆಳೆಸುವುದರ ಜೊತೆಗೆ ರಾಷ್ಟ್ರೀಯ ಆಂದೋಲನದ ಬಗ್ಗೆ ಅವರೆಲ್ಲರನ್ನು ಚಿಂತನಶೀಲರನ್ನಾಗಿ ಮಾಡುವುದಕ್ಕೆ ಹೆಚ್ಚಿನ ಪ್ರಚೋದನೆಯು ದೊರೆಯಿತು. ಅದೇ ಸಂದರ್ಭದಲ್ಲಿ 'ಸಾರ್ವಜನಿಕ ಗಜಾನನ ಉತ್ಸವ ಸಮಿತಿ' ಯೂ ಅಸ್ತಿತ್ವಕ್ಕೆ ಬಂದು ಸಾಂಸ್ಕೃತಿಕ ಚಟುವಟಿಕೆಗಳ ಮುಖಾಂತರ ರಾಷ್ಟ್ರೀಯ ಜಾಗೃತಿಗೆ ಚೈತನ್ಯ ತುಂಬತೊಡಗಿತು.

ಉಸ್ಮಾನಿಯಾ ಮಿಡ್ಲಿಸ್ಕೂಲ್ ರಾಷ್ಟ್ರೀಯ ವಿದ್ಯಾಲಯ ಪೋಷಿತ ಸಾರ್ವಜನಿಕ ಗಜಾನನ ಉತ್ಸವ ಸಮಿತಿಯವರು ಏರ್ಪಡಿಸುತ್ತಿದ್ದ ಗಜಾನನೋತ್ಸವಗಳಲ್ಲಿ ಹಾಗು ಶಾಲಾ ವಾರ್ಷಿಕೋತ್ಸವ ಸಂದರ್ಭಗಳಲ್ಲಿ ರಾಜಕೀಯ ಮುತ್ಸದ್ದಿಗಳನ್ನೂ ಸಾಮಾಜಿಕ ಚಿಂತಕರನ್ನೂ ರಾಷ್ಟ್ರೀಯವಾದಿಗಳನ್ನೂ ಸಾಹಿತಿಗಳನ್ನೂ ಕರೆಸಿ ಭಾಷಣಗಳನ್ನೇರ್ಪಡಿಸಿ ಸಾಮಾಜಿಕರನ್ನು ಸುಸಂಸ್ಕೃತಗೊಳಿಸಲಾಗುತ್ತಿತ್ತು. ಈ ವೇದಿಕೆಗಳಿಂದ ಆಗಿನ ಕಾಲದಲ್ಲಿ ಉದ್ಬೋಧಕ ಭಾಷಣಗಳನ್ನು ನೀಡಿದವರಲ್ಲಿ ಹೈದರಾಬಾದ ಮುಕ್ತಿ ಸಂಗ್ರಾಮದ ಮಹಾದಂಡನಾಯಕ, ಸ್ವಾಮೀ ರಾಮಾನಂದ ತೀರ್ಥರು, ಶ್ರೇಷ್ಠ ಗಾಂಧೀವಾದಿ ಸಿದ್ಧವನಹಳ್ಳಿ ಕೃಷ್ಣಶರ್ಮ, ರಾಷ್ಟ್ರೀಯ ಶಿಕ್ಷಣ ಧುರಂಧರ ರಾಘವೇಂದ್ರ ರಾವ್ ದೇಸಾಯಿ ಕುಕನೂರ, ಆರ್ಯ ಸಮಾಜದ ನೇತಾರ ವಿನಾಯಕರಾವ್ ವಿದ್ಯಾಲಂಕಾರ, ಪಂಡಿತ ನರೇಂದ್ರಜಿ, ಆಗ ನಿಬಂಧಿತ ಕಾಂಗ್ರೆಸ್ಸಿನ ಗುಡಗುಂಟಿ ರಾಮಾಚಾರ್ಯ ಜೋಶಿ, ಗುಡಗುಂಟಿ ಕೃಷ್ಣಾಚಾರ್ಯ ಜೋಶಿ, ಜನಾರ್ದನ ರಾವ್ ದೇಸಾಯಿ, ಜಗನ್ನಾಥ ರಾವ್ ಚಂದ್ರಿಕಿ, ಕೀರ್ತನ ಕೇಸರಿ ಜಯರಾಮಾಚಾರ್ಯ ಮೊದಲಾದವರು ಪ್ರಮುಖರು.

ಈ ಚಿಂಚೋಳಿ ಶಾಲೆಯ ಅನೇಕ ವಿದ್ಯಾರ್ಥಿಗಳು ಇಂತಹ ಪ್ರೇರಣೆಯಿಂದ ಸ್ವಾವಲಂಬಿಗಳಾಗಿ ಸ್ವದೇಶಿ ವಸ್ತುಗಳನ್ನು ಗೌರವಿಸತೊಡಗಿದರು. ಅಂತಹರಲ್ಲಿ ಈ ಶಾಲೆಯ ಹಿಂದಿನ ವಿದ್ಯಾರ್ಥಿ ಆಯುರ್ವೇದ ವೈದ್ಯ ಡಾ।। ಶೇಷಗಿರಿರಾವ್ ಕುಲಕರಣಿ ಅವರು ಪ್ರಮುಖರು. ಈ ಮಹನೀಯರು ವಾರ್ಧಾಕ್ಕೆ - ಹೋಗಿ ಖಾದೀ ಹಾಗು ಗ್ರಾಮೋದ್ಯೋಗ ಕ್ಷೇತ್ರಕ್ಕೆ ಸಂಬಂಧಪಟ್ಟ ತರಬೇತಿಯನ್ನು ಪಡೆದು ಸ್ವಾವಲಂಬಿಯಾಗುವ ಈ ಶಿಕ್ಷಣವನ್ನು ನೀಡಲು ಬೆಮ್ಮನಚೋಡ ಗ್ರಾಮದಲ್ಲಿ ಒಂದು ಕೇಂದ್ರವನ್ನು ಆರಂಭಿಸಿದರು. ಈ ಕೇಂದ್ರವನ್ನು ಇವರ ಮಾರ್ಗದರ್ಶನದಲ್ಲಿ ವೇಣುಗೋಪಾಲ ಅಗ್ನಿಹೋತ್ರಿ ಅವರು ೫-೬ ವರ್ಷಗಳವರೆಗೆ ಯಶಸ್ವಿಯಾಗಿ ನಡೆಸಿಕೊಂಡು ಬಂದರು. ೧೯೪೫ರಲ್ಲಿ ಸರಕಾರದ ಅವಕೃಪೆಯಿಂದಾಗಿ ಆ ಕೇಂದ್ರವು ಮುಚ್ಚಲ್ಪಟ್ಟಿತು. ಆದರೆ ಈ ಕೇಂದ್ರವು 'ಚಲೇಜಾವ್' ಚಳವಳಿಯ ಕಾಲದಲ್ಲಿ ಗುಪ್ತ ಕರಪತ್ರಗಳನ್ನು ಸಿದ್ಧಪಡಿಸಿ ಹಂಚುವ ಕೆಲಸವನ್ನು ಮಾಡುತ್ತಿತ್ತು. ಈ ಕೇಂದ್ರದ ಈ ಧೀರೋದಾತ್ತತೆಯನ್ನು ಯಾರೂ ಮರೆಯು ವಂತಿಲ್ಲ.

ಈ ಶಾಲೆಯಲ್ಲಿ ನಿಜಾಂ ಸರಕಾರದಿಂದ ನಿಯೋಜಿತ ಪಠ್ಯಕ್ರಮವನ್ನು ಅನುಸರಿಸುತ್ತ, ಉರ್ದು ಭಾಷೆಯ ಅಭ್ಯಾಸಕ್ಕೆ ಪಠ್ಯಕ್ರಮದಲ್ಲಿ ಅನಿವಾರ್ಯ ಸ್ಥಾನವನ್ನು ನೀಡಿ ಉಳಿದೆಲ್ಲ ವಿಷಯಗಳನ್ನು ಕನ್ನಡ ಮಾಧ್ಯಮದಲ್ಲಿಯೇ ಕಲಿಸುವ ಗಂಡು ಧೈರ್ಯವನ್ನು ಮಾಡಲಾಗಿತ್ತು. ಇದಕ್ಕೂ ಹೆಚ್ಚಾಗಿ ಶಾಲಾ ವೇಳಾಪಟ್ಟಿಯ ಅನಂತರ ವಿಶೇಷ ತರಗತಿಗಳನ್ನು ಏರ್ಪಡಿಸಿ ಇಂಗ್ಲಿಷ್, ಸಂಸ್ಕೃತ, ಹಿಂದಿ, ಶಾರೀರಿಕ ವ್ಯಾಯಾಮ, ರಾಷ್ಟ್ರೀಯ ವಿಚಾರಬೋಧೆಗಳನ್ನು ನೀಡಲಾಗುತ್ತಿತ್ತು. ಅಂತೆಯೇ ಇದನ್ನೆಲ್ಲ ಸೂಕ್ಷ್ಮವಾಗಿ ಗಮನಿಸುತ್ತಿದ್ದ ಸರಕಾರವು, ಆರ್ಥಿಕ ಸಹಾಯದಂತಹ ಯಾವುದೇ ಅನುದಾನವನ್ನು ನೀಡುವದಂತೂ ದೂರವೇ ಉಳಿಯಿತು. ನಿರೀಕ್ಷಣಾ ವರದಿಗಳನ್ನೂ ಶಾಲೆಯ ವಿರುದ್ಧವೇ ನೀಡುತ್ತಿತ್ತು. ಈ ಶಾಲೆಯ ಶಿಸ್ತು, ಅಲ್ಲಿಯ ಶಿಕ್ಷಕರ ಕರ್ತವ್ಯ

ದಕ್ಷತೆಯನ್ನು ಸಹಿಸದೆ ಸರಕಾರವು ಪೈಪೋಟಿಯಲ್ಲಿ ಸರಕಾರಿ ಶಾಲೆಯನ್ನು ಆರಂಭಿಸಿತು. ಈ ಶಾಲೆಯ ಶಿಕ್ಷಕರಿಗೆ ಪ್ರಲೋಭನೆಗಳನ್ನು ಒಡ್ಡಿ ಸರಕಾರಿ ಸಂಬಳವನ್ನು ನೀಡಲು ಮುಂದಾಗಿ, ಅವರನ್ನು ಈ ಶಾಲೆಯಿಂದ ಬಿಡಿಸಲು ಪ್ರಯತ್ನಿಸಲಾಯಿತು. ವಿದ್ಯಾರ್ಥಿಗಳ ಸಂಖ್ಯೆಯು ಕುಸಿಯುವಂತೆ ಅನೇಕ ರೀತಿಯ ಕಾರ್ಯ ಚಟುವಟಿಕೆಗಳ ಜಾಲವನ್ನು ಎಸೆಯಲಾಯಿತು. ಇಲ್ಲಿಯ ಎಲ್ಲ ಶಿಕ್ಷಕರು ಯಾವ ಸಂಭಾವನೆಗೂ ಆಶೆಪಡದೇ ರಾಷ್ಟ್ರೀಯ ಮನೋಭಾವನೆಯಿಂದ ಉತ್ತಮ ಶಿಕ್ಷಣವನ್ನು ಪ್ರದಾನ ಮಾಡುವಲ್ಲಿ ಸದಾ ಪ್ರಯತ್ನ ವಾದಿಗಳಾಗಿದ್ದರು. ವಿದ್ಯಾರ್ಥಿಗಳೂ ಕೂಡ ಸರಕಾರಿ ಶಾಲೆಯಲ್ಲಿಯ ಉರ್ದು ಮಾಧ್ಯಮಕ್ಕೆ ಮಾರುಹೋಗದೆ ಇದೇ ಶಾಲೆಯಲ್ಲಿಯ ಶಿಕ್ಷಣ ಪದ್ಧತಿಯನ್ನು ಗೌರವಿಸಿ ಇಲ್ಲಿಯೇ ಪ್ರವೇಶಪಡೆಯುವುದು ದಿನದಿನಕ್ಕೆ ಹೆಚ್ಚಾಗ ತೊಡಗಿತು. ಈ ಶಾಲೆಯಲ್ಲಿಯ ಶಿಕ್ಷಕರ ದೇಶಾಭಿಮಾನ, ಶಿಕ್ಷಣದ ಕಳಕಳಿ, ತ್ಯಾಗ ಮನೋಭಾವಗಳನ್ನು ಗಮನಿಸಿ ಚಿಂಚೋಳಿಯ ದೇಶಮುಖನಾದ ರಾಜಾ ಶ್ರೀ ಧರ್ಮಪಾಲ ಸಂಸ್ಥಾನಾಧೀಶನು ಮಾತ್ರ ಪ್ರತಿ ತಿಂಗಳು ರೂ. ೨೫.೦೦ ಧನಸಹಾಯವನ್ನು ಈ ಶಾಲೆಗೆ ಮಾಡುತ್ತಿದ್ದನು. ಕೆಲವು ದಿವಸಗಳ ಅನಂತರ ಇದು ರೂ. ೫೦.೦೦ಕ್ಕೆ ಏರಿತು.

ಇಂಥ ಶ್ರದ್ಧಾ ಮನೋವೃತ್ತಿಯು ಈ ಶಾಲೆಯ ವಾತಾವರಣದಲ್ಲಿ ತುಂಬಲು ಆ ಶಾಲೆಯಲ್ಲಿ ಪ್ರತಿ ದಿವಸ ನಡೆಯುತ್ತಿದ್ದ ಪ್ರಾರ್ಥನೆಯ ಪ್ರಭಾವ ಕೂಡ ಕಾರಣ. ಏಕೆಂದರೆ ಆ ಶಾಲೆಯಲ್ಲಿ ತಾಬದಖಾಲಿಕ ಪ್ರಾರ್ಥನೆಯ ಜೊತೆಗೆ ಹೃದಯ ಸಂಸ್ಕಾರೀ ಆಗುವಂತಹ ಗಜಾನನ ಸ್ತೋತ್ರ, ಸರಸ್ವತೀ ಸ್ತೋತ್ರ, ವಂದೇಮಾತರಂ ಗೀತೆ ಇವುಗಳನ್ನು ತಪ್ಪದೇ ಹೇಳಿಸಲಾಗುತ್ತಿತ್ತು. ಮತ್ತೆ ಕನ್ನಡಾಂಬೆ ನೀ ಧನ್ಯೆ। ಭಾರತಾಂಬೆಯಿಂದ ಮಾನ್ಯೆ ಎಂಬ ರಾಷ್ಟ್ರ ಭಕ್ತಿಗೀತೆಯನ್ನು ಹೇಳಿಸಲಾಗುತ್ತಿತ್ತು.

ಈ ಹಿನ್ನೆಲೆಯಲ್ಲಿ ಚಿಂಚೋಳಿಯಲ್ಲಿ ೧೯೪೪ರಲ್ಲಿ ದಿವಂಗತ ಜಯತೀರ್ಥ ಆಚಾರ್ಯ ಪುರಾಣಿಕರ ಹಿರಿತನದಲ್ಲಿ ಹೈದರಾಬಾದ ಸ್ಟೇಟ್ ಕಾಂಗ್ರೆಸ್ಸಿನ ಪ್ರೇರಣೆಯಲ್ಲಿ ಕರ್ನಾಟಕ ಪರಿಷತ್ತಿನ ತಾಲ್ಲೂಕ ಘಟಕದ ಪ್ರಥಮ ಸಮ್ಮೇಳನವು ನಡೆಯಿತು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ಸಯದ್ ಸರಾಜುಲ್ ಹಸನ್ ಅವರು ವಹಿಸಿದ್ದುದು ರಾಷ್ಟ್ರೀಯ ಮನೋಭಾವನೆಯಲ್ಲಿಯ ಸಮನ್ವಯತೆಯ ಪ್ರತೀಕ. ಈ ರಾಷ್ಟ್ರೀಯ ಶಾಲೆ ನೀಡಿದ ಶಿಕ್ಷಣದ ಪರಿಣಾಮ. ಏಕೆಂದರೆ ಈ ಸಮ್ಮೇಳನದ ಸಂಘಟಕರಾಗಿದ್ದ ಜಯತೀರ್ಥಾಚಾರ್ಯರು ಇದೇ ಶಾಲೆಯ ಹಿಂದಿನ ವಿದ್ಯಾರ್ಥಿ ಹಾಗು ಚಿಂಚೋಳಿ ತಾಲ್ಲೂಕಿನ ಪ್ರಥಮ ಸ್ನಾತಕ ನ್ಯಾಯವಾದಿ, ಅಪ್ಪಟ ಖಾದೀಪ್ರೇಮಿ ಎಂಬುದು ಬಹುಮುಖ್ಯ.

ಇದೇ ರೀತಿ ಈ ಶಾಲೆಯಲ್ಲಿ ಶಿಕ್ಷಣ ಪಡೆದು ಸ್ವರಾಜ್ಯವನ್ನು ತಂದುಕೊಡುವ ಚಳುವಳಿಯಲ್ಲಿ ಭಾಗವಹಿಸಿ ಮುಂದೆ ದೇಶದಲ್ಲಿ ಹೆಸರು ಮಾಡಿದವರಲ್ಲಿ ಕೆಲವು ಪ್ರಮುಖರ ಹೆಸರುಗಳನ್ನು ಇಲ್ಲಿ ದಾಖಲಿಸಬೇಕು. ಅವರಲ್ಲಿ ಮೊದಲ ಲೋಕಸಭೆಯಲ್ಲಿ ಸದಸ್ಯರಾಗಿದ್ದ ಕೃಷ್ಣಾಚಾರ್ಯ ಜೋಶಿ ಗುಡಗುಂಟಿ, ವೈದ್ಯರಾಜ ಡಾ|| ಶೇಷಗಿರಿರಾವ್ ಕುಲಕರಣಿ, ಭೀಮಸೇನಾಚಾರ್ಯ ಮೂಲಿ, ಅನಂತಶರ್ಮಾ ಮೊದಲಾದವರು ಮುಕ್ತಿ ಸಂಗ್ರಾಮದಲ್ಲಿ ಜೇಲು ಶಿಕ್ಷೆ ಅನುಭವಿಸಿ ಸ್ವಾತಂತ್ರ್ಯಾನಂತರ ಸದಾ ಸಮಾಜ ಸೇವೆಯಲ್ಲಿಯೇ ನಿರಂತರವಾಗಿದ್ದು ರಾಷ್ಟ್ರಹಿತವನ್ನು ಕಂಡವರು. ಇವರಲ್ಲದೆ, ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ವೀರೇಂದ್ರ ಪಾಟೀಲರೂ ಕೂಡ ಇದೇ ಶಾಲೆಯ ಹಿಂದಿನ ವಿದ್ಯಾರ್ಥಿ.

ಇಷ್ಟೆಲ್ಲ ಸೌಭಾಗ್ಯವಿದ್ದರೂ, ಹೈದರಾಬಾದ ಸಂಸ್ಥಾನದ ವಿಮೋಚನೆಯಾದ ಅನಂತರ ಈ ಶಾಲೆ ಮುಚ್ಚಿಹೋದದ್ದು ದುರ್ದೈವದ ಸಂಗತಿ. ಕೆಲವರು ಮತ್ತೆ ಪುನರುಜ್ಜೀವನಗೊಳಿಸಲು ಪ್ರಯತ್ನಿಸಿದಾಗ, ಆಗ ರಾಜಕೀಯದ ಮುಂಚೂಣಿಯಲ್ಲಿದ್ದವರು, 'ಈಗ ಸರಕಾರವೇ ನಮ್ಮದಿದೆ. ಬೇರೆ ರಾಷ್ಟ್ರೀಯ ವಿದ್ಯಾಲಯಗಳೇಕೆ?' ಎಂಬ ಉದ್ಗಾರವನ್ನು ತೆಗೆದುದರಿಂದ 'ಉಸ್ಮಾನಿಯಾ ಮಿಡ್ಲಿಸ್ಕೂಲ್ ರಾಷ್ಟ್ರೀಯ ಶಾಲೆ' ಮುಕ್ತಿ ಸಂಗ್ರಾಮದ ಅನಂತರ ತಾನೂ ೧೭.೮.೧೯೪೮ಕ್ಕೆ ಮುಕ್ತಿಯನ್ನು ಪಡೆಯಿತು. ಆದರೆ ಈ ಶಾಲೆಯು ರಾಷ್ಟ್ರೀಯ ಆಂದೋಲನಕ್ಕೆ ನೀಡಿದ ಪ್ರೇರಣೆಯನ್ನು ಇತಿಹಾಸವು ಎಂದಿಗೂ ಮರೆಯಬಾರದು.

**ಕುಕನೂರು**

ಕುಕನೂರು, ಕರ್ನಾಟಕದ ಕೊಪ್ಪಳ ಜಿಲ್ಲೆಯಲ್ಲಿರುವ ಧಾರ್ಮಿಕ ಕ್ಷೇತ್ರ. ಶಿವ-ಶಕ್ತಿ- ಸುರತ್ ಸಂಪುಟ ಕ್ಷೇತ್ರ. ಜ್ಯೇಷ್ಠಾದೇವಿಯ ಆವಾಸಸ್ಥಾನವಾಗಿ ಶಾಕ್ತಪೀಠ. ಅಷ್ಟೇ ಅಲ್ಲ ಇದೊಂದು ಖ್ಯಾತ ಅಗ್ರಹಾರ. ಅಂತೆಯೇ ಇದು 'ಮಹಾದಿವ್ಯ ಕ್ಷೇತ್ರ'. ಈ ಮಾತಿಗೆ ಈ ಊರಿನ ಗ್ರಾಮ ದೇವತೆ ಮಹಾಮಾಯೆ (ಜ್ಯೇಷ್ಠಾದೇವಿ)ಯ ವಿಶೇಷಾಂಶಗಳೂ ಬಹುಮುಖ್ಯ ಕಾರಣ. ಪ್ರಾಂ. ಭೀ. ದೇಸಾಯಿ ಅವರು ಈ ವಿಶೇಷಾಂಶಗಳು ಮೂರು ಎಂಬುದನ್ನು ಗುರುತಿಸಿದ್ದಾರೆ: "ಒಂದನೆಯದಾಗಿ ಈ ಕ್ಷೇತ್ರ ಮತ್ತು ದೇವಿಯ ಪ್ರಾಚೀನತ್ವ. ಇದು ಒಂದು ಸಾವಿರ ವರ್ಷಗಳಷ್ಟು ಪುರಾತನವಾಗಿದೆ. ಎರಡನೆಯದಾಗಿ ವಿದ್ಯಾಪ್ರಭಾವ. ಈ ಮಹಾಗ್ರಹಾರವು ಸುದೀರ್ಘ ಕಾಲದವರೆಗೆ ವಿದ್ಯಾಕೇಂದ್ರವಾಗಿ ಜನಾಂಗದ ಸಂಸ್ಕೃತಿಯನ್ನು ಅಭಿವೃದ್ಧಿಗೊಳಿಸಿತ್ತು. ಮೂರನೆಯದಾಗಿ, ಉನ್ನತ ಧಾರ್ಮಿಕ ಪರಂಪರೆ ಮತ್ತು ದೈವಭಕ್ತಿ. ಒಬ್ಬ ಮಹಾಶಕ್ತಿ ದೇವಿಯ ಸನ್ನಿಧಾನದಲ್ಲಿ ಮತ್ತೊಬ್ಬ ಶಕ್ತಿಯನ್ನು ಸ್ಥಾಪಿಸಿ ಜೊತೆಗೆ ಅನೇಕ ಪರಿವಾರ ದೇವರುಗಳನ್ನು ಪುರಸ್ಕರಿಸಿ ಉತ್ಕಟ ಧಾರ್ಮಿಕ ಪ್ರಭಾವವನ್ನು ಬೀರುವ ಈ ಕ್ಷೇತ್ರದ ಘನತೆಯು ಸಂಸ್ಮರಣೀಯ".

ಸ್ವಾತಂತ್ರ್ಯದ ಸಂಗ್ರಾಮವು ೧೯೪೫-೪೭ರಲ್ಲಿ ನಡೆದ ಅನಂತರ ಕುಕನೂರಿನ ನೆಲೆಯಲ್ಲಿಯೂ ಸ್ವಾತಂತ್ರ್ಯವನ್ನು ಪಡೆಯುತ್ತ

ರಾಷ್ಟ್ರೀಯ ಶಿಕ್ಷಣದ ಅನಿವಾರ್ಯತೆಯನ್ನು ಮನಗಂಡು, ಆ ನಿಟ್ಟಿನಲ್ಲಿ ಬಹಳ ಗಟ್ಟಿಯಾಗಿಯೇ ಸ್ಪಂದಿಸಿದ್ದುಂಟು. ತತ್‌ಪರಿಣಾಮ ವಾಗಿಯೇ ವಿದ್ಯಾನಂದ ಗುರುಕುಲ ಶಾಲೆಯು ಸ್ಥಾಪನೆಗೊಂಡು, ಸ್ವಾತಂತ್ರ್ಯವನ್ನು ದೇಶಕ್ಕೆ ತಂದುಕೊಡುವಲ್ಲಿಯೂ ಹೈದರಾಬಾದ ಸಂಸ್ಥಾನವನ್ನು ನಿಜಾಂನ ಆಡಳಿತದಿಂದ ವಿಮೋಚನೆಗೊಳಿಸು ವಲ್ಲಿಯೂ ತನ್ನ ಕಾಣ್ಕೆಯನ್ನು ನೀಡಿದ್ದು ಇಂದಿಗೂ ಸ್ಫೂರ್ತಿಯನ್ನು ನೀಡುವ ಇತಿಹಾಸ.

***ವಿದ್ಯಾನಂದ ಗುರುಕುಲ ರಾಷ್ಟ್ರೀಯ ಶಾಲೆ ಕುಕನೂರು***

ಕುಕನೂರಿಗೆ ವಿದ್ಯಾದಾನ ಕ್ಷೇತ್ರದಲ್ಲಿ ಭವ್ಯ ಪರಂಪರೆಯಿರುವುದ ರಿಂದಲೇ ಭಾರತದಲ್ಲಿ ಸ್ವಾತಂತ್ರ್ಯಾಂದೋಲನವು ಚುರುಕು ಗೊಂಡಾಗ, ಅದುವರೆಗೂ ಗುಪ್ತಗಾಮಿನಿಯಾಗಿದ್ದ ರಾಷ್ಟ್ರೀಯ ಶಿಕ್ಷಣವು ಚಿಲುಮೆಗೊಂಡು ಬಾಲಗಂಗಾಧರ ತಿಲಕ ಹಾಗು ಮಹಾತ್ಮಾ ಗಾಂಧೀಜಿಯವರಿಂದ ಸ್ಫೂರ್ತಿಗೊಂಡು ವಿದ್ಯಾನಂದ ಗುರುಕುಲದ ರೂಪದಲ್ಲಿ ಪ್ರತ್ಯಕ್ಷವಾಯಿತು.

ಕ್ರಿ. ಶ. ೧೯೨೧ರ ಸಮಯ ಭಾರತದಾದ್ಯಂತ ಮಹಾತ್ಮಾ ಗಾಂಧೀಜಿ ಅವರು 'ಅಸಹಕಾರ', ಚಳುವಳಿಯನ್ನು ಹುಟ್ಟು ಹಾಕಿದ್ದರು. ಅದರ ಪ್ರೇರಣೆಯು ಹೈದರಾಬಾದಿನ ನಿಜಾಂ ಕಾಲೇಜಿಗೂ ಮುಟ್ಟಿತು. ಅಲ್ಲಿ ವಿದ್ಯಾರ್ಥಿಯಾಗಿದ್ದ ರಾಘವೇಂದ್ರ ದೇಸಾಯಿ ಅವರು ಆ ಚಳುವಳಿಯಿಂದ ಪ್ರೇರಣೆ ಪಡೆದು ಮಾತೃಭಾಷಾ ಮಾಧ್ಯಮವನ್ನು ತಾವು ಕಲಿತಿದ್ದ ಕಲಬುರಗಿಯ ನೂತನ ವಿದ್ಯಾಲಯ ಶಾಲೆಯಲ್ಲಿ ಅನುಷ್ಠಾನಕ್ಕೆ ತರಬೇಕೆಂದು ಕಾಲೇಜಿಗೆ ಶರಣು ಹೊಡೆದು ಕಲಬುರಗಿಗೆ ಬಂದರು. ಇವರಂತೆ ಆಗ ಫರ್ಗ್ಯುಸನ್ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದ ಕಲಬುರಗಿಯ ನೂತನ ವಿದ್ಯಾಲಯ ಶಾಲೆಯ ಮತ್ತೊಬ್ಬ ವಿದ್ಯಾರ್ಥಿ ಅಸಹಕಾರ ಚಳುವಳಿಯಿಂದ ಪ್ರೇರಿತನಾಗಿ ಕಾಲೇಜು ಬಿಟ್ಟು ಕಲಬುರಗಿಗೆ ಬಂದರು. ಅವರ ಹೆಸರು ರಾಮಸ್ವಾಮಿ ಎಂದು. ಇವರಿಬ್ಬರೂ ಸೇರಿ ಕಲಬುರಗಿಯ ನೂತನ ವಿದ್ಯಾಲಯ ಶಾಲೆಯಲ್ಲಿ ಕನ್ನಡ ಮಾಧ್ಯಮದ (ಮಾತೃಭಾಷಾ ಮಾಧ್ಯಮದ) ಶಿಕ್ಷಣ ಪದ್ಧತಿಯನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸಿದರು. ಆದರೆ ಅದು ಆ ಶಾಲೆಯ ಆಡಳಿತ ಮಂಡಳಿಗೆ ಒಪ್ಪಿಗೆಯಾಗಲಿಲ್ಲ. ಆಗ ಈ ಇಬ್ಬರು ರಾಷ್ಟ್ರ ಸೇವಾಸಕ್ತರು ಕೊಪ್ಪಳಕ್ಕೆ ಬಂದು ಪ್ರಯತ್ನಿಸುತ್ತಾರೆ. ಆದರೆ ಅಷ್ಟರಲ್ಲಿ ರಾಮಸ್ವಾಮಿ ಅವರು ಕಾಲಾರಾ ಬೇನೆಗೆ ಆಹುತಿಯಾಗಿ ಅಸುನೀಗುತ್ತಾರೆ. ಹೀಗಾಗಿ ಒಂಟಿಯಾದ ರಾಘವೇಂದ್ರ ರಾವ್ ದೇಸಾಯಿ ಅವರು ನಿರಾಶರಾಗಿ, ರಾಷ್ಟ್ರೀಯ ಶಿಕ್ಷಣ ಸಂಸ್ಥೆಯನ್ನು ಕಟ್ಟುವ ಕನಸನ್ನು ದೂರಸರಿಸಿ, ಆವರೆಗೆ ಈ ಕನಸಿನ ನನಸಿಗಾಗಿ ಸಂಗ್ರಹಿಸಿದ ಹಣವನ್ನು ವಾಪಸು ಕೊಡುವ ಪ್ರಕ್ರಿಯೆಯನ್ನು ಕುಕನೂರಿನಿಂದ ಆರಂಭಿಸುತ್ತಾರೆ. ಈ ವಿಷಯವು ಕುಕನೂರಿನಲ್ಲಿ ಆಗ ಪ್ರಮುಖರಾಗಿದ್ದ ನಿಟ್ಟಾಲಿದೇಸಾಯಿ ಶ್ರೀನಿವಾಸರಾಯರಿಗೆ ಗೊತ್ತಾಗಿ, ರಾಘವೇಂದ್ರರಾಯರ ಕನಸನ್ನು ನನಸಾಗಿಸಲು ಕುಕನೂರನ್ನೇ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಳ್ಳಲು ಸೂಚಿಸುತ್ತಾರೆ. ಆ ಸೂಚನೆಯು ಮಾನ್ಯವಾಗಿ ಸಂಗ್ರಹಿತವಾದ ನಿಧಿಯ ಬಲದಿಂದಲೂ ನಿಟ್ಟಾಲಿದೇಸಾಯಿ ಅವರ ಬೆಂಬಲ ದಿಂದಲೂ ಕುಕನೂರಿನಲ್ಲಿ ರಾಷ್ಟ್ರೀಯ ಶಾಲೆಯನ್ನು ೨೭ನೆಯ ಜುಲೈ ೧೯೨೨ (ಶ್ರಾವಣ ಶುದ್ಧ ತೃತೀಯಾ)ರಂದು ರಾಘವೇಂದ್ರರಾವ್ ದೇಸಾಯಿ ಅವರು ಸ್ಥಾಪಿಸುವಂತಾಗುತ್ತದೆ. ಅಂದಿನ ಶುಭ ಸಮಯದಲ್ಲಿ, ರಾಷ್ಟ್ರಭಕ್ತ ಕೀರ್ತನೆ ಕೇಸರಿ ಜಯರಾಮಾಚಾರ್ಯರು ಉಪಸ್ಥಿತರಿದ್ದರು. ಆ ದಿನ ಆರಂಭವಾದ ಈ ಶಾಲೆಗೆ 'ನಿಜಾಂ ಕರ್ನಾಟಕ ಪಾಠಶಾಲೆ' ಎಂದು ಹೆಸರಿಟ್ಟು, ನಿಜಾಂ ಸರಕಾರದ ವಕ್ರದೃಷ್ಟಿ ಬೀಳದಂತೆ ನೋಡಿಕೊಳ್ಳಲು ಪ್ರಯತ್ನಿಸಲಾಯಿತು. ಆದರೆ ಈ ಹೆಸರಿನಿಂದ ಸಮಾಧಾನಗೊಳ್ಳದ ರಾಘವೇಂದ್ರರಾಯರು ಕೆಲವೇ ದಿನಗಳಲ್ಲಿ ಈ ಶಾಲೆಗೆ ವಿದ್ಯಾನಂದ ಗುರುಕುಲ ರಾಷ್ಟ್ರೀಯ ಶಾಲೆ ಎಂದು ಹೆಸರಿಟ್ಟು ಅದರ ಏಳಿಗೆಗಾಗಿ ಹಗಲಿರುಳು ದುಡಿದರು.

ವಿದ್ಯಾನಂದ ಗುರುಕುಲ ರಾಷ್ಟ್ರೀಯ ಶಾಲೆಯು ಮೂರು ಜನ ಶಿಕ್ಷಕರು ಹಾಗು ೬೫ ವಿದ್ಯಾರ್ಥಿಗಳಿಂದ ಆರಂಭವಾದದ್ದು ಐದು ವರ್ಷಗಳಲ್ಲಿ ಮಿಡ್ಲಸ್ಕೂಲ್ ಮಟ್ಟಕ್ಕೆ ಬೆಳೆಯಿತು. ಈ ಶಿಕ್ಷಣ ಸಂಸ್ಥೆಯ ವ್ಯಾಪ್ತಿಯಲ್ಲಿ ಬೌದ್ಧಿಕ ಶಿಕ್ಷಣದ ಜೊತೆಗೆ ಗಾಂಧೀ ಆಶ್ರಮ ಜೀವನದ ಅಚ್ಚುಕಟ್ಟು ಮೇಳವಿಸಿತ್ತು. ಸ್ವಾವಲಂಬನ, ಸ್ವಾತಂತ್ರ್ಯ, ಪ್ರೀತಿ, ನಿರ್ಭಯತೆ, ತ್ಯಾಗ, ಸ್ವಾಭಿಮಾನ, ಲೋಕ ಸೇವೆ ಇವುಗಳೆಲ್ಲ ಅಲ್ಲಿರುವ ವಿದ್ಯಾರ್ಥಿಗಳಲ್ಲಿ ರಕ್ತಗತವಾಗ ತೊಡಗಿದುವು. ಗಾಂಧೀಜಿ ಅವರ ಆದರ್ಶದ ಮೇರೆಗೆ ಮಾತೃ ಭಾಷೆ, ರಾಷ್ಟ್ರ ಭಾಷೆ, ಗೀರ್ವಾಣ ಭಾಷೆ, ಖಾದ್ರೀವ್ರತ, ಸಾಕ್ಷರತಾ ಪ್ರಸಾರ, ಮಹಿಳಾ ಶಿಕ್ಷಣ, ಗ್ರಾಮೋದ್ಧಾರಗಳತ್ತ ವಿದ್ಯಾರ್ಥಿಗಳ ಒಲುವನ್ನು ಆಕರ್ಷಿಸಲು ಇಲ್ಲಿಯ ಶಿಕ್ಷಣ ಪ್ರಣಾಳಿಕೆ ಸಾಧ್ಯ ಮಾಡಿಕೊಡತೊಡಗಿತು.

ಇಂತಹ ಪ್ರಸನ್ನ ವಾತಾವರಣದಲ್ಲಿ ಶಿಕ್ಷಣವನ್ನು ಪಡೆದ ಇಂತಹ ಪ್ರಖ್ಯಾತರಲ್ಲಿ ಪ್ರಖ್ಯಾತ ಇತಿಹಾಸ ಸಂಶೋದಕರಾದ ಡಾ॥ ಪಾಂ. ಭೀ. ದೇಸಾಯಿ, ಕನ್ನಡ ಪ್ರಾಧ್ಯಾಪಕರಾಗಿದ್ದ ರಾಮಚಂದ್ರರಾವ್ ಪಟವಾರಿ (ರಾಗಿ), ರಸಾಯನಶಾಸ್ತ್ರ, ಪ್ರಾಧ್ಯಾಪಕರಾಗಿದ್ದ ವಿ. ಜೆ. ಉಪಾಧ್ಯೆ, ಸಂಸ್ಕೃತ ಪ್ರಾಧ್ಯಾಪಕ ರಾಗಿದ್ದ ಹೆಚ್. ಜೆ. ಉಪಾಧ್ಯ, ಆದರ್ಶ ಶಿಕ್ಷಕರಾಗಿದ್ದ ರಂ. ರಾ. ನಿಡಗುಂದಿ, ಶ್ರೇಷ್ಠ ನ್ಯಾಯವಾದಿ ಅನ್ನದಾನಯ್ಯ ಪುರಾಣಿಕ ಮೊದಲಾದವರು. ಇವರಲ್ಲದೆ ನಾಡಿನ ಶ್ರೇಷ್ಠ ಕವಿ ಸಿದ್ಧಯ್ಯ ಪುರಾಣಿಕ ಅವರೂ ಇದೇ ಶಾಲೆಯಿಂದ ಅರಳಿ ಬಂದ ಸಂಪತ್ತು ಎಂದಾಗ ಈ ಶಾಲೆಯಲ್ಲಿ ಎಂತಹ ಉನ್ನತ ಮಟ್ಟದ ಶಿಕ್ಷಣವು ಪ್ರದಾನವಾಗುತ್ತಿತ್ತೆಂಬುದರ ಕಲ್ಪನೆಯು ಬರುತ್ತದೆ.

ವಿದ್ಯಾನಂದ ಗುರುಕುಲವು ರಾಷ್ಟ್ರೀಯ ಶಿಕ್ಷಣದ ಸಂಸ್ಕಾರ ವನ್ನು ನೀಡುತ್ತಿದ್ದುದರಿಂದ, ರಾಷ್ಟ್ರದ ಹಿತವನ್ನು ಕಾಪಾಡಬೇಕಾದ

ಪ್ರಸಂಗ ಬಂದಾಗ ಇಲ್ಲಿಯ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಜೀವದ ಹಂಗು ತೊರೆದು ಹೋರಾಡಿದರು. ೧೯೪೨ರಲ್ಲಿ ಚಲೇಜಾವ್ (ಭಾರತದಿಂದ ತೊಲಗಿರಿ) ಚಳುವಳಿಯು ಆರಂಭವಾದಾಗ ಈ ಶಾಲೆಯಲ್ಲಿ ಶಿಕ್ಷಕರಾಗಿದ್ದ ಭೀಮಜ್ಜ ಮುರಡಿ ಅವರು ಆ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲುಗೊಂಡರು : ೧೯೪೪-೪೫ರಲ್ಲಿ ಕರ್ನಾಟಕ ಗ್ರಾಮ ಸೇವಾ ಸಂಘದ ಕರೆ ಬಂದುದರಿಂದ ಸಂಸ್ಥಾಪಕರೂ ಶಿಕ್ಷಕರೂ ಆಗಿದ್ದ ರಾಘವೇಂದ್ರ ರಾವ್ ದೇಸಾಯಿ ಅವರು ಕೆಲಕಾಲ ಕುಕನೂರಿನಿಂದ ಹೊರಗಿರ ಬೇಕಾಯಿತು. ೧೯೪೭-೪೮ರಲ್ಲಿ ಬ್ರಿಟಿಷರು 'ಯಥಾಸ್ಥಿತಿ ಒಪ್ಪಂದ'ವನ್ನು ಇಟ್ಟು ಹೋದದ್ದಕ್ಕಾಗಿ ಏಳನೆಯ ನಿಜಾಂನು ಸಾರ್ವಭೌಮನಾಗಲು ಯೋಚಿಸಿದಾಗ ರಜಾಕಾರ ಹಾವಳಿಯು ಅವನಿಗೆ ಪೋಷಕವಾಗುವಂತೆ ಉಲ್ಬಣಿಸಿದಾಗ, ಗುರುಕುಲದ ಅನೇಕರು ಸತ್ಯಾಗ್ರಹಿಗಳಾಗಿ ಜೈಲು ಶಿಕ್ಷೆಯನ್ನು ಅನುಭವಿಸಿದರು. ಸಂಸ್ಥಾಪಕ ರಾಘವೇಂದ್ರ ರಾಯರು, ಅವರ ಮಗ ಅನಿರುದ್ಧ ದೇಸಾಯಿ, ಅವರ ಬಂಧು ಭೀಮಸೇನ ರಾವ್ ಬೆಣಕಲ್, ಅವರ ಅಣ್ಣ ಸಂಜೀವರಾಯರ ಮಗ ಕುಸುಮಾಕರ ದೇಸಾಯಿ ಮೊದಲಾದವರು, ಯಥಾಸ್ಥಿತಿ ಒಪ್ಪಂದವನ್ನು ಮುರಿದು, ನಿಜಾಂನ ಹಿಡಿತದಲ್ಲಿದ್ದ ಹೈದರಾಬಾದ ಸಂಸ್ಥಾನವನ್ನು ವಿಮೋಚನಗೊಳಿಸಿ ಭಾರತ ಒಕ್ಕೂಟದಲ್ಲಿ ವಿಲೀನಗೊಳಿಸಲು ಚುರುಕುಗೊಂಡಿದ್ದ ಚಳುವಳಿಯಲ್ಲಿ ಪಾಲುಗೊಂಡು ಜೈಲು ಶಿಕ್ಷೆಗೆ ಒಳಗಾದರು. ಈ ಚಳುವಳಿಯು ಸ್ವಾಮೀ ರಾಮಾನಂದ ತೀರ್ಥರ ನಾಯಕತ್ವದಲ್ಲಿ ಏಕತ್ರಗೊಂಡ ಚಳುವಳಿಯಾಗಿ, ಸಕ್ರಿಯವಾಗಿ ಪಾಲುಗೊಂಡಿ ದ್ದವರು : ತ್ರಿ-ಲೋಚನ ದೀಕ್ಷಿತ, ವಾಮದೇವ ದೀಕ್ಷಿತ, ತಿರುಮಲ ರಾವ್ ದೇಸಾಯಿ, ಬಾಲಯೋಗಿ ಮುರಡಿ ಭೀಮಜ್ಜ, ಎಂ. ಜಿ. ಶಾಸ್ತ್ರೀಮಠ, ಸದಾಶಿವ ರಾಜಪುರೋಹಿತ, ದಾಸರಾವ್ ಮಖ್ತೇದಾರ ಮೊದಲಾದವರು ಪ್ರಮುಖರು.

ಹೈದರಾಬಾದ ಸಂಸ್ಥಾನದ ವಿಮೋಚನಾ ಚಳುವಳಿಯಲ್ಲಿ ವಿದ್ಯಾನಂದ ಗುರುಕುಲ ರಾಷ್ಟ್ರೀಯ ಶಾಲೆಯು ವಿಶಿಷ್ಟವಾದ ದಾಖಲೆಯನ್ನು ಮಾಡಿದೆ. ಅದೆಂದರೆ ರಾಷ್ಟ್ರಕ್ಕಾಗಿ ಆದರ್ಶ ಶಿಕ್ಷಕರೊಬ್ಬರು ಜೇಲಿನಲ್ಲಿ ಬಲಿದಾನವಾದದ್ದು. ಅವರೆಂದರೆ ಭೀಮಸೇನರಾವ್ ದೇಸಾಯಿ ಬೆಣಕಲ್ ಅವರು. ಅವರ ಅಂತ್ಯಕ್ರಿಯೆಯನ್ನು ಜೇಲಿನಲ್ಲಿದ್ದ ಅನಿರುದ್ಧ ದೇಸಾಯಿ ಅವರು ಮಾಡುವ ಪ್ರಸಂಗ. ಇದೆಲ್ಲ ಎಂದೆಂದಿಗೂ ರೋಮಾಂಚನ ಗೊಳಿಸುವ ಇತಿಹಾಸ. ಇದು ವಿದ್ಯಾನಂದ ಗುರುಕುಲ ರಾಷ್ಟ್ರೀಯ ಶಾಲೆಯ ವೀರಗಾಥೆ.

ವಿದ್ಯಾನಂದ ಗುರುಕುಲ ರಾಷ್ಟ್ರೀಯ ಶಾಲೆಯು ರಾಷ್ಟ್ರೀಯ ಆಂದೋಲನವನ್ನು ಪ್ರತಿನಿಧಿಸುವ ಸಂಸ್ಥೆಯಾಗಿದ್ದುದರಿಂದ, ಸ್ವಾತಂತ್ರ್ಯಪೂರ್ವದಲ್ಲಿ ಸರಕಾರದ ನೆರವನ್ನು ಅಪೇಕ್ಷಿಸಲು ಅಸಾಧ್ಯದ ಮಾತಾಗಿತ್ತು. ಆದರೂ ಕೊಪ್ಪಳ ಜಾಗೀರದಾರನು ಮೊದಲು ರೂ. ೨೫.೦೦ ಅನುದಾನವನ್ನು ಈ ಶಾಲೆಗೆ ನೀಡಿದನು. ಅದನ್ನು ಮುಂದೆ ರೂ. ೧೦೦.೦೦ಕ್ಕೆ ಏರಿಸಿದನು. ಇದರಿಂದ ಆರ್ಥಿಕ ಸ್ಥಿತಿಗೆ ಯಾವತರಹದ ಸಹಾಯವಾಗು ವಂತಿರಲಿಲ್ಲ. ಅದಕ್ಕಾಗಿ ಆಡಳಿತ ಮಂಡಳಿಯು 'ಪೈಸಾಫಂಡ', 'ಮುಷ್ಠಿಫಂಡ' ಗಳನ್ನು ಜಾರಿಗೆ ತಂದು ಧನ ಸಂಗ್ರಹ ಮಾಡಿತು. ಸ್ವಾತಂತ್ರ್ಯದ ಅನಂತರ ಉಳ್ಳವರು ಈ ವಿದ್ಯಾಲಯಕ್ಕೆ ಧನ ಸಹಾಯ ಮಾಡತೊಡಗಿದರು. ಗಾಂಧೀ ಆಶ್ರಮ ತತ್ವಗಳಿಗೆ ಬಾಧೆ ಬಾರದಂತೆ ಈ ಸಂಸ್ಥೆಯು ಈಗ ಭದ್ರ ತಳಹದಿಯ ಮೇಲೆ ವಿಕಾಸವಾಗುತ್ತ ಸಾಗಿರುವುದು, ಸಂಸ್ಥಾಪಕ ಅಧ್ಯಕ್ಷರ ಆತ್ಮವಿಶ್ವಾಸಕ್ಕೆ ಸಾಕ್ಷಿ. ಅವರ ಕನಸುಗಳು ಒಂದೊಂದಾಗಿ ನನಸಾಗುತ್ತ ಸಾಗಿರುವುದು ಅವರು ನೀಡಿರುವ ಸಂಸ್ಕಾರಗಳ ಜೀವಂತಿಕೆಗೆ ಸಾಕ್ಷಿ.

ಒಂದು ಪಾಠಶಾಲೆಯಾಗಿ ೧೯೨೨ರಲ್ಲಿ ಆರಂಭವಾದ ಈ ಸಂಸ್ಥೆಯು ಈಗ ಶಿಶುವಿಹಾರ, ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಪದವೀಪೂರ್ವ ಕಾಲೇಜು (ಕಲಾ, ವಿಜ್ಞಾನ ಹಾಗು ವೃತ್ತಿಪರ ಶಿಕ್ಷಣ), ಪ್ರಥಮ ದರ್ಜೆ ಕಾಲೇಜು (ಕಲಾ) ಗ್ರಾಮೀಣ ಪಾಲಿಟೆಕ್ನಿಕ್, ನಿರ್ಗತಿಕ ಮಕ್ಕಳ ಕುಟೀರ, ವೃದ್ಧಾಶ್ರಮ ಮೊದಲಾದ ಶಾಖೋಪಶಾಖೆಗಳಿಂದ ಆಲದ ಮರವು ಬಿಳಿಲು ಬಿಳಿಲುಗಳಾಗಿ ಬಹುಮುಖಿಯಾಗಿ ಬೆಳೆದು ನಿಂತಿರುವುದನ್ನು ಕಂಡರೆ, ಸಂಸ್ಥಾಪಕರ ಕನಸು ನನಸಾಗಿರಲಿಕ್ಕೇ ಸಾಕು.

ಈ ಶಿಕ್ಷಣ ಸಂಸ್ಥೆಯ ಪ್ರಾಮಾಣಿಕತೆಯನ್ನು ಮತ್ತು ದುಡಿತದಲ್ಲಿಯ ಶ್ರದ್ಧಾಮನೋಭಾವನೆಗಳನ್ನು ಗಮನಿಸಿ ೧೯೯೧ರಲ್ಲಿ ಕರ್ನಾಟಕ ಸರಕಾರವು ಮೊದಲನೆಯ ರಾಜ್ಯಮಟ್ಟದ ೧೯೯೧ನೆಯ ಸಾಲಿನ ಪ್ರಶಸ್ತಿಯನ್ನು ನೀಡಿತು. ಈ ಪ್ರಶಸ್ತಿಯನ್ನು ರಾಜ್ಯದಲ್ಲಿ ಮಕ್ಕಳ ಕಲ್ಯಾಣ ಕ್ಷೇತ್ರದಲ್ಲಿ ಉತ್ತಮ ಸೇವೆ ಸಲ್ಲಿಸಿದ ಸ್ವಯಂ ಸೇವಾ ಸಂಸ್ಥೆಗೆ ಕೊಡಮಾಡಿದ್ದು. ೧೯೯೩ರಲ್ಲಿ ಭಾರತ ಸರಕಾರವು 'ರಾಷ್ಟ್ರೀಯ ಬಾಲ ಕಲ್ಯಾಣ ಹೇತು ಪುರಸ್ಕಾರ' ವನ್ನು ಈ ಸಂಸ್ಥೆಗೆ ನೀಡಿ ಗೌರವಿಸಿತು. ೧೯೯೬-೯೭ರಲ್ಲಿ ಈ ಸಂಸ್ಥೆಯ ವೆಂಕಟೇಶ ಎಂಬ ವಿದ್ಯಾರ್ಥಿಗೆ ಪಿಯುಸಿ ಪರೀಕ್ಷೆಯಲ್ಲಿ ರ್‍ಯಾಂಕ್ ಗಳಿಸಿದ ಸ್ಮರಣೀಯ ಪ್ರಶಸ್ತಿಯನ್ನು ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆ ನೀಡಿತು. ಇಂತಹ ಅನೇಕ ಪ್ರಶಸ್ತಿಗಳು ಈ ಸಂಸ್ಥೆಯ ಸಾಧನೆಯ ಮಡಿಲಲ್ಲಿವೆ.

ಇದನ್ನೆಲ್ಲ ಗಮನಿಸಿದರೆ ರಾಘವೇಂದ್ರ ರಾವ್ ದೇಸಾಯಿ ಅವರು ಬಿತ್ತಿದ ನ್ಯಗ್ರೋಧವು ಗಾಳಿಗೆ ಹಾರಿಹೋಗದೆ, ಕುಕನೂರಿನಲ್ಲಿ ಭದ್ರ ನೆಲೆಗೊಂಡು ವಿಸ್ತಾರವಾಗತೊಡಗಿರುವುದಕ್ಕೆ, ಅವರ ಭಾಗ್ಯ ತೆರೆದಂತೆ ಈಗ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳವರು ಪರ್ಯಾಯ ಪೇಜಾವರ ಅಧೋಕ್ಷಜ ಮಠ ಉಡುಪಿ ಅವರು ಈ ಸಂಸ್ಥೆಯ ವಿಶ್ವಸ್ತ ಮಂಡಳಿಯ ಅಧ್ಯಕ್ಷರಾಗಿದ್ದಾರೆ. ಅದೇ ರೀತಿ ಬಹುಮುಖ ಪ್ರತಿಭೆಯ ಅನಿರುದ್ಧ ದೇಸಾಯಿ ಅವರು

ಕಾರ್ಯಾಧ್ಯಕ್ಷರಾಗಿ ಆಡಳಿತ ಮಂಡಳಿಯನ್ನು, ಶಾಲಾ ಕಾಲೇಜುಗಳ ಅಧ್ಯಾಪಕರನ್ನೂ, ಸಿಬ್ಬಂದಿಗಳನ್ನು ಈ ಶಿಕ್ಷಣ ಸಂಸ್ಥೆಯನ್ನು ಸರ್ವತೋಮುಖವಾಗಿ ಬೆಳೆಸುತ್ತಿದ್ದಾರೆ. ಅಂತೆಯೇ ಈ ಸಂಸ್ಥೆಯು ಈಗಾಗಲೇ ಅಮೃತ ಮಹೋತ್ಸವವನ್ನು ಅರ್ಥಪೂರ್ಣವಾಗಿ ನೆರವೇರಿಸಿ ಶತಮಾನದ ದಾರಿಯನ್ನು ತುಳಿಯುತ್ತಿರುವುದು ಅಭಿನಂದನೀಯವಾದ ವಿಷಯ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್.**, (೧೯೯೭), ಗುಲ್ಬರ್ಗಾ ಜಿಲ್ಲೆ.

*೨. **ಹೈದರಾಬಾದ್ ಕರ್ನಾಟಕ.**, (೧೯೪೨), (ಸಂ) ಆರ್. ಜಿ. ಜಾಗೀರದಾರ್.

*೩. *Mysore State Gazetteer* - Raichur District, 1970.

*೪. ಅನಂತಶರ್ಮಾ ಚಿಂಚೋಳಿ ಅವರೊಡನೆ ಸಂದರ್ಶನ.

*೫. ಅನಂತ ಕುಲಕರಣಿ., (೧೯೮೦), **ಪ್ರಾಚೀನ ಭಾರತದಲ್ಲಿಯ ವಿದ್ಯಾ ಕೇಂದ್ರಗಳು.**

*೬. **ಗುರುಕುಲಾಮೃತ** - ಸ್ಮರಣ ಸಂಚಿಕೆ; ೨೦೦೦.

*೭. Swadeshi Spirit Through National Schools - Dr. B. C. Mahabaleshwarappa, Artical published in the Quarterly Journal of Mythic Society..

*೮. ವಿದ್ಯಾನಂದ ಗುರುಕುಲದಲ್ಲಿಯ ದಾಖಲೆಗಳು.

*೯. ಚಿಂಚೋಳಿ ತಹಸೀಲದಲ್ಲಿಯ ದಾಖಲೆಗಳು.

*೧೦. ಡಾ|| ಎಸ್. ಎಲ್. ಶಾಂತಾಕುಮಾರಿ., (೧೯೭೫), **ಕುಕನೂರು.**

ವೇಮುಗಲ್ ಸೋಮಶೇಖರ್*

# ೧೮೯೭ರ ಮೈಸೂರು ಅರಮನೆ ಅಗ್ನಿ ದುರಂತ

ಮೈಸೂರು ಅರಸು ಮನೆತನವು ಯದುರಾಯರಿಂದ ಹಿಡಿದು ಜಯಚಾಮರಾಜೇಂದ್ರ ಒಡೆಯರ್ ವರೆಗೆ(೧೩೯೯-೧೯೪೭) ೫೫೦ ವರ್ಷಗಳ ಕಾಲ ೨೫ ಮಂದಿ ಅರಸರನ್ನು ನೀಡಿ ಸಂಸ್ಥಾನದ ಕೀರ್ತಿ ಪತಾಕೆಯನ್ನು ಎತ್ತಿ ಹಿಡಿಯಲು ಶ್ರಮಿಸಿತು. ಇಮ್ಮಡಿ ಕೃಷ್ಣರಾಜ ಒಡೆಯರ್(೧೭೩೪-೬೬) ಅವರ ಆಳ್ವಿಕೆಯಲ್ಲಿ ಪ್ರಬಲರಾದ ಹೈದರ್, ಟಿಪ್ಪು ೧೭೯೯ರ ವರೆಗೆ ಮೈಸೂರು ಸಂಸ್ಥಾನದ ಅನಭಿಷಿಕ್ತ ರಾಜರಂತೆ ಆಳ್ವಿಕೆ ನಡೆಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತಾವಧಿಯಲ್ಲಿ ೧೮೩೧ ರಿಂದ ೧೮೮೧ರ ವರೆಗೆ ಸಂಸ್ಥಾನವು ಬ್ರಿಟಿಷ್ ಕಮೀಷನರುಗಳ ಆಳ್ವಿಕೆಗೆ ಒಳಪಟ್ಟಿತು. ಅನಂತರ ಹತ್ತನೆಯ ಚಾಮರಾಜೇಂದ್ರ ಒಡೆಯರ್ ಅವರಿಗೆ ಮೈಸೂರು ಸಂಸ್ಥಾನದ ಅಧಿಕಾರ ಪ್ರಾಪ್ತ ವಾಯಿತು. ಇವರು ೧೮೯೪ರಲ್ಲಿ ನಿಧನರಾದಾಗ ಅವರ ಪುತ್ರ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಇನ್ನೂ ಬಾಲಕರಾಗಿದ್ದುದರಿಂದ ಮಹಾರಾಣಿಯವರನ್ನು ರೀಜೆಂಟ್‌ರನ್ನಾಗಿ ನೇಮಿಸಲಾಯಿತು.

ದಿವಂಗತ ಚಾಮರಾಜೇಂದ್ರ ಒಡೆಯರ್ ಅವರ ಜ್ಯೇಷ್ಠ ಪುತ್ರಿಯಾದ ಜಯಲಕ್ಷ್ಮಮ್ಮಣ್ಣಿ (ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಹಿರಿಯ ಸಹೋದರಿ) ಮತ್ತು ಕಾಂತರಾಜೇ ಅರಸ್ ಅವರ ವಿವಾಹವು ೧೮೯೭ ಫೆಬ್ರವರಿ ೧೯ರ ಶುಕ್ರವಾರದಂದು ಮೈಸೂರು ಅರಮನೆಯಲ್ಲಿ ಬಹಳ ವಿಜೃಂಭಣೆಯಿಂದ ನಡೆಯಿತು.

ಸುಮಾರು ೧೫ ದಿವಸಗಳ ಕಾಲ ನಡೆದ ಈ ವಿವಾಹ ಮಹೋತ್ಸವದ ಪ್ರಯುಕ್ತ ಹಳೇ ಅರಮನೆಯ ಆನೆ ಬಾಗಿಲಿನ ಉತ್ತರ ಭಾಗದಲ್ಲಿ ಕೋಟೆಯ ಒಳಗಡೆ ಬಾಲ್ಕನಿಯ ಮುಂಭಾಗದಲ್ಲಿ ಹಾಕಿದ್ದ ವಿಶಾಲವಾದ ಚಪ್ಪರಕ್ಕೆ ಹೊಸ ಬಟ್ಟೆಗಳಿಂದಲೂ, ನಾನಾ ಬಣ್ಣದ ಕಾಗದಗಳಿಂದಲೂ ಮನೋಹರವಾಗಿ ಅಲಂಕಾರ ಮಾಡಿದ್ದರು.

*ದುರಂತ:* ಈ ವಿವಾಹಕ್ಕೆ ಸಂಬಂಧವಾದ ಅಂತಿಮ ಉತ್ಸವಗಳು ಮುಗಿಯುವುದಕ್ಕೆ ಮುಂಚೆಯೇ ೧೮೯೭ ಫೆಬ್ರವರಿ ೨೮ನೇ ತಾರೀಕು ಬೆಳಗ್ಗೆ ೯ ಗಂಟೆಗೆ ಅಗ್ನಿಗೆ ಆಹುತಿಯಾಯಿತು. ಈ ಅರಮನೆಯನ್ನು ಮರ ಹಾಗೂ ಅರಗು ಮೆರುಗೆಣ್ಣೆಗಳನ್ನು ಬಳಸಿ ೧೮೦೩ ರಲ್ಲಿ ನಿರ್ಮಿಸಿದ್ದರು. ಅಂದು ಸಾಯಂಕಾಲ ನೂತನ ವಧುವನ್ನು ವರನ ಮನೆಗೆ ಕಳುಹಿಸಿಕೊಟ್ಟು ಮನೆ ತುಂಬಿಸಿಕೊಳ್ಳುವ ಶಾಸ್ತ್ರವಿತ್ತು. ಈ ಕಾರ್ಯಕ್ರಮದ ಏರ್ಪಾಟಿನ ಬಗ್ಗೆ ದಿವಾನ್ ಶೇಷಾದ್ರಿ ಅಯ್ಯರ್ ಅವರು ಮಹಾರಾಣಿ ರೀಜೆಂಟ್ ಅವರ ಸಂಗಡ ಬೆಳಗ್ಗೆ ಮಾತನಾಡಿ ಬಂದ ಸ್ವಲ್ಪ ಹೊತ್ತಿನಲ್ಲಿಯೇ ರಮಣೀಯವಾಗಿ ಕಂಗೊಳಿಸುತ್ತಿದ್ದ ಚಪ್ಪರಕ್ಕೆ ಬೆಂಕಿ ತಗುಲಿತು. ನಾಲ್ಕಾರು ನಿಮಿಷಗಳಲ್ಲಿ ಇಡೀ ಚಪ್ಪರವು ಸಂಪೂರ್ಣವಾಗಿ ಹತ್ತಿಕೊಂಡು ಉರಿಯ ತೊಡಗಿ ಗಗನ ವ್ಯಾಪಿಯಾಗಿ ಹೊಗೆ ಹೊರಟಿತು. 'ಅರಮನೆಗೆ ಬೆಂಕಿ ಬಿದ್ದಿದೆ' ಎಂಬ ವರ್ತಮಾನ ಕೆಲವು ಕ್ಷಣಗಳಲ್ಲೇ ಪಟ್ಟಣದಲ್ಲೆಲ್ಲಾ ಮಿಂಚಿನಂತೆ ಹಬ್ಬಿತು. ತಕ್ಷಣ ಸಾವಿರಾರು ಜನ ಅರಮನೆಯ ಹೊರಗಡೆ ಸೇರಿ 'ಬೆಂಕಿ ಬೆಂಕಿ, ನೀರು ನೀರು' ಎಂದು ಕೂಗಲಾರಂಭಿಸಿದರು. ಅಷ್ಟರೊಳಗೆ ಅರಮನೆಯ ಅಧಿಕಾರಿಗಳಿಗೆ ವಿಷಯ ತಿಳಿದು ಅವರೂ ಹೊರಬಂದರು.

**ಕಣ್ಣೀರು** : ಅಧಿಕಾರಿಗಳು ಹೊರಗೆ ನಿಂತಿದ್ದವರನ್ನು ಅರಮನೆಯ ಒಳಕ್ಕೆ ಬಿಡಲಿಲ್ಲ. ಎಲ್ಲರೂ ಒಂದೇ ಸಮನಾಗಿ 'ಬುದ್ಧೀ ನಮ್ಮನ್ನು ಒಳಕ್ಕೆ ಬಿಡಲು ಅನುಮತಿ ಕೊಡಿ, ನಾವೆಲ್ಲರೂ ಸೇರಿ ಚಪ್ಪರವನ್ನು ಕಿತ್ತು ಹಾಕಿ ಬೆಂಕಿಯನ್ನು ಆರಿಸುತ್ತೇವೆ. ನಮ್ಮಪ್ಪನ ಮನೆ ಹಾಳಾಗುತ್ತಿದೆಯಲ್ಲಾ' ಎಂದು ಎಷ್ಟೆಷ್ಟೋ ಪ್ರಾರ್ಥಿಸಿಕೊಂಡರು. ಆದರೂ ಯಾರನ್ನೂ ಒಳಗಡೆಗೆ ಬಿಡಲಿಲ್ಲ. ಅಷ್ಟರಲ್ಲಿ ಮಹಾರಾಣಿ ರೀಜೆಂಟ್ ಅವರೂ, ದಿವಾನರೂ, ಕಂಟ್ರೋಲರ್ ಆದಿಯಾಗಿ ಎಲ್ಲರೂ ಆಗಮಿಸಿದರು. ಹೊರಗಡೆ ಇದ್ದವರನ್ನು ಬಿಟ್ಟರೆ ಚಪ್ಪರವು ಅವರ ಮೇಲೆ ಬಿದ್ದು ಬಹಳಷ್ಟು ಪ್ರಾಣಹಾನಿಯಾಗಬಹುದು ಎಂದೂ ಮತ್ತು ಬಹಳ ಬೆಲೆಯುಳ್ಳ ವಸ್ತುಗಳು ಕಳವು ಆಗಬಹುದೆಂಬ ಕಾರಣದಿಂದ ಬಿಡಲಿಲ್ಲ. ಎಲ್ಲರೂ ಕಣ್ಣೀರು ಸುರಿಸುತ್ತ ಬೆಂಕಿ ಆರಿಸಲು ದೊಡ್ಡ ಕೆರೆಯ ನೀರನ್ನು ತಂದು ಹೊರಗಡೆಯಿಂದಲೇ ಎರಚಹತ್ತಿದರು.

*ಅಮೂಲ್ಯ ವಸ್ತುಗಳು* : ತಕ್ಷಣ ನೂತನ ವಧೂವರರನ್ನು ಸಾರೋಟು ಗಾಡಿಯಲ್ಲಿ ಕೂಡಿಸಿ ಇಟ್ಟಿಗೆ ಗೂಡಿನಲ್ಲಿದ್ದ ಬಂಗಲೆಗೆ (ಇಂದಿನ ಮೃಗಾಲಯದ ಮುಖ್ಯ ದ್ವಾರದಲ್ಲಿರುವ ಕಟ್ಟಡ) ಕಳುಹಿಸಿಕೊಟ್ಟರು. ಅವಸರದ ಹೋಬಳಿ, ಜನಾನತೊಟ್ಟಿ, ಅಂಬಾ ವಿಲಾಸ, ಸೀತಾ ವಿಲಾಸ, ಬಿಡದಿ ಮುಂತಾದ ಭಾಗಗಳಲ್ಲಿದ್ದ ರತ್ನಾಭರಣಗಳ ಪೆಟ್ಟಿಗೆಗಳು, ಪಾತ್ರೆ, ರತ್ನಗಂಬಳಿ, ರತ್ನ ಸಿಂಹಾಸನ, ಕನ್ನಡಿ, ಹಾಗೂ ಇನ್ನಿತರ ಅಮೂಲ್ಯ ವಸ್ತುಗಳನ್ನು ಕಂಟ್ರೋಲರ್ ಅವರ ಹುಕುಂ ಪ್ರಕಾರ ಹೊರಕ್ಕೆ ಸಾಗಿಸಿದರು.

*೩೭೦,(೧೭೦), 'ದೀಪ', ೫ನೇ ಅಡ್ಡರಸ್ತೆ, ಲಕ್ಷ್ಮೀಪುರ, ಕೆಂಪೇಗೌಡನಗರ, ಬೆಂಗಳೂರು - ೫೬೦ ೦೧೯.



ಅರಮನೆಯ ಊಳಿಗದವರು, ಇತರ ಕೆಲಸಗಾರರು ಬೆಂಕಿಯನ್ನು ನಂದಿಸಲು ಅರಮನೆ ಒಳಗಡೆ ಇದ್ದ ನೀರನ್ನೆಲ್ಲಾ ಸುರಿದರಾದರೂ ಏನೂ ಪ್ರಯೋಜನವಾಗಲಿಲ್ಲ.

***ಜ್ವಾಲೆಯ ಪ್ರಬಲತೆ :*** ಕಾಲು ಗಂಟೆಯೊಳಗಾಗಿ ಬೆಂಕಿಯು ಚಪ್ಪರವನ್ನೆಲ್ಲಾ ಸುಟ್ಟು ಭಸ್ಮಮಾಡಿ ನಡುವೆ ಇದ್ದ ಕುದುರೆ ತೊಟ್ಟಿಗೂ ಹಬ್ಬಿತು. ಈ ಸ್ಥಳದಲ್ಲಿ ಸುಂದರವಾದ ಮರದ ತೊಟ್ಟಿಲುಗಳು ಇದ್ದವು. ಅವೂ ಸುಟ್ಟು ಹೋದವು. ವಿವಾಹ ಮಂಟಪವೂ ಉರಿದು ಹೋಯಿತು. ಬೆಂಕಿಯ ಜ್ವಾಲೆಯು ಪ್ರತಿಕ್ಷಣ ಪ್ರಬಲವಾಗುತ್ತ ಹೋಯಿತು. ಕೋಟೆಯ ನಾಲ್ಕು ಬಾಗಿಲುಗಳನ್ನು ಮುಚ್ಚಿ ಪಹರ್ ಇರುವಂತೆ ಕುದುರೆ ಸವಾರರಿಗೂ ಹಾಗೂ ಸಿಪಾಯಿಗಳಿಗೆ ಅಪ್ಪಣೆ ಕೊಡಲಾಯಿತು. ಸುಮಾರು ೧೧ ಗಂಟೆಗಳ ಕಾಲದಲ್ಲಿ ಬೆಂಕಿಯ ಜ್ವಾಲೆಯು ರೌದ್ರಾವತಾರ ತಾಳಿ ಅರಮನೆ ಮುಂಭಾಗದ ಸಜ್ಜೆಗೋಪುರ, ಮೂರೂ ಅಂತಸ್ತಿನ ಮಹಡಿ ಇವೆಲ್ಲವನ್ನು ಸುಟ್ಟು ಭಸ್ಮ ಮಾಡಿದರೂ ಇಷ್ಟೆಲ್ಲಾ ಆಗುವಾಗ್ಗೆ ರಾಜಧಾನಿಯಲ್ಲಿ ಬೆಂಕಿಯನ್ನು ಆರಿಸುವಂತಹ ಯಾವುದೇ ಸಾಧನ ಇರಲಿಲ್ಲ. ಮುನಿಸಿಪಾಲಿಟಿಯವರಲ್ಲಿದ್ದ ಬೆಂಕಿ ಆರಿಸುವ ಒಂದು ಯಂತ್ರವೂ ಕೆಟ್ಟು ಹೋಗಿತ್ತು.

ಅರಮನೆಯ ಉತ್ತರ ಭಾಗದ ಉಪ್ಪರಿಗೆಯಲ್ಲಿದ್ದ ಮೊದಲಿನ ಅಂತಸ್ತಿನಲ್ಲಿ 'ದಿನಸಾವರಿ'ವಾದ್ಯಗಳನ್ನು ಇಟ್ಟಿದ್ದ ಕೊಠಡಿಗೆ 'ಗಾಯನ ಶಾಲೆ' ಎಂದು ಹೆಸರಿತ್ತು. ಎರಡನೇ ಅಂತಸ್ತಿನಲ್ಲಿ ಭಾರತ ದೇಶದಲ್ಲೆಲ್ಲಾ ಅಪೂರ್ವವಾದಂತಹ ಸಂಸ್ಕೃತ ಗ್ರಂಥಗಳನ್ನು ಹೊಂದಿದ್ದ 'ಸರಸ್ವತಿ ಭಂಡಾರ' ವಿತ್ತು. ಮೂರನೇ ಅಂತಸ್ತಿನಲ್ಲಿ ಸಕಲ ವಿಧವಾದ ಹಾಗೂ ಸರ್ವೋತ್ತಮವಾದ 'ಆಯುಧ ಶಾಲೆ' ಇತ್ತು. ಈ ಮೂರು ಅಂತಸ್ತುಗಳೂ ಸುಟ್ಟು ಬೂದಿಯಾದವು.

ಚಾಮರಾಜ ಒಡೆಯರ್ ಅವರ ಅಮೃತ ಶಿಲಾ (ಗೋಲಿ ಕಲ್ಲು) ಪ್ರತಿಮೆಯನ್ನು ೪೦ ಸಾವಿರ ರೂಪಾಯಿ ಖರ್ಚು ಮಾಡಿ ಇಂಗ್ಲೆಂಡಿನಲ್ಲಿ ಕೆತ್ತಿಸಿ ತಂದಿರಿಸಲಾಗಿತ್ತು. ಆ ಪ್ರತಿಮೆಯನ್ನು ಮೈಸೂರಿನಲ್ಲಿ ಆಗ್ಗೆ ಚಾಮರಾಜಪೇಟೆ ಎಂದು ಹೆಸರು ಪಡೆದಿದ್ದ ಸ್ಥಳದಲ್ಲಿರುವ ಸೀತಾ ವಿಲಾಸ ಧರ್ಮಶಾಲೆ ಬಳಿಯ ಚೌಕ (ಇಂದಿನ ಚಾಮರಾಜ ಡಬಲ್ ರೋಡಿನಲ್ಲಿರುವ ರಾಮಸ್ವಾಮಿ ವೃತ್ತ)ದಲ್ಲಿ ಪ್ರತಿಷ್ಠಾಪಿಸಬೇಕೆಂಬ ವಿಚಾರವಿತ್ತು. ಅದೂ ಸಹ ಉರಿಯಲ್ಲಿ ಸಿಕ್ಕಿ ಚೂರು ಚೂರಾಯಿತು. ಚಾಮರಾಜ ಒಡೆಯರ್ ಅವರು ಸುಮಾರು ೧೮೭೬ರ ವೇಳೆಗಾಗಲೇ ನೂತನವಾಗಿ ನಿರ್ಮಿಸಿದ್ದ ಅಂಬಾ ವಿಲಾಸ (ದರ್ಬಾರ್ ಹಾಲ್) ಸಹ ಭಸ್ಮವಾಯಿತು.

***ವಿಶೇಷ ವ್ಯವಸ್ಥೆ :*** ಅಗ್ನಿಜ್ವಾಲೆಯು ಪೂರ್ತಿ ಕೋಟೆಗೆಲ್ಲಾ ಎಲ್ಲಿ ಹಬ್ಬುವುದೋ ಎಂದು ಗಾಬರಿಗೊಂಡು ದಿವಾನರು ಮಧ್ಯಾಹ್ನದ ಮೇಲೆ ಬೆಂಗಳೂರು ದಂಡಿನಲ್ಲಿದ್ದ 'ಸ್ಯಾಪರ್ಸ್

ಪಯೋನಿಯರ್ಸ್' ಸೈನಿಕರ ತಂಡಕ್ಕೆ (ಅಲಸೂರು ಕೆರೆಯ ಬಳಿ ಈಗಲೂ ಇರುವ ಎಂ.ಇ.ಜಿ. ತಂಡ) ತಂತಿ ವರ್ತಮಾನವನ್ನು ಕೊಟ್ಟರು. ಸಂಜೆ ಏಳು ಗಂಟೆಗೆ ೩೫ ಜನ ಸಿಪಾಯಿಗಳು ಅಗ್ನಿಶಾಮಕ ಯಂತ್ರಗಳೊಡನೆ ವಿಶೇಷ ರೈಲಿನಲ್ಲಿ ಬೆಂಗಳೂರನ್ನು ರಾತ್ರಿ ೭ ಗಂಟೆಗೆ ಬಿಟ್ಟು ಮಧ್ಯರಾತ್ರಿ ೧೨ ಗಂಟೆಗೆ ಮೈಸೂರನ್ನು ತಲುಪಿದರು. ಆಗ್ಗೆ ಅರಮನೆಯ ಮೇಲಿನ ಅಂತಸ್ತು ಚಿನ್ನದ ಪಂಚ ಕಳಸಗಳ ಸಮೇತ ಕುಸಿದು ಬಿತ್ತು. ಈ ದೃಶ್ಯವನ್ನು ಕಣ್ಣಾರೆ ಕಂಡ ಸುಮಾರು ಎರಡು ಸಾವಿರ ಜನ ಗೊಳೋ ಎಂದು ಒಂದೇ ಸಮನೆ ಅತ್ತರು. ಅರಮನೆಯ ನೌಕರರ ನೆರವಿನೊಂದಿಗೆ ಸೈನಿಕರ ತಂಡವು ಅಗ್ನಿಶಾಮಕ ಯಂತ್ರಗಳ ಮೂಲಕ ನೀರನ್ನು ಹಾಯಿಸಿ ಬೆಂಕಿಯನ್ನು ಹತೋಟಿಗೆ ತಂದರು. ಅರಮನೆಯ ಹಿಂಭಾಗದಲ್ಲಿದ್ದ ಕರೀಕಲ್ಲು ತೊಟ್ಟಿ, ದಂತದ ತೊಟ್ಟಿ, ಕನ್ನಡಿ ತೊಟ್ಟಿಗಳನ್ನು, ಬೆಂಕಿಯ ಜ್ವಾಲೆಗ ಸಿಗದಂತೆ ಸಿಪಾಯಿಗಳು ಕಾಪಾಡಿದರು.

ಮಾರನೆಯ ದಿವಸ ಬೆಳಿಗ್ಗೆ ಹಲವಾರು ಜನ ಅರಮನೆಯ ಸೇವಕರು ಬಿಕ್ಕಿ ಬಿಕ್ಕಿ ಅಳುತ್ತಿದ್ದರು. ಆ ಸಮಯಕ್ಕೆ ಇನ್ನು ೧೪ ವಯಸ್ಸುಳ್ಳ ಬಾಲಕರಾಗಿದ್ದ ನಾಲ್ವಡಿಕೃಷ್ಣರಾಜಒಡೆಯರ್ ಅವರು ಆಗಮಿಸಿ ಅಳುತ್ತಿದ್ದವರೆಲ್ಲರನ್ನೂ 'ಅಳಬೇಡಿ ಸುಮ್ಮನಿರಿ' ಎಂದು ಮುಂತಾಗಿ ಸಮಾಧಾನ ಪಡಿಸಿದರು.

ಸ್ಯಾಪರ್ಸ್ ಪಯೋನಿಯರ್ಸ್‌ನ ೩೫ ಜನ ಸಿಪಾಯಿಗಳು ಅಗ್ನಿಯನ್ನು ಆರಿಸುವುದರಲ್ಲಿ ಐದು ದಿವಸ ನಿರತರಾಗಿದ್ದು ನಂತರ ಎಂಟು ಜನ ಮಾತ್ರ ಅಲ್ಲಿಯೇ ನಿಂತು ಉಳಿದ ೨೭ ಜನ ಬೆಂಗಳೂರಿಗೆ ವಾಪಸ್ಸಾದರು.

ಬೆಂಕಿ ಆರಿಸುತ್ತಿದ್ದವಲ್ಲರಿಗೂ ಮಹಾರಾಣಿಯವರು ಅರಮನೆಯ ಬಿಡದಿಯಲ್ಲಿ ಊಟದ ವ್ಯವಸ್ಥೆ ಮಾಡಿದ್ದರು. ಇವರೆಲ್ಲರೂ ಪ್ರತಿದಿನ ಕೇವಲ ಮೂರು ಗಂಟೆಗಳು ಮಾತ್ರ ನಿದ್ರೆ ಮಾಡುತ್ತಿದ್ದರಂತೆ.

***ಮೃತಪಟ್ಟವರು :*** ಮೊದಲ ಅಂತಸ್ತಿನಲ್ಲಿ ಸುಟ್ಟು ಮುದ್ದೆ 'ಯಾಗಿದ್ದ ನಾಲ್ಕು ದೇಹಗಳು ದೊರೆತವು. ಗೋಡೆಗಳು ಬಿದ್ದು ಗಾಯಗೊಂಡಿದ್ದ ಆರು ಜನರನ್ನು ಆಸ್ಪತ್ರೆಗೆ ಸಾಗಿಸಲಾಯಿತು. ಆರು ಜನರ ಪೈಕಿ ಇಬ್ಬರು ಮರಣ ಹೊಂದಿದರು. ಒಟ್ಟು ಆರು ಮಂದಿ ಈ ಅಗ್ನಿ ದುರಂತಕ್ಕೆ ಬಲಿಯಾದರು ಎಂದು ಮಾರ್ಚ್ ೧೮೯೭ರ 'ಕರ್ನಾಟಕಾ ಪ್ರಕಾಶಿಕಾ'ವಾರ ಪತ್ರಿಕೆಯು ವರದಿ ಮಾಡಿದೆ.

***ವಿಚಾರಣೆ :*** ಈ ದುರಂತದ ಬಗ್ಗೆ ವಿಚಾರಣೆ ನಡೆಸಲು ಮಹಾರಾಣಿ ರೀಜೆಂಟ್ ಅವರು ಒಂದು ಕಮಿಟಿಯನ್ನು ರಚಿಸಿದರು. ಆ ಕಮಿಟಿಗೆ ಕೌನ್ಸಿಲ್ ಕೃಷ್ಣಮೂರ್ತಿಯವರು ಅಧ್ಯಕ್ಷರಾಗಿದ್ದು, ರಾಮಾನುಜ ಅಯ್ಯಂಗಾರ್ ಅವರು ಕಾರ್ಯ ದರ್ಶಿಯಾಗಿದ್ದರು. ಫ್ರೇಜರ್ ಸಾಹೇಬರು, ಕರ್ನಲ್ ಬೋವನ್ ಸಾಹೇಬರು ಹಾಗೂ ದಳವಾಯಿ ದೇವರಾಜ್ ಅರಸ್‌ರವರು ಈ ಕಮಿಟಿಯ ಸದಸ್ಯರಾಗಿದ್ದರು. ದುರಂತ ನಡೆದ ಒಂದು ವಾರದ ನಂತರ ಒಂದೇ ಸಮನೆ ಸುಮಾರು ೧೫ ದಿವಸಗಳ ಕಾಲ ವಿಚಾರಣೆ ನಡೆಯತೊಡಗಿತು. ಅಂತಿಮ ತೀರ್ಪನ್ನು ರಹಸ್ಯ ವಾಗಿಡಲಾಯಿತು.

೧೮೯೭ರಲ್ಲಿಯೇ ಬೆಂಕಿ ತಗುಲಿದರೂ ಹತ್ತಿಕೊಳ್ಳದ ರೀತಿಯ ಹೊಸ ಮಾದರಿಯಲ್ಲಿ ನಿರ್ಮಿಸಲು ಪ್ರಾರಂಭಿಸಿದ ಅರಮನೆ ೧೯೧೨ ರಲ್ಲಿ ಮುಕ್ತಾಯಗೊಂಡಿತು. ಈ ಅರಮನೆ ಹಿಂಭಾಗದಲ್ಲಿರುವ ವಸ್ತು ಸಂಗ್ರಹಾಲಯವೇ ಈಗ ಉಳಿದಿರುವ ಹಳೇ ಅರಮನೆ.



(ಈ ಲೇಖನ ಸಿದ್ಧಪಡಿಸುವಲ್ಲಿ ಸಹಕರಿಸಿದ ಎಸ್. ರಾಜೇಂದ್ರಪ್ಪ ಹಾಗು ಛಾಯಾಚಿತ್ರವನ್ನು ನೀಡಿದ ಡಾ।। ಅ. ಲ. ನರಸಿಂಹನ್ ಅವರಿಗೆ ಕೃತಜ್ಞತೆಗಳು.)

ಎಸ್. ಎಲ್. ಶ್ರೀನಿವಾಸಮೂರ್ತಿ*

# ಮೇಜರ್ ಡಿಕ್ಸನ್ ಮತ್ತು ಕರ್ನಾಟಕದಲ್ಲಿ ಶಾಸನವ್ಯಾಸಂಗ

ಕರ್ನಾಟಕದಲ್ಲಿ ಶಾಸನಾಧ್ಯಯನವು ಬೆಳೆದು ಬಂದ ಬಗೆಯನ್ನು ಗುರುತಿಸುತ್ತಾ ಡಾ। ಎಂ. ಎಂ. ಕಲಬುರ್ಗಿಯವರು ಮೂರು ಘಟ್ಟಗಳನ್ನು ಗುರುತಿಸಿದ್ದಾರೆ :

೧. ಕರ್ನಲ್ ಮೆಕೆಂಝಿ ಯುಗ (೧೭೯೧-೧೮೩೭)
೨. ವಾಲ್ಟೇರ್ ಇಲಿಯಟ್ ಯುಗ (೧೮೩೭-೧೮೭೦)
೩. ರೈಸ್, ಫ್ಲೀಟ್ ಯುಗ (೧೮೭೦ರ ತರುವಾಯ)*[೧]

ಮೆಕೆಂಜಿ ಹಾಗೂ ವಾಲ್ಟೇರ್ ಇಲಿಯಟ್ಟರ ಕಾಲದಲ್ಲಿ ಶಾಸನ ಸಂಗ್ರಹಣೆಯ ಕಾರ್ಯಕ್ಕೆ ಒತ್ತು ದೊರೆಯಿತಾದರೆ ರೈಸ್ ಮತ್ತು ಫ್ಲೀಟರ ಕಾಲದಲ್ಲಿ ಶಾಸನಗಳಲ್ಲಿನ ಸಾಂಸ್ಕೃತಿಕ, ಚಾರಿತ್ರಿಕ ಹಾಗೂ ಸಾಮಾಜಿಕ ಮೌಲ್ಯಗಳ ವಿಶ್ಲೇಷಣಾ ಕಾರ್ಯ ಜರುಗಿತು.

ಪ್ರಖ್ಯಾತರಾದ ಇವರುಗಳಷ್ಟೇ ಅಲ್ಲದೆ ಇನ್ನೂ ಹಲವಾರು ಅಜ್ಞಾತ ವ್ಯಕ್ತಿಗಳೂ ಶಾಸನವ್ಯಾಸಂಗಕ್ಕೆ ತಮ್ಮ ಕೊಡುಗೆಗಳನ್ನು ಕೊಟ್ಟಿದ್ದಾರಾದರೂ ಅವರ ಬಗ್ಗೆ ನಮಗೆ ಹೆಚ್ಚು ತಿಳಿದು ಬಂದಿಲ್ಲ. ಅಂತಹವರಲ್ಲೊಬ್ಬ ಮೇಜರ್ ಹೆನ್ರಿ ಡಿಕ್ಸನ್. ಈತ ಯಾರು? ಇವನ ಕೊಡುಗೆ ಏನು? ಅವನ ಕಾರ್ಯವಿಧಾನ ಎಂಥದು? ಇತ್ಯಾದಿಗಳ ಬಗೆಗೆ ಕರ್ನಾಟಕ ರಾಜ್ಯ ಪತ್ರಾಗಾರದಲ್ಲಿರುವ ಕೆಲವು ಮೂಲದಾಖಲೆಗಳು ಹಾಗೂ ತತ್ಕಾಲೀನ ಕೃತಿಗಳ*[೨] ಆಧಾರದ ಮೇಲೆ ಸ್ವಲ್ಪವಾದರೂ ಬೆಳಕನ್ನು ಚೆಲ್ಲುವುದು ಪ್ರಸ್ತುತ ಸಂಪ್ರಬಂಧದ ಉದ್ದೇಶ.

ಮೇಜರ್ ಹೆನ್ರಿ ಡಿಕ್ಸನ್ ೧೮೬೦ರ ಸುಮಾರಿಗೆ ಮದ್ರಾಸ್ ನೇಟಿವ್ ಇನ್‌ಫೆಂಟ್ರಿಯ ೨೨ನೇ ದಳದಲ್ಲಿದ್ದ ಒಬ್ಬ ಅಧಿಕಾರಿ. ಪ್ರವೃತ್ತಿಯಿಂದ ಒಳ್ಳೆಯ ಛಾಯಾಗ್ರಾಹಕ. ಪುರಾತತ್ವ ಶೋಧನೆಯಲ್ಲಿ ಆಸಕ್ತಿ ಇದ್ದಾತ. 'Orissa, its temples and rockcut caves' ಕೃತಿಯನ್ನು ರಚಿಸಿದವ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಈತ ತೆಗೆದ ಹಲವಾರು ಶಾಸನಗಳ ಛಾಯಾಚಿತ್ರಗಳೇ ಬಿ. ಎಲ್. ರೈಸರನ್ನು ಶಾಸನಾಧ್ಯಯನದ ಕಡೆಗೆ ಆಕರ್ಷಿಸಿದವು. ಈ ಕುರಿತು ರೈಸರು '"It was 1865 When L. Bowring C.S.I. was Chief Commissioner of Mysore and Coorg, that the services of Major Dixon,an officer skilled in the new art of Photography, were engaged to obtain copies by that porcess of inscripions in various places... The Photographs however, were eventually ofter other efforts to deal with them, placed in my hands for decipherment of the ancient characters and for translation' ಎಂದಿದ್ದಾರೆ.

ಆದರೆ ಡಿಕ್ಸನ್ ಈ ಛಾಯಾಚಿತ್ರಗಳನ್ನು ತೆಗೆಯಬೇಕಾದ ಸಂದರ್ಭವೇನಿತ್ತು? ಎಂಬ ಪ್ರಶ್ನೆಗೆ ಉತ್ತರ ಹುಡುಕಬೇಕಾದ್ದು ಅವಶ್ಯಕ. ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಹೇಳುವುದಾದರೆ ಮೈಸೂರು ಸಂಸ್ಥಾನದಲ್ಲಿರುವ ಶಾಸನಗಳ ಛಾಯಾಚಿತ್ರಗಳನ್ನು ತೆಗೆಸಬೇಕೆಂಬ ಯೋಚನೆ ೧೮೬೪ರ ಸುಮಾರಿಗೆ ಮುಮ್ಮಡಿ ಕೃಷ್ಣರಾಜ ಒಡೆಯರ್‌ರಿಗೆ ಬಂದಿತ್ತೆಂದು ತೋರುತ್ತದೆ. ಇದಕ್ಕೆ ಕಾರಣಗಳೇನೋ ಗೊತ್ತಿಲ್ಲ. ಬಹುಶಃ ಕಂದಾಯದ ವ್ಯವಸ್ಥೆಗಾಗಿ ಇರಬಹುದು. ಮೇಜರ್ ಡಿಕ್ಸನ್‌ನನ್ನು ಈ ಕಾರ್ಯಕ್ಕೆ ನಿಯೋಜಿಸಲು ಕೋರಿ ಅವರು ಒಂದು ಪತ್ರವನ್ನು*[೩] ೧೮೬೪ರ ಸೆಪ್ಟೆಂಬರ್ ೨೭ರಂದು ಗೌರ್ನರ್ ಜನರಲ್‌ರಿಗೆ ಬರೆದ ಮಾಹಿತಿ ಇದೆ. ಇದಕ್ಕೆ ಉತ್ತರವಾಗಿ ನವೆಂಬರ್ ೨೩ರಂದು ಗೌರ್ನರ್ ಜನರಲ್ಲರ ಕಾರ್ಯದರ್ಶಿಯಿಂದ ಪತ್ರದಲ್ಲಿ*[೪] ಮಹಾರಾಜರ ಈ ಪ್ರಸ್ತಾಪವನ್ನು ಒಪ್ಪಿ ಡಿಕ್ಸನ್‌ನನ್ನು ತಿಂಗಳಿಗೆ ೨೦೦ರೂ ಸಂಬಳದಂತೆ ಆರು ತಿಂಗಳ ಕಾಲ ಎರವಲು ಕೊಡಲಾಗಿದೆ ಎಂಬ ಅಂಶ ಪ್ರಸ್ತಾಪಿತವಾಗಿದೆ.

ಅದರಂತೆ ಡಿಕ್ಸನ್ ೧೮೬೫ರ ಜನವರಿ ೧ರಂದು ಕೆಲಸಕ್ಕೆ ಹಾಜರಾದ. ಆಗ ಅವನಿಗೆ ಸರಕಾರದಿಂದ ಸಿಕ್ಕ ನೆರವೆಂದರೆ ಇಬ್ಬರು ಜವಾನರನ್ನು ಕೊಟ್ಟಿದ್ದು ಮಾತ್ರ. ಹಾಗಾಗಿ ಆತ ಒಂದು ಟೆಂಟ್ ಹಾಗೂ ೫ರೂ ಹೆಚ್ಚುವರಿ ಭತ್ಯ ನೀಡಬೇಕೆಂದು ಕೋರಬೇಕಾಯಿತು. ಅಲ್ಲದೆ ಜನವರಿ ೧೫ರಂದು ಬರೆದ ಪತ್ರದಲ್ಲಿ 'as I expended nearly 700 Rs. in the purchase of chemicals apparatus and bullock coach, please grant me as advance of one month's salary' ಎಂದಿದ್ದಾನೆ.

ಅಂತೂ "You should proceed to Harihar in the first instance without loss of time and after photographing the inscriptions there, proceed to Shikaripur"........ ಎಂಬ ಬೌರಿಂಗನ ಆದೇಶದ*[೫] ಅನುಸಾರವಾಗಿ ಅದೇ ತಿಂಗಳ ೨೮ರಂದು ಹರಿಹರಕ್ಕೆ ಆತ ಹೋದ. ಅಲ್ಲಿಂದ ಮುಂದೆ ಚಿತ್ರದುರ್ಗ, ಬಳ್ಳಿಗಾವೆ, ದಾವಣಗೆರೆ ತಳದಗುಂಡಿ, ಸೊರಬ, ಟೇಕಲ್ ಹಾಗೂ ಬೇಗೂರುಗಳ ೧೧೩ ಶಿಲಾಶಾಸನಗಳನ್ನು ಹಾಗೂ ೧೯ ತಾಮ್ರಪಟಗಳನ್ನು

*ಉಪನ್ಯಾಸಕರು, ಕನ್ನಡ ವಿಭಾಗ, ವಿಜಯ ಪದವಿಪೂರ್ವ ಕಾಲೇಜು, ಆರ್.ವಿ. ರಸ್ತೆ, ಬೆಂಗಳೂರು - ೪.

ಛಾಯಾಗ್ರಹಿಸಿದ್ದಾನೆ. ಈ ಬಗ್ಗೆ ನೀಡಿರುವ ವರದಿಯಲ್ಲಿ (Statement showing the dates of stone Shashanas from No 1-113) ಶಾಸನದ ಕ್ರಮಸಂಖ್ಯೆ, ಶಾಲೀವಾಹನ ಶಕವರ್ಷ, ಇಂಗ್ಲೀಷ್‌ವರ್ಷ, ದೊರೆತ ತಾಲೂಕು, ಭಾಷೆ ಹಾಗೂ ಹೆಚ್ಚಿನ ವಿವರಗಳನ್ನು ಷರಾದ ರೂಪದಲ್ಲಿ ಪಟ್ಟಿಗಳಾಗಿ ನೀಡಲಾಗಿದೆ.

ಇಲ್ಲಿ ನಮ್ಮ ಗಮನ ಸೆಳೆಯುವ ಅಂಶವೆಂದರೆ ಭಾಷೆಯ ಹಾಗೂ ಷರಾದ ಭಾಗ. ಇಲ್ಲಿ ಆತ ಶಾಸನಗಳನ್ನು old Canarese ಹಾಗೂ new Canarese ಎಂದು ವಿಭಾಗಿಸಿದ್ದಾನೆ. ಮಾತ್ರವಲ್ಲ, ಹರಿಹರದ ಒಂದು ತಾಮ್ರ ಶಾಸನ ಹಾಗೂ ಬೇಗೂರಿನ ಪ್ರಸಿದ್ಧವಾದ ಶಾಸನದ ಭಾಷೆ Rawana Canarese ಎಂದಿದ್ದಾನೆ! ಆದರೆ ಇದರ ಅರ್ಥವೇನೆಂಬುದು ಸ್ಪಷ್ಟವಾಗಿಲ್ಲ. ಇದರೊಂದಿಗೆ ಮತ್ತೊಂದು ಮುಖ್ಯ ಅಂಶವೆಂದರೆ ೧೫ ಹಳೆಗನ್ನಡ ಶಾಸನಗಳಿಗೆ Translated to English ಎಂಬ ಟಿಪ್ಪಣಿ ಇದೆ. ಆದ್ದರಿಂದ ಬಹುಶಃ ಅವನಿಗೆ ಶಾಸನಗಳನ್ನು ಓದುವಲ್ಲಿ ಸ್ವಲ್ಪವಾದರೂ ಪರಿಶ್ರಮವಿತ್ತೆಂದು ಊಹಿಸಬಹುದು.

ಇಷ್ಟೆಲ್ಲಾ ಶ್ರಮವಹಿಸಿ ಛಾಯಾಚಿತ್ರಗಳನ್ನು ಡಿಕ್ಸನ್ ತೆಗೆದುದಾದರೂ ಬೌರಿಂಗನಿಗೆ ಅದರಿಂದ ಪೂರ್ಣವಾಗಿ ಸಂತೋಷವೇನೂ ಆಗಿರಲಿಲ್ಲ ಎಂಬುದು ಆತ ಬರೆದಿರುನ ಅನೇಕ ಟಿಪ್ಪಣಿಗಳಿಂದ ವ್ಯಕ್ತವಾಗುತ್ತದೆ. ಬಹುಶಃ ಇದಕ್ಕೆ ಕಾರಣ ವೆಚ್ಚ ನಿರೀಕ್ಷಿಸಿದ್ದಕ್ಕಿಂತ ಹೆಚ್ಚಾಯಿತು ಎಂಬುದಿರಬಹುದು. ಇದಕ್ಕೆ ಉತ್ತರವಾಗಿ ಬರೆದ ಪತ್ರದಲ್ಲಿ*[೬] ಆತ '೩೦ ನೆಗಟಿವ್‌ಗಳನ್ನು ಸಿದ್ಧಪಡಿಸಲು ಮೊದಲು ೧೧೩ರೂ ಖರ್ಚಾಗುತ್ತಿತ್ತು. ಆದರೆ ಈಗ ೧೫೦ರೂ ಖರ್ಚಾಗುತ್ತಿದೆ.' 'My expenditure gallops' ಎಂದಿದ್ದಾನೆ. ಇಷ್ಟೆಲ್ಲಾ ಖರ್ಚುಮಾಡಿ ತೆಗೆದ ಶಾಸನಗಳ ಫೋಟೋ ತೆಗೆಯುವುದರಿಂದ ಏನುಲಾಭ ಎಂಬ ಬೌರಿಂಗನ ಪ್ರಶ್ನೆಗೆ ಆತ " of course I could not say what value the inscriptions may be, but I have heard of a case of land being sold on the authority of a false copy of a shashana the original on being photographed may show the fraud and this may be after the use' ಎಂದು ಉತ್ತರಿಸಿದ್ದಾನೆ*[೭].

ಛಾಯಾಗ್ರಹಣ ತಂತ್ರಜ್ಞಾನ ಇನ್ನೂ ಅಂಬೆಗಾಲಿಡುತ್ತಿದ್ದ ಆ ಕಾಲದಲ್ಲಿ ಡಿಕ್ಸನ್ ತೆಗೆದ ಎಲ್ಲ ಶಾಸನಗಳ ಪ್ರತಿಗಳೂ ಚೆನ್ನಾಗಿ ಬಂದಿರದಿದ್ದರೆ ಅದು ಸ್ವಾಭಾವಿಕ. ಛಾಯಾಚಿತ್ರಗಳ ಗುಣಮಟ್ಟವನ್ನು ಕುರಿತು ಬೌರಿಂಗ್ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದಾಗ ಡಿಕ್ಸನ್.... "regret to hear the Commissioner is dissatisfied with the result of my labours, undertaken Chiefly during most unreasonable weather for Photography. But I am willing to let efforts to stand on their own merits, feeling certain that as Photographic work, it will bear Comparission both in quality and quantity with that of any Photographer in India." ಎಂದು ಉತ್ತರಿಸಿದ್ದಾನೆ*[೮].

ಅಂತೂ ೧೮೬೫ರ ಜೂನ್ ವೇಳೆಗೆ ಡಿಕ್ಸನ್ನನ ಕೆಲಸ ಮುಗಿಯಿತು. ಆದರೆ ಕಥೆ ಇಲ್ಲಿಗೇ ಮುಗಿಯಲಿಲ್ಲ. ೧೮೬೬-೬೭ರ ವೇಳೆಗೆ ಭಾರತದಾದ್ಯಂತ ಇರುವ ಪ್ರಾಚೀನ ಸ್ಮಾರಕಗಳನ್ನು ಸಂರಕ್ಷಿಸುವ ಯೋಜನೆಯೊಂದನ್ನು ಬ್ರಿಟಿಷ್ ಸರ್ಕಾರ ಸಿದ್ಧಪಡಿಸಿತು. ಈ ಬಗ್ಗೆ ಬ್ರಿಟಿಷ್ ಸರ್ಕಾರದ ಗೃಹಖಾತೆಯ ಕಾರ್ಯದರ್ಶಿಯು ಮೈಸೂರಿನ ಕಮೀಷನರ್‌ರಿಗೆ, ೨೯.೮.೧೮೬೭ರಂದು ಪತ್ರವೊಂದನ್ನು ಬರೆದು ಸಂಸ್ಥಾನದಲ್ಲಿ ಇರಬಹುದಾದ ಪ್ರಾಚೀನ ಸ್ಮಾರಕಗಳ ಬಗ್ಗೆ ಹಾಗೂ ಕಾಲದಿಂದ ಕಾಲಕ್ಕೆ ಅದನ್ನು ಸಂರಕ್ಷಿಸಿಲು ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ವರದಿಯೊಂದನ್ನು ಸಲ್ಲಿಸಬೇಕೆಂದು ಸೂಚಿಸಿದ್ದಾರೆ. ಇಷ್ಟೇ ಅಲ್ಲದೆ ಆ ಪ್ರಾಚೀನ ಸ್ಮಾರಕಗಳ ಛಾಯಾಚಿತ್ರಗಳನ್ನು ತೆಗೆಸುವ ವ್ಯವಸ್ಥೆ ಮಾಡಬೇಕೆಂದೂ ಈ ಕಾರ್ಯಕ್ಕೆ ಹವ್ಯಾಸಿ ಛಾಯಾಗ್ರಾಹಕರನ್ನು ಮಾತ್ರ ಬಳಸಿಕೊಂಡು ಅವರಿಗೆ ಅಲ್ಪ ನೆರವನ್ನು ಕೊಟ್ಟರೆ ಸಾಕು ಎಂಬ ಸೂಚನೆಯೂ ಇದೆ.

ಈ ಕೆಲಸವನ್ನು ಮಾಡಲು ಡಿಕ್ಸನ್ ಮುಂದೆ ಬಂದ. ಆ ವೇಳೆಗೆ ಆತ ಮೇಜರ್‌ನ ಹುದ್ದೆಯಿಂದ ಲೆಫ್ಟಿನೆಂಟ್ ಕರ್ನಲ್ ದರ್ಜೆಗೇರಿದ್ದ. ದಿನಕ್ಕೆ ೭ರೂ ಹೆಚ್ಚುವರಿ ಭತ್ಯ, ಇರಲು ಒಂದು ಟೆಂಟನ್ನು ಕೊಟ್ಟರೆ ಸಾಕು, ತಾನು ಈ ಕೆಲಸ ಮಾಡಲು ಸಿದ್ಧ ಎಂದು ಆತ ೧೮೬೮ರ ಜನವರಿ ೧೮ರಂದು ಬರೆದ ಪತ್ರದಲ್ಲಿ ತಿಳಿಸಿದ್ದಾನೆ. ಡಿಕ್ಸನ್ನನ ಈ ಪ್ರಸ್ತಾವ ಒಪ್ಪಿಗೆಯಾಯಿತು. ಶ್ರವಣ ಬೆಳಗೊಳ, ಹಳೇಬೀಡು ಮುಂತಾದ ಪ್ರಸಿದ್ಧ ಸ್ಥಳಗಳಿಗಲ್ಲದೆ ಅವನು ಕೋಲಾರ, ಮುಳಬಾಗಿಲುಗಳಂತಹ ಸಾಮಾನ್ಯ ಪ್ರದೇಶಗಳಿಗೂ ಹೋಗಿ ಚಿತ್ರಗಳನ್ನು ತೆಗೆದ.

ದೇವಾಲಯ, ಸ್ಮಾರಕಗಳ ಛಾಯಾಗ್ರಹಣಕ್ಕೆಂದು ಹೋದಾಗಲೂ ಶಾಸನಗಳ ಬಗೆಗೆ ಅವನ ಮೋಹ ಕಡಿಮೆ ಯಾಗಲಿಲ್ಲ! ಇತರ ಚಿತ್ರಗಳ ಜೊತೆಗೆ ಶಾಸನಗಳ ಚಿತ್ರಗಳನ್ನು ಆತ ಬೌರಿಂಗನಿಗೆ ಕಳುಹಿಸಿದಾಗ ಬೌರಿಂಗ್ "The Photos seems to be very good but I hope he will not spend too much time over shasanas and only take them if they come in his way when he is Photographing architectural objects of interest" ಎಂದು ಷರಾ ಬರೆದಿದ್ದಾನೆ*[೯].

ಆದರೂ ಪುರಾತತ್ವ ಶೋಧನೆಯ ಬಗೆಗಿನ ಡಿಕ್ಸನ್ನನ ಆಸಕ್ತಿ ಕುಂದಲಿಲ್ಲ. ಬದಲಿಗೆ ಅದೆಷ್ಟು ಉತ್ಕಟವಾಯಿತೆಂದರೆ ೨೬.೧೧.೧೮೬೮ರಂದು ಬೌರಿಂಗನ ಕಾರ್ಯದರ್ಶಿಗೆ ಪತ್ರ ವೊಂದನ್ನು ಬರೆದು ಅದರಲ್ಲಿ "If Bowring agrees to an archaeological survey, the attendence of a D.P.W. subordinate and 3 or 4 labourers would be all I should want" ಎಂದಿದ್ದಾನೆ. ಅಷ್ಟೇ ಅಲ್ಲದೆ, ಮಿಲಿಟರಿಯಲ್ಲಿ ರಜೆ

ಸಿಗುವುದು ಸಾಧ್ಯವಿಲ್ಲವಾದರೆ ತನ್ನ ಸದ್ಯದ ಸಂಬಳವಾದ ೧೨೫೦ರೂಗಳನ್ನು ಕೊಡುವುದಾದರೆ ಅಲ್ಲಿ ಸಂಬಳರಹಿತರಜೆ ಪಡೆಯಲು ಸಿದ್ಧ ಎಂದು ಬರೆದಿದ್ದಾನೆ.

ಆದರೆ ದುರದೃಷ್ಟವಶದಿಂದ ಡಿಕ್ಸನ್ನನ ಈ ಬೇಡಿಕೆಗೆ ಅಂಗೀಕಾರ ದೊರೆಯಲಿಲ್ಲ. "The Commissioner does not think that an archaeological survey is required in this province" ಎಂಬ ಉತ್ತರ ಆತನಿಗೆ ಕಮೀಷನರ್‌ರ ಕಛೇರಿಯಿಂದ ಬಂದಿತು*[೧೦]. ಅಕಸ್ಮಾತ್ ಡಿಕ್ಸನ್‌ನ ಈ ಪ್ರಸ್ತಾವವೇನಾದರೂ ಒಪ್ಪಿಗೆಯಾಗಿದ್ದಲ್ಲಿ ರೈಸರಿಗೆ 'ಎಪಿಗ್ರಾಫಿಯಾ ಕರ್ನಾಟಿಕಾ' ಸಂಪುಟಗಳ ಸಂಪಾದನೆಗೆ ಅವಕಾಶ ದೊರಕುತ್ತಿತ್ತೋ ಇಲ್ಲವೋ ಹೇಳುವಂತಿಲ್ಲ. ೧೮೬೮ರ ವೇಳೆಗೆ 'Srirangapatnam Illustrated' ಎಂಬುದಾಗಿ ಛಾಯಾಚಿತ್ರಗಳ ಸರಣಿಯ ಕೃತಿಯೊಂದನ್ನು ರಚಿಸಿರುವಂತೆ ಆತ ನೀಡಿರುವ ಪ್ರಕಟಣೆಯಿಂದ ತಿಳಿದು ಬರುತ್ತದೆ.

ಡಿಕ್ಸನ್, ಕೈಗೊಂಡ ಈ ಕಾರ್ಯಗಳಿಂದ ಉಂಟಾದ ಪ್ರಭಾವಗಳನ್ನು ಕುರಿತು ಗಮನಿಸಬೇಕಾದ್ದು ನಮ್ಮ ಮುಂದಿನ ಕಾರ್ಯ. ಅದರಲ್ಲಿ ಮೊದಲನೆಯದಾಗಿ ಆಡಳಿತಗಾರರಲ್ಲಿ ಪ್ರಾಚೀನ ಸ್ಮಾರಕಗಳ ಬಗ್ಗೆ ಆಸಕ್ತಿ ಹುಟ್ಟಿದ್ದನ್ನು ಹೆಸರಿಸಬಹುದು. ಉದಾಹರಣೆಗೆ ತುಮಕೂರು ಜಿಲ್ಲೆಯ ನಾಗಾಲಾಪುರದ ದೇವಾಲಯದ ಛಾಯಾಚಿತ್ರವನ್ನು ಡಿಕ್ಸನ್ ತೆಗೆಯದೆ ಬಿಟ್ಟಾಗ ಆಗಿನ ಜಿಲ್ಲಾಧಿಕಾರಿ ಆ ದೇವಾಲಯದ ಛಾಯಾಗ್ರಹಣ ಯೋಗ್ಯವಾದದ್ದೆಂದು ಡಿಕ್ಸನ್‌ರಿಂದಲ್ಲದಿದ್ದರೆ ಬುಚರ್‌ನಿಂದಲಾದರೂ ಫೋಟೋ ತೆಗೆಸಬೇಕೆಂದು ನಂದೀದುರ್ಗ ಡಿವಿಷನ್ನನ ಸೂಪರಿಂಟೆಂಡೆಂಟರಿಗೆ ಪತ್ರ ಬರೆದಿದ್ದಾರೆ*[೧೧]; ದುರವಸ್ಥೆಯಲ್ಲಿದ್ದ ಕೋಲಾರದ ಕೋಲಾರಮ್ಮನ ದೇವಾಲಯವನ್ನು ದುರಸ್ತಿ ಮಾಡಲೆಂದು ಅಲ್ಲಿನ ಜಿಲ್ಲಾಧಿಕಾರಿ ಬಿ. ಕೃಷ್ಣ ಅಯ್ಯಂಗಾರ್ ಅವರು ೪೦೦ರೂಗಳ ಧನ ಸಹಾಯ ಕೋರಿದ್ದಾರೆ*[೧೨].... ಇತ್ಯಾದಿ.

ಡಿಕ್ಸನ್‌ನಿಂದ ಪ್ರೇರಿತರಾದ ಬುಚರ್, ಲಯ್ನ್ ಮುಂತಾದವರು ಕರ್ನಾಟಕದ ಇತರ ಭಾಗಗಳಲ್ಲಿ ಛಾಯಾಗ್ರಹಣಕ್ಕೆ ತೊಡಗಿದ್ದು ಎರಡನೆಯ ಅಂಶ. ಅಂತಿಮವಾಗಿ, ಆದರೆ ಪ್ರಮುಖವಾಗಿ ಡಿಕ್ಸನ್ ತೆಗೆದ ಶಾಸನಗಳ ಛಾಯಾಚಿತ್ರಗಳಿಂದಾಗಿ ರೈಸರು ಶಾಸನವ್ಯಾಸಂಗದಲ್ಲಿ ತೊಡಗುವಂತಾಯಿತು. ಇದರಿಂದ ಕರ್ನಾಟಕದ ಶಾಸನಾಧ್ಯಯನಯಕ್ಕೆ ಆದ ಉಪಕಾರ ಎಷ್ಟೆಂಬುದು ಎಲ್ಲರಿಗೂ ತಿಳಿದಿದ್ದೇ. ಈ ನಿಟ್ಟಿನಲ್ಲಿ ನೋಡಿದರೆ ಡಿಕ್ಸನ್ನನ ಶ್ರಮ ಸಾರ್ಥಕ ಎನ್ನಬಹುದು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಕಲಬುರ್ಗಿ, ಎಂ. ಎಂ., (೧೯೭೪), **ಶಾಸನ ವ್ಯಾಸಂಗ**, ಪು. ೧೩೧, ಕ.ವಿ.ವಿ.
*೨. Rice, B. L., *Mysore and Coorg from Inscriptions*, P IX, AES Edn. 1986.
*೩. K.S.A. G.M. 6 of 1864 (ಈ ಪತ್ರ ನನಗೆ ನೋಡಲು ಸಿಕ್ಕಿಲ್ಲ).
*೪. ಅದೇ,
*೫. ಅದೇ, ಜನವರಿ ೧೦, ೧೮೬೫ ಪತ್ರ.
*೬. ಅದೇ, ಫೆಬ್ರವರಿ ೨೮, ೧೮೬೫ರ ಪತ್ರ.
*೭. ಅದೇ, ಮೇ ೧, ೧೮೬೫ರ ಪತ್ರ.
*೮. ಅದೇ, ಮೇ ೪, ೧೮೬೫ರ ಪತ್ರ.
*೯. ಅದೇ, ನವೆಂಬರ್ ೧೬, ೧೯೬೮ರ ಪತ್ರ.
*೧೦. ಅದೇ, ನವೆಂಬರ್ ೩೦, ೧೮೬೮ರ ಪತ್ರ.
*೧೧. ಅದೇ, ನಂ. ೪೨೪/೨೧೨.
*೧೨. ಅದೇ, ನಂ. ೮೭೧ ೩/೯.

ಡಾ|| ಲೀಲಾ. ಬಿ*

# ಮುಂಬಯಿ ಶಿಲ್ಪಿ ಜಿ.ಕೆ.ಮ್ಹಾತ್ರೆ; ಹಾಗು ಮೈಸೂರು ಸಂಬಂಧಗಳು (೧೮೭೬-೧೯೪೬)



ಮೈಸೂರು ಕಲಾಭಿಮಾನದ ತೌರೂರು. ಆಧುನಿಕ ಮೈಸೂರಿನಲ್ಲಿ ಕಲಾಭಿಮಾನ ಹೆಚ್ಚಾಗಿತ್ತೆಂದರೆ ಉತ್ಪ್ರೇಕ್ಷೆಯಾಗಲಾರದು. ಮೈಸೂರು ಹಲವಾರು ಕಲೆಗಳನ್ನು ಪ್ರೋತ್ಸಾಹಿಸಿ ಉತ್ತೇಜಿಸಿದೆ. ಈ ಪ್ರಬಂಧದಲ್ಲಿ ಮುಂಬಯಿನ ಶಿಲ್ಪಕಲಾವಿದ ಜಿ.ಕೆ. ಮ್ಹಾತ್ರೆ ಹಾಗೂ ಮೈಸೂರು ಸಂಬಂಧಗಳ ಬಗ್ಗೆ ವಿವರಿಸಲಾಗಿದೆ.

ಇಂಡಿಯಾದೇಶದ ೧೯ನೇ ಶತಮಾನದ ಕಲಾಪ್ರಗತಿಯನ್ನು ಗಮನಿಸುವಾಗ ಇಂಗ್ಲೆಂಡಿನಲ್ಲಿ ಕಲಾವಿದ್ಯೆ ಹೇಗೆ ಮುಂದುವರಿದಿತೋ, ಹಾಗೆ ಇಲ್ಲಿಯ ಕಲಾಶಾಲೆಗಳು ಪ್ರಗತಿ ಹೊಂದಿದ್ದೂ ಅಲ್ಲದೆ, ಅಲ್ಲಿ ಬೋಧಿಸಿದ ಪಠ್ಯಕ್ರಮವನ್ನೆ ಅನುಸರಿಸಿರುವುದು ಕಾಣುತ್ತೇವೆ. ಬ್ರಿಟೀಷ್ ಸರ್ಕಾರ ಹತ್ತೊಂಬತ್ತನೇ ಶತಮಾನದಲ್ಲಿ ಮೂರು ಕಲಾವಿದ್ಯಾಶಾಲೆಗಳನ್ನು ಕಲ್ಕತ್ತಾ, ಮುಂಬಯಿ ಮತ್ತು ಮದ್ರಾಸ್ ಕೇಂದ್ರಗಳಲ್ಲಿ ಸ್ಥಾಪಿಸಿತು. ಇದಕ್ಕೆ ಮುಖ್ಯವಾಗಿ ಪಾಠವನ್ನು ಕಲಿಸತಕ್ಕಂಥ ಗುರುಗಳು ಕೂಡ ಆಂಗ್ಲರು. ಇಲ್ಲಿನ ಹಲವಾರು ಪ್ರತಿಭಾನ್ವಿತ ಯುವಕರು ಈ ಕಲಾಶಾಲೆಗಳಲ್ಲಿ ಕಲಿತವರು. ಈ ಕಲಾಶಾಲೆಗಳಲ್ಲಿ ಹೆಚ್ಚಿನ ಬೇಡಿಕೆ ಇದ್ದುದು "ಚಿತ್ರಕಲೆ ಮತ್ತು ಶಿಲ್ಪಕಲೆಗೆ ಮಾತ್ರ"*೧

ಮುಂಬೈನ ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್, ಹೊರದೇಶಕ್ಕೆ ಹೋಗಿ ತಮ್ಮ ಕಲಾಪ್ರತಿಭೆಯನ್ನು ಉತ್ತಮ ಪಡಿಸಲು ಹಲವಾರು ಯುವಕರಿಗೆ ವಿದ್ಯಾವೇತನವನ್ನು ಒದಗಿಸುತ್ತಿದ್ದು, ಇದರ ಲಾಭವನ್ನು ಹಲವಾರು ವಿದ್ಯಾರ್ಥಿಗಳು ಪಡೆದಿದ್ದರು. ಈ ವಿದ್ಯಾಶಾಲೆ ಹಲವು ಕುಲೀನ ವಿದ್ಯಾವಂತರಿಗೆ ಮಾರ್ಗದರ್ಶಿಯಾಗಿತ್ತು*೨

ಮುಂಬೈನ ಹಲವಾರು ವಾಣಿಜ್ಯೋದ್ಯಮಿಗಳು ಕಲೆಯನ್ನು ಪ್ರೋತ್ಸಾಹಿಸುತ್ತಿದ್ದರು. ಇದಲ್ಲದೆ ಹಲವಾರು ಮುಖ್ಯ ವಾಣಿಜ್ಯ ಪತಿಗಳು ತಮ್ಮ ಭಾವಚಿತ್ರಗಳನ್ನು ಖುದ್ದಾಗಿ ಬರೆಸುತ್ತಿದ್ದರು. ಅದಲ್ಲದೆ ಅಮೃತಶಿಲೆಯಲ್ಲಿ ತಮ್ಮ ಮೂರ್ತಿಗಳನ್ನು ಮಾಡಿಸಿ ಕಲಾಕಾರರನ್ನು ಪ್ರೊತ್ಸಾಹಿಸುತ್ತಿದ್ದರು. "ಇದು ಒಂದು ರೀತಿಯಲ್ಲಿ ಮುಂಬಯಿಯ ವೈಶಿಷ್ಟ್ಯ. ಮತ್ತು ಇದು ಹೆಚ್ಚಿನ ಕಲಾವಿದರಿಗೆ ಆಶಾದಾಯಕವಾದ ಸಂಗತಿಯಾಗಿತ್ತು. ಇದರಿಂದ ಹಲವಾರು ಕಲಾವಿದರು ಶಿಲ್ಪಕಲೆಯನ್ನು ಕಲಿತರು.*೩"

ಕಲಾಭಿಮಾನಿಗಳಾದ ಮೈಸೂರು ರಾಜರು ಕಲೆಗಳನ್ನು ಪೋಷಿಸಿದ್ದೇ ಅಲ್ಲದೆ ಸಂಪ್ರದಾಯದಂತೆ ನಡೆಸಿಕೊಂಡು ಬಂದರು. ಇತರ ಎಲ್ಲಾ ಊರಿಗಿಂತ ಮಾದರಿ ಮೈಸೂರಿನಲ್ಲಿ ಕಲಾಭಿಮಾನ ಹೆಚ್ಚಾಗಿತ್ತಲ್ಲದೆ, ಅದಕ್ಕೆ ಇಂಬು ಕೊಡುವಂತೆ ಕಲೆಗಾರನಿಗೆ ಸಾಕಷ್ಟು ಉತ್ತೇಜನ ದೊರಕುತ್ತಿತ್ತು. ಆದರೆ ಈ ಪ್ರಬಂಧ ಒಬ್ಬ ಕಲೆಕಾರನ ಹಾಗು ಅವನ ಮೈಸೂರು ಸಂಪರ್ಕಗಳ ವಿಶಯಕ್ಕೆ ಸೀಮಿತವಾಗಿದೆ.

ಜಿ.ಕೆ. ಮ್ಹಾತ್ರೆಯವರು(ಗಣಪತ್‌ರಾವ್ ಕಾಶಿನಾಥ್ ಮ್ಹಾತ್ರೆ) ೧೮೭೬ರಲ್ಲಿ ಪುಣೆಯಲ್ಲಿ ಹುಟ್ಟಿದರು. ಅವರ ತಂದೆ ಮಿಲಿಟರಿಯ ಲೆಕ್ಕಪತ್ರಗಳ ಅಧಿಕಾರಿಯಾಗಿದ್ದರು. ಮ್ಹಾತ್ರೆ ಅವರಿಗೆ ಅವರ ಅಣ್ಣ ಇಂಜಿನಿಯರಿಂಗ್‌ನಲ್ಲಿ ಕಲಿಯುತ್ತಿದ್ದವನು ತಮ್ಮ ಸ್ಫೂರ್ತಿಗೆ ಕಾರಣವೆಂದು ತಿಳಿಸಿದ್ದಾರೆ. ಮ್ಹಾತ್ರೆ ಚಿಕ್ಕ ವಯಸ್ಸಿನಲ್ಲಿ ಕಲೆಗೆ ಮನ ಒಲಿದಿದ್ದೆ ಅಲ್ಲದೆ ಚಿತ್ರಕಲೆಯನ್ನು ಕೂಡ ರೂಢಿಸಿ ಕೊಂಡಿದ್ದರು. ಐದನೇ ಇಯತ್ತೆ ಕಲಿಕೆ ಮುಗಿಸಿ ಆಗಿನ ಸುಪ್ರಸಿದ್ಧ ಕಲಾಶಾಲೆಯಾದ J.J. School of Arts(1891) ಸೇರಿದರು. ಅಲ್ಲಿನ ಪ್ರಿನ್ಸಿಪಾಲರಾದ ಗ್ರಿಫಿಕ್, ಮ್ಹಾತ್ರೆಯವರಿಗೆ ಇಂಟರ್ ಮೀಡಿಯೆಟ್ ಕ್ಲಾಸಿಗೆ ನೋಂದಿಸಿದರು. ಪ್ರತಿಭಾವಂತ ಜಿ.ಕೆ.ಮ್ಹಾತ್ರೆ ಎಲ್ಲಾ ತರಗತಿಯಲ್ಲಿಯೂ ಉತ್ತಮ ಶ್ರೇಣಿಯಲ್ಲಿ ಪಾಸಾಗಿ ಉತ್ತಮ ವಿದ್ಯಾರ್ಥಿಗೆ ಸಲ್ಲಬೇಕಾದ ಸುವರ್ಣ ಪದಕವನ್ನು ಪಡೆದರು. ಮೊದಲು ಬಂದ ಜವಾಬ್ದಾರಿ ಕೆಲಸ, ತಾನು ಓದಿದ ಸ್ಕೂಲಿನಲ್ಲಿ ಉಪಾಧ್ಯಾಯನಾಗಿ ಸೇವೆ ಸಲ್ಲಿಸುವಂತ ಅವಕಾಶ. ಗಜ್ಜರ್ ಎಂಬುವರು ಇವರ ಕಲಾಪ್ರತಿಭೆಗೆ ಮನಸೋತು ತಮ್ಮ ಪ್ರಯೋಗಶಾಲೆಯಲ್ಲಿ ಕೆಲಸ ಮಾಡಲು ಅನುಮತಿ ನೀಡಿದರು. ಇಲ್ಲಿ ಮ್ಹಾತ್ರೆಯವರ ಅನುಭವ ಇಮ್ಮಡಿಸಿತು. (೧೮೯೫) ಜಿ.ಕೆ. ಮ್ಹಾತ್ರೆ ಮುಂಬೈಯಿನ ಕಲಾಶಾಲೆಯ ಸುವರ್ಣಪದಕವನ್ನು ಪಡೆದರು. ೧೮೯೬ರಲ್ಲಿ ಪ್ಲಾಸ್ಟರ್ ಆಫ್ ಪ್ಯಾರಿಸನಿಂದ ರಚಿಸಿದ

*ಫ್ಲಾಟ್ ನಂ. ೪೭, ಶಾಮಲ, ೧ನೇ ಅಂತಸ್ತು, ಮಾತುಂಗ, ಮುಂಬಯಿ - ೪೭೦ ೦೧೯.



ಮಂದಿರಾಕಡೆ ಎಂಬ ಮೂರ್ತಿ ಅತ್ಯಂತ ಪ್ರಶಂಸೆಯನ್ನು ಪಡೆಯಿತು. ಭಾವನಗರದ ಮಹಾರಾಜರು ಇದಕ್ಕೆ ಇನ್ನೂರು ರೂಪಾಯಿ ಬಹುಮಾನ ನೀಡಿದರು. ರಾಜರವಿವರ್ಮ ಈ ಮೂರ್ತಿಯನ್ನು ಕುರಿತು ಉದ್ದಾಮ ಹೊಗಳಿದರು. ಮುಂಬೈ ಕಲಾಶಾಲೆ ಇದಕ್ಕೆ ಬೆಳ್ಳಿಪದಕ ನೀಡಿ ಗೌರವಿಸಿತು. ಜಾರ್ಜ್‌ಬರ್ಡವುಡ್ ಎಂಬ ಆಂಗ್ಲ ಕಲಾವಿದ, ಅತ್ಯಂತ ಸೂಕ್ಷ್ಮ ವಿಮರ್ಶಕ 'ಮ್ಹಾತ್ರೆಯವರ ಮಂದಿರಾಕಡೆ ಅತ್ಯಂತ ಸುಂದರ ಮೂರ್ತಿ. ಇದು ಪ್ಲಾಸ್ಟಿಕ್ ಕಲೆಯಲ್ಲಿ ಮೊದಲನೇ ಸ್ಥಾನದಲ್ಲಿದೆ" ಎಂದು ಹೊಗಳಿದರು. ಹದಿನಾರು ವರ್ಷದ ಹುಡುಗನಿಗೆ ಈ ಆಂಗ್ಲಕಲಾವಿದನ ಹೊಗಳಿಕೆಗಿಂತ ಮತ್ತಾವ ಪ್ರಶಸ್ತಿಬೇಕು! ಅದಲ್ಲದೆ ಟೈಂಸ್ ಆಫ್ ಇಂಡಿಯಾ ಪತ್ರಿಕೆ ಮ್ಹಾತ್ರೆಯವರ ವಿಷಯವಾಗಿ ಹೀಗೆ ಬರೆಯಿತು. "ಮ್ಹಾತ್ರೆಯವರನ್ನು ಹಲವು ವರ್ಷ ಪ್ಯಾರಿಸ್ ನಗರಕ್ಕೆ ಕಳುಹಿಸಿ ಮತ್ತು ಅಲ್ಲಿ ಅವರು ತಮ್ಮ ಕಲೆಯನ್ನು ಉತ್ತಮ ಗುರುಗಳಲ್ಲಿ ಅಭ್ಯಾಸಿಸಬೇಕು" ಎಂದು. ಮ್ಹಾತ್ರೆಯವರ ಕೀರ್ತಿ ಪ್ಯಾರಿಸ್ ನಗರಕ್ಕೆ ಹಬ್ಬಲು ಹೆಚ್ಚು ಕಾಲ ಬೇಕಾಗಲಿಲ್ಲ. ೧೯೦೦ ರಲ್ಲಿ ಅವರ ವೀಣಾವಾದಿನಿ ಸರಸ್ವತಿ ಪ್ಯಾರಿಸ್ ಪ್ರದರ್ಶನದಲ್ಲಿ ಉತ್ತಮ ಕಲಾಕೃತಿ ಎಂದು ಹೆಸರುಗಳಿಸಿ ಅವರಿಗೆ 'ಕಂಚಿನ ಪದಕ' ಪಾರಿತೋಷಕ ದೊರಕಿಸಿತು.

ವ್ಯಾಪಾರಿ ಮುಂಬೈ ನಗರದಲ್ಲಿ ಚಾರಿತ್ರಿಕ ವ್ಯಕ್ತಿಗಳ ಮೂರ್ತಿಗಳಿಗೆ ಅತ್ಯಂತ ಬೇಡಿಕೆ ಇದ್ದ ಕಾಲವದು. ಮ್ಹಾತ್ರೆಯವರು, ಜೆ.ಬಿ.ನಾರಿಮನ್, ಎಸ್.ಜಿ.ವಾಡಿಯ, ವಿಶ್ವನಾಥ್ ಮಂಡಾಲಿಕ್, ಗೋಪಾಲಕೃಷ್ಣ ಗೋಖಲೆ ಅವರ ಮೂರ್ತಿಗಳನ್ನು ಮಾಡಿ ಪ್ರಸಿದ್ಧರಾಗಿದ್ದರು. ಅದಲ್ಲದೆ ಅವರಿಗೆ "ವಿಕ್ಟೋರಿಯಾ ಮಹಾರಾಣಿಯವರ ಪ್ರತಿಮೆಯನ್ನು ಮಾಡಲು ಅಹಮದಾಬಾದಿನಿಂದ ಅಣತಿ ಬಂತು"*[೪] ಕಲಾಭಿಮಾನಿಗಳಿಗೆ ವಿಕ್ಟೋರಿಯಾ ರಾಣಿಯವರ ಮತ್ತು ನ್ಯಾಯಮೂರ್ತಿ ರಾನಡೆ ಅವರ ಮೂರ್ತಿ ಅತ್ಯಂತ ಮಚ್ಚಿಗೆಯಾಯಿತು. ಮ್ಹಾತ್ರೆಯವರ ಕಲಾಕೌಶಲ್ಯ ಅದ್ಭುತವಾದದ್ದು. ಮ್ಹಾತ್ರೆಯವರು ರಾನಡೆಯವರ ಏಕಮಾತ್ರ ಫೋಟೋವನ್ನು ನೋಡಿ ಅದರಿಂದಲೇ ಅವರ ಮೂರ್ತಿಯನ್ನು ಮಾಡಿದ್ದಾರೆ. "ಅವರ ಎಡಗಣ್ಣಿನಲ್ಲಿಯ ಐಬು ಕೂಡ ಇದರಿಂದ ಸ್ಪಷ್ಟಪಡಿಸುವಷ್ಟ ಮೂರ್ತಿ ಚೆನ್ನಾಗಿದೆ"*[೫] ಈ 6 ft (ಆರು ಅಡಿ) ಮೂರ್ತಿ ಆರು ಅಡಿಯ ಎತ್ತರದ ಪೀಠದ ಮೇಲಿದೆ. ಇದನ್ನು ಮುಂಬೈನ ಕೊಪರೇಜ್‌ನಲ್ಲಿ ನೋಡಬಹುದು.

***ಕಲೆಗೆ ಪ್ರೊತ್ಸಾಹ:*** ಮೈಸೂರು ಕಲಾ ಪ್ರೊತ್ಸಾಹದಲ್ಲಿ ಹಿಂದುಳಿದಿರಲಿಲ್ಲ. ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ ಕಲಾಭಿಮಾನ ಎಲ್ಲರಿಗೂ ತಿಳಿದ ವಿಷಯ. ಮಹಾರಾಜ ಕೃಷ್ಣರಾಜ ಒಡೆಯರ್ ಅವರು ಮಹಾರಾಜ ಸಯ್ಯಜಿರಾವ್ ಬರೋಡರವರಿಂದ ಮ್ಹಾತ್ರೆಯವರ ಬಗ್ಗೆ ಸಾಕಷ್ಟು ಮಾಹಿತಿ ಹೊಂದಿದ್ದರು. ಮಹಾರಾಜರು ಮ್ಹಾತ್ರೆಯವರಿಗೆ ಶೇಷಾದ್ರಿ ಮೆಮೋರಿಯಲ್ ಹಾಲ್‌ಗೆ ದಿವಾನ್ ಶೇಷಾದ್ರಿ ಐಯ್ಯರವರ*[೬] ಒಂದು ಕಂಚಿನ ಪ್ರತಿಮೆ ಮಾಡಿಸಲು ಪ್ಲಾಸ್ಟರ್‌ನ ಮಾಡಲ್ ಮಾಡಲು ಅಣತಿ ಇತ್ತರು. ಆದರೆ ದಾಖಲೆಗಳನ್ನು ನೋಡುವಾಗ ಇದನ್ನು ರಾಬರ್ಟ್ ಕಾಟನ್ ಎಂಬ ಇಟಾಲಿಯ ಆಂಗ್ಲ ಕಲಾವಿದ ಮಾಡಿದಂತೆ ಕಾಣುತ್ತದೆ. ಇದನ್ನು ವೈಸ್‌ರಾಯ್ ಹಾರ್ಡಂಜ್ ೨೦-೧೧-೧೯೧೩ರಂದು ಅನಾವರಣ ಮಾಡಿದನು. ಈ ಮೂರ್ತಿ ಬೆಂಗಳೂರಿನ ಪಬ್ಲಿಕ್ ಲೈಬ್ರರಿಯ ದಕ್ಷಿಣಕ್ಕಿದೆ.*[೭] ಇದರಿಂದ ಮಹಾರಾಜರ ಉತ್ಸಾಹಕ್ಕೆ ಕೊರತೆ ಉಂಟಾದಂತೆ ಕಾಣಲಿಲ್ಲ. ಮ್ಹಾತ್ರೆಯವರ ಕಲಾಲಾಭವನ್ನು ಮೈಸೂರಿಗೆ ಒದಗಿಸುವ ಛಲದಿಂದ ಮಹಾರಾಜರು ಕೆಳಗಿನ ಈ ಮೂರ್ತಿಗಳನ್ನು ಮಾಡಿಕೊಡುವಂತೆ ಅವರಿಗೆ ಎರಡು ಕಟ್ಟಳೆ ವಹಿಸಿದರು.

(a) ಇಟಾಲಿಯನ್ ಮಾರ್ಬಲ್‌ನಿಂದ ತಮ್ಮ ತಂದೆ ಚಾಮರಾಜೇಂದ್ರ ಒಡೆಯರ್‌ರವರ ಮೂರ್ತಿ

(b) ಜೀವಂತ ನಿಲುವಿನ ಇಟಾಲಿಯನ್ ಮಾರ್ಬಲ್ ಮೂರ್ತಿ.

ಇದಕ್ಕೆ ಬೇಕಾದ ಕಾಗದ ಪತ್ರಗಳನ್ನು ಮಾಡಿಸಿ ರೂ. ೭೦,೦೦೦ ಕರಾರುಪತ್ರ*[೪] ಮಾಡಿಸಿದರು. ಈ ಆಜ್ಞೆಯನ್ನು ಮಾಡಿದಾಗ ಎಲ್ಲರಿಗೂ ಆಶ್ಚರ್ಯ. ಆದರೆ ಈ ಆಜ್ಞೆಯು ಬರುವುದಕ್ಕೆ ಮೊದಲೇ ಮ್ಹಾತ್ರೆಯವರ ಹೆಸರು ಮೈಸೂರೇ ಅಲ್ಲದೆ, ಹೊರದೇಶಕ್ಕೂ ಹಬ್ಬಿತ್ತು. ಕೃಷ್ಣರಾಜ ಒಡೆಯರ್ ಮ್ಹಾತ್ರೆಯವರಿಗೆ ಕೆಲಸವಷ್ಟನ್ನೇ ಅಲ್ಲ ಅವರ ಕಲಾಶಾಲೆಯನ್ನು ನಿರ್ಮಿಸಲು ರೂ.೩೦,೦೦೦ ಮುಂಗಡ ಹಣ ಕೊಟ್ಟು ಅದನ್ನು ರೂ. ೫,೦೦೦ ಕಂತಿನ ಪ್ರಕಾರ ತೀರಿಸಲು ತಿಳಿಸಿದರು. ತಮ್ಮ ನಿವೇಶನವನ್ನು ಭೋಗ್ಯವನ್ನಾಗಿ ಮಾಡಿ ಮ್ಹಾತ್ರೆ ತಮ್ಮ Studio ಸ್ಥಾಪಿಸಿದರು. ಅದಲ್ಲದೆ ಮಹಾರಾಜರು ಮ್ಹಾತ್ರೆ ಅವರನ್ನು ತಮ್ಮ ಸಂಸ್ಥಾನದ ಅತಿಥಿಯಾಗಿ ಕಾಣುವಂತೆ ಅಣತಿ ಮಾಡಿದರು. ಇದಲ್ಲದೆ ಮ್ಹಾತ್ರೆಯವರಿಗೆ ಮೈಸೂರು ಆಸ್ಥಾನದಿಂದ ಪ್ರೋತ್ಸಾಹಿಸಲ್ಪಟ್ಟ ಯೋಗ್ಯತಾಪತ್ರ ದೊರಕಿತು. ಇಂಥ ಯೋಗ್ಯತಾಪತ್ರ ಕಲಾಕಾರನಿಗೆ ಅತ್ಯವಶ್ಯಕ. ಯುದ್ಧಕಾಲದಲ್ಲಿ ಕಲೆಗೆ ಅಪಾರ ಧಕ್ಕೆ ಉಂಟಾದಾಗ ಕಲಾಕಾರನಿಗೆ ಇದೇ ಬಂಡವಾಳವಾಗಿತ್ತು. ರಾಜಮಹಾರಾಜರ ಪ್ರೋತ್ಸಾಹವಿಲ್ಲದಿದ್ದರೆ, ಕಲೆ ಬತ್ತಿ ಹೋಗುವ ಪ್ರಸಂಗವಿತ್ತು. ಆಗ ಜಿ.ಕೆ. ಮ್ಹಾತ್ರೆಯವರು ೭-೯-೧೯೧೬*[೫]ರಲ್ಲಿ ಚಾಮರಾಜೇಂದ್ರ ಒಡೆಯರ್ ಜೀವಂತ ಮೂರ್ತಿಯನ್ನು ಮುಗಿಸಿದರು. ಮುಂಬೈನ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆ ಇದರ ಕಲಾಪ್ರಶಂಸೆಯನ್ನು ಈ ರೀತಿ ಮಾಡಿತು. "ಮೈಸೂರು ರುಮಾಲಿನಲ್ಲಿ ತನ್ನ ಕೌಶಲವನ್ನು ಮ್ಹಾತ್ರೆಯವರು ಸುಂದರವಾಗಿ ತೋರಿಸಿರುತ್ತಾರೆ ಮತ್ತು ಮ್ಹಾತ್ರಯವರ ಶಿಲ್ಪಕಲೆಯನ್ನು ಈ ಮೊದಲೇ ನೋಡಿದವರಿಗೆ ಈಗ ಮಾಡಿರತಕ್ಕ ಶಿಲಾಮೂರ್ತಿ ಹೆಚ್ಚಿನದೇನೂ ಅಲ್ಲ" ಎಂದು ಬರೆಯಿತು. ಮೈಸೂರಿನಲ್ಲಿರುವ ಸ್ವಾಚ್ಯು ಸ್ಕ್ವೇರ್ ಹತ್ತಿರ ನಿಂತಿರುವ ಒಂದು ಮಹಾರಾಜರ ಮೂರ್ತಿ ಇದೆಯಷ್ಟೆ, ಇದನ್ನು ಮ್ಹಾತ್ರೆಯವರಿಂದ ಮಾಡಿಸಿರಬಹುದೆಂದು ನನಗೆ ಅನ್ನಿಸುತ್ತದೆ. ಜಗನ್ಮೋಹನ ಚಿತ್ರಶಾಲೆಯಲ್ಲಿರತಕ್ಕ ಮತ್ತೊಂದು ಮೂರ್ತಿ, ಮ್ಹಾತ್ರೆಯವರು ಮಾಡಿದ್ದು. ಕಾಗದ ಪತ್ರ ನಡುವೆ ದೊರೆತ ಫೋಟೊ ಒಂದರಿಂದ ಇದು ದೃಢಪಟ್ಟಿದೆ. ಜಿ.ಕೆ. ಮ್ಹಾತ್ರೆಯವರು ಮೈಸೂರು ಸರಕಾರಕ್ಕೆ ಬರೆದಿರುವ ಈ ಪತ್ರ ಬಹುಶಃ ಕಲೆಯ ಕನಸು ಕಾಣುವ ಪ್ರತಿಯೊಬ್ಬ ಕಲಾವಿದನ ಸೂಕ್ಷ್ಮ ಸಂವೇದನೆಯನ್ನು ತೋರಿಸುತ್ತದೆ.

Mr. Mirza Ismail

Huzur Secretary to H.H.Maharaja of Mysore

Respected Sir,

I crave leave most respectfully to address the following few lines for your kind and favourable consideration. We artists look upon it as our birth right to appeal to the Princes of India for Patronage because work like ours can be fed and grow only on Patronage from such exalted quarters and the Princes of India have never in their turn failed to do the duty of Supporting art and learning which their exalted rank and dignity imposes on them. Among personages His Highness I may beg most respectfully to say occupies the most Conspicious position. Knowing as you do my work, it will be easy for you to urge and enforce my claim to be entrusted with some Statutory work.

I beg to remain
your obidient Servent
G.K. Mhatre.

ಆದರೆ ಸರ್ಕಾರದ ಬೊಕ್ಕಸದಿಂದ ಸಾಕಷ್ಟು ಹಣ ಆಗಲೇ ಮ್ಹಾತ್ರೆಯವರು ಮಾಡಿದ ಮೂರ್ತಿಗಳಿಗೆ ಖರ್ಚಾಗಿದ್ದರಿಂದ ಕೊಡುಗೈ ಮಹಾರಾಜರೂ ಕೂಡ ಹಿಡಿತ ಮಾಡಬೇಕಾದ ಸಂದರ್ಭ ಒದಗಿತ್ತು. ಹೀಗಾಗಿ ಮುಂದೆ ಮೈಸೂರಿನಿಂದ ಜಿ.ಕೆ. ಮ್ಹಾತ್ರೆಯವರಿಗೆ ಹೆಚ್ಚಿನ ಸಹಾಯವಾದಂತೆ ಕಂಡುಬಂದಿಲ್ಲ. ಜಿ.ಕೆ. ಮ್ಹಾತ್ರೆಯವರಿಗೆ ಹಲವಾರು ಮಾಧ್ಯಮಗಳ ಮೂಲಕ ತಮ್ಮ ಕಲಾಕೌಶಲ್ಯವನ್ನು ಪ್ರದರ್ಶಿಸಿದ್ದರೂ ಅವರು ಅಮೃತಶಿಲೆಯಲ್ಲಿ ಮಾಡಿದ ಶಿಲ್ಪಕ್ಕೆ ಹೆಚ್ಚು ಹೆಸರು ವಾಸಿಯಾದದ್ದು. ಅವರು ಈ ಮಾಧ್ಯಮಕ್ಕೆ ಪಾಶ್ಚಾತ್ಯರಿಂದ ಪ್ರಭಾವಿತರಾಗಿದ್ದರು. ಅವರ ವೀಣಾವಾದಿನಿ ಮತ್ತು ಶಬರಿಮೂರ್ತಿಗಳು ಸಾಂಗ್ಲಿ ಮೂಸಿಯಮ್‌ನಲ್ಲಿವೆ. ಗೋಪಾಲಕೃಷ್ಣ ಗೋಖಲೆ (ಮುಂಬೈ), ಶಿವಾಜಿ ಮಹಾರಾಜರ ಕುದುರೆಯ ಮೇಲೆ ಕೂತಿರುವ ಭಂಗಿ(ಬರೋಡ) ಮತ್ತು ಸ್ವಾಮಿರಘುನಾಥ ಮಹಾರಾಜ (ಪನ್‌ವೇಲ್, ಮುಂಬೈನಿಂದ ಸ್ವಲ್ಪ ದೂರದಲ್ಲಿದೆ), ಇವುಗಳು ಅವರು ಮಾಡಿದ ಪ್ರಮುಖ ಮೂರ್ತಿಗಳು. ಇವಲ್ಲದೆ ಮುಂಬೈನ ಹೆಸರಾಂತ ಡಾಕ್ಟರ್ ಎಮ್.ಬಿ. ನಾರಿಮನ್‌ರವರ ಮಾರ್ಬಲ್ ಮೂರ್ತಿಯನ್ನೂ ಮಾಡಿರುತ್ತಾರೆ. ಇದನ್ನು ಲೈಯಿಂಗ್ ಆಸ್ಪತ್ರೆಯಲ್ಲಿ ಇಡಲಾಗಿದೆ.

*ಉಪಸಂಹಾರ:* ಮೈಸೂರಿನಲ್ಲಿ ಇದ್ದುದು ಒಂದೇ ಒಂದು ಕಲಾಶಾಲೆ. ೨೦ನೇ ಶತಮಾನದ ಆದಿಯಲ್ಲಿ ಹಲವಾರು ಪ್ರತಿಭಾವಂತ ಯುವಕರು ತಮ್ಮ ಆರಂಭದಲ್ಲಿ ಕಲಾಶಾಲೆಯಲ್ಲಿ ಕಲಿತು ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಹೊರನಾಡುಗಳಾದ ಮುಂಬೈ, ಕಲ್ಕತ್ತಾಕ್ಕೆ ತೆರಳಿದ್ದರು. ಇಲ್ಲಿ ತರಬೇತಿ ಹೊಂದಿದ ಹೆಚ್ಚಿನ ವಿದ್ಯಾರ್ಥಿಗಳು ಯೋರೋಪಿಯನ್‌ರ ಪ್ರಭಾವಕ್ಕೆ ಒಳಗಾಗಿದ್ದೇ ಅಲ್ಲದೆ ಅವರ ಅನುಕರಣೆ ಮಾಡಿ ಅವರು ಉಪಯೋಗಿಸಿದ ಮಾಧ್ಯಮವನ್ನು ಹೆಚ್ಚು ಉಪಯೋಗಿಸತೊಡಗಿದ್ದು ಹೆಚ್ಚು ಆಕರ್ಷಿತವಾಗಿತ್ತಲ್ಲದೆ ಆಗಿನ ಸಮಾಜ ಇದನ್ನು ಒಪ್ಪಿತ್ತು.

ಕಾಲಕ್ರಮೇಣ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪ್ರಭಾವಕ್ಕೊಳಗಾಗಿ ಕಲೆಯ ದೃಷ್ಟಿಕೋನ ಬದಲಾಗುತ್ತ ಬಂತು. ಮತ್ತು ಕಲೆಗೆ ಯಾವರೀತಿ ಪ್ರೋತ್ಸಾಹ ದೊರಕಿಸಬೇಕು ಎಂಬುದರಲ್ಲಿ ಸಾಕಷ್ಟು ಬದಲಾವಣೆ ಉಂಟಾಯಿತು. ಇ.ಬಿ.ಹ್ಯಾವೆಲ್

ರವರ (೧೮೯೬) ಆಕಸ್ಮಿಕ ಬರುವಿಕೆಯಿಂದ ಕಲ್ಕತ್ತಾದ ಜನರಲ್ಲಿ ಹೆಚ್ಚಿನವರು ನಮ್ಮ ಸಮಕಾಲೀನ ಕಲೆಯಲ್ಲಿ ತೊಡಗಿಸಿಕೊಂಡಿದ್ದೇ ಅಲ್ಲದೆ, ಅವರಿಂದ ಅವರ "ವಿದೇಶಿ ಅನುಕರಣೆಯನ್ನು ಬಿಡಬೇಕೆಂದೂ ಮತ್ತು ಇಂಡಿಯಾ ದೇಶದಲ್ಲಿರುವ ಕಲೆಯನ್ನು ಇಂಡಿಯಾ ಜನರು ಯೋಚನೆಮಾಡುವ ರೀತಿ ನೀತಿಯಲ್ಲಿ ರೂಪಿಸಬೇಕೆಂಬ ಕರೆಗೆ "*೧೦ ಆಕರ್ಷಿತರಾದರು. ಅವರ ಪುಸ್ತಕ Indian Sclupture and Painting.(1908) ಪ್ರಕಟಣೆಯಿಂದ, ಹಿಂದೂಸ್ಥಾನದ ಜನರಿಗೆ ಪಾಶ್ಚಾತ್ಯಕಲೆಗಳ ಅನುಕರಣೆಯಿಂದ ಆಗಿರುವ ಅಪಾರ ನಷ್ಟ ಮತ್ತು ಹಿಂದಿನಕಾಲದ, ಪೂರ್ವಿಕರಿಂದ ಬಂದ ಸಂಪ್ರದಾಯದ ಕಲೆಗಳಿಗಾದ ಅಘಾತ ಇವುಗಳನ್ನು ಕೂಲಂಕಷವಾಗಿ ಚರ್ಚಿಸಿದ್ದರ ಫಲವಾಗಿ ಹಲವಾರು ಸ್ವದೇಶಿ ಪ್ರಿಯರು ಮತ್ತು ಚರಿತ್ರಕಾರರು ಇವರಿಗೆ ಇಂಬುಕೊಟ್ಟಿದ್ದೇ ಅಲ್ಲದೆ, ಇವರ ಸಾಮಾಜಿಕ ಕಳಕಳಿಯಲ್ಲಿ ಭಾಗಿಯಾದರು. ಇದರಿಂದ ಹೊಸಕಲೆಯ ಚಳವಳಿ ಉಂಟಾಯಿತು. ಕಲ್ಕತ್ತಾದಲ್ಲಿ ಈ ಚಳವಳಿ ಪ್ರೊ|| ಹ್ಯಾವೆಲ್ ಮೂಲಕ ಹೊಸ ರೂಪ ಪಡೆಯಿತು. ಅಲ್ಲದೆ ಹೇಗೆ ಇಂಡಿಯಾ ದೇಶದ ಕುಶಲಕರ್ಮಿ ಪಾಶ್ಚಾತ್ಯ ಅನುಕರಣೆಯಿಂದ ತನ್ನದೇ ಆದ ವ್ಯಕ್ತಿತ್ವವನ್ನು ಮರೆತಿದ್ದಾನೆ ಎಂಬುದನ್ನು ಹಲವಾರು ಭಾಷಣಗಳಲ್ಲಿ ಎತ್ತಿಹಿಡಿದು ತೋರಿಸಿದರು. ಕಲೆಯ ಚಳವಳಿಯಲ್ಲಿ ಮತ್ತೊಂದು ಅಧ್ಯಾಯ ಅಭನೀಂದ್ರನಾಥರವರ ಪ್ರವೇಶದಿಂದ ಆಯಿತು. ಇದಕ್ಕೆ ಬೆಂಗಾಲ್ ಸ್ಕೂಲ್ ಎನ್ನಬಹುದು. ಕಲ್ಕತ್ತಾ ಸ್ಕೂಲು ವಿಪರೀತ ಮೆಚ್ಚಿಗೆಯನ್ನು ಪಡೆಯಿತು, ಮತ್ತು ಸಾಮಾನ್ಯ ಜನ ಇದನ್ನು ಸ್ವಾಗತಿಸಿದ್ದೇ ಅಲ್ಲದೆ ತಮ್ಮ ಮಕ್ಕಳನ್ನು ಕಲ್ಕತ್ತಾ ಸ್ಕೂಲ್ ಆಫ್ ಆರ್ಟ್ಸ್‌ಗೆ ಕಳುಹಿಸಿದರು. ಇದು ಮುಂದಿನ ಸ್ವಾತಂತ್ರ ಹೋರಾಟಕ್ಕೆ ಹಿನ್ನೆಲೆಯಾಯ್ತು. ಕೆ. ವೆಂಕಟಪ್ಪನವರಿಗೆ ಮೈಸೂರು ರಾಜ್ಯದ ಪ್ರೋತ್ಸಾಹವಿತ್ತು. ಗೌರ್ನಮೆಂಟ್ ಆರ್ಟ್‌ಸ್ಕೂಲ್ ಅಭ್ಯಾಸ, ಕಲಕತ್ತೆಯಲ್ಲಿ ಏಳುವರುಷ ವಿದ್ಯಾಭ್ಯಾಸವನ್ನು ಪೂರೈಸಿ ೧೯೧೬ರಲ್ಲಿ ಕೆ. ವೆಂಕಟಪ್ಪ ಮೈಸೂರಿಗೆ ಹಿಂದಿರುಗಿದರು. ಕೆ. ವೆಂಕಟಪ್ಪನವರು ತಮ್ಮ ವ್ಯಾಸಂಗವನ್ನು ಅಭನೀಂದ್ರನಾಥ ಟಾಗೂರ್ ಮತ್ತು ಪರ್ಸಿಬ್ರೌನರವರ ಹತ್ತಿರ ಮಾಡಿದ್ದರು. ೧೯೧೬ರ ಹೊತ್ತಿಗೆ ಕಲಾಭಿಮಾನಿಗಳು, ಗ್ಯಾಲರಿಗಳು ಮತ್ತು ಕಲಾಪೋಶಕರು ಎಲ್ಲರೂ ಅಭನೀಂದ್ರನಾಥರ ವಿದ್ಯಾರ್ಥಿಗಳ ಏಳ್ಗೆಗಾಗಿ ಒಟ್ಟಾಗಿ ಶ್ರಮಿಸಿದರು. ಬೆಂಗಾಲ್ ಸ್ಕೂಲಿನ ಪ್ರಭಾವ ಹೆಚ್ಚಾಗಿತ್ತು. ಹಲವರು ಇದನ್ನು ಕಟು ಟೀಕೆಗೆ, ವಿಮರ್ಶೆಗೆ ಒಳಪಡಿಸಿದರೂ ಬೆಂಗಾಲ್ ಸ್ಕೂಲ್ ಪ್ರಭಾವ ಕಡಿಮೆಯಾಗದೆ ಹೆಚ್ಚಾಗುತ್ತಿತ್ತು. ಮಾಡರ್ನ್ ರಿವ್ಯೂ ಎಂಬ ಕಲ್ಕತ್ತಾ ಮಾಸಪತ್ರಿಕೆ ತನ್ನ ಬರವಣಿಗೆಯಿಂದ ಕಲೆಗಳನ್ನು, ಕಲಾಕಾರನನ್ನು, ಪ್ರಬೋಧಿಸಿ, ತನ್ನ ವಿದ್ವತ್‌ಪೂರ್ಣ ಬರವಣಿಗೆಯಿಂದ ಸ್ಥಳೀಯ ಕಲೆಗಳಿಗೆ ಹೆಚ್ಚು ಪ್ರೋತ್ಸಾಹವನ್ನು ನೀಡಿತು. ಸಾಮಾನ್ಯ ಜನರು ಇದರಿಂದ ಹೆಚ್ಚು ತಿಳುವಳಿಕೆಯನ್ನು ಹೊಂದಿದ್ದಲ್ಲದೆ ಪ್ರಭಾವಿತರಾದರು.

೧೯೨೦ ರಲ್ಲಿ ಹಲವಾರು ಕಲಾವಿದರು ಉನ್ನತ ವ್ಯಾಸಂಗ ಹೊಂದಿ ಮೈಸೂರಿಗೆ ಹಿಂದಿರಿಗಿ ಉನ್ನತ ಹುದ್ದೆಯನ್ನು ಟೆಕ್ನಿಕಲ್ ಸ್ಕೂಲಿನಲ್ಲಿಯೋ ಆಸ್ಥಾನದಲ್ಲಿಯೋ ಹೊಂದಿದ್ದರು. ಆದರೆ ಕೆ. ವೆಂಕಟಪ್ಪನವರು ಮಾತ್ರ ಇದೆಲ್ಲದರ ಹಿಂದೆ ಇದ್ದು ಕಲಾಸೇವೆ ಮುಂದುವರಿಸಿದ್ದರು. ಪಾವಂಜೆ ಅವರು ಜರ್ಮನಿಯಲ್ಲಿ ಉನ್ನತ ವಿದ್ಯಾಭ್ಯಾಸ ಹೊಂದಿ ಮೈಸೂರಿನಲ್ಲಿ ಚಾಮರಾಜೇಂದ್ರ ಟೆಕ್ನಿಕಲ್ ಇನ್ಸಿಟ್ಯೂಟ್‌ನಲ್ಲಿ ಸೂಪರಿನ್ಟೆಂಡೆಂಟ್ ಎಂದು ನೇಮಕ ಹೊಂದಿದ್ದರು. ಇವರು ಮೈಸೂರಿನಿಂದ ಜರ್ಮನಿಗೆ ಉನ್ನತ ವ್ಯಾಸಂಗಕ್ಕೆ ಕಳುಹಿಸಲ್ಪಟ್ಟವರಲ್ಲಿ ಮೊದಲಿಗರು.(೧೯೨೭-೪೬).

ದಿವಾನ್ ಮಿರ್ಜಾಇಸ್ಮಾಯಿಲ್ ಪ್ರಕಾರ ರಾಜ್ಯದ ಬೊಕ್ಕಸದಿಂದ ಕಲಾಭಿಮಾನಕ್ಕೆ ಮತ್ತು ಕಲಾಶಾಲೆಯಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆಂದು ಆಗಲೇ ಹೆಚ್ಚು ಖರ್ಚಾಗಿತ್ತು. ಮತ್ತು ಹೊಸದಾಗಿ ತರಬೇತಿ ಹೊಂದಿದ ಸ್ಥಳೀಯ ವಿದ್ಯಾರ್ಥಿಗಳು ತಮ್ಮ ಕಲಾಕೌಶಲದಿಂದ ಆಗಲೇ ದಿವಾನರ ಮನಸ್ಸನ್ನು ಒಲಿಸಿದ್ದರು. ೧೯೨೦ರ ಹೊತ್ತಿಗೆ ಮೈಸೂರು ಹೊಸ ಸ್ವದೇಶಿ ಪ್ರಭಾವಕ್ಕೆ ಒಳಗಾಗಿದ್ದ ಕಾರಣ ಹೊರಗಿನಿಂದ ಬಂದ ಕಲಾವಿದರ ಪ್ರೋತ್ಸಾಹ ಕುಂಠಿತವಾಗಿತ್ತು. ಈ ಕಾರಣದಿಂದ ಸಹಜವಾಗಿ ಜಿ. ಕೆ. ಮ್ಹಾತ್ರೆಯವರಿಗೆ ಮತ್ತೆ ಇಲ್ಲಿ ಹೆಚ್ಚು ಅವಕಾಶವಾಗಲಿಲ್ಲ.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*1. Partha Mitter, *Art and Nationalism in Colonial India,* Occidental Orientations. 1850-1922.1994. p.29.
*2. Ibid.p.54
*3. Jahangir Fine Art Gallery, *Indian Sclupture today.* 1983. p.1.
*4. *Album of Men and Women of India,* 1906. p.104.
*5. *Indian Review,* June 1914. p.409.
*6. ಶೇಷಾದ್ರಿ ಐಯರ್ ನಮ್ಮ ಮೈಸೂರಿನ ಎರಡನೆ ದಿವಾನರು. See also *Manoranjan* 1904(part 51) p.447 (Marathi Monthly)
*7. Machanochie Evan, *Life in the Indian Civil service* 1926, p.165
*8. *Proccedings of the Government of His Highness Maharaja of Mysore* 1470-3/47147-12-2 dated 21-Feb-1913. See also letter to Sir.M. Visvesvaraya. Dewan of Mysore from Huzur Secretary P.Raghavendra Rao requesting him to sanction the amount . See also G.K.Mharte Correspondence, *MSA Files.*
*9. *Times of India.*7-9-1916
*10. Shanthiswarup, *5000 years of Arts & Crafts in India and Pakistan,* p.165.

ಕುಂ. ಬಾ. ಸದಾಶಿವಪ್ಪ*

# ಹರಪನಹಳ್ಳಿ ಶಿಕ್ಷಣ ಸಂಸ್ಥೆ ಮತ್ತು ಹಳೇ ವಿದ್ಯಾರ್ಥಿ ಸಂಘ

ಸುಮಾರು ೧೮೦೩ರಲ್ಲಿ ಜನರಲ್ ಹ್ಯಾರೀಸ್ ಮತ್ತು ದಿವಾನ್ ಪೂರ್ಣಯ್ಯ ಒಟ್ಟಿಗೆ ಹರಿಹರಕ್ಕೆ ಆಗಮಿಸಿ ಹರಪ್ಪನಹಳ್ಳಿ ಪಾಳೇಗಾರರ ಕೊನೆಯ ಸೋಮಶೇಖರನಾಯಕ ಮತ್ತು ದಿವಾನ್ ವಿರುಪಾಕ್ಷಪ್ಪ ಈರ್ವರನ್ನು ಹರಿಹರಕ್ಕೆ ಕರೆಯಸಿದರು. ಆನಂತರ ಸೋಮಶೇಖರನಾಯಕ ತನ್ನ ಸೇನೆಯನ್ನು ವಿಸರ್ಜಿಸಬೇಕು ಹಾಗೂ ಪಾಳೇಗಾರ ಮೈಸೂರಲ್ಲಿಯೇ ವಾಸಿಸಬೇಕು, ಎಂದು ಬ್ರಿಟಿಷರು ಶರತ್ತು ಹಾಕಿದರು. ಇದನ್ನು ಪಾಳೇಗಾರ ಒಪ್ಪಿಕೊಳ್ಳಲಿಲ್ಲ. ಆಗ ಪಾಳೇಗಾರ - ಅರಸಿಯರು ಮತ್ತು ದಿವಾನರನ್ನು ಬ್ರಿಟಿಷರು ಕರೆದೊಯ್ದು ಶ್ರೀರಂಗಪಟ್ಟಣದ ಸೆರೆಯಲ್ಲಿಟ್ಟರು. ಕ್ರಿ.ಶ.೧೮೨೫ ರಲ್ಲಿ ಅರಸ ಸೆರೆಮನೆಯಲ್ಲಿಯೇ ನಿಧನನಾದ. ನಾಲ್ಕು ಜನ ಮಡದಿಯರನ್ನು ಮತ್ತು ದಿವಾನನನ್ನು ಸೆರೆಯಿಂದ ಬಿಡುಗಡೆ ಮಾಡಿದರು. ಈ ಘಟನೆಯಿಂದ ಹರಪ್ಪನಹಳ್ಳಿ ರಾಜ್ಯದ ಜನರು ಬ್ರಿಟಿಷರ ಬಗ್ಗೆ ಕೋಪಗೊಂಡಿರುವರೆಂದು ಬ್ರಿಟಿಷರು ಗ್ರಹಿಸಿದರು. ಹರಪನಹಳ್ಳಿ ತಾಲ್ಲೂಕಿನ ಆಡಳಿತವನ್ನು ಬಿಗಿಗೊಳಿಸದೆ ಬ್ರಿಟಿಷರು ಕೆಲಕಾಲ ಅಲಕ್ಷಿಸಿದರು. ಕಳ್ಳರು - ದರೋಡೆಕೋರರು ಹರಪನ ಹಳ್ಳಿ ಪಟ್ಟಣಕ್ಕೆ ನುಗ್ಗಿ ಹಗಲೇ ಕೊಳ್ಳೆ ಹೊಡೆದರು. ಪ್ಲೇಗು ರೋಗ ತಲೆದೋರಿತು. ಬಹುಜನ ನಾಗರೀಕರು ಊರು ಬಿಟ್ಟು ಹೋದರು. ಉಳಿದವರು ಭೀತಿಯ ಕರಿನೆರಳಲ್ಲಿ ಬದುಕುತ್ತಿದ್ದರು. ಎಲ್ಲೆಲ್ಲೂ ಹಾಳು ಬಿದ್ದ ಅಲ್ಲೊಂದು ಇಲ್ಲೊಂದು ಮನೆ. ನಡು ನಡುವೆ ಬೀಳು ಜಾಗ. "ಹರಕ ಬರಕ ಹರಪನಹಳ್ಳಿ" ಎಂದು ಅನ್ಯ ಪ್ರದೇಶಗಳ ಜನರು ಕರೆದರು. ಸುಮಾರು ಕ್ರಿ. ಶ. ೧೮೪೦ ರಿಂದ ೧೮೭೫ರ ವರೆಗೂ ಹರಪನಹಳ್ಳಿ ಭಾಗದ ಆಡಳಿತ ಗೊಂದಲ ಸ್ಥಿತಿಯಲ್ಲಿದ್ದಿತು. ಊರಗೌಡ ಶ್ಯಾನುಭೋಗ, ಕೆಲ ಗಣ್ಯ ವ್ಯಕ್ತಿಗಳು ಬ್ರಿಟಿಷ್ ಅಧಿಕಾರಿಗಳಿಗೆ ನಿಷ್ಠರಾಗಿದ್ದರು. ಹರಪನಹಳ್ಳಿ ಮತ್ತು ಜಿಲ್ಲೆಯ ಪಶ್ಚಿಮ ಭಾಗದ ನಾಗರೀಕರನ್ನು ಆಕರ್ಷಿಸುವುದು, ಸಂತೋಷಗೊಳಿಸುವುದು, ಆಡಳಿತಕ್ಕೆ ಸಹಕಾರ ಪಡೆದು ಕಂದಾಯ ವಸೂಲಿ ಮಾಡುವುದು ಬ್ರಿಟಿಷರ ಉದ್ದೇಶ ವಾಗಿದ್ದಿತು.

ಹರಪನಹಳ್ಳಿಯಲ್ಲಿ ಅಯ್ಯಗಳ ಒಂದೆರಡು ಶಾಲೆಗಳು ದೇವಾಲಯಗಳಲ್ಲಿ ನಡೆಯುತ್ತಿದ್ದುವು. ರಾಮಾಯಣ, ಮಹಾ ಭಾರತ, ಸೋಮೇಶ್ವರ ಶತಕ, ಶಿವಭಕ್ತಿಸಾರ, ಪ್ರಭುಲಿಂಗಲೀಲೆ ಮತ್ತು ಮಗ್ಗಿಯನ್ನು ಮಕ್ಕಳಿಗೆ ಕಲಿಸುತ್ತಿದ್ದರು. ಹರಪನಹಳ್ಳಿ ಪಟ್ಟಣಕ್ಕೆ ಒಂದು ಸರಕಾರಿ ಶಾಲೆ ಬೇಕೆಂದು ಪಟ್ಟಣದ ಗೌಡ, ಶಾನುಭೋಗ ಮತ್ತು ಗಣ್ಯ ವ್ಯಕ್ತಿಗಳು ಆಲೋಚಿಸಿದರು. ಕ್ರೈಸ್ತ ಮಿಷನರಿಯವರು ಬಳ್ಳಾರಿಯಲ್ಲಿ ವಾರ್ಡಲಾ ಪ್ರಾಥಮಿಕ ಶಾಲೆಯೊಂದನ್ನು ತೆರೆದರು. ಇದನ್ನು ಅರಿತ ಹರಪನಹಳ್ಳಿಯವರು ಒಂದು ಮನವಿಯನ್ನು ಆಂಗ್ಲಭಾಷೆಯಲ್ಲಿ ಬರೆದು ಜಿಲ್ಲಾಧಿಕಾರಿಗಳಿಗೆ ಅರ್ಪಿಸಿದರು. ಕೆಲ ಕಾಲದ ಮೇಲೆ ಅಂದರೆ ಕ್ರಿ. ಶ. ೧೮೮೧ ರಲ್ಲಿ ಹರಪ್ಪನಹಳ್ಳಿ ಪಟ್ಟಣಕ್ಕೆ ಒಂದು ಪ್ರಾಥಮಿಕ ಶಾಲೆ ಮಂಜೂರಾಯಿತು. ಗುಡಿಕೇರಿಯಲ್ಲಿದ್ದ ಮಾಗಳದವರ ಮನೆಯಲ್ಲಿ ಮತ್ತೆ ಕೆಲಕಾಲ ವೀರಣ್ಣನ ಗುಡಿ ಬಯಲಿನ ಹೋಟೆಲು ಕೃಷ್ಣಪ್ಪನ ಮನೆಯಲ್ಲಿ ಶಾಲೆ ನಡೆಯಿತು. ಶ್ರೀ ವಿಠ್ಠಲ ಪಂತ ಎಂಬುವವರು ಮೊದಲು ಶಾಲೆಗೆ ಪ್ರಧಾನ ಗುರುಗಳಾಗಿ ಆಗಮಿಸಿದರು. ಅವರ ಮಡದಿಯೂ ಕೂಡಾ ಮಕ್ಕಳಿಗೆ ಪಾಠ ಹೇಳುತ್ತಿದ್ದರು. ದೊಡ್ಡ ತರಗತಿಗಳಿಗೆ ಪುಕ್ಕಟೆ ಪಾಠ ಹೇಳಲು ಪಟ್ಟಣದ ಕಲಿತವರು ಮುಂದಾದರು.

***ಶಾಲಾ ನಿವೇಶನ :*** ಈ ಕೆಳಗೆ ಹೆಸರಿಸಿದ ಪ್ರಮುಖರು ಹಲವು ಬಾರಿ ಕುಳಿತು ಚರ್ಚಿಸಿ ಸರ್ವೇ ನಂಬರು ೧೫೪-೧.೭೧ ಗ್ರಾಮನತ್ತ ಕಣಗಳು ಅವುಗಳಲ್ಲಿ ಕೆಲವರು ನಿರ್ಮಿಸಿದ ಗುಡಿಸಲುಗಳನ್ನು ತೆರವು ಮಾಡಿಸಿ ಅವರಿಗೆ ಬೇರೆ ಸ್ಥಳಗಳನ್ನು ಒದಗಿಸಿ ಶಾಲಾ ನಿವೇಶನ ಗೊತ್ತುಪಡಿಸಿದರು.

೧. ಅರಸು ಬಸವನಗೌಡ (ಊರ ಗೌಡ)
೨. ರಾಯಸಂ ತಿಮ್ಮಪ್ಪ (ಊರ ಶಾನುಭೋಗರು)
೩. ಇಜಾರಿ ಶಿರಸಪ್ಪ (ವಸುಪಾಲಪ್ಪನ ತಂದೆ)
೪. ಲಕ್ಕುಂಡಿ ರಾಘವೇಂದ್ರರಾವ್
೫. ಅರಳೀಕಟ್ಟೆ ಗುಂಡಾಚಾರ್
೬. ಕಟ್ಟೆ ವೆಂಕೋಬಾಚಾರ್ಯರು

***ಶಾಲಾ ಕಟ್ಟಡ:*** ಹೊಸಪೇಟೆ ಹೆಡ್ ಅಸಿಸ್ಟೆಂಟ್ ಕಲೆಕ್ಟರ್ ಡಬ್ಲ್ಯು.ಇ. ಜಾರ್ಡಿನ್ ಎಸ್‌ಕ್ವಾಯರ್, ಐ.ಸಿ.ಎಸ್. ಅವರು ೩೦ನೇ ಜೂನ್ ೧೮೯೧ ರಲ್ಲಿ ನೂತನ ಕಟ್ಟಡದ ಶಿಲಾನ್ಯಾಸ ನೆರವೇರಿಸಿದರು. ಅಲ್ಪ ಅವಧಿಯಲ್ಲಿ ಅಂದರೆ ಕ್ರಿಸ್ತಶಕ ೧೮೯೨ ರಲ್ಲಿಯೇ ಕಟ್ಟಡ ಪೂರ್ಣಗೊಂಡಿತು. ಕಟ್ಟಡದ ಸಂಪೂರ್ಣ ವೆಚ್ಚವನ್ನು ಸರಕಾರವೇ ತುಂಬಿತು. ಅದರ ಬಗ್ಗೆ ವಿವರಗಳಿಲ್ಲ. ಎರಡನೇ ಹಂತದ ಕಟ್ಟಡಕ್ಕೆ ಊರ ಪ್ರಮುಖರು ದೀರ್ಘ ಅವಧಿ ಶ್ರಮ ವಹಿಸಿ ಹಣ ಸಂಗ್ರಹಿಸಿ ಟ್ರಜರಿಯಲ್ಲಿಟ್ಟರೆಂದು ಹೇಳಲಾಗಿದೆ. ಬಳ್ಳಾರಿ ಜಿಲ್ಲಾ ಬೋರ್ಡ್‌ನವರು, ಊರವರು ಸಂಗ್ರಹಿಸಿದ ಮೊತ್ತಕ್ಕೆ ಇನ್ನಷ್ಟು ಸೇರಿಸಿ ಟೆಂಡರ್ ಮೂಲಕ ೪೦೦೦೦-೦೦

*ನಾರಯಣಭಟ್ಟರ ವಠಾರ ಹರಪ್ಪನಹಳ್ಳಿ, ದಾವಣಗೆರೆ ಜಿಲ್ಲೆ.



ಸರಕಾರಿ ಪದವಿ ಪೂರ್ವ ಕಾಲೇಜು, ಹರಪನಹಳ್ಳಿ.

ರೂಪಾಯಿಗಳಿಗೆ ಶ್ರೀ ಐ. ವಿ. ಮೊದಲಿಯಾರ್‌ಗೆ ಗುತ್ತಿಗೆ ಕೊಟ್ಟರು. ಶ್ರೀ ಸುಲಿವಾನ್ ಇಂಜಿನಿಯರ್, ಶ್ರೀ ಎ. ಎನ್. ರಾಮಚಂದ್ರ ಐಯ್ಯರ್‌ರ ಓವರ್ ಸೀಯರ್ ಆಗಿ ಕಾರ್ಯನಿರ್ವಹಿಸಿದರು. ೧೬-೬-೧೯೨೫ ರಲ್ಲಿ ಕಟ್ಟಡ ಪೂರ್ಣಗೊಂಡಿತು. ಆಗ ಶ್ರೀ ಗೋಪಾಲಸ್ವಾಮಿ ಮೊದಲಿಯಾರ್ ಅಧ್ಯಕ್ಷರು ಬಳ್ಳಾರಿ ಜಿಲ್ಲಾ ಬೋರ್ಡ್ ಅವರಿಂದ ಪ್ರಾರಂಭೋತ್ಸವ ನೆರವೇರಿತು.

*ಶಿಕ್ಷಣ ಸಂಸ್ಥೆಗೆ ಸಂಬಂಧಿಸಿದ ಜಮೀನು :* ಸರ್ವೆ ನಂ. ೧೫೪. ೧೨ ೧ ಇದರಲ್ಲಿ ಕಟ್ಟಡದ ಜಾಗ ಏಳು ಎಕರೆ ಹನ್ನೆರಡು ಸೆಂಟ್ಸ್ ಇದ್ದು ಅದರ ಪೈಕಿ ಒಂದು ಎಕರೆ ನಲವತ್ತೊಂದು ಸೆಂಟ್ಸ್ ಅನ್ಯರು ಒತ್ತುವರಿ ಮಾಡಿರುವರು. ಸರ್ವೆ ನಂಬರು ೫೩೯ಬಿ ಕೆಟ ಪರಂಬೋಕು ಜಾಗದಲ್ಲಿ ಸ್ಟೇಡಿಯಂಗಾಗಿ ಸ್ಥಳ ಒದಗಿಸಿದೆ. ಈಗಾಗಲೇ ಅಂದಾಜು ಹತ್ತು ಲಕ್ಷ ರೂಪಾಯಿ ಕಾಮಗಾರಿ ಮುಗಿದಿದೆ. ಈಗ ಹತ್ತು ಲಕ್ಷದಾ ಎಂಭತ್ತುಸಾವಿರ ರೂಪಾಯಿಗಳು ಕೇಂದ್ರ ಸರಕಾರದಿಂದ ಬಿಡುಗಡೆಯಾಗಿದೆ. ಉಳಿದ ಇಪ್ಪತ್ನಾಲ್ಕು ಲಕ್ಷದ ಐದುಸಾವಿರ ರೂಪಾಯಿಗಳು ಅನುದಾನ ಬಿಡುಗಡಿಯಾಗ ಬೇಕಾಗಿದೆ. ಒಟ್ಟು ಏಳು ಎಕರೆ ನಲವತ್ತೊಂದು ಸೆಂಟ್ಸ್ ಜಮೀನಿನಲ್ಲಿ ನಿರ್ಮಾಣಗೊಳ್ಳುವ ಈ ಸ್ಟೇಡಿಯಂ ೭೫೦ ಪ್ರೇಕ್ಷಕರಿಗೆ ಸ್ಥಳಾವಕಾಶ ಕಲ್ಪಿಸಿದೆ. ಭೂದಾನಕ್ಕೆ ದೊರೆತ ಹಾರಕನಾಳು, ಶೃಂಗಾರತೋಟಗಳ ಜಮೀನು ಅರವತ್ತಾರು ಎಕರೆ ರೈತರ ಸ್ವಾಧೀನದಲ್ಲಿದೆ. ಈ ಕಟ್ಟಡಕ್ಕೆ ಹೊಂದಿ ಹಲವು ಹೊಸ ಕಟ್ಟಡದ ಕೋಣೆಗಳು ಮೂರು ಹಂತದಲ್ಲಿ ಕಟ್ಟಲ್ಪಟ್ಟು ಸೇರ್ಪಡೆಯಾದುವು. ಈಗ ಒಟ್ಟು ನಲವತ್ತುನಾಲ್ಕು ಕೋಣೆಗಳು. ಚಿಕ್ಕ ಚಿಕ್ಕ ತೋಟಗಳು. ಎರಡು ಬಯಲು ರಂಗ ಮಂದಿರಗಳು, ವಿಜ್ಞಾನಮಂದಿರಗಳು ಇರುವುವು. ಕಟ್ಟಡ ಹರಪನಹಳ್ಳಿಯ ಮಧ್ಯದಲ್ಲಿದ್ದು ಚಾರಿಬಯಲಿಗೆ ಸಮೀಪ, ಕಂದಾಯ ಇಲಾಖೆಗೆ ಮುಂಭಾಗ, ಎಡಕ್ಕೆ ಆರಕ್ಷಕ ಠಾಣೆ, ಬಲಕ್ಕೆ ಹೂವಿನ ಅಡಗಲಿಗೆ ಹೋಗುವ ಸಾರ್ವಜನಿಕ ರಸ್ತೆಗೆ ಹೊಂದಿದೆ.

*ಸಂಸ್ಥೆಯ ಆಡಳಿತ:* ಶಾಲೆ ಲೋಯರ್ ಸೆಕೆಂಡರಿ ಓದುವ ವಿದ್ಯಾರ್ಥಿಗಳಿಗೆ ಪರೀಕ್ಷಾ ಕೇಂದ್ರವೂ ಆಯಿತು. ಕ್ರಿ.ಶ. ೧೮೮೯ ರಲ್ಲಿ ಪ್ರೌಢಶಾಲೆಯೂ ಆಯಿತು. ಆಗ ವೆಂಕಟರಾಮಯ್ಯನವರು ಮುಖ್ಯ ಗುರುಗಳಾಗಿ ನೇಮಕವಾದರು. ಪೂರ್ವದಲ್ಲಿ ಅವರು ಮದ್ರಾಸಿನ ಸಿ.ಎಸ್.ಎಂ. ಕಾಲೇಜಿನಲ್ಲಿ ಶಿಕ್ಷಕರಾಗಿ ಕೆಲಕಾಲ ಸೇವೆ ಸಲ್ಲಿಸಿದ್ದರು. ಇವರು ಒಬ್ಬ ದಕ್ಷ ಮತ್ತು ಸಮರ್ಥ ಆಡಳಿತಗಾರ. ಶಿಸ್ತು, ಶಾಂತಿ, ಶ್ರದ್ಧೆಗಳನ್ನು ಮೈಗೂಡಿಸಿಕೊಂಡವರು. ಕ್ರಿಸ್ತಶಕ ೧೮೮೯ ರಿಂದ ೧೯೨೭ರ ವರೆಗೆ ಅಂದರೆ ೩೮ ವರ್ಷಗಳ ದೀರ್ಘ ಕಾಲ ಸೇವೆ ಸಲ್ಲಿಸಿದರು. ೧೮೯೦ ರಲ್ಲಿ ಮೊದಲ ತಂಡದ ಮಕ್ಕಳು ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಕುಳಿತರು. ಡಿಸೆಂಬರ್ ೧೮೯೯ ರಲ್ಲಿ ಪ್ರೌಢಶಾಲೆ ಲೋಯರ್ ಸೆಕೆಂಡರಿ ಗ್ರೇಡ್‌ಗೆ ಇಳಿಯಿತು. ಶ್ರೀ ಇಜಾರಿ ಶಿರಸಪ್ಪ ವಸುಪಾಲಪ್ಪರ ತಂದೆ ಜಿಲ್ಲಾ ಬೋರ್ಡ್ ಸದಸ್ಯರು. ಬೂದಿಹಾಳ್ ಶ್ರೀ ಗೋಪಾಲಾಚಾರ್ಯರು ಪ್ರಸಿದ್ಧ ನ್ಯಾಯವಾದಿಗಳು. ಶಾಲಾ ತನಿಖಾಧಿಕಾರಿಗಳಾದ ಇ.ಮಾರ್ಸಡನ್ ಅವರ ಶ್ರಮ ಮತ್ತು ಸತತ ಪ್ರಯತ್ನಗಳ ಫಲವಾಗಿ ಪುನಃ ಈ ಸಂಸ್ಥೆ ಪ್ರೌಢಶಾಲೆ ಆಗಿ ಮೊದಲಿನಂತೆ ಉಳಿಯಿತು. ಕ್ರಿಸ್ತಶಕ ೧೯೦೨ ರಲ್ಲಿ ಶ್ರೀ ವಿ. ಎಸ್. ನರಸಿಂಹಾಚಾರ್ಯರು ಪ್ರಥಮ ಶ್ರೇಣಿಯಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮದ್ರಾಸು ಪ್ರಾಂತದಲ್ಲಿಯೇ ಹೆಚ್ಚು ಅಂಕಗಳಿಸಿದ ಹೆಗ್ಗಳಿಕೆಗೆ ಪಾತ್ರರಾದರು. ೧೯೩೪ರ ಏಪ್ರಿಲ್ ಸುಮಾರಿಗೆ ಮಹಾತ್ಮಾ ಗಾಂಧಿಯವರು ಗಂಗಾಧರರಾವ್ ದೇಶಪಾಂಡೆ, ಠಕ್ಕರ್ ಬಾಟಾರವರೊಂದಿಗೆ ಹರಿಜನೋದ್ಧಾರ ಕಾರ್ಯಕ್ಕಾಗಿ ಹಣ ಸಂಗ್ರಹಿಸಲು ದಾವಣಗೆರೆ ಯಿಂದ ಹರಪನಹಳ್ಳಿ ಮಾರ್ಗವಾಗಿ ಬಳ್ಳಾರಿ ಜಿಲ್ಲಾ ಸಂಚಾರ



ಕಾರ್ಯಕ್ರಮವನ್ನು ಆರಂಭಿಸಿದರು. ಅವರು ಸಂಜೆ ನಾಲ್ಕು ಗಂಟೆಗೆ ಹರಪನಹಳ್ಳಿಗೆ ಆಗಮಿಸಿದರು. ಗಾಂಧೀಜಿ ಪ್ರೌಢಶಾಲೆಯ ಒಂದು ಕೋಣೆಯಲ್ಲಿ ಇಳಿದಿದ್ದರು. ಶೆಟ್ಟರ ಚೂಡಪ್ಪನವರ ಖಾದಿ ಅಂಗಡಿಗೂ ಭೇಟಿ ಕೊಟ್ಟರು. "ಹಮ್ ಬನಿಯಾ ಹೈ ಪೈಸೆ ಲಾವ್" ಎಂದರು ಗಾಂಧೀಜಿ. ಆಗ ಚೂಡಪ್ಪ ಹತ್ತು ರೂಪಾಯಿ ಕೊಟ್ಟು ಕನ್ನಡದಲ್ಲಿ "ಗಾಂಧಿ" ಎಂಬ ಸಹಿ ಪಡೆದರು. ಗಾಂಧಿಯವರ ಕನ್ನಡ ಕೈಬರಹಕ್ಕೆ ಶಾಲೆಯಲ್ಲಿ ನೂರಾರು ರೂಪಾಯಿ ಸಂಗ್ರಹವಾಗಿದ್ದಿತು. ಹರಪ್ಪನಹಳ್ಳಿ ನೆಲ್ಲು ಕುದುರಿ ಗುರುಬಸಪ್ಪ, ವಸುಪಾಲಪ್ಪ ಇಜಾರಿ, ಇಜಂತಕರ್ ಶಂಕ್ರಪ್ಪ ಇವರು ಬೆಳ್ಳಿನಾಣ್ಯಗಳನ್ನು ಬೆಳ್ಳಿ ತಟ್ಟೆಯಲ್ಲಿಟ್ಟು ಗಾಂಧೀಜಿಗೆ ಅರ್ಪಿಸಿದರು. ಗಾಂಧೀಜಿ ತಟ್ಟೆ ಸಹಿತ ಹರಾಜು ಹಿಡಿದರು. ಹರಾಜಿನಲ್ಲಿ ಹಣ ಕೊಟ್ಟ ತಮ್ಮ ತಟ್ಟೆಗಳನ್ನು ತಾವೇ ಪಡೆದರು.

೧೯೫೮ ರಲ್ಲಿ ಆಚಾರ್ಯ ವಿನೋಬಾ ಭಾವೆಯವರು ಹರಪನಹಳ್ಳಿಗೆ ಪಾದಯಾತ್ರೆಯಲ್ಲಿ ಆಗಮಿಸಿದಾಗ ಇದೇ ಶಿಕ್ಷಣ ಸಂಸ್ಥೆಯ ಗಾಂಧಿ ಉಳಿದಿದ್ದ ಕೋಣೆಯಲ್ಲಿ ರಾತ್ರಿ ವಿಶ್ರಾಂತಿ ಪಡೆದರು. ಈಗಲೂ ಈ ಕೋಣೆಯಲ್ಲಿ ಯಾರೂ ಪಾದರಕ್ಷೆ ಧರಿಸಿ ಒಳಗೆ ಪ್ರವೇಶಿಸುವುದಿಲ್ಲ.

***ಶಿಕ್ಷಣ ಸಂಸ್ಥೆಯ ಹಳೇ ವಿದ್ಯಾರ್ಥಿ ಸಂಘದ ಚಟುವಟಿಕೆಗಳು :*** ಬಳ್ಳಾರಿ ರಾಘವಾಚಾರ್ಯರನ್ನು ಹರಪನಹಳ್ಳಿಗೆ ಕರೆಯಿಸಿ ಅವರ ನೇತೃತ್ವದಲ್ಲಿ ಅನೇಕ ನಾಟಕಗಳನ್ನು ಪ್ರದರ್ಶಿಸಿದರು. ಊರ ಬಹುಜನ ಹೆಚ್ಚು ಟಿಕೆಟ್ಟು ಪಡೆದರು. ಖರ್ಚು ಕಳೆದು ರೂ.೪೦೦-೦೦ ಸಂಗ್ರಹ ಆಯಿತು. ೧೯೧೨ ರಲ್ಲಿ ಹರಪನಹಳ್ಳಿಯಲ್ಲಿ ಬಡ ಹುಡುಗರ ನಿಧಿಯನ್ನು ಸ್ಥಾಪಿಸಿ ರಿಜಿಸ್ಟರ್ಡ್ ಮಾಡಿಸಿದರು. ದಂಡಿನ ರಾಮರಾವ್ ಅಧ್ಯಕ್ಷರು. ಕರೂರು ಸೇತುರಾವ್ ಕಾರ್ಯದರ್ಶಿಯಾಗಿದ್ದರು. ದಂಡಿನ ಶ್ರೀಪತಿರಾವ್, ದಂಡಿನ ರಾಘವೇಂದ್ರರಾವ್, ಅಗ್ನಿಹೋತ್ರಿ ನಾರಾಯಣಭಟ್ಟರು, ತಾಮ್ರಪರ್ಣಿ ಮೂರ್ತಾಜಾರ್ ಮೊದಲಾದವರು ಸದಸ್ಯರಾಗಿದ್ದರು. ಪುನಃ ನಾಟಕ ಆಡಿ ಸುಮಾರು ಏಳು ಸಾವಿರ ರೂಪಾಯಿಗಳನ್ನು ಸಂಗ್ರಹಿಸಿ ಹರಪನಹಳ್ಳಿಯ ವ್ಯವಸಾಯ ಸೇವಾ ಸಹಕಾರ ಸಂಘದಲ್ಲಿಟ್ಟರು. ಅದರ ಬಡ್ಡಿಯನ್ನು ಬಡ ವಿದ್ಯಾರ್ಥಿಗಳ ೧೦ನೇ ತರಗತಿ ಪರೀಕ್ಷಾ ಶುಲ್ಕ ಕಟ್ಟುತ್ತಿದ್ದರು. ನಂತರ ಈ ಹಣವನ್ನು ಶ್ರೀ ವೆಂಕಟರಮಣಸ್ವಾಮಿ ಪರ್ಮನೆಂಟ್ ಭಂಡಾರದಲ್ಲಿ ಜಮಾ ಮಾಡಿದರು. ಅದು ಈಗ ೨೫ ಸಾವಿರ ರೂಪಾಯಿಗಳಿಗೆ ಮುಟ್ಟಿದೆ. ಶ್ರೀ ವೆಂಕಟರಮಣಸ್ವಾಮಿ ಪರ್ಮನೆಂಟ್ ಭಂಡಾರ ಕಚೇರಿಯ ಲಾಭದಲ್ಲಿ ನೂರಕ್ಕೆ ಮೂರನ್ನು ಬಡ ಮಕ್ಕಳ ನಿಧಿಗೆ ಪ್ರತಿ ವರ್ಷ ಸೇರಿಸಿದರು. ಮಾಗಳದ ವೆಂಕೋಬರಾಯರು ೧೯೨೦ರಲ್ಲಿ ಪರ್ಮನೆಂಟ್ ಭಂಡಾರದ (ಇದನ್ನು ವಾಡಿಕೆಯಲ್ಲಿ ಫಂಡ್ ಆಫೀಸ್ ಎಂದು ಕರೆಯಲಾಗುತ್ತದೆ) ಕಚೇರಿಯ ಮೊದಲ ಅಧ್ಯಕ್ಷರಾಗಿದ್ದರು.

ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ೧೯೨೪ರ ಡಿಸೆಂಬರನಲ್ಲಿ ಮಹಾತ್ಮಾ ಗಾಂಧಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ನಡೆಯಿತು. ಆಗ ಹಳೇ ವಿದ್ಯಾರ್ಥಿ ಡಾ। ರಾಮರಾಯರ ನೇತೃತ್ವದಲ್ಲಿ ೨೦ ಜನ ಶಾಲೆಯ ಮಕ್ಕಳು ಸ್ವಯಂಸೇವಕರಾಗಿ ಸೇವೆ ಸಲ್ಲಿಸಿದರು. ಅದನ್ನು ಡಾ: ಹರ್ಡೀಕರ್ ಮಂಜಪ್ಪನವರು ಮನಸಾರೆ ಪ್ರಶಂಶಿಸಿದರು. ೧೯೩೫-೩೬ರಲ್ಲಿ ಬಿಹಾರದಲ್ಲಿ ಭೂಕಂಪ ಸಂಭವಿಸಿತು. ಸಂತ್ರಸ್ತರಿಗೆ ನೆರವು ನೀಡಲು ಒಂದು ಸಮಿತಿ ನೇಮಿಸಿದರು. ಅದರ ಅಧ್ಯಕ್ಷರಾಗಿ ಹಣ ಸಂಗ್ರಹಿಸಲು ಬಾಬು ರಾಜೇಂದ್ರ ಪ್ರಸಾದರು ಹರಪನಹಳ್ಳಿಗೆ ಆಗಮಿಸಿದ್ದರು. ಈ ಸಂಘದವರು ಅವರಿಗೆ ೭೦೦೦ ರೂಪಾಯಿಗಳು ಸಂಗ್ರಹಿಸಿಕೊಟ್ಟರು. ೧೯೦೨ ರಿಂದ ೧೯೩೨ರ ವರೆಗೆ ೧೩ಸಲ ಪಟ್ಟಣದಲ್ಲಿ ಪ್ಲೇಗು ಕಾಣಿಸಿತು. ಶ್ರೀ ವಸುಪಾಲಪ್ಪ ಮತ್ತು ಸಂಗಡಿಗರು ಖ್ಯಾತ ವೈದ್ಯರಿಂದ ಗಿಡಮೂಲಿಕೆ ಕಷಾಯ ಮಾಡಿಸಿ ಮನೆ ಮನೆಗಳಿಗೆ ತೆರಳಿ ರೋಗಿಗಳಿಗೆ ಕಷಾಯ ಕುಡಿಸಿದರು. ಮದ್ರಾಸ್ ಪಂಡಿತ ರಾಜಗೋಪಾಲಾಚಾರ್ಯರ ಔಷಧ ಪಾನಕವನ್ನು ತರಿಸಿ ಕುಡಿಸಿದರು. ೧೯೧೮-೧೯ರಲ್ಲಿ ಭಾರತದ ಬಹುಭಾಗದಲ್ಲಿ ಇನಫ್ಲೂಯೆನ್‌ಜಾ ಎಂಬ ರೋಗ ೩-೪ ತಿಂಗಳು ಹರಡಿತು. ಹರಪನಹಳ್ಳಿಗೂ ಹಬ್ಬಿತು. ಆಗ ಇವರು ವೈದ್ಯರಿಂದ ಹಂಡೆಗಟ್ಟಲೆ ಉತ್ತಮ ಕಷಾಯ ಔಷಧಿಯನ್ನು ತಯಾರಿಸಿ ಬಡವರಿಗೆ ಉಚಿತವಾಗಿ ವಿತರಿಸಿದರು. ಆ ಕಾಲದಲ್ಲಿ ಬಾವಿಯಲ್ಲಿ ಇಳಿದು ನೀರು ತುಂಬುವ ವ್ಯವಸ್ಥೆ ಇದ್ದುದರಿಂದ "ನಾರು ಹುಣ್ಣು" ರೋಗ ಪ್ರತಿ ಮನೆಗೂ ತಗಲಿತು. ಆಗ ಹಳೇ ವಿದ್ಯಾರ್ಥಿ ವಸುಪಾಲಪ್ಪ ಇಜಾರಿ ಇವರು ಪಟ್ಟಣ ಪಂಚಾಯಿತಿ ಅಧ್ಯಕ್ಷರಾಗಿ ಆಯ್ಕೆ ಆದರು. ಅವರು ಇಳಿದು ತುಂಬುವ ಬಾವಿಗಳನ್ನು ಸೇದುವ ಬಾವಿಗಳನ್ನಾಗಿ ಪರಿವರ್ತಿಸಿದರು. ಆಗ ನಾರು ಹುಣ್ಣು ಖಾಯಿಲೆ ಕಂಡು ಬರಲಿಲ್ಲ.

***ಮೂವತ್ತನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ:*** ಅಖಿಲ ಭಾರತ ಮೂವತ್ತನೇ ಕನ್ನಡ ಸಾಹಿತ್ಯ ಸಮ್ಮೇಳನ ಕ್ರಿಸ್ತ ಶಕ ೧೯೪೭ ಮೇ ೭,೮,೯ ಮೂರುದಿನಗಳ ಕಾಲ ಹರಪನ ಹಳ್ಳಿಯ ಇದೇ ಶಿಕ್ಷಣ ಸಂಸ್ಥೆಯಲ್ಲಿ ವಿಜೃಂಭಿಸಿತು. ಕ್ರೀಡಾಂಗಣ ದಲ್ಲಿ ಪೆಂಡಾಲು ಹಾಕಿ ಕೆಲ ಕೋಣೆಗಳಲ್ಲಿ ಪ್ರತಿನಿಧಿಗಳು ಕೆಲ ಕೋಣೆಗಳಲ್ಲಿ ಸಾಮಗ್ರಿಗಳನ್ನು ಸಂಗ್ರಹಿಸಿದ್ದರು. ಊಟ-ತಿಂಡಿ ಗೋಕರ್ಣೇಶ್ವರ ಗುಡಿ ಮುಂಭಾಗದ ಬಯಲಲ್ಲಿ ಏರ್ಪಡಿಸಿದ್ದರು. ಕುಡಿಯುವ ಸಿಹಿ ನೀರನ್ನು ಹರಿಹರ ನದಿಯಿಂದ ಟ್ಯಾಂಕರ್ ಮೂಲಕ ಒದಗಿಸಿದ್ದರು. ಸ್ವಲ್ಪ ಕಾಲದ ಹಿಂದೆ ನಿಧಾನರಾಗಿದ್ದ ಸಾಹಿತಿ ಶ್ರೀ ಟಿ.ಪಿ. ಕೈಲಾಸಂ ನೆನಪಿಗಾಗಿ ಸಮ್ಮೇಳನದ ಸಭಾಂಗಣಕ್ಕೆ "ಕೈಲಾಸಂ ನಗರ" ಎಂದು ಕರೆದಿದ್ದರು. ಆಗಿನ ಕಾಲದ ಮದ್ರಾಸು ರಾಜ್ಯದ ಸಚಿವರಾದ ಶ್ರೀ ಅತ್ತಾವರ ಬಾಲಕೃಷ್ಣಶೆಟ್ಟಿಯವರು ಸಮ್ಮೇಳನವನ್ನು ಉದ್ಘಾಟಿಸಿದರು. ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಸಮ್ಮೇಳನದ ಸರ್ವಾಧ್ಯಕ್ಷ

ರಾಗಿದ್ದರೆ ಸರ್ವಶ್ರೀ ಬೆಟಗೇರಿ ಕೃಷ್ಣಶರ್ಮ, ಸಿದ್ದಯ್ಯ ಪುರಾಣಿಕ, ಡಾ: ಎಂ. ಸಿ. ತುಮ್ಮಿನಕಟ್ಟೆ, ಪಾರ್ವತಿದೇವಿ ಕೇಸರಿ ಇತರ ಗೋಷ್ಠಿಗಳ ಅಧ್ಯಕ್ಷರಾಗಿದ್ದರು ಶಾಲೆಯ ಹಳೇ ವಿದ್ಯಾರ್ಥಿ ವಸುಪಾಲಪ್ಪಣಜಾರಿ ಅವರು ಸ್ವಾಗತ ಸಮಿತಿಯ ಅಧ್ಯಕ್ಷರು. ಈ ಸಂದರ್ಭದಲ್ಲಿ ಸಮ್ಮೇಳನದ ಕೊನೆಯ ದಿನ ೯-೫-೧೯೪೭ ರಂದು ಕಮಲಾದೇವಿ ಚಟ್ಟೋಪಾಧ್ಯಾಯರು ಮತ್ತು ಜಯಪ್ರಕಾಶ್ ನಾರಾಯಣರಾವ್ ಈರ್ವರೂ ಹೊಸಪೇಟೆಯಿಂದ ಹರಪನಹಳ್ಳಿ ಮೂಲಕ ಹರಿಹರಕ್ಕೆ ಪಯಣಿಸುತ್ತಲಿದ್ದರು. ಅದನ್ನು ಗೊತ್ತುಪಡಿಸಿ ಅವರನ್ನು ಮೆರವಣಿಗೆಯಲ್ಲಿ ಸಮ್ಮೇಳನ ಸಭಾಂಗಣಕ್ಕೆ ಕರೆತಂದು ಕೂಡಿಸಿದರು. ಅವರು ಅಲ್ಪಕಾಲ ಕಾರ್ಯಕ್ರಮ ವೀಕ್ಷಿಸಿ ಹೊರಟು ಹೋದರು.

*ಕರ್ನಾಟಕ ಏಕೀಕರಣಸಮಯ:* ಸುಮಾರು ೧೯೫೪ರಲ್ಲಿ ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ (ಅ.ಕ.ರಾ.ನಿ) ಪರಿಷತ್ತಿನ ದ್ವಿತೀಯ ಸಮ್ಮೇಳನ ಹಂಪೆಯಲ್ಲಿ ನಡೆಯಿತು. ಅದಕ್ಕೆ ಅಳವಂಡಿ ಶಿವಮೂರ್ತಿಸ್ವಾಮಿಗಳು ಅಧ್ಯಕ್ಷರಾಗಿದ್ದರು. ಈ ಶಿಕ್ಷಣ ಸಂಸ್ಥೆಯಿಂದ ಐವತ್ತು ಸ್ವಯಂ ಸೇವಕ ವಿದ್ಯಾರ್ಥಿಗಳು; ವಿದ್ಯಾರ್ಥಿ ಕುಂ. ಬಾ. ಸದಾಶಿವಪ್ಪ ಅವರ ನೇತೃತ್ವದಲ್ಲಿ ಅಧಿವೇಶನಕ್ಕೆ ಹೋಗಿ ಎರಡು ದಿನಗಳ ಕಾಲ ಸೇವೆ ಸಲ್ಲಿಸಿ ಬಂದರು.

*ವೀರಶೈವ ವಿದ್ಯಾರ್ಥಿ ನಿಲಯ :* ೧೯೩೭ರಲ್ಲಿ ಹ: ಪನಹಳ್ಳಿ ಗೋಸಾಯಿ ಗುಡ್ಡದ ಬದಿಯಲ್ಲಿ ವೀರಶೈವ ಹಾಸ್ಟೆಲ್ ಒಂದು ಸ್ಥಾಪನೆ ಆಯಿತು. ಅದರ ಉದ್ಘಾಟನೆ ಎಸ್.ಸಿ. ನಂದಿ ಮಠರಿಂದ ಆಯಿತು. ಚೌಕಾಕಾರದ ಕಟ್ಟಡ, ಸುತ್ತಲೂ ಕೋಣೆಗಳು ಪ್ರತಿಯೊಂದು ಕೋಣೆಯಲ್ಲಿ ನಾಲ್ಕು ಮಕ್ಕಳು ವಾಸಿಸುತ್ತಿದ್ದರು. ಕೋಣೆಗಳು ೧೭ ಸೆಂಟ್ರಲ್ ಹಾಲ್ ಸೇರಿ. ಪಕ್ಕದಲ್ಲಿ ಒಂದು ಬಾವಿ. ಅದರ ಸ್ಥಾಪನೆ ೧೯೩೭ರಲ್ಲಿ ಅದರ ಪಕ್ಕದಲ್ಲಿ ಸ್ನಾನದ ಕೋಣೆ. ಊಟದ ದೊಡ್ಡ ಹಾಲ್, ಅಡಿಗೆ ಮನೆ, ಸಾಮಾನು ಇರಿಸುವ ಕೋಣೆ. ಮುಂದೆ ಆಟದ ಬಯಲು. ಈ ಕೋಣೆಗಳನ್ನು ಬೇರೆ ಬೇರೆ ತಾಲ್ಲೂಕುಗಳ ಶ್ರೀಮಂತ ದಾನಿಗಳು ನಿರ್ಮಿಸಿ ಕೊಟ್ಟಿದ್ದರು. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸೊಂಡೂರು ಕೂಡ್ಲಿಗಿ, ಹಡಗಲಿ ತಾಲ್ಲೂಕುಗಳ ಮಕ್ಕಳು ಹರಪನಹಳ್ಳಿಯಲ್ಲಿ ಪ್ರೌಢಶಾಲಾ ವಿದ್ಯಾಭ್ಯಾಸ ಮಾಡಬೇಕಿದ್ದಿತು. ವರ್ಷಕ್ಕೆ ಒಂದು ಮಗು ಒಂದು ಚೀಲ ಜೋಳ ಕೊಟ್ಟು ಪ್ರತಿ ತಿಂಗಳು ಬಂದ ಖರ್ಚನ್ನು ಎಲ್ಲಾ ಮಕ್ಕಳು ಸಮನಾಗಿ ಹಂಚಿ ಕೊಳ್ಳುತ್ತಿದ್ದರು. ಇದರ ಆಡಳಿತ ಮಕ್ಕಳೇ ನಡೆಸುತ್ತಿದ್ದರು. ಅಡಿಗೆ ಆಳುಗಳು, ಜವಾನರು ಇದ್ದರು. ಇದನ್ನು ನೋಡಿ ಕೊಳ್ಳಲು ಪ್ರೌಢಶಾಲೆಯ ಒಬ್ಬ ಶಿಕ್ಷಕ ವಾರ್ಡನ್ ಆಗಿ ನೇಮಕವಾಗುತ್ತಿದ್ದರು. ಇದಕ್ಕೆ ಮೇಲ್ವಿಚಾರಕ ಸಮಿತಿ ಇದ್ದಿತು. ಹಾಸ್ಟೆಲ್ಲಿನ ಮಕ್ಕಳು ಇದೇ ಪ್ರೌಢಶಾಲೆಯಲ್ಲಿ ಅಧ್ಯಯನ ಮಾಡುತ್ತಿದ್ದರು. ಸಮಿತಿಗೆ ಟಿ.ಹೆಚ್.ಎಂ. ಪಂಚಾಕ್ಷರಯ್ಯ ಮತ್ತು ಗಂಗಾಧರಯ್ಯನವರು ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಇವರು ಪ್ರೌಢಶಾಲೆಯ ಹಳೇ ವಿದ್ಯಾರ್ಥಿಗಳು. ಹೆಸರು ವೀರಶೈವ ಎಂದಿದ್ದರೂ ಎಲ್ಲಾ ಜಾತಿಗೆ ಸೇರಿದ ಮಕ್ಕಳು ಈ ಹಾಸ್ಟೆಲ್‌ನಲ್ಲಿ ವಾಸಿಸಲು ಮುಕ್ತ ಅವಕಾಶವಿದ್ದಿತು. ಈ ಹಾಸ್ಟಲ್ ಸ್ಥಾಪನೆಗೆ ಹರಪನಹಳ್ಳಿ ಹುಜೂರು ಶಿರಸ್ತೇದಾರ ಜೋಗಪ್ಪ, ಉಪ ನೋಂದಣಾಧಿಕಾರಿ ಕರಿವೀರಪ್ಪ, ಬಳ್ಳಾರಿ ತೊಗರಿ ವೀರಪ್ಪ ಪ್ರಮುಖರಾಗಿದ್ದರು. ಪ್ರೌಢಶಾಲೆಯ ಸಂಖ್ಯಾಬಲಕ್ಕೆ ಹಾಸ್ಟೆಲ್ ಮಕ್ಕಳೇ ಕಾರಣರು.

*ಶತಮಾನೋತ್ಸವ ಆಚರಣೆ :* ಈ ಶಿಕ್ಷಣ ಸಂಸ್ಥೆ ಕ್ರಿಸ್ತ ಶಕ ೧೮೮೧ ರಿಂದ ೧೮೮೮ರ ವರೆಗೆ ಪ್ರಾಥಮಿಕ ಶಾಲೆ; ೧೮೮೯ ರಿಂದ ಪ್ರೌಢಶಾಲೆ; ೧೯೫೮ ವರೆಗೆ ವಿವಿಧೋದ್ದೇಶ ಪ್ರೌಢಶಾಲೆ; ೧೯೭೨-೭೩ರಲ್ಲಿ ಸಂಯುಕ್ತ ಪದವಿಪೂರ್ವ ಕಾಲೇಜು. ಸಂಸ್ಥೆಯ ಶಾಲಾ ಸುಧಾರಣಾ ಸಮಿತಿಗೆ ಈ ತಾಲ್ಲೂಕಿನ ಶಾಸಕರೇ ಅಧ್ಯಕ್ಷರು. ಹರಪನಹಳ್ಳಿಯಲ್ಲಿ ಈಗ ಶಿಕ್ಷಣ ಸಂಸ್ಥೆಗಳು ಬೀದಿಗೊಂದು ಕಂಡುಬರುವುವು. ಯಾವ ಕಾರಣಕ್ಕೊ ಏನೋ ಕ್ರಿಸ್ತ ಶಕ ೧೯೭೦ರಲ್ಲಿ ಈ ಸಂಸ್ಥೆಯಲ್ಲಿದ್ದ ಪಿ.ಯು.ಸಿ. ತರಗತಿಯನ್ನು ಪಿ.ಯು.ಸಿ. ಮಂಡಳಿ ರದ್ದುಪಡಿಸಿ ಆಜ್ಞೆ ಹೊರಡಿಸಿತು. ಆಗ ಹರಪನಹಳ್ಳಿಯ ಹಿರಿಯ ನ್ಯಾಯವಾದಿ ಎಂ. ಪದ್ಮರಾಜಪ್ಪ; ಶಾಸ್ತ್ರಿ ಹಾಷಂಸಾಹೇಬರು; ಗೊಂಗಡಿ ವೀರಭದ್ರಪ್ಪ, ಇಜಂತಕರ್ ನಾರಾಯಣರಾವ್ ಮತ್ತು ಹರಪನಹಳ್ಳಿ ಶಾಸಕ ಡಿ. ನಾರಾಯಣ ದಾಸ್ ಇವರು ಪಿ.ಯು.ಸಿ. ಬೋರ್ಡ್ ಅಧ್ಯಕ್ಷರನ್ನು ಕಂಡು ಈ ಸಂಸ್ಥೆಯ ಭವ್ಯ ಪರಂಪರೆಯನ್ನು ತಿಳಿಸಿ ಮನವಿ ಸಲ್ಲಿಸಿದರು. ಆಗ ಪುನಃ ಪಿ.ಯು.ಸಿ. ತರಗತಿ ಮೊದಲಿನಂತೆ ಇದರಲ್ಲಿ ಉಳಿಯಿತು. ಇದು ಸಂಸ್ಥೆಗೆ ತಗುಲಿದ ಎರಡನೆ ಕುತ್ತು.

ಹರಪನಹಳ್ಳಿಯಲ್ಲಿ ಯಾವ ದೊಡ್ಡ ಸಭೆ, ಸಮಾರಂಭ ನಡೆದರೂ ಅದು ಈ ಸಂಸ್ಥೆಯ ಕ್ರೀಡಾ ಮೈದಾನದಲ್ಲೇ ನಡೆಯುತ್ತದೆ. ಸಂಸ್ಥೆಗೆ ಈವರೆಗೆ ಸೇವೆ ಸಲ್ಲಿಸಿದ ಮುಖ್ಯ ಗುರುಗಳು ಮತ್ತು ಪ್ರಾಚಾರ್ಯರ ಸಂಖ್ಯೆ ೨೬. ದಿನಾಂಕ ೪-೫-೧೯೯೭ ರಂದು ಶತಮಾನೋತ್ಸವವನ್ನು ಊರವರು ಆಚರಿಸಿದರು. ಆಗ ಕರ್ನಾಟಕದ ಮುಖ್ಯ ಮಂತ್ರಿಗಳಾಗಿದ್ದ ಶ್ರೀ.ಜೆ.ಹಚ್.ಪಟೇಲರು ಉದ್ಘಾಟನೆ ನೆರವೇರಿಸಿದರು.

ಹಿಂದೆ ಬಳ್ಳಾರಿ ಜಿಲ್ಲೆಗೆ ೧೧ ತಾಲ್ಲೂಕುಗಳಿದ್ದುವು. ಅವುಗಳಲ್ಲಿ ಆದೋನಿ ಮತ್ತು ಹೊಸಪೇಟೆಗಳು ಎರಡು ದೊಡ್ಡ ಪಟ್ಟಣಗಳು. ಅವು ಬಹುಕಾಲ ಕೇವಲ ಪ್ರಾಥಮಿಕ ಶಾಲೆಗಳಿಗೆ ತೃಪ್ತಿಹೊಂದಿದ್ದವು. ಒಂದು ಬಾರಿ ಮದ್ರಾಸ್ ಮಂತ್ರಿ ರಮಣಿ ಮೆನನ್ ಎಂಬುವವರು ಹರಪನಹಳ್ಳಿಗೆ ಆಗಮಿಸಿದ್ದರು. ಅವರು ಹೇಳಿದ ಮಾತು ಹೀಗಿದೆ. "Harapanahalli is the Oxford of Bellary District". ಈ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ ಬಹುಜನ ಮುಖ್ಯ ಗುರುಗಳು ಮತ್ತು ಸಹ ಶಿಕ್ಷಕರು ಮದ್ರಾಸ್ ನಲ್ಲಿಯೇ ಪದವಿ ಪಡೆದವರು. ೧೯೨೪ರ ವರೆಗೂ ತೆಲುಗು

ಭಾಷೆಯಲ್ಲಿ ಬೋಧನೆ ನಡೆಯಿತು. ಮಕ್ಕಳು ಕಡ್ಡಾಯವಾಗಿ ಖಾದಿ ಟೋಪಿ ಧರಿಸಬೇಕಾಗಿದ್ದಿತು. ಈ ಸಂಸ್ಥೆಯಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳು ಪ್ರತಿಭಾವಂತ ವೈದ್ಯ, ಶಿಕ್ಷಕ, ಇಂಜಿನಿಯರ್, ವಿಜ್ಞಾನಿ, ಸ್ವಾತಂತ್ರ್ಯ ಯೋಧ, ಕವಿ, ಕಲಾವಿದ, ಶ್ರೇಷ್ಠ ರಾಜಕಾರಣಿಗಳಾಗಿ ದೇಶ ವಿದೇಶಗಳಲ್ಲಿ ಕಂಡು ಬಂದರೂ ಅವರು ನಿಃಸ್ವಾರ್ಥ ಸಮಾಜ ಸೇವಕರಾಗಿದ್ದರು.



**ಶಿಕ್ಷಣ ಸಂಸ್ಥೆಯ ಪ್ರಧಾನ ಗುರುಗಳು - ಪ್ರಾಚಾರ್ಯರು**

ಸರ್ವಶ್ರೀ

| | | |
|---|---|---|
| ೧. | ವಿಠ್ಠಲ ಪಂತರು (ಪ್ರಾಥಮಿಕ ಶಾಲೆ) | ೧೮೮೧ ರಿಂದ ೮೮ರ ವರೆಗೆ |
| ೨. | ವೆಂಕಟರಾಮಯ್ಯ (ಪ್ರೌಢಶಾಲೆ) | ೧೮೮೯ ರಿಂದ ೧೯೨೭ರ ವರೆಗೆ |
| ೩. | ಕುಲಶೇಖರಂ ಪಿಳ್ಳೈ | ೧೯೨೭ ರಿಂದ ೧೯೩೬ರ ವರೆಗೆ |
| ೪. | ಸುಂದರಂ ಐಯ್ಯರ್ | ೧೯೩೭ ರಿಂದ ೧೯೩೮ರ ವರೆಗೆ |
| ೫. | ಬಿ.ತಿರಮಲರಾವ್ | ೧೯೩೮ ರಿಂದ ೧೯೪೦ರ ವರೆಗೆ |
| ೬. | ಎ. ವೆಂಕೋಬರಾವ್ | ೧೯೪೧ ರಿಂದ ೧೯೫೩ರ ವರೆಗ |
| ೭. | ಹೆಚ್. ಕೃಷ್ಣಚಾರ್ | ೧೯೫೩ ರಿಂದ ೧೯೫೬ರ ವರೆಗೆ |
| ೮. | ಅನಂತರಾಮಯ್ಯ | ೧೯೫೭ ರಿಂದ ೧೯೫೮ರ ವರೆಗೆ |
| ೯. | ವಿಠ್ಠಲಾಚಾರ್ಯ | ೧೯೫೮ ರಿಂದ ೧೯೬೦ರ ವರೆಗೆ |
| ೧೦. | ಅಬ್ದುಲ್ ಮುಜೀಬ್ | ೧೯೬೧ ರಿಂದ ೧೯೬೩ರ ವರೆಗೆ |
| ೧೧. | ಎ. ಆರ್. ದೇಸಾಯಿ | ೧೯೬೪ ರಿಂದ ೧೯೬೬ರ ವರೆಗೆ |
| ೧೨. | ಎಸ್. ಗೋವಿಂದಸ್ವಾಮಿ | ೧೯೬೬ ರಿಂದ ೧೯೬೮ರ ವರೆಗೆ |
| ೧೩. | ಆರ್.ಜಿ.ಲಕ್ಷ್ಮೇಶ್ವರ | ೧೯೬೮ ರಿಂದ ೧೯೭೧ರ ವರೆಗೆ |
| ೧೪. | ಪಿ. ಕೊಟ್ರಬಸಪ್ಪ | ೧೯೭೧ ರಿಂದ ೧೯೭೨ರ ವರೆಗೆ |
| ೧೫. | ಎಸ್. ಕೇಶವಾಚಾರ್ಯ | ೧೯೭೨ ರಿಂದ ೧೯೭೩ರ ವರೆಗೆ |
| ೧೬. | ವಿ. ಸಿ. ಕುಲಕರ್ಣಿ (ಕಿ. ಕಾಲೇಜು) | ೧೯೭೩ ರಿಂದ ೧೯೭೪ರ ವರೆಗೆ |
| ೧೭. | ಆರ್. ಸಿ. ಕುಲಕರ್ಣಿ | ೧೯೭೪ ರಿಂದ ೧೯೭೫ರ ವರೆಗೆ |
| ೧೮. | ಎಂ. ಹೇಮಪ್ಪ | ೧೯೭೫ ರಿಂದ ೧೯೮೧ರ ವರೆಗೆ |
| ೧೯. | ಹೆಚ್. ಜಿ. ಮಹಾಬಲೇಶ್ವರ | ೧೯೮೧ ರಿಂದ ೧೯೮೪ರ ವರೆಗೆ |
| ೨೦. | ಹೆಚ್. ವೀರಭದ್ರಪ್ಪ | ೧೯೮೪ ರಿಂದ ೧೯೮೫ರ ವರೆಗೆ |
| ೨೧. | ಮಾರುತಿರಾವ್ ಸುರ್ವೆ | ೧೯೮೫ ರಿಂದ ೧೯೮೬ರ ವರೆಗೆ |
| ೨೨. | ಹೆಚ್. ವೀರಭದ್ರಪ್ಪ | ೧೯೮೬ ರಿಂದ ೧೯೯೩ರ ವರೆಗೆ |
| ೨೩. | ಜಿ. ಬಸವಂತಪ್ಪ | ೧೯೯೩ ರಿಂದ ೧೯೯೫ರ ವರೆಗೆ |
| ೨೪. | ವೈ. ವಿರೂಪಾಕ್ಷಪ್ಪ | ೧೯೯೫ ರಿಂದ ೧೯೯೮ರ ವರೆಗೆ |
| ೨೫. | ಡಿ. ದುಷ್ಯಂತಗೌಡ | ೧೯೯೮ - |
| ೨೬. | ಜಿ. ಬಸವಂತಪ್ಪ | ೧೯೯೮ ರಿಂದ ೨೦೦೦ರ ವರೆಗೆ |

**ಪ್ರೌಢಶಾಲೆಯ ಹಳೆಯ ವಿದ್ಯಾರ್ಥಿ ಸಂಘದ ಪ್ರಥಮ ಅವಧಿಯ ಪ್ರಮುಖ ಸದಸ್ಯರು**

೧. ವೈ. ಜಯಂತಪ್ಪ ಇಜಾರಿ
೨. ವಸುಪಾಲಪ್ಪ ಇಜಾರಿ
೩. ಬೂದಿಹಾಳ ಮಾಧವಾಚಾರ್
೪. ತಟ್ಟಿ ಕೃಷ್ಣರಾವ್
೫. ಬಿದಿರಹಳ್ಳಿ ತಿರುವಲರಾವ್
೬. ಕನಕಾಪುರ ಗುರುರಾಜರಾವ್

**ಎರಡನೇ ಅವಧಿಯ ಪ್ರಮುಖ ಸದಸ್ಯರು**

೧. ಇಜಾರಿ ಶಿರಸಪ್ಪ
೨. ಟಿ. ಬಿ. ಕೇಶವರಾವ್
೩. ಟಿ. ಹೆಚ್. ಎಂ. ಪಂಚಾಕ್ಷರಯ್ಯ
೪. ಶೆಟ್ಟರ ಚೂಡಪ್ಪ
೫. ದಂಡಿನ ರಾಮರಾವ್
೬. ಕಟ್ಟಿ ಸೇತೂರಾಮಾಚಾರ್
೭. ಲಕ್ಕುಂಡಿ ಶಾಮರಾವ್
೮. ಬಣಕಾರ ಹೊನ್ನಪ್ಪ
೯. ಅಗ್ನಿಹೋತ್ರಿ ನಾರಾಯಣಭಟ್ಟರು
೧೦. ಮುದುಗಲ್ ನಾಗಪ್ಪ
೧೧. ಸತ್ಯನಾರಾಯಣರಾವ್ ಇಜಂತಕರ್
೧೨. ಪಾಟೀಲ್ ಸಿದ್ಧನಗೌಡ್ರು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಶಿಕ್ಷಣ ಸಂಸ್ಥೆಯ ಭಾವಚಿತ್ರ.
*೨. ಕಟ್ಟಡ ಶಿಲಾನ್ಯಾಸ ಶಿಲ್ಪಗಳ ಚಿತ್ರ.
*೩. ಗೋಲ್ಡನ್ ಜ್ಯುಬಿಲಿ ೧೯೩೯ರ ವರದಿ.
*೪. ೩೦ನೇ ಕನ್ನಡ ಸಾಹಿತ್ಯ ಪರಿಷತ್ ಕಾರ್ಯಕ್ರಮ ಪಟ್ಟಿ-ವರದಿ.
*೫. ೧೯೭೪-೭೫ರ ಕಾಲೇಜು ಕ್ಯಾಲೆಂಡರ್.
*೬. ಪ್ರಥಮ ಪ್ರಧಾನ ಗುರುಗಳ ಭಾವಚಿತ್ರ.
*೭. ಗಾಂಧಿ - ವಿನೋಬಾ ಭಾವೆಯವರು ಉಳಿದುಕೊಂಡಿದ್ದ ಕೋಣೆಯ ಚಿತ್ರ.
*೮. ಇಜಾರಿ ವಸುಪಾಲಪ್ಪ ಹಳೇ ವಿದ್ಯಾರ್ಥಿ ಬಗ್ಗೆ ಪುಸ್ತಕ- ಟಿ.ಬಿ.ಕೇಶವರಾವ್.
*೯. ಸ್ವಾತಂತ್ರ್ಯ ಹೋರಾಟಗಾರರ ಪುಸ್ತಕ- ಹೆಚ್. ಎಂ. ವೀರಭದ್ರಯ್ಯ.
*೧೦. ವಯೋವೃದ್ಧರ ಹೇಳಿಕೆಗಳು.
*೧೧. ಹರಪನಹಳ್ಳಿ ಪಾಳೆಯಗಾರರು- ಪುಸ್ತಕ-ಕುಂಬಾಸ.

ಲಕ್ಷ್ಮೀದೇವಿ ಎಸ್. ವಿ. ಉಡುಪ*

# ಮೈಸೂರು ರಾಜ್ಯದಲ್ಲಿ ಕೃಷಿ ಬ್ಯಾಂಕುಗಳ ಪಾತ್ರ

ಭಾರತದಂತಹ ಕೃಷಿ ರಾಷ್ಟ್ರಗಳಲ್ಲಿ ರೈತರು ಈ ಹಿಂದೆ ತಮ್ಮ ಉಪಭೋಗದ ಉದ್ದೇಶಕ್ಕಾಗಿ ಗ್ರಾಮೀಣ ಸಾಹುಕಾರರಿಂದಲೂ, ನಂತರ ಲೇವಾದೇವಿ ವ್ಯವಹಾರಗಾರರಲ್ಲಿ ಕೈಗಡ ಸಾಲವನ್ನು ಅತ್ಯಧಿಕ ಬಡ್ಡಿ ದರದಲ್ಲಿ ಪಡೆಯುತ್ತಿದ್ದರು. ಇಲ್ಲಿಯೂ ರೈತರ ಶೋಷಣೆ ನಡೆದದ್ದರಿಂದ ಇದು ಅಂತಿಮವಾಗಿ ಗ್ರಾಮೀಣ ಋಣಕ್ಕೆ (Rural Indebtedness) ಈಡು ಮಾಡಿಕೊಡುತ್ತಿತ್ತು. ಹಣದ ಲೇವಾದೇವಿ, ಆ ವ್ಯವಹಾರದಲ್ಲಿ ನಿರತರಾದವರಿಗೆ ಅತ್ಯಧಿಕ ಆದಾಯವನ್ನು ಭೂಮಿಯನ್ನು ತಂದುಕೊಡುತ್ತಿತ್ತು. ಕೆಲವೊಮ್ಮೆ ಆಸ್ತಿಯನ್ನು ಕಳೆದುಕೊಂಡಂತಹ ಕೃಷಿವರ್ಗ, ಲೇವಾದೇವಿ ವ್ಯವಹಾರಗಾರರ ವಿರುದ್ಧ ದಾಂಧಲೆಯನ್ನು ಮಾಡಿದ ದೃಷ್ಟಾಂತ ೧೮೭೫ರಲ್ಲಿ ಪೂನಾ ಮತ್ತು ಅಹಮದ್‌ನಗರ (Bombay Presidency)ಗಳಲ್ಲಿ ಸಿಗುತ್ತದೆ.

೧೮೭೯ರಲ್ಲಿ Deccan Agricultarist Relief Act ಬಂದಾಗ್ಯೂ ಲೇವಾದೇವಿ ವ್ಯವಹಾರಗಾರರಿಂದ ತೊಂದರೆ ತಪ್ಪಲಿಲ್ಲ. ಈ ನಿಟ್ಟಿನಲ್ಲಿ ನಮ್ಮ ಮೈಸೂರು ರಾಜ್ಯ, ರೈತರಿಗೆ ಆಗುತ್ತಿದ್ದಂತಹ ಶೋಷಣೆಯನ್ನು ತಪ್ಪಿಸಲು ಕೃಷಿ ಬ್ಯಾಂಕುಗಳು ಸ್ಥಾಪನೆಗೆ ಅನುವು ಮಾಡಿಕೊಟ್ಟಿತು. ೧೯೦೪ರ ಸಹಕಾರಿ ಸಂಘಗಳ ಕಾಯಿದೆ ಮತ್ತು ೧೯೦೫ರ ಮೈಸೂರು ಸಹಕಾರಿ ಸಂಘಗಳ ಕಾಯಿದೆಗಳಿಗೆ ಮೊದಲೇ ಮೈಸೂರಿನಲ್ಲಿ ಸಹಕಾರಿ ತತ್ವಗಳ ಆಧಾರಗಳ ಮೇಲೆ ಕೃಷಿ ಬ್ಯಾಂಕುಗಳು ರೂಪುಗೊಂಡಿದ್ದವು. ಈ ರೀತಿಯ ಕೃಷಿ ಬ್ಯಾಂಕುಗಳನ್ನು ಯೋಜಿಸಿ ಮತ್ತು ರಚಿಸಿ ಮಾಡಿದ ಕೀರ್ತಿ ಮೈಸೂರಿನ ದಿವಾನರಾದಂತಹ ಶ್ರೀ ಕೆ. ಶೇಷಾದ್ರಿ ಅಯ್ಯರ್‌ರವರಿಗೆ ಸಲ್ಲುತ್ತದೆ. ೧೮೯೪ರ ದಸರಾ ಪ್ರತಿನಿಧಿ ಸಭೆಯಲ್ಲಿ ಅವರು ಇದರ ರೂಪುರೇಖೆಗಳನ್ನು ರಚಿಸಿದ್ದು, ರಾಜಕೀಯ ಅರ್ಥಶಾಸ್ತ್ರದಲ್ಲಿ ಪರಿಣಿತ ಹೊಂದಿದ ಅನೇಕ ಯೂರೋಪಿಯನ್ ಅಧ್ಯಾಪಕರುಗಳ(ವಿದ್ವಾಂಸರ) ಹುಬ್ಬೇರಿಸಿದ್ದು ಉಂಟು.

ಕೃಷಿ ಬ್ಯಾಂಕುಗಳು ಭೂಮಾಲೀಕರ ಸಂಘಗಳಂತಿದ್ದು, ಸಹಕಾರಿ ತತ್ವಗಳ ಮೇಲೆ ರೂಪುಗೊಂಡಿದ್ದು, ಹಣ ಸಹಾಯ ಮಾಡುವ ಉದ್ದೇಶವಿಟ್ಟುಕೊಂಡಿದ್ದವು. ಈ ಕೃಷಿ ಬ್ಯಾಂಕುಗಳ ಧ್ಯೇಯೊದ್ದೇಶ, ಅಗ್ಗ ಸಾಲದ ಸಾಮನ್ಯ ಲಾಭ ಮತ್ತು divisible Profit ಭಾಜ್ಯ ಆದಾಯ ಪಡೆಯುವುದಾಗಿತ್ತು. ಈ ಬ್ಯಾಂಕುಗಳು ಸರ್ಕಾರದಿಂದ ಎರವನ್ನು ಪಡೆದು ತಮ್ಮ ಕಾರ್ಯ ನಿರ್ವಹಿಸಲು ಆರಂಭಿಸಿದವು. ಇವು ೪ ತೆರನಾದ ಸಾಲವನ್ನು ನೀಡುತ್ತಿದ್ದವು.

೧ ಸ್ಥಿರಾಸ್ತಿಯ ಭದ್ರತಾ ಆಧಾರದ ಮೇಲೆ.
೨ On Joint Pro-Notes. ಆಧಾರದ ಮೇಲೆ.
೩ ಕೂಡು ಕಂತು ಸಾಲ ಆಧಾರದ ಮೇಲೆ (Joint instalment loans)
೪ ಮುಬಾದಾಲೆ ಅಥವಾ ಗರಿಷ್ಠ ೫೦ರೂ.ಗಳ ಕೈಸಾಲ ಒಪ್ಪಂದದ ಮೇಲೆ.

ಮೈಸೂರು ಸರ್ಕಾರ ಕೆಲ ಅನುಕೂಲತೆಗಳನ್ನು ಕೃಷಿ ಬ್ಯಾಂಕುಗಳಿಗೆ ಒದಗಿಸಿಕೊಟ್ಟಿತು. Stamp fee ಯನ್ನು ಕಡಿಮೆ ಮಾಡಿತು. ಅಂದರೆ ಸರ್ಕಾರವೇ ಸಾಲದಾರ ಅಥವಾ ಠೇವಣಿಗಾರ ಸ್ಥಾನದಲ್ಲಿದ್ದಿತ್ತು. ಇಲ್ಲಿ ಗಮನಿಸಬೇಕಾದ ಒಂದಂಶವೆಂದರೆ ಕೃಷಿ ಬ್ಯಾಂಕುಗಳು ಸಾಮಾನ್ಯ ಬ್ಯಾಂಕಿಂಗ್ ವ್ಯವಹಾರದಂತೆ ವರ್ತಿಸದೆ ರೈತರಿಗೆ ಮಿತವಾದ ಬಡ್ಡಿದರದಲ್ಲಿ ಸಾಲವನ್ನು ನೀಡಿ, ಕೃಷಿ ಋಣದಿಂದ ಮುಕ್ತಿ ಮಾಡುವುದೇ ಉದ್ದೇಶವಾಗಿತ್ತು. ಈ ಯೋಜನೆ - ಉದ್ದೇಶ ಅಡಿಯಲ್ಲಿ ಪ್ರಥಮವಾಗಿ ನವೆಂಬರ್ ೧೮೯೪-೯೫ ರಲ್ಲಿ ಶ್ರೀರಂಗಪಟ್ಟಣ ತಾಲ್ಲೂಖಿನ ಪಾಲಹಳ್ಳಿ ಯಲ್ಲಿ ೧೬ ಸದಸ್ಯರ ನ್ನೊಳಗೊಂಡ ಮತ್ತು ಇದೇ ತಾಲೂಕಿನ ಖ್ಯಾತರಾಯನಹಳ್ಳಿಯಲ್ಲಿ ೧೯ ಸದಸ್ಯರನ್ನೊಳಗೊಂಡು ಸರ್ಕಾರದ ಸಾಲ ಮೂಲಕ ತಮ್ಮ ಕಾರ್ಯ ನಿರ್ವಹಿಸಿದವು.

ಮೊದಲ ೪ ವರ್ಷಗಳು ಅಂದರೆ ೧೮೯೪ರಿಂದ-೯೮ರ ವರೆಗೆ ಕೃಷಿ ಬ್ಯಾಂಕುಗಳು ಯಶಸ್ವಿ ಕಾರ್ಯ ನಿರ್ವಹಿಸಿದವು. ಆದರೆ ಭೀಕರ ಪ್ಲೇಗ್ ಮತ್ತು ಹವಾಮಾನ ವೈಪರೀತ್ಯದಿಂದಾಗಿ ಈ ಬ್ಯಾಂಕುಗಳ ಕಾರ್ಯಗಳು ಕುಂಠಿತಗೊಂಡವು. ೧೮೯೮-೯೯ರಲ್ಲಿ ಇದ್ದ ೭೪ ಕೃಷಿ ಬ್ಯಾಂಕುಗಳಲ್ಲಿ ೩ ಬ್ಯಾಂಕುಗಳು ಯಾವುದೇ ವ್ಯವಹಾರ ನಿರ್ವಹಿಸದೇ ಸಂಪೂರ್ಣ ಕುಂಠಿತ ಗೊಂಡರೆ, ೧೨ ಇನ್ನಿತರ ಕೃಷಿ ಬ್ಯಾಂಕುಗಳ ಕೊರತೆ (small deficit) ಅನುಭವಿಸಿದರೆ, ಉಳಿದ ೪೮ ಬ್ಯಾಂಕುಗಳು ಅಭಿವೃದ್ಧಿಯ ವಿಭಿನ್ನ ಹಂತಗಳಿದ್ದವು. ಇಲ್ಲಿ ಒಟ್ಟು ಠೇವಣಿ ಮೊತ್ತ ೩೩,೭೭೯ರೂ.ಗಳು. ಇದು ಕೃಷಿ ಬ್ಯಾಂಕುಗಳು ಠೇವಣಿಯನ್ನು ಆಕರ್ಷಿಸುವಲ್ಲಿ ವಿಫಲವಾದುದನ್ನು ಸೂಚಿಸುತ್ತದೆ. ಅದೂ ಅಲ್ಲದೆ ಈ ತೆರನಾದ ಬ್ಯಾಂಕುಗಳು ಸಂಪೂರ್ಣವಾಗಿ

*ಇತಿಹಾಸ ವಿಭಾಗ, ವಾಸವಿ ವಿದ್ಯಾನಿಕೇತನ ಮಹಿಳೆಯರ ಕಾಲೇಜು, ಬಸವನಗುಡಿ, ಬೆಂಗಳೂರು-೫೬೦ ೦೦೪.

ಸರ್ಕಾರಿ ಸಾಲ ಮತ್ತು ಸರ್ಕಾರವನ್ನೇ ಬೆನ್ನಾಸರೆಯನ್ನಾಗಿ ಮಾಡಿಕೊಂಡಿದ್ದವು.

ದುರಾದೃಷ್ಟವಶಾತ್, ೧೮೯೪ರಲ್ಲಿ ದಿವಾನ್ ಶ್ರೀ ಶೇಷಾದ್ರಿ ಅಯ್ಯರ್ ಇವುಗಳ ಕಾರ್ಯ ನಿರ್ವಹಣೆಯಲ್ಲಿ ಏನು ಆಶಿಸಿದ್ದರೋ, ಅದು ನಡೆಯಲಿಲ್ಲ. ಪರಿಣಾಮಕಾರಿಯಾದ ಕಾರ್ಯದರ್ಶನ (Inspection system) ಪದ್ಧತಿ ಜಾರಿಯಲ್ಲಿ ತಂದರೂ ೧೯೦೨-೦೩ರಲ್ಲಿ ಹೊಸ ಬ್ಯಾಂಕುಗಳು ಯಾವುವು ಸ್ಥಾಪನೆಯಾಗಲಿಲ್ಲ. ಬ್ಯಾಂಕುಗಳ ಬೆಳವಣಿಗೆ ಈ ರೀತಿ ಆಶಾಭಂಗ ವಾಗಲೂ ೩ ನ್ಯೂನತೆಗಳು ಕಾರಣವಾಯಿತು.

೧ ಬ್ಯಾಂಕುಗಳ ಡೈರೆಕ್ಟರ್‌ಗಳ ಅಸಮರ್ಥತೆ (to enforce punctual repayment)

೨ ಸಹಕಾರಿ ಸಾಲವನ್ನು ನೀಡಲು ಅವುಗಳ ಪ್ರಯೋಜನವನ್ನು ವಿಸ್ತರಿಸದೇ ಇದ್ದದ್ದು.

೧೯೦೪, ಅಕ್ಟೋಬರ್‌ನಲ್ಲಿ ಸುಲಭ ಕಂತುಗಳಲ್ಲಿ ಸಾಲ ಹಿಂತಿರುಗಿಸಲು ಒಂದು ಯೋಜನೆ ರೂಪಿಸಲಾಯಿತು. ಆದರೆ ಈ ಯೋಜನೆಯೂ ವಿಫಲವಾಯಿತು. ೧೯೦೫, ಜನವರಿಯಲ್ಲಿ ವ್ಯವಹಾರ ನಿಲ್ಲಿಸಲು (wound up) ಅನೇಕ ಬ್ಯಾಂಕುಗಳಿಗೆ ಆಜ್ಞೆಮಾಡಲಾಯಿತು. ಬ್ಯಾಂಕುಗಳ ಕಾರ್ಯ ದಕ್ಷತೆ ಹೆಚ್ಚಿಸಲು, ಅವುಗಳ ಮೇಲ್ವಿಚಾರಣೆ ಮಾಡಲು ಇನ್‌ಸ್ಪೆಕ್ಟರ್ ಹುದ್ದೆಯನ್ನು ಪುನರ್‌ರಚಿಸಲಾಯಿತು. ಇಷ್ಟಾದರೂ ಸಹ ಬ್ಯಾಂಕುಗಳ ಕಾರ್ಯ ನಿರ್ವಹಣೆ ಉತ್ತೇಜನ ಕಾರಿಯಾಗಲಿಲ್ಲ.

೧೯೦೫ರ ಹೊತ್ತಿಗೆ ಸಹಕಾರಿ ಚಳುವಳಿ ಆರಂಭವಾಗಿ ಚೇತನತ್ವದ ಮಾನ್ಯತೆ ತೋರಿಸಿತ್ತು. ೧೯೦೯ರ ಹೊತ್ತಿಗೆ ಕೃಷಿ ಬ್ಯಾಂಕುಗಳು, ಉದಾಸದಿಂದಲೂ, ನಿಸ್ತೇಜ ವ್ಯವಹಾರ ಅಭ್ಯಾಸ ದಿಂದಲೂ ಮತ್ತು ಆಡಳಿತ ಸದಸ್ಯರಲ್ಲಿರಬೇಕಾದ ಸಾರ್ವಜನಿಕ ಸ್ಫೂರ್ತಿಯ ಕೊರತೆಗಳಿಂದ - ಕಣ್ಮರೆಯಾಗುವ ಮಟ್ಟಿಗೆ ನಿರ್ಜೀವ ವಾಗಿದ್ದವು. ಹೀಗೆ ಕೃಷಿ ಬ್ಯಾಂಕುಗಳ ಭವಿಷ್ಯ ತೂಗುಯ್ಯಾಲೆ ಸ್ಥಿತಿಯಲ್ಲಿದ್ದುದರಿಂದ, ಅವುಗಳನ್ನು ಸಹಕಾರಿ ಸಂಘಗಳ ತತ್ವಗಳ ಕಾರ್ಯದಲ್ಲಿ ಸಮೀಕರಣ ಮಾಡುವ ನಿಲವನ್ನು ಸರ್ಕಾರ ಡಿಸೆಂಬರ್ ೧೯೧೦ರಲ್ಲಿ ತಳೆದಿತ್ತು. ೧೯೧೧ರ ಸುಮಾರಿಗೆ ಕೇವಲ ೧೦ ಕೃಷಿ ಬ್ಯಾಂಕುಗಳು ಮೈಸೂರು, ತುಮಕೂರು, ಕೋಲಾರ, ಶಿವಮೊಗ್ಗದಲ್ಲಿದ್ದು, ಅವುಗಳ ಸಂಖ್ಯೆ ೧೯೧೪-೧೫ ರಲ್ಲಿ ಕೇವಲ ೩ಕ್ಕೆ ಇಳಿದಿತ್ತು. ಅವು ಪಾಲಹಳ್ಳಿ, ಹೊಂಗೇನಹಳ್ಳಿ ಮತ್ತು ನಂಜನಗೂಡಿನಲ್ಲಿದ್ದವು ೧೯೩೨-೩೩ರಲ್ಲಿ ಕೇವಲ ೨ಕ್ಕೆ ಇಳಿದು, ೧೯೩೩ರ ನಂತರ ಅವು ಯಾವ ವ್ಯವಹಾರವನ್ನು ನಡೆಸದಿದ್ದುದು ಬೆಳಕಿಗೆ ಬರುತ್ತದೆ.

ಹೀಗೆ ಕೃಷಿ ಬ್ಯಾಂಕುಗಳ ಇತಿಹಾಸ ಅತ್ಯಂತ ಕಡಿಮೆ ಬಡ್ಡಿದರ ಬ್ಯಾಂಕುಗಳಿಗೆ ಸ್ಥಳೀಯ ಬಂಡವಾಳ ಹೆಚ್ಚಿಸುವಲ್ಲಿನ ಉತ್ತೇಜನದ ಅಭಾವ (insufficient incentive) ಆಡಳಿತದ ಅದಕ್ಷತೆ ಮತ್ತು ಮೇಲ್ವಿಚಾರಣೆಯ ಲೋಪಗಳಿಂದ ಕೊನೆ ಗೊಂಡಿತು. ಇವುಗಳಲ್ಲದೆ ಕೃಷಿ ಬ್ಯಾಂಕುಗಳು ವಿಫಲತೆಗೆ ಇನ್ನು ಅನೇಕ ಕಾರಣಗಳಿದ್ದವು.

ಅವುಗಳೆಂದರೆ:

(a) ಬ್ಯಾಂಕು ಕಛೇರಿಯ ಸಿಬ್ಬಂದಿವರ್ಗವೇ ಅತ್ಯಧಿಕ ಸಂಖ್ಯೆ ಯಲ್ಲಿನ ಸಾಲವನ್ನು ಎರವಲು ಪಡೆಯುವವರು ಮತ್ತು ಸಾಲದ ಬಾಕಿದಾರರು ಅವರೇ ಆಗಿದ್ದರು.

(b) ಜನಸಂಖ್ಯೆಯ ಎಲ್ಲಾ ವರ್ಗದವರನ್ನು ನಾಶ ಮಾಡಿದ ಭೀಕರ ಪ್ಲೇಗ್ ಸಹ ಜನರ ಆರ್ಥಿಕ ಜೀವನಕ್ಕೆ ಧಕ್ಕೆ ತಂದಿತು.

(c) ಬ್ಯಾಂಕುಗಳ ಆದಾಯದ ಮೂಲ, ಅವುಸಾಲದ ಮೇಲೆ ನೀಡುವ ಅತ್ಯಂತ ಕಡಿಮೆ ಶೇ$5^1/_2\%$ ಯಿಂದ 6% ಬಡ್ಡಿದರ. ಇವು ಲಾಭಾಂಶ ಮತ್ತು ಪ್ರತಿಫಲ ನೀಡುವಲ್ಲಿ ವಿಫಲವಾದವು. (dividends and honorariums)

(d) ಸರ್ಕಾರಿ ಮೇಲ್ವಿಚಾರಣೆಯಲ್ಲಿನ ವೈಫಲ್ಯವು ಬ್ಯಾಂಕುಗಳು ವಿಫಲತೆ ಹೊಂದಲು ಕಾರಣವಾದವು.

(e) ಕಡೆಯದಾಗಿ, ಯೂರೋಪಿನ ಕೃಷಿ ಬ್ಯಾಂಕುಗಳ ಯಶಸ್ಸಿಗೆ ಕಾರಣವಾದ ಪರಸ್ಪರ ನಂಬಿಕೆಯ ಪರಿಸ್ಥಿತಿ, ಸಹಕಾರ ಮತ್ತು ಅರ್ಪಣಾಭಾವ (self sacrifice) ಈ ಕೃಷಿ ಬ್ಯಾಂಕುಗಳಲ್ಲಿ ಇಲ್ಲದೆ ಇದ್ದದು ಒಂದು ವಿಫಲತೆಗೆ ಕಾರಣ. ಸಾರ್ವಭೌಮತೆಯ ಆಸಕ್ತಿ ಹೊಂದಿದ ಬ್ರಿಟಿಷರೂ ಸಹ ಸ್ವದೇಶಿ ಬ್ಯಾಕಿಂಗ್ ವ್ಯವಸ್ಥೆಗೆ ಸರಿಯಾದ ಪ್ರೋತ್ಸಾಹ ನೀಡಲಿಲ್ಲ. ಮೈಸೂರಿನ ಜನರ ಆರ್ಥಿಕ ಮತ್ತು ಸಾಮಾಜಿಕ ಜೀವನದಲ್ಲಿನ ಸೇಂದ್ರಿಯ ಬಲಹೀನತೆಯ ಕುರುಹು ಕೂಡ (Presence of organic weakness) ವಿಫಲತೆ ಹೊಂದಲು ಕಾರಣವಾಗಿರಬಹುದು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


a) *Banking File, Agricultural Bank*, Palhalli 1894 p.2.

b) *Proceedings of Mysore Legislative Council* 1895, Dec p.1.

c) *Addresses of the Dewans to the Mysore Dasara Rep. Assembly* from 1881-1899 vol I. P.6.

d) *Report on the administration of Mysore 1900-01*, 1902-03. p.22,23,24.

ಡಾ. ಹೆಚ್. ಈ. ಬಸವರಾಜಪ್ಪ*

# ಚಿತ್ರದುರ್ಗ ಜಿಲ್ಲೆಯಲ್ಲಿ ನಡೆದ ರೈತ ಸಮ್ಮೇಳನಗಳು

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಕಾಂಗ್ರೆಸ್ ನೇತೃತ್ವದ ಹೋರಾಟದಲ್ಲಿ ರೈತರ ಪಾತ್ರವು ಪ್ರಮುಖವಾಗಿದೆ. ಅದರಲ್ಲಿ ಕರ್ನಾಟಕದ ಬೇರೆ ಬೇರೆ ಭಾಗದ ರೈತ ಹೋರಾಟದಂತೆಯೆ ಚಿತ್ರದುರ್ಗ ಜಿಲ್ಲೆಯ ರೈತ ಸಮ್ಮೇಳನಗಳು ಅಧ್ಯಯನದ ದೃಷ್ಟಿಯಿಂದ ಮಹತ್ವ ಪಡೆದಿವೆ. ೧೯೩೦ರ ನಂತರ ಕರ್ನಾಟಕದಲ್ಲಿ ಕರಾನಿರಾಕರಣೆ ಚಳುವಳಿ, ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹಗಳೂ ನೆಡೆದವು. ಇಂತಹ ರೈತ ಚಳುವಳಿಯನ್ನು ನೆಡೆಸುವ ಮೂಲಕ ರೈತರನ್ನು ವ್ಯಾಪಕವಾಗಿ ಸಂಘಟಿಸಿದ್ದರು. ಅದೇ ರೀತಿ ಚಿತ್ರದುರ್ಗ ಜಿಲ್ಲೆಯ ರೈತರು ಸಕ್ರಿಯವಾಗಿ ಚಳುವಳಿಯಲ್ಲಿ ಭಾಗವಹಿಸುವ ಮೂಲಕ ತಮ್ಮ ಹಕ್ಕನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರು ಎಂಬ ವಿವರವನ್ನು ರೈತ ಸಮ್ಮೇಳನಗಳೊಂದಿಗೆ ವಿವೇಚಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ೧೯೩೫ರ ನಂತರ ಕಾಂಗ್ರೆಸ್ ರೈತ ಸಮ್ಮೇಳನಗಳನ್ನು ನಡೆಸುವ ಮೂಲಕ ಗ್ರಾಮಾಂತರ ಪ್ರದೇಶದ ರೈತರು ನೇರವಾಗಿ ಕಾಗ್ರೆಸಿನಲ್ಲಿ ಭಾಗವಹಿಸಲು ಅವಕಾಶ ಮಾಡಿಕೊಟ್ಟಿತು. ಈ ರೈತ ಸಮ್ಮೇಳನಗಳಲ್ಲಿ ಭೂಕಂದಾಯದ ರಿಯಾಯಿತಿ ಹಾಗೂ ಕೃಷಿಗೆ ಸಂಬಂಧಿಸಿದ ವಿಷಯಗಳನ್ನು ಕುರಿತು ಚರ್ಚಿಸುವ ಮೂಲಕ ರೈತರನ್ನು ಕಾಂಗ್ರೆಸಿನತ್ತ ಸೆಳೆಯಲಾಯಿತು. ಹೀಗೆ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ನಡೆದ ರೈತ ಸಮ್ಮೇಳನಗಳ ಪರಿಣಾಮವಾಗಿ ಕಾಂಗ್ರೆಸ್ ಹೆಚ್ಚು ಪ್ರಚಾರ ಪಡೆಯಿತು. ಜೊತೆಗೆ ಅದರ ಸದಸ್ಯರ ಸಂಖ್ಯೆಯೂ ಹೆಚ್ಚಾಯಿತು. ಈ ರೈತ ಸಮ್ಮೇಳನಗಳಿಗೆ ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಚಂಪಾರಣ್ಯ ಹಾಗು ಖೇಡಾ ಸತ್ಯಾಗ್ರಹಗಳು ಕರ್ನಾಟಕದಲ್ಲಿಯೂ ಪ್ರಭಾವ ಬೀರಿದವು. ಎಚ್.ಕೆ.ವೀರಣ್ಣಗೌಡ ಮತ್ತು ಸರ್ದಾರ್ ವೀರಣ್ಣಗೌಡ ಪಾಟೀಲರಂಥ ರೈತ ಸಮುದಾಯದ ಯುವಕರು, ರೈತರ ಸಂಘಟನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಎರಡನೇ ಮಹಾಯುದ್ಧದ ಆರಂಭದಲ್ಲಿ ಆರ್ಥಿಕ ಮುಗ್ಗಟ್ಟು ಕರ್ನಾಟಕದ ಮೇಲೂ ಪರಿಣಾಮ ಬೀರಿತು. ಹೀಗಾಗಿ ಎಲ್ಲಾ ಕೃಷಿ ಉತ್ಪನ್ನಗಳ ಬೆಲೆಗಳು ಇಳಿಮುಖವಾದವು. ಆದರೆ ಭೂಕಂದಾಯ ಹೆಚ್ಚಾಯಿತು. ಇದರಿಂದ ರೈತರಲ್ಲಿಯೂ ಸರಕಾರದ ಬಗ್ಗೆ ಅಸಮಾದಾನ ಹೊಗೆಯಾಡುತ್ತಿತ್ತು. ಈ ದೃಷ್ಟಿಯಿಂದ ಚಿತ್ರದುರ್ಗ ಜಿಲ್ಲೆಯಲ್ಲಿ ನಡೆದ ಕೆಲವು ರೈತ ಸಮ್ಮೇಳನಗಳನ್ನು ಗಮನಿಸಬಹುದು.

ಎಸ್.ಎಸ್. ಹರ್ಡೇಕರ್ ಮತ್ತು ಉಮಾಬಾಯಿ ಕುಂದಾಪುರ ಈ ಕಾಂಗ್ರಸ್ ಮುಖಂಡರಿಬ್ಬರು ಪ್ರಚಾರಕ್ಕಾಗಿ ಹಿರಿಯೂರಿಗೆ ೧೯೩೭ ಮೇ,೧೯ರಂದು ಬಂದಿದ್ದರು. ಅದೇ ದಿನ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಸ್ಥಳೀಯ ತಿರುಮಲ್ಲೇಶ್ವರ ದೇವಸ್ಥಾನದಲ್ಲಿ ರೈತ ಸಮ್ಮೇಳನವನ್ನು ಹಿರಿಯೂರು ಕಾಂಗ್ರೆಸ್ ಸಮಿತಿಯವರು ಸಂಘಟಿಸಿದ್ದರು. ಈ ರೈತ ಸಮ್ಮೇಳನದಲ್ಲಿ ಸ್ಥಳೀಯ ರೈತರೊಂದಿಗೆ ಸಮಸ್ಯೆಗಳನ್ನು ಕುರಿತು ಚರ್ಚಿಸಿದ ನಂತರ 'ವಾಣಿವಿಲಾಸಸಾಗರ ಕೃಷಿ ಸಂಘ' ನೀತಿ ಸಂಹಿತೆಯನ್ನು ಬಿಡುಗಡೆ ಮಾಡಿದರು. ಅದರಲ್ಲಿ ಸರಕಾರ ರೈತರಿಗೆ ಉತ್ತಮ ನೀರಿನ ಸೌಕರ್ಯವನ್ನು ಒದಗಿಸಿ ಕೊಡಬೇಕೆಂದು ಒತ್ತಾಯಿಸಿದರು. ಜೊತೆಗೆ ವಾಣಿವಿಲಾಸಸಾಗರ ರೈತರಿಗೆ ಪ್ರತ್ಯೇಕ ಕೃಷಿ ಬ್ಯಾಂಕನ್ನು ಸ್ಥಾಪನೆ ಮಾಡಬೇಕು. ಅದರ ಹೆಸರನ್ನು 'ವಾಣಿವಿಲಾಸಸಾಗರ ಕೃಷಿ ಬ್ಯಾಂಕ್' ಎಂದು ಕರೆಯು ಬೇಕಂಬುದಾಗಿ ಸ್ಥಳೀಯ ರೈತರು ಒತ್ತಾಯಿಸಿದರು. ಇದೇ ಸಭೆಯಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ ಎಸ್. ಎಸ್. ಹರ್ಡೇಕರ್ ರೈತರನ್ನು ಉದ್ದೇಶಿಸಿ ಭಾಷಣ ಮಾಡುತ್ತಾ, ಅಧಿಕ ಸಂಖ್ಯೆಯ ರೈತರು ಕಾಂಗ್ರೆಸ್‌ನಲ್ಲಿ ಸದಸ್ಯತ್ವ ಪಡೆಯುವ ಮೂಲಕ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರಕಾರ ರಚನೆ ಮಾಡಲು ಎಲ್ಲರೂ ಒಗ್ಗಟ್ಟಿನಿಂದ ಹೋರಾಟ ಮಾಡಬೇಕೆಂಬುದಾಗಿ ಜನರಿಗೆ ಕರೆ ನೀಡಿದರು.*೧

ಚಿತ್ರದುರ್ಗ ಜಿಲ್ಲೆಯಲ್ಲಿ ನಡೆದ ಮತ್ತೊಂದು ಪ್ರಮುಖ ರೈತ ಸಮ್ಮೇಳನವೆಂದರೆ ಹೊಸದುರ್ಗ ತಾಲೂಕು ರೈತ ಸಮ್ಮೇಳನ. ಈ ಸಮ್ಮೇಳನವನ್ನು ಸ್ಥಳೀಯ ಕಾಂಗ್ರೆಸ್ ನಾಯಕರಾಗಿದ್ದ ಭೂಪಾಳಂ ಕೃಷ್ಣಮೂರ್ತಿಯವರು ಏರ್ಪಡಿಸಿದ್ದರು. ಈ ಸಮ್ಮೇಳನಕ್ಕೆ ಹೊಸದುರ್ಗ ತಾಲೂಕು ಕಾಂಗ್ರೆಸ್ ಸಮಿತಿಯ ಆಹ್ವಾನದ ಮೇರೆಗೆ ೧೯೩೭ ನವೆಂಬರ್ ೧೮ರಂದು ಮಂಡ್ಯ ಜಿಲ್ಲೆಯ ರೈತ ಸಂಘದ ಅಧ್ಯಕ್ಷರಾಗಿದ್ದ ಎಚ್.ಕೆ. ವೀರಣ್ಣಗೌಡರು ಬಂದಿದ್ದರು. ಈ ಸಮ್ಮೇಳನವನ್ನು ಸ್ಥಳೀಯ ಬನಶಂಕರಿ ದೇವಸ್ಥಾನದಲ್ಲಿ ಏರ್ಪಡಿಸಲಾಗಿತ್ತು.*೨ ಸಮ್ಮೇಳನವನ್ನು ತಡೆಯಲು ಸ್ಥಳೀಯ ಅಮಲ್ದಾರರು, ಮ್ಯಾಜಿಸ್ಟ್ರೇಟ್ ೧೪೪ನೇ ಸೆಕ್ಷನ್ ಕಾಯಿದೆಯನ್ನು ಜಾರಿಗೊಳಿಸಿದರು. ಈ ಮೂಲಕ ಸಾರ್ವಜನಿಕ ಸಭೆಗಳು ಸಮ್ಮೇಳನಗಳು ನಡೆಯದಂತೆ ತಡೆಯುವುದಾಗಿತ್ತು. ಆದರೂ ಎಚ್. ಕೆ. ವೀರಣ್ಣಗೌಡರು*೩ ರೈತರನ್ನು ಉದ್ದೇಶಿಸಿ ಭಾಷಣ ಮಾಡುತ್ತಾ ಹೊಸದುರ್ಗ ತಾಲೂಕಿನ ರೈತರು ಕಾಂಗ್ರೆಸ್ ಸದಸ್ಯತ್ವವನ್ನು ಪಡೆಯುವುದು

* ಉಪನ್ಯಾಸಕರು, ವಿಜಯನಗರ ಕಾಲೇಜ್, ಹೊಸಪೇಟೆ

ಅವಶ್ಯಕ. ಹಾಗೆಯೇ ಹೊಸದುರ್ಗದ ರೈತರು ಹೇಡಿತನದಿಂದ ಬಂದು ಕುಳಿತಿರುವುದನ್ನು ನೋಡಿದರೆ ಕಾಂಗ್ರೆಸ್‌ನ ವಿಚಾರ ಸಂದೇಶವು ಇನ್ನು ನಿಮಗೆ ತಿಳಿದಿಲ್ಲ ಎಂದು ತೋರುತ್ತದೆ ಎಂದು ಆ ಮೂಲಕ ರೈತರ ಗಮನ ಸೆಳೆದರು. ಸರಕಾರದವರು ರೈತರ ಸೇವಕರು ಇದನ್ನು ರೈತರು ತಿಳಿಯಬೇಕು. ಆದ್ದರಿಂದ ಸರಕಾರದ ದಬ್ಬಾಳಿಕೆಯನ್ನು ಹೋಗಲಾಡಿಸಲು ತಾವೆಲ್ಲರೂ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವುದು ಅವಶ್ಯವೆಂದು ಮನವರಿಕೆ ಮಾಡಿದರು. ಇದೇ ಸಮ್ಮೇಳನದಲ್ಲಿ ಭಾಗವಹಿಸಿದ ಬಳ್ಳಾರಿ ಸಿದ್ಧಮ್ಮ ರೈತರನ್ನು ಉದ್ದೇಶಿಸಿ ಭಾಷಣ ಮಾಡುತ್ತಾ ಈಗ ಸರಕಾರ ವಿಧಿಸಿರುವ ಸೆಕ್ಷನ್ ೧೪೪ರ ನಿಷೇಧಾಜ್ಞೆಯನ್ನು ಸಂಪೂರ್ಣವಾಗಿ ಮುರಿಯಬೇಕೆಂದರು.[*೪] ನಂತರ ೧೯೩೭ ನವೆಂಬರ್ ೧೯ರಂದು ವೀರಣ್ಣಗೌಡರು, ಎಸ್.ನಿಜಲಿಂಗಪ್ಪ, ಬಳ್ಳಾರಿ ಸಿದ್ಧಮ್ಮ ಇನ್ನಿತರ ನಾಯಕರು ಹೊಳಲ್ಕೆರೆ ತಾಲೂಕಿನ ಗ್ರಾಮಗಳಾದ ಗುಂಡೇರಿ, ಮಲೇನೂರು, ದೊಗ್ಗನಾಳು ಮತ್ತು ರಂಗಾಪುರ ಗ್ರಾಮಗಳಿಗೆ ಭೇಟಿ ನೀಡಿ ಗ್ರಾಮಮಟ್ಟದಿಂದಲೂ ಕಾಂಗ್ರೆಸ್ ಸಮಿತಿಯ ರಚನೆ ಮತ್ತು ಕಾರ್ಯಕರ್ತರ ಅವಶ್ಯಕತೆಯನ್ನು ಒತ್ತಿ ಹೇಳಿದರು. ಇದರ ಜೊತೆಯಲ್ಲಿಯೇ ಕಾಂಗ್ರೆಸ್ ಸಂಘಟನೆಯ ಉದ್ದೇಶ ಮತ್ತು ಖಾದಿ ಉಪಯೋಗದ ಬಗ್ಗೆ ವಿವರಿಸಿದರು.[*೫]

೧೯೩೮ರಲ್ಲಿ ಹೊಳಲ್ಕೆರೆ ತಾಲುಕು, ರಂಗಾಪುರದಲ್ಲಿ ಕೊಟ್ರೆ ನಂಜಪ್ಪನರು ರೈತ ಸಮ್ಮೇಳವನ್ನು ಏರ್ಪಡಿಸಿದ್ದರು. ಸ್ಥಳೀಯರು ಈಗಲೂ ಹೇಳುವಂತೆ ಅಂದು ಕೊಟ್ರೆ ನಂಜಪ್ಪನವರು ಸುಮಾರು ನಾಲ್ಕುನೂರು ಎಕರೆಯಷ್ಟು ದೊಡ್ಡ ಭೂಹಿಡುವಳಿದಾರರಾಗಿದ್ದರು. ಜೊತೆಗೆ ಸ್ಥಳೀಯ ರೈತರ ಸಂಘಟಕರಾಗಿ ಪ್ರಮುಖ ಪಾತ್ರವಹಿಸಿದ್ದರು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ಶಿವಮೊಗ್ಗದ ಎಚ್. ಸಿದ್ಧಯ್ಯ ವಹಿಸಿದ್ದರು.[*೬] ಸಮ್ಮೇಳನದಲ್ಲಿ ಉತ್ತರ ಕರ್ನಾಟಕದ ನಾಯಕರಾದ ಕಳ್ಳಿ ತಿಪ್ಪಣ್ಣಶಾಸ್ತ್ರಿ, ಹಳ್ಳಿಕೇರಿ ಗುದ್ಲೆಪ್ಪ, ಕಜರಿ ಸ್ವಾಮಿ ಮುಂತಾದವರು ಬಂದಿದ್ದರು. ಜೊತೆಗೆ ಕೆ.ಸಿ.ರೆಡ್ಡಿ, ಎಸ್.ನಿಜಲಿಂಗಪ್ಪ, ಭೀಮಪ್ಪ ನಾಯಕ ಮಾಧವರಾವ್ ಮುಂತಾದ ಮೈಸೂರು ಸಂಸ್ಥಾನದ ಕಾಂಗ್ರೆಸ್ ಮುಖಂಡರು ಭಾಗವಹಿಸಿದ್ದರು. ಈ ರೈತ ಸಮ್ಮೇಳನದಲ್ಲಿ ಸುಮಾರು ಹತ್ತು ಸಾವಿರ ಜನ ರೈತರು ಸೇರಿದ್ದರು. ಈ ಸಮ್ಮೇಳನದ ಊಟಕ್ಕಾಗಿ ನಲವತ್ತೈದು ಚೀಲ ಅಕ್ಕಿಯನ್ನು ವೆಚ್ಚ ಮಾಡಲಾಗಿತ್ತು ಮತ್ತು ಸಹಪಂಕ್ತಿ ಭೋಜನವನ್ನು ಏರ್ಪಡಿಸಲಾಗಿತ್ತು. ಇದರಲ್ಲಿ ಚಿತ್ರದುರ್ಗ ಜಿಲ್ಲೆಯ ರೈತರಷ್ಟೇ ಅಲ್ಲದೆ ಕರ್ನಾಟಕದ ಬಹುಭಾಗದ ರೈತರು ಭಾಗವಹಿಸುವ ಮೂಲಕ ಕಾಂಗ್ರೆಸ್ ನೇತೃತ್ವದ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ ವ್ಯಕ್ತಪಡಿಸಿದರು.[*೭]

ಚಳ್ಳಕೆರೆ ತಾಲೂಕಿನಲ್ಲಿ ೧೯೩೯ ಏಪ್ರಿಲ್ ಮೊದಲ ವಾರದಲ್ಲಿ ಎಸ್. ನಿಜಲಿಂಗಪ್ಪ ಅವರ ಅಧ್ಯಕ್ಷತೆಯಲ್ಲಿ ರೈತ ಸಮ್ಮೇಳನವನ್ನು ಸಂಘಟಿಸಲಾಗಿತ್ತು. ಇದರ ಉದ್ಘಾಟನೆಯನ್ನು ಕೆ.ಸಿ.ರೆಡ್ಡಿಯವರಿಂದ ನೆರವೇರಿಸಲಾಯಿತು. ಈ ಸಮ್ಮೇಳನದಲ್ಲಿ ಸುಮಾರು ಎರಡೂವರೆಸಾವಿರ ರೈತರು ಭಾಗವಹಿಸಿದರು. ಶ್ರೀ ಸಂಪಂಗಿರಾಮಯ್ಯನವರು ಪ್ರಾರಂಭದಲ್ಲಿ ಭಾಷಣ ಮಾಡಿದರು. ಅದರಲ್ಲಿ ರೈತರಿಗೆ ಅನುಕೂಲವಾಗುವಂತೆ ಕಾನೂನುಗಳನ್ನು ಬದಲಾಯಿಸುವುದು, ರೈತರ ಪರವಾದ ಸುಳ್ಳು ಘೋಷಣೆಯನ್ನು ನಿಲ್ಲಿಸಬೇಕು. ಬಳಕೆದಾರ ಹಾಗೂ ಮಾರಾಟ ಸಹಕಾರ ಸಂಘಗಳನ್ನು ಸ್ಥಾಪಿಸಿ, ಕೃಷಿಕಾರ್ಯಗಳಿಗಾಗಿ ಶೇಕಡ ೯ರ ಬಡ್ಡಿಯಲ್ಲಿ ಸಾಲಕೊಡಬೇಕು ಎಂದು ಸರಕಾರವನ್ನು ಒತ್ತಾಯಿಸಿದ್ದರು.[*೮] ರೈತರ ಸಮಸ್ಯೆಗಳನ್ನು ಕುರಿತು ಚರ್ಚಿಸಿದ ನಂತರ ಇಂತಹ ರೈತ ಸಮ್ಮೇಳನಗಳನ್ನು ನಡೆಸುವುದರಿಂದ ಬರುವ ಖರ್ಚುವೆಚ್ಚಗಳನ್ನು ರೈತರೇ ಉದಾರವಾಗಿ ನಿರ್ವಹಿಸಬೇಕೆಂದು ಸಾರ್ವಜನಿಕರಲ್ಲಿ ಸಮ್ಮೇಳನಾಧ್ಯಕ್ಷರು ಮನವಿ ಮಾಡಿಕೊಂಡಿದ್ದರು. ಹಾಗೆಯೇ ರೈತರು ಕಾಂಗ್ರೆಸ್ ನೇತೃತ್ವದ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಬೇಕೆಂಬುದಾಗಿ ಮನವಿ ಮಾಡಿಕೊಳ್ಳಲಾಯಿತು. ಚಳ್ಳಕೆರೆ ರೈತ ಸಮ್ಮೇಳನವನ್ನು ವಿರೋಧಿಸಿದ ಸರಕಾರ ಚಳ್ಳಕೆರೆಯಲ್ಲಿ ೧೪೪ನೇ ಸೆಕ್ಷನ್ ಕಾಯಿದೆಯನ್ನು ಜಾರಿಗೊಳಿಸಿತು. ಆದರೂ ಹಿರಿಯೂರು ತಾಲೂಕಿನ ಮರಡಿಹಳ್ಳಿ ಮತ್ತು ದಾವಣಗೆರೆಯ ರೈತರು ಸಮ್ಮೇಳನಗಳನ್ನು ನಡೆಸುವುದರ ಮೂಲಕ ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು.[*೯]



## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಸ್ಪೇಶಲ್ ಬ್ರಾಂಚ್, ಅಬ್‌ಸ್ಟ್ರಾಕ್ ಫಾರ್ ದಿ ವೀಕ್ ಎಂಡಿಂಗ್, ೨೮ ಜನವರಿ, ೧೯೩೯, ಪು. ೯೧.

*೨. ಅದೇ, ಪು. ೨೩೮.

*೩. ಎಚ್.ಕೆ. ವೀರಣ್ಣಗೌಡರು. ಇವರು ಮಂಡ್ಯ ಜಿಲ್ಲೆಯ ಮದ್ದೂರು ತಾಲೂಕಿನ ತೋಟದ ಮನೆಯಲ್ಲಿ ೧೮೮೯ರಲ್ಲಿ ಜನಿಸಿದರು. ೧೯೨೭ರಲ್ಲಿ ಬೆಂಗಳೂರು ಒಕ್ಕಲಿಗರ ಸಂಘದ ಪತ್ರಿಕೆಯ ಸಂಪಾದಕರಾಗಿದ್ದರು. ಇದೇ ಕಾಲದಲ್ಲಿ ಎನ್.ಎಸ್. ಹರ್ಡೇಕರ್, ಕಮಲಾಬಾಯಿ ಚಟ್ಟೋಪಾಧ್ಯಾಯ, ಆರ್.ಆರ್. ದಿವಾಕರ್ ಸಂಪರ್ಕದಿಂದ ಕಾಂಗ್ರೆಸ್‌ನ ರೈತ ಸಂಘಟನೆಯಲ್ಲಿ ಪ್ರಮುಖ

ಪಾತ್ರವಹಿಸಿದರು. ೧೯೩೧ರಲ್ಲಿ ಮದ್ದೂರು ರೈತಸಂಘದ ಅಧ್ಯಕ್ಷರಾಗಿದ್ದ ಇವರು ನಡೆಸಿದ ಪ್ರಮುಖವಾದ ರೈತ ಚಳವಳಿ ಇರ್ವಿನ್ ನಾಲೆ ರೈತ ಹೋರಾಟವಾಗಿತ್ತು. ಇದರಲ್ಲಿ ೪೦೦೦ ಜನ ರೈತರು ಜಾಥಾ ಸಹಿತ ೬೦ ಮೈಲಿ ಕಾಲನಡಿಗೆಯಲ್ಲಿ ಬೆಂಗಳೂರಿಗೆ ಬಂದು ದಿವಾನರಿಗೆ ಒಂದು ಮನವಿ ಸಲ್ಲಿಸಿದರು. ಅದರಲ್ಲಿ ರೈತರಿಗೆ ರಿಯಾಯಿತಿಯಾಗಿ ನೀರು ನೀಡಲು ಒತ್ತಾಯಿಸಿದರು. ಎಚ್.ಕೆ.ವೀರಣ್ಣಗೌಡರು ಚಿತ್ರದುರ್ಗ ಜಿಲ್ಲೆಯ ನಾಯಕರಾದ ಬಳ್ಳಾರಿ ಸಿದ್ದಮ್ಮ, ಎಸ್.ನಿಜಲಿಂಗಪ್ಪ, ಭೀಮಣ್ಣನಾಯಕ, ವಾಸುದೇವರಾವ್ ಮುಂತಾದವರೊಂದಿಗೆ ನಿಕಟವಾದ ಸಂಪರ್ಕವನ್ನಿಟ್ಟುಕೊಂಡಿದ್ದರು. ೧೯೩೭ರಲ್ಲಿ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗದಲ್ಲಿ ರೈತ ಸಂಘಟನೆಯನ್ನು ಕುರಿತು ಪರಿಣಾಮಕಾರಿಯಾದ ಭಾಷಣ ಮಾಡಿದರು. ಹಾಗೆಯೇ ಹಲವು ಬಾರಿ ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡು ಸ್ವಾತಂತ್ರ್ಯ ಚಳವಳಿಗೆ ರೈತರನ್ನು ಸಂಘಟಿಸಿದರು.

*೪. **ಬಳ್ಳಾರಿ ಸಿದ್ದಮ್ಮ**. ಕರ್ನಾಟಕ ಸ್ವಾತಂತ್ರ್ಯ ಚಳವಳಿಯಲ್ಲಿ ಇವರ ಹೆಸರು ಚಿರಸ್ಮರಣೀಯವಾಗಿದೆ. ಇವರು ೧೯೦೩ರಲ್ಲಿ ಹಾವೇರಿ ತಾಲೂಕಿನ ದುಂಡಸಿ ಗ್ರಾಮದಲ್ಲಿ ಜನಿಸಿದರು. ಅವರ ತಂದೆ ಶ್ರೀ ಕೊಟಗಿ ಬಸವಂತಪ್ಪ ವ್ಯಾಪಾರಿಗಳಾಗಿದ್ದರು. ಹೀಗಾಗಿ ಇವರು ಯಾವುದೇ ರೀತಿಯ ಉನ್ನತ ಶಿಕ್ಷಣವನ್ನು ಪಡೆಯಲಾಗಲಿಲ್ಲ. ಅಂದಿನ ಸಮಕಾಲೀನ ಬರಹಗಳನ್ನು ಚನ್ನಾಗಿ ಓದಿಕೊಂಡಿದ್ದರು. ಬಳ್ಳಾರಿ ಸಿದ್ಧಮ್ಮನವರನ್ನು ಬಳ್ಳಾರಿ ಮುರುಗಪ್ಪನವರಿಗೆ ಕೊಟ್ಟು ಮದುವೆ ಮಾಡಿದರು. ಅವರ ಪತಿಯೂ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರು. ತನ್ನ ಪತಿಯೊಂದಿಗೆ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಇವರು ಬಳ್ಳಾರಿ ಸಿದ್ಧಮ್ಮನೆಂದೇ ಹೆಸರು ಪಡೆದರು. ಒಬ್ಬ ಮಹಿಳಾ ಸಂಘಟನಾಕಾರರಾಗಿ ಉತ್ತಮ ಭಾಷಣಕಾರರಾಗಿ ಸ್ವಾತಂತ್ರ್ಯ ಚಳವಳಿಯಲ್ಲಿ ಚಿತ್ರದುರ್ಗವನ್ನು ಕೇಂದ್ರ ಮಾಡಿಕೊಂಡು ಕರ್ನಾಟಕದಾದ್ಯಂತ ಸಂಚಾರ ಮಾಡಿದರು. ೧೯೩೭ರಲ್ಲಿ ಎನ್.ಎಸ್.ಹರ್ಡೇಕರ್ ಮತ್ತು ಉಮಾಭಾಯಿ ಕುಂದಾಪುರ ಜೊತೆಯಲ್ಲಿ ಚಿತ್ರದುರ್ಗ ಜಿಲ್ಲೆಯಾದ್ಯಂತ ಸಂಚರಿಸಿ ಕಾಂಗ್ರೆಸ್ ಸಂಘಟನೆಯನ್ನು ಮಾಡಿದ್ದರು. ಅಪ್ಪಟ ಖಾದಿಧಾರಿಯಾಗಿದ್ದ ಬಳ್ಳಾರಿ ಸಿದ್ಧಮ್ಮನವರು ೧೯೩೮ರ ಏಪ್ರಿಲ್‌ನ ಶಿವಪುರ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ೧೯೩೯ರ ತುರುವನೂರು ಅರಣ್ಯ ಸತ್ಯಾಗ್ರಹದಲ್ಲಿ ಎಸ್.ನಿಜಲಿಂಗಪ್ಪನವರ ತಂಡದಲ್ಲಿ ಬಂಧಿತರಾಗಿ ದೀರ್ಘಾವದಿ ಶಿಕ್ಷೆಗೆ ಒಳಗಾಗಿದ್ದರು. ೧೯೪೨ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿ ಒಂದು ವರ್ಷ ಶಿಕ್ಷೆ ಅನುಭವಿಸಿದರು. ಹಾಗೆಯೇ ೧೯೪೭ರ ಮೈಸೂರು ಚಲೋ ಚಳವಳಿಯಲ್ಲಿ ಚಿತ್ರದುರ್ಗದ ಜಿಲ್ಲಾ ಕಛೇರಿಯ ಮೇಲೆ ಧ್ವಜ ಹಾರಿಸಿ ಬಂಧಿತರಾಗಿದ್ದರು. ಸ್ವಾತಂತ್ರ್ಯನಂತರ ಗಾಂಧೀಜಿಯವರ ಆದೇಶದಂತೆ 'ಮಾತೃಮಂದಿರ' ಅರ್ಥಾತ್ ಪ್ರಸೂತಿ ಗೃಹವೊಂದನ್ನು ಹಿರಿಯೂರ ಬಳಿ ಗನ್ನಾಯಕನಹಳ್ಳಿಯಲ್ಲಿ ಪ್ರಾರಂಭಿಸಿದರು. ಈ ಮಾತೃ ಮಂದಿರವೇ ಬಳ್ಳಾರಿ ಸಿದ್ಧಮ್ಮನವರ ಸೇವಾ ನಿಷ್ಠೆಯನ್ನು ಪ್ರಚಾರ ಮಾಡಿತು. ಈ ಸೇವಾ ಕ್ಷೇತ್ರಕಂಡ ಕಸ್ತೂರಬಾ ಟ್ರಸ್ಟ್‌ನವರು ತಾವು ನಡೆಸಲು ಆ ಮಾತೃಮಂದಿರವನ್ನು ತೆಗೆದುಕೊಂಡರು. ನಂತರ ಮತ್ತೊಂದು ಮಾತೃಮಂದಿರವನ್ನು ದಾವಣಗೆರೆ-ಚಿತ್ರದುರ್ಗ ಮಾರ್ಗದ ಮಧ್ಯ ಹೆಬ್ಬಾಳ ಗ್ರಾಮದಲ್ಲಿ ಆರಂಭಿಸಿದರು. ಬಳ್ಳಾರಿ ಸಿದ್ಧಮ್ಮನವರು ಸ್ವತಃ ಕೈಮುಟ್ಟಿ ಹೆರಿಗೆ ಮಾಡಿಸಿ ಮಗು-ಶುಶ್ರೂಷೆ ರಕ್ಷಣೆ ಮಾಡುತ್ತಿದ್ದರು. ಇವರ ಸೇವೆ, ತ್ಯಾಗವನ್ನು ಎಸ್. ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಹಳ್ಳಿಕೇರಿ ಗುದ್ಲೆಪ್ಪ ಮತ್ತಿತರರು ಮೆಚ್ಚಿ ಪ್ರೋತ್ಸಾಹ ನೀಡಿದ್ದರು. ಇವರು ನಂತರ ವಿಧಾನ ಸಭೆಯ ಸದಸ್ಯರು ಆಗಿದ್ದರು.

*೫. ಸರೋಜಿನಿ ಶಾಸ್ತ್ರಿ, ಕೆ.ರಾಘವೇಂದ್ರರಾವ್, **ವುಮನ್ ಫ್ರೀಡಂ ಫೈಟರ್ ಇನ್ ಕರ್ನಾಟಕ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೩, ಪು. ೪೭-೫೦.

*೬. ದಿನಾಂಕ. ೨೦-೦೮-೧೯೯೯ರಂದು ಎಸ್. ನಿಜಲಿಂಗಪ್ಪನವರನ್ನು ಸಂದರ್ಶನ ಮಾಡಿ ಚಿತ್ರದುರ್ಗ ಜಿಲ್ಲೆಯು ಸ್ವಾತಂತ್ರ್ಯ ಚಳವಳಿಯಲ್ಲಿ ವಹಿಸಿದ ಪಾತ್ರವನ್ನು ಕುರಿತಂತೆ ಸುಮಾರು ನಾಲ್ಕು ಗಂಟೆಗಳ ಕಾಲ ಚರ್ಚಿಸುವುದರೊಂದಿಗೆ ಧ್ವನಿ ಮುದ್ರಣವನ್ನು ಸಹ ಮಾಡಲಾಯಿತು. ಈ ಸಂದರ್ಭದಲ್ಲಿ ಅವರ ಮಗ ರಾಜಶೇಖರ ಅವರು ಸಹಕಾರ ನೀಡಿದ್ದರು.

*೭. ಸೂರ್ಯನಾಥ ಕಾಮತ್(ಸಂ), **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಸಂಪುಟ-೨, ಪು.೫೫೫.

*೮. **ಸಾಧ್ವಿ ದಿನಪತ್ರಿಕೆ**, ಮೈಸೂರು, ೧೪-೦೩-೧೯೩೯.

*೯. **ಸ್ಪೆಶಲ್ ಬ್ರಾಂಚ್**, **ಅಬ್‌ಸ್ಟ್ರಾಕ್** ಫಾರ್ ದಿ ವೀಕ್ ಎಂಡಿಂಗ್, ಸಾಟರ್‌ಡೇ ೨೭ ೧೯೩೯ ಪು.೨೨೯.

ಮೂಡಲಗೇರಿ ಕೊಟ್ರೇಶ್*

# ಉಚ್ಚಂಗಿದುರ್ಗದಲ್ಲಿ ಮುತ್ತು ಕಟ್ಟಿಸುವ ಪದ್ಧತಿ - ವಿಧಿ ವಿಧಾನಗಳು

ಉಚ್ಚಂಗಿ ದುರ್ಗವು ದಾವಣಗೇರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿದೆ. ಈ ಗ್ರಾಮವು ಹರಪನಹಳ್ಳಿ ಹಾಗೂ ದಾವಣಗೇರಿ ನಡುವೆ ೨೮ ಕಿ.ಮೀ. ಸಮಾನ ಅಂತರದಲ್ಲಿದೆ. ಪ್ರಾಚೀನ ಮಾನವನ ಆವಾಸ ಸ್ಥಾನವಾದ ಉಚ್ಚಂಗಿದುರ್ಗದಲ್ಲಿ ಕದಂಬರಿಂದ ಹಿಡಿದು ಪಾಳೇಗಾರರವರೆಗೆ ಆಡಳಿತ ನಡೆದಿದೆ. ಉಚ್ಚಂಗೆಮ್ಮನ ದೇವಾಲಯವು ಇಲ್ಲಿಯ ಪ್ರಾಚೀನ ದೇವ ಮಂದಿರಗಳಲ್ಲಿ ಒಂದಾಗಿದೆ. ಉಚ್ಚಂಗೆಮ್ಮದೇವಿಯ ದರ್ಶನಕ್ಕಾಗಿ ಬಳ್ಳಾರಿ, ಚಿತ್ರದುರ್ಗ, ಚಿಕ್ಕಮಂಗಳೂರು, ಶಿವಮೊಗ್ಗ ಹಾಗೂ ನಮ್ಮ ನೆರೆಯ ರಾಜ್ಯ ಆಂಧ್ರಪ್ರದೇಶದ ಕೆಲಭಾಗಗಳಿಂದಲೂ ಸಾವಿರಾರು ಭಕ್ತಾದಿಗಳು ಇಲ್ಲಿಗೆ ಬಂದು ಹೋಗುತ್ತಾರೆ. ಇಲ್ಲಿಗೆ ಬರುವ ಭಕ್ತಾದಿಗಳಲ್ಲನೇಕರು ಉಚ್ಚಂಗೆಮ್ಮನನ್ನು ಮನೆ ದೇವತೆಯನ್ನಾಗಿ ಮಾಡಿಕೊಂಡಿರುತ್ತಾರೆ. ದೇವತೆಯ ಹೆಸರಿನಲ್ಲಿ ಹತ್ತಾರು ಆಚರಣೆಗಳು ಇಲ್ಲಿ ನೆರವೇರುತ್ತವೆ. ಅವುಗಳಲ್ಲಿ **ಮುತ್ತು ಕಟ್ಟಿಸಿಕೊಳ್ಳುವ** ಪದ್ಧತಿಯು ಒಂದು.

*ಮುತ್ತು ಕಟ್ಟಿಸುವ ಪದ್ಧತಿಯು ಒಂದು ರೀತಿಯ ಬಸವಿ ಬಿಡುವ ಪದ್ಧತಿಯನ್ನು ಹೋಲುತ್ತದೆ.* ಪ್ರಾಯಶಃ ಈ ಪದ್ಧತಿ ವಂಶಪಾರಂಪರ್ಯವಾಗಿರುವಂತೆ ಕಂಡುಬರುತ್ತದೆ. ಗಂಡು ಹೆಣ್ಣಿಗೆ ತಾಳಿ ಕಟ್ಟಿದರೆ ಮುಗಿಯಿತು. ಅವಳು ಗಂಡನ ಆಧೀನದಲ್ಲಿರ ಬೇಕಾಗುತ್ತದೆ. ಹಾಗೆಯೇ ಉಚ್ಚಂಗೆಮ್ಮನ ಹೆಸರಿನಲ್ಲಿ ಮುತ್ತುಕಟ್ಟಿಸಿ ಕೊಂಡವರು ಈ ದೇವಿಯ ಆಧೀನದಲ್ಲಿರಬೇಕಾಗುತ್ತದೆ. ಮುತ್ತು ಕಟ್ಟಿಸುವ ಪದ್ಧತಿಯಲ್ಲಿ ಅನೇಕ ಪ್ರಭೇಧಗಳಿವೆ. ಅವುಗಳೆಂದರೆ ***ಕನ್ಯೆಮುತ್ತು, ಗರತಿಮುತ್ತು ಮತ್ತು ಗಂಡಸುಮುತ್ತು.***

***ಕನ್ಯೆಮುತ್ತು*** : ಹೆಣ್ಣು ಪ್ರಾಯಕ್ಕೆ ಬರುವ ಪೂರ್ವದಲ್ಲೆ ಮುತ್ತು ಕಟ್ಟಿದರೆ ಇದನ್ನು ಕನ್ಯೆಮುತ್ತು ಎನ್ನುತ್ತಾರೆ. ಕನ್ಯೆಮುತ್ತು ಕಟ್ಟಿಸಿಕೊಂಡವರನ್ನು ದೇವರಿಗೆ ಬಿಟ್ಟವರು ಎಂದು ಕರೆಯುತ್ತಾರೆ. ಇವಳು, ಸಂಪ್ರದಾಯದಂತೆ ಮದುವೆಯಾಗುವ ಹಾಗಿಲ್ಲ. ಜೀವನ ಪೂರ್ತಿ ಹಾಗೇ ಉಳಿಯಬೇಕಾಗುತ್ತದೆ. ಈ ಕನ್ಯೆಮುತ್ತು ಕಟ್ಟಿಸಲು ಅನೇಕ ಕಾರಣಗಳಿವೆ.

ಒಂದನೆಯದಾಗಿ ತೀವ್ರತರವಾದ ರೋಗಕ್ಕೆ ತುತ್ತಾದಂಥ ಪಕ್ಷದಲ್ಲಿ ಗಿಡ-ಮೂಲಿಕೆಗಳು ಯಂತ್ರ-ತಂತ್ರಗಳು ಇತ್ಯಾದಿ ಯಾವುದರಿಂದಲೂ ಖಾಯಿಲೆ ವಾಸಿಯಾಗುವದಿಲ್ಲವೆಂದು ಖಚಿತವಾದಲ್ಲಿ ಕುಟುಂಬದ ಹಿರಿಯರು ಆ ಹೆಣ್ಣು ಮಗುವಿನ ರೋಗ ಗುಣವಾದಲ್ಲಿ 'ಕನ್ಯೆಮುತ್ತು' ಕಟ್ಟಿಸಿ ದೇವರಿಗೆ ಬಿಡುತ್ತೇವೆ ಎಂದು ತಮ್ಮ ಕುಲದೇವತೆಯಾದ ಉಚ್ಚಂಗೆಮ್ಮಗೆ ಹರಕೆ ಮಾಡಿಕೊಳ್ಳುತ್ತಾರೆ. ಒಂದು ವೇಳೆ ಹೆಣ್ಣು ಮಕ್ಕಳು ಕನ್ಯೆಯರಾದ ನಂತರವೂ ಅವಿವಾಹಿತೆಯಾಗಿಯೇ ಉಳಿದು ಅವಳಿಗೆ ಮುಂದೆ ವಿವಾಹವಾಗುವುದಿಲ್ಲ ಎಂದು ಖಚಿತವಾದಗಲೂ ಕೂಡಾ ಅಂತಹ ಕನ್ಯೆಯನ್ನು ಉಚ್ಚುಗೆಮ್ಮನ ದೇಗುಲದಲ್ಲಿ ಸಂಪ್ರದಾಯದಂತೆ 'ಮುತ್ತು ಕಟ್ಟಿಸುವ' ಪದ್ಧತಿಗೆ ಒಳಪಡಿಸುತ್ತಿದ್ದರು. ತಮಗೆ ಗಂಡು ಸಂತಾನ ಇಲ್ಲದೇ ಹೋದಂಥ ಸಂದರ್ಭದಲ್ಲಿ ಹಿರಿಯ ಹೆಣ್ಣು ಮಗಳಿಗೆ 'ಮುತ್ತು ಕಟ್ಟಿಸಿ' ಅವಳಿಗೆ ಜನಿಸಿದ ಮಕ್ಕಳಿಂದ ತಮ್ಮ ವಂಶಾಭಿವೃದ್ಧಿ ಮಾಡಿಕೊಳ್ಳುವ ಪದ್ಧತಿಯು ಕಂಡುಬರುತ್ತದೆ.

ಈ ಮುತ್ತುಕಟ್ಟಿಸುವುದು ಕೂಡಾ ಒಂದು ಸಡಗರ, ಸಂಭ್ರಮದ ಕಾರ್ಯಕ್ರಮ. ಮೊದಲೇ ನಿಗದಿಪಡಿಸಿದ ಶುಭದಿನ ದಂದು ಹರಕೆ ಹೊತ್ತಿರುವ ಕನ್ಯೆಯನ್ನು ವಧುವಿನಂತೆ ಸಿಂಗರಿಸಿ ತಾವು ಹರಕೆ ಹೊತ್ತ ಉಚ್ಚುಗೆಮ್ಮ ದೇವಾಲಯಕ್ಕೆ ಮೆರವಣಿಗೆಯಲ್ಲಿ ಕರೆತರುತ್ತಾರೆ.

ಈ ದೇವಾಲಯದಲ್ಲಿ ಅರ್ಚಕ ದೇವತೆಗೆ ಪೂಜೆ ಮಾಡಿ ಮಂಗಳಾರತಿ ಬೆಳಗಿದ ನಂತರ ಕನ್ಯೆಯನ್ನು ಕಂಬಳಿ ಹಾಸಿಗೆಯ ಮೇಲೆ ಪೂರ್ವ ದಿಕ್ಕಿಗೆ ಮುಖ ಮಾಡಿ ಕೂರಿಸುವುದು. ನಂತರ ತಮ್ಮ ಜಾತಿಯ ಹಿರಿಯ ಜೋಗತಿಯ ಅನುಮತಿ ಪಡದೇ ಅವರಿಂದಲೇ ಕಂಕಣ ಹಾಗೂ ತಾಳಿಯನ್ನು ಕಟ್ಟಿಸುತ್ತಿದ್ದರು. ಇದರ ಜೊತೆಗೆ 'ಮುತ್ತಿನ' ಸರವು ಇರುವುದು. ಊಟ ಹಾಕಿಸುವದರ ಮೂಲಕ ಈ ಕಾರ್ಯಕ್ರಮ ಪೂರ್ಣವಾಗುವುದು. ಈ ಎಲ್ಲ ಖರ್ಚನ್ನು ಮೊದಲು ಕನ್ಯೆಯ ತಂದೆ - ತಾಯಿಗಳೇ ವಹಿಸಿ ಕೊಂಡಿದ್ದರೂ ನಂತರ ಪ್ರಥಮವಾಗಿ ಇವಳ ಬಳಿಗೆ ಬಂದ ವ್ಯಕ್ತಿಯೇ ಆ ಪೂರ್ಣ ಖರ್ಚನ್ನು ಭರಿಸಬೇಕಾಗುತ್ತದೆ. ಈ ಕನ್ಯೆ ಮುತ್ತುಕಟ್ಟಿಸಿ ಕೊಂಡವರನ್ನು ನಿತ್ಯಸುಮಂಗಲೆಯರೆಂದು ಕರೆಯುತ್ತಾರೆ. ಸಾಮಾನ್ಯ ವಾಗಿ ಈ ಕನ್ಯೆಮುತ್ತನ್ನು ಕೆಳವರ್ಗದ ಜನಾಂಗದಲ್ಲಿ ಹೆಚ್ಚಾಗಿ ಕಟ್ಟಿಸುತ್ತಾರೆ.

***ಗರತಿ ಮುತ್ತು*** : ಮದುವೆಯಾದ ಸ್ತ್ರೀಯರೂ ಮುತ್ತು ಕಟ್ಟಿಸಿಕೊಳ್ಳುತ್ತಾರೆ. ಇದಕ್ಕೆ ಗರತಿಮುತ್ತು ಎನ್ನುತ್ತಾರೆ. ಆದರೆ ಗರತಿಮುತ್ತು, ಕನ್ಯೆಮುತ್ತುಗಿಂತ ಭಿನ್ನವಾಗಿದೆ. ಗರತಿಮುತ್ತನ್ನು ಈ ಕೆಳಗಿನ ಕಾರಣಗಳಿಗಾಗಿ ಕಟ್ಟಿಸಿಕೊಳ್ಳುತ್ತಾರೆ. ಉಚ್ಚುಗೆಮ್ಮನನ್ನು ಮನೆದೇವರಾಗಿ ಮಾಡಿಕೊಂಡವರ ಮನೆಯಲ್ಲಿ ಹಿರೇಮಗಳು

*ವಸ್ತು ಸಂಗ್ರಹಾಲಯ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬.

ಅಥವಾ ಹಿರೇಸೊಸೆ ಯಾರಾದರೊಬ್ಬರು ಸಂಪ್ರದಾಯದಂತೆ ಮುತ್ತನ್ನು ಕಟ್ಟಿಸಿಕೊಳ್ಳಲೇಬೇಕು. ಕೆಲವರಿಗೆ ಕನಸಿನಲ್ಲಿ ಈ ದೇವತೆ ಬಂದು ಪೀಡಿಸುವಳಂತೆ. ಕ್ರಮೇಣ ಇವರಿಗೆ ಜಡೆ ಬರಲು ಆರಂಭಿಸುವುದು. ಹಾಗಾಗಿ ಇವರು ಮುತ್ತು ಕಟ್ಟಿಸಿಕೊಳ್ಳುವರು. ಇವರಿಗೆ ದೇವತೆ ಒಲಿದವಳು ಎಂದು ಕರೆಯುತ್ತಾರೆ. ಇವರು ದೇವರನ್ನು ಹೊರುತ್ತಾರೆ. ಇವರಿಗೆ ಜೋಗಮ್ಮಗಳೆಂದು ಕರೆಯುವರು. ಇವರ ಬಗ್ಗೆ ಸಮಾಜದಲ್ಲಿ ತುಂಬ ಗೌರವದ ಭಾವನೆ ಇದೆ. ಗರತಿಮುತ್ತು ಮತ್ತು ಕನ್ಯೆಮುತ್ತಿಗೆ ಬಹಳ ವ್ಯತ್ಯಾಸಗಳಿವೆ. ಕನ್ಯೆಮುತ್ತು ಕಟ್ಟಿಸಿಕೊಳ್ಳುವವರು ತಾವಾಗಿಯೇ ಮುಂದೆ ಬರುತ್ತಾರೆ. ಗರತಿಮುತ್ತು ಕಟ್ಟಿಕೊಳ್ಳುವವರನ್ನು ದೇವತೆ ಅಪೇಕ್ಷಿಸುತ್ತಾಳಂತೆ. ಕನ್ಯೆಮುತ್ತು ಕಟ್ಟಿಸಿಕೊಳ್ಳುವವರು ದೇವಸ್ಥಾನದಲ್ಲಿ ತಮ್ಮ ವಿಧಿವಿಧಾನಗಳನ್ನು ಪೂರೈಸಿಕೊಂಡರೆ ಗರತಿಮುತ್ತು ಕಟ್ಟಿಸಿಕೊಳ್ಳುವವರು, ತಮ್ಮ ಮನೆಗಳಲ್ಲಿಯೇ ಈ ವಿಧಿವಿಧಾನ ಗಳನ್ನು ನೆರವೇರಿಸಿಕೊಳ್ಳುತ್ತಾರೆ.

***ಗಂಡಸುಮುತ್ತು*** : ಉಚ್ಚಂಗೆಮ್ಮನನ್ನು ಕುಲದೇವರಾಗಿ ಮಾಡಿಕೊಂಡವರ ಮನೆಯಲ್ಲಿ ಗಂಡು ಮಕ್ಕಳಿಗೂ ಮುತ್ತು ಕಟ್ಟಿಸುತ್ತಾರೆ. ಈ ಮುತ್ತನ್ನು ಕಟ್ಟದೇ ಹೊರತು ಮದುವೆಯಾಗಲು ಬರುವುದಿಲ್ಲ. ಕೆಲವರು ಮದುವೆಯಾಗದೇ ಹಾಗೇ ಉಳಿದು ಜೋಗಪ್ಪಗಳಾಗುತ್ತಾರೆ. ಇವರಿಗೆ ಜಡೆ ಬರುತ್ತದೆ. ಆಗ ಇವರನ್ನು ದೇವರು ಒಲಿದವರು ಎಂದು ಗುರುತಿಸುತ್ತಾರೆ. ಇವರು ಸೀರೆ, ಕೈಗೆ ಬಳೆ ಹಾಗೂ ಹೆಂಗಸರಂತೆ ವೇಷಭೂಷಣಗಳೆಲ್ಲವೂ ಇರುವಂತೆ ನೋಡಿಕೊಳ್ಳುತ್ತಾರೆ. ಇನ್ನು ಕೆಲವರು ಪಂಚೆ, ಅಂಗಿ ಧರಿಸಿ ಕೈಗೆ ಮಾತ್ರ ಬಳೆ ತೊಡುತ್ತಾರೆ. ಈ ಸಂಪ್ರದಾಯ ಇಂದಿಗೂ ಆಚರಣೆಯಲ್ಲಿದೆ.

ಈ ಪದ್ಧತಿಯು ಸಾಮಾನ್ಯವಾಗಿ ಕರ್ನಾಟಕದ ಬಹುತೇಕ ಕಡೆ ಕಂಡುಬರುತ್ತದೆ. ಒಂದು ಕಾಲದಲ್ಲಿ ಶೋಷಿತವರ್ಗದ ಸ್ತ್ರೀಯರನ್ನು ತಮ್ಮ ಕಾಮದಾಹ ತೀರಿಸಿಕೊಳ್ಳಲು ಉಚ್ಚವರ್ಗದವರು ದೇವರ ಹೆಸರಿನಲ್ಲಿ ಅವರನ್ನು ಬಸವಿ ಪದ್ಧತಿಗೆ ಬಲವಂತವಾಗಿ ನೂಕುತ್ತಿದ್ದರು. ಅದು ಕ್ರಮೇಣ ವಂಶಪಾರಂಪರ್ಯವಾಗಿ ಬಂದು ಅದರ ಬಳುವಳಿ ಇನ್ನೂ ಉಳಿದಿದೆ. ಪುರುಷ ದೇವತೆಗಳು ಸಾಮಾನ್ಯವಾಗಿ ಉಚ್ಚವರ್ಗದವರಿಂದ ಆರಾಧನೆಗೊಳ್ಳುತ್ತಿದ್ದವು. ಸ್ತ್ರೀ ದೇವತೆಗಳು ಸಾಮಾನ್ಯವಾಗಿ ಕೆಳಜಾತಿಯ ಜನರಿಂದ ಪೂಜಿಸಲ್ಪಡುತ್ತಿವೆ. ಹಾಗಾಗಿ ಈ ದೇವತೆಯ ಹೆಸರಿನಲ್ಲಿ ಮುತ್ತು ಕಟ್ಟಿಸುವಂತ ಪದ್ಧತಿ ಬೆಳೆದು ಬಂದಿದೆ. ಇದು ಕ್ರಮೇಣ ಮಾಯವಾಗುತ್ತಿದ್ದರೂ ಇದರ ಛಾಯೆ ಇನ್ನೂ ಇಲ್ಲಿ ಉಳಿದಿದೆ. ಇದಕ್ಕೆ ಪರಿಹಾರವೆಂದರೆ ಶಿಕ್ಷಣ. ಶಿಕ್ಷಣ ನೀಡುವ ಮೂಲಕ ಕೆಲವು ಸಂಪ್ರದಾಯಗಳನ್ನು ಬದಲಿಸಬಹುದು ಒತ್ತಾಯದಿಂದ. ಈ ಪದ್ಧತಿಯ ನಿರ್ಮೂಲನೆ ಅಸಾಧ್ಯ.



ಡಾ| ರು. ಮ. ಷಡಕ್ಷರಯ್ಯ*

# ಶಿವಶರಣರ ತಾಣಗಳಲ್ಲಿನ ಶಿಲ್ಪಾವಶೇಷಗಳು

ಚಾಲುಕ್ಯ ಹಾಗೂ ಕಳ್ಳಚೂರಿಯರ ರಾಜಧಾನಿಯಾಗಿ ಮೆರೆದ ಕಲ್ಯಾಣ, ಶಿವಶರಣರ ಕಾರ್ಯಕ್ಷೇತ್ರವಾಯಿತು. ವಿಭಿನ್ನ ಕುಲಗೋತ್ರ, ದೇಶಗಳಿಂದ ಅನೇಕರು ಕಲ್ಯಾಣಕ್ಕೆ ಆಗಮಿಸಿ ಬಸವಣ್ಣನ ಅನುಯಾಯಿಗಳಾದ ಅನೇಕ ಶಿವಶರಣರ ತಾಣಗಳು ಕಲ್ಯಾಣ ಪ್ರದೇಶದ ತ್ರಿಪುರಾಂತಕ ಕೆರೆ ಪರಿಸರದಲ್ಲಿ ಇಂದಿಗೂ ತುಂಬಿಕೊಂಡಿವೆ. ಅವು ಗುಹೆಗಳು, ಮಠ, ಕಟ್ಟೆ, ಗದ್ದುಗೆ, ಓಣಿ ಇತ್ಯಾದಿ ಹೆಸರುಗಳಲ್ಲಿವೆ. ಅವುಗಳಲ್ಲಿ ನೂಲಿ ಚಂದಯ್ಯ, ಅಕ್ಕ, ನಾಗಮ್ಮ, ಅರಿವಿನ ಮನೆ, ಪರುಷಕಟ್ಟೆ, ಬಂದವರ ಓಣಿ, ಕಂಬಳಿ ಮಠ, ಇತ್ಯಾದಿ.

ಕಲ್ಯಾಣ ನಗರವನ್ನು ಹೀಗೆ ವರ್ಣಿಸಲಾಗಿದೆ : *'ಕೈಲಾಸ ಮಪ್ಪಕಲ್ಯಾಣದಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ದೇವಾಲಯ ಗಳಿದ್ದವು. ಅವುಗಳಲ್ಲಿ ತ್ರಿಪುರಾಂತಕ ದೇವಾಲಯ ಮುಖ್ಯವಾದುದು. ಈ ದೇವಾಲಯದ ಮುಂದೆ ಅನುಭವ ಮಂಟಪವಿದ್ದಿತು. ಅದರಲ್ಲಿ ಅಲ್ಲಮಪ್ರಭು, ಸಿದ್ಧರಾಮ, ಮೋಳಿಗೆಯ ಮಾರಯ್ಯ, ಮುಸುಡಿಯ ಚೌಡಯ್ಯ, ಮಡಿವಾಳ ಮಾಚಯ್ಯ ಚೆನ್ನಬಸವಣ್ಣ, ೭೭೦ ಅಮರ ಗಣಂಗಳು ಎಲ್ಲ ಅಸಂಖ್ಯಾತ ಗಣಂಗಳು ಕೂಡಿದ್ದರು'* ಎಂಬ ವಿಷಯಗಳು ಕಾಲಜ್ಞಾನ ವಚನಗಳಲ್ಲಿವೆ. ಇದಲ್ಲದೆ ಅಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಮಹೇಶ್ವರರಿದ್ದ ವಿಚಾರ-ಮಂಟಪವಿದ್ದಿತೆಂದು ರೇವಣಸಿದ್ದೇಶ್ವರದೇವರು ಕಟ್ಟಿಸಿದ ಚಿಂಗಣಿಗಲ ಮಂಟಪ ಅನೇಕ ಶಿವಶರಣರ ವಿವಿಧ ಮಂಟಪಗಳು ಅಲ್ಲಿದ್ದವು. ಈ ಬಗೆಗೆ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ. ವಾಸ್ತುಶಿಲ್ಪ ಅಂಶಗಳನ್ನು ಇದರಲ್ಲಿ ಪ್ರಸ್ತುತಪಡಿಸಲಾಗಿದೆ.

*ಬಸವೇಶ್ವರ ದೇವಾಲಯ :* ಈ ನಗರದ ಮಧ್ಯದಲ್ಲಿದ್ದ ವೀರಶೈವರ ಒಂದು ಮಠದ ಸ್ಥಳದಲ್ಲೇ ಬಸವಣ್ಣನ ದೇವಾಲಯ ವನ್ನು ಕಟ್ಟಲಾಗಿದೆ, ಎಂದು ಹೇಳುವುದಿದೆ. ಭವ್ಯ ಹಾಗೂ ವಿಸ್ತಾರವಾದ ಈ ದೇವಾಲಯದ ಒಳಗಡೆ ಶಿವಲಿಂಗ, ನಂದಿ, ಬಸವಣ್ಣನ ಮುಖವಾಡ ಮುಂತಾದ ವಿಗ್ರಹಗಳಿವೆ. ಹಿಂಬದಿಯ ಗರ್ಭಗೃಹದ ಮುಂದೆ ಇತ್ತೀಚಿಗೆ ಭವ್ಯಶಿಖರ ಸಹಿತ ಪ್ರತ್ಯೇಕ ಗರ್ಭಗುಡಿಯನ್ನು ಕಟ್ಟಿಸಲಾಗಿದೆ. ಪ್ರತಿವರ್ಷ ವೈಶಾಖದಂದು ಈ ದೇವರ ಜಾತ್ರೆ, ಸಾಮಾಜಿಕ, ಧಾರ್ಮಿಕ ಕಾರ್ಯಕ್ರಮಗಳು ನಿರಂತರವಾಗಿ ಅಲ್ಲಿ ಜರುಗುತ್ತವೆ.

*ಪರುಷ ಕಟ್ಟೆ :* ಬಸವೇಶ್ವರ ದೇವಾಲಯದ ಹತ್ತಿರ 'ತತ್ವಜ್ಞಾನಿಗಳ ಕಲ್ಲು' ಎಂದಿರುವ ಈ ಕಟ್ಟೆಯ ಮೇಲೆ ಬಸವಣ್ಣನವರು ಕುಳಿತು ತಮ್ಮ ಅನುಯಾಯಿಗಳಿಗೆ ಬೋಧಿಸುತ್ತಿದ್ದರೆಂದು ಹೇಳುವರು. ಈ ಸ್ಥಳ ಅಗೆದಾಗ ಮಹಿಷಾಸುರ ಮರ್ದಿನಿ ಶಿಲ್ಪ ಬೆಳಕಿಗೆ ಬಂದಿತು. ಈಗ ದೆಹಲಿಯ ರಾಷ್ಟ್ರೀಯ ವಸ್ತು ಸಂಗ್ರಹಾಲಯದಲ್ಲಿದೆ ಎಂದು ಸ್ಥಳೀಕರು ಹೇಳುವರು. ವಾಸ್ತು ವಿನ್ಯಾಸದಲ್ಲಿ ಎತ್ತರ ಕಟ್ಟೆಯಾದ ಪರುಷಕಟ್ಟೆಯು ಒಂದು ತೆರೆದ ನಂದಿ ಮಂಟಪ. ಆಸೀನ ಪೂರ್ವಮುಖಿ ಈ ನಂದಿಯ ಪೀಠಕ್ಕೆ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯದ ಫಲಕವಿದೆ. ಅದಕ್ಕೆ ಆಸರೆಯಾಗಿ ಹೊಂದಿಸಿರುವ ಶಿಲಾ ಹಲಗೆಗೆ ಸಂಬಂಧಿಸಿ ವಜ್ರಾಕೃತಿಗಳು ಎರಡು ನಮೂನೆಯ ಶಿಖರಗಳ ಬದಿಯಲ್ಲಿವೆ. ಆ ಬದಿಗಳಲ್ಲಿ ಎರಡು ಮತ್ತು ಉತ್ತರ ಮುಖದಲ್ಲಿ ಒಂದು ಆನೆಯ ಮುಖಗಳಿವೆ. ಅದರ ದಕ್ಷಿಣ ಮುಖದಲ್ಲಿ ಒಂದು ಕಪ್ಪೆಯಿದೆ. ಈ ರೀತಿಯ ಫಲಕ ಅಲ್ಲಿಯ ಮಡಿವಾಳ ಮಾಚಯ್ಯನ ಮಂದಿರದಲ್ಲಿರುವದು ಗಮನೀಯ. ಈ ಕಟ್ಟೆಯ ಹತ್ತಿರ ಎರಡು ಶಿವಲಿಂಗಗಳಲ್ಲಿ ಒಂದು ಶಿವಲಿಂಗಕ್ಕೆ ಪಂಚಮುಖಗಳಿವೆ. ಅವು ಪರಶಿವನ ಐದು ಮುಖಗಳಾದ ಸದ್ಯೋಜಾತ, ವಾಮದೇವ, ತತ್ಪುರುಷ, ಅಘೋರ ಮತ್ತು ಈಶಾನ್ಯರನ್ನು ಸೂಚಿಸುತ್ತವೆ.

*ಅಂಬಿಗರ ಚೌಡಯ್ಯನ ಮಠ - ಗವಿ :* ಶಿವಶರಣ ಅಂಬಿಗರ ಚೌಡಯ್ಯನ ಹೆಸರಿನ ಆಧುನಿಕ ಮಠವು ಬಸವೇಶ್ವರ ದೇವಾಲಯದ ಉತ್ತರಕ್ಕಿದೆ. ಅಲ್ಲಿ ಚಾಲುಕ್ಯರ ಶಿಲ್ಪಾವಶೇಷಗಳಲ್ಲಿ ಚತುರ್ಭುಜ ಶಿವ, ಮಹಿಷಾಸುರ ಮರ್ದಿನಿ (ತ್ರುಟಿತ), ಎರಡು ರುಂಡಗಳು : ಒಂದು ತೀರ್ಥಂಕರನ ರುಂಡ ಹಾಗು ಆನೆ ಸಾಲುಳ್ಳ ದೇವಾಲಯದ ಫಲಕಗಳಿವೆ. ಈ ಮಠದೊಳಗೆ ಶಿವಲಿಂಗ ಮತ್ತು ಪಾದಮುದ್ರೆ ಕಲ್ಲು ಇದೆ. ಈತನ ಹೆಸರಿನ ಗವಿಯೊಂದು ಈ ನಗರದಿಂದ ಸುಮಾರು ಎರಡು ಕಿ. ಮೀ. ಅಂತರದಲ್ಲಿದೆ. ಗವಿಯ ಗರ್ಭಗೃಹದಲ್ಲಿ ಶಿವಲಿಂಗದ ಪೀಠ ಮತ್ತು ಪಿಂಡಗಳಿದ್ದು ಛತ್ತಿನ ಮೇಲೆ ಚೌಕಾದ ಎತ್ತರದ ಗುಮ್ಮಟ, ಈ ಮಂಟಪದ ದಕ್ಷಿಣ ಭಾಗದಲ್ಲಿ ಮೂರು ಕಮಾನು, ಪೂರ್ವಕ್ಕೆ ಪ್ರವೇಶ ದ್ವಾರವಿದೆ. ಅಲ್ಲಿಯ ಶಿವಲಿಂಗ ಪೀಠ ಮತ್ತು ನಂದಿ ವಿಗ್ರಹ ಸು. ಕ್ರಿ.ಶ. ೧೨ನೇ ಶತಮಾನ.

***ಡೋಹರ ಕಕ್ಕಯ್ಯನ ಮಠ :*** ಡೋಹರ ಕಕ್ಕಯ್ಯ ವೃತ್ತಿಯಲ್ಲಿ ಚರ್ಮದ ವ್ಯವಹಾರ ಮಾಡುವವ. ಮಾಳವ ಪ್ರಾಂತದಿಂದ

**ಪ್ರಾಧ್ಯಾಪಕರು, ಇತಿಹಾಸ ಮತ್ತು ಪುರಾತತ್ವ ಪ್ರಾಚೀನ ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦ ೦೦೩.

